॥ ಶ್ರೀ ॥

ಶ್ರೀ ಆನಂದತೀರ್ಥಭಗವತ್ಪಾದಾಚಾರ್ಯ ವಿರಚಿತ

# ಶ್ರೀಸರ್ವಮೂಲ ಗ್ರಂಥಗಳು

(ಕನ್ನಡ ಅನುವಾದ ವಿವರಣೆ ಸಹಿತ)

ಸಂಪುಟ—೪

# ಶ್ರೀಬೃಹದಾರಣ್ಯಕೋಪನಿಷದ್ಭಾಷ್ಯಮ್

ಶ್ರೀ ೧೦೮ ಶ್ರೀ ಪೇಜಾವರ ಮಠಾಧೀಶ ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳವರ
ಉಪನಿಷತ್ತು ಮತ್ತು ಭಾಷ್ಯಗಳ ಕನ್ನಡ ಸಾರ ಸಹಿತ

ಪ್ರಧಾನ ಸಂಪಾದಕರು

ವಿದ್ವಾನ್ ಶ್ರೀ ಕೆ. ಹಯವದನ ಪುರಾಣಿಕ ಎಂ.ಎ.

ಅನುವಾದಕರು

ವಿದ್ವಾನ್ ಪಿ. ಎಸ್. ಶೇಷಗಿರಿರಾವ್ ಎಂ.ಎ.
ವಿದ್ವಾನ್ ಡಾ॥ ಸಿ. ಹೆಚ್. ಶ್ರೀನಿವಾಸಮೂರ್ತಿ ಎಂ.ಎ., ಪಿ.ಹೆಚ್.ಡಿ

ಪ್ರಕಾಶಕರು

ಅಖಿಲ ಭಾರತ ಮಾಧ್ವ ಮಹಾಮಂಡಲ
ಮತ್ತು
ಆನಂದತೀರ್ಥ ಪ್ರತಿಷ್ಠಾನ
ಬೆಂಗಳೂರು
1991

Kannada Sarvamula, Vol-4

Sri Brihadaranyakopanishadbhashya of
Sri Anandatirtha with Kannada translation and notes.
Published by Akhila Bharata Madhwa Maha Mandala
and Anandatirtha Pratisthana, Bangalore.

ಪುಟಗಳು-700

ಸಾದಾ ಪ್ರತಿ ಬೆಲೆ ರೂ. 50-00
ಉತ್ತಮ ಪ್ರತಿ ಬೆಲೆ ರೂ. 60-00



ಸಂಪಾದಕ ಮಂಡಳಿ

ಅಧ್ಯಕ್ಷರು

ಶ್ರೀ ೧೦೮ ಶ್ರೀ ಪೇಜಾವರ ಮಠಾಧೀಶ ಶ್ರೀ ವಿಶ್ವೇಶತೀರ್ಥಶ್ರೀಪಾದಂಗಳವರು

ಕಾರ್ಯಾಧ್ಯಕ್ಷರು

ಕೆ. ಟಿ. ಪಾಂಡುರಂಗಿ ಎಂ.ಎ. ವೇದಾಂತ ವಿದ್ವಾನ್, ಮೀಮಾಂಸಾ ಶಿರೋಮಣಿ

ಕಾರ್ಯದರ್ಶಿಗಳು

ಪ್ರೊ. ಡಿ. ಪ್ರಹ್ಲಾದಾಚಾರ್ಯ ಎಂ.ಎ. ವಿದ್ವಾನ್

ಪ್ರಧಾನ ಸಂಪಾದಕರು

ವಿದ್ವಾನ್ ಕೆ. ಹಯವದನ ಪುರಾಣಿಕ ಎಂ.ಎ.

ಸದಸ್ಯರು

ವಿದ್ವಾನ್ ಪಿ. ಕೇಶವಬಾಯರಿ
ವಿದ್ವಾನ್ ರಾಮಾಚಾರ್ಯ ಜಿ. ಮಾಳಗಿ ಎಂ.ಎ.
ವಿದ್ವಾನ್ ಜಿ. ಗುರುವೆಂಕಟಾಚಾರ್ಯ ಎಂ.ಎ.
ವಿದ್ವಾನ್ ಎ. ಹರಿದಾಸಭಟ್ಟ ಎಂ.ಎ.

ಗ್ರಂಥಗಳು ದೊರೆಯುವ ಸ್ಥಳ

ಅಖಿಲ ಭಾರತ ಮಾಧ್ವ ಮಹಾ ಮಂಡಲ, ಪೂರ್ಣಪ್ರಜ್ಞ ವಿದ್ಯಾಪೀಠ,
ಪೂರ್ಣಪ್ರಜ್ಞನಗರ, ಬೆಂಗಳೂರು-28

Printed at Brindavana Printers & Publishers Pvt.(Ltd)
Bangalore-4, by Sri M.H. Kaujalagi

# ಪ್ರಕಾಶಕರ ಅರಿಕೆ

ಅಖಿಲ ಭಾರತ ಮಾಧ್ವ ಮಹಾಮಂಡಲವು ಆರಂಭದಿಂದ ಮಾಧ್ವಸಮಾಜದ ಸಂಸ್ಕೃತಿ ಮತ್ತು ತತ್ವಜ್ಞಾನಗಳ ಅಭಿವೃದ್ಧಿಗಾಗಿ ಅನೇಕ ಕಾರ್ಯಗಳನ್ನು ಕೈಗೊಂಡಿರುವುದು ಎಲ್ಲರಿಗೂ ತಿಳಿದ ವಿಷಯವಾಗಿದೆ. ವಿದ್ಯಾರ್ಥಿನಿಲಯಗಳ ಸ್ಥಾಪನೆ, ವಿದ್ಯಾರ್ಥಿಗಳಿಗೆ ಶಿಷ್ಯವೃತ್ತಿಗಳು, ತತ್ವವಾದ ಪತ್ರಿಕೆ, ಅನೇಕ ಧಾರ್ಮಿಕ, ತಾತ್ವಿಕ ವಿಷಯಗಳನ್ನೊಳಗೊಂಡ ಪುಸ್ತಕಗಳ ಪ್ರಕಾಶನ, ತತ್ವಜ್ಞಾನ ಸಮ್ಮೇಲನಗಳು ಹೀಗೆ ಅನೇಕ ಮುಖದಿಂದ ಮಂಡಲವು ಮಾಧ್ವಸಮಾಜದ ಪುರೋಭಿವೃದ್ಧಿಗೆ ಶ್ರಮಿಸುತ್ತಲೇ ಇದೆ.

ಪ್ರಕೃತ ಮಂಡಲವು ಪೋಷಕರಾದ ಶ್ರೀ ೧೦೮ ಶ್ರೀ ವಿಶ್ವೇಶತೀರ್ಥಶ್ರೀಪಾದರ ಆಶೀರ್ವಾದ, ಪ್ರೇರಣೆ ಮತ್ತು ಮಾರ್ಗದರ್ಶನದಿಂದ ಶ್ರೀಮನ್ಮಧ್ವಾಚಾರ್ಯರಿಂದ ರಚಿತವಾದ ಸರ್ವಮೂಲ ಗ್ರಂಥಗಳ ಕನ್ನಡ ಅನುವಾದವನ್ನು ಪ್ರಕಟಿಸುವ ದೊಡ್ಡ ಯೋಜನೆಯನ್ನು ಕೈಗೊಂಡಿದೆ. ಈ ಯೋಜನೆಯಂತೆ ಸುಮಾರು ಸಾವಿರ ಪುಟಗಳ ಹತ್ತು ಸಂಪುಟಗಳಲ್ಲಿ ಎಲ್ಲ ಗ್ರಂಥಗಳನ್ನೂ ಪ್ರಕಟಿಸುವ ಉದ್ದೇಶವನ್ನು ಹೊಂದಿದೆ.

ಅನುವಾದ ಕಾರ್ಯವನ್ನು ಮಾಡಲು ಶ್ರೀಗಳವರ ಅಧ್ಯಕ್ಷತೆಯಲ್ಲಿ ಪೂರ್ಣಪ್ರಜ್ಞ ವಿದ್ಯಾಪೀಠದ ವಿದ್ವಾಂಸರನ್ನೊಳಗೊಂಡ ಒಂದು ಸಂಪಾದಕ ಮಂಡಳಿಯು ರಚಿತವಾಗಿದೆ.

ಈವರೆಗೆ ಮೂರು ಸಂಪುಟಗಳು ಪ್ರಕಟಗೊಂಡಿದ್ದು ಇದು ನಾಲ್ಕನೇ ಸಂಪುಟವಾಗಿದೆ. ಅನುವಾದ ಕಾರ್ಯವನ್ನು ಸಿದ್ಧಪಡಿಸುವುದು, ಮುದ್ರಣ, ಹಣದ ಸಂಯೋಜನೆ ಇವೆಲ್ಲವೂ ಕಾರ್ಯನಿರ್ಬಂಧದಿಂದ ಆಗುವ ಕೆಲಸವಲ್ಲ. ಆದರೂ ಶೀಘ್ರ ವಿಲಂಬವಾಗದಂತೆ ಎಲ್ಲ ಪ್ರಯತ್ನಗಳನ್ನೂ ಮಾಡುವೆವು.

ಈವರೆಗಿನ ಅನುವಾದ ಕಾರ್ಯವನ್ನು ವಿದ್ಯಾಪೀಠದ ವಿದ್ವಾಂಸರೇ ಮಾಡಿಕೊಟ್ಟಿದ್ದಾರೆ. ಇದಕ್ಕಾಗಿ ಅವರು ಯಾವ ಪ್ರತಿಫಲವನ್ನೂ ಅಪೇಕ್ಷಿಸಿಲ್ಲ. ಪ್ರಕೃತ ಗ್ರಂಥವನ್ನು ಶ್ರೀ ಪಿ.ಎಸ್.ಶೇಷಗಿರಿರಾಯರು ಮತ್ತು ಶ್ರೀ ಸಿ.ಹೆಚ್.ಶ್ರೀನಿವಾಸಮೂರ್ತಿಗಳು ಮಾಡಿಕೊಟ್ಟಿದ್ದಾರೆ. ಅವರಿಗೆ ನಮ್ಮ ಹೃತ್ಪೂರ್ವಕ ಕೃತಜ್ಞತೆಗಳು. ಆಂಗ್ಲಭಾಷೆಯಲ್ಲಿ ಗ್ರಂಥದ ಸಾರಾಂಶವನ್ನು ಬರೆದುಕೊಟ್ಟ ಕಾರ್ಯಾಧ್ಯಕ್ಷರಾದ ಶ್ರೀ ಕೆ.ಟಿ.ಪಾಂಡುರಂಗಿಯವರಿಗೂ ಕೃತಜ್ಞತೆಗಳು. ಅಂದವಾಗಿ ಮುದ್ರಿಸಿಕೊಟ್ಟ

ಬೃಂದಾವನ ಮುದ್ರಣಾಲಯದ ನಿರ್ದೇಶಕರಾದ ಶ್ರೀ ಎಂ.ಹೆಚ್.ಕೌಜಲಗಿಯವರಿಗೂ ವಂದನೆಗಳು.

ಈ ಕಾರ್ಯಕ್ಕೆ ನಮ್ಮನ್ನು ಪ್ರೇರಿಸಿ ಎಲ್ಲ ರೀತಿಯಿಂದಲೂ ನಮಗೆ ಮಾರ್ಗದರ್ಶನ ಮಾಡುತ್ತಿರುವ ಶ್ರೀ ೧೦೮ ಶ್ರೀ ವಿಶ್ವೇಶತೀರ್ಥಶ್ರೀಪಾದಂಗಳವರಿಗೆ ಅನಂತಾನಂತ ಪ್ರಣಾಮಗಳು.

**ಶ್ರೀ ಕೆ.ವಿ.ಎಕಾಡಿತ್ತಾಯ**
ಅಧ್ಯಕ್ಷರು
ಅಖಿಲ ಭಾರತ ಮಾಧ್ವ ಮಹಾಮಂಡಲ
ಬೆಂಗಳೂರು

# ಸಂಪಾದಕ ಮಂಡಲಿಯ ಅರಿಕೆ

ಶ್ರೀ ಆನಂದತೀರ್ಥಭಗವತ್ಪಾದಾಚಾರ್ಯರಿಂದ ರಚಿತವಾದ ಸರ್ವಮೂಲ ಗ್ರಂಥಗಳ ಕನ್ನಡ ಅನುವಾದದ ನಾಲ್ಕನೇ ಸಂಪುಟವನ್ನು ಸಜ್ಜನ ವಾಚಕರಿಗೆ ಒದಗಿಸಲು ಸಂತೋಷವಾಗುತ್ತದೆ.

ಸರ್ವಮೂಲಗ್ರಂಥಗಳನ್ನು ವಿದ್ಯಾರ್ಥಿದೆಶೆಯಲ್ಲಿ ಗುರುಗಳಿಂದ ವ್ಯುತ್ಪತ್ತಿ ಉಂಟಾಗುವಂತೆ ಅಧ್ಯಯನ ಮಾಡುವ ಪದ್ಧತಿಯು ಹಿಂದಿನಿಂದ ಬೆಳೆದು ಬಂದಿದೆ. ಆದರೆ ನಮ್ಮ ವೇದಾಂತ ಗ್ರಂಥಗಳಲ್ಲಿ ಆಸಕ್ತಿಯನ್ನು ತಾಳುವ ಹೊಸದೊಂದು ವರ್ಗ ಈಗ ನಿರ್ಮಾಣವಾಗಿದೆ. ಅನೇಕರು ವಿದ್ಯಾರ್ಥಿದೆಶೆಯಲ್ಲಿ ಸಂಸ್ಕೃತವನ್ನು ಓದದೆ ಅಥವಾ ಅಲ್ಪಸ್ವಲ್ಪ ಓದಿದ್ದರೂ ವೇದಾಂತಗ್ರಂಥಗಳನ್ನು ಓದುವಷ್ಟು ವ್ಯುತ್ಪತ್ತಿ ಇಲ್ಲದವರಾಗಿರುತ್ತಾರೆ. ಆಸಕ್ತಿ ಇರುವ ಇಂತಹವರು ಪಾಠಪ್ರವಚನಗಳಲ್ಲಿ ಭಾಗವಹಿಸಿ ಕೇಳಿದ ವಿಷಯಗಳನ್ನು ಚಿಂತನೆ ಮಾಡಲು, ನೆನಪಿಟ್ಟುಕೊಳ್ಳಲು ಈ ಕನ್ನಡ ಅನುವಾದವು ಸಹಾಯಕವಾಗುತ್ತದೆ. ಪಾಠ ಹೇಳುವವರೇ ದೊರೆಯದಿದ್ದರೆ ಅಂತಹವರಿಗೂ ಈ ಗ್ರಂಥ ಅಲ್ಪಸ್ವಲ್ಪ ಸಹಾಯಕವಾಗುತ್ತದೆ. ಸರ್ವಮೂಲದ ಅನುವಾದದ ಈ ಯೋಜನೆಯಲ್ಲಿ 1. ಗೀತಾಪ್ರಸ್ಥಾನ 2. ಉಪನಿಷತ್ ಪ್ರಸ್ಥಾನ 3. ಸೂತ್ರಪ್ರಸ್ಥಾನ ಮತ್ತು ಋಕ್ ಪ್ರಸ್ಥಾನ 4. ದಶಪ್ರಕರಣಗಳು 5. ಮಹಾಭಾರತ ತಾತ್ಪರ್ಯ ನಿರ್ಣಯ ಮತ್ತು ಭಾಗವತ ತಾತ್ಪಯ ನಿರ್ಣಯ 6. ತಂತ್ರಸಾರವೇ ಮೊದಲಾದ ಇನ್ನಿತರ ಗ್ರಂಥಗಳು ಹೀಗೆ ಸಂಪುಟ ಯೋಜನೆಯಿದೆ.

ಗೀತಾಪ್ರಸ್ಥಾನ ಈಗಾಗಲೇ ಮುದ್ರಣಗೊಂಡಿದ್ದು ಈ ಸಂಪುಟದೊಂದಿಗೆ ಹತ್ತು ಉಪನಿಷತ್ತುಗಳು ಹಾಗೂ ಅವುಗಳ ಭಾಷ್ಯದ ಅನುವಾದದ ಪ್ರಕಾಶನವೂ ಮುಗಿದಂತಾಗಿದೆ. ಗೀತಾಪ್ರಸ್ಥಾನದ ಪ್ರತಿಗಳು ಪೂರ್ಣ ಮಾರಾಟವಾಗಿದ್ದು ಪುನರ್ಮುದ್ರಣದ ಆವಶ್ಯಕತೆ ಇದೆ ಎಂದು ತಿಳಿಸಲು ಸಂತೋಷವಾಗುತ್ತದೆ, ಮುಂದೆ ದಶಪ್ರಕರಣಗಳ ಅನುವಾದದ ಸಂಪುಟವನ್ನು ತ್ವರಿತಗತಿಯಲ್ಲಿ ಪ್ರಕಟಿಸಲಾಗುವುದು.

ಶ್ರೀ ೧೦೮ ಶ್ರೀ ವಿಶ್ವೇಶತೀರ್ಥಶ್ರೀಪಾದಂಗಳವರು ಈ ಯೋಜನೆಯನ್ನು ರೂಪಿಸಿ ಇದಕ್ಕೆ ಎಲ್ಲ ರೀತಿಯಿಂದಲೂ ಮಾರ್ಗದರ್ಶನ ಮಾಡುತ್ತಿರುವರು. ಮಾತ್ರವಲ್ಲದೆ ಆಯಾಯ ಗ್ರಂಥಗಳ ಸಾರಭಾಗವನ್ನು ಹೃದಯಂಗಮವಾಗಿ ಸಂಗ್ರಹಿಸಿ ಕೊಟ್ಟಿರುವರು. ಅವರಿಗೆ ಭಕ್ತಿಪೂರ್ವಕ ಪ್ರಣಾಮಗಳು. ಅವರ ಮಾರ್ಗದರ್ಶನ

ದಲ್ಲಿ ಪೂರ್ಣಪ್ರಜ್ಞ ವಿದ್ಯಾಪೀಠದ ವಿದ್ವಾಂಸರನ್ನೊಳಗೊಂಡ ಸಂಪಾದಕ ಮಂಡಳಿ ರಚಿತವಾಗಿದೆ. ಒಂದೊಂದು ಸಂಪುಟದ ಅನುವಾದವನ್ನು ಒಬ್ಬೊಬ್ಬರಿಗೆ ವಹಿಸಿ ಕೊಡಲಾಗಿದೆ. ಪ್ರಕೃತ ಬೃಹದಾರಣ್ಯಕೋಪನಿಷತ್ತನ್ನು ಶ್ರೀ ಪಿ.ಎಸ್.ಶೇಷಗಿರಿ ರಾಯರು ಹಾಗೂ ಶ್ರೀ ಸಿ.ಹೆಚ್.ಶ್ರೀನಿವಾಸಮೂರ್ತಿಗಳು ಅನುವಾದಿಸಿದ್ದಾರೆ. ಅವರಿಗೆ ಕೃತಜ್ಞತೆಗಳು. ಪ್ರಧಾನ ಸಂಪಾದಕರಾಗಿ ಹಸ್ತಪ್ರತಿಯನ್ನು ಶೋಧಿಸಿದ ಶ್ರೀ ಕೆ.ಹಯವದನಪುರಾಣಿಕರಿಗೂ ಕಾರ್ಯದರ್ಶಿಗಳಾದ ಶ್ರೀ ಡಿ.ಪ್ರಹ್ಲಾದಾಚಾರ್ಯರಿಗೂ ನೆರವು ನೀಡಿ ಸಹಕರಿಸಿದ ಶ್ರೀ ಎ.ಹರಿದಾಸಭಟ್ಟ ಮತ್ತು ಶ್ರೀ ವೆಂಕಟರಮಣರಿಗೂ ಹಸ್ತಪ್ರತಿಯನ್ನು ಸಿದ್ಧಪಡಿಸಿದ ಶ್ರೀ ಯು.ಮಾಧವರಾಯರಿಗೂ ಕೃತಜ್ಞತೆಗಳು.

ಈ ಗ್ರಂಥಗಳ ಚುರುಕಿನ ಮಾರಾಟ ವ್ಯವಸ್ಥಾಪಕರಾದ ಮಾಧ್ವ ಮಹಾಮಂಡಳದ ಕಾರ್ಯದರ್ಶಿಗಳಿಗೂ ಈ ಯೋಜನೆಯ ಪ್ರೇರಕರು ಹಾಗೂ ಬೃಂದಾವನ ಮುದ್ರಣಾಲಯದ ನಿರ್ದೇಶಕರೂ ಆದ ಶ್ರೀ ಎಂ.ಹೆಚ್.ಕೌಜಲಗಿಯವರಿಗೂ ವಂದನೆಗಳು.

**ಶ್ರೀ ಕೆ.ಟಿ.ಪಾಂಡುರಂಗಿ**
ಕಾರ್ಯಾಧ್ಯಕ್ಷರು
ಸಂಪಾದಕ ಮಂಡಳಿ

# ಶ್ರೀ ೧೦೮ ಶ್ರೀಪೇಜಾವರ ಮಠಾಧೀಶ
# ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳವರ ಸಂದೇಶ

ಶ್ರೀಮಧ್ವಾಚಾರ್ಯರ 750ನೇ ವರ್ಷದ ಸಂದರ್ಭದಲ್ಲಿ ಕೈಗೊಂಡಿರುವ ಜ್ಞಾನ ಪ್ರಸಾರಯೋಜನೆಯ ಅಂಗವಾಗಿ ಶ್ರೀಮಧ್ವಾಚಾರ್ಯರ ಎಲ್ಲಾ ಗ್ರಂಥಗಳ ಕನ್ನಡ ಅನುವಾದವನ್ನು ಪ್ರಕಾಶಿಸುವ ಬೃಹತ್ ಯೋಜನೆಯನ್ನು ಆನಂದ ತೀರ್ಥ ಪ್ರತಿಷ್ಠಾನದ ಸಹಕಾರದಿಂದ ಅಖಿಲಭಾರತ ಮಾಧ್ವ ಮಹಾಮಂಡಲವು ಕೈಗೊಂಡಿದೆ. ತೆಲುಗು, ತಮಿಳು ಮುಂತಾದ ಪ್ರಾದೇಶಿಕ ಭಾಷೆಗಳಲ್ಲಿಯೂ, ಹಿಂದಿ, ಇಂಗ್ಲೀಷ್ ಭಾಷೆಗಳಲ್ಲಿಯೂ ಅನುವಾದವನ್ನು ಪ್ರಕಟಿಸುವ ಬಯಕೆ ನಮ್ಮದಾಗಿದೆ. ಜಗತ್ತಿನ ಸತ್ಯತತ್ವಗಳನ್ನು ಅನುಭವದ ನೆಲೆಯಲ್ಲಿ ಪರೀಕ್ಷಿಸಿ ಸರಿಯಾದ ಪ್ರಮಾಣಗಳ ಆಧಾರದಲ್ಲಿ ವೈಜ್ಞಾನಿಕವಾಗಿ ವಿವೇಚಿಸುವ ವಿಶಿಷ್ಟತೆಯನ್ನು ಶ್ರೀಮಧ್ವಾಚಾರ್ಯರ ಸಿದ್ಧಾಂತದಲ್ಲಿ ನಾವು ಕಾಣಬಹುದು. ಎಲ್ಲಾ ಪ್ರಮಾಣ, ತರ್ಕ, ಊಹಾಪೋಹಗಳಿಗಿಂತಲೂ ಅನುಭವಕ್ಕೆ ಮೊದಲಿನ ಸ್ಥಾನವನ್ನು ಶ್ರೀಮಧ್ವಾಚಾರ್ಯರು ನೀಡಿದ್ದಾರೆ. ಎಲ್ಲ ಭಾಷೆಗಳಲ್ಲಿ ಆಚಾರ್ಯರ ಗ್ರಂಥಗಳ ಅನುವಾದದ ಪ್ರಕಟಣೆಯು ಜಗತ್ತಿನ ಜಿಜ್ಞಾಸುಗಳಿಗೆ ಈ ಸತ್ಯದ ಅರಿವುಂಟಾಗಲು ಅನುಕೂಲವಾಗುವುದು. ಶ್ರೀಮಧ್ವಾಚಾರ್ಯರ ಸಂದೇಶವು ವಿಶ್ವದಲ್ಲಿ ಪ್ರತಿಧ್ವನಿತವಾಗಲಿ, ಈ ಗ್ರಂಥ ಪ್ರಕಾಶನದಿಂದಾಗಿ ಜ್ಞಾನ, ಭಕ್ತಿ, ಕರ್ತವ್ಯ, ಚಾರಿತ್ರ್ಯಗಳ ಬಗ್ಗೆ ಜನಜಾಗೃತಿಯುಂಟಾಗಲಿ ಎಂದು ಹಾರೈಸುತ್ತೇವೆ. ಭಕ್ತರೂ, ಅಭಿಮಾನಿಗಳೂ, ಜಿಜ್ಞಾಸುಗಳೂ ಆದ ಎಲ್ಲಾ ಮಹಾಜನರ ಸಹಕಾರದಿಂದ, ಹರಿವಾಯುಗಳ ಅನುಗ್ರಹದಿಂದ ಈ ಪವಿತ್ರವಾದ ಮಹತ್ತರವಾದ ಜ್ಞಾನಕಾರ್ಯವು ಯಶಸ್ವಿಯಾಗಲಿ ಎಂದು ಆಶಿಸುತ್ತೇವೆ.

ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳವರು
ಪೇಜಾವರ ಮಠ, ಉಡುಪಿ

# ಶ್ರೀಮಧ್ವಭಾಷ್ಯದ ವೈಶಿಷ್ಟ್ಯ

ಬೇರೆ ಬೇರೆ ಭಾಷ್ಯಕಾರರು ಉಪನಿಷತ್ತುಗಳ ವ್ಯಾಖ್ಯಾನ ಮಾಡುವಾಗ ಅಲ್ಲಿರುವ ಪದಗಳಿಗೆ ಆಧಿದೈವಿಕ, ಆಧಿಭೌತಿಕ, ಆಧಿದೈಹಿಕ ವಸ್ತುಗಳನ್ನೇ ಅರ್ಥವಾಗಿ ತಿಳಿಸುತ್ತಿದ್ದರೆ ಶ್ರೀ ಮಧ್ವಾಚಾರ್ಯರು ಉಪನಿಷತ್ತಿನ ಹೆಚ್ಚಿನ ಪದಗಳು ಪರಮಾತ್ಮನ ಬೇರೆ ಬೇರೆ ಗುಣಗಳನ್ನು ವರ್ಣಿಸುವಂತೆ ಅರ್ಥ ವಿವರಣೆ ನೀಡಿ ಆಯಾಯ ವಸ್ತುಗಳಲ್ಲಿರುವ ಪರಮಾತ್ಮನ ರೂಪ ವಿಶೇಷಗಳನ್ನು ಉಪನಿಷತ್ತು ತಿಳಿಸಿಕೊಡುತ್ತದೆಯೆಂದು ವ್ಯಾಖ್ಯಾನ ಮಾಡಿರುವುದು ಅವರ ವಿಶಿಷ್ಟತೆಯಾಗಿದೆ. ವ್ಯರ್ಥವಾದ ಭೌತಿಕ ವಸ್ತುಗಳ ವಿವರಣೆಗಳನ್ನು ಬೇರೆ ವ್ಯಾಖ್ಯಾನಗಳಲ್ಲಿ ಕಾಣುವುದಾದರೆ ಶ್ರೀ ಮಧ್ವಾಚಾರ್ಯರು ಅಪೂರ್ವವಾದ ವೇದ ಮತ್ತು ಪುರಾಣಗಳ ಆಧಾರ ವಾಕ್ಯಗಳನ್ನು ಉಲ್ಲೇಖಿಸಿ ಉಪಾಸನೆ ಮತ್ತು ಅನುಸಂಧಾನಕ್ಕೆ ಅನುಕೂಲವಾಗುವಂತೆ ಪರಮಾತ್ಮನ ವಿಶಿಷ್ಟ ವ್ಯಕ್ತಿತ್ವವನ್ನು ನಿರೂಪಿಸುವ ಆಧ್ಯಾತ್ಮಿಕ ಸಂದೇಶವನ್ನು ಉಪನಿಷತ್ತಿನಿಂದ ನಾವು ಪಡೆಯುವಂತೆ ಮಾಡಿ ವೇದೋಪನಿಷತ್ತುಗಳ ಬಗ್ಗೆ ನಮ್ಮಲ್ಲಿ ಹೆಚ್ಚಿನ ಭಕ್ತಿ ಗೌರವಗಳನ್ನು ಬೆಳೆಸಿದ್ದಾರೆ. ಇದೇ ಶ್ರೀಮದಾಚಾರ್ಯರ ಉಪನಿಷತ್ ಭಾಷ್ಯಗಳ ವೈಶಿಷ್ಟ್ಯವಾಗಿದೆ.

ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳವರು
ಪೇಜಾವರ ಮಠ, ಉಡುಪಿ

# ಶ್ರೀಬೃಹದಾರಣ್ಯಕೋಪನಿಷತ್ಸಾರ

ಸೃಷ್ಟಿಯ ಆದಿಯಲ್ಲಿ ಬ್ರಹ್ಮದೇವರು ಲಕ್ಷ್ಮೀಪತಿಯಾದ ಶ್ರೀಹರಿಯನ್ನು ಸ್ತುತಿಸಿದ ದಿವ್ಯ ಮಂತ್ರಗಳೇ ಬೃಹದಾರಣ್ಯಕೋಪನಿಷತ್. ಬ್ರಹ್ಮದೇವರು ಸೂರ್ಯ ದೇವರಿಗೆ ಈ ಉಪನಿಷತ್ತನ್ನು ಉಪದೇಶಿಸಿದರು. ಸೂರ್ಯನು ಕುದುರೆ(ವಾಜಿ)ಯ ರೂಪದಲ್ಲಿ ಯಾಜ್ಞವಲ್ಕ್ಯರಿಗೆ ಉಪದೇಶಿಸಿದ ಈ ಉಪನಿಷತ್ತಿಗೆ "ವಾಜಸನೇಯ" ಎಂದು ಪ್ರಸಿದ್ಧಿಯು ಒಂದಿದೆ. ಯಾಜ್ಞವಲ್ಕ್ಯರು ಕಣ್ವಮುನಿಗಳಿಗೆ ಇದನ್ನು ಉಪದೇಶಿಸಿದರು. ಜಗತ್ತಿಗೆ ಬೆಳಕನ್ನು ನೀಡುವ ಸೂರ್ಯದೇವರೇ ಈ ಉಪನಿಷತ್ತಿನ ಮೂಲಕ ಜ್ಞಾನದ ಬೆಳಕನ್ನು ನೀಡಿದ್ದಾರೆ.

ಪ್ರಾರಂಭದಲ್ಲಿ ಅಶ್ವಮೇಧದ ಕುದುರೆಯ ವರ್ಣನೆಯು ಇದೆ. ಈ ಕುದುರೆಯ ವಿಭಿನ್ನ ಅವಯವಗಳನ್ನು ಋತು, ಪಕ್ಷ, ಮಾಸ, ಪರ್ವತ ಮುಂತಾದ ರೀತಿಯಲ್ಲಿ ಚಿಂತಿಸಬೇಕೆಂದೂ ಇದು ಆ ಕುದುರೆಗೆ ಮಾಡಬೇಕಾದ ಸಂಸ್ಕಾರವೆಂದೂ ಹಲವರು ವ್ಯಾಖ್ಯಾನ ಮಾಡಿದ್ದಾರೆ. ಪಶುವಿನ ಅಂಗಾಂಗಗಳ ಬಗ್ಗೆ ಮಾಡುವ ಈ ಅಲ್ಲಸಲ್ಲದ ಕಲ್ಪನೆಯಿಂದ ಆಗುವ ಲಾಭವೇನು ? ಇಂತಹ ಮಿಥ್ಯಾ ಕಲ್ಪನೆಯೂ ಒಂದು ಸಂಸ್ಕಾರವೆನಿಸಬಹುದೇ ? ತತ್ವಜ್ಞಾನದ ಖನಿಯೆನಿಸಿದ ಉಪನಿಷತ್ತಿನಂತಹ ವೇದಾಂತ ವಿದ್ಯೆಯಲ್ಲಿ ಇಂತಹ ಅಸಂಬದ್ಧ ಮಾತುಗಳು ಇರಬಹುದೇ? ಮುಂತಾದ ಸಂದೇಹಗಳು ಉದ್ಭವಿಸಬಹುದು. ಶ್ರೀ ಮಧ್ವಾಚಾರ್ಯರು ಇದರ ಆಧ್ಯಾತ್ಮಿಕ ವಿವರಣೆಯನ್ನು ನೀಡಿ ಈ ಎಲ್ಲಾ ಸಂದೇಹಗಳನ್ನು ಪರಿಹರಿಸಿದ್ದಾರೆ. ಈ ಶಬ್ದಗಳು ಕಾಲ, ಪಕ್ಷ ಮೊದಲಾದ ಜಡ ವಸ್ತುಗಳನ್ನು ಬೋಧಿಸದೆ ಅವುಗಳ ಅಭಿಮಾನಿಗಳಾದ ದೇವತೆಗಳನ್ನು ಪ್ರತಿಪಾದಿಸುತ್ತವೆ. ಅಶ್ವಮೇಧದ ಕುದುರೆಯಲ್ಲಿ ಭಗವಂತನೂ ಬ್ರಹ್ಮದೇವರೂ ನೆಲೆಸಿದ್ದಾರೆ. ಅವರನ್ನು ಆಧರಿಸಿ ಅಂಗಾಂಗಗಳಲ್ಲಿ ಬೇರೆ ಬೇರೆ ಅಭಿಮಾನಿ ದೇವತೆಗಳು ಅಧಿಷ್ಠಿತರಾಗಿದ್ದಾರೆ. ಹೀಗೆ ಯಾವುದೇ ಮಿಥ್ಯಾಕಲ್ಪನೆಗೆ ಅವಕಾಶವಿಲ್ಲದಂತೆ ಇದರ ವ್ಯಾಖ್ಯಾನವನ್ನು ಶ್ರೀಮದಾಚಾರ್ಯರು ಮಾಡಿ ಅಶ್ವಮೇಧದ ಕುದುರೆಯ ಪಾವಿತ್ರ್ಯ ಮತ್ತು ಮಹತ್ವವನ್ನು ವಿಶದಪಡಿಸಿದ್ದಾರೆ. ಶ್ರೀ ಮಧ್ವಾಚಾರ್ಯರ ಉಪನಿಷತ್ತಿನ ವ್ಯಾಖ್ಯಾನದ ಹಿನ್ನೆಲೆಯಲ್ಲಿ ಈ ಆಧ್ಯಾತ್ಮಿಕ ದೃಷ್ಟಿಯನ್ನು ನಾವು ಎಲ್ಲೆಡೆಯಲ್ಲಿಯೂ ಕಾಣಬಹುದು. ಇದನ್ನು ಅಳವಡಿಸಿಕೊಳ್ಳದಿದ್ದರೆ ಉಪನಿಷತ್ತು ಅಸಂಬದ್ಧ ಅಂತೆ ಕಂತೆಗಳೆಂದು ನಮಗೆ ಭಾಸವಾಗಬಹುದು.

ಈ ವಿಶ್ವವೂ ಭಗವಂತನ ಶರೀರದಂತೆ. ಆತ್ಮನ ಪ್ರವೇಶದಿಂದಲೇ ಶರೀರದ

ಚಟುವಟಿಕೆ. ಆತ್ಮನಿಲ್ಲದ ಶರೀರವು ಸ್ತಬ್ಧ. ಅದರಂತೆ ಭಗವಂತನಿಲ್ಲದ ಜಗತ್ತಿನಲ್ಲಿ ಯಾವ ಕ್ರಿಯೆ ಪ್ರವೃತ್ತಿಗಳೂ ಉಂಟಾಗಲಾರವು. ನಾವು ನಮ್ಮ ಇಚ್ಛೆಯಿಲ್ಲದಿದ್ದರೂ ಪರವಶರಾಗಿ ಶರೀರವನ್ನು ಪಡೆಯುವುದಾದರೆ ಭಗವಂತನು ತನ್ನ ಲೀಲಾ ವಿಹಾರ ಕ್ಕಾಗಿ ಶರೀರವನ್ನು ಬಯಸಿದಾಗ ತನ್ನ ಸ್ವೇಚ್ಛೆಯಿಂದಲೇ ತನ್ನ ಶರೀರನಂತಿರುವ ಜಗತ್ತನ್ನು ಸೃಜಿಸಿ ವಿವಿಧ ರೂಪಗಳಿಂದ ಅದನ್ನು ಪ್ರವೇಶಿಸಿ ವಿಶ್ವವ್ಯಾಪಾರವನ್ನು ನಡೆಸುತ್ತಾನೆ.

## ಸಂಹಾರಕ್ರಿಯೆ ಜೀವರ ವಿಶ್ರಾಂತಿ

'ಪರಮಾತ್ಮನು ಸೃಷ್ಟಿಯ ಆದಿಯಲ್ಲಿ ಬ್ರಹ್ಮನನ್ನು ನಿರ್ಮಿಸಿದ ನಂತರ ಅವನನ್ನು ನುಂಗಲು ಬಾಯಿ ತೆರೆದನು. ಆಗ ಬ್ರಹ್ಮದೇವರು ಭಯವನ್ನು ವ್ಯಕ್ತಪಡಿಸಿ ಶಬ್ದ ಮಾಡಿದರು. ಆಗ ಪರಮಾತ್ಮನು ಆಲೋಚಿಸಿದನು. "ಇವನನ್ನು ಈಗಲೇ ನುಂಗಿ ದರೆ ನನ್ನ ಆಹಾರವು ಇಷ್ಟರಲ್ಲೇ ಸೀಮಿತವಾಗುವುದು. ಇವನಿಗೆ ಸೃಷ್ಟಿ ಮಾಡಲು ಅವಕಾಶ ನೀಡಿದರೆ ಇವನು ಸೃಜಿಸಿದ ವಿಶಾಲ ಬ್ರಹ್ಮಾಂಡದೊಂದಿಗೆ ಹೆಚ್ಚಿನ ಆಹಾರ ವನ್ನು ನಾನು ಪಡೆಯಬಹುದು" ಆಮೇಲೆ ಬ್ರಹ್ಮದೇವರು ಜಗತ್ ಸೃಷ್ಟಿಯನ್ನು ಆರಂಭಿಸಿದರು. ಅವನು ಸೃಜಿಸಿದ ಜಗತ್ತೆಲ್ಲವನ್ನೂ ಭಗವಂತನು ಕಬಳಿಸಿದನು' ಎಂಬುದಾಗಿ ಉಪನಿಷತ್ತಿನಲ್ಲಿ ನಿರೂಪಣೆಯಿದೆ. ಸಾಮಾನ್ಯ ಜನರಿಗೆ ಈ ಕಥೆಯಿಂದ ಗೊಂದಲವಾಗಬಹುದು. ನಮ್ಮ ಸೃಷ್ಟಿಕರ್ತನು ಪಾಲಕನು ಎಂಬುದಾಗಿ ದೇವರಲ್ಲಿ ಭಕ್ತಿಯು ಉದಯಿಸುವುದಾದರೆ ಸಂಹಾರಕರ್ತನೆಂದು ಅವನಲ್ಲಿ ದ್ವೇಷವೂ ಉಂಟಾಗ ಲಾರದೆ? ಒಂದು ಕುರಿಯಿಂದ ತೃಪ್ತನಾಗದೆ ಅವುಗಳ ವಂಶವನ್ನು ಬೆಳೆಸಿ ನಂತರ ಕೊಲ್ಲುವ ಕಟುಕನಂತೆ ದೇವರ ವರ್ತನೆಯಾಗುವುದಿಲ್ಲವೇ ? ಎಂದು ಮುಂತಾಗಿ ಸಂದೇಹವು ಉದ್ಭವಿಸಬಹುದು. ಆದರೆ ಭಗವಂತನ ಸಂಹಾರದ ನಿಜಸ್ವರೂಪ ವನ್ನೂ, ಅದರ ಉದ್ದೇಶವನ್ನೂ ಅರಿತಾಗ ಈ ಸಂದೇಹಕ್ಕೆ ಎಡೆಯಿರುವುದಿಲ್ಲ. ಜನನ-ಮರಣ ಚಕ್ರದಲ್ಲಿ ಸಿಲುಕಿ ಸ್ವರ್ಗ,ನರಕ, ಮರ್ತ್ಯಗಳಲ್ಲಿ ತಿರುಗಿ ಬಳಲಿ ಬೆಂಡಾದ ಜೀವರಾಶಿಗೆ ದೀರ್ಘ ವಿಶ್ರಾಂತಿಯನ್ನು ನೀಡುವುದೇ ಪರಮಾತ್ಮನ ಸಂಹಾರವ್ಯಾಪಾರ ವಾಗಿದೆ. 'ಪ್ರಳಯ ಕಾಲದಲ್ಲಿ ಸಕಲ ಜೀವರೂ ಗಾಢ ನಿದ್ರೆಯ ಅನುಭವವನ್ನೇ ಪಡೆಯುವರು. "ಸುಷುಪ್ತಿ ಸಂಸ್ಥಾನ್ ಬ್ರಹ್ಮಾದಿಕಾನ್ ಕಲಿಪರಾನ್ ಮನುಜಾನ್" ಎಂಬುದಾಗಿ ಜೀವರಿಗೆ ಪ್ರಳಯವೆಂದರೆ ಸುಷುಪ್ತಿ ಕಾಲವೆಂದು ಆಚಾರ್ಯರು ವರ್ಣಿ ಸಿದ್ದಾರೆ. ಹಗಲಿಡೀ ಎದ್ದು, ಬಿದ್ದು, ತಿರುಗಿ, ಆಟವಾಡಿ ಸುಸ್ತಾದ ಮಗುವನ್ನು ರಾತ್ರಿಯಲ್ಲಿ ತಾಯಿಯು ತೊಟ್ಟಿಲಲ್ಲಿ ತೂಗಿ ಮಲಗಿಸುವಂತೆ ಭಗವಂತನೂ ಜೀವರ ಶ್ರಮಪರಿಹಾರವನ್ನು ಮಾಡುವುದಕ್ಕಾಗಿಯೇ ಪ್ರಳಯವನ್ನು ಏರ್ಪಡಿಸಿರುವನು. ಇಲ್ಲಿ ಕಟುಕನ ಕ್ರೂರತೆಯಿಲ್ಲ. ತಾಯಿಯ ವಾತ್ಸಲ್ಯವಿದೆ. ಆದುದರಿಂದಲೇ

"ಸ್ವಾಪಂ ಪ್ರಾಪಯತಿ ಪ್ರಮಾಪಪ್ರತಯೇ" ಎಂದು ಟೀಕಾಕೃತ್‌ಪಾದರು ಪರಮಾತ್ಮ ನನ್ನು ಸ್ತುತಿಸಿದ್ದಾರೆ. ಪ್ರಥಮವಾಗಿ ಸೃಷ್ಟಿಗೊಂಡ ಬ್ರಹ್ಮದೇವರಿಗೆ ಕೂಡಲೇ ಮುಕ್ತಿಯನ್ನು ನೀಡಿ ಚಿರವಿಶ್ರಾಂತಿಯನ್ನು ನೀಡಿದರೆ ಉಳಿದ ಸಜ್ಜನ ಜೀವರ ಉದ್ಧಾರವಾಗುವುದು ಹೇಗೆ ? ಅವರು ತಮ್ಮ ಸಾಧನೆಗಳನ್ನು ನೆರವೇರಿಸಿ ಸುಖ ಶಾಂತಿಗಳನ್ನು ಪಡೆಯಬೇಡವೇ? ಆದುದರಿಂದ ಬ್ರಹ್ಮನನ್ನು ಕೂಡಲೇ ತನ್ನಲ್ಲಿಗೆ ಕರೆಸಿಕೊಳ್ಳದೆ ಉಳಿದ ಚೇತನ ಸಮುದಾಯವನ್ನು ಸೃಷ್ಟಿಸಲು ಅವನಿಗೆ ಅನುವು ನೀಡಿ ಅವರೆಲ್ಲರ ಸಾಧನೆ, ಸಂತಸಗಳಿಗೆ ಅವಕಾಶ ನೀಡಿದನೆಂಬುದೇ ಈ ಸನ್ನಿವೇಶದ ಅಂತ ರಂಗವಾಗಿದೆ.

## ಜೀವೋತ್ತಮ ವಾಯುದೇವ

ದೇವತೆಗಳಿಗೂ ದೈತ್ಯರಿಗೂ ಮೊದಲಿನಿಂದಲೂ ಸ್ಪರ್ಧೆ. ಬಹುಸಂಖ್ಯಾಕರಾದ ಅಸುರರಿಂದ ದೇವತೆಗಳು ಪರಾಭವಗೊಂಡು ಯಜ್ಞದಿಂದ ಭಗವಂತನನ್ನು ಆರಾಧಿಸಿ ದೈತ್ಯರ ವಿರುದ್ಧವಾಗಿ ವಿಜಯನ್ನು ಸಾಧಿಸಲು ಪ್ರವರ್ತಿಸಿದರು. ದೇವತೆಗಳ ಕೈ ಮೇಲಾಗುವುದೆಂದು ತಿಳಿದ ಅಸುರರು ದೇವತೆಗಳನ್ನು ಆಕ್ರಮಿಸಿ ಪಾತಕಗಳಿಂದ ಅವರನ್ನು ದೂಷಿತಗೊಳಿಸಿದರು. ಆಯಾಯ ಇಂದ್ರಿಯಾಭಿಮಾನಿ ದೇವತೆಗಳ ಮೇಲೆ ಅಸುರರ ಆಕ್ರಮಣವಾಗಿರುವುದರಿಂದಲೇ ಇಂದ್ರಿಯಗಳಿಂದ ಒಳ್ಳೆಯ ಜ್ಞಾನದ ಜೊತೆಗೆ ಕೆಟ್ಟ ಜ್ಞಾನವೂ ಸಂಭವಿಸುತ್ತದೆ. ಆದರೆ ವಾಯುದೇವರನ್ನು ಮಾತ್ರ ತಮ್ಮ ಆಕ್ರಮಣದಿಂದ ದೂಷಿತಗೊಳಿಸಲು ದೈತ್ಯರಿಗೆ ಸಾಧ್ಯವಾಗಲಿಲ್ಲ. ಕಲ್ಲಿನ ಗೋಡೆಗೆ ಅಪ್ಪಳಿಸಿದ ಮಣ್ಣಿನ ಹೆಂಟೆಯಂತೆ ಅವರ ಸ್ಥಿತಿಯಾಯಿತು. ಅಂತೂ ವಾಯುದೇವರ ನೇತೃತ್ವದಲ್ಲಿ ದೇವತೆಗಳು ಅಸುರರನ್ನು ಸೋಲಿಸಿ ವಿಜಯವನ್ನು ಸಾಧಿಸಿದರೆಂದು ವಾಯುದೇವರ ಶ್ರೇಷ್ಠತೆಯನ್ನು ಪ್ರತಿಪಾದಿಸಲಾಗಿದೆ.

ಈ ಉಪನಿಷತ್ತಿನಲ್ಲಿ ಇನ್ನೊಂದು ಕಡೆಯೂ ಮುಖ್ಯಪ್ರಾಣನ ಶ್ರೇಷ್ಠತೆಯನ್ನು ಪ್ರತಿಪಾದಿಸಲಾಗಿದೆ. ಇಂದ್ರಿಯ ಮತ್ತು ಪಂಚಭೂತಗಳ ಅಭಿಮಾನಿಗಳಾದ ದೇವತೆ ಗಳ ಶ್ರೇಷ್ಠತೆಯ ಬಗ್ಗೆ ಸ್ಪರ್ಧೆಯುಂಟಾದಾಗ ಭಗವತ್ ಸೇವಾ ರೂಪವಾದ ತಮ್ಮ ದೈವಿಕ ಮತ್ತು ದೈಹಿಕ ವ್ಯಾಪಾರವನ್ನು ನಿರಂತರವಾಗಿ ಶ್ರಮವಿಲ್ಲದೆ ನೆರವೇರಿಸು ವವರೇ ಶ್ರೇಷ್ಠರೆಂದು ಭಗವಂತನು ಘೋಷಿಸಿದನು. ಎಲ್ಲಾ ದೇವತೆಗಳು ತಮ್ಮ ಕರ್ತವ್ಯವನ್ನು ನಿರಂತರವಾಗಿ ನಡೆಸಲು ಉಪಕ್ರಮಿಸಿದರು. ಆದರೆ ಕ್ರಮೇಣ ಅವರೆಲ್ಲರೂ ಶ್ರಮಕ್ಕೆ ಒಳಗಾಗಿ ಭಗವತ್ ಸೇವಾರೂಪವಾದ ತಮ್ಮ ಕರ್ತವ್ಯವನ್ನು ನಿರಾತಂಕವಾಗಿ ನಡೆಸಲು ಅಸಮರ್ಥರಾದರು. ಆದರೆ ವಾಯುದೇವರ ವ್ಯಾಪಾರವು ನಿಲ್ಲಲೇ ಇಲ್ಲ. ಎಂದೆಂದಿಗೂ ಶ್ರಮಕ್ಕೆ ಒಳಗಾಗದೆ ನಿರಂತರವಾಗಿ ಜಗತ್ ವ್ಯಾಪಾರದ ರೂಪದಲ್ಲಿ ಭಗವತ್ ಸೇವೆಯನ್ನು ವಾಯುದೇವರು ನಡೆಸುತ್ತಲೇ ಇದ್ದರು. ನಿದ್ದೆ

ದಪುಲ್ಲಿ ಎಲ್ಲ ಇಂದ್ರಿಯಗಳೂ ಉಪರತಗಳಾಗಿ ನಿಷ್ಕ್ರಿಯಗಳಾದರೂ ವಾಯುದೇವರ ಉಸಿರಾಟದ ವ್ಯಾಪಾರವು ನಡೆಯುತ್ತಲೇ ಇರುತ್ತದೆ. ಹೀಗೆ ನಿರಂತರ ಕ್ರಿಯಾಶೀಲ ರಾಗಿ ಸರ್ವಲೋಕ ಪ್ರವರ್ತಕರಾದ ವಾಯುದೇವರೇ ಶ್ರೇಷ್ಠರೆಂದು ನಿರ್ಧರಿಸ ಲಾಯಿತು.

## ಸಪ್ತಾನ್ನ ವಿದ್ಯೆ

ಪರಮಾತ್ಮನು ಏಳು ವಿಧವಾದ ಆಹಾರವನ್ನು ಏರ್ಪಡಿಸಿದ್ದಾನೆ. ದೇವತೆಗಳಿ ಗಾಗಿ ಎರಡು, ಮಾನವರಿಗೆ, ಹಸು ಮುಂತಾದ ಪಶುಗಳಿಗೆ ಒಂದೊಂದು ಆಹಾರ ವನ್ನು ವಿಧಿಸಿ, ತನಗಾಗಿ ಮೂರು ಆಹಾರವನ್ನು ಏರ್ಪಡಿಸಿಕೊಂಡಿದ್ದಾನೆ. ಬಲಿ ಮತ್ತು ಯಜ್ಞಗಳು ದೇವತೆಗಳಿಗೆ ಅನ್ನವಾದರೆ ನಾವೆಲ್ಲರೂ ಸ್ವೀಕರಿಸುತ್ತಿರುವ ಆಹಾರವೇ ಮಾನವರ ಅನ್ನವೆನಿಸಿದೆ. ಪಶುಗಳಿಗೆ ಭಗವಂತನು ನೀಡಿದ ಅನ್ನ ಹಾಲು. ಮನಸ್ಸು, ವಾಕ್, ಪ್ರಾಣ—ಈ ಮೂರು ವಸ್ತುಗಳು ಭಗವಂತನು ತನಗಾಗಿ ಏರ್ಪಡಿಸಿ ಕೊಂಡ ಅನ್ನವಾಗಿದೆ. ನಮ್ಮ ಮನಸ್ಸು, ನಮ್ಮ ಮಾತು, ನಮ್ಮ ಕ್ರಿಯೆ ಪರಮಾತ್ಮ ನಿಗೆ ಸಮರ್ಪಿತವಾಗಬೇಕು. ಮನಸ್ಸು ಮತ್ತು ಪಂಚೇಂದ್ರಿಯಗಳನ್ನು ಭಗವಂತನ ವಿಷಯದಲ್ಲಿ ತೊಡಗಿಸಿಕೊಂಡು ಭಗವಂತನ ಗುಣಗಾನದ ಜೊತೆಗೆ ಅವನಿಗೆ ಪ್ರೀತಿಕರ ವಾದ ಕ್ರಿಯೆಗಳಲ್ಲಿ ನಿರತರಾದಾಗ ಮನೋ, ವಾಕ್, ಪ್ರಾಣಗಳೆಂಬ ಅನ್ನವನ್ನು ನಾವು ದೇವರಿಗೆ ನೀಡಿದಂತಾಗುವುದು. ನಮ್ಮ ಮನಸ್ಸಿನಲ್ಲಿ ಕೆಟ್ಟ ವಿಚಾರ ಮತ್ತು ಆಲೋಚನೆಗಳು ಮೂಡಬಾರದು. ಕೆಟ್ಟ ಮಾತುಗಳನ್ನು ಆಡದೆ, ದುಷ್ಟ ಕೃತಿಗಳಿಗೆ ಇಳಿಯದೆ ಭಗವಂತನು ವಿಧಿಸಿದ ನೀತಿ ನಿಯಮಗಳಿಗೆ ಅನುಗುಣವಾದ ಜೀವನವನ್ನು ನಡೆಸುವುದರಿಂದ ದೇವರಿಗೆ ನಮ್ಮ ಮನಸ್ಸು, ಪ್ರಾಣ, ಮಾತುಗಳ ಸಮರ್ಪಣೆಯಾಗು ತ್ತದೆ. ದೇವರಿಗೆ ಇಂತಹ ಮೂರು ಅನ್ನಗಳನ್ನು ನೀಡುವುದರಿಂದಲೇ ನಮಗೂ ಸರ್ವಾನ್ನ ಸಮೃದ್ಧಿಯಾಗುವುದು.

## "ಅಹಂ ಬ್ರಹ್ಮಾಸ್ಮಿ"

ಈ ಉಪನಿಷತ್ತಿನಲ್ಲಿ ವಿವಾದಾಸ್ಪದವಾದ ವಾಕ್ಯಗಳಲ್ಲಿ ಅತ್ಯಂತ ಪ್ರಸಿದ್ಧ ವಾದ "ಅಹಂ ಬ್ರಹ್ಮಾಸ್ಮಿ" ಎಂಬ ವಾಕ್ಯವಿದೆ. ಈ ವಾಕ್ಯದ ಆಧಾರದಿಂದ ಜೀವ ಬ್ರಹ್ಮರಿಗೆ ಅಭೇದವೇ ಉಪನಿಷತ್ತುಗಳ ಅಂತರಾರ್ಥವೆಂದು ಅದ್ವೈತ ಸಂಪ್ರದಾಯದ ಅನುಯಾಯಿಗಳು ಪ್ರತಿಪಾದಿಸುತ್ತಾರೆ. ಅದರಂತೆ "ಅಥ ಯೋಽನ್ಯಾಂ ದೇವತಾ ಮುಪಾಸ್ತೇ ಅನ್ಯೋಽಸೌ ಅನ್ಯೋಽಹಮಸ್ಮೀತಿ ನ ಸ ವೇದ ಯಥಾ ಪಶುಃ" ಎಂಬ ವಾಕ್ಯವಿದೆ. ದೇವರು ಮತ್ತು ತಾನು ಬೇರೆ ಬೇರೆಯೆಂದು ಉಪಾಸನೆ ಮಾಡುವವನು ಪಶುವಿನಂತೆ ಅಜ್ಞಾನಿಯೆಂದು ಈ ವಾಕ್ಯದಿಂದ ಸಾಮಾನ್ಯವಾಗಿ ಭಾಸವಾಗುವ

ಅರ್ಥವಾಗಿದೆ. ಈ ಎರಡೂ ವಾಕ್ಯಗಳೂ ಸಾಮಾನ್ಯ ಜನರಿಗೆ ಗೊಂದಲವನ್ನೇ ಉಂಟುಮಾಡುತ್ತವೆ. ಆದರೆ ಈ ವಾಕ್ಯಗಳನ್ನು ಸ್ವಲ್ಪ ಆಳವಾಗಿ ವಿಮರ್ಶಿಸಿದರೆ ಇಂತಹ ಯಾವುದೇ ಗಲಿಬಿಲಿಗೆ ಅವಕಾಶವಿರುವುದಿಲ್ಲ. ಈ ಉಪನಿಷತ್ತಿನಲ್ಲಿ "ಆತ್ಮಾನಮೇವಾವೇತ್ ಅಹಂ ಬ್ರಹ್ಮಾಸ್ಮಿ" ಎಂಬುದಾಗಿ ಪರಮಾತ್ಮನು ತನ್ನನ್ನೇ ತಾನು ಬ್ರಹ್ಮನೆಂದು ತಿಳಿದನೆಂಬುದಾಗಿ ಹೇಳಿದೆ. ಪರಮಾತ್ಮನು ತನ್ನನ್ನು ಬ್ರಹ್ಮನೆಂದು ತಿಳಿದರೆ ಜೀವರೆಲ್ಲರೂ ಬ್ರಹ್ಮರಾಗುವುದು ಹೇಗೆ? ಪರಮಾತ್ಮನ ಸ್ವಾತ್ಮಜ್ಞಾನದ ವರ್ಣನೆಯಿದು. ಸೃಷ್ಟಿಯ ಆದಿಯಲ್ಲೂ ಇರುವ ಜನನ ಮರಣ ರಹಿತನಾದ ಸ್ವತಂತ್ರ ನಿರ್ವಿಕಾರನಾದ ಪರಮಾತ್ಮನಿಗೆ ಮೊದಲಿನಿಂದಲೂ ತನ್ನ ಪೂರ್ಣತೆಯ ಅರಿವಿದೆ. ಆ ಭಗವಂತನ ಪೂರ್ಣತೆಯನ್ನು ತಿಳಿಯುವುದರಿಂದ ನಾವು ಪೂರ್ಣತೆಯನ್ನು ಪಡೆಯಬಲ್ಲೆವು- ಎಂಬುದು ಈ ವಾಕ್ಯದ ಫಲಿತಾರ್ಥ. ಪರಮಾತ್ಮನಷ್ಟು ಗುಣ ಮಹಿಮೆಗಳು ಇಲ್ಲದಿದ್ದರೂ ಎಲ್ಲಾ ಜೀವರು ಮುಕ್ತಿಯಲ್ಲಿ ತಮ್ಮ ತಮ್ಮ ಪರಿಧಿಯಲ್ಲಿ ಪೂರ್ಣತೆಯನ್ನು ಅನುಭವಿಸುವರು. ದೊಡ್ಡ ಮತ್ತು ಚಿಕ್ಕ ಪಾತ್ರೆಗಳಲ್ಲಿ ನೀರು ತುಂಬಿಸಿದಾಗ ನೀರಿನ ಪ್ರಮಾಣದಲ್ಲಿ ಅಂತರವಿದ್ದರೂ ಎಲ್ಲಾ ಪಾತ್ರೆಗಳೂ ನೀರಿನಿಂದ ತುಂಬಿ ಪೂರ್ಣವಾಗಿರುವಂತೆ ಆನಂದ, ಜ್ಞಾನ ಮುಂತಾದ ಗುಣಗಳಲ್ಲಿ ಅಂತರವಿದ್ದರೂ ಎಲ್ಲಾ ಜೀವರೂ ಮುಕ್ತಿಯಲ್ಲಿ ತಮ್ಮ ಯೋಗ್ಯತೆಗೆ ಅನುಗುಣವಾಗಿ ಪೂರ್ಣತೆಯನ್ನೇ ಅನುಭವಿಸುತ್ತಾರೆ. ಆದುದರಿಂದ ಜೀವರೂ ಪರಮಾತ್ಮನಂತೆ ತಮ್ಮದೇ ಆದ ಪೂರ್ಣತೆಯನ್ನು ತಿಳಿದುಕೊಂಡು ಭಗವಂತನ ಅನುಗ್ರಹದಿಂದ ಇದನ್ನು ಪಡೆಯಲು ಪ್ರಯತ್ನಿಸಬೇಕೆಂಬುದೇ ಇದರ ಸಂದೇಶವಾಗಿದೆಯಲ್ಲದೆ ತಾನೇ ಪರಮಾತ್ಮನೆನ್ನುವ ವಿಪರೀತ ಕಲ್ಪನೆಯನ್ನು ಇದು ಬೋಧಿಸುವುದಿಲ್ಲ. ಸುಖ ದುಃಖಾದಿಗಳ ಭೋಕ್ತಾರರಾಗಿ ನಾವು ನಿರಂತರವೂ ಅನುಭವಿಸುತ್ತಿರುವ ನಾನು ಎನ್ನುವ ವಿಶಿಷ್ಟ ವಸ್ತುವೂ ಪರಬ್ರಹ್ಮನೂ ಒಂದೇ ಎಂಬುದು ಅದ್ವೈತ ವಾದಕ್ಕೆ ವಿರುದ್ಧವಾಗಿದೆ. ಆದುದರಿಂದ ನಮ್ಮಲ್ಲಿ ಅಡಗಿರುವ ವಿಶುದ್ಧ ಚೇತನವೇ ಪರಬ್ರಹ್ಮವೆಂಬುದಾಗಿ "ಅಹಂ ಬ್ರಹ್ಮಾಸ್ಮಿ" ವಾಕ್ಯದ ವಿವರಣೆಯನ್ನು ಅದ್ವೈತವಾದಿಗಳು ಮಾಡಿದ್ದಾರೆ. ಅಂತೂ "ಅಹಂ" ವಸ್ತುವೇ ಪರಬ್ರಹ್ಮವಾಗಿರದೆ ಅದರಲ್ಲಿ ಸೇರಿಕೊಂಡಿರುವ ಶುದ್ಧ ಚೈತನ್ಯವೇ ಪರಬ್ರಹ್ಮನೆಂದು ಆ ವಾಕ್ಯಕ್ಕೆ ಅರ್ಥ ಮಾಡುವುದಾದರೆ "ಅಹಂ" ವಸ್ತುವೆನಿಸಿದ ನಮ್ಮಲ್ಲಿ ಅಂತರ್ಗತನಾದ ಅಂತರ್ಯಾಮಿಯಾದ ಮಹಾ ಚೇತನವೇ ಪರಬ್ರಹ್ಮನೆಂದು ಅರ್ಥವನ್ನು ಯಾಕೆ ಮಾಡಬಾರದು? ಶಬ್ದಗಳಿಂದ ಬೋಧ್ಯನಾಗಿ ಪ್ರತಿಯೊಂದು ವಸ್ತುವಿನಲ್ಲೂ ಸಾರಭೂತನಾಗಿ ಪರಮಾತ್ಮನು ನೆಲೆಸಿದ್ದಾನೆ. ಕಣ್ಣಿಗೆ ಗೋಚರವಾಗುವ ಬಾಹ್ಯರೂಪ ಮತ್ತು ಅದರ ಅಸ್ತಿತ್ವಕ್ಕೆ ಕಾರಣವೆನಿಸಿದ ಮಹಾಚೈತನ್ಯ ಇವೆರಡೂ ಪ್ರತಿಯೊಂದು ವಸ್ತುವಿನಲ್ಲಿ ಅಡಕವಾಗಿದೆ. ಇವೆರಡರ ಸಮ್ಮಿಶ್ರಣವೇ ಒಂದು ಪದಾರ್ಥವೆನ್ನ

ಬಹುದು. ಆದುದರಿಂದ ಶಬ್ದಕ್ಕೆ ವಸ್ತುವಿನ ಹೊರಗಿನ ರೂಪ ಮಾತ್ರ ಅರ್ಥವಾಗಿರದೆ ಅದರ ಅಂತಃಸಾರವೆನಿಸಿದ ಚೇತನವೂ ಆ ಶಬ್ದದ ಅರ್ಥವೆನಿಸುತ್ತದೆ. ಹಣ್ಣಿನ ಹೊರಗಿನ ಸಿಪ್ಪೆ, ತೊಗಟೆ ಮತ್ತು ಒಳಗಿನ ಸಿಹಿಯಾದ ಸಾರಭಾಗ ಇವೆಲ್ಲವೂ ಸೇರಿಯೇ ಒಂದು ಸಮಗ್ರವಾದ ಹಣ್ಣು. 'ಮಾವಿನಹಣ್ಣು' 'ತೆಂಗಿನಕಾಯಿ' ಮುಂತಾದ ಪದಗಳು ಆ ವಸ್ತುವಿನ ಈ ಹೊರ ಮತ್ತು ಒಳ ರೂಪಗಳೆರಡನ್ನೂ ತಿಳಿಸುತ್ತವೆ. "ಪಶು" ಎನ್ನುವ ಪದವು ಆ ಪಶುವಿನ ಶರೀರದ ಜೊತೆಗೆ ಅದರ ಒಳಗಿರುವ ಚೇತನವನ್ನು ಹೇಳುವುದಿಲ್ಲವೇ? "ಮನುಷ್ಯ"ನೆಂದು ನಾವು ನಮ್ಮ ಶರೀರವನ್ನು ಕರೆಯುವುದಾದರೆ ಆ ದೇಹದೊಳಗಿನ ಆತ್ಮನನ್ನು ಕರೆಯಲು ಬೇರೆ ಪದವನ್ನು ಬಳಸುತ್ತೇವೆಯೇ ? ಶರೀರವನ್ನೂ ಅದರೊಳಗಿರುವ ಆತ್ಮನನ್ನೂ ಒಂದೇ ಶಬ್ದದಿಂದ ನಾವು ಕರೆಯುತ್ತೇವೆ. ಅದರಂತೆ ನಮ್ಮನ್ನೂ ನಾವು "ಅಹಂ" ಎಂದು ಹೇಳುವುದಾದರೆ ನಮ್ಮ ಒಳಗೆ ನೆಲೆಸಿರುವ ಸಾರತಮ ವ್ಯಕ್ತಿ ಅಂತರ್ಯಾಮಿಯಾದ ಪರಮಾತ್ಮನನ್ನು ಕರೆಯಲು ಋಷಿಗಳೂ ಅದೇ "ಅಹಂ" ಶಬ್ದವನ್ನು ಬಳಸಿದ್ದಾರೆ. ಹೀಗೆ ಬೇರೆ ಬೇರೆ ನಿಟ್ಟಿನಿಂದ ಪರಿಶೀಲಿಸಿದಾಗ "ಅಹಂ ಬ್ರಹ್ಮಾಸ್ಮಿ" ಎನ್ನುವ ವಾಕ್ಯವು ಪರಮಾತ್ಮನ "ಸ್ವಪ್ರಜ್ಞೆ", ನಮ್ಮ ಪೂರ್ಣತೆಯ ಪರಿಜ್ಞಾನ, ನಮ್ಮಲ್ಲಿ ಹುದುಗಿದ ಅಂತರ್ಯಾಮಿಯ ನಿರೂಪಣೆಯೇ ಆಗಿದೆಯಲ್ಲದೆ ಜೀವ ಬ್ರಹ್ಮ ಅದ್ವೈತ ಪ್ರತಿಪಾದನೆಯಲ್ಲವೆಂಬುದನ್ನು ಅರಿತುಕೊಳ್ಳಬೇಕು.

"ಅಹಂ ಬ್ರಹ್ಮಾಸ್ಮಿ" ಎಂಬ ವಾಕ್ಯವನ್ನು ಮಾತ್ರ ನೋಡಿ ನಾವು ಗೊಂದಲ ಮಾಡಿಕೊಳ್ಳಬಾರದು. ಬೃಹದಾರಣ್ಯಕದಲ್ಲಿಯೇ ಇನ್ನೊಂದು ಕಡೆ ತಂದೆಯು ಮಗನಿಗೆ "ತ್ವಂ ಬ್ರಹ್ಮ" "ತ್ವಂ ಯಜ್ಞಃ" "ತ್ವಂ ಲೋಕಃ" ಎಂದು ಹೇಳುತ್ತಾನೆ. ಆಗ ಮಗನು "ಅಹಂ ಬ್ರಹ್ಮ" "ಅಹಂ ಯಜ್ಞಃ" "ಅಹಂ ಲೋಕಃ" ಎಂದು ಉತ್ತರಿಸುವನು. ನಾನು ವೇದವನ್ನು ಅಧ್ಯಯನ ಮಾಡಿ ಯಜ್ಞವನ್ನು ಆಚರಿಸಿ ಲೋಕವನ್ನು ಗೆಲ್ಲುವೆನು ಎಂದೇ ಎಲ್ಲರೂ ಇದಕ್ಕೆ ಅರ್ಥವನ್ನು ಮಾಡಿದ್ದಾರೆ. "ಅಹಂ ಬ್ರಹ್ಮ" ಎಂಬ ಪದಕ್ಕೆ ಅದ್ವೈತದ ಅರ್ಥವನ್ನು ಮಾಡದೆ ಈ ಸರಳವಾದ ವಿವರಣೆಯನ್ನು ಎಲ್ಲರೂ ಒಪ್ಪಿದ್ದಾರೆ. ಅದರಂತೆ "ಅಹಂ ಬ್ರಹ್ಮಾಸ್ಮಿ" ಎಂಬ ವಾಕ್ಯವನ್ನು ಆಪಾತವಾಗಿ ನೋಡಿ ಭ್ರಮೆಗೆ ಒಳಗಾಗದೆ ಈ ದೃಷ್ಟಿಯಿಂದ ಅದರ ಅರ್ಥವನ್ನು ಪರಿಶೀಲಿಸಬೇಕು.

"ಅಥ ಯೋಽನ್ಯಾಂ ದೇವತಾಮುಪಾಸ್ತೇ" ಎಂಬ ವಾಕ್ಯದಲ್ಲಿಯೂ ನಾವು ಉಪಾಸನೆ ಮಾಡಬೇಕಾದ ದೇವತೆಯು ನಮಗಿಂತ ಭಿನ್ನವಾದದ್ದು ಎಂದು ಸ್ಪಷ್ಟವಾಗಿ ಹೇಳಿದೆ. "ಯಃ ಅನ್ಯಾಂ" ಎಂಬುದಾಗಿ ಆ ದೇವತೆಯು ನಮಗಿಂತ ಬೇರೆಯೇ ಆಗಿದೆಯೆಂದು ನಿಸ್ಸಂದಿಗ್ಧವಾಗಿ ಹೇಳಿದೆ. ಆದರೆ ನಮಗಿಂತ ಬೇರೆಯಾದ ದೇವರನ್ನು "ಅನ್ಯೋಽಸೌ ಅನ್ಯೋಽಹಂ" ಆ ದೇವರೂ ನಾವೂ ಬೇರೆ ಬೇರೆಯೇ, ನಮಗೂ

ಅವನಿಗೂ ಸಂಬಂಧವೇ ಇಲ್ಲ, ನಾವೇ ಸ್ವತಂತ್ರರು ಎಂಬ ರೀತಿಯಲ್ಲಿ ತಿಳಿದುಕೊಳ್ಳಬಾರದೆಂದು ನಿಷೇಧಿಸಿದೆ. ಆ ಮನೆಯ ಅಣ್ಣತಮ್ಮಂದಿರು ಬೇರೆ ಬೇರೆಯಾಗಿದ್ದಾರೆಂದರೆ ಪರಸ್ಪರ ಸಂಪರ್ಕವಿಲ್ಲದೆ ಪ್ರತ್ಯೇಕವಾಗಿ ಸ್ವತಂತ್ರರಿದ್ದಾರೆಂದು ಲೋಕಪ್ರಸಿದ್ಧವಾದ ವ್ಯವಹಾರವಾಗಿದೆ. ಪರಮಾತ್ಮನೂ ನಾವೂ ಅನ್ಯರು. ಅವನು ಬೇರೆ ನಾವು ಬೇರೆ ಎನ್ನುವ ಭಗವಂತನಿಂದ ಪ್ರತ್ಯೇಕತಾ ಭಾವವು ಸಲ್ಲದು–ಎಂಬುದೇ ಈ ವಾಕ್ಯದ ಅರ್ಥವಾಗಿದೆಯಲ್ಲದೆ ಜೀವ–ಪರಮಾತ್ಮರ ಭಿನ್ನತೆಯನ್ನು ನಿಷೇಧಿಸುವುದಲ್ಲ. ವಾಕ್ಯದ ಪ್ರಾರಂಭದಲ್ಲಿ ಭಿನ್ನತೆಯನ್ನು ಸ್ಪಷ್ಟವಾಗಿ ಅಂಗೀಕರಿಸಿ ಉತ್ತರಾರ್ಧದಲ್ಲಿ ಅದನ್ನು ನಿಷೇಧಿಸುವಂತಹ ಅಸಂಬದ್ಧತೆಯನ್ನು ಉಪನಿಷತ್ತಿನಲ್ಲಿ ನಾವು ನಿರೀಕ್ಷಿಸಲಾರೆವು.

### "ಯತ್ರ ತ್ವಸ್ಯ ಸರ್ವಮಾತ್ಮೈವಾಭೂತ್"

ಯಾಜ್ಞವಲ್ಕ್ಯರು ತನ್ನ ಇಬ್ಬರು ಪತ್ನಿಯರನ್ನು ಕರೆಸಿ ತಾನು ಎಲ್ಲವನ್ನೂ ಪರಿತ್ಯಜಿಸಿ ಯಾತ್ರೆಗೆ ಹೊರಟಿರುವುದಾಗಿ ತಿಳಿಸಿ ತನ್ನ ಭೌತಿಕ ಸಂಪತ್ತನ್ನು ಇಬ್ಬರಿಗೂ ವಿಭಜಿಸಿ ಹಂಚುವುದಾಗಿ ತಿಳಿಸುತ್ತಾರೆ. "ನೀವು ನೀಡಿದ ಈ ಸಂಪತ್ತಿನಿಂದ ನನಗೆ ಶಾಶ್ವತ ಸುಖವು ದೊರೆಯಬಲ್ಲುದೇ?" ಎಂದು ಮೈತ್ರೇಯಿಯು ಪ್ರಶ್ನಿಸುತ್ತಾಳೆ. ಸಂಪತ್ ಸಮೃದ್ಧವಾದ ಸಮಗ್ರ ಭೂಮಂಡಲದ ಒಡೆತನವು ದೊರೆತರೂ ಶಾಶ್ವತ ಸುಖವನ್ನು ಹೊಂದಲು ಸಾಧ್ಯವಿಲ್ಲ; ಸಂಪತ್ತಿನಿಂದ ಅಮೃತತ್ವವನ್ನು ಪಡೆಯುವ ಆಶೆ ಸಫಲವಾಗಲಾರದೆಂದು ಯಾಜ್ಞವಲ್ಕ್ಯರು ಉತ್ತರಿಸುತ್ತಾರೆ. "ಯೇನಾಹಂ ನಾಮೃತಾ ಸ್ಯಾಂ. ಕಿಮಹಂ ತೇನ ಕುರ್ಯಾಂ" ಯಾವುದರಿಂದ ಅಮೃತತ್ವವು ದೊರೆಯಲಾರದೋ ಅಂತಹ ಈ ಭೌತಿಕ ಸಂಪತ್ತಿನಿಂದ ನನಗೆ ಏನಾಗಬೇಕು? ಎಂದು ಹೇಳಿ ಯಾಜ್ಞವಲ್ಕ್ಯರು ಕೊಡಮಾಡಿದ ಆಸ್ತಿಯನ್ನು ನಿರಾಕರಿಸಿ ಅಮೃತತ್ವದ ದಾರಿಯನ್ನು ತೋರಿಸಬೇಕೆಂದು ಯಾಜ್ಞವಲ್ಕ್ಯರಲ್ಲಿ ಪ್ರಾರ್ಥಿಸುತ್ತಾಳೆ. ಅವಳ ಈ ತ್ಯಾಗ ಮತ್ತು ಅಧ್ಯಾತ್ಮದ ಕಳಕಳಿಯನ್ನು ಕಂಡು ಸಂತುಷ್ಟರಾಗಿ "ಇಂತಹ ಇಷ್ಟವಾದ ಅಧ್ಯಾತ್ಮದ ಮಾತನ್ನು ಆಡುವ ನೀನೇ ನನ್ನ ಪ್ರೀತಿಯ ಸಹಧರ್ಮಚಾರಿಣಿಯಾಗಿರುವಿ" ಎಂದು ಅವಳನ್ನು ಪ್ರಶಂಸಿಸಿ ತತ್ವಜ್ಞಾನವನ್ನು ವಿವರಿಸುವರು. ಜಗತ್ತಿನಲ್ಲಿ ನಮಗೆ ಅತ್ಯಂತ ಇಷ್ಟತಮವಾದ ವಸ್ತುವು ಪರಮಾತ್ಮನೇ ಆಗಿರುವನು. ಅವನ ಸಂಪರ್ಕದಿಂದಲೇ ಮನೆ, ಮಡದಿ, ಮಕ್ಕಳು ಎಲ್ಲವೂ ನಮಗೆ ಪ್ರಿಯವಾಗುತ್ತಿವೆ. ಅವನು ವಿಮುಖನಾದಾಗ ನಾವು ಅತ್ಯಂತವಾಗಿ ಪ್ರೀತಿಸುವ ವಸ್ತುಗಳನ್ನೂ ನಾವು ದ್ವೇಷಿಸುವಂತಹ ಸ್ಥಿತಿಯುಂಟಾಗುವುದು. ಆದುದರಿಂದ ಭೌತಿಕ ವಸ್ತುಗಳನ್ನಾಗಲೀ, ಸತಿ–ಸುತರನ್ನಾಗಲೀ ನಮ್ಮ ಪ್ರೇಮದ ಕೇಂದ್ರಬಿಂದುವೆಂದು ಪರಿಗಣಿಸದೆ ತಂದೆ, ತಾಯಿ, ಬಂಧು, ಬಾಂಧವರೆಲ್ಲರಿಗಿಂತಲೂ ಮಿಗಿಲಾಗಿ ತನಗಿಂತಲೂ ಹೆಚ್ಚಾಗಿ ಪರಮಾತ್ಮನೇ ನಮ್ಮ ಪ್ರೀತಿಯ ಕಣ್ಮಣಿಯೆಂದು ಅವನನ್ನೇ ಅತಿಶಯಿತವಾಗಿ

ಪ್ರೀತಿಸಬೇಕು. ಪರಮಾತ್ಮನಿಗಿಂತಲೂ ಜಗತ್ತಿನ ಬೇರೆ ವಸ್ತುಗಳಿಗೆ ಮಹತ್ವ ನೀಡಿದವನಿಗೆ ದುರಂತ ಕಾದಿದೆ.

ವೀಣೆ, ಶಂಖಗಳನ್ನು ನೋಡದೆ ಶಬ್ದವನ್ನು ಮಾತ್ರ ಕೇಳಿದರೆ ಅದರ ಸರಿಯಾದ ಪರಿಚಯವಾಗುವುದಿಲ್ಲ. ವೀಣೆ, ಶಂಖಗಳನ್ನು ನೋಡಿದಾಗಲೇ ಅದರಿಂದ ಹೊರ ಹೊಮ್ಮುವ ಧ್ವನಿಯ ನಿಜವಾದ ಪರಿಚಯವಾಗುವುದು. ಅದರಂತೆ ಜಗತ್ಕಾರಣನಾದ ಭಗವಂತನನ್ನು ತಿಳಿಯದೆ ಜಗತ್ತಿನ ಸರಿಯಾದ ಜ್ಞಾನವೇ ನಮಗೆ ಉಂಟಾಗಲಾರದು. ಹೀಗೆ ಸರ್ವಕಾರಣವೂ ಸರ್ವರ ಆನಂದದ ಮೂಲಸ್ರೋತವೂ ಆದ ಪರಬ್ರಹ್ಮನ ದರ್ಶನವೇ ನಮ್ಮ ಜೀವನದ ಪ್ರಧಾನ ಲಕ್ಷ್ಯ. ಚೈತನ್ಯರೂಪಿಯಾದ ಜೀವನು ಆ ಅನಂತ ಅಪಾರ ಬ್ರಹ್ಮನನ್ನು ಹೊಂದಿದಾಗ 'ನ ಪ್ರೇತ್ಯ ಸಂಜ್ಞಾಸ್ತಿ' ತನ್ನ ಜ್ಞಾನವನ್ನೇ ಕಳೆದುಕೊಳ್ಳುತ್ತಾನೆಂದು ಅಂತಿಮವಾಗಿ ಯಾಜ್ಞವಲ್ಕ್ಯರು ಹೇಳುತ್ತಾರೆ. ಇದನ್ನು ಕೇಳಿದ ಮೈತ್ರೇಯಿಯು ಗಲಿಬಿಲಿಗೊಂಡು "ಮುಕ್ತಿಯಲ್ಲಿ ಜ್ಞಾನವಿಲ್ಲವೆನ್ನುವ ನಿಮ್ಮ ಮಾತು ಭ್ರಾಮಕವಾಗಿದೆ, ಅದನ್ನು ವಿವರಿಸಬೇಕು" ಎಂದು ಕೇಳಿಕೊಳ್ಳುವಳು. ಆಗ ಯಾಜ್ಞವಲ್ಕ್ಯರು ತನ್ನ ಮಾತಿನ ವಿವರಣೆಯನ್ನು ನೀಡಿ ಭ್ರಮೆಯನ್ನು ತಂದುಕೊಡುವಂತಹ ಅಸತ್ಯ ವಿಚಾರವನ್ನು ತಾನು ಹೇಳಿಲ್ಲ. ಆತ್ಮನಿಗೂ ವಿನಾಶವಿಲ್ಲ. ಆತ್ಮನ ಸ್ವಾಭಾವಿಕ ಗುಣವಾಗಿರುವ ಜ್ಞಾನಕ್ಕೂ ವಿನಾಶವಿಲ್ಲ. ಮುಕ್ತಿಯಲ್ಲಿ ಜ್ಞಾನವೇ ಇಲ್ಲದಂತಹ ಅಂಧಕಾರ ಸ್ಥಿತಿಗೆ ಮುಕ್ತನು ತಲುಪುವುದಿಲ್ಲ. ವಿಜ್ಞಾನಘನನಾದ ಜೀವನು ಅಜ್ಞಾನವನ್ನು ಸರ್ವಥಾ ಬಯಸಲಾರನು. ಶರೀರ, ಇಂದ್ರಿಯ, ಅಂತಃಕರಣಗಳನ್ನು ತೊರೆದು ಚೈತನ್ಯರೂಪವಾದ ತನ್ನ ನಿಜರೂಪವನ್ನು ಪಡೆಯುವ ಮುಕ್ತಿಯಲ್ಲಿ ಇಂದ್ರಿಯ, ಅಂತಃಕರಣಗಳಿಂದ ಜನ್ಯವಾದ ಭೌತಿಕ ಜ್ಞಾನವಿರುವುದಿಲ್ಲ. ಸ್ವರೂಪಭೂತವಾದ ಚೈತನ್ಯಜ್ಞಾನವೊಂದೇ ಬೆಳಗುತ್ತದೆಯೆಂಬುದಾಗಿ ಹೇಳಿ ಮುಕ್ತಿಯಲ್ಲಿ ಜ್ಞಾನವಿಲ್ಲವೆನ್ನುವ ತನ್ನ ಮಾತಿಗೆ, ಆಗ ಭೌತಿಕ ಜ್ಞಾನವಿಲ್ಲವೆನ್ನುವ ಸ್ಪಷ್ಟೀಕರಣವನ್ನು ಯಾಜ್ಞವಲ್ಕ್ಯರು ನೀಡುತ್ತಾರೆ. "ಯತ್ರ ಹಿ ದ್ವೈತಮಿವ ಭವತಿ" ಚೈತನ್ಯಕ್ಕಿಂತ ವ್ಯತಿರಿಕ್ತವಾದ ಭೌತಿಕ ವಸ್ತುಗಳಿದ್ದರೆ ಆಗ ಮನಸ್ಸಿನಲ್ಲಿ ಇಂದ್ರಿಯಗಳಿಂದ ಬಾಹ್ಯಜ್ಞಾನವುಂಟಾಗಲು ಸಾಧ್ಯ. "ಯತ್ರ ತ್ವಸ್ಯ ಸರ್ವಮಾತ್ಮೈವಾಭೂತ್" ಆದರೆ ಮುಕ್ತಿಯಲ್ಲಿ ಚೈತನ್ಯ ಮಾತ್ರವಿದ್ದು ಪ್ರಕೃತಿಯ ಸಂಬಂಧವೇ ಇಲ್ಲದಿರುವಾಗ ಬಾಹ್ಯೇಂದ್ರಿಯಗಳಿಂದ ಜ್ಞಾನವು ಹೇಗೆ ಹುಟ್ಟಬಲ್ಲುದು? ಆಗ ಚೈತನ್ಯರೂಪವಾದ ಅಂತರಜ್ಞಾನವೊಂದೇ ಇರುತ್ತದೆ. ಅಂತೂ ಜಡ ವಸ್ತುಗಳ ಸಂಬಂಧವಿಲ್ಲದ ಮುಕ್ತಿಯಲ್ಲಿ ಇಂದ್ರಿಯ, ಮನಸ್ಸುಗಳೇ ಇಲ್ಲದಿರುವುದರಿಂದ ಅಂತಃಕರಣದ ವಿಕೃತಿಯಾದ ಭೌತಿಕ ಜ್ಞಾನವಿಲ್ಲದಿದ್ದರೂ ಮುಕ್ತನು ಅಜ್ಞಾನದ ಕತ್ತಲಲ್ಲಿ ಮುಳುಗುವುದಿಲ್ಲ. ಚೈತನ್ಯದ ದಿವ್ಯ ಪ್ರಭೆಯಲ್ಲಿ ಬೆಳಗುತ್ತಾ ತನ್ನನ್ನೂ, ಭಗವಂತನನ್ನೂ, ಉಳಿದ ವಿಶ್ವವನ್ನೂ ಕಾಣುತ್ತಾನೆ.

'ನ ಪ್ರೇತ್ಯ ಸಂಜ್ಞಾಸ್ತಿ' ಈ ವಾಕ್ಯವನ್ನು ಇನ್ನೊಂದು ರೀತಿಯಲ್ಲೂ ವ್ಯಾಖ್ಯಾನ ಮಾಡಬಹುದು. ಮುಕ್ತಿಯನ್ನು ಪಡೆದ ಸಿದ್ಧಪುರುಷನಿಗೆ ಜ್ಞಾನವಿಲ್ಲವೆಂದು ಈ ವಾಕ್ಯವು ಹೇಳುವುದಿಲ್ಲ. ಮುಕ್ತಪುರುಷನ ಜ್ಞಾನವು ಸಂಸಾರಿಗಳಾದ ನಮಗೆ ಇಲ್ಲ. ಮುಕ್ತನು ಅಜ್ಞಾನವನ್ನು ಕಳೆದು ಸಂಸಾರವನ್ನು ತೊರೆದು ಭಗವಂತನ ಲೋಕಕ್ಕೆ ಹೋದ ಮೇಲೆ ಈ ಭೌತಿಕ ಪ್ರಪಂಚಕ್ಕೂ ಅವನಿಗೂ ಸಂಬಂಧವೇ ಕಳಚಿ ಹೋಗುವುದರಿಂದ ನಾವು ಅವನನ್ನು ಕಾಣಲಾರೆವು. ನಮ್ಮ ಸ್ಥೂಲದೃಷ್ಟಿಗೆ ಭಗವಂತನಂತೆ ಮುಕ್ತನೂ ಅಗೋಚರನಾಗುವನೆಂಬ ಮುಕ್ತಿಯ ವೈಶಿಷ್ಟ್ಯವನ್ನು ಈ ವಾಕ್ಯವು ಪ್ರತಿಪಾದಿಸುತ್ತದೆ ಎಂದೂ ನಾವು ಈ ವಾಕ್ಯದಿಂದ ತಿಳಿದುಕೊಳ್ಳಬಹುದು.

ಈ ವಾಕ್ಯಕ್ಕೆ ಅದ್ವೈತವಾದದ ವ್ಯಾಖ್ಯಾನವು ಹೀಗಿದೆ- ಮುಕ್ತಿಯಲ್ಲಿ ಬ್ರಹ್ಮನೇ ಇದ್ದು ಬೇರೆ ವಸ್ತುವೇ ಇಲ್ಲದ ಅದ್ವೈತದ ಸ್ಥಿತಿಯಿರುವಾಗ ಯಾರಿಗೆ ಯಾವ ವಸ್ತುವಿನ ಜ್ಞಾನವುಂಟಾಗಲು ಸಾಧ್ಯ? ಜ್ಞಾತೃ, ಜ್ಞೇಯವಸ್ತು, ಜ್ಞಾನಸಾಧನ ಮುಂತಾದ ಭಿನ್ನತೆಗಳೇ ಇಲ್ಲದಿದ್ದಾಗ ಜ್ಞಾನವು ಹೇಗೆ ಉಂಟಾಗುತ್ತದೆ? ಹೀಗೆ ಅದ್ವೈತಭಾವದ ಈ ಮುಕ್ತಿಯಲ್ಲಿ ಜ್ಞಾನವುಂಟಾಗಲು ಅವಕಾಶವೇ ಇಲ್ಲದಿರುವುದರಿಂದ ಮುಕ್ತಿಯಲ್ಲಿ ಜ್ಞಾನವಿಲ್ಲವೆಂದು ಯಾಜ್ಞವಲ್ಕ್ಯರು ಹೇಳಿದ್ದಾರೆಂದು ವ್ಯಾಖ್ಯಾನಿಸಲಾಗಿದೆ. ಮುಕ್ತಿಯ ನಿಜರೂಪವು ಇದೇ ಆದಲ್ಲಿ ಇಂತಹ ಮುಕ್ತಿಯನ್ನು ಯಾರೂ ಬಯಸಲಾರರು. ಚೈತನ್ಯಹೀನನಾಗಿ ಅಜ್ಞಾನದ ಕಗ್ಗತ್ತಲೆಯಲ್ಲಿ ಕಲ್ಲಿನಂತೆ ಕಾಲ ಕಳೆಯುವುದು ಪುರುಷಾರ್ಥವೆನಿಸಬಹುದೇ? ಇದಕ್ಕಿಂತ ಸ್ವಲ್ಪವಾದರೂ ಜ್ಞಾನದ ಬೆಳಕಿರುವ ಸಂಸಾರವೇ ಲೇಸು ಎನ್ನಬೇಕಾಗುತ್ತದೆ.

ಉಪನಿಷತ್ತು ಇಂತಹ ಮುಕ್ತಿಯನ್ನು ನಿರೂಪಿಸಲು ಹೊರಟಿಲ್ಲ. ತರ್ಕದ ರೂಪದಲ್ಲಿ ಇಂತಹ ಮುಕ್ತಿಯನ್ನು ನಿರಾಕರಿಸುವುದೇ ಈ ವಾಕ್ಯದ ಉದ್ದೇಶವಾಗಿದೆ. ನಿರ್ಜೀವ ಅದ್ವೈತ ಭಾವವೇ ಮುಕ್ತಿಯಾದಲ್ಲಿ ಯಾವುದೇ ಜ್ಞಾನಕ್ಕೆ ಅವಕಾಶವಿಲ್ಲದೆ ಅಜ್ಞಾನದ ಘೋರ ದುರಂತಕ್ಕೆ ನಾವು ಒಳಗಾಗಬಹುದೆಂದು ಎಚ್ಚರಿಸಿ ಇದು ನಿಜವಾದ ಮುಕ್ತಿಯಲ್ಲವೆಂಬುದನ್ನೇ ಈ ಉಪನಿಷತ್ತು ಪ್ರತಿಪಾದಿಸುತ್ತದೆ. ತರ್ಕದಲ್ಲಿರುವಂತಹ ಆಪಾದನೆಯನ್ನೇ ನಿಜವಾದ ಪ್ರತಿಪಾದನೆಯೆಂದು ಭಾವಿಸಿ ಅವಾಂತರಕ್ಕೆ ಎಡೆಯಾಗುವುದುಂಟು. "ದೇವರು ಇಲ್ಲದಿದ್ದಲ್ಲಿ ಈ ಜಗತ್ತಿನ ರಚನೆಯಾಗುತ್ತಿರಲಿಲ್ಲ" ಇದು ತರ್ಕದ ಆಪಾದನೆಗೆ ಒಂದು ಉದಾಹರಣೆ. ದೇವರು ಇಲ್ಲವೆಂದಾಗಲೀ, ಜಗತ್ತಿನ ರಚನೆಯಾಗಿಲ್ಲವೆಂದಾಗಲೀ ಈ ವಾಕ್ಯದ ಅಭಿಪ್ರಾಯವಲ್ಲ. ದೇವರು ಇಲ್ಲದಿದ್ದಲ್ಲಿ ಕರ್ತನೇ ಇಲ್ಲದಿರುವುದರಿಂದ ಜಗತ್ತು ಹುಟ್ಟುವುದು ಹೇಗೆ? ಎಂದು ಆಕ್ಷೇಪಿಸಿ ಜಗತ್ತಿನ ರಚನೆಯನ್ನು ನಿರ್ವಹಿಸಲು ದೇವರನ್ನು ಅಂಗೀಕರಿಸಲೇಬೇಕು ಎಂಬುದೇ ಈ ತರ್ಕದ ಆಶಯವಾಗಿದೆ. ಅದರಂತೆ ಅದ್ವೈತವನ್ನು ಪ್ರತಿಪಾದಿಸಲು ಈ ವಾಕ್ಯವು

ಪ್ರವೃತ್ತವಾಗಿಲ್ಲ. ಮುಕ್ತಿಯಲ್ಲಿ ಅದ್ವೈತವನ್ನು ಅಂಗೀಕರಿಸುವುದರಿಂದ ಜ್ಞಾನವೇ ಇಲ್ಲದಂತಾಗಬಹುದು. ಜ್ಞಾನವನ್ನು ನಾವೆಲ್ಲರೂ ಬಯಸುವುದರಿಂದ ಅದಕ್ಕೆ ಅನುಕೂಲವಾಗುವಂತೆ ದ್ವೈತವನ್ನು ಮೋಕ್ಷದಲ್ಲಿ ಒಪ್ಪಬೇಕು. ಅದ್ವೈತ ಸ್ಥಿತಿಯು ಮುಕ್ತಿಯೆನಿಸಲಾರದೆಂಬುದೇ ಈ ವಾಕ್ಯದ ಪರ್ಯವಸಾನವಾಗುತ್ತದೆ.

ಇನ್ನೊಂದು ರೀತಿಯಲ್ಲಿ ಪರ್ಯಾಲೋಚಿಸಿದಾಗ ಇದು ಭಕ್ತನ ಸಮಾಧಿ ಸ್ಥಿತಿಯನ್ನು ವಿವರಿಸುತ್ತದೆಯೆಂದು ತಿಳಿಯಬಹುದು. ಸಾಮಾನ್ಯವಾಗಿ ನಮ್ಮ ಮನಸ್ಸು ಆಧ್ಯಾತ್ಮಿಕ ಪ್ರಪಂಚದ ಕಡೆಗೂ, ಬಾಹ್ಯ ವಿಷಯಗಳ ಕಡೆಗೂ ಎರಡು ಮುಖವಾಗಿ ಹರಿಯುವುದರಿಂದ ಏಕಾಗ್ರತೆಯಿಂದ ಧ್ಯಾನವನ್ನು ನಮಗೆ ಮಾಡಲಾಗುವುದಿಲ್ಲ. ಆದರೆ ಮನಸ್ಸು ಬಹಿರ್ಮುಖವಾಗಿ ಹರಿಯದೆ ಪರಮಾತ್ಮನಲ್ಲಿ ಮಾತ್ರ ಕೇಂದ್ರೀಕೃತವಾದಾಗ ಯಾವ ಬಾಹ್ಯ ವಸ್ತುಗಳನ್ನೂ ಗಮನಿಸದೆ ಅದು ಏಕಾಗ್ರವಾಗುತ್ತದೆ. ಅನೇಕ ವಿಷಯಗಳ ಕಡೆಗೆ ಮನಸ್ಸು ಓಡುವುದೇ ದ್ವೈತ. ಪರಮಾತ್ಮನಲ್ಲೊಬ್ಬನಲ್ಲಿ ಮಾತ್ರ ಮನಸ್ಸು ನೆಲೆ ನಿಲ್ಲುವುದೇ ಅದ್ವೈತ. ಈ ರೀತಿಯಲ್ಲಿ ಈ ವಾಕ್ಯವು ಸಮಾಧಿಯ ವರ್ಣನೇ ಆಗಿದೆ, ಮುಕ್ತಿಯ ವರ್ಣನೆಯಲ್ಲವೆಂದೂ ಭಾವಿಸಬಹುದು. ಅಂತೂ ಇಷ್ಟರವರೆಗೆ ನಿರೂಪಿಸಿದಂತೆ ಮೂರು ರೀತಿಗಳಿಂದ "ಯತ್ರ ತ್ವಸ್ಯ ಸರ್ವಂ ಆತ್ಮೈವಾಭೂತ್" ಎಂಬ ವಾಕ್ಯವನ್ನು ಅರ್ಥಮಾಡಿಕೊಳ್ಳಬಹುದು-

1. ಮುಕ್ತಿಯಲ್ಲಿ ಭೌತಿಕ ಜ್ಞಾನವಿಲ್ಲವೆಂಬ ನಿರೂಪಣೆ.
2. ತರ್ಕದ ರೂಪದಲ್ಲಿ ಅದ್ವೈತದ ನಿರಾಕರಣೆ.
3. ಸಮಾಧಿಯಲ್ಲಿ ತಂದುಕೊಳ್ಳುವಂತಹ ಏಕಾಗ್ರತೆಯ ವರ್ಣನೆ.

## ಮುಕ್ತಿಯಲ್ಲಿ ತಾರತಮ್ಯ

ಮುಕ್ತಿಯಲ್ಲಿ ಜೀವನು ತನ್ನ ಅಸ್ವಾಭಾವಿಕವಾದ ರೂಪವನ್ನು ಕಳೆದುಕೊಂಡು ನಿಜರೂಪದಿಂದ ಕಂಗೊಳಿಸುವನು. ಬೇರೆ ಬೇರೆ ಲೋಹಗಳ ಬೆರಕೆಯಿಂದ ತನ್ನ ಪರಿಶುದ್ಧತೆಯನ್ನು ಕಳೆದುಕೊಂಡ ಚಿನ್ನವನ್ನು ಬೆಂಕಿಯಲ್ಲಿ ಹಾಕಿದಾಗ ಅದು ತನ್ನ ಕಶ್ಮಲವನ್ನು ಕಳೆದುಕೊಂಡು ಸಹಜ ಪ್ರಭೆಯನ್ನು ಹೊಂದಿ ದೇದೀಪ್ಯಮಾನವಾಗುವಂತೆ ಜೀವರ ಸ್ಥಿತಿಯೂ ಆಗಿದೆ. ಬೆರಕೆ ಚಿನ್ನದಂತೆ ಪ್ರಕೃತಿ ಅಂತಃಕರಣಗಳ ಸಂಬಂಧದಿಂದ ಜೀವರಲ್ಲಿ ನೈಜವಾಗಿರುವ ಜ್ಞಾನ, ಆನಂದ ಮುಂತಾದ ಗುಣಗಳು ಮುಚ್ಚಿಹೋಗಿವೆ. 'ಪರಂಜ್ಯೋತಿರುಪಸಂಪದ್ಯ ಸ್ವೇನ ರೂಪೇಣ ಅಭಿನಿಷ್ಪದ್ಯತೇ' ಪರಮಾತ್ಮನೆಂಬ ದಿವ್ಯಜ್ಯೋತಿಯ ಸಂಬಂಧದಿಂದ ಪ್ರಕೃತಿ ಸಂಬಂಧದ ಕಶ್ಮಲವನ್ನು ಕಳೆದುಕೊಂಡು ಜೀವಾತ್ಮನು ನೈಜಕಾಂತಿಯನ್ನು ಪಡೆಯುವನು. ಸ್ವರ್ಣಕಾರನು ಚಿನ್ನಕ್ಕೆ ವಿವಿಧ ಆಕಾರವನ್ನು ನೀಡಿ ಅವುಗಳಿಗೆ ಥಳಥಳಿಸುವ ಹೊಸರೂಪವನ್ನು ಕೊಡುವಂತೆ ಪರಮಾತ್ಮನೂ ಸಂಸಾರಿಗಳಾದ ಜೀವರಿಗೆ ಮುಕ್ತಿಯಲ್ಲಿ ಮಂಗಳ

ಮಯವಾದ ವಿವಿಧ ಚಿನ್ಮಯ ರೂಪಗಳ ಅಭಿವ್ಯಕ್ತಿಯ ಜೊತೆಗೆ ಅವರಿಗೆ ಹೊಸ ಮೆರುಗನ್ನು ಕೊಡುವನು. 'ಅಸ್ಯೈತ್ ನವತರಂ ಕಲ್ಯಾಣತಮಂ ತನುತೇ'. ಆದರೆ ಮುಕ್ತಿಯಲ್ಲಿ ಈ ಜೀವರು ಒಂದೇ ರೀತಿಯಲ್ಲಿ ಇರುವುದಿಲ್ಲ. ಅವರ ಸಾಧನೆಗಳಿಗೆ ಅನುಗುಣವಾಗಿ ಮುಕ್ತಿಯಲ್ಲಿ ಆನಂದರೂಪವಾದ ಫಲದಲ್ಲಿ ಅಂತರ, ವ್ಯತ್ಯಾಸಗಳು ಇರುತ್ತವೆ. ಮನುಷ್ಯ, ಋಷಿ, ದೇವತೆಗಳು ಮುಂತಾದ ಜೀವರ ಸಾಧನೆಗಳು ಒಂದೇ ರೀತಿ ಇರುವುದಿಲ್ಲ. ಕೆಲವರು ಹೆಚ್ಚಿನ ಅಧ್ಯಯನ ತಪಸ್ಸುಗಳನ್ನೂ ಕೆಲವರು ಕಡಿಮೆ ಸಾಧನೆಯನ್ನು ಮಾಡುವುದನ್ನೂ ನಾವು ನೋಡುತ್ತಿದ್ದೇವೆ. ಸಾಧನೆಗಳಲ್ಲಿ ಅಂತರವಿದ್ದು ಫಲವು ಏಕಮುಖವಾಗಿ ಇರಲು ಸಾಧ್ಯವಿಲ್ಲ. ಆದುದರಿಂದ ಸಾಧನೆಗಳಿಗೆ ಅನುಗುಣವಾಗಿ ಮುಕ್ತಿಯ ಆನಂದದಲ್ಲಿಯೂ ತಾರತಮ್ಯವಿದೆಯೆಂಬುದನ್ನು ಈ ಉಪನಿಷತ್ತಿನಲ್ಲಿ ಪ್ರತಿಪಾದಿಸಲಾಗಿದೆ. ಮನುಷ್ಯಚೇತನರು, ಪಿತೃದೇವತೆಗಳು, ಗಂಧರ್ವರು, ದೇವತೆಗಳು ಇವರೆಲ್ಲರಿಗೂ ಸಂಸಾರದಲ್ಲಿಯೂ ಮುಕ್ತಿಯಲ್ಲೂ ಆನಂದದಲ್ಲಿರುವ ಅಂತರವನ್ನೂ, ವೈಚಿತ್ರ್ಯವನ್ನೂ ಪ್ರತಿಪಾದಿಸಲಾಗಿದೆ.

"ಸಂಸಾರದಲ್ಲಿ ಮಾತ್ರ ಆನಂದದ ತಾರತಮ್ಯವನ್ನು ಇಲ್ಲಿ ಹೇಳಲಾಗಿದೆ. ಇದು ಮುಕ್ತಿಯ ಆನಂದದ ವಿವರಣೆಯಲ್ಲ"ವೆಂದು ಕೆಲವರು ವಾದಿಸಬಹುದು. ಆದರೆ ಈ ಆನಂದಾನುಭವಿಗಳನ್ನು ಅವೃಜಿನ, ಅಕಾಮಹತ ಎಂದು ವರ್ಣಿಸಲಾಗಿದೆ. ಪಾತಕ ಅಥವಾ ಅದರ ಫಲವಾದ ದುಃಖವೇ ವೃಜಿನ. ಈ ದುಃಖವಾಗಲೀ, ಪಾಪವಾಗಲೀ ಇಲ್ಲದವರೇ ಅವೃಜಿನರು. ಸಂಸಾರದಲ್ಲಿ ಯಾರೂ ಈ ದುಃಖದಿಂದ, ಪಾಪದಿಂದ ಮುಕ್ತರಾಗಿಲ್ಲ. ಆದುದರಿಂದ ಅವೃಜಿನರೆಂದು ಮುಕ್ತರನ್ನೇ ಉಲ್ಲೇಖಿಸಲಾಗಿದೆ. ಅದರಂತೆ 'ಅಕಾಮಹತ' ಪದದ ಅರ್ಥವನ್ನು ಪರಿಶೀಲಿಸಿದಾಗ ಈ ಶಬ್ದವೂ ಮುಕ್ತರಿಗೆ ಅನ್ವಯಿಸುತ್ತದೆ. ಕಾಮನೆಯ ಉಪದ್ರವಕ್ಕೆ ಒಳಪಡುವ ಸಂಸಾರಿಗಳೆಲ್ಲರೂ "ಕಾಮಹತರು". ತಮ್ಮ ಇಚ್ಛೆಯಂತೆ ಕಾರ್ಯಗಳು ಕೈಗೂಡದೆ ಸಂಕಟಪಡುವುದರಿಂದ ಇವರೆಲ್ಲರೂ ಕಾಮಹತರೆನಿಸುತ್ತಾರೆ. ಮುಕ್ತರ ಯಾವ ಇಚ್ಛೆಯೂ ವಿಫಲವಾಗುವುದಿಲ್ಲ. ಬಯಸಿದ್ದೆಲ್ಲವನ್ನೂ ಏನೂ ಪ್ರಯತ್ನವಿಲ್ಲದೆ ಅನಾಯಾಸದಿಂದ ಪಡೆಯುತ್ತಾರೆ. ಹೀಗೆ ಆಪ್ತಕಾಮರಾದ ಮುಕ್ತರೆಲ್ಲರೂ 'ಅಕಾಮಹತ'ರೇ ಆಗಿರುತ್ತಾರೆ. ಇಂತಹ ಮುಕ್ತಪುರುಷರೊಳಗೆಯೇ ಆನಂದದ ವ್ಯತ್ಯಾಸ, ವಿಚಿತ್ರತೆಯನ್ನು ಉಪನಿಷತ್ತು ಹೇಳಿರುವುದರಿಂದ ಮುಕ್ತಿಯಲ್ಲೂ ಅನುಸ್ಯೂತವಾಗಿರುವ ಆನಂದದ ತಾರತಮ್ಯವು ಈ ಉಪನಿಷತ್ತಿನಿಂದ ಸಿದ್ಧವಾಗುತ್ತದೆ.

## "ಮೃತ್ಯೋರ್ಮಾ ಅಮೃತಂ ಗಮಯ"

"ಅಸತ್ಯದಿಂದ ಸತ್ಯದ ಕಡೆಗೂ, ಕತ್ತಲೆಯಿಂದ ಬೆಳಕಿನ ಕಡೆಗೂ, ಮೃತ್ಯುವಿ

ನಿಂದ ಅಮೃತತ್ವದ ಕಡೆಗೆ ನಮ್ಮನ್ನು ಕರೆದೊಯ್ಯು" ಎಂಬ ಅರ್ಥದ ಪ್ರಸಿದ್ಧವಾದ ಪ್ರಾರ್ಥನಾ ಮಂತ್ರವೂ ಈ ಉಪನಿಷತ್ತಿನಲ್ಲಿಯೇ ಇದೆ. ಅಶುಭವೂ, ಅಸ್ವಾಭಾವಿಕವೂ ಆದ ಸಾಂಸಾರಿಕ ದುಃಖವೇ ಅಸತ್ಯ. ಶುಭವೂ ಆತ್ಮಸ್ವರೂಪವಾಗಿರುವುದರಿಂದ ಸಹಜವೂ ಆದ ಮೋಕ್ಷಸುಖವೇ ಸತ್ಯ. 'ಅಸ್ವಾಭಾವಿಕವಾದ ಸಂಸಾರ ದುಃಖದಿಂದ ಬಿಡುಗಡೆ ಮಾಡಿ ಮುಕ್ತಿಯ ಸಹಜ ಸುಖವನ್ನು ನೀಡು. ಅದಕ್ಕಾಗಿ ಮೃತ್ಯುವಿನಿಂದ ಅಮೃತತ್ವದ ಕಡೆಗೆ ನಮ್ಮನ್ನು ಒಯ್ಯು. ಮರಣವನ್ನು ಗೆದ್ದು ಅಮೃತಾತ್ಮನಾಗಿ ನಿರಂತರ ನಲಿಯುವಂತೆ ಮಾಡು. ಅದಕ್ಕಾಗಿ ಕತ್ತಲೆಯಿಂದ ಬೆಳಕಿನ ಕಡೆಗೆ ಸಾಗಿಸು. ಸಂಸಾರದ ಈ ದುರಂತಕ್ಕೆ ಕಾರಣವಾದ ಅಜ್ಞಾನವನ್ನು ಪರಿಹರಿಸಿ ದಿವ್ಯಜ್ಞಾನವನ್ನು ದಯಪಾಲಿಸು' ಎಂಬುದೇ ಈ ಮಂತ್ರರೂಪವಾದ ಪ್ರಾರ್ಥನೆಯ ಸಾರವಾಗಿದೆ.

## ಜೀವನದಲ್ಲಿ ನಮ್ಮ ಕರ್ತವ್ಯಗಳು

ನಾವು ನಮ್ಮ ಜೀವನದಲ್ಲಿ ವಿವಿಧ ಸಾಧನೆಗಳಿಂದ ಮೂರು ಲೋಕಗಳನ್ನೂ ಗೆಲ್ಲಬೇಕೆಂದು ಉಪನಿಷತ್ತು ವಿಧಿಸಿದೆ. ಪಿತೃಲೋಕ, ದೇವಲೋಕ, ಮಾನವ ಲೋಕಗಳೇ ನಾವು ಗೆಲ್ಲಬೇಕಾದ ಈ ಮೂರು ಲೋಕಗಳು. ಗೀತೆಯಲ್ಲಿಯೂ, ಉಪನಿಷತ್ತಿನಲ್ಲಿಯೂ ಯಜ್ಞವೆಂದು ಕರೆದಿರುವ ವಿವಿಧ ಸತ್ಕರ್ಮಾಚರಣೆಗಳಿಂದ ನಾವು ಪಿತೃಲೋಕವನ್ನು ಗೆದ್ದು ಸ್ವರ್ಗಸುಖವನ್ನು ಪಡೆಯಬಲ್ಲೆವು. ವಿದ್ಯೆಯಿಂದಲೇ ದೇವಲೋಕದ ವಿಜಯವನ್ನು ಸಾಧಿಸಬೇಕು. ಅಧ್ಯಯನ, ಚಿಂತನ, ಧ್ಯಾನಗಳಿಂದ ಸಾಕ್ಷಾತ್ಕಾರವನ್ನು ಪಡೆದು ಭಗವಂತನನ್ನು ಹೊಂದುವುದೇ ದೇವಲೋಕದ ವಿಜಯವಾಗಿದೆ. ಮಾನವಲೋಕದ ವಿಜಯಕ್ಕಾಗಿ ಶಸ್ತ್ರಾಸ್ತ್ರಗಳಿಂದ ಹೋರಾಟ ನಡೆಸಬೇಕಾಗಿಲ್ಲ. ನಿರಂತರ ಕ್ರಿಯಾಶೀಲರಾದರೆ ಈ ಲೋಕವನ್ನು ನಾವು ಗೆದ್ದಂತೆ. ನಿರಂತರ ಕರ್ತವ್ಯಪರಾಯಣತೆಯೇ ನಮ್ಮ ಮಾನವ ಜೀವನದ ಯಶಸ್ಸಿನ ಅಡಿಗಲ್ಲು. ನಾವು ವೈಯಕ್ತಿಕವಾಗಿ ಅನೇಕ ಜನ್ಮಗಳಲ್ಲಿ ಕ್ರಿಯಾಶೀಲರಾದರೆ ಸಾಲದು. ನಮ್ಮ ಮುಂದಿನ ಪೀಳಿಗೆಯೂ ಕರ್ತವ್ಯಶೀಲತೆಯಿಂದ ಮುನ್ನಡೆದು ಭಾವಿ ಜನಾಂಗವು ಧಾರ್ಮಿಕ ಸಂಸ್ಕಾರ ಮತ್ತು ಕಾರ್ಯೋತ್ಸಾಹದಿಂದ ರೂಪುಗೊಂಡಾಗಲೇ ನಮ್ಮ ಈ ಲೋಕದ ವಿಜಯವು ಪೂರ್ಣಗೊಳ್ಳುವುದು. ಆದುದರಿಂದ ನಮ್ಮ ಮಕ್ಕಳು ಮತ್ತು ಭಾವೀ ಪರಂಪರೆಯಿಂದ ಈ ಲೋಕವನ್ನೂ, ಯಜ್ಞ-ಸತ್ಕರ್ಮಾಚರಣೆಗಳಿಂದ ಪಿತೃಲೋಕವನ್ನೂ, ವಿದ್ಯೆಯಿಂದ ದೇವಲೋಕವನ್ನೂ ನಾವು ಗೆಲ್ಲಬಲ್ಲೆವು. ಆದುದರಿಂದಲೇ ನಮ್ಮ ಮರಣದ ನಂತರವೂ ಉಳಿಯುವ ಈ ಜೀವನದ ಅಮೃತ ಫಲಗಳೆಂದರೆ ವಿದ್ಯೆ, ಸತ್ಕರ್ಮ ಮತ್ತು ಮಕ್ಕಳು ಎಂಬುದಾಗಿ ವರ್ಣಿಸಲಾಗಿದೆ.

ಇದಕ್ಕಾಗಿ ತಂದೆಯು ತನ್ನ ಅಂತ್ಯಕಾಲದಲ್ಲಿ ಮಗನನ್ನು ಕರೆದು ತನ್ನ ಮುಂದಿನ

ಜವಾಬ್ದಾರಿಯನ್ನು ಅವನಿಗೆ ವಹಿಸಬೇಕು. "ಅಹಂ ಬ್ರಹ್ಮ ಅಹಂ ಯಜ್ಞಃ ಅಹಂ ಲೋಕಃ" "ನಾನು ಶಾಸ್ತ್ರದ ಅಧ್ಯಯನವನ್ನು ಮಾಡಿ ತತ್ವಜ್ಞಾನವನ್ನು ಪಡೆದು ಉತ್ತಮ ಕೃತಿಗಳಿಂದ ಲೋಕಗಳನ್ನು ಗೆಲ್ಲುವೆನು" ಎಂದು ಅವನಿಂದ ಪ್ರತಿಜ್ಞೆ ಮಾಡಿಸಬೇಕು. ತನ್ನ ಹಿಂದಿನ ಪರಂಪರೆಯಿಂದ ಬಂದ ಧರ್ಮ, ತತ್ವಜ್ಞಾನಗಳ ಹೊಣೆಯನ್ನು ಮಗನು ತಂದೆಯಿಂದ ಸ್ವೀಕರಿಸಬೇಕು. ಪೂರ್ವಿಕರಿಂದ ಬಂದ ಆಸ್ತಿ, ಸಂಪತ್ತುಗಳಿಗೆ ಮಾತ್ರ ಹಾತೊರೆಯದೆ ಇಂತಹ ವಿಶಿಷ್ಟವಾದ ಆಧ್ಯಾತ್ಮಿಕ ಜವಾಬ್ದಾರಿಯ ಬಗ್ಗೆಯೂ ನಮಗೆ ಎಚ್ಚರ ನೀಡುವ ಉಪನಿಷತ್ತಿನ ಈ ಉಜ್ವಲ ವಾಣಿಯು ಅತ್ಯಂತ ಉದ್ಬೋಧಕವಾಗಿದೆ.

## ಅಜಾತಶತ್ರುವಿನ ಅಂತರ್ದೃಷ್ಟಿ

ಬಾಲಾಕಿ ಮುನಿಯು ರಾಜಾ ಅಜಾತಶತ್ರುವಿನ ಬಳಿಗೆ ತಾನು ತತ್ವಜ್ಞಾನಿಯೆಂಬ ಗರ್ವದಿಂದ ಆಗಮಿಸಿ ಪರಬ್ರಹ್ಮನ ಬಗ್ಗೆ ನಿನಗೆ ಉಪದೇಶ ನೀಡುವೆನೆಂದು ಹೇಳಿಕೊಂಡನು. "ನಿನಗೆ ಇನ್ನೂ ಬ್ರಹ್ಮಜ್ಞಾನವು ಬಂದಿಲ್ಲ. ನೀನು ಅಂತಹ ಜ್ಞಾನಿಯಾಗಿದ್ದರೆ ಜಿಜ್ಞಾಸು ಜನತೆಯು ನಿನ್ನನ್ನು ಬಿಟ್ಟು ಜನಕನನ್ನು ಹಾಡಿ ಹೊಗಳುತ್ತಾ ಅವನ ಬಳಿಗೇ ಯಾಕೆ ಹೋಗುತ್ತಿದ್ದಾರೆ?" ಎಂದು ಅಜಾತಶತ್ರುವು ಪ್ರಶ್ನಿಸುವನು. ಬಾಲಾಕಿಯು ಆ ರಾಜನ ಮಾತಿಗೆ ಮಹತ್ವ ನೀಡದೆ ತಾನು ಬ್ರಹ್ಮಜ್ಞಾನಿಯೆಂಬ ಅಹಂಕಾರದಿಂದ ಸೂರ್ಯ, ಚಂದ್ರ, ವಿದ್ಯುತ್ ಮುಂತಾದ ಕಡೆಗಳಲ್ಲಿ ಇರುವ ಭಗವಂತನ ರೂಪಗಳ ಬಗ್ಗೆ ತನಗಿರುವ ಜ್ಞಾನವನ್ನು ಪ್ರದರ್ಶಿಸುತ್ತಾನೆ. "ಈ ರೂಪಗಳನ್ನೆಲ್ಲಾ ನಾನು ಈಗಾಗಲೇ ಅರಿತಿದ್ದೇನೆ.ನಿನ್ನ ಈ ಜ್ಞಾನವು ಅಪೂರ್ಣವಾಗಿದೆ. ಸಿದ್ಧಿಗೆ ಅವಶ್ಯಕವಾದ ಜ್ಞಾನವನ್ನು ಅರುಹು" ಎಂದು ಅಜಾತಶತ್ರುವು ನುಡಿದಾಗ ಬಾಲಾಕಿಗೆ ಏನೂ ಹೊಳೆಯದೆ ನಿರುತ್ತರನಾಗುವನು. ನಮ್ಮ ಹೊರಗಿರುವ ಜಡವಸ್ತುಗಳಲ್ಲಿಯೂ, ದೇವತೆಗಳಲ್ಲಿಯೂ ಭಗವಂತನನ್ನು ತಿಳಿದರೆ ಸಾಲದು. ನಮ್ಮ ಅಂತರಂಗದಲ್ಲಿ ಭಗವಂತನನ್ನು ಕಾಣಬೇಕು. ನಮ್ಮ ಒಳಗೆ ಇರುವ ಭಗವದ್ರೂಪದಿಂದ ಮೋಕ್ಷ ಸಿದ್ಧಿಯೆಂಬುದನ್ನು ಅಜಾತಶತ್ರುವು ವಿವರಿಸಿ ಅಂತಹ ಭಗವದ್ ರೂಪದ ಉಪಾಸನೆಯನ್ನು ಉಪದೇಶಿಸುವನು.

## ಯಾಜ್ಞವಲ್ಕ್ಯನ ಉಪದೇಶ

ಈ ಉಪನಿಷತ್ತಿನಲ್ಲಿ ಯಾಜ್ಞವಲ್ಕ್ಯನು ನಡೆಸಿದ ಜ್ಞಾನ ಸಂವಾದದಲ್ಲಿ ಭಗವಂತನ ರೂಪಗಳು ಮತ್ತು ಅವನ ಮಹಿಮೆಗೆ ಸಂಬಂಧಿಸಿದ ಅನೇಕ ವಿಷಯಗಳನ್ನು ವಿಸ್ತೃತವಾಗಿ ವರ್ಣಿಸಲಾಗಿದೆ. ಜನಕ ಮಹಾರಾಜನು ಏರ್ಪಡಿಸಿದ ಮಹಾಯಜ್ಞದಲ್ಲಿ ಬಹುಸಂಖ್ಯೆಯಿಂದ ಜ್ಞಾನಿಗಳು ಸೇರಿದ್ದರು. ಇವರಲ್ಲಿ ಯಾರು ಶ್ರೇಷ್ಠ

ಕಾಯಿತು. ಇಲ್ಲಿ ನೆರೆದ ಜ್ಞಾನಿಗಳಲ್ಲಿ ತಾನು ವುಳ್ಳವನು ಇಲ್ಲಿ ಸೇರಿಸಿದ ಸಾವಿರ ಗೋವ ನು ಜನಕನು ಆಹ್ವಾನ ನೀಡಿದನು. ಯಾರೂ ಯಾಜ್ಞವಲ್ಕ್ಯನು ಆ ಗೋವುಗಳನ್ನು ಸಾಗಿ ರೂ ಇದನ್ನು ಪ್ರತಿಭಟಿಸಿ ತನ್ನನ್ನು ಬ್ರಹ್ಮಿಷ್ಠ ನನ್ನು ಆಹ್ವಾನಿಸಿದರು. "ನನ್ನನ್ನು ಬ್ರಹ್ಮ ಹೇಳಿಕೊಳ್ಳಲಾರೆ. ಯಾರು ಬ್ರಹ್ಮಜ್ಞಾನಿ ಗೋವುಗಳು ನನಗೆ ಬೇಕಾಗಿದ್ದರಿಂದ ಅವು ಸಿದೆ"ನೆಂದು ವಿನಯದಿಂದ ಉತ್ತರಿಸುತ್ತಾ ದನು. ಅಶ್ವಲ, ಉಷಸ್ತಿಚಾಕ್ರಾಯಣ, ಮುಂತಾದವರು ಪ್ರಶ್ನಾನುಪ್ರಶ್ನೆಯಾಗಿ ಜ್ಞವಲ್ಕ್ಯನು ನಿರರ್ಗಳವಾಗಿ ಅವುಗಳಿಗೆ

ತರ್ಯಾಮಿ ಸ್ವರೂಪದ ನಿರೂಪಣೆಯಿದೆ. ಕಾರಿಗಳಿಗೆ ಹೊರಗಿನಿಂದಲೇ ಆದೇಶನೀಡಿ ಆ ಅಧಿಕಾರಿಗಳ ಆಲೋಚನೆ, ಪ್ರವೃತ್ತಿ, , ಪ್ರಧಾನಿಗಾಗಲೀ ಪೂರ್ಣ ಪ್ರಭುತ್ವ ಈ ಆದೇಶಗಳು ವಿಫಲವಾಗುವ ಸಂಭವವೇ ನಡೆಸುವವರು ಹೆಜ್ಜೆ ಹೆಜ್ಜೆಗೂ ಗಾಬರಿ,

ತ್ತಾನೆ. ಅಂತಹ ಅಂತರ್ಯಾಮಿಯೂ,
ಹಿಮೆಯ ವಿಸ್ತಾರವನ್ನು ಇಲ್ಲಿ ನಿರೂಪಿಸ
ವ್ಯಾಪಾರ ಚಟುವಟಿಕೆಗಳನ್ನು ನಡೆಸುತ್ತಿ
ಇಲ್ಲ. ಭೌತಿಕ ದೇಹ, ಇಂದ್ರಿಯ, ಮನಸ್ಸು
ಅಪ್ರಾಕೃತ ದಿವ್ಯ ದೇಹದಿಂದಲೇ ತನ್ನ
ನೆ. ಭೌತಿಕ ಜಗತ್ತಿನಲ್ಲಿ ನಾವು ಮಾಡುವ
ನ್ನು ತುಲನೆ ಮಾಡಬಾರದು. ಅವನದು
ಕ ಕ್ರಿಯೆ. ಅವನ ವ್ಯಕ್ತಿತ್ವ ನಮ್ಮ ಬುದ್ಧಿ,
ಹ ಅದ್ಭುತ, ಅಪರಿಮೇಯ, ಅಲೌಕಿಕ
ನದಲ್ಲಿ ಸೂರ್ಯ, ಚಂದ್ರ ಮುಂತಾದ

ಜ್ಞಾನಿಗಳು ಕೇಳಿದ ಎಲ್ಲಾ ಪ್ರಶ್ನೆಗಳಿಗೆ
ಗಳನ್ನು ಕೇಳುವಂತೆ ಮತ್ತು ತಾನು ಕೇಳುವ
ನ್ನು ಆಹ್ವಾನಿಸಿದರು. ಯಾಜ್ಞವಲ್ಕ್ಯರ
ಅಪ್ರತಿಭರಾಗಿ ಚರ್ಚೆಯನ್ನು ಮುಂದು
ನಿರುತ್ತರರಾದ ನಂತರ ಯಾಜ್ಞವಲ್ಕ್ಯರು
ಸೃಷ್ಟಿಯ ಬಗ್ಗೆ ತಾನೇ ಕೆಲವು ಪ್ರಶ್ನೆಗಳನ್ನು
ನ್ನು ಸಾಮಾನ್ಯವಾಗಿ ಆ ಋಷಿಗಳು ತಿಳಿ
ಭಗವಂತನ ವಿಷಯದಲ್ಲಿ ಎಲ್ಲಾ ವಿವರ

ಕಾರ್ಯಗಳು ನಡೆಯುತ್ತವೆ. ಸೂರ್ಯಚಂದ್ರರು ಇಲ್ಲದಿದ್ದಾಗಲೂ ಯಾವುದ ಬೆಳಕಿನಲ್ಲಿ ಪ್ರವರ್ತಿಸುತ್ತೇವೆ. ಈ ಯಾವ ಬೆಳಕು ಇಲ್ಲದಿದ್ದರೂ ಸ್ವಪ್ನ, ಸುಷುಪ್ತಿ, ಮುಕ್ತಿಗಳಲ್ಲಿ ನಮ್ಮ ಪ್ರವರ್ತಕನು ಭಗವಂತ. ಅವನೇ ಬೆಳಗು ಬೆಳಕೂ ಆಗಿರುವನು. ಅವನ ಧ್ಯಾನ, ಸಾಕ್ಷಾತ್ಕಾರ ಅನುಗ್ರಹಗಳಿಂದಲೇ ಅನಾದಿ ಬಂಧನದಿಂದ ಬಿಡುಗಡೆ ಹೊಂದಿ ಪರಮಾನಂದವನ್ನು ನಾವು ಅನುಭವಿಸುತ್ತೇವೆ.

ಈ ಸಂದರ್ಭದಲ್ಲಿ ಉಪನಿಷತ್ತು ಭಗವಂತನಿಂದ ಬೇರೆಯಾದ ವಸ್ತು ಇಲ್ಲ. ಅವನು ಅದ್ವಿತೀಯನೆಂದು ಹೇಳಿದೆ– "ನ ತು ತದ್ ದ್ವಿತೀಯಮಸ್ತಿ" ಬ್ರಹ್ಮನಿಂದ ವ್ಯತಿರಿಕ್ತವಾದ ಇನ್ನೊಂದು ವಸ್ತುವೇ ಇಲ್ಲವೆಂದು ಇದರ ಅರ್ಥವಲ್ಲ. ಪರಮಾತ್ಮನಿಗೆ ಸಮನಾದವನು ಇನ್ನೊಬ್ಬನು ಇಲ್ಲವೆಂದೇ ಇದರ ಅರ್ಥ. ಈ ಊರಿನಲ್ಲಿ ಈ ವ್ಯಕ್ತಿಗೆ ಎರಡನೆಯವನಿಲ್ಲ. ಇವನು ಅದ್ವಿತೀಯನು ಎಂದರೆ ಅವನಿಗೆ ಮನೆ, ಮಡದಿ, ಮಕ್ಕಳು ಮುಂತಾದ ಯಾವ ಪರಿವಾರವೂ ಇಲ್ಲವೆಂದು ಯಾರೂ ಅರ್ಥಮಾಡುವುದಿಲ್ಲ, ಈ ಊರಲ್ಲಿ ಅವನಿಗೆ ಸಮನಾದವನು ಯಾರೂ ಇಲ್ಲವೆಂದು ಎಲ್ಲರಿಗೂ ಹೊಳೆಯುತ್ತದೆ. ಪರಮಾತ್ಮನಿಗೆ ಎರಡನೆಯವನಿಲ್ಲವೆಂಬುದಕ್ಕೂ ಈ ರೀತಿಯಲ್ಲೇ ಅರ್ಥಮಾಡಬೇಕು ಅಂತೂ ಪರಮಾತ್ಮನ ಅದ್ವಿತೀಯ, ಸಾರ್ವಭೌಮ, ಸರ್ವಾಂತರ್ಯಾಮಿ, ಸದಾಮಹಿಮೋಪೇತವಾದ ಸ್ವರೂಪವನ್ನು ಅನೇಕ ಉಪಾಖ್ಯಾನಗಳ ಮತ್ತು ಸಂವಾದಗಳ ಮೂಲಕವಾಗಿ ಈ ಉಪನಿಷತ್ತು ಪ್ರತಿಪಾದಿಸುತ್ತದೆ.

**ದಿನಾಂಕ 20.9.91**

**ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದರು**
**ಶ್ರೀ ಪೇಜಾವರ ಅಧೋಕ್ಷಜ ಮಠ**
**ಉಡುಪಿ**

## BṚHADĀRAṆYAKOPANIṢAD

This Upaniṣad belongs to Kānvaśākhā of Śukla-yajurveda. It forms a part of Śatapatha Brāhmaṇa. It consists of eight chapters. However, the first two chapters are not commented upon by Bhāṣyakāras since these chapters describe the details of Aśvamedha sacrifice and do not contain any philosophical matter.

The Supreme God Lakshmīśa is the deity of this Upaniṣad, Chaturmukhabrahmā, Sūrya, Yājnyavalkya and Kanva are the sages. It is in prose. It is the largest Upaniṣad among the ten Principal Upaniṣads. It discusses all major issues of the philosophy of the Upaniṣads, epistemology, psychology, ethics, theology and mysticism. The climax of the Upaniṣadic Philosophy could be observed here. Each section is named as Brāhmaṇa. Some background episodes are given in some of these Brāhmaṇas. The philosophical debate at the court of king Janaka is the heart of this Upaniṣad. Participation of the female scholars viz. Maitreyi and Gārgi is a special point. The debators throw the challenges of great philosophical significance.

The doctrine of Antaryāmin is a special point made here. The doctrine of Akṣara is another special contribution. The supreme principle is enquired into by a graded series of questions. The supreme principle being beyond ordinary experience is demonstrated by contrasting attributes and mystic trance.

The process of creation, Upāsanās, the importance of Mukhyaprāṇa etc., topics of the Upaniṣads are delineated.

*hma asmi*', '*So aham asmi*',
that bring out the supremacy
d need careful attention and

ṣya has harnessed these philos-
give a full account of the
He draws pointed attention
very benedictory verse of his
s verse is ably explained by

nentary on the Bhāṣya viz.,
Upaniṣadic philosophy. It
in detail and shows the rich-
interpretation.

**ashya.**

धें सर्वदोषव्यपेतं
मजं सर्वबाह्यं सुनित्यम् ।

various limbs of the Supreme God and present in these limbs are also present in this horse. Thus the horse is symbolic of the Supreme God, Chatur mukha, and all other deities. Further its belly, the two sides, feet and other limbs also represent the Antarikṣa Prithivi, Quarters, seasons, months, days, stars, rivers, mountains, plants, trees, rain, thunder etc. Thus this horse represents the entire world also. In fact, this sacrificial horse is the Virāt form of the Supreme God. This horse is stated to arise from the sea and remains in the sea. This indicates that the Supreme God symbolised by this horse is Lord Viṣṇu.

It may look strange that at the commencement of a serious philosophical discussion that follows in Bṛhadāraṇyaka Upaniṣad a ritualistie item is symbolised as the Supreme God and its limbs etc., are mechanically identified with various deities. But a little reflection will reveal that here a fine sketch of the Virāt form of the Supreme God is given for whose discovery the entire philosophical discussion is intended. While each discourse that follows brings out a distinct aspect of the Supreme God this Aśvabrāhmaṇa gives us a consolidated picture of Virāt form of the Supreme God to enable us to follow the significance of the later discourses. This Aśvabrāhmaṇa does not merely represent a transition from the ritualism to philosophy but lays down the foundation of philosophy.

---

1. अश्वस्वरूपो ब्रह्माभूदश्वरूपात् जनार्दनात् ।
तत्र सन्निहितो विष्णुरश्वरूपः स्वयं प्रभुः ॥
तयोश्च प्रतिमा मेध्यो यतोऽश्वोऽयं श्रुतौ श्रुतः ।
सर्वं जगत् तदङ्गेषु तस्मात् संनिहितं स्मृतम् ॥ (M.B.)

**Chaturmukhabrahma offers himself in the Asvamedha sacrifice.**

After laying bare the Virāt form of the Supreme God in Aśvabrāhmaṇa, in the next viz. Aśvamedhabrāhmaṇa, naturally, the process of creation of this world is briefly narrated. Before the creation of the world all were in the womb of the Supreme God who had destroyed all during Pralaya. Now, at the commencement of the world, he thought of assuming a body i.e , the world. He first created cosmic water, then his own abode i.e.. Śvetadvipa. Then he created Mukhyaprāṇa. This Mukhyaprāṇa assumed three forms viz. Āditya, Vāyu and Agni He also assumed the Kūrma form to support the world He himself was supported by the Supreme God in Kūrma form. Then the Supreme God created Chaturmukhabrahmā as second to Mukhyaprāṇa He created Sarasvathi also Through these two he created the Vedas, the sacrifices, the cattle and all others. The Supreme God, then, proceeded to eat up all that he created. That is why he is called Aditi. The Chaturmukhabrahmā on his part desired to worship the Supreme God with the great sacrifice Aśvamedha. He himself assumed the form of a horse and offered himself in the sacrifice. He offered the other animals to the other deities. The prajapāti is the deity for this sacrifice. The Sun in whom Chaturmukhabrahmā is present is also called Aśvamedha. This brief account of the process of creation is further expanded in some of the later sections. This is again not merely the eulogy of Aśvamedha sacrifice but it is a description of the glory of the creatorship of the

2. कर्तृत्वेन पशुत्वेन यत् फलं तदशेषतः ।
मम स्यादिति मन्वानः सोऽश्वरूपमधारयत् ॥ (M.B.)

Supreme God as a preliminary to the philosophical unfolding of the majesty of the Supreme God that follows.

**The demons could not afflict Mukhyaprana with the evil.**

After describing the process of creation and bringing out the special role of Mukhyaprāṇa in this process, the role of Mukhyaprāṇa in the functioning of the body and senses, and his superiority over the other deities who preside over different senses, is brought out in Udgītha Brāhmaṇa. This is explained by an interesting parable. The gods and demons competed for superiority. The demons are in large numbers and the gods are a few. Therefore the gods thought of strengthening themselves by the recitation of Sāman in the sacrifice. First they asked Vāk i.e., Agni the abhimāni deity of Vāk to recite the Sāman. He proceeded to sing for the benefit of Vāk to accrue to the gods and to himself. The demons came to know about it and afflicted him with evil. This resulted in the distortion in speech. The gods went on asking the abhimāni deities of other senses one by one to recite the Sāman. They all similarly failed. Then they approached Mukhyaprāṇa. When Mukhyaprāṇa started singing the Sāman, the demons again tried to afflict him with the evil. However, they themselves collapsed like a clod of earth that hits against a rock breaking into pieces. The gods appealed to Mukhyaprāṇa to lead them from the darkness

---

3. (i) अग्निर्नासिक्यवायुश्च दिक्पाः इन्द्रादयोऽखिलाः ।
सूर्यः सोमश्च रुद्रश्च तेनैव स्वपदे स्थिताः ॥ (M.B.)

(ii) प्रस्तोता तदेतानि जपेत्—
असतो मा सद्गमय, तमसो मा ज्योतिर्गमय,
मृत्योर्मा अमृतं गमयेति ।

th to the immortality. Then, vil afflicting the other deities nd to their respective worlds. uperiority of Mukhyaprāṇa. e Sāman in the sacrifice and l be present in the Udgātā described as providing food He is called Ayāsya as he asa as he gives strength to all ahmanaspati as he is the lord importance of Mukhyaprāṇa the body and the senses is ne of Vāyu Jīvottamatva is rāhmaṇa.

ırther explains the process of mencement of creation the nt. He created Chaturmukha- abrahmā looked around and Therefore, he declared 'Aham designation 'Aham'. He was

n. In this way all those that
wn to the ants. This biological
Brāhmaṇa shows remarkable
f man and animals.

**the world.**

n explained in Aśvamedha
hmaṇa was about the external
Here, the inner presence of
e process of creation and the
man are explained: 'During
l the world were unmanifest.
world manifest with names
d into them. The ordinary
He is called Prāṇa when he
when he speaks. Therefore,
kṣus etc., are his names One
or the other of these aspects
ully. Therefore, one should
. This refers to all his attri-
dearer than progeny, dearer

his Brahman knows himself
l says : 'Before the creation
an i e., the Supreme God.
emain without him, he is
self अहं ब्रह्म अस्मि. Among
will attain fullness to his
h seers and men. Realising
Manu will not remain with-
vill not remain without the
One who thinks that the
utes or some other god has
w the Supreme God.' The
o convey that the Supreme
none can remain without
apūrṇa, and Asmi he ever
This is the implication of
smi'. Neither the context
nterpretation of this state-
an'. Here 'Aham' is not
Even if it is taken as a
does not refer to any Jīva

I am Brahman i e., Guṇapūrṇa. Therefore, it is a statement of Brahman about his being Brahman and ever being aware of it. The Jīva making any claim of his identity with Brahman is neither warranted by the context here, nor it is the import of this statement. To take 'Aham' also as an adjective and interpret it as Aheya i.e., he without whom nobody can remain, will avoid all the confusion about its meaning as a pronoun.

In this Brāhmaṇa the creation of social order is also described: At the commencement of this world Chaturmukha who was a Brāhmaṇa was alone. He created Kṣatriyas viz Indra, Varuṇa etc Vaiśyas viz. Vasu, Rudra etc. Śudras viz. Pūṣan etc. Then, he created Dharma i.e., Vāyu the supporter of the world. Dharma is the Lord of Kṣatriyas. Dharma is truth. Therefore, he who talks of Dharma talks of truth, and he who talks of truth talks of Dharma. Dharma is the supporter of all and the supporter of truth

The Supreme God designated as Ātman is the abode of all. He supports the gods by the sacrifices, Seers by the study of Veda, manes by progeny. He supports men by providing the shelter and the food, animals by providing the grass and water. He is the supporter of domestic animals, birds and all other living beings.

---

(iii) ब्रह्म वा इदमग्र आसीदेकमेव। तत् श्रेयोरूपमत्यसृजत क्षत्रम्। .... स विशमसृजत .... स शौद्रं वर्णमसृजत .... तत् श्रेयो रूपमत्यसृजत धर्मं .... धर्मात् परो नास्ति .... धर्मं वदन्तमाहुः सत्यं वदतीति सत्यं वदन्तमाहुः धर्मं वदतीति।

At the commencement of this world, the Supreme God was alone. He desired to have a wife, children, wealth, and to perform activities i.e., sacrifices. This much has to be desired. An avarage person desires to have wife, progeny, wealth and activity. When he does not get one of these, he feels incompleteness. But he feels complete when he thinks his Manas as himself, Vāk as wife, Prāṇa as son, Chakṣus as human wealth, Srotra as divine wealth, such thought itself as his activity.

In this way in this Avyākṛta Brāhmaṇa, the manifestation of the Supreme God, the world of names and forms, inner presence of the Supreme God in all, his supporting all living beings, creation of social order, and family life are described. This gives a complete picture of the process of creation.

**God created seven types of food.**

The Saptānna Brāhmaṇa gives an Account of seven types of food. 'The father i.e., the Supreme God created seven types of food by his free will and as per the deeds of the beings. Among these seven types of food one is common to all, two were assigned to the gods, three were kept for himself and gave one to the animals. These foods are not exhausted even though eaten by all beings because of the support of the blissful Supreme God.

---

(iv) आत्मैवेदमग्र आसीदेक एव। सोऽकामयत जाया मे स्यादथ प्रजायेय अथ वित्तं मे स्यादथ कर्म कुर्वीय एतावान् वै कामः।

6. (i) यत् सप्तान्नानि मेधया तपसाऽजनयत् पिता एकमस्य साधारणं द्वे देवानभाजयत् त्रीण्यात्मनोऽकुरुत पशुभ्यः एकं प्रायच्छत्

The food that all beings usually take is the common food. One who thinks that this food belongs to him alone will not be free from the sin, because, it belongs to all. Vaiśvadeva and Baliharaṇa are the two types of food for the gods Water is the food given to the animals. Manas, Vāk, and Prāṇa are created by the Supreme God for his pleasure. The abhimāni deities of Vāk, Manas, and Prāṇa are the abhimāni deities of Bhu, Antarikṣa and Svarga. These are the abhimāni deities of three Vedās, and also are the abhimāni deities of father, mother and the son. Vāyu is designated as Samvatsara, he is present in Chandra. The three worlds viz. Manuṣyaloka, Pitṛ-loka and Devaloka are to be won by obtaining a son, by sacrifice and by knowledge. All these details are given in Saptānna Brāhmaṇa to make three points: (1) God has provided seven types of food for the sustenance of all (2) Mānas, Vāk and Prāṇa especially help all to sustain. (3) Mukhyāprāṇa who is called Madhyamaprāṇa here plays a prominent role in sustaining all.

Ṣastha Brāhmaṇa which is the last in this chapter informs us that Nāma, Rūpa and Karma i.e , names, forms and functions are three aspects of the world and these arise from Vāk, Chakṣus and Prāṇa.

---

(ii) त्रीणि आत्मनेऽकुरुतेति मनो वाचं प्राणम् ।

(iii) त्रयो वाव लोकाः मनुष्यलोकः पितृलोकः देवलोकः । मनुष्यलोकः पुत्रेणैव जय्यः कर्मणा पितृलोकः विद्यया देवलोकः ।

7. त्रयं वा इदं नाम रूपं कर्म ।....तदेतत् त्रयं सद् एकमयमात्मा आत्मैकः सन् एतत् त्रयम् ।

hadaraṇya consists of the
त्रुब्राह्मणम् 2. शिशुब्राह्मणम्
म् 5. मधुब्राह्मणम् 6. वंश-

gue between Bālaki Gārgya
rs to teach Brahmavidyā to
u wants to ascertain how
nan and how he meditates
rating the presence of the
ıdra, Vidyut etc , fifteen
he forms of the Supreme
aśatru informs him that he
forms of the God and
ıtes not known to Gārgya.
ıas better knowledge and
u tells him that it is not
rahmaṇ. Therefore, I will
ɔw. He takes him to a
calls the sleeping person.
call and does not get up.

wherefrom this Supreme God came up when the sleeping person woke up.' Gārgya did not know this. Ajātaśatru informed Gārgya that the Supreme God in whom the sleeping person rests in his body, remains in the hṛidayākāśa of the sleeping person The Supreme God moves in the Nādis and also makes the Jīva to move in the Nādis during the sleep. The Nādis are the places of the Supreme God. There are seventy-two thousand Nādis called Hitā. These are spread from the Suṣumnā nādi that is stretched from the heart to the head. The Jīvas rest in the Supreme God in this Suṣumnā nādi during the sleep. Just as the spider emits the threads, just as sparks come forth from the fire, similarly all senses, all worlds, all deities and all beings held by the Supreme God during the sleep come out The supreme God's secret name is satya of satya.

In this discourse two points are made (1) Meditation on the God present in various external objects is not sufficient, that is to say, mere Bahirupāsanā is not sufficient. The presence of the God within has to be realised. (2) The God regulates Jīva even during the deep sleep state.

The method adopted to impart Brahmajnāna is also

---

सहोवाचाजातशत्रुः यत्रैष सुप्तोऽभूत् य एषः विज्ञानमयः पुरुषः क्व एष तदाभूत् कुतः एतदगात् इति तदुह न मेने गार्ग्यः ।

(iii) हिता नाम नाड्यः द्वासप्तति सहस्राणि हृदयात् पुरीततिमभिप्रतिष्ठन्ते ताभिः प्रत्यवसृत्य पुरीतति शेते ।

(iv) स यथा ऊर्णनाभिः तन्तुना उच्चरेत् यथा अग्नेः क्षुद्राः विस्फुलिंगाः व्युच्चरन्ति एवमेवास्मादात्मनः सर्वे प्राणाः सर्वे लोकाः सर्वे देवाः सर्वाणि भूतानि व्युच्चरन्ति ।

communication but actual
erson probably represents

**d.**

Iukhyaprāṇa present in the
He is conceived to be a
room in which it stays.
Supreme God is the post,
ıyaprāṇa is also envisaged
eye Seven deities attend
ted by the names of seven
gical explanation bringing
rpose of this discourse on
a baby in the Subtle body
upervises and directs the
self being guided by the

**the God.**

ta Brāhmaṇa brings out the
of the Supreme God from
ied as Mūrta and Amūrta.

not refer to non-sentient and
The implication of Mūrta is
as martya, Sthita and Satya,
a, yat and tyat. The attributes
e found in Mukhyaprāṇa and
se two are Amūrta. The
d in other deities Rudra etc.
These two are the Pratimā or
sion of the Supreme God who
his sense that these are called
The expression Rūpa should
orm' but it should be taken
द्वे वाव ब्रह्मणो रूपे does not
Brahman but two media to
tal Brahman. These media
e Rudra etc., deities, and
espectively A reference to
s a reference to abhimanya-
Chitprakriti is the abhimāni
ore, when later, the Supreme
and superior to both Mūrta

es a flash of him to the
The Supreme God flashes
vhite wool, like indragopa
ke a white lotus and like a

**Murta and Amurta**

cts that the Supreme God
ta, he is superior to them,
superior and distinct from
ta are Satya while the
se Satyas. Thus, in this
al nature of the Supreme
comprehension (3) the
ne Supreme God from all

**es**

discusses very important
It is a dialogue between
eyi. Yajñavalkya informs
retiring from family life

ed. To realise him instruc-
er, and meditated upon. By
else is known. In order to
iforms her that one loves in
h, Brāhmaṇa, Kṣatriya etc,
ods, the other worlds, and all
by the will of the Supreme
for the Supreme God that is
l others is directed by him.
loving God and subordinate
st value and the highest object
ethics. In this discourse the
hould be taken in the sense of
he sense 'for one's own grati-
ion will make it hedonistic
nt to instruct Maitreyi who
n of the whole world.

y the Supreme God be the

त्युः कामाय पतिः प्रियो भवति
पतिः प्रियो भवति । न वा अरे

tells Maitreyi that all
the Supreme God and
द् योऽन्यत्रात्मनः ब्रह्म वेद'
Kṣatriya etc., all are
: God, and to think of
Such a person will be
statement 'इदं सर्वं यदय-
is the supporter of all.

jñavalkya informs Mai-
d as the source of this
ression that it is support-
. This is explained by
Sound emanating from
Those who know these
e the sound to be from
se who know the God as
else to be the source and
ya further explains that
h which God is to be
him. Just as the sea
d is the source of all.

ಅಗ್ರಜತ್ವಾದಗ್ರಣೀತ್ವಾದ್ ವಾಯೋರಗ್ನಿತ್ವಮಿಷ್ಯತೇ ।
ಇತಿ ಪ್ರವೃತ್ತೇ ॥

**ಅನುವಾದ**—'ನೊರೆಯು ರೂಪವಾದ ನೀರಿನ ಕೆನೆಯು ಮೃತ್ಯುನಾಮಕ ಹರಿಯ ವೀರ್ಯದಿಂದ ಕೂಡಿ ನಿಬಿಡವಾಗಿ ಬ್ರಹ್ಮಾಂಡವಾಯಿತು. ಅದರೊಳಗೆ ಅವನು ಮಲಗಿದನು. ಬಳಿಕ ಅವನು ಅಗ್ನಿಯು ಉತ್ಪತ್ತಿಯಾಗಲಿ ಎಂದು ಯೋಚಿಸಿದನು. ಆ ಯೋಚನೆಯ ಕಾರಣದಿಂದ ಅಗ್ನಿ ಎಂಬ ಹೆಸರುಳ್ಳ ಮುಖ್ಯ ಪ್ರಾಣನು ಜನಿಸಿದನು. ಮೊದಲು ಜನಿಸಿದುದರಿಂದ ಅಥವಾ ಮುಂದೆ ನಿಂತು ಎಲ್ಲರನ್ನೂ ನಡೆಸುವುದರಿಂದ ವಾಯುವಿಗೆ ಅಗ್ನಿಯೆಂದು ಹೆಸರು' ಎಂದು ಪ್ರವೃತ್ತ ಎಂಬ ಗ್ರಂಥದಲ್ಲಿ ಹೇಳಲಾಗಿದೆ.

**ಭಾಷ್ಯ–** ಶಕ್ತಿವಿಸ್ರಂಸನೇ ಚಾಪಿ ಶಯನೇ ಚಾಪಿ ಕೀರ್ತಿತಃ ।
ಶ್ರಮಶಬ್ದೋ ಹರೇರ್ನೈವ ಶಕ್ತಿವಿಸ್ರಂಸನಂ ಕ್ವಚಿತ್ ।
ಅತೋ ಹರೇಃ ಶ್ರಮೋ ನಾಮ ಶಯನಂ ಸಂಪ್ರಕೀರ್ತಿತಮ್ ।
ಇತಿ ಬ್ರಹ್ಮತರ್ಕೇ ॥

'ತಸ್ಯಾಮಶ್ರಾಮ್ಯತ್' ಇತಿ ಸಾಧಿಕರಣತ್ವಾಚ್ಚ ಶಯನಂ ಯುಕ್ತಂ । ನ ಹಿ ಪೃಥಿವ್ಯಾಂ ಶ್ರಮೋ ನಾಮಾಂತಃಕರಣಧರ್ಮೋ ಯುಜ್ಯತೇ। ಅಧಿಕರಣಾಧಿಕರಣ ಪರಂಪರಾಕಲ್ಪನಂ ಚ ಕಷ್ಟಕಲ್ಪನಮ್ ।

**ಅನುವಾದ**—'ಶ್ರಮಶಬ್ದಕ್ಕೆ ಶಕ್ತಿಗುಂದುವುದು, ದಣಿಯುವುದು ಎಂದೂ, ಮಲಗುವುದು ಎಂದೂ ಎರಡು ಅರ್ಥ. ಹರಿಗೆ ಶಕ್ತಿಹ್ರಾಸ ಎಂದೂ ಇಲ್ಲ. ಆದ್ದರಿಂದ ಹರಿಯ ವಿಷಯದಲ್ಲಿ ಶ್ರಮ ಎಂದರೆ ಮಲಗುವುದು ಎಂದೇ ಅರ್ಥ' ಎಂದು ಬ್ರಹ್ಮತರ್ಕದಲ್ಲಿ ಹೇಳಿದೆ.

'ಅದರಲ್ಲಿ ಶ್ರಮಿಸಿದನು' ಎಂದು ಶ್ರಮಕ್ಕೆ ಒಂದು ಆಧಾರವನ್ನು ಹೇಳಿರುವುದರಿಂದಲೂ ಇಲ್ಲಿ ಶ್ರಮವೆಂದರೆ ಶಯನವನ್ನೇ ತೆಗೆದುಕೊಳ್ಳಬೇಕು. ಹಾಗಲ್ಲದೆ ದಣಿವು ಎಂಬ ಅರ್ಥದಲ್ಲಿ ಶ್ರಮ ಎಂಬ ಪದವನ್ನು ತೆಗೆದುಕೊಂಡರೆ ಅಂತಃಕರಣದಲ್ಲಿರುವ ದಣಿವಿಗೆ ಪೃಥಿವೀ ಆಧಾರವಾಗಲು ಸಾಧ್ಯವಿಲ್ಲ. ದಣಿವಿಗೆ ಮನಸ್ಸು ಆಧಾರ, ಮನಸ್ಸಿಗೆ ಶರೀರ ಆಧಾರ, ಶರೀರಕ್ಕೆ ಪೃಥಿವೀ ಆಧಾರ ಎಂದು ಪರಂಪರೆಯಿಂದ ಪೃಥಿವಿಗೆ ಆಧಾರತ್ವವನ್ನು ಹೇಳುವುದು ಕ್ಲಿಷ್ಟಕಲ್ಪನೆಯಾಗುತ್ತದೆ.

**ಭಾಷ್ಯ–** ಸೃಷ್ಟ್ವಾ ಸ ಪೃಥಿವೀಂ ವಿಷ್ಣುಃ ಶೇತೇಽನಂತೇಽಬ್ಧಿಮಧ್ಯಗಃ ।
ತಸ್ಯಾಂ ಪೃಥಿವ್ಯಾಂ ಶ್ವೇತಾಖ್ಯೇ ದ್ವೀಪೇ ಮುಕ್ತೈರುಪಾಸಿತಃ ।
ಇತಿ ಮುಕ್ತಿಸಂಹಿತಾಯಾಂ ॥

**ತಪ್ತ ಆಲೋಚನಾಯುಕ್ತಸ್ತಸ್ಮಾತ್ ಕಾರ್ಯಾರ್ಥಕಾಮನಾ ।**
**ತಪ್ತತಾ ತು ಹರೇರುಕ್ತಾ ಕುತೋ ದುಃಖಂ ಹರೇಃ ಪ್ರಭೋಃ ।**
**ಇತಿ ಬ್ರಹ್ಮತರ್ಕೇ ॥**

**ತೇಜೋರಸಃ ಜಗತಃ ಸಾಮರ್ಥ್ಯಸಾರಭೂತಃ ।**

**ಅನುವಾದ**—ಶ್ರಮ ಎಂದರೆ ಶಯನ ಎನ್ನುವ ಪಕ್ಷದಲ್ಲಿ, ಶಯನಕ್ಕೆ ಶರೀರವು ಆಧಾರ, ಶರೀರಕ್ಕೆ ಶೇಷ, ಶೇಷನಿಗೆ ಕ್ಷೀರಸಾಗರ, ಕ್ಷೀರಸಾಗರಕ್ಕೆ ಪೃಥಿವಿಯು ಆಧಾರ ಎಂಬ ಪರಂಪರಾಕಲ್ಪನೆ ಇದ್ದರೂ ದೋಷವಿಲ್ಲ. ಏಕೆಂದರೆ ಈ ಪರಂಪರೆಯು ಪ್ರಮಾಣಪ್ರಮಿತವಾಗಿದೆ. 'ವಿಷ್ಣುವು ಪೃಥಿವಿಯನ್ನು ಸೃಷ್ಟಿಸಿ ಅದರಲ್ಲಿ ಕ್ಷೀರಸಾಗರ ಮಧ್ಯದಲ್ಲಿ, ಶ್ವೇತದ್ವೀಪದಲ್ಲಿ ಮುಕ್ತರಿಂದ ಉಪಾಸಿತನಾಗಿ ಶೇಷನ ಮೇಲೆ ಮಲಗಿದ್ದಾನೆ' ಎಂದು ಮುಕ್ತಿ ಸಂಹಿತೆಯಲ್ಲಿ ಹೇಳಿದೆ.

'ತಪ್ತ ಎಂದರೆ ಒಂದು ಕಾರ್ಯವನ್ನು ಮಾಡುವ ಇಚ್ಛೆಯುಳ್ಳವನೆಂದು ಅರ್ಥವಾಗುವುದರಿಂದ, ಹರಿಯ ತಾಪವೆಂದರೆ ಸೃಷ್ಟಿಸುವ ಇಚ್ಛೆ ಎಂದೇ ಅರ್ಥ ಮಾಡಬೇಕು. ಹಾಗಲ್ಲದೆ ದುಃಖರೂಪವಾದ ತಾಪವು ಪ್ರಭುವಾದ ಹರಿಗೆ ಎಲ್ಲಿಂದ ಬರಬೇಕು' ಎಂದು ಬ್ರಹ್ಮತರ್ಕದಲ್ಲಿ ಹೇಳಿದೆ.

ಮಂತ್ರದಲ್ಲಿರುವ ತೇಜೋರಸ ಎಂಬ ಶಬ್ದಕ್ಕೆ ಜಗತ್ತಿನ ಸಾಮರ್ಥ್ಯದ ಸಾರಭೂತ ಎಂದರ್ಥ.

**ಮುಖ್ಯಪ್ರಾಣನ ಮೂರು ರೂಪಗಳ ಉತ್ಪತ್ತಿ :**

**ಉಪನಿಷತ್–ಸ ತ್ರೇಧಾಽಽತ್ಮಾನಂ ವ್ಯಾಕುರುತ ಆದಿತ್ಯಂ ತೃತೀಯಂ ವಾಯುಂ ತೃತೀಯಂ । ಸ ಏಷ ಪ್ರಾಣಸ್ತ್ರೇಧಾ ವಿಹಿತಃ । ತಸ್ಯ ಪ್ರಾಚೀ ದಿಕ್ ಶಿರಃ । ಅಸೌ ಚಾಸೌ ಚೇರ್ಮೌ । ಅಥಾಸ್ಯ ಪ್ರತೀಚೀ ದಿಕ್ ಪುಚ್ಛಂ । ಅಸೌ ಚಾಸೌ ಚ ಸಕ್ಥ್ಯೌ । ದಕ್ಷಿಣಾ ಚೋದೀಚೀ ಚ ಪಾರ್ಶ್ವೇ । ದ್ಯೌಃ ಪೃಷ್ಠಂ। ಅಂತರಿಕ್ಷಮುದರಂ। ಇಯಮುರಃ। ಸ ಏಷೋಽಪ್ಸು ಪ್ರತಿಷ್ಠಿತಃ। ಯತ್ರ ಕ್ವ ಚೈತಿ ತದೇವ ಪ್ರತಿತಿಷ್ಠತ್ಯೇವಂ ವಿದ್ವಾನ್ ॥**

**ಅನುವಾದ**—ಅಗ್ನಿನಾಮಕನಾದ ಮುಖ್ಯಪ್ರಾಣನು ತನ್ನನ್ನು ಆದಿತ್ಯ ವಾಯು ಅಗ್ನಿಗಳೆಂದು ಮೂರುರೂಪಗಳಿಂದ ವಿಭಜಿಸಿಕೊಂಡು, ಆದಿತ್ಯನನ್ನು ವಾಯು ಅಗ್ನಿಗಳಿಗೆ ಮೂರನೆಯವನಾಗುವಂತೆಯೂ, ವಾಯುವನ್ನು ಆದಿತ್ಯ ಅಗ್ನಿಗಳಿಗೆ ಮೂರನೆಯವನಾಗುವಂತೆಯೂ, ಅಗ್ನಿಯನ್ನು ಆದಿತ್ಯ ವಾಯುಗಳಿಗೆ ಮೂರನೆಯವನಾಗುವಂತೆಯೂ ಮಾಡಿದನು. ಆ ಮುಖ್ಯಪ್ರಾಣನು ಮೃತ್ಯುನಾಮಕ ಹರಿಯಿಂದ ಹೀಗೆ

ಮೂರು ರೂಪಗಳನ್ನು ತೆಗೆದುಕೊಳ್ಳುವಂತೆ ಮಾಡಲ್ಪಟ್ಟನು. ಅದೇ ಮುಖ್ಯ ಪ್ರಾಣನು ಕೂರ್ಮರೂಪನಾಗಿ ಜಗತ್ತನ್ನು ಧರಿಸಿದ್ದಾನೆ. ಆ ಕೂರ್ಮರೂಪಿಯಾದ ಮುಖ್ಯಪ್ರಾಣನ ಶಿರಸ್ಸು ಪೂರ್ವದಿಕ್ಕಿನಲ್ಲಿದೆ. ಮುಂದಿನ ಎರಡು ಕಾಲುಗಳು ಆಗ್ನೇಯ ಮತ್ತು ಈಶಾನ್ಯ ದಿಕ್ಕುಗಳಲ್ಲಿವೆ. ಬಾಲವು ಪಶ್ಚಿಮದಿಕ್ಕಿನಲ್ಲಿದೆ. ಹಿಂದಿನ ಎರಡು ಕಾಲುಗಳು ನೈಋತ್ಯ ಮತ್ತು ವಾಯುವ್ಯ ದಿಕ್ಕುಗಳಲ್ಲಿವೆ. ಎರಡು ಪಾರ್ಶ್ವಗಳು ದಕ್ಷಿಣ ಮತ್ತು ಉತ್ತರ ದಿಕ್ಕುಗಳಲ್ಲಿವೆ. ದ್ಯುಲೋಕವು ಬೆನ್ನಿನ ಮೇಲಿದೆ. ಅಂತರಿಕ್ಷವು ಉದರದಲ್ಲಿದೆ. ಭೂಮಿಯು ಎದೆಯನ್ನಾಶ್ರಯಿಸಿ ಎದೆಯ ಕೆಳಭಾಗದಲ್ಲಿದೆ. ಈ ವಾಯುಕೂರ್ಮವು ಅಂಡೋದಕದಲ್ಲಿ ನಿಂತಿದೆ. ಮುಖ್ಯಪ್ರಾಣನ ಈ ಆದಿತ್ಯ ಮೊದಲಾದ ಜಗತ್ಪಾಲಕ ರೂಪಗಳನ್ನೂ, ಜಗದ್ಧಾರಕ ಕೂರ್ಮರೂಪವನ್ನೂ ತಿಳಿದ ಜ್ಞಾನಿಯು ಎಲ್ಲಿ ಹೋಗುತ್ತಾನೆಯೋ ಅವನು ಅಲ್ಲಿಯೇ ಸ್ಥಿರವಾಗಿ ಇರಬೇಕೆಂದು ಬಯಸಿದರೆ ಅಲ್ಲಿಯೇ ಸ್ಥಿರವಾಗಿರುತ್ತಾನೆ.

**ವಿವರಣೆ**—ಮಂತ್ರದಲ್ಲಿ ಆದಿತ್ಯಂ ತೃತೀಯಂ, ವಾಯುಂ ತೃತೀಯಂ ಎಂದು ಹೇಳಿದೆ. ಅಗ್ನಿಂ ತೃತೀಯಂ ಎಂದು ಹೇಳಿಲ್ಲ, ಅಧ್ಯಾಹಾರ ಮಾಡಬೇಕು. ಆಗ ಉಳಿದೆರಡು ರೂಪಗಳನ್ನು ಗಣನೆಗೆ ತೆಗೆದುಕೊಂಡರೆ ಪ್ರತಿಯೊಂದು ರೂಪವೂ ತೃತೀಯವೇ ಆಗುತ್ತದೆ. ಪ್ರಥಮಂ, ದ್ವಿತೀಯಂ, ತೃತೀಯಂ ಎಂದೇ ಹೇಳಿದರೆ ಮೊದಲನೆಯದು, ಎರಡನೆಯದು ಮತ್ತು ಮೂರನೆಯದು ಎಂದು ಆ ರೂಪಗಳಲ್ಲಿ ತಾರತಮ್ಯವಿದೆಯೆಂಬ ಶಂಕೆ ಬಂದೀತು. ಅಂತಹ ಶಂಕೆ ಬಾರದಿರಲಿ ಎಂದು ಮುಖ್ಯಪ್ರಾಣನ ಎಲ್ಲಾ ರೂಪಗಳೂ ಬಲಜ್ಞಾನಾದಿಗಳಲ್ಲಿ ಸಮವೇ ಎಂದು ತಿಳಿಸಲು ಪ್ರತಿಯೊಂದು ಸಲವೂ ತೃತೀಯಂ ಎಂಬ ಶಬ್ದವನ್ನೇ ಪ್ರಯೋಗಿಸಲಾಗಿದೆ. ಈ ಅಭಿಪ್ರಾಯದಿಂದಲೇ ಭಾಷ್ಯದಲ್ಲಿ ಆದಿತ್ಯ ವಾಯು ಅಗ್ನಿ ಶಬ್ದಗಳ ವಿವರಣೆಯಲ್ಲಿ ಕ್ರಮ ವ್ಯತ್ಯಾಸ ಮಾಡಲಾಗಿದೆ.

ವಾಯುಕೂರ್ಮವು ಐವತ್ತುಕೋಟಿ ಯೋಜನ ವಿಸ್ತಾರವುಳ್ಳ ಭೂಮಿಯ ಎಲ್ಲ ಪ್ರದೇಶವನ್ನೂ ವ್ಯಾಪಿಸಿ ಆ ಭೂಮಿಯನ್ನು ತನ್ನ ವಕ್ಷಃಸ್ಥಳಕ್ಕೆ ಒತ್ತಿಕೊಂಡು ಭೂಮಿಯ ಮೇಲೆಯೇ ಇದೆ. ಅದರ ಮೇಲುಭಾಗವು ದ್ಯುಲೋಕ ಪರಿಯಂತರ ಇದ್ದು, ಅಷ್ಟೇ ವಿಸ್ತಾರವುಳ್ಳ ದ್ಯುಲೋಕಕ್ಕೆ ಆಶ್ರಯವಾಗಿದೆ. ಮತ್ತು ಮಧ್ಯಭಾಗವು ಅಷ್ಟೇ ವಿಸ್ತಾರವುಳ್ಳ ಅಂತರಿಕ್ಷ ಲೋಕಕ್ಕೆ ಆಶ್ರಯವಾಗಿದೆ. ಆದರೂ ವಾಯುಕೂರ್ಮದ ಶರೀರಕ್ಕೆ ಯಾವ ತಡೆಯೂ ಇಲ್ಲದಿರುವುದರಿಂದ ಅದರ ಶಿರಸ್ಸು ಬಾಹುಗಳು ಪಾದಗಳು ಪುಚ್ಛ ಮತ್ತು ಪಾರ್ಶ್ವಗಳು ಲಕ್ಷಯೋಜನ ದಪ್ಪವಾಗಿರುವ ಘನವಾದ ಭೂಮಿಯೊಳಗೆ ಪ್ರವೇಶಿಸಿ ಅದರ ಕೆಳಗಿರುವ ಅಂಡೋದಕದ

ವರೆಗೂ ವ್ಯಾಪಿಸಿ ಅಲ್ಲಿ ನೆಲೆಸಿವೆ. ಆ ಕಾರಣದಿಂದ ವಾಯುಕೂರ್ಮವು ಅಂಡೋದಕ ದಲ್ಲಿ ನಿಂತಿದೆ ಎಂದು ಮಂತ್ರದಲ್ಲಿ ಹೇಳಲಾಗಿದೆ.

**ಭಾಷ್ಯ-** **ವಾಯುರಗ್ನಿರಿತಿ ಪ್ರೋಕ್ತೋ ಹ್ಯಗ್ರಣೀತ್ವಾದಥಾಂಗಿನಾಮ್ ।**
**ನೇತೃತ್ವಾದದನಾದ್ವಾಪಿ ತಸ್ಯ ಸ್ರಷ್ಟಾ ಜನಾರ್ದನಃ ।**
**ಸ ವಾಯುರ್ವಾಯುರೂಪೇಣ ಜಗತ್ ಪಾತಿ ಶರೀರಗಃ ।**
**ಆದಿತ್ಯಸ್ಥೇನ ರೂಪೇಣ ಜಗದ್ ಯಾತಿ ಪ್ರಕಾಶಯನ್ ।**
**ಅಗ್ನಿಸ್ಥೇನ ತು ರೂಪೇಣ ಹೂಯತೇ ಸರ್ವಯಜ್ವಭಿಃ ।**
**ಆದಾಯ ಯಾತ್ಯಾಯುರಿತಿ ಸ ಏವಾದಿತ್ಯ ಉಚ್ಯತೇ ।**
**ತತ್ಸಂಬಂಧಾತ್ತು ತನ್ನಾಮ ಸೂರ್ಯಸ್ಯಾಗ್ನೇಸ್ತಥೈವ ಚ ।**
**ಸ ಏಷ ಕೂರ್ಮರೂಪೇಣ ವಾಯುರಂಡೋದಕೇ ಸ್ಥಿತಃ ।**
**ವಿಷ್ಣುನಾ ಕೂರ್ಮರೂಪೇಣ ಧಾರಿತೋಽನಂತಧಾರಕಃ ।**
**ಅಸ್ಯ ಪಾದಾ ಹಿ ಚತ್ವಾರೋ ಹ್ಯಂಡೋದೇ ಕೋಣಸಂಸ್ಥಿತಾಃ ।**
**ಉರಸ್ತು ಭೂಮಿಸಂಶ್ಲಿಷ್ಟಮತಿರಿಚ್ಯ ಭುವಂ ಪುನಃ ।**
**ಪಾರ್ಶ್ವತಃ ಪುಚ್ಛತಶ್ಚೈವ ಶಿರಶ್ಚೋದಕಸಂಸ್ಥಿತಂ ।**
**ಆಕಾಶಮುದರೇ ತಸ್ಯ ದ್ಯೌಃ ಪೃಷ್ಠೇ ಸಂಸ್ಥಿತಾ ವಿಭೋಃ ।**
**ಏವಂವಿದ್ವಾಂಸ್ತು ಯತ್ರೈತಿ ತತ್ರೈವ ಪ್ರತಿತಿಷ್ಠತಿ ।**
**ಇತಿ ಪ್ರಭಂಜನೇ ॥**

**ಅನುವಾದ**—ಎಲ್ಲ ಜೀವರಿಗೂ ಅಗ್ರಣಿಯಾದುದರಿಂದಲೂ ಜೀವರಿಗೆ ಪ್ರೇರಕನಾಗಿರುವುದರಿಂದಲೂ, ಎಲ್ಲವನ್ನೂ ಭಕ್ಷಣ ಮಾಡುವುದರಿಂದಲೂ ವಾಯುವಿಗೆ ಅಗ್ನಿ ಎಂದು ಹೆಸರು. ಅವನನ್ನು ಹುಟ್ಟಿಸಿದವನು ಜನಾರ್ದನ. ವಾಯುರೂಪದಿಂದ ಆ ವಾಯುವು ಶರೀರದಲ್ಲಿದ್ದು ಜಗತ್ತನ್ನು ರಕ್ಷಿಸುತ್ತಾನೆ. ಸೂರ್ಯನಲ್ಲಿರುವ ತನ್ನ ರೂಪದಿಂದ ಜಗತ್ತನ್ನು ಪ್ರಕಾಶಿಸುತ್ತಾ ಸಂಚರಿಸುತ್ತಾನೆ. ಅಗ್ನಿಯಲ್ಲಿರುವ ತನ್ನ ರೂಪದಿಂದ ಎಲ್ಲ ಯಾಗ ಕರ್ತೃಗಳಿಂದಲೂ ಯಾಗದ ಆಹುತಿಗಳನ್ನು ಸ್ವೀಕರಿಸುತ್ತಾನೆ. ಜೀವರ ಆಯುಸ್ಸನ್ನು ತೆಗೆದುಕೊಂಡು ಹೋಗುವು ದರಿಂದ ವಾಯುವಿಗೆ ಆದಿತ್ಯನೆಂದು ಹೆಸರು. ಆದಿತ್ಯನಾಮಕ ಮತ್ತು ಅಗ್ನಿನಾಮಕ ನಾದ ವಾಯು ಪ್ರೇರಕನಾಗಿ ಒಳಗೆ ಇರುವುದರಿಂದ ಸೂರ್ಯನಿಗೂ, ಅಗ್ನಿಗೂ, ಆದಿತ್ಯ ಮತ್ತು ಅಗ್ನಿ ಎಂಬ ಹೆಸರುಗಳು ಬಂದಿವೆ. ಈ ವಾಯುವು ಕೂರ್ಮರೂಪಿಯಾಗಿ ಅಂಡೋದಕದಲ್ಲಿ ನೆಲೆಸಿದ್ದಾನೆ. ವಿಷ್ಣುಕೂರ್ಮವನ್ನು ಆಧಾರವಾಗಿ ಹೊಂದಿರುವ ಈ ವಾಯುಕೂರ್ಮನು ಶೇಷನಿಗೆ ಆಧಾರನಾಗಿದ್ದಾನೆ. ಈ ವಾಯುಕೂರ್ಮದ ನಾಲ್ಕು ಪಾದಗಳು ಅಂಡೋದಕದಲ್ಲಿ ನಾಲ್ಕು ಮೂಲೆಗಳಲ್ಲಿದ್ದು ನೀರಿನಲ್ಲಿ ನೆಲೆಸಿವೆ. ಎದೆಯು

ಭೂಮಿಯನ್ನು ಒತ್ತಿಕೊಂಡಿವೆ. ಪಾರ್ಶ್ವ ಪುಚ್ಛ ಸಮೇತವಾಗಿ ಶಿರಸ್ಸು ಭೂಮಿಯನ್ನು ಮೀರಿದ್ದೇ ಅಂಡೋದಕದಲ್ಲಿ ನೆಲೆಸಿದೆ. ಉದರದಲ್ಲಿ ಆಕಾಶವೂ, ಬೆನ್ನಿನ ಮೇಲೆ ದ್ಯುಲೋಕವೂ ಆಶ್ರಯಿಸಿಕೊಂಡಿವೆ. ಹೀಗೆ ವಾಯುದೇವನ ಮಹಿಮೆಯನ್ನು ತಿಳಿದವನು ಎಲ್ಲೆಲ್ಲಿ ಹೋಗುತ್ತಾನೋ ಅಲ್ಲಲ್ಲಿ ಬೇಕೆಂದರೆ ನೆಲೆಸುತ್ತಾನೆ' ಎಂದು ಪ್ರಭಂಜನ ಎಂಬ ಗ್ರಂಥದಲ್ಲಿ ಹೇಳಿದೆ.

ಭಾಷ್ಯ– ಸ್ಥಾನೇಚ್ಛಾ ಚೇತ್ ತತ್ರ ಪ್ರತಿತಿಷ್ಠತಿ ।
ಉಪಾಸ್ತೇ ಕೂರ್ಮರೂಪಂ ಯೋ ವಾಯುಂ ಸಂಸ್ಥಿತಿಮಾಪ್ನುಯಾತ್।
ಇಚ್ಛಯಾ ವಿನಿವೃತ್ತಿಂ ವಾ ಲೋಕಂ ಚಾವೃತ್ತಿವರ್ಜಿತಂ॥
ಇತಿ ಅಧ್ಯಾತ್ಮೇ ॥

'ಸ ಏಷ ಪ್ರಾಣಸ್ತ್ರೇಧಾ ವಿಹಿತಃ' ಇತಿ ವಚನಾಚ್ಚ ವಾಯುಃ ।
ಬಿಭರ್ತ್ಯಂಡಂ ಹರಿಃ ಕೂರ್ಮಸ್ತ್ವಂಡೇ ಚಾಪ್ಯುದಕಂ ಮಹತ್ ।
ಉದಕೇ ಕೂರ್ಮರೂಪಸ್ಯ ವಾಯುಃ ಪುಚ್ಛಂ ಸಮಾಶ್ರಿತಃ ।
ವಾಯೋಃ ಪುಚ್ಛಂ ಸಮಾಶ್ರಿತ್ಯ ಶೇಷಸ್ತು ಪೃಥಿವೀಮಿಮಾಮ್।
ಬಿಭರ್ತಿ ತಸ್ಯಾಂ ಚ ಜಗದಿದಂ ಸರ್ವಂ ಪ್ರತಿಷ್ಠಿತಮ್ ।
ಇತಿ ವೈಭವೇ ॥

ವಾಯೋಸ್ತು ಕೂರ್ಮರೂಪಸ್ಯ ಪೂರ್ವತಶ್ಚೋದಕೇ ಮುಖಂ।
ಆಗ್ನೇಯ್ಯೈಶಾನಿಗೌ ಬಾಹೂ ಪಾದೌ ನಿರ್ಋತಿವಾಯುಗೌ।
ಇತಿ ಪ್ರಕೃಷ್ಟೇ॥

**ಅನುವಾದ**—ಎಲ್ಲಿಗೆ ಹೋಗುವನೋ ಅಲ್ಲಿಯೇ ನೆಲೆಸುತ್ತಾನೆ ಎಂದರೆ, ನೆಲೆಸುವ ಇಚ್ಛೆ ಇದ್ದರೆ ನೆಲೆಸುತ್ತಾನೆ ಎಂದರ್ಥ ಹೊರತು ಬೇರೆಡೆಗೆ ಹೋಗಲಾರ ಎಂದು ಅರ್ಥವಲ್ಲ. ಏಕೆಂದರೆ, 'ಯಾರು ಕೂರ್ಮರೂಪಿ ವಾಯುವಿನ ಉಪಾಸನೆಯನ್ನು ಮಾಡುತ್ತಾನೆಯೋ ಅವನು ತನ್ನ ಇಚ್ಛಾನುಸಾರ ಒಂದು ಕಡೆ ನೆಲೆಸಬಲ್ಲ. ಮತ್ತು ಇಚ್ಛಾನುಸಾರ ಅಲ್ಲಿಂದ ಹೊರಟು ಹೋಗಬಲ್ಲ. ಮುಕ್ತನಾಗಿ ತನಗೆ ಯೋಗ್ಯವಾದ ಯಾವ ಸ್ಥಾನಕ್ಕೆ ಹೋದರೂ ಅಲ್ಲಿ ಸ್ಥಿರವಾಗಿ ನೆಲೆಸಬಲ್ಲ. ಆತನು ಸಂಸಾರಕ್ಕೆ ಹಿಂದಿರುಗಿ ಬರುವುದಿಲ್ಲ. ಅಪುನರಾವರ್ತಿ ಲೋಕವನ್ನೇ ಪಡೆಯುತ್ತಾನೆ' ಎಂದು ಅಧ್ಯಾತ್ಮ ಎಂಬ ಗ್ರಂಥದಲ್ಲಿ ಹೇಳಿದೆ.

ಈ ಮಂತ್ರದಲ್ಲಿ 'ಸ ಏಷ ಪ್ರಾಣಃ ತ್ರೇಧಾ ವಿಹಿತಃ' ಎಂದು ಪ್ರಾಣಶಬ್ದವನ್ನು ಹೇಳಿರುವುದರಿಂದಲೂ, ವಾಯುವೇ ಈ ಪ್ರಕರಣದಲ್ಲಿ ಪ್ರತಿಪಾದ್ಯ.

ಇಲ್ಲಿ ಅಗ್ನಿಶಬ್ದವಿದ್ದರೂ ಈ ಪ್ರಕರಣವು ಅಗ್ನಿಯದಲ್ಲ.

'ಕೂರ್ಮರೂಪಿಯಾದ ಹರಿಯು ಬ್ರಹ್ಮಾಂಡವನ್ನು ಧರಿಸಿದ್ದಾನೆ. ಬ್ರಹ್ಮಾಂಡದಲ್ಲಿ ಬಹಳ ಅಗಾಧವಾದ ನೀರಿದೆ. ಈ ಅಂಡೋದಕದಲ್ಲಿ ಕೂರ್ಮರೂಪಿಯಾಗಿ ಹರಿ ಇರುತ್ತಾನೆ. ಈ ಕೂರ್ಮರೂಪಿ ಹರಿಯ ಪೃಷ್ಠವನ್ನು ವಾಯುಕೂರ್ಮನು ಆಶ್ರಯಿಸಿದ್ದಾನೆ. ವಾಯುಕೂರ್ಮದ ಪೃಷ್ಠವನ್ನು ಆಧರಿಸಿ ಶೇಷನು ಬ್ರಹ್ಮಾಂಡವನ್ನು ಧರಿಸಿದ್ದಾನೆ, ಬ್ರಹ್ಮಾಂಡದಲ್ಲಿ ಎಲ್ಲಾ ಜಗತ್ತೂ ನೆಲೆಸಿದೆ' ಎಂದು ವೈಭವ ಎಂಬ ಗ್ರಂಥದಲ್ಲಿ ಹೇಳಿದೆ.

'ಕೂರ್ಮರೂಪಿಯಾದ ವಾಯುವಿನ ಮುಖವು ಅಂಡೋದಕದಲ್ಲಿ ಪೂರ್ವದಿಕ್ಕಿನಲ್ಲಿಯೂ, ಬಾಹುಗಳು ಆಗ್ನೇಯ ಮತ್ತು ಈಶಾನ್ಯದಿಕ್ಕಿನಲ್ಲಿಯೂ, ಪಾದಗಳು ನೈಋತ್ಯ ಮತ್ತು ವಾಯುವ್ಯ ದಿಕ್ಕಿನಲ್ಲಿಯೂ ಇವೆ' ಎಂದು ಪ್ರಕೃಷ್ಟ ಎಂಬ ಗ್ರಂಥದಲ್ಲಿ ಹೇಳಿದೆ.

**ಚತುರ್ಮುಖ ಸರಸ್ವತಿಯರ ಜನನ :**

**ಉಪನಿಷತ್– ಸೋಽಕಾಮಯತ ದ್ವಿತೀಯೋ ಮ ಆತ್ಮಾ ಜಾಯೇತೇತಿ । ಸ ಮನಸಾ ವಾಚಂ ಮಿಥುನಂ ಸಮಭವತ್ । ಅಶನಾಯಾಂ ಮೃತ್ಯುಃ । ತದ್ ಯದ್ ರೇತ ಆಸೀತ್ ಸ ಸಂವತ್ಸರೋಽಭವತ್। ನ ಹ ಪುರಾ ತತಃ ಸಂವತ್ಸರ ಆಸ। ತಮೇತಾವಂತಂ ಕಾಲಮಬಿಭರ್ಯಾವಾನ್ ಸಂವತ್ಸರಃ। ತಮೇತಾವತಃ ಕಾಲಸ್ಯ ಪರಸ್ತಾದಸೃಜತ। ತಂ ಜಾತಮಭಿ ವ್ಯಾದದಾತ್। ಸ ಭಾಣಮಕರೋತ್ । ಸೈವ ವಾಗಭವತ್ ।**

**ಅನುವಾದ**—ಆ ಹರಿಯು ಬ್ರಹ್ಮನು ನನಗೆ ಎರಡನೆಯ ಮಗನಾಗಿ ಜನಿಸಲಿ ಎಂದು ಇಚ್ಛಿಸಿದನು. ಸರ್ವಜಗತ್ಪ್ರೇರಕನಾದ ಆ ಹರಿಯು ತನ್ನ ಇಚ್ಛೆಯಿಂದಲೇ ವಾಗಭಿಮಾನಿನಿಯಾದ ಶ್ರೀದೇವಿಯ ಜೊತೆಯಲ್ಲಿ ರಮಿಸಿದನು. ಅದರಿಂದ ದೇವಿಯಲ್ಲಿ ಸ್ಥಾಪಿಸಲ್ಪಟ್ಟ ರೇತಸ್ಸೇ ಸಂವತ್ಸರನಾಮಕನಾದ ಬ್ರಹ್ಮನ ಶರೀರವಾಯಿತು. ಬ್ರಹ್ಮನ ಈ ಉತ್ಪತ್ತಿಗಿಂತ ಮೊದಲು ಅವನು ಸಂವತ್ಸರನಾಗಿ ಇರಲಿಲ್ಲ. ಶರೀರವಿಲ್ಲದಿದ್ದುದರಿಂದ 'ಸಂ' ಚೆನ್ನಾಗಿ, 'ವತ್ಸ' ಮಕ್ಕಳಾದ ದೇವತೆಗಳನ್ನು, 'ರ' ರಮಿಸುವವನಾಗಿರಲಿಲ್ಲ. ಆದ್ದರಿಂದ ವಾಗಭಿಮಾನಿನಿಯಾದ ಶ್ರೀದೇವಿಯು ಹರಿಯ ರೇತಸ್ಸನ್ನು ಹನ್ನೆರಡು ತಿಂಗಳ ಕಾಲದವರೆಗೆ ತನ್ನ ಗರ್ಭದಲ್ಲಿ ಧರಿಸಿ ಅನಂತರ ಬ್ರಹ್ಮನನ್ನು ಪಡೆದಳು. ಒಡನೆಯೆ ಮೃತ್ಯುನಾಮಕ ಹರಿಯು ಆ ಬ್ರಹ್ಮನನ್ನು ತಿನ್ನಲು ಅವನ ಮುಂದೆ ತನ್ನ ಬಾಯಿಯನ್ನು ತೆರೆದನು. ಆಗ ಬ್ರಹ್ಮನು ಭಯದಿಂದ ಭಾಣ್ ಎಂದು ಶಬ್ದವನ್ನು ಉಚ್ಚರಿಸಿದನು. ಆ ಶಬ್ದದೊಂದಿಗೆ ಶಬ್ದಾಭಿಮಾನಿನಿಯಾದ ಸರಸ್ವತಿಯು ಜನಿಸಿದಳು.

ಭಾಷ್ಯ–ಆತ್ಮಾ, ಬ್ರಹ್ಮಾ ಮೇ ದ್ವಿತೀಯೋ ಜಾಯೇತೇತ್ಯಕಾಮಯತ ।
ವಾಯುರೇವ ಬ್ರಹ್ಮಾ ಭವತೀತಿ ದರ್ಶಯಿತುಂ ವಾಯೋಃ ಸೃಷ್ಟಿಃ
ಪ್ರಥಮಮುಕ್ತಾ ।

ವಾಯುರೇವ ಯತೋ ಬ್ರಹ್ಮಪದಂ ನಿಯಮತೋ ವ್ರಜೇತ್ ।
ಸಹೈವ ಜನನೇಽಪ್ಯಸ್ಮಾತ್ಪೂರ್ವಂ ವಾಯೋರ್ಜನಿಂ ವದೇತ್ ।
ಕ್ವಚಿತ್ತು ಬ್ರಹ್ಮಣಃ ಪೂರ್ವಂ ಪ್ರಾಧಾನ್ಯಾತ್ ತತ್ಪದಸ್ಯ ಚ ।
ಇತಿ ಬ್ರಹ್ಮತರ್ಕೇ ॥

ಆತ್ಮಾ ವಿರಿಂಚಃ ಸುಮನಾಃ ಸುಧೌತಶ್ಚೇತಿ ಕಥ್ಯತೇ ।
ಬ್ರಹ್ಮಾ ಚತುರ್ಮುಖಶ್ಚೇತಿ ಪೂರ್ವಜೋ ಯಃ ಪ್ರಜಾಪತಿಃ ।
ಇತಿ ಶಬ್ದನಿರ್ಣಯೇ॥

**ಅನುವಾದ**—ಆತ್ಮಾ ಎಂದರೆ ಬ್ರಹ್ಮನು ನನಗೆ ಎರಡನೆಯ ಮಗನಾಗಿ ಜನಿಸಲಿ ಎಂದು ಹರಿಯು ಇಚ್ಛಿಸಿದನು. ವಾಯುವೇ ಮುಂದೆ ಬ್ರಹ್ಮನಾಗುವನು ಎಂದು ತಿಳಿಸಲು ಮೊದಲು ವಾಯುಸೃಷ್ಟಿಯು ಹೇಳಲ್ಪಟ್ಟಿದೆ. 'ವಾಯು ಮತ್ತು ಬ್ರಹ್ಮರು ಒಟ್ಟಿಗೇ ಪರಮಾತ್ಮನಿಂದ ಜನಿಸಿದರೂ, ವಾಯುವೇ ನಿಯಮೇನ ಬ್ರಹ್ಮಪದವಿಯನ್ನು ಹೊಂದುವುದರಿಂದ ಶ್ರುತಿಯು ಕೆಲವು ಸಲ ವಾಯುವಿನ ಉತ್ಪತ್ತಿಯನ್ನು ಬ್ರಹ್ಮನ ಉತ್ಪತ್ತಿಗಿಂತ ಮೊದಲು ಹೇಳುತ್ತದೆ. ಬ್ರಹ್ಮಪದವಿಯು ವಾಯುಪದವಿಗಿಂತ ಶ್ರೇಷ್ಠವಾದುದರಿಂದ ಕೆಲವು ಸಲ ಬ್ರಹ್ಮನ ಉತ್ಪತ್ತಿಯನ್ನು ಮೊದಲು ಹೇಳುತ್ತದೆ' ಎಂದು ಬ್ರಹ್ಮತರ್ಕದಲ್ಲಿ ಹೇಳಿದೆ.

'ಆತ್ಮಾ, ವಿರಿಂಚಿ, ಸುಮನಾಃ, ಸುಧೌತ, ಬ್ರಹ್ಮ, ಚತುರ್ಮುಖ, ಪೂರ್ವಜ ಇವೆಲ್ಲವೂ ಚತುರ್ಮುಖ ಬ್ರಹ್ಮನ ಹೆಸರುಗಳು' ಎಂದು ಶಬ್ದನಿರ್ಣಯ ಗ್ರಂಥದಲ್ಲಿ ಹೇಳಿದೆ.

ಭಾಷ್ಯ–ಸ ಮನಸಾ ಸ್ವೇಚ್ಛಯಾ ವಾಚಂ ಶ್ರಿಯಂ ದೇವೀಂ ಮಿಥುನಂ
ಸಮಭವತ್ ।

ಮಮ ದ್ವಿತೀಯೋ ಜಾಯೇತ ಬ್ರಹ್ಮೇತಿ ಭಗವಾನ್ ಪರಃ ।
ವೇದಾಭಿಮಾನಿನೀಂ ದೇವೀಂ ಶ್ರಿಯಂ ಸಮಭವತ್ ಪ್ರಭುಃ ।
ಸ್ವೇಚ್ಛಯೈವ ಯತಃ ಶಕ್ತಿಃ ತಾಂ ವಿನಾಪಿ ಹರೇಃ ಸದಾ ।
ತತಃ ಸಂವತ್ಸರೋ ನಾಮ ಬ್ರಹ್ಮಾ ಸಮಭವತ್ ಪ್ರಭೋಃ।
ತಂ ಗರ್ಭಮುದರೇ ಬಿಭ್ರದ್ ಯಾವತ್ ಸಂವತ್ಸರಂ ರಮಾ ।
ತಂ ಜಾತಮತ್ತುಂ ಸ್ವಮುಖಂ ವಿದಾರ್ಯ ಪುರುಷೋತ್ತಮಃ ।

**ಶ್ರುತ್ವಾ ರಾವಂ ಪುನಸ್ತಸ್ಯ ವ್ಯದಧಾತ್ ಸೃಷ್ಟಯೇ ಪ್ರಭುಃ ।**
**ಇತಿ ಕಾರಣವಿವೇಕೇ ॥**

**ಅನುವಾದ**—ಅವನು ಮನಸಾ ಎಂದರೆ ತನ್ನ ಇಚ್ಛೆಯಿಂದಲೇ ವಾಚಂ ಎಂದರೆ ಶ್ರೀದೇವಿಯನ್ನು ಜೊತೆಗೂಡಿದನು. 'ಸರ್ವೋತ್ತಮನಾದ ಭಗವಂತನು 'ಬ್ರಹ್ಮನು ನನಗೆ ಎರಡನೆಯ ಮಗನಾಗಿ ಜನಿಸಲಿ' ಎಂದು ಉದ್ದೇಶಿಸಿ ತನ್ನ ಇಚ್ಛೆಯಿಂದಲೇ ವೇದಾಭಿಮಾನಿನಿಯಾದ ಶ್ರೀದೇವಿಯೊಡನೆ ರಮಿಸಿದನು. ಏಕೆಂದರೆ ಅವಳ ಅಪೇಕ್ಷೆ ಇಲ್ಲದೆಯೂ ಸೃಷ್ಟಿಸುವ ಸಾಮರ್ಥ್ಯ ಅವನಿಗೆ ಯಾವಾಗಲೂ ಇದೆ. ಹರಿಯಿಂದ ಉಂಟಾದ ಗರ್ಭವನ್ನು ರಮೆಯು ಒಂದು ವರ್ಷಕಾಲ ಧರಿಸಿದಳು. ಅನಂತರ ಸಂವತ್ಸರನಾಮಕನಾದ ಬ್ರಹ್ಮನು ಜನಿಸಿದನು. ಅವನು ಹುಟ್ಟಿದ ಕೂಡಲೇ ಹರಿಯು ಅವನನ್ನು ನುಂಗಲು ತನ್ನ ಬಾಯನ್ನು ತೆರೆದನು. ಆಗ ಬ್ರಹ್ಮನ ಸ್ತುತಿರೂಪವಾದ ಧ್ವನಿಯನ್ನು ಕೇಳಿ ಅವನನ್ನು ಸೃಷ್ಟಿಯಲ್ಲಿ ತೊಡಗಿಸಿದನು' ಎಂದು ಕಾರಣವಿವೇಕ ಎಂಬ ಗ್ರಂಥದಲ್ಲಿ ಹೇಳಿದೆ.

**ಭಾಷ್ಯ– ಬಿಂದುಲೋಪೇನಾಶನಾಯಾ ಮೃತ್ಯುರಿತ್ಯರ್ಥಃ । 'ಅಶನಾಯಾ ಹಿ ಮೃತ್ಯುಃ' ಇತಿ ಹ್ಯುಕ್ತಮ್ । ಸರ್ವಾಶನನೇತೇತ್ಯರ್ಥೇ ಬಿಂದುಃ । 'ಆಧಿಕ್ಯೇಽಧಿಕಮ್' ಇತಿ ಸೂತ್ರಾತ್ । ಸಮ್ಯಗಾತ್ಮನೋ ವತ್ಸಭೂತಾನ್ ದೇವಾದೀನ್ ರಮಯತೀತಿ ಸಂವತ್ಸರಃ ।**

**ಬ್ರಹ್ಮಣೋ ಭಾಣೀತಿ ವಚೋ ನಿಃಸೃತಂ ಭಯತೋ ಮುಖಾತ್ ।**
**ತಸ್ಯಾಭಿಮಾನಿನೀ ದೇವೀ ತದ್ವೈವೋತ್ಥಾ ಚ ತನ್ಮುಖಾತ್ ।**
**ವಾಗೀಶ್ವರೀತಿ ತಾಮಾಹುರ್ವಾಚಂ ಚಾಪಿ ಸರಸ್ವತೀಮ್ ।**
**ಇತಿ ಭಾವತತ್ತ್ವೇ॥**

**ತದಭಿಮಾನಿತ್ವಾತ್ ಸೈವ ವಾಗಿತ್ಯುಚ್ಯತೇ। ಭಾರೂಪೋ ಣರೂಪಶ್ಚೇತಿ ಭಗವಾನ್ ಭಾಣ್ । ತದ್ವ್ಯಂಜಕತ್ವಾದ್ ಭಣನಂ ವಾಕ್ ।**

**ಅನುವಾದ**—'ಅಶನಾಯಾಂ ಮೃತ್ಯುಃ'ಎಂಬಲ್ಲಿ ದ್ವಿತೀಯಾ ವಿಭಕ್ತಿಯ ಅರ್ಥವನ್ನು ಅವಿವಕ್ಷಿತವೆಂದಿಟ್ಟುಕೊಂಡು, 'ಅಶನಾಯಾ ಮೃತ್ಯುಃ' ಎಂದು ಅನ್ವಯ ಮಾಡಬೇಕು. ಏಕೆಂದರೆ 'ಅಶನಾಯಾ ಹಿ ಮೃತ್ಯುಃ' ಎಂದು ಇದೇ ಬ್ರಾಹ್ಮಣದ ಮೊದಲನೆಯ ಮಂತ್ರದಲ್ಲಿ ಹೇಳಿದೆ. ದ್ವಿತೀಯಾ ವಿಭಕ್ತಿಯ ಅರ್ಥ ವಿವಕ್ಷಿತವಲ್ಲವಾದರೆ, ಬಿಂದು ಏಕೆ ಅಧಿಕವಾಗಿದೆಯೆಂದರೆ, ಅದು 'ಎಲ್ಲ ಪ್ರಪಂಚಕ್ಕೂ ಪ್ರೇರಕನು ಶ್ರೀಹರಿ' ಎಂಬ ವಿಶೇಷಾರ್ಥವನ್ನು ತಿಳಿಸುವುದಕ್ಕಾಗಿ. 'ಅರ್ಥದಲ್ಲಿ ಆಧಿಕ್ಯವಿರುವಾಗ ಅದನ್ನು ತಿಳಿಸುವ ಶಬ್ದದಲ್ಲಿಯೂ ಆಧಿಕ್ಯವಿರುತ್ತದೆ' ಎಂಬ ಮಹಾ

ವ್ಯಾಕರಣಸೂತ್ರದ ಸಮ್ಮತಿ ಈ ವಿಷಯದಲ್ಲಿದೆ, ತನಗೆ ಮಕ್ಕಳಾದ ದೇವತೆಗಳನ್ನು ಚೆನ್ನಾಗಿ ಸಂತೋಷಪಡಿಸುವುದರಿಂದ ಬ್ರಹ್ಮನಿಗೆ ಸಂವತ್ಸರ ಎಂದು ಹೆಸರು.

'ಬ್ರಹ್ಮನ ಮುಖದಿಂದ ಭಯಪ್ರಯುಕ್ತ ಭಾಣ್ ಎಂಬ ಶಬ್ದವು ಹೊರ ಹೊಮ್ಮಿತು. ಆ ಶಬ್ದಕ್ಕೆ ಅಭಿಮಾನಿನಿಯಾದ ಸರಸ್ವತೀದೇವಿಯೂ ಆಗಲೇ ಬ್ರಹ್ಮನ ಮುಖದಿಂದ ಜನಿಸಿದಳು. ವಾಗಭಿಮಾನಿನಿಯಾದುದರಿಂದ ಆ ಸರಸ್ವತಿ 'ಯನ್ನೇ ವಾಕ್ ಎಂಬ ಇನ್ನೊಂದು ಹೆಸರಿನಿಂದಲೂ ಕರೆಯುತ್ತಾರೆ' ಎಂದು ಭಾವ ತತ್ತ್ವ ಎಂಬ ಗ್ರಂಥದಲ್ಲಿ ಹೇಳಲಾಗಿದೆ.

ಹೀಗೆ ವಾಕ್ ಎಂದರೆ ಸರಸ್ವತೀದೇವಿ ಎನ್ನುವುದಾದರೆ 'ಸೈವ ವಾಗಭವತ್' ಎಂಬಲ್ಲಿ ಭಾಣ್ ಎಂಬ ಆ ಶಬ್ದವೇ ಸರಸ್ವತೀದೇವಿಯಾದಳೆನ್ನುವುದು ಹೇಗೆ? ಎಂದರೆ, ಭಾಣ್ ಎಂಬ ಶಬ್ದಕ್ಕೆ ಸರಸ್ವತೀದೇವಿ ಅಭಿಮಾನಿನಿಯಾದ್ದರಿಂದ ಭಾಣ್ ಶಬ್ದವೇ ಸರಸ್ವತೀದೇವಿ ಎನ್ನಲಾಗಿದೆ. 'ಭಾಣಮಕರೋತ್' ಎಂದರೆ ರೋದನ ಮಾಡಿದ ನೆಂದು ಅರ್ಥವಲ್ಲ. ಪ್ರಕಾಶರೂಪ ಮತ್ತು ಸುಖರೂಪನಾದುದರಿಂದ ಪರಮಾತ್ಮ ನಿಗೆ ಭಾಣ್ ಎಂದು ಹೆಸರು. ಅಂತಹ ಪರಮಾತ್ಮನನ್ನು ಭಾಣ್ ಎಂಬ ಶಬ್ದವು ಅಭಿವ್ಯಕ್ತಿಗೊಳಿಸುವುದರಿಂದ ಅದೂ ಭಾಣ್ ಎಂದು ಕರೆಯಲ್ಪಡುತ್ತದೆ. 'ಸ ಭಾಣ-ಮಕರೋತ್' ಎಂಬಲ್ಲಿ ಬ್ರಹ್ಮನು ಇಂತಹ ಭಾಣ್ ಶಬ್ದವನ್ನು ಉಚ್ಚಾರಣೆ ಮಾಡಿದ ನೆಂದು ಅರ್ಥಗ್ರಹಿಸಬೇಕು.

**ಸರ್ವಸಂಹಾರಕ ಶ್ರೀ ಹರಿ :**

**ಉಪನಿಷತ್**– **ಸ ಐಕ್ಷತ ಯದಿ ಹ ವಾವ ಇಮಮಭಿಮಂಸ್ಯೇ ಕನೀಯೋಽನ್ನಂ ಕರಿಷ್ಯ ಇತಿ । ಸ ತಯಾ ವಾಚಾ ತೇನಾತ್ಮನೇದಂ ಸರ್ವಮಸೃಜತ ಯದಿದಂ ಕಿಂಚ ಋಚೋ ಯಜೂಂಷಿ ಸಾಮಾನಿ ಚ್ಛಂದಾಂಸಿ ಯಜ್ಞಾನ್ ಪ್ರಜಾಃ ಪಶೂನ್ । ಸ ಯದ್ಯದೇವಾಸೃಜತ ತತ್ತದತ್ತು-ಮಧ್ರಿಯತ । ಸರ್ವಂ ವಾ ಅತ್ತೀತಿ ತದದಿತೇರದಿತಿತ್ವಂ । ಸರ್ವಸ್ಯೈ-ತಸ್ಯಾತ್ತಾ ಭವತಿ ಸರ್ವಮಸ್ಯಾನ್ನಂ ಭವತಿ ಯ ಏವಮೇತದದಿತೇರದಿ-ತಿತ್ವಂ ವೇದ ॥**

**ಅನುವಾದ**—ಮೃತ್ಯುನಾಮಕನಾದ ಹರಿಯು 'ನಾನು ಈಗ ಜನಿಸಿದ ಬ್ರಹ್ಮ ನನ್ನು ಸಂಹರಿಸಿದರೆ ನನಗೆ ಸ್ವಲ್ಪವೇ ಅನ್ನ ದೊರೆತಂತಾಗುತ್ತದೆ, ಹೆಚ್ಚು ಅನ್ನ ಬೇಕು' ಎಂದು ಯೋಚಿಸಿ ಆ ಸರಸ್ವತಿಯಿಂದಲೂ, ಬ್ರಹ್ಮನಿಂದಲೂ, ಈ ಎಲ್ಲವನ್ನೂ

ಎಂದರೆ, ಋಗಾದಿ ವೇದಾಭಿಮಾನಿದೇವತೆಗಳು, ಗಾಯತ್ರೀ ಮೊದಲಾದ ಛಂದೋಭಿಮಾನಿದೇವತೆಗಳು, ಯಜ್ಞಾಭಿಮಾನಿದೇವತೆಗಳು, ಪ್ರಜೆಗಳು ಮತ್ತು ಪಶುಗಳು ಇವರನ್ನು ಸೃಷ್ಟಿಸಿದನು. ಕೊನೆಗೆ ಶ್ರೀಹರಿಯು ಆ ಬ್ರಹ್ಮನು ಸೃಷ್ಟಿ ಮಾಡಿದುದೆಲ್ಲವನ್ನೂ ತಿನ್ನಲು ಸಂಕಲ್ಪಿಸಿದನು ಮತ್ತು ತಿಂದನು. ಎಲ್ಲವನ್ನೂ ತಿನ್ನುವುದರಿಂದ ಹರಿಯು ಅದಿತಿ ಎಂದು ಕರೆಸಿಕೊಳ್ಳುತ್ತಾನೆ. ಇದೇ ಅದಿತಿ ಎಂಬ ಹೆಸರಿಗೆ ಕಾರಣ. ಹರಿಯು ಈ ರೀತಿಯಾಗಿ ಅದಿತಿ ಶಬ್ದವಾಚ್ಯನಾಗುತ್ತಾನೆ ಎಂದು ತಿಳಿಯುವ ಜ್ಞಾನಿಯು ನಿಶ್ಚಯವಾಗಿ ತನಗೆ ಯೋಗ್ಯವಾದ ಎಲ್ಲವನ್ನೂ ತಿನ್ನಲು ಸಮರ್ಥನಾಗುತ್ತಾನೆ. ಇದು ಕೇವಲ ಪ್ರಶಂಸೆಯಲ್ಲ. ನಿಜವಾಗಿಯೂ ಯೋಗ್ಯವಾದುದೆಲ್ಲವೂ ಅವನಿಗೆ ಅನ್ನವಾಗುತ್ತದೆ.

**ಭಾಷ್ಯ– 'ಅಭಿಮಂಸ್ಯೇ' ಲೀನಂ ಕರಿಷ್ಯೇ ಚೇತ್ ।**
**ಮಾನಂ ಜ್ಞಾನಂ ಲಯಶ್ಚೈವ ಮರ್ಯಾದಾ ಚೈವ ಕಥ್ಯತೇ ।**
**ಉತ್ಪಾದನಂ ಚ ಸಂಖ್ಯಾನಂ ಬಲಂ ಚ ಕ್ವಚಿದುಚ್ಯತೇ ।**
**ಇತಿ ಶಬ್ದನಿರ್ಣಯೇ ॥**
**ವೇದಾಭಿಮಾನಿನಃ ಸರ್ವಾನ್ ತಥಾ ಯಜ್ಞಾಭಿಮಾನಿನಃ ।**
**ಗಾಯತ್ರ್ಯಮಸೃಜದ್ ಬ್ರಹ್ಮಾ ಸ್ವಭಾರ್ಯಾಯಾಂ ಪ್ರಜಾಸ್ತಥಾ ।**
**ಇತಿ ಪ್ರಕಾಶಿಕಾಯಾಮ್ ॥**

**ಅನುವಾದ**—ಮಂತ್ರದಲ್ಲಿ 'ಅಭಿಮಂಸ್ಯೇ' ಎಂದರೆ 'ನಾನು ಸಂಹರಿಸಿದರೆ' ಎಂದರ್ಥ. 'ಜ್ಞಾನ, ಸಂಹಾರ, ಅಳತೆಗಳು 'ಮಾ' ಧಾತುವಿನಿಂದ ಹೇಳಲ್ಪಡುತ್ತವೆ. ಉತ್ಪಾದನೆ, ಗಣನೆ ಮತ್ತು ಸಾಮರ್ಥ್ಯಗಳು ಸಹ ಕೆಲವು ವೇಳೆ ಆ ಶಬ್ದದಿಂದ ಹೇಳಲ್ಪಡುತ್ತವೆ' ಎಂದು ಶಬ್ದನಿರ್ಣಯ ಎಂಬ ಗ್ರಂಥದಲ್ಲಿ ಹೇಳಿದೆ.

'ಬ್ರಹ್ಮನು ತನ್ನ ಭಾರ್ಯೆಯಾದ ಗಾಯತ್ರಿಯಲ್ಲಿ ಎಲ್ಲಾ ವೇದಾಭಿಮಾನಿದೇವತೆಗಳನ್ನೂ, ಯಜ್ಞಾಭಿಮಾನಿದೇವತೆಗಳನ್ನೂ ಮತ್ತು ಇತರ ಪ್ರಜೆಗಳನ್ನೂ ಸೃಷ್ಟಿಸಿದನು' ಎಂದು ಪ್ರಕಾಶಿಕಾ ಎಂಬ ಗ್ರಂಥದಲ್ಲಿ ಹೇಳಿದೆ.

**ಭಾಷ್ಯ– ಯದ್ಯದ್ ಬ್ರಹ್ಮಾಸೃಜತ್ ಪೂರ್ವಂ ತತ್ತದತ್ತಿ ಜನಾರ್ದನಃ ।**
**ಅದಿತಿರ್ನಾಮ ತೇನಾಸೌ ಭಗವಾನ್ ಪುರುಷೋತ್ತಮಃ ।**
**ಉಪಾಸ್ತೇ ಯಃ ಪರಂ ದೇವಮೇವಮತ್ತೀತಿ ಸರ್ವದಾ ।**
**ಸ್ವಯೋಗ್ಯತಾನುಸಾರೇಣ ಸರ್ವಾತ್ತಾಸೌ ಭವತ್ಯುತ ।**
**ಬ್ರಹ್ಮರುದ್ರಸುಪರ್ಣಾನಾಂ ಸರ್ವಾತ್ತೃತ್ವಂ ವಿಶೇಷತಃ ।**
**ಪ್ರಾಯೇಣಾತ್ತೃತ್ವಮಿಂದ್ರಾದೇರನ್ಯೇಷಾಂ ದರ್ಶನಾದಿಕಮ್ ।**

**ಬಹುಲಸ್ಯೇತಿ ಯೋಗ್ಯತ್ವಭೇದಾದತ್ತೃತ್ವಮಿಷ್ಯತೇ ।**
**ಇತಿ ಮಾನಸಂಹಿತಾಯಾಮ್ ॥**
**ಆತ್ಮನೋ ಯಾದೃಶಾ ಭೋಗಾ ಭೋಕ್ತುಂ ಯೋಗ್ಯಾ ಹಿ ತಾದೃಶಾನ್।**
**ಭೋಕ್ತಾ ವಿಷ್ಣುರಿತಿ ಧ್ಯಾಯೇತ್ ಸರ್ವಾತ್ತೃತ್ವಂ ಹರೇಃ ಸ್ಮರೇತ್ ।**
**ದೈವತಾನಾಂ ಚ ಸರ್ವೇಷಾಂ ಸರ್ವಾತ್ತಿಧ್ಯಾನಮಿಷ್ಯತೇ ।**
**ಇತಿ ಪ್ರವೃತ್ತೇ ॥**

**ಅನುವಾದ**—ಕಲ್ಪಾದಿಯಲ್ಲಿ ಬ್ರಹ್ಮನು ಯಾವ್ರ ಯಾವ್ರುದನ್ನು ಸೃಷ್ಟಿಸಿದನೋ, ಪರಮಾತ್ಮನು ಕಲ್ಪಾಂತದಲ್ಲಿ ಅವೆಲ್ಲವನ್ನೂ ತಿನ್ನುತ್ತಾನೆ. ಆದ್ದರಿಂದ ಪುರುಷೋತ್ತಮನಾದ ಅವನಿಗೆ ಅದಿತಿ ಎಂದು ಹೆಸರು. ಯಾವನು 'ಪ್ರತಿಕಲ್ಪದಲ್ಲಿಯೂ ಪರಮಾತ್ಮನು ಎಲ್ಲವನ್ನೂ ತಿನ್ನುತ್ತಾನೆ' ಎಂದು ಉಪಾಸನೆ ಮಾಡುತ್ತಾನೆಯೋ ಅವನು ತನ್ನ ಯೋಗ್ಯತೆಗೆ ಅನುಗುಣವಾದ ಎಲ್ಲವನ್ನೂ ತಿನ್ನುವವನಾಗುತ್ತಾನೆ, ಬ್ರಹ್ಮ ರುದ್ರ, ಗರುಡರಿಗೆ ಇಂದ್ರಾದಿದೇವತೆಗಳಿಗಿಂತ ವಿಶೇಷವಾದ ಸರ್ವಾತ್ತೃತ್ವವಿದೆ. ಇಂದ್ರಾದಿ ದೇವತೆಗಳಿಗೆ ಸಾಮಾನ್ಯ ಸರ್ವಾತ್ತೃತ್ವವಿದೆ. ಉಳಿದವರಿಗೆ ಬಹಳ ಭೋಜ್ಯವಸ್ತುಗಳ ದರ್ಶನಾದಿ ಮಾತ್ರ. ಹೀಗೆ ಯೋಗ್ಯತೆಯ ವ್ಯತ್ಯಾಸದಿಂದ ಉಪಾಸಕನಿಗೆ ಲಭಿಸುವ ಸರ್ವಾತ್ತೃತ್ವವು ಭಿನ್ನ ಭಿನ್ನವಾಗಿದೆ' ಎಂದು ಮಾನಸಂಹಿತೆ ಎಂಬ ಗ್ರಂಥದಲ್ಲಿ ಹೇಳಿದೆ.

'ಮನುಷ್ಯನು ತನಗೆ ಎಂತಹ ವಸ್ತುಗಳು ಭೋಗಿಸಲು ಯೋಗ್ಯವಾಗಿಯೋ ಅವುಗಳನ್ನು ವಿಷ್ಣುವು ಭೋಗಿಸುತ್ತಾನೆಂದು ಧ್ಯಾನಮಾಡಬೇಕು. ಸರ್ವಾತ್ತೃತ್ವವನ್ನು ಕೇವಲ ಸ್ಮರಣೆ ಮಾಡಬೇಕು. ಆದರೆ ಎಲ್ಲಾ ದೇವತೆಗಳಿಗೂ ಸರ್ವಾತ್ತೃತ್ವ ಧ್ಯಾನವೇ ವಿಹಿತವಾಗಿದೆ' ಎಂದು ಪ್ರವೃತ್ತ ಎಂಬ ಗ್ರಂಥದಲ್ಲಿ ಹೇಳಿದೆ.

**ವಿವರಣೆ**—ಪರಮಾತ್ಮನ ಸರ್ವಾತ್ತೃತ್ವದ ಉಪಾಸನೆಗೆ ಸ್ವಯೋಗ್ಯ ಸರ್ವಾತ್ತೃತ್ವವೇ ಫಲವಾಗಬೇಕು. ಅನೇಕ ಭೋಗ್ಯವಸ್ತುಗಳ ದರ್ಶನಾದಿ ಮಾತ್ರ ಹೇಗೆ ಫಲವಾಗುತ್ತದ? ಎಂಬ ಸಂಶಯ ಬರುತ್ತದೆ. ಅದಕ್ಕೆ ಸರ್ವಾತ್ತೃತ್ವದ ಧ್ಯಾನದಿಂದಲೇ, ಸ್ವಯೋಗ್ಯಸರ್ವಾತ್ತೃತ್ವವುಂಟಾಗುತ್ತದೆ. ಇದು ದೇವತೆಗಳಿಗೆ ಮಾತ್ರ. ಅವರಿಗೆ ಸರ್ವಾತ್ತೃತ್ವ ಧ್ಯಾನವು ವಿಹಿತವಾಗಿದೆ. ಮನುಷ್ಯರಿಗೆ ಸರ್ವಾತ್ತೃತ್ವ ಧ್ಯಾನವು ವಿಹಿತವಾಗಿಲ್ಲ. ಸ್ಮರಣೆ ಮಾತ್ರ ವಿಹಿತವಾಗಿದೆ. ತಮಗೆ ಯೋಗ್ಯವಾದ ವಸ್ತುಗಳ ಅತ್ತೃತ್ವವನ್ನು ಮಾತ್ರ ಅವರು ಹರಿಯಲ್ಲಿ ಧ್ಯಾನ ಮಾಡಬೇಕು. ಆದ್ದರಿಂದ ಅವರಿಗೆ ಅನೇಕ ವಸ್ತುಗಳ ಅತ್ತೃತ್ವ ಸ್ಮರಣ ಮಾತ್ರದಿಂದ ಅವುಗಳ ದರ್ಶನಾದಿಗಳೇ ಫಲ, ಎಂದು ಸಮಾಧಾನ.

**ಚತುರ್ಮುಖನ ಅಶ್ವಮೇಧಯಾಗ :**

**ಉಪನಿಷತ್**– ಸೋಽಕಾಮಯತ– 'ಭೂಯಸಾ ಯಜ್ಞೇನ ಭೂಯೋ ಯಜೇಯೇ'ತಿ। ಸೋಽಶ್ರಾಮ್ಯತ್। ಸ ತಪೋಽತಪ್ಯತ । ತಸ್ಯ ಶ್ರಾಂತಸ್ಯ ತಪ್ತಸ್ಯ ಯಶೋವೀರ್ಯಮುದಕ್ರಾಮತ್ । ಪ್ರಾಣಾ ವೈ ಯಶೋವೀರ್ಯಂ।ತತ್ ಪ್ರಾಣೇಷೂತ್ಕ್ರಾಂತೇಷು ಶರೀರಂ ಶ್ವಯಿತುಮಧ್ರಿಯತ। ತಸ್ಯ ಶರೀರ ಏವ ಮನ ಆಸೀತ್॥

**ಅನುವಾದ**—ಬ್ರಹ್ಮನು ಯಾಗಗಳಲ್ಲೆಲ್ಲ ಶ್ರೇಷ್ಠವಾದ ಅಶ್ವಮೇಧಯಾಗದಿಂದ ಪರಿಪೂರ್ಣನಾದ ಹರಿಯನ್ನು ಆರಾಧಿಸುವೆನೆಂದು ಇಚ್ಛಿಸಿದನು. ಆದರೆ ಅಶ್ವಮೇಧ ಯಾಗದ ಸಾಧನಗಳು ಸ್ಮರಣೆಗೆ ಬರದೆ ಬಳಲಿದನು; ಸಂತಾಪ ಪಟ್ಟನು; ದೇಹತ್ಯಾಗ ಮಾಡಲು ಬಯಸಿದನು. ಹೀಗೆ ಬಳಲಿ, ಸಂತಾಪಪಟ್ಟು, ದೇಹತ್ಯಾಗ ಮಾಡಲು ಬಯಸಿದ ಅವನು ಯಶೋವೀರ್ಯ ಸಹಿತನಾಗಿ ದೇಹದಿಂದ ಹೊರಗೆ ಬಂದನು. ಯಶಸ್ಸು ಮತ್ತು ವೀರ್ಯಕ್ಕೆ ಕಾರಣವಾದುದರಿಂದ ಯಶೋವೀರ್ಯವೆಂದರೆ ಇಂದ್ರಿಯಾಭಿ ಮಾನಿ ದೇವತೆಗಳು. ಬ್ರಹ್ಮನ ಜೊತೆಯಲ್ಲಿ ಇಂದ್ರಿಯಾಭಿಮಾನಿ ದೇವತೆಗಳು ದೇಹದಿಂದ ಹೋಬರುತ್ತಿರಲು ಆ ದೇಹವು ಉಬ್ಬಲು ತೊಡಗಿತು. ಅದನ್ನು ನೋಡಿ ಬ್ರಹ್ಮನಿಗೆ ಪುನಃ ಅದೇ ಶರೀರವನ್ನು ಪ್ರವೇಶಿಸುವ ಮನಸ್ಸಾಯಿತು.

**ಭಾಷ್ಯ**– **ಇಚ್ಛತೋ ವಿಷ್ಣುಯಜನಂ ಬ್ರಹ್ಮಣಃ ಸಾಧನಾಸ್ಮೃತೇಃ।**
**ಶ್ರಮಾತ್ ತಾಪಾಚ್ಚ ದೇಹಂ ತಂ ತ್ಯಕ್ತುಮಿಚ್ಛಾ ಬಭೂವ ಹ ।**
**ಇಚ್ಛಯಾ ಚಾಪ್ಯುದಕ್ರಾಮತ್ ಪ್ರಾಣೈಃ ಸಹ ಪಿತಾಮಹಃ ।**
**ಯಶೋವೀರ್ಯನಿಮಿತ್ತತ್ವಾತ್ ಪ್ರಾಣಾಸ್ತನ್ನಾಮಕಾಃ ಸ್ಮೃತಾಃ।**
**ಅತ್ಯಲ್ಪೇ ಚಾಪಿ ಸಂಜಾತೇ ಶ್ರಮೇಽಪಿ ನ ತದಿಚ್ಛಯಾ ।**
**ತಾಪೇ ಪ್ರಾಣಾ ನಿಃಸರಂತಿ ಸಾ ಚ ಕ್ರೀಡಾ ವಿಭೋಃ ಸ್ಮೃತಾ।**
**ಬೃಂಹಮಾಣಂ ಶರೀರಂ ತು ಪುನರ್ದೃಷ್ಟ್ವಾ ಪಿತಾಮಹಃ ।**
**ಪ್ರವೇಷ್ಟುಂ ತಚ್ಛರೀರಂ ಚ ಕಾಮಯಾಮಾಸ ಸ ಪ್ರಭುಃ ।**

**ಅನುವಾದ**—ಪರಮಾತ್ಮನ ಉದ್ದೇಶವಾಗಿ ಯಾಗವನ್ನು ಮಾಡಬೇಕೆಂದು ಸಂಕಲ್ಪಿಸಿದ ಬ್ರಹ್ಮನಿಗೆ ಯಾಗದ ಸಾಧನಗಳು ಸ್ಮರಣೆಗೆ ಬಾರದೆ ಶ್ರಮ ಮತ್ತು ತಾಪ ವುಂಟಾಗಿ ತನ್ನ ದೇಹವನ್ನು ತ್ಯಜಿಸುವ ಇಚ್ಛೆಯುಂಟಾಯಿತು. ಹೀಗೆ ಶ್ರಮ, ತಾಪ, ದೇಹ ತ್ಯಾಗೇಚ್ಛೆಗಳುಂಟಾದುದರಿಂದ, ಇಂದ್ರಿಯಾಭಿಮಾನಿದೇವತೆಗಳ ಜೊತೆ ಯಲ್ಲಿ ಆ ಪಿತಾಮಹನು ತನ್ನ ದೇಹದಿಂದ ಹೊರಗೆ ಬಂದನು. ಯಶಸ್ಸು ಮತ್ತು ವೀರ್ಯಕ್ಕೆ ಕಾರಣವಾದುದರಿಂದ ಇಂದ್ರಿಯಾಭಿಮಾನಿದೇವತೆಗಳಿಗೆ ಯಶೋವೀರ್ಯವೆಂದು

ಹೆಸರು. ಯದ್ಯಪಿ ಲೋಕದಲ್ಲಿ ಅಲ್ಪವಾದ ಶ್ರಮ ತಾಪಗಳುಂಟಾದ ಮಾತ್ರಕ್ಕೆ ಯಾರಿಗೂ ದೇಹವನ್ನು ಬಿಡುವ ಇಚ್ಛೆಯುಂಟಾಗುವುದಿಲ್ಲ. ದೇಹತ್ಯಾಗೇಚ್ಛಾಮಾತ್ರದಿಂದ ಇಂದ್ರಿಯಾಭಿಮಾನಿದೇವತೆಗಳೂ ದೇಹದಿಂದ ಹೊರಗೆ ಬರುವುದಿಲ್ಲ. ಆದರೂ ಸರ್ವಶಕ್ತನಾದ ಬ್ರಹ್ಮನಿಗೆ ದೇಹವನ್ನು ಬಿಡುವ ಇಚ್ಛೆ ಮತ್ತು ದೇಹದಿಂದ ಇಂದ್ರಿಯಾಭಿಮಾನಿಗಳೊಂದಿಗೆ ನಿರ್ಗಮನವು ಒಂದು ಕ್ರೀಡೆ ಮಾತ್ರ. ಆ ಶರೀರವು ಉಬ್ಬುತ್ತಿರುವುದನ್ನು ನೋಡಿದ ಪಿತಾಮಹನು ಪುನಃ ಆ ಶರೀರವನ್ನು ಪ್ರವೇಶಿಸುವ ಇಚ್ಛೆ ಹೊಂದಿದನು.

**ಅಶ್ವಮೇಧ ಶಬ್ದದ ಅರ್ಥಪ್ರಪಂಚ :**

**ಉಪನಿಷತ್– ಸೋಽಕಾಮಯತ 'ಮೇಧ್ಯಂ ಮ ಇದಂ ಸ್ಯಾತ್ । ಆತ್ಮನ್ವೀ ಅನೇನ ಸ್ಯಾಮಿತಿ'। ತತೋಽಶ್ವಃ ಸಮಭವತ್। ಯದಶ್ವತ್ ತನ್ಮೇಧ್ಯಮಭೂದಿತಿ । ತದೇವಾಶ್ವಮೇಧಸ್ಯಾಶ್ವಮೇಧತ್ವಂ । ಏಷ ಹ ವಾ ಅಶ್ವಮೇಧಂ ವೇದ ಯ ಏನಮೇವಂ ವೇದ ॥**

**ಅನುವಾದ**—ಅನಂತರ ನನ್ನ 'ಈ ಶವಶರೀರವು ಪವಿತ್ರವಾಗಲಿ. ನಾನು ಈ ಶರೀರವನ್ನೇ ಪ್ರವೇಶಿಸಿ ಶರೀರಿ ಆಗುವೆನು'ಎಂದು ಬ್ರಹ್ಮನು ಇಚ್ಛಿಸಿದನು. ಆಗ ಶರೀರವು ಪವಿತ್ರವಾಯಿತು ಮತ್ತು ಬ್ರಹ್ಮನು ಅದರಲ್ಲಿ ಪ್ರವೇಶಿಸಿದನು. ಪ್ರವೇಶ ಮಾಡಿದ ಮೇಲೆ ಯಾಗಸಾಧನವನ್ನು ತಿಳಿದು ಯಜ್ಞಪಶುತ್ವದ ಫಲಪ್ರಾಪ್ತಿಗಾಗಿ ಒಂದು ಅಂಶದಿಂದ ಅಶ್ವರೂಪವಾದ ಇನ್ನೊಂದು ದೇಹವನ್ನು ಧರಿಸಿದನು; ಮತ್ತು ಅಶ್ವಮೇಧಯಾಗ ಮಾಡಿದನು. ಮೊದಲಿನ ಪುರುಷಶರೀರವು ಬಿಳಿಚಿ ಉಬ್ಬಿಕೊಂಡ ಬಳಿಕ ಎರಡನೆಯ ಅಶ್ವಶರೀರ ಹುಟ್ಟಿದ್ದರಿಂದ ಅದು ಅಶ್ವವೆನಿಸಿತು. ಶರೀರವು ಸ್ಥೂಲವಾಯಿತು ಮತ್ತು ಪವಿತ್ರವಾಯಿತು ಎಂಬುದೇ ಆ ಶರೀರದಲ್ಲಿರುವ ಬ್ರಹ್ಮನೂ ಆ ಶರೀರದಿಂದ ಮಾಡಿದ ಯಾಗವೂ 'ಅಶ್ವಮೇಧ' ಶಬ್ದದಿಂದ ಕರೆಯಲ್ಪಡಲು ಕಾರಣ. ಅಶ್ವರೂಪವಾಗಿದ್ದು ಯಜ್ಞಪಶುವಾಯಿತೆಂಬುದೇ ಅಶ್ವರೂಪವು ಅಶ್ವಮೇಧವೆನಿಸಲು ಕಾರಣ. ಯಾರು ಹೀಗೆ,ಬ್ರಹ್ಮನ ಪುರುಷದೇಹವನ್ನೂ, ಅಶ್ವದೇಹವನ್ನೂ, ಯಾಗವನ್ನೂ ಅಶ್ವಮೇಧವೆಂದು ತಿಳಿಯುತ್ತಾನೆಯೋ ಅವನೇ ನಿಜವಾಗಿ ಅಶ್ವಮೇಧಶಬ್ದಾರ್ಥವನ್ನು ತಿಳಿದವನಾಗುತ್ತಾನೆ.

**ಭಾಷ್ಯ—ಪುನಸ್ತಸ್ಮಿನ್ ಪ್ರವೇಶಾಯ ಶವರೂಪಸ್ಯ ಮೇಧ್ಯತಾಮ್ ।**
**ಐಚ್ಛತ್ ತೇನೈವ ದೇಹೀ ಸ್ಯಾಮಿತಿ ತಸ್ಮಿನ್ ವಿವೇಶ ಚ ।**
**ತಸ್ಮಿನ್ ಪ್ರವಿಶ್ಯ ಸ ಬ್ರಹ್ಮಾ ದ್ವಿತೀಯಂ ವಪುರಗ್ರಹೀತ್ ।**
**ದೃಷ್ಟ್ವೋಪಾಯಂ ಮಹಾಯಜ್ಞೇಽಥಾಶ್ವಾಕಾರಂ ಪಿತಾಮಹಃ ।**

ಶ್ವೈತೀಭಾವಾತ್ ಪರಂ ಯಸ್ಮಾತ್ ತಜ್ಜ ಜ್ಞೇಽತೋಽಶ್ವನಾಮಕಂ ।
ಯದರ್ಥಂ ಶ್ವೈತತಾಮಾಪ ತದ್ದೇಹೋ ಮೇಧ್ಯತಾಮಪಿ ।
ಅಶ್ವಮೇಧಃ ಸ ಯಜ್ಞೋಽಭೂನ್ನಾಮ್ನಾ ತೇನ ತದಾ ಕೃತಃ ।
ಶ್ವೈತೀಭಾವಂ ಗತೇ ದೇಹೇ ಪುನರ್ಮೇಧ್ಯೇ ಯತಃ ಸ್ಥಿತಃ ।
ಅತೋಽಶ್ವಮೇಧನಾಮಾಸೌ ಬ್ರಹ್ಮಾ ಶುಭಚತುರ್ಮುಖಃ ।
ಅಶ್ವೋ ಭೂತ್ವಾ ಯತೋ ಮೇಧ್ಯಃ ಸೋಽಭವತ್ತೇನ ವಾ ಸ್ಮೃತಃ।
ಮೇಧೋ ಯಜ್ಞಃ ಸಮುದ್ದಿಷ್ಟೋ ಯಾಜ್ಞೀಯಂ ಮೇಧ್ಯ-
ಮುಚ್ಯತೇ ।
ಶುದ್ಧಂ ಮೇಧ್ಯಮಥಾಪಿ ಸ್ಯಾದೇವಂವಿದ್ಯೋಽಶ್ವಮೇಧವಿತ್ ।

**ಅನುವಾದ**—ಪುನಃ ಆ ಪುರುಷರೂಪದೇಹದಲ್ಲಿಯೇ ಪ್ರವೇಶಿಸಿ ತಾನು ಶರೀರಿಯಾಗುವೆನೆಂದು ಬಯಸಿದ ಬ್ರಹ್ಮನು ಶವರೂಪದಲ್ಲಿದ್ದ ಆ ದೇಹಕ್ಕೆ ಪಾವಿತ್ರ್ಯವನ್ನು ಬಯಸಿದನು. ಒಡನೆ ಅದು ಪವಿತ್ರವಾಯಿತು. ಬ್ರಹ್ಮನು ಪ್ರವೇಶಿಸಿದನು. ಹಾಗೆ ಪ್ರವೇಶಿಸಿದ ನಂತರ ಮಹಾಯಾಗವನ್ನು ಮಾಡಲು ಅಶ್ವಾಕಾರವು ಒಳ್ಳೆಯ ಸಾಧನವೆಂದು ಬಗೆದು ಬ್ರಹ್ಮನು, ಒಂದು ಅಂಶದಿಂದ ಅಶ್ವಾಕಾರದ ಇನ್ನೊಂದು ದೇಹವನ್ನು ತಾಳಿದನು. ಮೊದಲಿನ ಪುರುಷಶರೀರವು ಉಬ್ಬಿದ ನಂತರ, ಅಶ್ವಾಕಾರದ ಎರಡನೇ ಶರೀರವು ಜನಿಸಿದುದರಿಂದ ಆ ಮೊದಲ ಶರೀರಕ್ಕೆ ಅಶ್ವವೆಂದು ಹೆಸರು. ಯಾವ ಯಜ್ಞಕ್ಕೆ ಸಾಧನ ತಿಳಿಯದೆ ಶರೀರವು ಉಬ್ಬಿ ಅನಂತರ ಪವಿತ್ರವೂ ಆಯಿತೋ, ಆ ಶರೀರದಿಂದ ಮಾಡಿದ ಆ ಯಜ್ಞಕ್ಕೆ 'ಅಶ್ವಮೇಧ' ಎಂದು ಹೆಸರು ಬಂದಿತು. ಉಬ್ಬಿ ಪುನಃ ಪಾವಿತ್ರ್ಯವನ್ನು ಹೊಂದಿದ ಶರೀರದಲ್ಲಿ ಇರುವ ಪ್ರಯುಕ್ತ ಮಂಗಳಸ್ವರೂಪವಾದ ನಾಲ್ಕು ಮುಖಗಳುಳ್ಳ ಆ ಬ್ರಹ್ಮನಿಗೂ ಅಶ್ವಮೇಧ ಎಂದು ಹೆಸರು. ಅಥವಾ ಅಶ್ವರೂಪವನ್ನು ಧರಿಸಿ ಬ್ರಹ್ಮನು ಯಜ್ಞದಲ್ಲಿ 'ಮೇಧ್ಯ'ನಾದ ಕಾರಣದಿಂದಲೂ ಯಾಗಾಶ್ವರೂಪಿಯಾದ ಬ್ರಹ್ಮನಿಗೆ ಅಶ್ವಮೇಧ ಎಂದು ಹೆಸರು. ಮೇಧ ಎಂದರೆ ಯಜ್ಞ. ಯಜ್ಞಸಂಬಂಧಿಯಾದುದು ಮೇಧ್ಯವೆನಿಸುತ್ತದೆ. ಅಥವಾ ಪವಿತ್ರವಾದುದು ಮೇಧ್ಯವೆನಿಸುತ್ತದೆ. ಯಾರು ಹೀಗೆ ತಿಳಿಯುತ್ತಾನೆಯೋ ಅವನೇ ಅಶ್ವಮೇಧಶಬ್ದಾರ್ಥವನ್ನು ತಿಳಿದವನು.

**ಉಪನಿಷತ್**—ತಮನವರುದ್ಧ್ಯೈವಾಮನ್ಯತ। ತಂ ಸಂವತ್ಸರಸ್ಯ ಪರಸ್ತಾದಾತ್ಮನ ಆಲಭತ । ಪಶೂನ್ ದೇವತಾಭ್ಯಃ ಪ್ರತ್ಯೌಹತ್ । ತಸ್ಮಾತ್ ಸರ್ವ-ದೈವತ್ಯಂ ಪ್ರೋಕ್ಷಿತಂ ಪ್ರಾಜಾಪತ್ಯಮಾಲಭಂತೇ। ಏಷ ಹ ವಾ ಅಶ್ವಮೇಧೋ ಯ ಏಷ ತಪತಿ । ತಸ್ಯ ಸಂವತ್ಸರ ಆತ್ಮಾ । ಅಯಮಗ್ನಿ-ರರ್ಕಃ। ತಸ್ಯೇಮೇ ಲೋಕಾ ಆತ್ಮಾನಃ । ತಾವೇತಾವರ್ಕಾಶ್ವಮೇಧೌ ।

**ಸೋ ಪುನರೇಕೈವ ದೇವತಾ ಭವತಿ ಮೃತ್ಯುರೇವ । ಅಪ ಪುನರ್ಮೃತ್ಯುಂ ಜಯತಿ । ನೈನಂ ಮೃತ್ಯುರಾಪ್ನೋತಿ । ಮೃತ್ಯುರಸ್ಯಾತ್ಮಾ ಭವತಿ । ಏತಾಸಾಂ ದೇವತಾನಾಮೇಕೋ ಭವತಿ ॥**

**॥ ಇತಿ ದ್ವಿತೀಯಂ ಅಶ್ವಮೇಧ ಬ್ರಾಹ್ಮಣಂ ॥**

**ಅನುವಾದ**—‘ಬ್ರಹ್ಮನು ಅಶ್ವರೂಪನಾದ ತನ್ನನ್ನೇ ಅಡೆತಡೆ ಇಲ್ಲವೆಂಬಂತೆ ಭೂಮಂಡಲದಲ್ಲೆಲ್ಲಾ ತಿರುಗಿಸುತ್ತೇನೆ’ ಎಂದು ಸಂಕಲ್ಪಿಸಿದನು. ಒಂದು ಸಂವತ್ಸರ ಕಾಲ ಅಶ್ವವನ್ನು ಹೀಗೆ ತಿರುಗಿಸಿ ಬಳಿಕ ತನ್ನ ಅಂತರ್ಯಾಮಿಯಾದ ಹರಿಗೆ ಅಶ್ವವನ್ನು ಸಮರ್ಪಿಸಿದನು. ಬೇರೆ ಪಶುಗಳನ್ನು ಆಯಾ ದೇವತೆಗಳ ಅಂತರ್ಯಾಮಿಯಾದ ಹರಿಯ ರೂಪಗಳಿಗೆ ಸಮರ್ಪಿಸಿದನು. ಆದ್ದರಿಂದ ಈಗಿನ ಎಲ್ಲಾ ಯಾಜ್ಞಿಕರೂ ದೇವತೆಗಳಿಗೆ ಅಜಾದಿ ಪಶುಗಳನ್ನೂ ಪ್ರಜಾಪತಿಗೆ ಅಶ್ವವನ್ನೂ ಸಮರ್ಪಿಸುತ್ತಾರೆ. ಅಶ್ವಮೇಧ ಎಂಬ ಹೆಸರು ಬ್ರಹ್ಮನಿಗೆ ಮಾತ್ರವಲ್ಲ, ಪ್ರಕಾಶಿಸುವ ಈ ಸೂರ್ಯ ಮಂಡಲದೊಳಗಿರುವ ಸೂರ್ಯನೂ ಅಶ್ವಮೇಧ ಎನಿಸಿದ್ದಾನೆ. ಏಕೆಂದರೆ ಅಶ್ವಮೇಧನೆನಿಸುವ ಸಂವತ್ಸರನಾಮಕ ಬ್ರಹ್ಮನು ಸೂರ್ಯನಲ್ಲಿ ವ್ಯಾಪ್ತನಾಗಿದ್ದಾನೆ. ಸಂವತ್ಸರನಾಮಕನಾದ ಈ ಬ್ರಹ್ಮನು ಅಗ್ನಿಯಲ್ಲಿ ವ್ಯಾಪ್ತನಾಗಿ ಅಗ್ನಿ ಎಂದೂ, ಸೂರ್ಯನಲ್ಲಿ ವ್ಯಾಪ್ತನಾಗಿ ಅರ್ಕನೆಂದೂ ಕರೆಸಿಕೊಳ್ಳುತ್ತಾನೆ. ಆ ಬ್ರಹ್ಮನಿಂದ ಈ ಲೋಕಗಳು ವ್ಯಾಪ್ತವಾಗಿವೆ. ಹೀಗೆ ಸೂರ್ಯಾದಿಗಳಲ್ಲಿ ವ್ಯಾಪ್ತನಾಗಿದ್ದರೂ ಬ್ರಹ್ಮನು ಸರ್ವೋತ್ತಮನಲ್ಲ. ಅಗ್ನಿ, ಸೂರ್ಯಲೋಕ ಮತ್ತು ಅಶ್ವಮೇಧಗಳಲ್ಲಿರುವ ಬ್ರಹ್ಮನು ಓರ್ವ ಮುಖ್ಯದೇವತೆಯ ಅಧೀನನಾಗಿಯೇ ಇದ್ದಾನೆ. ಆ ಮುಖ್ಯದೇವತೆ ಎಂದರೆ ನರಸಿಂಹರೂಪಿಯಾದ ವಿಷ್ಣು. ಆ ನರಸಿಂಹನನ್ನು ಹೀಗೆ ತಿಳಿದ ಬ್ರಹ್ಮನು ಅಕಾಲ ಮೃತ್ಯುವನ್ನು ಜಯಿಸಿದ್ದಾನೆ. ಅಕಾಲಮೃತ್ಯುವು ಬ್ರಹ್ಮನನ್ನು ಎಂದೂ ಪೀಡಿಸುವುದಿಲ್ಲ. ಏಕೆಂದರೆ ನರಸಿಂಹರೂಪಿಯಾದ ಮೃತ್ಯುವು ಬ್ರಹ್ಮನಿಗೆ ಸ್ವಾಮಿಯಾಗಿದ್ದಾನೆ. ಆದ್ದರಿಂದಲೇ ಬ್ರಹ್ಮನು ಅರ್ಕ, ಅಗ್ನಿ ಮೊದಲಾದ ದೇವತೆಗಳಿಗೆ ಸ್ವಾಮಿಯಾಗಿದ್ದಾನೆ.

**ವಿವರಣೆ**—ಬ್ರಹ್ಮನು ತಾನೇ ಸ್ವೇಚ್ಛೆಯಿಂದ ಅಶ್ವರೂಪ ಧರಿಸಿರುವುದರಿಂದ ಅಡೆತಡೆಗಳ ಪ್ರಶ್ನೆಯೇ ಇಲ್ಲ. ಆದರೂ ಲೋಕದಲ್ಲಿ ಅಶ್ವಸಂಚಾರಕ್ಕೆ ಪುರುಷರ ನಿಯಂತ್ರಣವಿರುವುದರಿಂದ ಉಪನಿಷತ್ತು ‘ಅಡೆತಡೆ ಇಲ್ಲವೆಂಬಂತೆ’ ಎಂದಿದೆ. ಅಶ್ವಮೇಧಯಾಗಕ್ಕೆ ಪ್ರಜಾಪತಿಯೇ ದೇವತೆ. ಆದ್ದರಿಂದ ಉಳಿದವರು ಅಶ್ವಮೇಧ ಯಾಗವನ್ನು ಮಾಡುವಾಗ ಪ್ರಜಾಪತಿಯನ್ನೂ, ತದಂತರ್ಗತ ಹರಿಯನ್ನೂ ಉದ್ದೇಶಿಸಿ ಮಾಡುತ್ತಾರೆ. ಪ್ರಜಾಪತಿಯೇ ಮಾಡುವಾಗ ಕೇವಲ ತನ್ನ ಅಂತರ್ಯಾಮಿಯಾದ ಹರಿಯನ್ನು ಉದ್ದೇಶಿಸಿ ಮಾಡುತ್ತಾನೆ. ಹೀಗೆಯೇ ಉಳಿದ ದೇವತೆಗಳನ್ನುದ್ದೇಶಿಸಿ

ಮಾಡುವ ಯಾಗದಲ್ಲಿಯೂ, ಆಯಾ ದೇವತೆಗಳೇ ಮಾಡುವಾಗ ತಮ್ಮ ಅಂತರ್ಯಾಮಿಯಾದ ಪರಮಾತ್ಮನನ್ನೂ, ಉಳಿದವರು ಮಾಡುವಾಗ ದೇವತೆಗಳಿಂದ ಸಹಿತನಾದ ಪರಮಾತ್ಮನನ್ನೂ ಉದ್ದೇಶಿಸಿ ಮಾಡುತ್ತಾರೆ.

**ಭಾಷ್ಯ—ತಮಶ್ವರೂಪಮಾತ್ಮಾನಂ ಅನಿವಾರಿತವದ್ ವಿಭುಃ ।**
**ಚಾರಯಾಮಾಸ ರೂಪೇಣ ತದನ್ಯೇನ ಪುಮಾತ್ಮನಾ ।**
**ಸರ್ವಸ್ಮಿನ್ ಭುವನೇ ಚಾಬ್ದಂ ತದಂತೇ ಪರಮಾತ್ಮನೇ ।**
**ಸ್ವಸ್ಮಿನ್ ಸ್ಥಿತಾಯ ಸಂಕಲ್ಪ್ಯ ಯಜ್ಞ ಆಲಭತಾತ್ಮವಾನ್ ।**
**ಅಜಾದಿಕಾನ್ ಪಶೂನ್ ಅನ್ಯದೇವಸ್ಥ ಪರಮಾತ್ಮನೇ ।**
**ಕರ್ತೃತ್ವೇನ ಪಶುತ್ವೇನ ಯತ್ಫಲಂ ತದಶೇಷತಃ ।**
**ಮಮ ಸ್ಯಾದಿತಿ ಮನ್ವಾನಃ ಸೋಽಶ್ವರೂಪಮಧಾರಯತ್ ।**
**ಅಬುದ್ಧಿಪೂರ್ವಮರಣಾತ್ ಸ್ವರ್ಗಶ್ಚಾಪಿ ಪಶೋರ್ಭವೇತ್ ।**
**ಜ್ಞಾನಪೂರ್ವಮೃತೇಃ ಪುಂಸಃ ಕಿಮು ವಕ್ತವ್ಯಮಿತ್ಯಜಃ ।**

**ಅನುವಾದ**—ಬ್ರಹ್ಮನು ಅಶ್ವರೂಪನಾದ ತನ್ನನ್ನು ತನ್ನ ಪುರುಷಾಕಾರದ ಇನ್ನೊಂದು ರೂಪದಿಂದ ಒಂದು ವರ್ಷಕಾಲ ಯಾವ ಅಡಚಣೆಯೂ ಇಲ್ಲದಂತೆ ಭೂಮಿಯಲ್ಲೆಲ್ಲಾ ಸಂಚಾರ ಮಾಡಿಸಿದನು. ಅನಂತರ ತನ್ನ ಅಂತರ್ಯಾಮಿಯಾದ ಪರಮಾತ್ಮನಿಗೆ ಯಜ್ಞದಲ್ಲಿ ಬಲಿಕೊಟ್ಟನು. ಆಡು ಮೊದಲಾದ ಪಶುಗಳನ್ನು, ಬೇರೆ ದೇವತೆಗಳ ಅಂತರ್ಯಾಮಿಯಾದ ಪರಮಾತ್ಮನಿಗೆ ಬಲಿಕೊಟ್ಟನು. 'ಯಜ್ಞಕರ್ತೃವಾದರೆ ಏನು ಫಲ ದೊರೆಯುವುದೋ ಮತ್ತು ಯಜ್ಞಪಶುವಾದರೆ ಏನು ಫಲ ದೊರೆಯುವುದೋ ಅವೆಲ್ಲವೂ ತನಗೆ ಲಭಿಸಲಿ' ಎಂದು ಆಲೋಚಿಸಿ ಅಶ್ವರೂಪವನ್ನು ಧರಿಸಿದನು. 'ಯಜ್ಞದ ಮಹಿಮೆಯ ಜ್ಞಾನವಿಲ್ಲದೆ ಮರಣವನ್ನು ಹೊಂದುವ ಪಶುವಿಗೂ ಸ್ವರ್ಗ ಉಂಟಾಗುತ್ತದೆ. ಹೀಗಿರುವಾಗ ಯಜ್ಞದ ಮಹಿಮೆಯನ್ನು ತಿಳಿದು ಮರಣ ಹೊಂದುವ ಪುರುಷನಿಗೆ ಹೇಳುವುದೇನು?' ಎಂದು ಭಾವಿಸಿ ಅಶ್ವರೂಪವನ್ನು ಧರಿಸಿದನು.

**ಭಾಷ್ಯ—ಏವಂ ಸೂರ್ಯೋಽಪ್ಯಶ್ವಮೇಧನಾಮಾ ಸಂವತ್ಸರಾಭಿಧಃ ।**
**ಸೂರ್ಯೇ ಸ್ಥಿತೋ ಯತೋ ಬ್ರಹ್ಮಾ ಹ್ಯಶ್ವಮೇಧಾಭಿಧಃ ಸ್ವಯಂ ।**
**ಸೂರ್ಯೇ ತತತ್ವಾತ್ ಸೂರ್ಯಾತ್ಮಾ ಬ್ರಹ್ಮಾಸೌ ಪರಿಕೀರ್ತಿತಃ ।**
**ಅಗ್ನೌ ಸ್ಥಿತೋ ಯತಃ ಸೋಽರ್ಕಸ್ತಸ್ಮಾದಗ್ನಿರುದೀರ್ಯತೇ ।**
**ಬ್ರಹ್ಮಾತ್ಮತಾ ಯತೋ ಲೋಕಾಸ್ತದಾತ್ಮಾನಸ್ತತೋ ಮತಾಃ ।**
**ಬ್ರಹ್ಮಸೂರ್ಯಾಗ್ನಿಲೋಕೇಷು ವ್ಯಾಪ್ತ್ಯೈಕಾ ದೇವತಾ ಹರಿಃ ।**

ತಾದೃಶಂ ನೃಹರಿಂ ಜ್ಞಾತ್ವಾ ಪುನರ್ಮೃತ್ಯುಂ ಜಯನ್ನಸೌ ।
ಸದೈವ ವರ್ತತೇ ಬ್ರಹ್ಮಾ ಪುನರ್ಮೃತ್ಯುರ್ಮೃತಿಃ ಸ್ಮೃತಾ ।
ನೈನಂ ಮೃತ್ಯ್ವಾತ್ಮಕೋ ಮೃತ್ಯುಃ ಪ್ರಾಪ್ನೋತಿ ಹರಿಸೇವನಾತ್ ।
ಯಸ್ಮಾನ್ನೃಸಿಂಹೋ ಮೃತ್ಯೋಶ್ಚ ಮೃತ್ಯುರಾತ್ಮಾಽಸ್ಯ ವೈ ಭವೇತ್।
ಆತತತ್ವಾತ್ ತಥಾಽತ್ತೃತ್ವಾದಾತ್ಮಾಸೌ ಬ್ರಹ್ಮಣಃ ಸ್ಮೃತಃ ।
ಆದಾನಾದಾತ್ತನಿರ್ಮಾಣಾದಾತ್ತಜ್ಞಾನಾತ್ ತಥೈವ ಚ ।
ಏತಾಸಾಂ ದೇವತಾನಾಂ ಚ ಬ್ರಹ್ಮೇಶತ್ವೇನ ವರ್ತತೇ ।
ನೃಸಿಂಹಸ್ಯ ಸದಾ ಜ್ಞಾನಾದ್ ಧ್ಯಾನಾಚ್ಚ ತದನುಗ್ರಹಾತ್ ।
ಇತಿ ಮಹಾಸಂಹಿತಾಯಾಮ್ ॥

**ಅನುವಾದ**—'ಹೀಗೆಯೇ ಸ್ವಯಂ ಅಶ್ವಮೇಧನಾಮಕನಾದ ಸಂವತ್ಸರ ನಾಮಕ ಬ್ರಹ್ಮನು ಸೂರ್ಯನಲ್ಲಿರುವುದರಿಂದ ಸೂರ್ಯನಿಗೂ ಅಶ್ವಮೇಧ ಎಂದು ಹೆಸರು. ಸೂರ್ಯನಲ್ಲಿ ವ್ಯಾಪಿಸಿರುವುದರಿಂದಲೇ ಬ್ರಹ್ಮನು ಸೂರ್ಯನ ಆತ್ಮಾ ಎನಿಸುತ್ತಾನೆ. ಸೂರ್ಯನಲ್ಲಿರುವ ಬ್ರಹ್ಮನೇ ಅಗ್ನಿಯಲ್ಲಿಯೂ ಇರುವುದರಿಂದ ಬ್ರಹ್ಮನಿಗ ಅಗ್ನಿಯೆಂದೂ ಹೆಸರು. ಬ್ರಹ್ಮನಿಂದ ವ್ಯಾಪ್ತವಾಗಿರುವುದರಿಂದಲೇ ಲೋಕಗಳು ಬ್ರಹ್ಮಾತ್ಮಕ ಎಂದು ಕರೆಯಲ್ಪಡುತ್ತವೆ. ಇಂತಹ ಬ್ರಹ್ಮನಲ್ಲಿ, ಸೂರ್ಯನಲ್ಲಿ, ಅಗ್ನಿಯಲ್ಲಿ ಮತ್ತು ಲೋಕಗಳಲ್ಲಿ ವ್ಯಾಪಿಸಿರುವ ಮುಖ್ಯದೇವತೆ ಎಂದರೆ ಹರಿಯೆ. ಉಪನಿಷತ್ತಿನಲ್ಲಿ 'ಮೃತ್ಯುರೇವ' ಎಂದ ಬಳಿಕ, 'ಯ ಏವಮೇವಂ ವೇದ' ಎಂದು ಸೇರಿಸಿಕೊಳ್ಳಬೇಕು. ಅಂತಹ ನರಹರಿಯ ಜ್ಞಾನದಿಂದ ಬ್ರಹ್ಮನು ಪುನರ್ಮೃತ್ಯುವನ್ನು ಸದಾ ಜಯಿಸಿದ್ದಾನೆ' ಎಂದರ್ಥ. ಪುನರ್ಮೃತ್ಯುವೆಂದರೆ ಮರಣ. ಮೃತ್ಯುವಿಗೂ ಮೃತ್ಯುವಾದ ನರಸಿಂಹನು ಬ್ರಹ್ಮನಿಗೆ ಆತ್ಮನಾದುದರಿಂದ ಮತ್ತು ಹಾಗೆ ಬ್ರಹ್ಮನು ಹರಿಯನ್ನು ಸೇವೆಮಾಡುವುದರಿಂದ ಬ್ರಹ್ಮನಿಗೆ ಎಂದೂ ಅಕಾಲಮರಣ ಉಂಟಾಗುವುದಿಲ್ಲ. ಜಗತ್ತನ್ನು ವ್ಯಾಪಿಸಿರುವುದರಿಂದ, ಸಂಹರಿಸುವುದರಿಂದ, ಬ್ರಹ್ಮಾದಿಗಳನ್ನು ಸೇವಕರೆಂದು ಸ್ವೀಕರಿಸುವುದರಿಂದ, ಎಲ್ಲ ಜಗತ್ತನ್ನು ನಿರ್ಮಾಣಮಾಡುವುದರಿಂದ ಮತ್ತು ಸರ್ವವಿಷಯಕ ಜ್ಞಾನವನ್ನು ಹೊಂದಿರುವುದರಿಂದ ನರಸಿಂಹನು ಆತ್ಮನೆನಿಸುತ್ತಾನೆ. ಅಂತಹ ನರಸಿಂಹನ ಸದಾ ಜ್ಞಾನ, ಧ್ಯಾನಗಳಿಂದ ಅವನ ಅನುಗ್ರಹಕ್ಕೆ ಸರ್ವದಾ ಪಾತ್ರನಾದ ಬ್ರಹ್ಮನು ರುದ್ರಾದಿ ದೇವತೆಗಳಿಗೆ ಪ್ರಭುವಾಗಿದ್ದಾನೆ' ಎಂದು ಮಹಾಸಂಹಿತೆ ಎಂಬ ಗ್ರಂಥದಲ್ಲಿ ಹೇಳಿದೆ.

**ಭಾಷ್ಯ**—ಭೂಯಃಶಬ್ದಃ ಪೂರ್ಣತ್ವವಾಚೀ । ಪರಮೇಶ್ವರಂ ಪರಿಪೂರ್ಣಂ ಯಜೇಯೇತಿ ।

ಅಶ್ವದಿತ್ಯಶ್ವೋಽಭವತ್ ತದೇವ ರೂಪಂ ಮೇಧ್ಯಂ ಯಜ್ಞ ಆಲಭನೀಯಂ ಚಾಭವದಿತ್ಯಶ್ವಮೇಧಃ । 'ತಮನವರುದ್ಧ್ಯೇವಾಮನ್ಯತ'

**ಇತ್ಯಾದಿವಾಕ್ಯಶೇಷಾದಶ್ವಭಾವಃ ಪ್ರತೀಯತೇ । ಅಶ್ವತ್ ಬೃಂಹಿತಂ, ಪಶ್ಚಾನ್ಮೇಧ್ಯಂ ಚಾಭೂದ್ ಯಸ್ಯ ಶರೀರಂ ಸೋಽಶ್ವಮೇಧ ಇತಿ.ಚ ।**

**ನಿರೋಧಮಕೃತ್ವಾ ಚಾರಯಿಷ್ಯಾಮೀತ್ಯಮನ್ಯತ ಸ್ವೇಚ್ಛಯೈವ, ಸ್ವರೂಪಾಂತರತ್ವಾದಶ್ವರೂಪಸ್ಯ ॥**

**ಅನುವಾದ**—ಆರನೆಯ ಮಂತ್ರದಲ್ಲಿ ಭೂಯಃ ಎಂಬ ಶಬ್ದವು ಪೂರ್ಣತ್ವವನ್ನು ಹೇಳುತ್ತದೆ. ಅದಕ್ಕೆ 'ಪರಮೇಶ್ವರಂ' ಎಂಬ ವಿಶೇಷ್ಯವನ್ನಿಟ್ಟುಕೊಂಡು 'ಪರಿಪೂರ್ಣನಾದ ಪರಮಾತ್ಮನನ್ನು ಪೂಜಿಸುತ್ತೇನೆ' ಎಂದು ಅನ್ವಯ ಮಾಡಿಕೊಳ್ಳಬೇಕು.

ಅಶ್ವತ್ ಎಂದರೆ 'ಅಶ್ವವಾಯಿತು'ಮತ್ತು ಆ ಅಶ್ವರೂಪವೇ ನಂತರ 'ಮೇಧ್ಯ'ವಾಯಿತು, ಎಂದರೆ 'ಯಜ್ಞದಲ್ಲಿ ಉಪಯುಕ್ತವಾಯಿತು'. ಆ ಕಾರಣದಿಂದ ಅದಕ್ಕೆ ಅಶ್ವಮೇಧವೆಂದು ಹೆಸರು. 'ಬ್ರಹ್ಮನು ತನ್ನನ್ನೇ ಅಡೆತಡೆ ಇಲ್ಲದಂತೆ ಎಲ್ಲೆಡೆ ತಿರುಗಿಸುತ್ತೇನೆ ಎಂದು ಸಂಕಲ್ಪಿಸಿದನು' ಎಂದು ಮುಂತಾಗಿ ಹೇಳಿದ್ದರಿಂದ ಬ್ರಹ್ಮನು ಅಶ್ವರೂಪವನ್ನು ಧರಿಸಿದನೆಂದು ತಿಳಿದು ಬರುತ್ತದೆ. ಆದ್ದರಿಂದ ಅಶ್ವತ್ ಎಂದರೆ 'ಅಶ್ವರೂಪ'ವುಂಟಾಯಿತೆಂದು ವ್ಯಾಖ್ಯಾನಿಸಲಾಗಿದೆ. 'ಯಾರ ಶರೀರವು ಮೊದಲು ಅಶ್ವತ್ ಎಂದರೆ ಉಬ್ಬಿತೋ, ಅನಂತರ ಮೇಧ್ಯವಾಯಿತೋ ಅಂತಹ ಬ್ರಹ್ಮನಿಗೂ ಅಶ್ವಮೇಧ ಎಂದು ಹೆಸರು' ಎಂದೂ ಇನ್ನೊಂದು ರೀತಿಯಿಂದಲೂ ವ್ಯಾಖ್ಯಾನಿಸಬೇಕು.

ಅಶ್ವರೂಪವು ತನ್ನದೇ ಇನ್ನೊಂದು ರೂಪವಾದ್ದರಿಂದ, ತನಗೆ ತನ್ನಿಂದ ತಡೆಯಿಲ್ಲದಿದ್ದರೂ, ಸ್ವೇಚ್ಛೆಯಿಂದಲೇ ಲೋಕರೀತಿಯಿಂದ 'ಯಾವ ತಡೆಯೂ ಇಲ್ಲದಂತೆ ಸಂಚಾರ ಮಾಡಿಸುತ್ತೇನೆ' ಎಂದು ಬ್ರಹ್ಮನು ಆಲೋಚಿಸಿದನು.

ಇಲ್ಲಿಗೆ ಅಶ್ವಮೇಧ ಬ್ರಾಹ್ಮಣವು ಮುಗಿಯಿತು.

**ದೇವತೆಗಳಿಗೆ ಅಸುರಾವೇಶ ಉಂಟು :**

**ಉಪನಿಷತ್**—**ದ್ವಯಾ ಹ ಪ್ರಾಜಾಪತ್ಯಾ ದೇವಾಶ್ಚಾಸುರಾಶ್ಚ । ತತಃ ಕಾನೀಯಸಾ ಏವ ದೇವಾಃ । ಜ್ಯಾಯಸಾ ಅಸುರಾಃ । ತ ಏಷು ಲೋಕೇಷ್ವಸ್ಪರ್ಧಂತ । ತೇ ಹ ದೇವಾ ಊಚುಃ– ಹಂತಾಸುರಾನ್ ಯಜ್ಞ ಉದ್ಗೀಥೇನಾತ್ಯಯಾಮೇತಿ ।**

ಬ್ರಹ್ಮನ ಮಕ್ಕಳು ದೇವತೆಗಳು ಅಸುರರು ಎಂದು ಎರಡು ವರ್ಗಕ್ಕೆ

ಸೇರಿದವರು. ಅವರಲ್ಲಿ ದೇವತೆಗಳ ಸಂಖ್ಯೆ ಕಡಿಮೆ. ಅಸುರರ ಸಂಖ್ಯೆ ಹೆಚ್ಚು. ಇವರಿಬ್ಬರೂ ಲೋಕಾಧಿಪತ್ಯ ಮುಂತಾದ ವಿಷಯದಲ್ಲಿ ಸ್ಪರ್ಧೆಯಿಂದ ಯುದ್ಧ ಮಾಡಿದರು. ಸಂಖ್ಯಾಬಲದಿಂದಲೂ, ರುದ್ರದೇವರ ವರಬಲದಿಂದಲೂ ಅಸುರರು ದೇವತೆಗಳನ್ನು ಜಯಿಸಿದರು. ಆಗ ದೇವತೆಗಳು 'ಯಜ್ಞದಲ್ಲಿ ಸಾಮಗಾನದಿಂದ ಪರಿಯನ್ನೊಲಿಸಿಕೊಂಡು ಅಸುರರನ್ನು ಗೆಲ್ಲೋಣ' ಎಂದು ಪರಸ್ಪರ ಹೇಳಿ ಕೊಂಡರು.

**ಭಾಷ್ಯ—ದ್ವಯಾ ಬ್ರಹ್ಮಸುತಾಸ್ತತ್ರ ದೈತೇಯಾ ಬಹವಃ ಸ್ಮೃತಾಃ ।**
**ತಮೋರೂಪಾಃ, ಸತ್ತ್ವರೂಪಾ ಅಲ್ಪಸಂಖ್ಯಾಃ ಸುರಾಃ ಸ್ಮೃತಾಃ ॥**
**ಬಹುತ್ವಾತ್ ತೈರ್ಜಿತಾ ದೇವಾಃ ಶಂಕರಸ್ಯ ವರೇಣ ಚ ।**
**ಯಜ್ಞೇನ ವಿಷ್ಣುಮಭ್ಯರ್ಚ್ಯ ತತ್ರೋದ್ಗಾತೃಬಲೇನ ಚ ।**
**ಜಯಾಮ್ಯೈನಾನಿತಿ ಸ್ಮೃತ್ವಾ ವಹ್ನ್ಯಾದೀನಪ್ಯಚೂಚುದನ್ ।**

**ಅನುವಾದ**—ಬ್ರಹ್ಮದೇವರ ಮಕ್ಕಳು ಎರಡು ವರ್ಗಕ್ಕೆ ಸೇರಿದವರು. ಅವರಲ್ಲಿ ಅಜ್ಞಾನಸ್ವರೂಪರಾದ ದೈತ್ಯರ ಸಂಖ್ಯೆ ಹೆಚ್ಚು. ಜ್ಞಾನರೂಪರಾದ ದೇವತೆಗಳ ಸಂಖ್ಯೆ ಕಡಿಮೆ. ಸಂಖ್ಯಾಬಲವಿದ್ದುದರಿಂದಲೂ, ಶಂಕರನ ವರಬಲವಿದ್ದುದ ರಿಂದಲೂ, ದೈತ್ಯರಿಂದ ದೇವತೆಗಳು ಸೋಲಿಸಲ್ಪಟ್ಟರು. ಆಗ 'ಯಜ್ಞದಿಂದ ವಿಷ್ಣುವನ್ನು ಆರಾಧಿಸಿ ಅಲ್ಲಿ ಉದ್ಗಾತೃವಿನ ಸಾಮರ್ಥ್ಯದಿಂದ ಅಸುರರನ್ನು ಗೆಲ್ಲೋಣ' ಎಂದು ದೇವತೆಗಳು ಆಲೋಚಿಸಿ, ಅಗ್ನಿ ಮೊದಲಾದ ದೇವತೆಗಳನ್ನು ಉದ್ಗಾತೃವಾಗುವಂತೆ ಕೇಳಿಕೊಂಡರು.

**ಉಪನಿಷತ್—ತೇ ಹ ವಾಚಮೂಚುಃ– 'ತ್ವಂ ನ ಉದ್ಗಾಯೇ'ತಿ। 'ತಥೇ'ತಿ ತೇಭ್ಯೋ ವಾಗುದಗಾಯತ್ । ಯೋ ವಾಚಿ ಭೋಗಸ್ತಂ ದೇವೇಭ್ಯ ಆಗಾಯತ್ । ಯತ್ ಕಲ್ಯಾಣಂ ವದತಿ ತದಾತ್ಮನೇ । ತೇ ವಿದುಃ 'ಅನೇನ ವೈ ನ ಉದ್ಗಾತ್ರಾऽತ್ಯೇಷ್ಯಂತಿ' ಇತಿ। ತಮಭಿದ್ರುತ್ಯ ಪಾಪ್ಮನಾऽವಿಧ್ಯನ್ । ಸ ಯಃ ಸ ಪಾಪ್ಮಾ । ಯದೇವೇದಮಪ್ರತಿರೂಪಂ ವದತಿ ಸ ಏವ ಸ ಪಾಪ್ಮಾ ।**

ವಾಗಾಭಿಮಾನಿಯಾದ ಅಗ್ನಿಯನ್ನು 'ನೀನು ನಮ್ಮ ಇಷ್ಟಸಿದ್ಧಿಗಾಗಿ ಯಜ್ಞದಲ್ಲಿ ಸಾಮಗಾನ ಮಾಡು' ಎಂದು ಕೇಳಿಕೊಂಡರು. ಅಗ್ನಿಯು ಹಾಗೆ ಆಗಲೆಂದು ದೇವತೆಗಳ ಸಲುವಾಗಿ ಸಾಮಗಾನವನ್ನು ಮಾಡಿದನು. ಆ ಸಾಮ ಗಾನದಿಂದ ವಾಕ್ಕಿನಲ್ಲಿರುವ ವೇದಪಾಠಾದಿ ಕರ್ಮದ ಪುಣ್ಯಫಲವನ್ನು ದೇವತೆಗಳಿಗೆ ತಂದುಕೊಟ್ಟನು. ಬೇರೆ ಉಚ್ಚಾರಣೆಗಳ ಪುಣ್ಯವನ್ನು ತನಗೂ ತೆಗೆದುಕೊಂಡನು.

ಆಗ ಅಸುರರು, ಈ ಉದ್ಗಾತೃವಿನ ಬಲದಿಂದ ದೇವತೆಗಳು ನಮ್ಮನ್ನು ಜಯಿಸುವರೆಂದು ತಿಳಿದು ಅಗ್ನಿಯ ಮೇಲೆ ದಾಳಿಮಾಡಿ ಪಾಪಯುಕ್ತನನ್ನಾಗಿ ಮಾಡಿದರು. ಸರಿಯಾದ ಸಾಮಗಾನವಾಗದಂತೆ ಮಾಡಿದರು. ಅಸುರರು ಉಂಟುಮಾಡಿದ ಈ ಪಾಪದ ಚಿಹ್ನೆ ಪ್ರಸಿದ್ಧವೆ. ಮಂತ್ರವನ್ನು ಸ್ವರವರ್ಣಾದಿ ವ್ಯತ್ಯಾಸದಿಂದ ಉಚ್ಚರಿಸುವುದು ಮತ್ತು ಶಾಸ್ತ್ರವಿರುದ್ಧ ನಿಷಿದ್ಧ ಮಾತುಗಳನ್ನಾಡುವುದೇ ಅಸುರರು ವಾಗಭಿಮಾನಿಯಾದ ಅಗ್ನಿಗೆ ಉಂಟು ಮಾಡಿದ ಪ್ರಸಿದ್ಧವಾದ ಪಾಪದ ಚಿಹ್ನೆಯಾಗಿದೆ.

**ಉಪನಿಷತ್—ಅಥ ಹ ಪ್ರಾಣಮೂಚುಃ 'ತ್ವಂ ನ ಉದ್ಗಾಯೇ'ತಿ । 'ತಥೇ'ತಿ ತೇಭ್ಯಃ ಪ್ರಾಣ ಉದಗಾಯತ್ । ಯಃ ಪ್ರಾಣೇ ಭೋಗಸ್ತಂ ದೇವೇಭ್ಯ ಆಗಾಯತ್ । ಯತ್ ಕಲ್ಯಾಣಂ ಜಿಘ್ರತಿ ತದಾತ್ಮನೇ । ತೇ ವಿದುಃ 'ಅನೇನ ವೈ ನ ಉದ್ಗಾತ್ರಾಽತ್ಯೇಷ್ಯಂತಿ' ಇತಿ। ತಮಭಿದ್ರುತ್ಯ ಪಾಪ್ಮನಾಽವಿಧ್ಯನ್ । ಸ ಯಃ ಸ ಪಾಪ್ಮಾ । ಯದೇವೇದಮಪ್ರತಿರೂಪಂ ಜಿಘ್ರತಿ ಸ ಏವ ಸ ಪಾಪ್ಮಾ ।**

ಅನಂತರ ದೇವತೆಗಳು ನಾಸಿಕ್ಯ ವಾಯುವನ್ನು 'ನಮ್ಮ ಸಲುವಾಗಿ ಸಾಮಗಾನ ಮಾಡು' ಎಂದು ಕೇಳಿಕೊಂಡರು. ಹಾಗೆಯೇ ಆಗಲಿ ಎಂದು ನಾಸಿಕ್ಯವಾಯುವು ಅವರ ಸಲುವಾಗಿ ಸಾಮಗಾನ ಮಾಡಿದನು. ಆ ಸಾಮಗಾನದಿಂದ ನಾಸಿಕ್ಯ ವಾಯುವು ನಾಸಿಕೇಂದ್ರಿಯದಿಂದುಂಟಾಗುವ ಭಗವನ್ನಿರ್ಮಾಲ್ಯ ಘ್ರಾಣನದ ಪುಣ್ಯ ಫಲವನ್ನು ದೇವತೆಗಳಿಗೆ ತಂದುಕೊಟ್ಟನು. ತದತಿರಿಕ್ತ ಶುಭಗಂಧವನ್ನು ಆಘ್ರಾಣಿಸುವ ಸುಖವನ್ನು ತನಗೆ ತಂದುಕೊಂಡನು. ಆಗ ಅಸುರರು ಈ ಉದ್ಗಾತೃವಿನಿಂದ ದೇವತೆಗಳು ತಮ್ಮನ್ನು ಜಯಿಸುತ್ತಾರೆಂದು ತಿಳಿದು, ನಾಸಿಕ್ಯವಾಯುವಿನ ಮೇಲೆ ದಾಳಿ ಮಾಡಿ ಅವನನ್ನು ಪಾಪಯುಕ್ತನನ್ನಾಗಿ ಮಾಡಿದರು. ಅಸುರರು ಉಂಟು ಮಾಡಿದ ಈ ಪಾಪದ ಚಿಹ್ನೆ ಪ್ರಸಿದ್ಧವೆ. ಅಶುಭವಾದ ಗಂಧವನ್ನು ಆಘ್ರಾಣಿಸುವುದೇ, ಅಸುರರು ನಾಸಿಕ್ಯವಾಯುವಿಗೆ ಉಂಟುಮಾಡಿದ ಪಾಪದ ಚಿಹ್ನೆ.

**ಉಪನಿಷತ್—ಅಥ ಹ ಚಕ್ಷುರೂಚುಃ 'ತ್ವಂ ನ ಉದ್ಗಾಯೇ'ತಿ । 'ತಥೇ'ತಿ ತೇಭ್ಯಶ್ಚಕ್ಷುರುದಗಾಯತ್ । ಯಶ್ಚಕ್ಷುಷಿ ಭೋಗಸ್ತಂ ದೇವೇಭ್ಯ ಆಗಾಯತ್ । ಯತ್ ಕಲ್ಯಾಣಂ ಪಶ್ಯತಿ ತದಾತ್ಮನೇ । ತೇ ವಿದುಃ 'ಅನೇನ ವೈ ನ ಉದ್ಗಾತ್ರಾಽತ್ಯೇಷ್ಯಂತಿ' ಇತಿ। ತಮಭಿದ್ರುತ್ಯ ಪಾಪ್ಮನಾಽವಿಧ್ಯನ್ । ಸ ಯಃ ಸ ಪಾಪ್ಮಾ । ಯದೇವೇದಮಪ್ರತಿರೂಪಂ ಪಶ್ಯತಿ ಸ ಏವ ಸ ಪಾಪ್ಮಾ ।**

ಅನಂತರ ದೇವತೆಗಳು ಚಕ್ಷುರಭಿಮಾನಿಯಾದ ಸೂರ್ಯನನ್ನು ನಮ್ಮ ಸಲುವಾಗಿ ಸಾಮಗಾನ ಮಾಡು ಎಂದು ಕೇಳಿಕೊಂಡರು. ಸೂರ್ಯನು ಹಾಗೆಯೇ ಆಗಲೆಂದು ದೇವತೆಗಳ ಸಲುವಾಗಿ ಸಾಮಗಾನ ಮಾಡಿದನು. ಆ ಸಾಮಗಾನದಿಂದ ಸೂರ್ಯನು ಪುಣ್ಯಕ್ಷೇತ್ರಗಳ ದರ್ಶನದಿಂದುಂಟಾಗುವ ಪುಣ್ಯಫಲವನ್ನು ದೇವತೆಗಳಿಗೆ ತಂದುಕೊಟ್ಟನು. ಬೇರೆ ಸುಂದರ ರೂಪಗಳ ದರ್ಶನದಿಂದುಂಟಾದ ಸುಖವನ್ನು ತನಗೆ ತಂದುಕೊಂಡನು. ಆಗ ಅಸುರರು ಈ ಉದ್ಗಾತೃಗಳ ಬಲದಿಂದ ದೇವತೆಗಳು ತಮ್ಮನ್ನು ಜಯಿಸುತ್ತಾರೆಂದು ತಿಳಿದು ಸೂರ್ಯನ ಮೇಲೆ ದಾಳಿಮಾಡಿ ಅವನನ್ನು ಪಾಪಯುಕ್ತನನ್ನಾಗಿ ಮಾಡಿದರು. ಅಸುರರು ಉಂಟುಮಾಡಿದ ಈ ಪಾಪದ ಚಿಹ್ನೆ ಪ್ರಸಿದ್ಧವೆ. ನೋಡಬಾರದ ಮತ್ತು ನೋಡಲು ಭಯಂಕರವಾದ ದೃಶ್ಯವನ್ನು ಕಣ್ಣಿನಿಂದ ನೋಡುವುದೇ ಅಸುರರು ಸೂರ್ಯನಿಗೆ ಉಂಟುಮಾಡಿದ ಪಾಪದ ಚಿಹ್ನೆ.

**ಉಪನಿಷತ್—ಅಥ ಹ ಶ್ರೋತ್ರಮೂಚುಃ- 'ತ್ವಂ ನ ಉದ್ಗಾಯೇ'ತಿ । 'ತಥೇ'ತಿ ತೇಭ್ಯಃ ಶ್ರೋತ್ರಮುದಗಾಯತ್ । ಯಃ ಶ್ರೋತ್ರೇ ಭೋಗಃ ತಂ ದೇವೇಭ್ಯ ಆಗಾಯತ್। ಯತ್ ಕಲ್ಯಾಣಂ ಶೃಣೋತಿ ತದಾತ್ಮನೇ। ತೇ ವಿದುಃ 'ಅನೇನ ವೈ ನ ಉದ್ಗಾತ್ರಾऽತ್ಯೇಷ್ಯಂತಿ' ಇತಿ। ತಮಭಿದ್ರುತ್ಯ ಪಾಪ್ಮನಾऽವಿಧ್ಯನ್। ಸ ಯಃ ಸ ಪಾಪ್ಮಾ। ಯದೇವೇದಮಪ್ರತಿರೂಪಂ ಶೃಣೋತಿ ಸ ಏವ ಸ ಪಾಪ್ಮಾ ।**

ಅನಂತರ ದೇವತೆಗಳು ಶ್ರೋತ್ರಾಭಿಮಾನಿಗಳಾದ ದಿಗ್ದೇವತೆಗಳನ್ನು ತಮ್ಮ ಸಲುವಾಗಿ ಸಾಮಗಾನ ಮಾಡಬೇಕೆಂದು ಕೇಳಿಕೊಂಡರು. 'ಹಾಗೆಯೇ ಆಗಲಿ' ಎಂದು ದಿಗ್ದೇವತೆಗಳು ದೇವತೆಗಳ ಸಲುವಾಗಿ ಸಾಮಗಾನ ಮಾಡಿದರು. ಆ ಸಾಮಗಾನ ಪ್ರಯುಕ್ತ ಶ್ರೋತ್ರದಿಂದ ಹರಿಕಥಾಶ್ರವಣದಿಂದುಂಟಾಗುವ ಪುಣ್ಯಫಲವನ್ನು ದೇವತೆಗಳಿಗೆ ತಂದುಕೊಟ್ಟರು. ಇತರ ಒಳ್ಳೆಯ ಶಬ್ದಗಳನ್ನು ಕೇಳುವುದರಿಂದ ಉಂಟಾದ ಸುಖವನ್ನು ತಮಗೆ ತಂದುಕೊಂಡರು. ಆಗ ಅಸುರರು ಆ ಉದ್ಗಾತೃಗಳ ಬಲದಿಂದ ದೇವತೆಗಳು ನಮ್ಮನ್ನು ಜಯಿಸುತ್ತಾರೆಂದು ತಿಳಿದು ದಿಗ್ದೇವತೆಗಳ ಮೇಲೆ ದಾಳಿ ಮಾಡಿ ಅವರನ್ನು ಪಾಪಯುಕ್ತರನ್ನಾಗಿ ಮಾಡಿದರು. ಅಸುರರು ಉಂಟುಮಾಡಿದ ಈ ಪಾಪದ ಚಿಹ್ನೆ ಪ್ರಸಿದ್ಧವೆ. ಕೇಳಬಾರದ ಮತ್ತು ದುಃಖದಾಯಕವಾದ ಶಬ್ದಗಳನ್ನು ಕೇಳುವುದೇ ಅಸುರರು ದಿಗ್ದೇವತೆಗಳಿಗೆ ಉಂಟುಮಾಡಿದ ಪಾಪದ ಚಿಹ್ನೆ.

**ಉಪನಿಷತ್—ಅಥ ಹ ಮನ ಊಚುಃ- 'ತ್ವಂ ನ ಉದ್ಗಾಯೇ'ತಿ । 'ತಥೇ'ತಿ ತೇಭ್ಯೋ ಮನ ಉದಗಾಯತ್। ಯೋ ಮನಸಿ ಭೋಗಃ ತಂ ದೇವೇಭ್ಯ ಆಗಾಯತ್ । ಯತ್ ಕಲ್ಯಾಣಂ ಸಂಕಲ್ಪಯತಿ ತದಾತ್ಮನೇ । ತೇ**

ವಿದುಃ 'ಅನೇನ ವೈ ನ ಉದ್ಗಾತ್ರಾಽತ್ಯೇಷ್ಯಂತಿ' ಇತಿ । ತಮಭಿದ್ರುತ್ಯ ಪಾಪ್ಮನಾಽವಿಧ್ಯನ್ । ಸ ಯಃ ಸ ಪಾಪ್ಮಾ । ಯದೇವೇದಮಪ್ರತಿ-ರೂಪಂ ಸಂಕಲ್ಪಯತಿ ಸ ಏವ ಸ ಪಾಪ್ಮಾ । ಏವಂ ಖಲ್ವೇತಾ ದೇವತಾಃ ಪಾಪ್ಮಭಿರುಪಾಸೃಜನ್ । ಏವಮೇನಾಃ ಪಾಪ್ಮನಾಽವಿಧ್ಯನ್ ।

ಅನಂತರ ದೇವತೆಗಳು ಮನೋಽಭಿಮಾನಿಗಳಾದ ಚಂದ್ರ, ಇಂದ್ರ, ರುದ್ರ ಮತ್ತು ಶೇಷರನ್ನು ನಮ್ಮ ಸಲುವಾಗಿ ಸಾಮಗಾನ ಮಾಡಿರೆಂದು ಕೇಳಿ ಕೊಂಡರು. ಮನೋಽಭಿಮಾನಿದೇವತೆಗಳು ಹಾಗೆಯೇ ಆಗಲೆಂದು ಒಪ್ಪಿ ಸಾಮಗಾನ ಮಾಡಿದರು. ಆ ಸಾಮಗಾನದಿಂದ ಮನಸ್ಸಿನಲ್ಲಿ ಹರಿಧ್ಯಾನದಿಂದ ಉಂಟಾಗುವ ಪುಣ್ಯಫಲವನ್ನು ದೇವತೆಗಳಿಗೆ ತಂದುಕೊಟ್ಟರು. ಇತರ ಶುಭವಸ್ತುಗಳ ಆಲೋಚನೆ ಯಿಂದಾಗುವ ಸುಖವನ್ನು ತಮಗೆ ತಂದುಕೊಂಡರು. ಆಗ ಅಸುರರು, ಈ ಉದ್ಗಾತೃಗಳ ಬಲದಿಂದ ದೇವತೆಗಳು ನಮ್ಮನ್ನು ಜಯಿಸುತ್ತಾರೆಂದು ತಿಳಿದು ಅವರ ಮೇಲೆ ದಾಳಿ ಮಾಡಿ ಅವರನ್ನು ಪಾಪಯುಕ್ತರನ್ನಾಗಿ ಮಾಡಿದರು. ಅಸುರರು ಉಂಟುಮಾಡಿದ ಈ ಪಾಪದ ಚಿಹ್ನೆ ಪ್ರಸಿದ್ಧವೆ. ತಮಗೆ ಅಹಿತಕರವಾದ ಆಲೋಚನೆಯನ್ನು ಮಾಡುವುದೇ ಅಸುರರು ಮನೋಽಭಿಮಾನಿ ದೇವತೆಗಳಿಗೆ ಉಂಟುಮಾಡಿದ ಪಾಪದ ಚಿಹ್ನೆ. ಹೀಗೆಯೇ ಬೇರೆ ಇಂದ್ರಿಯಾಭಿಮಾನಿ ದೇವತೆ ಗಳನ್ನೂ ಪಾಪಯುಕ್ತರನ್ನಾಗಿ ಮಾಡಿದರು.

**ವಾಯುದೇವರಿಗೆ ಅಸುರಾವೇಶವಿಲ್ಲ :**

**ಉಪನಿಷತ್–ಅಥ ಹೇಮಮಾಸನ್ಯಂ ಪ್ರಾಣಮೂಚುಃ–'ತ್ವಂ ನ ಉದ್ಗಾಯೇ' ತಿ। 'ತಥೇ'ತಿ ತೇಭ್ಯ ಏಷ ಪ್ರಾಣ ಉದಗಾಯತ್। ತೇ ವಿದುಃ 'ಅನೇನ ವೈ ನ ಉದ್ಗಾತ್ರಾಽತ್ಯೇಷ್ಯಂತೀ'ತಿ। ತಮಭಿದ್ರುತ್ಯ ಪಾಪ್ಮನಾಽವಿಧ್ಯನ್। ಸ ಯಥಾಽಶ್ಮಾನಮೃತ್ವಾ ಲೋಷ್ಟೋ ವಿಧ್ವಂಸೇತ, ಏವಂ ಹೈವ ವಿಧ್ವಂಸಮಾನಾ ವಿಶ್ವಂಚೋ ವಿನೇಶುಃ । ತತೋ ದೇವಾ ಅಭವನ್ । ಪರಾಽಸುರಾಃ । ಭವತ್ಯಾತ್ಮನಾ ಪರಾಽಸ್ಯ ವಿದ್ವಿಷನ್ ಪಾಪ್ಮಾ ಭ್ರಾತೃವ್ಯೋ ಭವತಿ ಯ ಏವಂ ವೇದ ।**

ಎಲ್ಲಾ ದೇವತೆಗಳೂ ಪಾಪಯುಕ್ತರಾದ ಮೇಲೆ ದೇವತೆಗಳು ಮುಖಾಂತ ರ್ಗತನಾದ ಮುಖ್ಯಪ್ರಾಣನನ್ನು ನೀನು ನಮ್ಮ ಸಲುವಾಗಿ ಸಾಮಗಾನ ಮಾಡು ಎಂದು ಕೇಳಿಕೊಂಡರು. ಮುಖ್ಯಪ್ರಾಣನು, ಹಾಗೆಯೇ ಆಗಲಿ ಎಂದು ಒಪ್ಪಿ ದೇವತೆಗಳ ಸಲುವಾಗಿ ಸಾಮಗಾನ ಮಾಡಿದನು. ಆಗ ಅಸುರರು ಈ ಉದ್ಗಾತೃವಿನ ಬಲದಿಂದ ದೇವತೆಗಳು ತಮ್ಮನ್ನು ಜಯಿಸುತ್ತಾರೆ ಎಂದು ತಿಳಿದು ವೇಗವಾಗಿ

ಮುಖ್ಯಪ್ರಾಣನ ಮೇಲೆ ದಾಳಿ ಮಾಡಿ ಅವನನ್ನು ಪಾಪಯುಕ್ತನನ್ನಾಗಿ ಮಾಡಲು ಇಚ್ಛಿಸಿದರು. ಆದರೆ ಕಲ್ಲಿನ ಬಂಡೆಗೆ ಎಸೆದ ಮಣ್ಣಿನ ಹೆಂಟೆಯು ಪುಡಿಪುಡಿಯಾಗುವಂತೆ, ತಾವೇ ಗಾಯಗೊಂಡು ಬೇರೆ ಮಾರ್ಗಗಳಲ್ಲಿ ಓಡಿಹೋಗಿ ತಲೆಮರೆಸಿಕೊಂಡರು. ಅನಂತರ ದೇವತೆಗಳು ತ್ರಿಲೋಕಾಧಿಪತ್ಯರೂಪವಾದ ಐಶ್ವರ್ಯವನ್ನು ಪಡೆದರು. ಅಸುರರು ಐಶ್ವರ್ಯ ಹೀನರಾದರು. ಹೀಗೆ ಯಾರು, ಮುಖ್ಯಪ್ರಾಣನು ಸರ್ವಾಸುರ ವಿಧ್ವಂಸನ ಕಾರಣನೆಂದು ತಿಳಿಯುತ್ತಾನೆಯೋ, ಅವನು ಪರಮಾತ್ಮನ ಅನುಗ್ರಹದಿಂದ ತನ್ನನ್ನು ದ್ವೇಷಿಸುವ ಶತ್ರುವನ್ನೂ, ಭ್ರಾತೃವಿನಂತೆ ತನ್ನ ಜೊತೆಯಲ್ಲಿರುವ ಪಾಪವನ್ನೂ ಪರಾಭವಗೊಳಿಸುತ್ತಾನೆ.

**ಭಾಷ್ಯ—ಔದ್ಗಾತ್ರೇಽಗ್ನಿಮುಖಾಃ ಸರ್ವೇ ಇಂದ್ರರುದ್ರೌ ಚ ವೇಧಿತಾ ।**
**ಅಸುರೈಃ ಪಾಪಪೂಗೇನ ಮುಖ್ಯವಾಯುಂ ತತೋಽಬ್ರುವನ್ ।**
**ದೈತ್ಯಾಸ್ತಂ ವೇದ್ಧುಮೀಪ್ಸಂತೋ ಧ್ವಸ್ತಾ ನೇಶುಶ್ಚ ಸರ್ವತಃ ।**
**ಪಾಂಸುಪಿಂಡೋ ಯಥಾ ವಜ್ರಶಿಲಾಂ ಪ್ರಾಪ್ಯೈವ ನಶ್ಯತಿ ।**
**ತಸ್ಮಾದಖಂಡಶಕ್ತಿಃ ಸ ಮುಖ್ಯವಾಯುರುದಾಹೃತಃ ।**
**ಶಾಪೈರಥ ವರೈರ್ವಾಪಿ ನಾಸ್ಯ ಪ್ರತಿಹತಿರ್ಭವೇತ್ ।**
**ಸ್ವೇಚ್ಛಯೈವಾನುಸಾರೇಣ ವಿನಾ ಕುತ್ರಾಪಿ ಪುತ್ರಕಾಃ ।**
**ಏವಂವಿದಪಿ ಪಾಪೇಭ್ಯಃ ಶತ್ರುಭ್ಯೋಽಪಿ ಪ್ರಮುಚ್ಯತೇ ।**

**ಅನುವಾದ**—ದೇವತೆಗಳ ಸಲುವಾಗಿ ಅಗ್ನಿ ಮುಂತಾದ ಇಂದ್ರಿಯಾಭಿಮಾನಿ ದೇವತೆಗಳೂ, ಇಂದ್ರ ರುದ್ರರೂ ಉದ್ಗಾತೃಗಳಾಗಿ ಸಾಮಗಾನ ಮಾಡುವಾಗ ಅಸುರರು ಅವರನ್ನು ಪಾಪಯುಕ್ತರನ್ನಾಗಿ ಮಾಡಿದರು. ಆಗ ದೇವತೆಗಳು ಮುಖ್ಯಪ್ರಾಣನನ್ನು ಕೇಳಿಕೊಂಡರು. ಅವನನ್ನು ಪಾಪಯುಕ್ತನನ್ನಾಗಿ ಮಾಡುವ ಇಚ್ಛೆಯುಳ್ಳವರಾಗಿ ದೈತ್ಯರು ಅವನ ಮೇಲೆ ಎರಗಿ ಮಣ್ಣಿನ ಹೆಂಟೆಯು ವಜ್ರಶಿಲೆಯ ಮೇಲೆ ಬಿದ್ದು ಪುಡಿ ಪುಡಿಯಾಗುವಂತೆ ನಾಶವನ್ನು ಹೊಂದಿದರು. ಆದ್ದರಿಂದ ಅಪ್ರತಿಹತಶಕ್ತಿಯುಳ್ಳವನು ಮುಖ್ಯಪ್ರಾಣ ಎಂದು ಶಾಸ್ತ್ರಗಳಲ್ಲಿ ಹೇಳಲ್ಪಡುತ್ತದೆ. ಮಕ್ಕಳೇ, ವಿಷ್ಣುವಿನ ಇಚ್ಛೆಗ ಅನುಸಾರವಾಗಿ ತನ್ನ ಇಚ್ಛೆಯಿಂದಲೇ ಹೊರತು, ದೇವತೆಗಳ ಶಾಪಗಳಿಂದಾಗಲೀ ವರಗಳಿಂದಾಗಲೀ ಎಂದೂ ಮುಖ್ಯಪ್ರಾಣನು ಶಕ್ತಿ ಹ್ರಾಸವನ್ನು ತೋರುವುದಿಲ್ಲ. ಮುಖ್ಯಪ್ರಾಣನ ಈ ಮಹಿಮೆಯನ್ನು ತಿಳಿಯುವವನೂ ಕೂಡ ಪಾಪಗಳಿಂದಲೂ ಶತ್ರುಗಳಿಂದಲೂ ಬಿಡುಗಡೆ ಹೊಂದುತ್ತಾನೆ.

**ಉಪನಿಷತ್—ತೇ ಹೋಚುಃ– 'ಕ್ವ ನು ಸೋಽಭೂದ್ ಯೋ ನ ಇತ್ಥಮಸಕ್ತ' ಇತಿ । 'ಅಯಮಾಸ್ಯೇಽಂತರಿ'ತಿ । ಸೋಽಯಾಸ್ಯಃ । ಆಂಗಿರಸೋಽಂಗಾನಾಂ ಹಿ ರಸಃ ।**

ಆ ರುದ್ರಾದಿ ದೇವತೆಗಳು 'ಹೀಗೆ ಶತ್ರುವಿನಾಶ ಮತ್ತು ಐಶ್ವರ್ಯಕ್ಕೆ ಕಾರಣನಾಗಿ ನಮಗೆ ಲಭಿಸಿದ ಮಹಾತ್ಮನು ಎಲ್ಲಿದ್ದಾನೆ' ಎಂದು ಆಲೋಚಿಸಿದರು. 'ಪ್ರಾಣಿಗಳ ಮುಖದೊಳಗಿದ್ದಾನೆ' ಎಂದು ನಿಶ್ಚಯ ಮಾಡಿದರು. ಮುಖದಲ್ಲಿ ಇರುವುದರಿಂದ ಅವನಿಗೆ ಆಯಾಸ್ಯನೆಂದು ಹೆಸರು. ಮುಖದೊಳಗಿದ್ದು ದೇಹವನ್ನು ನಿಯಮನ ಮಾಡುವುದರಿಂದ ಅವನಿಗೆ ಆಂಗಿರಸನೆಂದೂ ಹೆಸರು.

**ಉಪನಿಷತ್—ಸಾ ವಾ ಏಷಾ ದೇವತಾ ದೂರ್ನಾಮ । ದೂರಂ ಹ್ಯಸ್ಯಾ ಮೃತ್ಯುಃ । ದೂರಂ ಹ ವಾ ಅಸ್ಮಾನ್ಮೃತ್ಯುರ್ಭವತಿ ಯ ಏವಂ ವೇದ ।**

ಆ ಪ್ರಾಣದೇವನಿಗೆ ದೂಃ ಎಂದೂ ಹೆಸರು. ಏಕೆಂದರೆ ಅವನಿಗೆ ಪಾಪಸ್ವರೂಪವಾದ ಮೃತ್ಯು ದೂರದಲ್ಲಿರುತ್ತದೆ. ಯಾರು ಮುಖ್ಯಪ್ರಾಣನ ಈ ಮಹಿಮೆಯನ್ನು ತಿಳಿಯುತ್ತಾನೆಯೋ ಅವನಿಗೂ ಪಾಪಸ್ವರೂಪವಾದ ಮೃತ್ಯುವು ದೂರದಲ್ಲೇ ಇರುತ್ತದೆ.

**ದೇವತೆಗಳಿಗೆ ಜಯ ವಾಯುದೇವರ ಅನುಗ್ರಹದಿಂದ :**

**ಉಪನಿಷತ್—ಸಾ ವಾ ಏಷಾ ದೇವತೈತಾಸಾಂ ದೇವತಾನಾಂ ಪಾಪ್ಮಾನಂ ಮೃತ್ಯುಮಪಹತ್ಯ ಯತ್ರಾಽಸಾಂ ದಿಶಾಮಂತಸ್ತದ್ ಗಮಯಾಂಚಕಾರ । ತದಾಸಾಂ ಪಾಪ್ಮನೋ ವಿನ್ಯದಧಾತ್ । ತಸ್ಮಾನ್ನ ಜನಮಿಯಾತ್, ನಾಂತಮಿಯಾತ್, ನೇತ್ ಪಾಪ್ಮಾನಂ ಮೃತ್ಯುಮನ್ವವಾಯಾನೀತಿ ।**

ಈ ಪ್ರಾಣದೇವನು ಅಗ್ನಿ ಮೊದಲಾದ ದೇವತೆಗಳ ಪಾಪರೂಪವಾದ ಮೃತ್ಯುವನ್ನು ಅವರಿಂದ ಬಿಡಿಸಿ, ಸಜ್ಜನರು ಸಂಚರಿಸುವ ದಿಕ್ಕುಗಳ ಆಚೆಗೆ ಎಂದರೆ ಸಮುದ್ರದ ಕೊನೆಗೆ ಎಸೆದನು. ಅಲ್ಲಿರುವ ಜನಸಮೂಹದಲ್ಲಿ ಪಾಪವನ್ನು ವಿಶೇಷವಾಗಿ ಇಟ್ಟನು. ಆದ್ದರಿಂದ 'ನಾನು ಪಾಪಸ್ವರೂಪವಾದ ಮೃತ್ಯುವನ್ನು ಹೊಂದಬಾರದು' ಎಂದು ಬಯಸುವವನು, ಆ ಪಾಪಿ ಜನರೊಂದಿಗೆ ಬೆರೆಯಬಾರದು. ದಿಕ್ಕುಗಳ ಆಚೆಗೆ ಹೋಗಬಾರದು.

**ಉಪನಿಷತ್—ಸಾ ವಾ ಏಷಾ ದೇವತೈತಾಸಾಂ ದೇವತಾನಾಂ ಪಾಪ್ಮಾನಂ ಮೃತ್ಯುಮಪಹತ್ಯಾಥೈನಾ ಮೃತ್ಯುಮತ್ಯವಹತ್ ।**

**ಸ ವೈ ವಾಚಮೇವ ಪ್ರಥಮಾಮತ್ಯವಹತ್ । ಸಾ ಯದಾ ಮೃತ್ಯುಮತ್ಯಮುಚ್ಯತ ಸೋಽಗ್ನಿರಭವತ್ । ಸೋಽಯಮಗ್ನಿಃ ಪರೇಣ ಮೃತ್ಯುಮತಿಕ್ರಾಂತೋ ದೀಪ್ಯತೇ ।**

**ಅಥ ಪ್ರಾಣಮತ್ಯವಹತ್ । ಸ ಯದಾ ಮೃತ್ಯುಮತ್ಯಮುಚ್ಯತ ಸ ವಾಯುರಭವತ್ । ಸೋಽಯಂ ವಾಯುಃ ಪರೇಣ ಮೃತ್ಯುಮತಿಕ್ರಾಂತಃ ಪವತೇ ।**

**ಅಥ ಚಕ್ಷುರತ್ಯವಹತ್ । ತದ್ ಯದಾ ಮೃತ್ಯುಮತ್ಯಮುಚ್ಯತ ಸ ಆದಿತ್ಯೋಽಭವತ್ । ಸೋಽಸಾವಾದಿತ್ಯಃ ಪರೇಣ ಮೃತ್ಯುಮತಿಕ್ರಾಂತಸ್ತಪತಿ ।**

**ಅಥ ಶ್ರೋತ್ರಮತ್ಯವಹತ್ । ತದ್ ಯದಾ ಮೃತ್ಯುಮತ್ಯಮುಚ್ಯತ। ತಾ ದಿಶೋಽಭವನ್ ತಾ ಇಮಾ ದಿಶಃ ಪರೇಣ ಮೃತ್ಯುಮತಿಕ್ರಾಂತಾಃ।**

**ಅಥ ಮನೋಽತ್ಯವಹತ್ । ತದ್ ಯದಾ ಮೃತ್ಯುಮತ್ಯಮುಚ್ಯತ ಸ ಚಂದ್ರಮಾ ಅಭವತ್। ಸೋಽಸೌ ಚಂದ್ರಃ ಪರೇಣ ಮೃತ್ಯುಮತಿಕ್ರಾಂತೋ ಭಾತಿ । ಏವಂ ಹ ವಾ ಏನಮೇಷಾ ದೇವತಾ ಮೃತ್ಯುಮತಿವಹತಿ ಯ ಏವಂ ವೇದ ।**

ಈ ಪ್ರಾಣದೇವನು ದೇವತೆಗಳ ಪಾಪರೂಪವಾದ ಮೃತ್ಯುವನ್ನು ನಾಶ ಮಾಡಿದ ಮೇಲೆ ಅವರಿಗೆ ಮೃತ್ಯುವಿನ ಉಪದ್ರವವಿಲ್ಲದ ತಮ್ಮತಮ್ಮ ಊರ್ಧ್ವ ಲೋಕಗಳ ಒಡೆತನವನ್ನಿತ್ತನು.

ಮುಖ್ಯಪ್ರಾಣನು ಮೊದಲು ಉದ್ಗಾತೃವಾಗಿ ಸ್ವೀಕರಿಸಲ್ಪಟ್ಟ ವಾಗಭಿಮಾನಿಯಾದ ಅಗ್ನಿಯನ್ನೇ ಮೃತ್ಯುರಹಿತವಾದ ಊರ್ಧ್ವಲೋಕಕ್ಕೆ ಕರೆದುಕೊಂಡು ಹೋದನು. ಹೀಗೆ ಅಗ್ನಿಯು ಮೃತ್ಯುವಿನಿಂದ ಬಿಡುಗಡೆ ಹೊಂದಿದಾಗ ಅಗ್ನಿ-ಲೋಕಾಧಿಪತಿಯಾದನು. ಈ ಅಗ್ನಿಯು ಮುಖ್ಯಪ್ರಾಣನ ಅನುಗ್ರಹದಿಂದ ಮೃತ್ಯುವನ್ನು ದಾಟಿ ಪ್ರಕಾಶಿಸುತ್ತಾನೆ.

ಅನಂತರ ಮುಖ್ಯಪ್ರಾಣನು ಘ್ರಾಣೇಂದ್ರಿಯಾಭಿಮಾನಿಯಾದ ನಾಸಿಕ್ಯ ವಾಯುವನ್ನು ಊರ್ಧ್ವಲೋಕಕ್ಕೆ ಕರೆದುಕೊಂಡು ಹೋದನು. ಹೀಗೆ ನಾಸಿಕ್ಯ ವಾಯು ಮೃತ್ಯುವಿನಿಂದ ಬಿಡುಗಡೆ ಹೊಂದಿದಾಗ ವಾಯುಲೋಕಾಧಿಪತಿಯಾದನು. ಈ ನಾಸಿಕ್ಯವಾಯುವು ಮುಖ್ಯಪ್ರಾಣನ ಅನುಗ್ರಹದಿಂದ ಮೃತ್ಯುವನ್ನು ದಾಟಿ ಸಂಚರಿಸುತ್ತಾನೆ.

ಅನಂತರ ಮುಖ್ಯಪ್ರಾಣನು ಚಕ್ಷುರಭಿಮಾನಿಯಾದ ಸೂರ್ಯನನ್ನು ಊರ್ಧ್ವ ಲೋಕಕ್ಕೆ ಕರೆದುಕೊಂಡು ಹೋದನು. ಹೀಗೆ ಸೂರ್ಯನು ಮೃತ್ಯುವಿನಿಂದ ಬಿಡುಗಡೆ ಹೊಂದಿದಾಗ ಸೂರ್ಯಲೋಕಾಧಿಪತ್ಯವನ್ನು ಪಡೆದನು. ಈ ಸೂರ್ಯನು ಮುಖ್ಯ ಪ್ರಾಣನ ಅನುಗ್ರಹದಿಂದ ಮೃತ್ಯುವನ್ನು ದಾಟಿ ಉರಿಯುತ್ತಾನೆ.

ಅನಂತರ ಮುಖ್ಯಪ್ರಾಣನು ಶ್ರೋತ್ರಾಭಿಮಾನಿಗಳಾದ ದಿಗ್‌ದೇವತೆಗಳನ್ನು ಊರ್ಧ್ವಲೋಕಕ್ಕೆ ಕರೆದೊಯ್ದನು. ಅವರು ಹೀಗೆ ಮೃತ್ಯುವಿನಿಂದ ಬಿಡುಗಡೆ ಹೊಂದಿದಾಗ ದಿಗಧಿಪತಿಗಳಾದರು. ಹೀಗೆ ಈ ದಿಗ್ದೇವತೆಗಳು ಮುಖ್ಯಪ್ರಾಣನ ಅನುಗ್ರಹದಿಂದ ಮೃತ್ಯುವನ್ನು ದಾಟಿ ತಮ್ಮ ತಮ್ಮ ಪದವಿಗಳಲ್ಲಿದ್ದು ಕಾರ್ಯನಿರ್ವಹಿಸುತ್ತಾರೆ.

ಅನಂತರ ಮುಖ್ಯಪ್ರಾಣನು ಮನೋಭಿಮಾನಿಯಾದ ಚಂದ್ರನನ್ನು ಊರ್ಧ್ವಲೋಕಕ್ಕೆ ಕರೆದೊಯ್ದನು. ಹೀಗೆ ಚಂದ್ರನು ಮೃತ್ಯುವಿನಿಂದ ಬಿಡುಗಡೆ ಹೊಂದಿದಾಗ ಚಂದ್ರಲೋಕದ ಆಧಿಪತ್ಯವನ್ನು ಪಡೆದನು. ಈ ಚಂದ್ರನು ಮುಖ್ಯಪ್ರಾಣನ ಅನುಗ್ರಹದಿಂದ ಮೃತ್ಯುವನ್ನು ದಾಟಿ ಪ್ರಕಾಶಿಸುತ್ತಾನೆ. ಹೀಗೆಯೇ ಮನೋಭಿಮಾನಿಗಳಾದ ಇಂದ್ರ, ರುದ್ರ, ಶೇಷರೂ ಮುಖ್ಯಪ್ರಾಣನ ಅನುಗ್ರಹದಿಂದ ಮೃತ್ಯುವನ್ನು ದಾಟಿ ತಮ್ಮ ತಮ್ಮ ಆಧಿಪತ್ಯವನ್ನು ಪಡೆದಿದ್ದಾರೆ. ಯಾರು ಹೀಗೆ ಮುಖ್ಯಪ್ರಾಣನ ಮಹಿಮೆಯನ್ನು ತಿಳಿಯುತ್ತಾನೆಯೋ ಅವನನ್ನೂ ಮುಖ್ಯಪ್ರಾಣನು ಮೃತ್ಯುವಿನಿಂದ ಬಿಡಿಸಿ ಊರ್ಧ್ವಲೋಕಕ್ಕೆ ಕರೆದೊಯ್ಯುತ್ತಾನೆ.

**ಭಾಷ್ಯ—ಸ ವಾಯುೂ ರುದ್ರಶಕ್ರಾದೇರ್ವಾಸುದೇವಬಲಾಶ್ರಯಃ ।**
**ವಿಮೋಚ್ಯ ಪಾಪಸಂಘಾತಾನ್ ದಿಶಾಮಂತೇಷ್ವಥಾಕ್ಷಿಪತ್ ।**
**ಉನ್ಮೋಚ್ಯ ಮೃತ್ಯೋಸ್ತಾಂಶ್ಚೈವಾಥೋರ್ಧ್ವಲೋಕೇಷು ಚಾವಹತ್ ।**
**ಅಗ್ನಿರ್ನಾಸಿಕ್ಯವಾಯುಶ್ಚ ದಿಕ್ಪಾ ಇಂದ್ರಾದಯೋಽಖಿಲಾಃ ।**
**ಸೂರ್ಯಃ ಸೋಮಶ್ಚ ರುದ್ರಶ್ಚ ತೇನೈವ ಸ್ವಪದೇ ಸ್ಥಿತಾಃ ।**

**ಅನುವಾದ**—ಪರಮಾತ್ಮನ ಅನುಗ್ರಹಬಲವನ್ನೇ ಆಶ್ರಯಿಸಿಕೊಂಡಿರುವ ಮುಖ್ಯಪ್ರಾಣನು ರುದ್ರ, ಇಂದ್ರ ಮೊದಲಾದ ದೇವತೆಗಳಿಂದ ಪಾಪದ ಸಮೂಹವನ್ನು ಬಿಡಿಸಿದ ಬಳಿಕ ಅದನ್ನು ದಿಕ್ಕಿನ ಕೊನೆಗಳಲ್ಲಿ ಎಸೆದನು. ಆ ದೇವತೆಗಳನ್ನು ಹೀಗೆ ಮೃತ್ಯುವಿನಿಂದ ಬಿಡಿಸಿ ಊರ್ಧ್ವಲೋಕಕ್ಕೆ ಕರೆದುಕೊಂಡು ಹೋದನು. ಆದ್ದರಿಂದ ಅಗ್ನಿ, ನಾಸಿಕ್ಯವಾಯು, ಇಂದ್ರಾದಿ ಸಕಲ ದಿಕ್ಪಾಲಕರು, ಸೂರ್ಯ, ಚಂದ್ರ ಮತ್ತು ರುದ್ರರೂ ಮುಖ್ಯಪ್ರಾಣನ ಅನುಗ್ರಹದಿಂದಲೇ ತಮ್ಮ ತಮ್ಮ ಪದವಿಗಳಲ್ಲಿದ್ದಾರೆ.

**ಜೀವರು ಉಣ್ಣುವುದೆಲ್ಲ ಮುಖ್ಯಪ್ರಾಣನಿಗೆ ಅನ್ನ :**

**ಉಪನಿಷತ್—ಅಥಾತ್ಮನೇಽನ್ನಾದ್ಯಮಾಗಾಯತ್ । ಯದ್ಧಿ ಕಿಂಚಾನ್ನಮದ್ಯತೇಽನೇನೈವ ತದದ್ಯತೇ । ಇಹ ಪ್ರತಿತಿಷ್ಠತಿ ।**

ಸಾಮಗಾನದ ಬಲದಿಂದ ದೇವತೆಗಳಿಗೆ ಅವರವರ ಅಭೀಷ್ಟಸಿದ್ಧಿಯನ್ನು ಮಾಡಿ

ಕೊಟ್ಟ ಮೇಲೆ ಮುಖ್ಯಪ್ರಾಣನು ತಾನು ಉಣ್ಣುವ ಅನ್ನಕ್ಕಾಗಿಯೂ ಸಾಮಗಾನ ಮಾಡಿದನು. ಆ ಗಾನವು ಸಫಲವಾಯಿತು. ಏಕೆಂದರೆ ಸಕಲ ಪ್ರಾಣಿಗಳಿಂದ ಏನು ಆಹಾರವು ತಿನ್ನಲ್ಪಡುತ್ತದೆಯೋ ಅದು ಮುಖ್ಯಪ್ರಾಣನಿಂದಲೇ ತಿನ್ನಲ್ಪಡುತ್ತದೆ. ಮುಖ್ಯಪ್ರಾಣನು ಸಕಲಪ್ರಾಣಿಗಳಲ್ಲಿ ಸನ್ನಿಹಿತನಾಗಿದ್ದಾನೆ.

**ದೇವತೆಗಳಿಗೆ ಮುಖ್ಯಪ್ರಾಣನಿಂದ ಅನ್ನ :**

**ಉಪನಿಷತ್—ತೇ ದೇವಾ ಅಬ್ರುವನ್– 'ಏತಾವದ್ ವಾ ಇದಂ ಸರ್ವಂ ಯದನ್ನಂ । ತದಾತ್ಮನ ಆಗಾಸೀಃ । ಅನು ನೋऽಸ್ಮಿನ್ನನ್ನ ಆಭಜಸ್ವೇ'–ತಿ । ತೇ ವೈ ಮಾऽಭಿಸಂವಿಶತೇತಿ । ತಥೇತಿ ತಂ ಸಮಂತಂ ಪರಿಣ್ಯ–ವಿಶಂತ । ತಸ್ಮಾದ್ ಯದನೇನಾನ್ನಮತ್ತಿ ತೇನೈತಾಸ್ತೃಪ್ಯಂತಿ । ಏವಂ ಹವಾ ಏನಂ ಸ್ವಾ ಅಭಿಸಂವಿಶಂತಿ, ಭರ್ತಾ ಸ್ವಾನಾಂ ಶ್ರೇಷ್ಠಃ ಪುರ ಏತಾ ಭವತ್ಯನ್ನಾದೋऽಧಿಪತಿಃ ಯ ಏವಂ ವೇದ। ಯ ಉ ಹೈವಂವಿದಂ ಸ್ವೇಷು ಪ್ರತಿ ಪ್ರತಿ ಬುಭೂಷತಿ ನಹೈವಾಲಂ ಭಾರ್ಯೇಭ್ಯೋ ಭವತಿ । ಅಥ ಯ ಏವೈತಮನುಭವತಿ ಯೋ ವೈ ತಮನುಭಾರ್ಯಾನ್ ಬುಭೂಷತಿ ಸ ಹೈ–ವಾಲಂ ಭಾರ್ಯೇಭ್ಯೋ ಭವತಿ ।**

ಆ ಅಗ್ನ್ಯಾದಿ ದೇವತೆಗಳು ಪ್ರಾಣನನ್ನು ಬೇಡಿದರು—'ಪ್ರಾಣಿಗಳು ಉಣ್ಣುವ ಅನ್ನವೇನಿದೆಯೋ ಅಷ್ಟೇ ಅನ್ನ ಲೋಕದಲ್ಲಿ ಲಭ್ಯ. ಹೊರತು ಬೇರೆ ಅನ್ನವಿಲ್ಲ. ಅದೆಲ್ಲವನ್ನೂ ನಿನಗಾಗಿಯೇ ಸಾಮಗಾನದಿಂದ ಸಂಪಾದನೆ ಮಾಡಿದ್ದಿಯೆ. ನಾವೂ ಅನ್ನವಿಲ್ಲದೆ ಇರಲಾರೆವು. ಆದ್ದರಿಂದ ಆ ಅನ್ನದಲ್ಲಿ ನಿನ್ನ ಅನಂತರ ನಮಗೂ ಭಾಗ ಸಿಗುವಂತೆ ಮಾಡು'. ಆಗ ಮುಖ್ಯಪ್ರಾಣನು ಹೇಳಿದನು, 'ದೇವತೆಗಳೆ, ಹಾಗಿದ್ದರೆ ನೀವೂ ನನ್ನ ಪರಿವಾರದವರಾಗಿ ಪ್ರಾಣಿಗಳ ದೇಹದಲ್ಲಿ ಪ್ರವೇಶ ಮಾಡಿ' 'ಹಾಗೆಯೇ ಆಗಲಿ' ಎಂದು ಹೇಳಿ ದೇವತೆಗಳು ಮುಖ್ಯಪ್ರಾಣನನ್ನು ಅನುಸರಿಸಿ ಪ್ರಾಣಿಗಳ ದೇಹವನ್ನು ಎಲ್ಲಕಡೆ ಪ್ರವೇಶಿಸಿದರು. ಆದ್ದರಿಂದ ಮುಖ್ಯಪ್ರಾಣನಿಂದ ಪ್ರೇರಿತನಾಗಿ ಪ್ರಾಣಿಯು ಏನು ಅನ್ನವನ್ನು ತಿನ್ನುತ್ತಾನೆಯೋ ಅದರಿಂದ ಈ ದೇವತೆಗಳೂ ತೃಪ್ತಿಹೊಂದುತ್ತಾರೆ. ಯಾರು ಮುಖ್ಯಪ್ರಾಣನ ಈ ಮಹಿಮೆಯನ್ನು ತಿಳಿಯುತ್ತಾನೆಯೋ ಅವನನ್ನೂ ಬಂಧುಗಳು ಹೀಗೆ ಪರಿವಾರದವರಾಗಿ ಆಶ್ರಯಿಸುತ್ತಾರೆ. ಅವನು ಅವರೊಳಗೆ ಶ್ರೇಷ್ಠನೂ ಅವರಿಗೆ ಅಗ್ರೇಸರನೂ, ಅನ್ನವನ್ನು ಭೋಗಿಸುವವನೂ, ಅಧಿಪತಿಯೂ ಆಗುತ್ತಾನೆ. ಬಂಧುಗಳಲ್ಲಿ ಯಾರು ಇಂತಹ ಮುಖ್ಯಪ್ರಾಣಜ್ಞಾನಿಗೆ ಪ್ರತಿಕೂಲನಾಗಿರಲು ಬಯಸುತ್ತಾನೆಯೋ ಅವನು ತನ್ನ ಆಶ್ರಿತ ಜನರನ್ನು ಪೋಷಿಸಲು ಅಸಮರ್ಥನಾಗುತ್ತಾನೆ. ಯಾರು ಇಂತಹ ಮುಖ್ಯಪ್ರಾಣನಿಗೆ ಅನುಕೂಲನಾಗಿರುತ್ತಾನೆಯೋ ಮತ್ತು ಅನುಕೂಲನಾಗಿದ್ದು

ತನ್ನನ್ನು ಆಶ್ರಯಿಸಿದ ಜನರನ್ನು ಪೋಷಿಸಲು ಇಚ್ಛಿಸುತ್ತಾನೆಯೋ ಅವನು ಮಾತ್ರ ತನ್ನ ಆಶ್ರಿತರನ್ನು ಪೋಷಿಸಲು ಸಮರ್ಥನಾಗುತ್ತಾನೆ.

**ಮುಖ್ಯಪ್ರಾಣನ ನಾಮಗಳು:**

**ಉಪನಿಷತ್—ಸೋಽಯಾಸ್ಯ ಆಂಗಿರಸೋಽಂಗಾನಾಂ ಹಿ ರಸಃ । ಪ್ರಾಣೋ ವಾ ಅಂಗಾನಾಂ ಹಿ ರಸಃ । ಪ್ರಾಣೋ ಹಿ ವಾ ಅಂಗಾನಾಂ ರಸಃ । ತಸ್ಮಾದ್ ಯಸ್ಮಾತ್ಕಸ್ಮಾಚ್ಚಾಂಗಾತ್ ಪ್ರಾಣ ಉತ್ಕ್ರಾಮತಿ ತದೇವ ತಚ್ಛುಷ್ಯತಿ । ಏಷ ಹಿ ವಾ ಅಂಗಾನಾಂ ರಸಃ ।**

'ಮುಖ್ಯಪ್ರಾಣನು ಅಯಾಸ್ಯನೆನಿಸಿದ್ದಾನೆ ಮತ್ತು ಪ್ರಾಣಿಗಳ ದೇಹವನ್ನು ನಿಯಮನ ಮಾಡುವುದರಿಂದ ಅಂಗಿರಸನೆಂದೂ ಕರೆಯಲ್ಪಡುತ್ತಾನೆ' ಎಂದು ಹಿಂದೆಯೇ ಹೇಳಿದೆ. ಪ್ರಾಣಿಗಳ ದೇಹವನ್ನು ನಿಯಮನ ಮಾಡುವವನು ಈ ಮುಖ್ಯಪ್ರಾಣನೆ. ಏಕೆಂದರೆ ಮುಖ್ಯಪ್ರಾಣನೆ ಪ್ರಾಣಿದೇಹ ನಿಯಾಮಕ ಎನ್ನುವುದು ಪ್ರಸಿದ್ಧ. ಅವನು ಯಾವಾಗ ಯಾವುದಾದರೂ ಅಂಗದಿಂದ ನಿರ್ಗಮಿಸಿ ಊರ್ಧ್ವ ಮುಖಿವಾಗಿ ಹೋಗುವನೋ ಆಗಲಿ ಆ ಅಂಗವು ಶುಷ್ಕವಾಗುತ್ತದೆ. ಆದ್ದರಿಂದ ಪ್ರಾಣನೇ ಅಂಗಗಳಿಗೆ ನಿಯಾಮಕ.

**ಉಪನಿಷತ್—ಏಷ ಉ ಏವ ಬೃಹಸ್ಪತಿಃ । ವಾಗ್ವೈ ಬೃಹತೀ । ತಸ್ಯಾ ಏಷ ಪತಿಃ । ತಸ್ಮಾದು ಬೃಹಸ್ಪತಿಃ। ಏಷ ಉ ಏವ ಬ್ರಹ್ಮಣಸ್ಪತಿಃ । ವಾಗ್ವೈ ಬ್ರಹ್ಮ । ತಸ್ಯಾ ಏಷ ಪತಿಃ ।ತಸ್ಮಾದು ಬ್ರಹ್ಮಣಸ್ಪತಿಃ ।**

ಪ್ರಾಣನೇ ಬೃಹಸ್ಪತಿಯೆಂಬ ಹೆಸರುಳ್ಳವನು. ಸ್ತ್ರೀಯರಲ್ಲಿರಬೇಕಾದ ಎಲ್ಲ ಗುಣಗಳಿರುವುದರಿಂದ ಭಾರತಿಗೆ ಬೃಹತೀ ಎಂದು ಹೆಸರು. ಪ್ರಾಣನು ಭಾರತಿಯ ಪತಿ ಆದ್ದರಿಂದ 'ಬೃಹಸ್ಪತಿ'. ಪ್ರಾಣನಿಗೆ ಬ್ರಹ್ಮಣಸ್ಪತಿಯೆಂದೂ ಹೆಸರು. ಅನಂತವೇದಾಭಿಮಾನಿನಿಯಾದುದರಿಂದ ಅಥವಾ ವಿಷ್ಣುವಿನ ಪೂರ್ಣಸನ್ನಿಧಾನವಿರುವು ದರಿಂದ ಭಾರತಿಗೆ ಬ್ರಹ್ಮ ಎಂದು ಹೆಸರು. ಪ್ರಾಣನು ಭಾರತಿಯ ಪತಿ. ಆದ್ದರಿಂದ 'ಬ್ರಹ್ಮಣಸ್ಪತಿ'.

**ಭಾಷ್ಯ—ಸ್ತ್ರೀಗುಣೈಃ ಸರ್ವಪೂರ್ಣತ್ವಾದ್ ಬೃಹತೀ ತು ಸರಸ್ವತೀ ।**
**ಅನಂತವೇದರೂಪತ್ವಾತ್ ಸೈವ ಬ್ರಹ್ಮೇತಿ ಕೀರ್ತಿತಾ ।**
**ವಿಷ್ಣುನಾ ಬೃಂಹಿತತ್ವಾದ್ವಾ ತತ್ಪತಿರ್ವಾಯುರೀಶ್ವರಃ ।**

**ಅನುವಾದ**—ಸ್ತ್ರೀಯಲ್ಲಿರಬೇಕಾದ ಗುಣಗಳಿಂದ ಪರಿಪೂರ್ಣಳಾಗಿರುವುದರಿಂದ ಭಾರತಿಗೆ ಬೃಹತೀ ಎಂದು ಹೆಸರು. ಅನಂತವೇದಾಭಿಮಾನಿನಿಯಾದುದರಿಂದ

ಅಥವಾ ಪರಿಯು ಪೂರ್ಣಸನ್ನಿಧಾನಪಾತ್ರಳಾದ್ದರಿಂದ ಅವಳಿಗೆ ಬ್ರಹ್ಮ ಎಂದೂ ಹೆಸರು. ಪ್ರಭುವಾದ ಪ್ರಾಣನು ಅವಳ ಪತಿ.

**ಉಪನಿಷತ್—ಏಷ ಉ ಏವ ಸಾಮ। ವಾಗ್ ವೈ ಸಾ। ಅಮಃ ಏಷಃ। ಸಾ ಚಾಮಶ್ಚೇತಿ ತತ್ ಸಾಮ್ನಃ ಸಾಮತ್ವಂ। ಯದ್ವೇವ ಸಮಃ ಪ್ಲುಷಿಣಾ, ಸಮೋ ಮಶಕೇನ, ಸಮೋ ನಾಗೇನ, ಸಮ ಏಭಿಸ್ತ್ರಿಭಿರ್ಲೋಕೈಃ, ಸಮೋಽನೇನ ಸರ್ವೇಣ, ತಸ್ಮಾದ್ವೇವ ಸಾಮ। ಅಶ್ನುತೇ ಸಾಮ್ನಃ ಸಾಯುಜ್ಯಂ ಸಲೋಕತಾಂ ಯ ಏವಮೇತತ್ ಸಾಮ ವೇದ।**

ಅರ್ಧನಾರೀ ನರಾಕಾರದ ಪ್ರಾಣನೇ ಸಾಮಶಬ್ದವಾಚ್ಯನು. ಸ್ತ್ರೀಯರಲ್ಲಿ ಶ್ರೇಷ್ಠಳಾಗಿರುವುದರಿಂದ ಭಾರತಿಗೆ ಸಾ ಎಂದು ಹೆಸರು. ಅಮಿತ ಮಹಿಮನಾದು ದರಿಂದ ಪ್ರಾಣನು ಅಮ ಎನಿಸುತ್ತಾನೆ. ಸಾ ಮತ್ತು ಅಮ ಇಬ್ಬರೂ ಸೇರಿದಾಗ ಸಾಮ ಎಂದಾಗುತ್ತದೆ. ಇದೇ ಅರ್ಧನಾರೀನರರೂಪನಾದ ಪ್ರಾಣ ನನ್ನು ಸಾಮಶಬ್ದವು ಹೇಳುವುದಕ್ಕೆ ನಿಮಿತ್ತ. ಈ ಪ್ರಾಣನೇ ಬಿಂದುವಿನಲ್ಲಿ ಬಿಂದು ವಿಗೆ ಸಮನಾಗಿ ಇದ್ದಾನೆ. ಸೊಳ್ಳೆಯಲ್ಲಿ ಸೊಳ್ಳೆಗೆ ಸಮನಾಗಿ ಇದ್ದಾನೆ. ಆನೆಯಲ್ಲಿ ಆನೆಗೆ ಸಮನಾಗಿ ಇದ್ದಾನೆ. ಈ ಮೂರು ಲೋಕಗಳಲ್ಲಿ ಮೂರು ಲೋಕಗಳಿಗೆ ಸಮ ನಾಗಿ ಇದ್ದಾನೆ. ಹೆಚ್ಚೇಕೆ, ಎಲ್ಲ ವಸ್ತುಗಳಲ್ಲಿಯೂ ಅವುಗಳಿಗೆ ಸಮನಾಗಿ ಇದ್ದಾನೆ. ಆದ್ದರಿಂದಲೂ ಪ್ರಾಣನಿಗೆ ಸಾಮ ಎಂದು ಹೆಸರು. ಯಾರು ಪ್ರಾಣನ ಈ ಸಾಮ ಶಬ್ದವಾಚ್ಯತ್ವವನ್ನು ತಿಳಿಯುತ್ತಾನೆಯೋ ಅವನು ಪ್ರಾಣನ ಸಾಯುಜ್ಯಕ್ಕೆ ಯೋಗ್ಯ ನಾಗಿದ್ದರೆ ಸಾಯುಜ್ಯವನ್ನೂ ಇಲ್ಲದಿದ್ದರೆ ಸಾಲೋಕ್ಯವನ್ನೂ ಪಡೆಯುತ್ತಾನೆ.

**ಉಪನಿಷತ್–ಏಷ ಉ ವಾ ಉದ್ಗೀಥಃ। ಪ್ರಾಣೋ ವಾ ಉತ್। ಪ್ರಾಣೇನ ಹೀದಂ ಸರ್ವಮುತ್ತಬ್ಧಂ। ವಾಗೇವ ಗೀಥಾ। ಉಚ್ಚ ಗೀಥಾ ಚೇತಿ ಸ ಉದ್ಗೀಥಃ।**

ಅರ್ಧನಾರೀನರರೂಪನಾದ ಪ್ರಾಣನೇ ಉದ್ಗೀಥಶಬ್ದವಾಚ್ಯನು. ಪ್ರಾಣನಿಗೆ ಉತ್ ಎಂದು ಹೆಸರು. ಏಕೆಂದರೆ ಅವನಿಂದ ಈ ಜಗತ್ತೆಲ್ಲವೂ ಎತ್ತಿಹಿಡಿಯಲ್ಪ ಟ್ಟಿದೆ. ಸಾಮವೇದಾಭಿಮಾನಿನಿಯಾದುದರಿಂದ ಭಾರತಿಗೆ ಗೀಥಾ ಎಂದು ಹೆಸರು. ಉತ್ ಮತ್ತು ಗೀಥಾ ಇಬ್ಬರೂ ಸೇರಿ ಉದ್ಗೀಥವಾಗುತ್ತಾರೆ.

**ಭಾಷ್ಯ—ಸಾರತ್ವಾತ್ ಸ್ತ್ರೀಷು ಸಾ ದೇವೀ ಸೇತ್ಯುಕ್ತಾ ಸಾಮರೂಪತಃ।**
**ಗೀಥೇತ್ಯುಕ್ತಾ ತದುದ್ಗೀಥಸಾಮಾಖ್ಯೋಽರ್ಧತನುಸ್ತಯಾ।**
**ಅರ್ಧನಾರೀನರವಪುರ್ವಾಯುಃ ಕುತ್ರಚಿದೀರಿತಃ।**

**ಅನುವಾದ**—ಸ್ತ್ರೀಯರಲ್ಲಿ ಶ್ರೇಷ್ಠಳಾದುದರಿಂದ ಭಾರತಿಗೆ ಸಾ ಎಂದು

ಹೆಸರು. ಸಾಮವೇದಾಭಿಮಾನಿನಿಯಾದ್ದರಿಂದ ಗೀಥಾ ಎಂದೂ ಹೆಸರು. ಆದ್ದರಿಂದ ಅವಳಿಂದೊಡಗೂಡಿದ ಅರ್ಧನಾರೀನರರೂಪನಾದ ವಾಯುವು ಕೆಲವು ಕಡೆ ಸಾಮ ಶಬ್ದದಿಂದಲೂ, ಕೆಲವೆಡೆ ಉದ್ಗೀಥ ಶಬ್ದದಿಂದಲೂ ಹೇಳಲ್ಪಡುತ್ತಾನೆ.

**ಉದ್ಗಾತೃಗಳೆಲ್ಲರಲ್ಲಿಯೂ ಇದ್ದು ಸಾಮಗಾನ ಮಾಡುವವ ಪ್ರಾಣದೇವ:**

**ಉಪನಿಷತ್**—**ತದ್ಧಾಪಿ । ಬ್ರಹ್ಮದತ್ತಶ್ಚೈಕಿತಾನೇಯೋ ರಾಜಾನಂ ಭಕ್ಷಯನ್ನುವಾಚ 'ಅಯಂ ತ್ಯಸ್ಯ ರಾಜಾ ಮೂರ್ಧಾನಂ ವಿಪಾತಯತಾದ್ ಯದೀತೋಽಯಾಸ್ಯ ಆಂಗಿರಸೋಽನ್ಯೇನೋದಗಾಯದಿ'ತಿ । ವಾಚಾ ಚ ಹ್ಯೇವ ಸ ಪ್ರಾಣೇನ ಚೋದಗಾಯದಿತಿ ।**

ಪ್ರಾಣನೇ ಅಯಾಸ್ಯಾದಿಗಳಲ್ಲಿದ್ದು ಉದ್ಗಾನ ಮಾಡುವವನು ಎಂಬುದು ಪ್ರಸಿದ್ಧ. ಏಕೆಂದರೆ ಚಿಕಿತಾನನ ಮಗನಾದ ಬ್ರಹ್ಮದತ್ತಮುನಿಯು ಸೋಮರಸವನ್ನು ಭಕ್ಷಿಸುತ್ತಾ, 'ಬ್ರಹ್ಮದೇವರು ಮಾಡಿದ ಈ ಯಜ್ಞದಲ್ಲಿ ಪ್ರಾಣನನ್ನು ಬಿಟ್ಟು ಬೇರೆ ಯವನಿಂದ ಪ್ರೇರಿತರಾಗಿ ಅಯಾಸ್ಯ ಆಂಗಿರಸ ಋಷಿಗಳು ಸಾಮಗಾನ ಮಾಡಿದ್ದರೆ, ಪ್ರಾಣನಿಂದ ಪ್ರೇರಿತರಾಗಿಯೇ ಸಾಮಗಾನ ಮಾಡಿದರು ಎಂದು ಹೇಳುವ ತನ್ನ ತಲೆಯನ್ನು ಈ ಸೋಮರಸಕ್ಕೆ ಅಭಿಮಾನಿಯಾದ ಚಂದ್ರನು ಸ್ಪಷ್ಟವಾಗಿ ಉರುಳಿಸಲಿ, ಎಂದು ಹೇಳಿದನು. ಏಕೆಂದರೆ ಭಾರತೀಸಹಿತನಾದ ಅರ್ಧನಾರೀನರರೂಪಿ ಪ್ರಾಣನಿಂದಲೇ ಪ್ರೇರಿತರಾಗಿ ಅವರು ಸಾಮಗಾನ ಮಾಡಿದ್ದರು.

**ವಿವರಣೆ**—ಬ್ರಹ್ಮದೇವರು ಮಾಡಿದ ಯಜ್ಞದಲ್ಲಿ ಪ್ರಾಣನೇ ಉದ್ಗಾನ ಮಾಡುವುದರಿಂದ ಅಯಾಸ್ಯಾದಿ ಶಬ್ದಗಳನ್ನು ಪ್ರಾಣಪರವಾಗಿ ಇಷ್ಟರವರೆಗೆ ನಿರ್ವಚನ ಮಾಡಿ, ಈಗ ಪ್ರಾಣನೇ ಅಯಾಸ್ಯಾದಿಗಳಲ್ಲಿದ್ದು ಉದ್ಗಾನ ಮಾಡುವನೆಂಬುದು ಹೇಗೆ ಸಿದ್ಧವಾಗುತ್ತದೆಂಬ ವಿಷಯದಲ್ಲಿ ಬ್ರಹ್ಮದತ್ತನು ಶಪಥಪೂರ್ವಕವಾಗಿ ಸಮರ್ಥನೆ ಮಾಡಿದ ವೃತ್ತಾಂತವನ್ನು ಹೇಳಲಾಗುತ್ತದೆ.

**ಭಾಷ್ಯ**—**ಅಯಾಸ್ಯೋ ವಿಶ್ವಸೃಗ್ಯಜ್ಞೇ ತೇನಾಽವಿಷ್ಟೋಽನ್ವಗಾಯತ ।**

**ಅನುವಾದ**—ಅಯಾಸ್ಯಮುನಿಯು ಅರ್ಧನಾರೀ ನರರೂಪನಾದ ಪ್ರಾಣನಿಂದ ಆವಿಷ್ಟನಾಗಿ, ಬ್ರಹ್ಮದೇವರ ಯಜ್ಞದಲ್ಲಿ ಸಾಮಗಾನ ಮಾಡಿದನು.

**ಸಾಮಗಾನಸ್ವರ ಮುಖ್ಯಪ್ರಾಣನ ಅಧೀನ :**

**ಉಪನಿಷತ್**—**ತಸ್ಯ ಹೈತಸ್ಯ ಸಾಮ್ನೋ ಯಃ ಸ್ವಂ ವೇದ ಭವತಿ ಹಾಸ್ಯ ಸ್ವಂ । ತಸ್ಯ ವೈ ಸ್ವರ ಏವ ಸ್ವಂ । ತಸ್ಮಾದಾರ್ತ್ವಿಜ್ಯಂ ಕರಿಷ್ಯನ್ ವಾಚಿ ಸ್ವರಮಿಚ್ಛೇತ । ತಯಾ ವಾಚಾ ಸ್ವರಸಂಪನ್ನಯಾಽಽರ್ತ್ವಿಜ್ಯಂ ಕುರ್ಯಾತ್ ।**

**ತಸ್ಮಾದ್ಯಜ್ಞೇ ಸ್ವರವಂತಂ ದಿದೃಕ್ಷಂತ ಏವ । ಅಥೋ ಯಸ್ಯ ಸ್ವಂ ಭವತಿ । ಭವತಿ ಹಾಸ್ಯ ಸ್ವಂ ಯ ಏವಮೇತತ್ ಸಾಮ್ನಃ ಸ್ವಂ ವೇದ ।**

ಅರ್ಧನಾರೀನರರೂಪನಾದ ಪ್ರಾಣನ ಗೃಹಕೋಶಸುವರ್ಣಾದ್ಯಭಿಮಾನಿರೂಪ ವನ್ನು ತಿಳಿದ ಉಪಾಸಕನಿಗೆ ಗೃಹಕೋಶಸುವರ್ಣಾದಿವಿತ್ತ ಲಭಿಸುತ್ತದೆ. ಗೃಹ ಕೋಶಾದಿಗಳ ಅಭಿಮಾನಿಯಾದ ಪ್ರಾಣನ ರೂಪವು ಉದ್ಗಾತೃವಿನ ಸ್ವರದಲ್ಲಿ ಸನ್ನಿಹಿತವಾಗಿದೆ. ಆ ಕಾರಣದಿಂದಲೇ ಉದ್ಗಾತೃಕರ್ಮವಾದ ಸಾಮಗಾನವನ್ನು ಮಾಡು ವವನು ವಾಕ್ಕಿನಲ್ಲಿ ಸ್ವರವನ್ನು ಇಚ್ಛಿಸಬೇಕು. ಅದರಿಂದಲೇ ಯಾಗಕರ್ತೃಗಳೂ ಯಾಗದಲ್ಲಿ ಉದ್ಗಾತೃವಾಗಿ ವರಿಸಲು ಅಯಾಸ್ಯಾದಿ ಮಹರ್ಷಿಗಳು ಸಿಗದಿದ್ದಲ್ಲಿ ಬೇರೆ ಯಾರಾದರೂ ಒಳ್ಳೆಯ ಸ್ವರ ಉಳ್ಳವನನ್ನೇ ನಿರೀಕ್ಷಿಸುತ್ತಾರೆ. ಏಕೆಂದರೆ ಗೃಹ ಕೋಶಾದ್ಯಭಿಮಾನಿರೂಪಉಳ್ಳ ಸ್ವರದಿಂದ ಕೂಡಿದ ಉದ್ಗಾತೃವಿನ ಸಾಮಗಾನದಿಂದ ಯಾಗಕರ್ತನಿಗೆ ಗೃಹಕೋಶಾದಿ ಲಭಿಸುವುದು. ಅರ್ಧನಾರೀನರರೂಪನಾದ ಪ್ರಾಣನ ಗೃಹಕೋಶಾದ್ಯಭಿಮಾನಿರೂಪವನ್ನು ತಿಳಿದ ಉಪಾಸಕನಿಗೇ ಗೃಹಕೋಶಾದಿ ಲಭಿಸು ತ್ತದೆ.

**ಉಪನಿಷತ್—ತಸ್ಯ ಹೈತಸ್ಯ ಸಾಮ್ನೋ ಯಃ ಸುವರ್ಣಂ ವೇದ ಭವತಿ ಹಾಸ್ಯ ಸುವರ್ಣಂ । ತಸ್ಯ ವೈ ಸ್ವರ ಏವ ಸುವರ್ಣಂ । ಭವತಿ ಹಾಸ್ಯ ಸುವರ್ಣಂ ಯ ಏವಮೇತತ್ ಸಾಮ್ನಃ ಸುವರ್ಣಂ ವೇದ ।**

ಯಾರು ಅರ್ಧನಾರೀನರರೂಪನಾದ ಪ್ರಾಣನ ಸುವರ್ಣಾಭಿಮಾನಿಯಾದ ರೂಪವನ್ನು ತಿಳಿಯುತ್ತಾನೆಯೋ ಅವನಿಗೆ ಸುವರ್ಣ ಲಭಿಸುತ್ತದೆ. ಸುವರ್ಣಾಭಿ ಮಾನಿಯಾದ ಪ್ರಾಣನ ರೂಪವೇ ಉದ್ಗಾತೃವಿನ ಸ್ವರಕ್ಕೂ ಅಭಿಮಾನಿಯಾಗಿದೆ. ಯಾರು ಅರ್ಧನಾರೀನರರೂಪನಾದ ಪ್ರಾಣನ ಈ ಸುವರ್ಣಾಭಿಮಾನಿ ರೂಪವನ್ನು ತಿಳಿಯುತ್ತಾನೆಯೋ ಅವನಿಗೆ ಸುವರ್ಣವು ಲಭಿಸುತ್ತದೆ.

**ಭಾಷ್ಯ—ಗೃಹಕೋಶಾದಿಕಂ ಯತ್ ಸ್ವಂ ತದ್ರೂಪ್ಯಸ್ಯ ಸ್ವರೇ ಸ್ಥಿತಃ । ಭೂಷಣಸ್ವರ್ಣರೂಪೀ ಚ ಸ ಏವಾಪಿ ಸ್ವರೇ ಸ್ಥಿತಃ ।**

**ಅನುವಾದ**—ಗೃಹಕೋಶಾದಿ ಸ್ವತ್ತುಗಳಿಗೆ ಅಭಿಮಾನಿಯಾದ ಪ್ರಾಣನು ಉದ್ಗಾತೃವಿನ ಸ್ವರದಲ್ಲಿ ಸನ್ನಿಹಿತನಾಗಿದ್ದಾನೆ. ಆ ಪ್ರಾಣನೆ ಭೂಷಣ ಸ್ವರ್ಣಾಭಿ ಮಾನಿಯಾಗಿಯೂ ಸ್ವರದಲ್ಲಿ ಇದ್ದಾನೆ.

**ಉಪನಿಷತ್-ತಸ್ಯ ಹೈತಸ್ಯ ಸಾಮ್ನೋ ಯಃ ಪ್ರತಿಷ್ಠಾಂ ವೇದ ಪ್ರತಿ ಹ ತಿಷ್ಠತಿ।**

**ತಸ್ಯ ವೈ ವಾಗೇವ ಪ್ರತಿಷ್ಠಾ । ವಾಚಿ ಹಿ ಖಲ್ವೇಷ ಏತತ್ ಪ್ರಾಣಃ ಪ್ರತಿಷ್ಠಿತೋ ಗೀಯತೇ। ಅನ್ನ ಇತ್ಯುಹೈಕ ಆಹುಃ ।**

ಯಾರು ಸಾಮಸಾಧಕನಾದ ಪ್ರಾಣನ ಪೀಠವನ್ನು ತಿಳಿಯುತ್ತಾನೆಯೋ ಅವನು ಪ್ರತಿಷ್ಠಿತನಾಗುತ್ತಾನೆ. ಗಾನಕಾಲದಲ್ಲಿ ವಾಗಿಂದ್ರಿಯವೇ ಪ್ರಾಣನ ಪೀಠ. ಏಕೆಂದರೆ ಗಾನಕಾಲದಲ್ಲಿ ಪ್ರಾಣನು ವಾಗಿಂದ್ರಿಯದಲ್ಲಿ ಪ್ರತಿಷ್ಠಿತನಾಗಿರುತ್ತಾನೆ. ಬೇರೆಯ ಕಾಲದಲ್ಲಿ ಪ್ರಾಣನು ಅನ್ನದಲ್ಲಿ ಪ್ರತಿಷ್ಠಿತನಾಗಿರುತ್ತಾನೆ ಎಂದು ಕೆಲವರು ಹೇಳುತ್ತಾರೆ.

**ಭಾಷ್ಯ—ವಾಗಿಂದ್ರಿಯಂ ಪೀಠರೂಪಂ ತಸ್ಯ ಪ್ರಾಣಸ್ಯ ಸಂಸ್ಥಿತಮ್ ।**
**ಗಾನಕಾಲೇಽನ್ಯದಾ ತ್ವನ್ನಂ ಪ್ರಾಣಪೀಠಮಿತಿ ಸ್ಮೃತಂ ॥**

**ಅನುವಾದ**—ಪ್ರಾಣನಿಗೆ ಗಾನಕಾಲದಲ್ಲಿ ವಾಗಿಂದ್ರಿಯವು ಪೀಠರೂಪವಾಗಿದೆ. ಬೇರೆ ಕಾಲದಲ್ಲಿ ಅನ್ನವು ಪ್ರಾಣನಿಗೆ ಆಧಾರವಾಗಿರುತ್ತದೆ.

**'ತಮಸೋ ಮಾ ಜ್ಯೋತಿರ್ಗಮಯ' ಮಂತ್ರಾರ್ಥ :**

**ಉಪನಿಷತ್—ಅಥಾತಃ ಪವಮಾನಾನಾಮೇವಾಭ್ಯಾರೋಹಃ । ಸ ವೈ ಖಲು ಪ್ರಸ್ತೋತಾ ಸಾಮ ಪ್ರಸ್ತೌತಿ । ಸ ಯತ್ರ ಪ್ರಸ್ತುಯಾತ್ ತದೇತಾನಿ ಜಪೇತ್–**

**'ಅಸತೋ ಮಾ ಸದ್ ಗಮಯ ।**
**ತಮಸೋ ಮಾ ಜ್ಯೋತಿರ್ಗಮಯ ।**
**ಮೃತ್ಯೋರ್ಮಾಽಮೃತಂ ಗಮಯೇ'ತಿ ।**

**ಸ ಯದಾ ಹಾ'ಸತೋ ಮಾ ಸದ್ಗಮಯೇ'ತಿ । ಮೃತ್ಯುರ್ವಾ ಅಸತ್। ಸದಮೃತಂ । ಮೃತ್ಯೋರ್ಮಾಽಮೃತಂ ಗಮಯ । ಅಮೃತಂ ಮಾ ಕುರ್ವಿತ್ಯೇವೈತದಾಹ। 'ತಮಸೋ ಮಾ ಜ್ಯೋತಿರ್ಗಮಯೇ'ತಿ । ಮೃತ್ಯುರ್ವೈ ತಮಃ। ಜ್ಯೋತಿರಮೃತಂ । ಮೃತ್ಯೋರ್ಮಾಽಮೃತಂ ಗಮಯ । ಅಮೃತಂ ಮಾ ಕುರ್ವಿತ್ಯೇವೈತದಾಹ । ಮೃತ್ಯೋರ್ಮಾಽಮೃತಂ ಗಮಯೇತಿ ನಾತ್ರ ತಿರೋಹಿತಮಿವಾಸ್ತಿ ।**

ಮುಖ್ಯಪ್ರಾಣನಿಗೆ ಇಷ್ಟು ಮಹಿಮೆ ಇರುವುದರಿಂದಲೂ, ಪರಮಾತ್ಮನ ಅನುಗ್ರಹವಿರುವುದರಿಂದಲೂ, ಮುಖ್ಯಪ್ರಾಣ ಪದವಿಗೆ ಯೋಗ್ಯರಾದವರೇ ಮೋಕ್ಷದಲ್ಲಿ ಇತರ ಎಲ್ಲ ಮುಕ್ತರಿಗಿಂತ ಅತ್ಯಂತ ಉನ್ನತವಾದ ಸ್ಥಾನವನ್ನೇರುತ್ತಾರೆ. ಅಯಾಸ್ಯಾದಿ ಮುನಿಗಳು ಪ್ರಾಣನ ಪ್ರೇರಣೆಯಿಂದಲೇ ಸಾಮಗಾನ ಮಾಡುವುದರಿಂದ, ವಾಯು

ಪದಯೋಗ್ಯನೇ ಸಾಮಗಾನಕ್ಕೆ ಯೋಗ್ಯ. ಅವನೇ ಹಾಡುತ್ತಾನೆ. ಸಾಮಗಾನ ಮಾಡಲು ಉಪಕ್ರಮಿಸಿದಾಗ ಅವನು 'ಅಸತೋ ಮಾ ಸದ್ಗಮಯ, ತಮಸೋ ಮಾ ಜ್ಯೋತಿರ್ಗಮಯ, ಮೃತ್ಯೋರ್ಮಾಽಮೃತಂ ಗಮಯ' ಎಂಬ ಪ್ರಾರ್ಥನೆಯನ್ನು ಉಚ್ಚರಿಸುತ್ತಾನೆ. ಆ ಪ್ರಾರ್ಥನೆಯಲ್ಲಿ ಅಸತೋ ಮಾ ಸದ್ಗಮಯ ಎಂಬಲ್ಲಿ ಅಸತ್ ಎಂದರೆ ದುಃಖರೂಪವಾದ ಮೃತ್ಯು. ಸತ್ ಎಂದರೆ ಆನಂದರೂಪವಾದ ಅಮೃತ. 'ನನ್ನನ್ನು ದುಃಖದಿಂದ ಆನಂದದ ಕಡೆಗೆ ತೆಗೆದುಕೊಂಡು ಹೋಗು. ನನ್ನನ್ನು ಸುಖಿಯನ್ನಾಗಿ ಮಾಡು' ಎಂದೇ ಹೇಳುತ್ತಾನೆ. ತಮಸೋ ಮಾ ಜ್ಯೋತಿರ್ಗಮಯ ಎಂಬಲ್ಲಿ ತಮಸ್ಸು ಎಂದರೆ ಅಜ್ಞಾನ ರೂಪವಾದ ಮೃತ್ಯು. ಜ್ಯೋತಿ ಎಂದರೆ ಜ್ಞಾನರೂಪವಾದ ಅಮೃತ. 'ಅಜ್ಞಾನದಿಂದ ನನ್ನನ್ನು ಜ್ಞಾನದ ಕಡೆಗೆ ಕರೆದು ಕೊಂಡು ಹೋಗು' ಎಂದೇ ಹೇಳುತ್ತಾನೆ. 'ಮೃತ್ಯೋರ್ಮಾಽಮೃತಂ ಗಮಯ, ಮರಣದಿಂದ ಮೋಕ್ಷಕ್ಕೊಯ್ಯು'ಎಂಬಲ್ಲಿ ಅಸ್ಪಷ್ಟವಾಗಿರುವ ಅಂಶ ಯಾವುದೂ ಇಲ್ಲ.

**ಉಪನಿಷತ್—ಅಥ ಯಾನೀತರಾಣಿ ಸ್ತೋತ್ರಾಣಿ ತೇಷ್ವಾತ್ಮನೇಽನ್ನಾದ್ಯಮಾಗಾಯೇತ್ । ತಸ್ಮಾದು ತೇಷು ವರಂ ವೃಣೀತ ಯಂ ಕಾಮಂ ಕಾಮಯತೇ ತಂ । ಸ ಏಷ ಏವಂವಿದುದ್ಗಾತಾ ಆತ್ಮನೇ ವಾ ಯಜಮಾನಾಯ ವಾ ಯಂ ಕಾಮಂ ಕಾಮಯತೇ ತಮಾಗಾಯತಿ । ತದ್ಧೈತಲ್ಲೋಕಜಿದೇವ । ನ ಹೈವಾಲೋಕ್ಯತಾಯಾ ಆಶಾಸ್ತಿ ಯ ಏವಮೇತತ್ ಸಾಮ ವೇದ ॥**

**॥ ಇತಿ ಉದ್ಗೀಥ ಬ್ರಾಹ್ಮಣಂ ॥**

ವಾಯುಪದವಿಗೆ ಯೋಗ್ಯನು ಈ ಮೂರುಮಂತ್ರಗಳನ್ನೂ ಪ್ರಸ್ತಾವಸಾಮ ಮಂತ್ರವನ್ನೂ ಬಿಟ್ಟು ಬೇರೆ ಋಕ್ಕುಗಳಲ್ಲಿ ಸಾಮಗಾನ ಮಾಡುತ್ತಿರುವಾಗ ಯಜಮಾನನು ತನಗೆ ತನ್ನ ಅಭೀಷ್ಟಗಳನ್ನು ಆಶಿಸಬೇಕು. ಆ ಅಭೀಷ್ಟಗಳನ್ನು ಸಾಮಗಾನ ಬಲದಿಂದ ಕೊಡಿಸಲು ವಾಯುಪದ ಯೋಗ್ಯನಾದ ಜೀವನು ಸಮರ್ಥನಾದುದರಿಂದಲೇ ಅಂತಹವನು ಸಾಮಗಾನ ಮಾಡುವಾಗ ಯಜಮಾನನು ತನಗೆ ಬೇಕಾದ ಅಭೀಷ್ಟಗಳನ್ನೆಲ್ಲಾ ಬೇಡಬೇಕು. ಈ ಮೂರುಮಂತ್ರಗಳ ಅರ್ಥವನ್ನು ತಿಳಿದಿರುವ ವಾಯುಪದಯೋಗ್ಯನಾದ ಜೀವನು ಯಜಮಾನನಿಗೂ ತನಗೂ ಯಾವ ಯಾವ ಅಭೀಷ್ಟಗಳನ್ನು ಬಯಸುವನೋ ಆ ಅಭೀಷ್ಟಗಳನ್ನೆಲ್ಲ ಸಾಮಗಾನವು ತಂದುಕೊಡಬಲ್ಲದು. ಯಜಮಾನನು ಅಂತಹ ಉದ್ಗಾತೃವಿನಿಂದ ಐಹಿಕ ಸುಖವನ್ನು ಮಾತ್ರವಲ್ಲ, ಪರಲೋಕಸುಖವನ್ನೂ ಪಡೆಯುತ್ತಾನೆ. ಯಾರು ಹೀಗೆ ಸಾಮನಾಮಕ

ಪ್ರಾಣನನ್ನು ತಿಳಿಯುವನೋ ಅವನಿಗೆ ಇಷ್ಟಲೋಕ ಪ್ರಾಪ್ತಿಯಾಗದಿರಲಿ ಎಂದು ಶತ್ರುಗಳು ಆಸೆ ಮಾಡಲೂ ಸಾಧ್ಯವಿಲ್ಲ.

**ಶರೀರ ಶುಭಲಕ್ಷಣಗಳು :**

**ಭಾಷ್ಯ—ಪವಮಾನಾ ಇತಿ ಪ್ರೋಕ್ತಾ ಮುಖ್ಯವಾಯುತ್ವ ಯೋಗಿನಃ ।**
**ಅನಾದಿಕಾಲಸಂಬದ್ಧಾ ಯೋಗ್ಯತಾ ಸಾ ಪ್ರಕೀರ್ತಿತಾ ।**
**ಸರ್ವಾಧಿಕ್ಯಾರೋಹಣಂ ತು ತೇಷಾಮೇವ ವಿಮುಕ್ತಿಗಮ್ ।**
**ಪ್ರಸ್ತಾವಕಾಲೇ ಪ್ರಸ್ತೋತುಂ ಯೋಗ್ಯೋ ವಾಯುಪದಸ್ಯ ಯಃ।**
**ಜಪೇದ್ ಯಜೂಂಷಿ ತ್ವೇತಾನಿ ತ್ರೀಣಿ ವಿಷ್ಣುಂ ಸದಾ ಸ್ಮರನ್ ।**
**ಅಸತೋ ಮಾ ಸದಿತ್ಯಾದಿ ವಿಷ್ಣುಪ್ರಾರ್ಥನಭಾಂಜಿ ಚ ।**
**ದ್ವಾತ್ರಿಂಶಲ್ಲಕ್ಷಣೈಃ ಸಮ್ಯಗ್ ಯುಕ್ತಾ ವಾಯುತ್ವಯೋಗ್ಯಕಾಃ ।**
**ನಿಯಮೇನೈವ ವಿಷ್ಣೋಸ್ತು ಪ್ರಾದುರ್ಭಾವಾ ವಿಶೇಷತಃ ।**
**ಸಹಸ್ರಾರೇಣ ಚಕ್ರೇಣ ಚಿಹ್ನಿತಾ ದಕ್ಷಿಣೇ ಕರೇ ।**
**ಗದಯಾಽಷ್ಟಾಶ್ರಯಾ ಚೈವ ಶತಾವರ್ತೇನ ಕಂಬುನಾ ।**
**ವಾಮೇ ಕರೇ ತಥಾಽಬ್ಜೇನ ಸಹಸ್ರದಲಶೋಭಿನಾ ।**
**ಅಷ್ಟಾವಿಂಶಲ್ಲಕ್ಷಣಾಶ್ಚ ಗಿರೀಶಪದಯೋಗಿನಃ ।**
**ಚತುರ್ವಿಂಶತಿಮಾರಭ್ಯ ಷೋಡಶಾದಾ ಸುರಾಃ ಸ್ಮೃತಾಃ ।**
**ಆಽಷ್ಟಕಾದೃಷಯಃ ಪ್ರೋಕ್ತಾಸ್ತದೂನಾಶ್ಚಕ್ರವರ್ತಿನಃ ।**

**ಅನುವಾದ**—ಮುಖ್ಯಪ್ರಾಣಪದವಿಗೆ ಯೋಗ್ಯರಾದ ಜೀವರಿಗೆ ಪವಮಾನರು ಎಂದು ಹೆಸರು. ಆ ಯೋಗ್ಯತೆಯು ಅವರಲ್ಲಿ ಅನಾದಿಕಾಲದಿಂದಲೂ ಇದೆ. ಮೋಕ್ಷದಲ್ಲಿ ತಮ್ಮ ಜೊತೆಯಲ್ಲಿ ಮುಕ್ತರಾದ ಎಲ್ಲರಿಗಿಂತಲೂ ಉನ್ನತಸ್ಥಾನವನ್ನು ಅವರೇ ಪಡೆಯುತ್ತಾರೆ. ವಾಯುಪದಯೋಗ್ಯನಾಗಿದ್ದು ಸಾಮಗಾನ ಮಾಡಲು ಯೋಗ್ಯನಾದವನು ಸಾಮಗಾನಕಾಲದಲ್ಲಿ ವಿಷ್ಣುಪ್ರಾರ್ಥನಾರೂಪವಾದ 'ಅಸತೋ ಮಾ ಸದ್ಗಮಯ' ಎಂದು ಮುಂತಾದ ಮೂರು ಮಂತ್ರಗಳನ್ನು ಸದಾ ವಿಷ್ಣು ಸ್ಮರಣಪೂರ್ವಕವಾಗಿಯೇ ಜಪಿಸಬೇಕು. ಶರೀರದಲ್ಲಿ ಸರಸ್ವತೀದೇವಿಗಿಂತ ಸ್ಪಷ್ಟವಾಗಿ ಮೂವತ್ತೆರಡು ಶುಭಲಕ್ಷಣಗಳುಳ್ಳವರು ವಾಯುಪದಯೋಗ್ಯರೇ ಆಗಿರುತ್ತಾರೆ. ಪರಮಾತ್ಮನ ರಾಮಕೃಷ್ಣಾದಿ ಅವತಾರಗಳಲ್ಲಿರುವ ಮೂವತ್ತೆರಡು ಲಕ್ಷಣಗಳು ವಾಯುದೇವರ ಶರೀರದ ಲಕ್ಷಣಗಳಿಗಿಂತಲೂ ಅತ್ಯಂತ ಸ್ಪಷ್ಟವಾಗಿರುತ್ತವೆ. ಮತ್ತು ಪರಮಾತ್ಮನ ಶರೀರದ ಬಲಗೈಯಲ್ಲಿ ಸಹಸ್ರ ಅಲಗುಗಳಿಂದ ಕೂಡಿದ ಚಕ್ರದ ಚಿಹ್ನೆಯೂ, ಎಂಟು ಅಂಚುಗಳಿಂದ ಕೂಡಿದ ಗದೆಯ ಚಿಹ್ನೆಯೂ ಇರುತ್ತವೆ. ಎಡಗೈಯಲ್ಲಿ ನೂರು ಸುತ್ತುಗಳಿಂದ ಕೂಡಿದ ಶಂಖದ ಚಿಹ್ನೆಯೂ ಸಹಸ್ರದಳಗಳಿಂದ

ಶೋಭಿಸುವ ಪದ್ಮದ ಚಿಹ್ನೆಯೂ ಇರುತ್ತವೆ. ರುದ್ರಪದಕ್ಕೆ ಯೋಗ್ಯರಾದವರು ಶರೀರದಲ್ಲಿ ಇಪ್ಪತ್ತೇಳು ಲಕ್ಷಣಯುಕ್ತರಾಗಿದ್ದಾರೆ. ಉಳಿದ ದೇವತೆಗಳ ಶರೀರದಲ್ಲಿ ಲಕ್ಷಣಗಳು ತಾರತಮ್ಯಕ್ಕೆ ಅನುಗುಣವಾಗಿ ಇಪ್ಪತ್ತನಾಲ್ಕರಿಂದ ಹದಿನಾರರವರೆಗೂ ಋಷಿಗಳ ಶರೀರದಲ್ಲಿ ಹದಿನಾರರಿಂದ ಎಂಟರವರೆಗೂ ಇರುತ್ತವೆ. ಚಕ್ರವರ್ತಿಗಳಿಗೆ ಇನ್ನೂ ಕಡಿಮೆ ಲಕ್ಷಣಗಳಿರುತ್ತವೆ.

**ಭಾಷ್ಯ—ಅಸದ್ ದುಃಖಾತ್ಮಕೋ ಮೃತ್ಯುಃ ಸದಾನಂದಾಮೃತಂ ಸ್ಮೃತಮ್ ।**
**ತಮೋಽಜ್ಞಾನಾತ್ಮಕೋ ಮೃತ್ಯುಃ ಜ್ಯೋತಿರ್ಜ್ಞಾನಾಮೃತಂ ಮತಂ।**
**ಮೃತ್ಯೋರ್ಮಾಽಮೃತಮಿತ್ಯತ್ರ ಮೃತ್ಯುರ್ಮರಣಮೇವ ಚ ।**
**ಏವಂವಿದ್‌ವಾಯುಪದಯೋಗ್ಯಾ ಉದ್ಗಾತಾರ ಏವ ತು ।**
**ಯದಾ ಭವೇಯುಸ್ತೇಷು ತದಾ ಯಾಜೀ ತು ವೃಣುಯಾದ್ ವರಂ।**
**ಆತ್ಮನೇ ಯಾಜಿನೇ ವಾಪಿ ಹ್ಯುದ್ಗಾತೈವಂವಿಧೋ ಯದಿ ।**
**ಆಗಾಯೇತ್ ತದ್ ಭವೇನ್ನಾತ್ರ ಕಾರ್ಯಾಽಭೀಷ್ಟೇ ವಿಚಾರಣಾ ।**
**ಏವಂ ತಂ ಸಾಮನಾಮಾನಂ ವಾಯುಂ ಯೋ ವೇದ ಸಾದರಂ।**
**ತಸ್ಯೇಷ್ಟಲೋಕರಾಹಿತ್ಯೇ ನಾಽಶಾ ಕಾರ್ಯಾಽರಿಣಾ ಕ್ವಚಿತ್ ।**
**ತಸ್ಮಾದ್ ವಾಯುತ್ವಯೋಗ್ಯೈರ್ಹಿ ಯೇಷಾಂ ಲೋಕಾಃ ಪ್ರಕೀರ್ತಿತಾಃ ।**
**ತೇಷಾಮಲೋಕಶಂಕಾ ಚ ನೈವ ಕಾರ್ಯಾ ಕದಾಚನ ।**
**ಯಸ್ಮಾನ್ನಾರಾಯಣಸ್ಯಾತಿಪ್ರಿಯಾಃ ಪ್ರಾಣತ್ವಯೋಗಿನಃ ।**
**ಇತ್ಯಾದಿ ಮಹಾಸಂಹಿತಾಯಾಮ್॥**

**ಅನುವಾದ**—ಅಸತ್ ಎಂದರೆ ದುಃಖಾತ್ಮಕವಾದ ಮೃತ್ಯು. ಸದ್ ಎಂದರೆ ಆನಂದಾತ್ಮಕವಾದ ಅಮೃತ. ತಮಸ್ ಎಂದರೆ ಅಜ್ಞಾನಾತ್ಮಕವಾದ ಮೃತ್ಯು. ಜ್ಯೋತಿ ಎಂದರೆ ಜ್ಞಾನಾತ್ಮಕವಾದ ಅಮೃತ. 'ಮೃತ್ಯೋರ್ಮಾ ಅಮೃತಂ' ಎಂಬಲ್ಲಿ ಮೃತ್ಯು ಎಂದರೆ ಮರಣವೇ, ಅಮೃತ ಎಂದರೆ ಮೋಕ್ಷವೇ. ಹೀಗೆ ಮಂತ್ರಾರ್ಥವನ್ನು ತಿಳಿದ ವಾಯುಪದವಿಯೋಗ್ಯರು ಉದ್ಗಾತೃಗಳಾಗಿ ದೊರೆತಾಗ ಯಜಮಾನನು ಅವರಲ್ಲಿ ಅಭೀಷ್ಟವನ್ನು ಬಯಸಬೇಕು. ಏಕೆಂದರೆ ಇಂತಹ ಉದ್ಗಾತೃವು ತನಗಾಗಲೀ ಯಜಮಾನನಿಗಾಗಲೀ ಸಾಮಗಾನ ಮಾಡಿದರೆ ಫಲವು ದೊರೆತೇ ದೊರೆಯುತ್ತದೆ. ಇದರಲ್ಲಿ ಸಂಶಯಪಡಬೇಕಾಗಿಲ್ಲ. ಹೀಗೆ ಆ ಸಾಮನಾಮಕ ಪ್ರಾಣನನ್ನು ಭಕ್ತಿಯಿಂದ ಉಪಾಸನೆ ಮಾಡುವವನಿಗೆ ಕೂಡಾ ಇಷ್ಟಲೋಕ ಪ್ರಾಪ್ತಿಯಾಗದಿರಲಿ ಎಂದು ಆವನ ಶತ್ರುವು ಆಸೆ ಮಾಡುವಂತಿಲ್ಲ. ಹೀಗಿರುವಾಗ

ವಾಯುಪದವಿ ಯೋಗ್ಯರು ಸಾಮಗಾನ ಮಾಡುವಾಗ ಯಾರಿಗೆ ಉತ್ತಮಲೋಕ ಪ್ರಾಪ್ತವಾಗಲೆಂದು ಹೇಳುವರೋ ಅವರಿಗೆ ಉತ್ತಮ ಲೋಕಪ್ರಾಪ್ತಿಯಾಗದಿರಲಿ ಎಂದು ಯಾರೂ ಎಂದೂ ಆಸೆಮಾಡುವಂತಿಲ್ಲವೆಂದು ಬೇರೆ ಹೇಳಬೇಕಾಗಿಲ್ಲ. ಏಕೆಂದರೆ ವಾಯುಪದವಿಯೋಗ್ಯರು ನಾರಾಯಣನಿಗೆ ಅತ್ಯಂತ ಪ್ರಿಯರಾದವರು ಎಂದು ಮುಂತಾಗಿ ಮಹಾಸಂಹಿತೆ ಎಂಬ ಗ್ರಂಥದಲ್ಲಿ ಹೇಳಿದೆ.

**ಭಾಷ್ಯ—ಆಸ್ಯಾದಯತ ಇತ್ಯಯಾಸ್ಯಃ । ಪ್ರಸಿದ್ಧಮೃತ್ಯ್ವಮೃತತ್ವಾನ್ನಾತ್ರ ತಿರೋಹಿತಮಿವಾಸ್ತಿ । ಏಷ ಉದ್ಗಾತೇತಿ ವಾಯುತ್ವಯೋಗ್ಯಃ । ತದ್ಧೈತಲ್ಲೋಕಜಿದೇವೇತಿ ತಸ್ಮಾದ್ ವರಾಭಿಯಾಚನಮ್ ।**

**॥ ಇತಿ ಉದ್ಗೀಥ ಬ್ರಾಹ್ಮಣಂ ॥**

**ಅನುವಾದ**—ಉಪನಿಷತ್ತಿನಲ್ಲಿ ಆಂಗಿರಸ ಶಬ್ದದ ಅರ್ಥ ವಿವರಣೆ ಮಾಡಿದರೂ ಅದರ ಜೊತೆಗೇ ಇರುವ ಅಯಾಸ್ಯಶಬ್ದದ ಅರ್ಥ ವಿವರಣೆ ಮಾಡಿಲ್ಲ. ಆಸ್ಯ– ಮುಖ ದಿಂದ, ಅಯತೇ– ಬರುತ್ತಾನೆ ಎಂಬ ಕಾರಣದಿಂದ ಪ್ರಾಣನಿಗೆ ಅಯಾಸ್ಯ ಎಂದು ಹೆಸರು ಎಂದು ತಿಳಿಯಬೇಕು. ಮೃತ್ಯೋರ್ಮಾ ಅಮೃತಂ ಗಮಯ ಎಂಬಲ್ಲಿ ಮೃತ್ಯು ಅಮೃತ ಪದಗಳು ಮರಣ ಮತ್ತು ಮೋಕ್ಷಗಳೆಂಬ ಪ್ರಸಿದ್ಧಾರ್ಥವನ್ನೇ ಹೇಳುವುದರಿಂದ ಇಲ್ಲಿ ಅಸ್ಪಷ್ಟವಾದಂತಿರುವ ಅಂಶವು ಯಾವುದೂ ಇಲ್ಲ ಎಂದು ಉಪನಿಷತ್ತು ಹೇಳುತ್ತಿದೆ. 'ಏಷ ಉದ್ಗಾತಾ' ಎಂಬಲ್ಲಿ ಏಷ ಎಂದರೆ ಪ್ರಾಣೋ ಪಾಸಕನಲ್ಲ, ವಾಯುಪದಯೋಗ್ಯ ಎಂದೇ ಅರ್ಥ. 'ತಸ್ಮಾದು ತೇಷು ವರಂ ವೃಣೀತ' ಎಂದರೆ,ಯಜಮಾನನು ವಾಯುಪದಯೋಗ್ಯ ಉದ್ಗಾತೃವಿನಿಂದ ಅಪೇಕ್ಷಿತ ವಾದ ಲೋಕವನ್ನು ಪಡೆದೇ ಪಡೆಯುತ್ತಾನೆ ಎಂಬ ಕಾರಣದಿಂದ ಅವರಿಂದ ವರ ವನ್ನು ಬೇಡಬೇಕು ಎಂದರ್ಥ.

ಇಲ್ಲಿಗೆ ಉದ್ಗೀಥ ಬ್ರಾಹ್ಮಣ ಮುಗಿಯಿತು ॥

**ಚತುರ್ಮುಖನ ನಾಮಗಳು :**

**ಉಪನಿಷತ್—ಆತ್ಮೈವೇದಮಗ್ರ ಆಸೀತ್ । ಪುರುಷವಿಧಃ । ಸೋಽನುವೀಕ್ಷ್ಯ ನಾನ್ಯದಾತ್ಮನೋಽಪಶ್ಯತ್ । ಸೋಽಹಮಸ್ಮೀತ್ಯಗ್ರೇ ವ್ಯಾಹರತ್ । ತತೋಽಹಂನಾಮಾಽಭವತ್ । ತಸ್ಮಾದಪ್ಯೇತರ್ಹ್ಯಾಮಂತ್ರಿತೋಽ– ಹಮಯಮಿತ್ಯೇವಾಗ್ರ ಉಕ್ತ್ವಾಽಥಾನ್ಯನ್ನಾಮ ಪ್ರಬ್ರೂತೇ ಯದಸ್ಯ ಭವತಿ । ಸ ಯತ್ ಪೂರ್ವೋಽಸ್ಮಾತ್ ಸರ್ವಸ್ಮಾತ್, ಸರ್ವಾನ್ ಪಾಪ್ಮನ ಔಷತ್ ತಸ್ಮಾತ್ ಪುರುಷಃ । ಓಷತಿ ಹ ವೈ ಸ ತಂ ಯೋಽಸ್ಮಾತ್ ಪೂರ್ವೋ ಬುಭೂಷತಿ ಯ ಏವಂ ವೇದ ॥**

ಈ ಜಗತ್ತಿನ ಸೃಷ್ಟಿಗಿಂತ ಮೊದಲು ಪರಮಾತ್ಮನೊಬ್ಬನೇ ಇದ್ದನು. ಅವನಿಂದ ಅವನಿಗೆ ಸದೃಶನಾದ ಬ್ರಹ್ಮನು ಜನಿಸಿದನು. ಆ ಬ್ರಹ್ಮನು ಎಲ್ಲ ದಿಕ್ಕುಗಳನ್ನೂ ನೋಡಿದರೂ ತನಗಿಂತ ಬೇರೆ ಯಾವುದೂ ಕಾಣಲಿಲ್ಲ. ಅನಿತ್ಯವಾದ ದೇಹೇಂದ್ರಿಯಾದಿಗಳೆಲ್ಲವನ್ನೂ ತ್ಯಜಿಸಲು ಸಾಧ್ಯವಾದರೂ ತನ್ನ ಸ್ವರೂಪವನ್ನು ತಾನು ಬಿಟ್ಟಿರಲು ಸಾಧ್ಯವಿಲ್ಲ ಎಂಬ ಅರ್ಥವನ್ನು ಮನಸ್ಸಿನಲ್ಲಿಟ್ಟುಕೊಂಡು ಬ್ರಹ್ಮನು ಅಹಮಸ್ಮಿ ಎಂದು ಮೊದಲು ಉಚ್ಚರಿಸಿದನು. ಆದ್ದರಿಂದ ಅವನು ಅಹಂ ಎಂಬ ಹೆಸರುಳ್ಳವನಾದನು. ಬ್ರಹ್ಮನು ಮೊದಲು ಅಹಂ ಎಂದು ಹೇಳಿದುದರಿಂದಲೇ, ಈಗಲೂ ಲೋಕದಲ್ಲಿ ನೀನು ಯಾರು ಎಂದು ಯಾರಾದರೂ ಕೇಳಿದರೆ ಅಹಂ ಎಂದು ಮೊದಲು ಹೇಳಿ ಅನಂತರ ತಂದೆ ತಾಯಿ ಇಟ್ಟ ಹೆಸರನ್ನು ಹೇಳುತ್ತಾನೆ. ಬ್ರಹ್ಮನು ಎಲ್ಲ ಜೀವರಿಗಿಂತ ಪೂರ್ವ ಅಂದರೆ ಅತ್ಯುತ್ತಮನಾಗಿದ್ದು, ಎಲ್ಲಾ ಪಾಪಗಳನ್ನೂ ದಹಿಸುವುದರಿಂದ ಅವನಿಗೆ ಪುರುಷ ಎಂದೂ ಹೆಸರು. ಇದನ್ನು ತಿಳಿದ ಜ್ಞಾನಿಯೂ ಕೂಡ ತಾನು ಪಡೆಯಲು ಬಯಸಿದುದನ್ನು ತನಗಿಂತ ಪೂರ್ವದಲ್ಲಿ ಪಡೆಯಲು ಇನ್ನೊಬ್ಬನು ಬಯಸಿದರೆ ಅಂತಹವನನ್ನು ಸುಡುತ್ತಾನೆ.

**ಭಾಷ್ಯ–ಇದಮಗ್ರೇ ಏತಸ್ಯಾಗ್ರೇ, ಪರಮಾತ್ಮೈವಾಸೀತ್ । ತತಃ ಪುರುಷವಿಧೋ ಬ್ರಹ್ಮಾಸೀತ್ । ಪುರುಷೋ ವಿಷ್ಣುಃ । ತದ್ವಿಧತ್ವಾತ್ ಪುರುಷವಿಧಃ ।**

**ಏತಸ್ಯ ಜಗತೋ ಹ್ಯಗ್ರ ಆಸೀನ್ನಾರಾಯಣಃ ಪರಃ ।**
**ಏಕ ಏವ ಶ್ರಿಯಾ ಸಾರ್ಧಂ ತಮಾತ್ಮಾ ಪುರುಷೇತ್ಯಪಿ ।**
**ಆಹುಸ್ತಸ್ಮಾತ್ ಪುರುಷವಿಧೋ ಬ್ರಹ್ಮಾ ಸಮಭವತ್ ಪ್ರಭೋಃ ।**
**ಬ್ರಹ್ಮಾದೇಶ್ಚ ಶ್ರಿಯಶ್ಚೈವ ನಿತ್ಯಂ ವಿಷ್ಣುರ್ಗುಣಾಧಿಕಃ ।**
**ಯಥಾ ತಥೈವ ರುದ್ರಾದೇಃ ಬ್ರಹ್ಮಾ ಯಸ್ಮಾದ್ ಗುಣಾಧಿಕಃ ।**
**ಏತಸ್ಮಾತ್ ಪುರುಷವಿಧತಾ ಬ್ರಹ್ಮಣಃ ಸಂಪ್ರಕೀರ್ತಿತಾ ।**

**ಅನುವಾದ**—ಇದಮಗ್ರೇ ಎಂದರೆ ಈ ಜಗತ್ತಿಗಿಂತ ಮೊದಲು, ಪರಮಾತ್ಮನೇ ಇದ್ದನು. ಅವನಿಂದ ಪುರುಷವಿಧನಾದ ಬ್ರಹ್ಮನು ಜನಿಸಿದನು. ಪುರುಷ ಎಂದರೆ ವಿಷ್ಣು. ಅವನ ಆಕಾರಕ್ಕೆ ಸದೃಶವಾದ ಆಕಾರವಿರುವುದರಿಂದ ಬ್ರಹ್ಮನು ಪುರುಷವಿಧ.

ಈ ಜಗತ್ತಿಗಿಂತ ಮೊದಲು ಸರ್ವೋತ್ತಮನಾದ ಲಕ್ಷ್ಮೀ ಸಹಿತನಾದ ನಾರಾಯಣನೊಬ್ಬನೇ ಇದ್ದನು. ಅವನನ್ನು ಆತ್ಮಾ ಎಂದೂ ಪುರುಷ ಎಂದೂ ಕರೆಯುತ್ತಾರೆ. ಪ್ರಭುವಾದ ಆ ನಾರಾಯಣನಿಂದ ನಾರಾಯಣಸದೃಶನಾದ ಬ್ರಹ್ಮನು ಜನಿಸಿದನು. ರುದ್ರಾದಿಗಳೂ ನಾರಾಯಣಸದೃಶರೇ ಆದರೂ ಬ್ರಹ್ಮನನ್ನು ವಿಶೇಷ

ವಾಗಿ ನಾರಾಯಣ ಸದೃಶನೆನ್ನುತ್ತಾರೆ. ಏಕೆಂದರೆ ವಿಷ್ಣುವು ಲಕ್ಷ್ಮೀ ಬ್ರಹ್ಮಾದಿಗಳಿಗಿಂತ ಗುಣದಲ್ಲಿ ಶ್ರೇಷ್ಠನಾಗಿರುವಂತೆ, ಬ್ರಹ್ಮನು ರುದ್ರಾದಿಗಳಿಗಿಂತ ಗುಣದಲ್ಲಿ ಶ್ರೇಷ್ಠನಾಗಿದ್ದಾನೆ.

**ಭಾಷ್ಯ—ಸ ತು ಸರ್ವದಿಶೋ ದೃಷ್ಟ್ವಾ ನಾನ್ಯದ್ ದೃಷ್ಟ್ವಾ ಪಿತಾಮಹಃ ।**
**ಅಬ್ರವೀದಹಮಸ್ಮೀತಿ ಸ್ವಾಹೇಯತ್ವಮನುಸ್ಮರನ್ ।**
**ಹಾತುಂ ಶಕ್ಯಮಿದಂ ಸರ್ವಮಾಸೀದೇಕೋಽಭವಂ ಯತಃ ।**
**ಅಹೇಯತ್ವಂ ಸ್ವರೂಪಸ್ಯ ಸ ಏವಂ ಸಮಚಿಂತಯತ್ ।**
**ತತೋಽಭವದಹಂನಾಮಾ ಸ ಚಾಭೂತ್ ಪುರುಷಾಭಿಧಃ ।**
**ಓಷಣಾತ್ ಸರ್ವಪಾಪಾನಾಂ ಪೂರ್ವಃ ಪುರುಷ ಉಚ್ಯತೇ ।**
**ನಾರಾಯಣಪ್ರಸಾದೇನ ಯ ಏವಂ ಪುರುಷಾಭಿಧಾಮ್ ।**
**ವೇದ ಸ್ವಾಭಿಮತಂ ಯಸ್ತು ಪೂರ್ವಂ ಪ್ರಾಪ್ತುಮಭೀಪ್ಸತಿ ।**
**ಓಷೇತ್ ಸ್ವಯಮನುಷ್ಟಃ ಸನ್ ಬ್ರಹ್ಮವಿಷ್ಣುಪ್ರಸಾದತಃ ।**

**ಅನುವಾದ**—ಪಿತಾಮಹನಾದ ಆ ಬ್ರಹ್ಮನು ಎಲ್ಲಾ ದಿಕ್ಕುಗಳನ್ನೂ ನೋಡಿ ತನಗಿಂತ ಬೇರೆ ಯಾವುದನ್ನೂ ಕಾಣದೆ ತನ್ನ ಸ್ವರೂಪವು ತನಗೆ ಅಪರಿತ್ಯಾಜ್ಯ ಎಂಬ ಅರ್ಥವನ್ನು ಮನಸ್ಸಿನಲ್ಲಿಟ್ಟುಕೊಂಡು 'ಅಹಮಸ್ಮಿ' ಎಂದು ಹೇಳಿದನು. ಉಳಿದೆಲ್ಲವನ್ನೂ ಬಿಟ್ಟಿರಲು ಶಕ್ಯವಿದೆ. ಏಕೆಂದರೆ ಈಗ ನಾನೊಬ್ಬನೇ ಇರುವುದರಿಂದ ಪುತ್ರಪೌತ್ರಾದಿ ಬಂಧುಗಳನ್ನಗಲಿ ಬಿಟ್ಟಿರಲು ಸಾಧ್ಯವಿದೆ. ಆದ್ದರಿಂದ ತನ್ನ ಸ್ವರೂಪವನ್ನು ಮಾತ್ರ ತನಗೆ ಬಿಟ್ಟಿರಲು ಶಕ್ಯವಿಲ್ಲವೆಂದುಕೊಂಡು ಅಹಮಸ್ಮಿ ಎಂದನು. ಆದ್ದರಿಂದ ಅವನು ಅಹಂ ಎಂದು ಹೆಸರುಳ್ಳವನಾದನು. ನಾರಾಯಣನು ಮಾತ್ರವಲ್ಲದೆ ಬ್ರಹ್ಮನೂ ಪುರುಷನೆನಿಸಿದ್ದಾನೆ. ಏಕೆಂದರೆ ನಾರಾಯಣನ ಅನುಗ್ರಹದಿಂದ ಜೀವೋತ್ತಮನಾಗಿದ್ದು ಎಲ್ಲ ಪಾಪಗಳನ್ನು ಸುಡುವುದರಿಂದ ಅವನಿಗೆ ಪುರುಷ ಎಂದು ಹೆಸರು. ಯಾರು ಬ್ರಹ್ಮನ ಈ ಪುರುಷ ಎಂಬ ಹೆಸರನ್ನು ತಿಳಿಯುತ್ತಾನೆಯೋ ಅವನು ತಾನು ಇಚ್ಛಿಸಿದ ವಸ್ತುವನ್ನು ತನಗಿಂತ ಮೊದಲು ತನ್ನ ಶತ್ರು ಪಡೆಯಲು ಬಯಸಿದರೆ ಬ್ರಹ್ಮ ಮತ್ತು ವಿಷ್ಣು ಇವರ ಅನುಗ್ರಹದಿಂದ ತಾನು ದಗ್ಧನಾಗದೆ ಆ ಶತ್ರುವನ್ನು ಸುಡುತ್ತಾನೆ.

**ಬ್ರಹ್ಮನಿಗೆ ಭಯಕಾರಣವಿಲ್ಲ :**

**ಉಪನಿಷತ್—ಸೋಽಬಿಭೇತ್। ತಸ್ಮಾದೇಕಾಕೀ ಬಿಭೇತಿ। ಸ ಹಾಯಮೀಕ್ಷಾಂಚಕ್ರೇ- 'ಯನ್ಮದನ್ಯನ್ನಾಸ್ತಿ ಕಸ್ಮಾನ್ನು ಬಿಭೇಮೀ'ತಿ। ತತ ಏವಾಸ್ಯ**

**ಭಯಂ ವೀಯಾಯ। ಕಸ್ಮಾದ್ಧಿ ಅಭೈಷ್ಯದ್ । ದ್ವಿತೀಯಾದ್ ವೈ ಭಯಂ ಭವತಿ ।**

ಆ ಬ್ರಹ್ಮನು ಏಕಾಕಿಯಾಗಿದ್ದ ಕಾರಣ ಹೆದರಿದನು. ಆದ್ದರಿಂದ ಈಗಲೂ ಏಕಾಕಿಯಾದವನು ಹೆದರುತ್ತಾನೆ. ಆಗ ಬ್ರಹ್ಮನು 'ನನಗೆ ವಿರೋಧಿಯಾದುದು ಯಾವುದೂ ಇಲ್ಲವಾದ್ದರಿಂದ ಏಕೆ ನಾನು ಹೆದರುತ್ತೇನೆ' ಎಂದು ವಿಚಾರ ಮಾಡಿದನು. ಅದರಿಂದ ಅವನ ಭಯವು ದೂರವಾಯಿತು. ಏಕೆಂದರೆ ವಿರೋಧಿಯಾದ ಇನ್ನೊಬ್ಬ ನಿಂದ ಭಯಪ್ರಸಕ್ತಿ ಇರುತ್ತದೆ. ವಿರೋಧಿಯಾದ ಇನ್ನೊಬ್ಬನೇ ಇಲ್ಲವೆಂದ ಮೇಲೆ ಬ್ರಹ್ಮನು ಏಕೆ ಹೆದರುವನು ?

**ಭಾಷ್ಯ—ತಸ್ಯ ತ್ವೇಕಸ್ಯ ಸಹಸಾ ಯತೋ ಭೀಃ ಸಮಜಾಯತ ।**
**ತಸ್ಮಾದದ್ಯಾಪಿ ಚೈಕಸ್ಯ ನಿರ್ವಿವೇಕಭಯಂ ಭವೇತ್ ।**
**ವಿಮಮರ್ಶ ತತೋ ಬ್ರಹ್ಮಾ ಯಸ್ಮಾನ್ಮದ್ಬಾಧಕೋ ನ ಹಿ ।**
**ಮಯಾ ಸೃಜ್ಯಾ ಯತಃ ಸರ್ವೇ ಇತಃ ಪಶ್ಚಾತ್ತನೋ ಹರಃ ।**
**ಅತಃ ಕಸ್ಮಾದ್ ಬಿಭೇಮೀತಿ ತಸ್ಯ ಭೀತಿರಪೋಹಿತಾ ।**
**ವಿಷ್ಣೋರತಿ ಪ್ರಿಯತ್ವಾತ್ತು ತದನ್ಯೇಷಾಂ ಪಿತೃತ್ವತಃ ।**
**ಕಸ್ಮಾದ್ ಭಯಂ ಭವೇತ್ತಸ್ಯ ಸಮಾನಾದ್ಧಿ ಭಯಂ ಭವೇತ್ ।**
**ವಿರೋಧಿನೋಽಧಿಕಾದ್ವಾಽಪಿ ಹೀನಾದ್ವಾ ಪಾರವಶ್ಯತಃ ।**
**ಹೀನಮೇವ ಯತಸ್ತಸ್ಯ ಸರ್ವಮೇವ ಜಗದ್ ವಶೇ ।**
**ನ ಚ ಜಾತಂ ತದಾ ಸರ್ವಂ ಹರಿರೇವ ಯತಃ ಪರಃ ।**

**ಅನುವಾದ**—ಆದಿಸೃಷ್ಟಿಯಲ್ಲಿ ಒಬ್ಬನೇ ಇದ್ದ ಬ್ರಹ್ಮನಿಗೆ ಇದ್ದಕ್ಕಿದ್ದಂತೆಯೇ ಭಯ ಉಂಟಾಯಿತು. ಆದ್ದರಿಂದ ಈಗಲೂ ಒಬ್ಬನೇ ಇದ್ದರೆ ವಿವೇಕವಿಲ್ಲದಿದ್ದಾಗ ಭಯ ಉಂಟಾಗುತ್ತದೆ. ಆಗ ಬ್ರಹ್ಮನು ವಿಚಾರ ಮಾಡಿದನು. 'ನನಗೆ ಬಾಧಕರಾದ ವರು ಯಾರೂ ಇಲ್ಲ. ಏಕೆಂದರೆ ಎಲ್ಲರನ್ನೂ ನಾನೇ ಸೃಷ್ಟಿಮಾಡಬೇಕು. ಪಂಚಮ ಮುಖಚ್ಛೇದಕನಾದ ಶಿವನೂ ಇನ್ನೂ ಮುಂದೆ ಸೃಷ್ಟಿಯಾಗಬೇಕಷ್ಟೆ. ಆದ್ದರಿಂದ ನಾನು ಏಕೆ ಹೆದರುತ್ತಿದ್ದೇನೆ ?' ಹೀಗೆ ವಿಮರ್ಶೆ ಮಾಡಿದ ನಂತರ ಬ್ರಹ್ಮನ ಭಯವು ನಾಶವಾಯಿತು. ಬ್ರಹ್ಮನಿಗೆ ಯಾರಿಂದ ಭಯವಾಗಬೇಕು? ಲೋಕದಲ್ಲಿ ತನಗಿಂತ ಪ್ರಬಲನಾಗಿದ್ದು ವಿರೋಧಿಯಾದವನಿಂದ ಭಯ ಉಂಟಾಗುತ್ತದೆ. ಆದರೆ ತನಗಿಂತ ಪ್ರಬಲನಾಗಿ ಶ್ರೀಹರಿ ಇದ್ದರೂ ಅವನು ವಿರೋಧಿಯಾಗಿಲ್ಲ. ಅವನಿಗೆ ತಾನು ಅತಿ ಪ್ರಿಯನೇ ಆಗಿದ್ದಾನೆ. ವಿರೋಧಿಯಾದ ಸಮಾನನಿಂದಲೂ ಭಯ ಉಂಟಾಗುತ್ತದೆ. ಬ್ರಹ್ಮನಿಗೆ ಸಮಾನನಾಗಿದ್ದು ವಿರೋಧಿಯಾದವರು ಯಾರೂ ಇಲ್ಲ. ಏಕೆಂದರೆ ಅವನು ವಿಷ್ಣುವಿಗೆ ಹೊರತು ಬೇರೆ ಎಲ್ಲರಿಗೂ ತಂದೆಯಾಗಿದ್ದಾನೆ. ತನಗಿಂತ ಕಡಿಮೆ

ಯವರು ತನಗೆ ವಶರಾಗದಿದ್ದರೂ ಅಥವಾ ತಾನು ಅವರಿಗೆ ವಶನಾದರೂ ಭಯ ಉಂಟಾಗುತ್ತದೆ. ಆದರೆ ತನಗಿಂತ ಕಡಿಮೆಯವರಾದ ಎಲ್ಲರೂ ಬ್ರಹ್ಮನ ವಶರಾಗಿದ್ದಾರೆ. ಬ್ರಹ್ಮನೂ ಅವರ ವಶದಲ್ಲಿಲ್ಲ. ಅಂಥವರು ಇನ್ನೂ ಸೃಷ್ಟಿಯಾಗಲೂ ಇಲ್ಲ. ಶ್ರೀಹರಿಗಿಂತ ಬೇರೆ ಪ್ರಬಲರೂ ಯಾರೂ ಇಲ್ಲ. ಶ್ರೀಹರಿಯೊಬ್ಬನೇ ಬ್ರಹ್ಮನಿಗಿಂತ ಪ್ರಬಲನಾಗಿರುವನು.

**ವಾಣೀಬ್ರಹ್ಮರಿಂದ ದೇವತೆಗಳ ಸೃಷ್ಟಿ :**

**ಉಪನಿಷತ್–ಸ ವೈ ನೈವ ರೇಮೇ । ತಸ್ಮಾದೇಕಾಕೀ ನ ರಮತೇ । ಸ ದ್ವಿತೀಯಮೈಚ್ಛತ್ । ಸ ಹೈತಾವಾನಾಸ ಯಥಾ ಸ್ತ್ರೀಪುಮಾಂಸೌ ಸಂಪರಿಷ್ವಕ್ತೌ । ಸ ಇಮಮೇವಾऽತ್ಮಾನಂ ದ್ವೇಧಾऽಪಾತಯತ್ । ತತಃ ಪತಿಶ್ಚ ಪತ್ನೀ ಚಾಭವತಾಂ । ತಸ್ಮಾದಿದಮರ್ಧಬೃಗಲಮಿವ ಸ್ವ ಇತಿ ಹ ಸ್ಮಾऽಹ ಯಾಜ್ಞವಲ್ಕ್ಯಃ । ತಸ್ಮಾದಯಮಾಕಾಶಃ ಸ್ತ್ರಿಯಾ ಪೂರ್ಯತ ಏವ । ತಾಂ ಸಮಭವತ್ । ತತೋ ಮನುಷ್ಯಾ ಅಜಾಯಂತ ।**

ಆದಿಸೃಷ್ಟಿಯಲ್ಲಿ ಬ್ರಹ್ಮನು ಒಬ್ಬನೇ ಇದ್ದುದರಿಂದ ಸಂತೋಷ ಪಡಲಿಲ್ಲ. ಆದ್ದರಿಂದ ಈಗಲೂ ಲೋಕದಲ್ಲಿ ಏಕಾಕಿಯಾದವನು ಸಂತೋಷಪಡುವುದಿಲ್ಲ. ಅವನು ಒಬ್ಬಳು ಪತ್ನಿಯನ್ನು ಸಂಗಾತಿಯಾಗಿ ಬಯಸಿದನು. ಅವನು ತನ್ನ ದೇಹವನ್ನು ಬೆಳೆಸಿ ಪರಸ್ಪರ ಆಲಿಂಗಿತರಾದ ಬ್ರಹ್ಮವಾಣಿಯರ ದೇಹದಷ್ಟು ದೊಡ್ಡದನ್ನಾಗಿ ಮಾಡಿಕೊಂಡನು. ಆ ದೇಹವನ್ನು ಎರಡು ಭಾಗ ಮಾಡಿ ಬೀಳಿಸಿದನು. ಹಾಗೆ ಬೀಳಿಸಿದುದರಿಂದ ಬ್ರಹ್ಮ ಮತ್ತು ವಾಣಿ, ಪತಿ ಮತ್ತು ಪತ್ನೀ ಎಂದು ಕರೆಯಲ್ಪಟ್ಟರು. ಹೀಗೆ ಒಂದಾಗಿ ಇದ್ದ ದೇಹವು ಎರಡಾದುದರಿಂದ ಬ್ರಹ್ಮವಾಣಿಯರಿಗೆ ಈ ಎರಡು ದೇಹದಿಂದುಂಟಾದ ಸುಖವು, ಒಂದೇ ಪಾತ್ರೆಯ ಎರಡು ಅರ್ಧಭಾಗಗಳಲ್ಲಿರುವ ಘೃತದಂತೆ ಒಂದೇ ರೀತಿಯಾಗಿತ್ತು. ಹೀಗೆ ಯಾಜ್ಞವಲ್ಕ್ಯರೂ ಹೇಳುತ್ತಾರೆ. ಪುರುಷದೇಹಕ್ಕೆ ಸಮೀಪದ ಪ್ರದೇಶವೆಲ್ಲ ಸಂತತಿಯಿಂದ ತುಂಬುವಂತೆ ಸ್ತ್ರೀಯು ಮಾಡುವುದರಿಂದ ಬ್ರಹ್ಮನು ವಾಣಿಯೊಡನೆ ಕೂಡಿದನು. ಆಗ ಜ್ಞಾನಿಗಳಾದ ದೇವತೆಗಳು ಜನಿಸಿದರು.

**ಭಾಷ್ಯ—ನ ರೇಮೇ ಸ ತತೋ ಬ್ರಹ್ಮಾ ತಸ್ಮಾದೇಕಸ್ಯ ನೋ ರತಿಃ ।**
**ಅದ್ಯಾಪಿ ಪತ್ನೀಮೈಚ್ಛಚ್ಚ ಸ ಸ್ಥೂಲತ್ವಮುಪಾಗತಃ ।**
**ದಂಪತೀ ಸಹಿತೌ ಯಾವದ್ ಬ್ರಹ್ಮಾ ಚೈವ ಸರಸ್ವತೀ ।**
**ತಾವದ್ದೇಹೋऽಭವದ್ ಬ್ರಹ್ಮಾ ತತೋ ದೇಹಂ ದ್ವಿಧಾऽಕರೋತ್ ।**
**ಪಾತನಾತ್ ಪತಿಪತ್ನೀತ್ವಶಬ್ದ ಏನೋರಜಾಯತ ।**

**ತಸ್ಮಾತ್ ತಯೋರೇಕಸುಖಂ ಭವತ್ಯೇವಾರ್ಧಪಾತ್ರವತ್ ।**
**ತತಸ್ತಸ್ಯಾಮುಮೇಶಾದೀನ್ ದೇವಾನ್ ಸರ್ವಮನೂನಪಿ ।**
**ಜನಯಾಮಾಸ ಬೋಧಸ್ಯ ಪ್ರಾಧಾನ್ಯಂ ಹಿ ಮನುಷ್ಯತಾ ।**

**ಅನುವಾದ**—ಮೊದಲಿಗೆ ಬ್ರಹ್ಮನು ಏಕಾಕಿಯಾಗಿದ್ದುದರಿಂದ ಸಂತೋಷ ಪಡಲಿಲ್ಲ. ಆದ್ದರಿಂದ ಈಗಲೂ ಏಕಾಕಿಯಾದವನು ಸಂತೋಷಪಡುವುದಿಲ್ಲ. ಅವನು ಪತ್ನಿಯನ್ನು ಅಪೇಕ್ಷಿಸಿದನು. ತನ್ನ ದೇಹವನ್ನು ಬ್ರಹ್ಮ ಮತ್ತು ಸರಸ್ವತಿ ದಂಪತಿಗಳು ಪರಸ್ಪರ ಆಲಿಂಗಿಸಿದರೆ ಒಟ್ಟು ಪರಿಮಾಣವಷ್ಟಿರಬಹುದೋ ಅಷ್ಟು ದೊಡ್ಡದಾಗಿ ಮಾಡಿಕೊಂಡನು. ಅನಂತರ ಆ ದೇಹವನ್ನು ಎರಡು ಭಾಗವಾಗಿ ಬೀಳಿಸಿದನು. ಹಾಗೆ ಬೀಳಿಸಿದ್ದುದರಿಂದ ಬ್ರಹ್ಮವಾಣಿಯರಿಗೆ ಪತಿ ಪತ್ನಿಯರೆಂಬ ಹೆಸರು ಉಂಟಾಯಿತು. ಆದ್ದರಿಂದ ಅವರಿಗೆ ಒಂದೇ ಪಾತ್ರೆಯ ಎರಡು ಭಾಗಗಳಲ್ಲಿರುವ ಘೃತವು ಒಂದೇ ರೀತಿ ಇರುವಂತೆ ಒಂದೇ ರೀತಿಯ ಸುಖ ಉಂಟಾಗುತ್ತದೆ. ಅನಂತರ ಬ್ರಹ್ಮನು ವಾಣಿಯಲ್ಲಿ ರುದ್ರಾದಿ ದೇವತೆಗಳನ್ನೂ, ಎಲ್ಲ ಮನುಗಳನ್ನೂ ಉತ್ಪಾದಿಸಿದನು. ಇಲ್ಲಿ ಉಪನಿಷತ್ತಿನಲ್ಲಿ ಮನುಷ್ಯರೆಂದರೆ ವಿಶೇಷಜ್ಞಾನ ಉಳ್ಳ ದೇವತೆಗಳು ಮತ್ತು ಮನುಗಳು ಹೊರತು ಮಾನವರಲ್ಲ. ಏಕೆಂದರೆ ಮುಂದೆ ಬ್ರಹ್ಮನು ದೇವತೆಗಳನ್ನು ಸೃಷ್ಟಿಸಿದನೆಂದು ಪ್ರಶಂಸೆ ಮಾಡಲಾಗಿದೆ.

**ಉಪನಿಷತ್—ಸೋ ಹೇಯಮೀಕ್ಷಾಂಚಕ್ರೇ– 'ಕಥಂ ನು ಮಾ ಆತ್ಮನ ಏವ ಜನಯಿತ್ವಾ ಸಂಭವತಿ । ಹಂತ ತಿರೋಽಸಾನೀ'ತಿ । ಸಾ ಗೌರಭವತ್ । ವೃಷಭ ಇತರಃ । ತಾಂ ಸಮೇವಾಭವತ್ । ತತೋ ಗಾವೋಽಜಾಯಂತ। ವಡವೇತರಾಽಭವತ್ । ಅಶ್ವವೃಷ ಇತರಃ । ಗರ್ದಭೀತರಾ । ಗರ್ದಭ ಇತರಃ । ತಾಂ ಸಮೇವಾಭವತ್ । ತತ ಏಕಶಫಮಜಾಯತ । ಅಜೇತರಾಽಭವತ್ । ಬಸ್ತ ಇತರಃ । ಅವಿರಿತರಾ । ಮೇಷ ಇತರಃ । ತಾಂ ಸಮೇವಾಭವತ್ । ತತೋಽಜಾವಯೋಽಜಾಯಂತ । ಏವಮೇವ ಯದಿದಂ ಕಿಂಚ ಮಿಥುನಮಾ ಪಿಪೀಲಿಕಾಭ್ಯಸ್ತತ್ ಸರ್ವಮಸೃಜತ ।**

**ಸೋಽವೇತ್ 'ಅಹಂ ವಾವ ಸೃಷ್ಟಿರಸ್ಮಿ । ಅಹಂ ಹೀದಂ ಸರ್ವ-ಮಸೃಕ್ಷೀ'ತಿ । ತತಃ ಸೃಷ್ಟಿರಭವತ್ । ಸೃಷ್ಟ್ಯಾಂ ಹಾಸ್ಯೈತಸ್ಯಾಂ ಭವತಿ ಯ ಏವಂ ವೇದ ।**

ಅನಾದಿಕಾಲದಿಂದಲೂ ಬ್ರಹ್ಮಪತ್ನಿಯಾಗಿರುವ ವಾಣಿಯು ಹೀಗೆ ಆಲೋಚಿಸಿದಳು. 'ಇದೇನು ಬ್ರಹ್ಮನು ತನ್ನಿಂದಲೇ ನನ್ನನ್ನು ಹುಟ್ಟಿಸಿ ನನ್ನನ್ನು ಕೂಡುತ್ತಿರುವನಲ್ಲ! ಆಶ್ಚರ್ಯ! ಇರಲಿ ಮರೆಯಾಗುತ್ತೇನೆ'. ಹೀಗೆ ಸ್ತ್ರೀ ಸ್ವಭಾವವನ್ನು ಪ್ರದರ್ಶಿಸಿ

ಗೋಸೃಷ್ಟಿಗಾಗಿ ವಾಣಿಯು ಹಸುವಾದಳು. ಬ್ರಹ್ಮನು ಎತ್ತಾಗಿ ಅವಳನ್ನು ಕೂಡಿದನು. ಆಗ ಗೋವುಗಳು ಹುಟ್ಟಿದವು. ವಾಣಿಯು ಹೆಣ್ಣು ಕುದುರೆಯಾದಳು. ಬ್ರಹ್ಮನು ಶ್ರೇಷ್ಠವಾದ ಗಂಡು ಕುದುರೆಯಾಗಿ ಅವಳನ್ನು ಕೂಡಿದನು. ವಾಣಿಯು ಹೆಣ್ಣು ಕತ್ತೆಯಾದಳು. ಬ್ರಹ್ಮನು ಗಂಡು ಕತ್ತೆಯಾಗಿ ಅವಳನ್ನು ಕೂಡಿದನು. ಹೀಗೆ ಒಂದೇ ಗೊರಸುಳ್ಳ ಕುದುರೆ ಕತ್ತೆ ಮುಂತಾದ ಪ್ರಾಣಿಗಳು ಜನಿಸಿದವು. ವಾಣಿಯು ಆಡಾದಳು. ಬ್ರಹ್ಮನು ಹೋತವಾಗಿ ಅವಳನ್ನು ಕೂಡಿದನು. ವಾಣಿಯು ಕುರಿಯಾದಳು. ಬ್ರಹ್ಮನು ಟಗರಾಗಿ ಅವಳನ್ನೇ ಕೂಡಿದನು. ಆಗ ಆಡುಗಳು ಮತ್ತು ಕುರಿಗಳು ಜನಿಸಿದವು. ಹೀಗೆಯೇ ಮೃಗ ಕೀಟಾದಿಗಳಿಂದ ಪ್ರಾರಂಭಿಸಿ ಇರುವೆಗಳ ವರೆಗೆ ಹೆಣ್ಣು ಗಂಡುಗಳ ಮಿಲನದಿಂದ ಹುಟ್ಟುವ ಎಲ್ಲ ಪ್ರಾಣಿಗಳನ್ನೂ ಸೃಷ್ಟಿಸಿದನು.

ನಾನು ಇದೆಲ್ಲವನ್ನೂ ಸೃಷ್ಟಿ ಮಾಡುವುದರಿಂದ ನನಗೆ ಸೃಷ್ಟಿ ಎಂದು ಹೆಸರು ಎಂದು ಬ್ರಹ್ಮನು ತಿಳಿದನು. ಆದ್ದರಿಂದ ಬ್ರಹ್ಮನಿಗೆ ಸೃಷ್ಟಿ ಎಂಬ ಹೆಸರು ಬಂದಿತು. ಯಾರು ಈ ಕಾರಣದಿಂದ ಬ್ರಹ್ಮನಿಗೆ ಸೃಷ್ಟಿಯೆಂದು ಹೆಸರು ಎಂದು ತಿಳಿಯುತ್ತಾನೆಯೋ ಅವನು ಬ್ರಹ್ಮನು ಸೃಷ್ಟಿಸುವ ದೇವಾದಿ ಪ್ರಾಣಿರಾಶಿಯಲ್ಲಿ ತನ್ನ ಯೋಗ್ಯತೆಯನ್ನನುಸರಿಸಿ ಸಾಕ್ಷಾತ್ ಬ್ರಹ್ಮನ ಮಗನಾಗಿ ಹುಟ್ಟುತ್ತಾನೆ.

**ಭಾಷ್ಯ—ಸರ್ವಜ್ಞಾಪಿ ತು ಸಾ ದೇವೀ ವಿರಿಂಚೇ ಭಕ್ತಿಮತ್ಯಪಿ ।**
**ತದ್ಭಾರ್ಯತಾಮಾತ್ಮನಶ್ಚ ನಿತರಾಂ ಧರ್ಮಮೀಕ್ಷತೀ ।**
**ಅನಾದ್ಯನಂತಸಂಬಂಧಮುಭಯೋರಪಿ ಜಾನತೀ ।**
**ಸ್ತ್ರೀಸ್ವಭಾವಂ ದರ್ಶಯಂತೀ ಸಾಽಧರ್ಮಮಿವ ಚೈಕ್ಷತ ।**
**ನಾನಾಸೃಷ್ಟಿಪ್ರಸಿದ್ಧ್ಯರ್ಥಂ ಸಾ ಗೋತ್ವಾದಿಕಮಾವ್ರಜತ್ ।**
**ವೃಷಾದಿರೂಪತಾಂ ಸೋಽಪಿ ಪ್ರಾಪ್ಯ ಸೃಷ್ಟ್ವೇದಮಂಜಸಾ ।**
**ಸರ್ಜನಾತ್ ಸೃಷ್ಟಿನಾಮಾಽಭೂತ್ ತದ್ವಿತ್ ತತ್ಪುತ್ರತಾಂ ವ್ರಜೇತ್।**
**ಪಿಪೀಲಿಕಾಂತರುದ್ರಾದೌ ಯಥಾಯೋಗ್ಯತ್ವಮಾತ್ಮನಃ ।**

**ಅನುವಾದ**—ವಾಣಿಯು ಸರ್ವಜ್ಞಳಾದರೂ, ಬ್ರಹ್ಮದೇವರಲ್ಲಿ ಭಕ್ತಿಯುಳ್ಳವಳಾದರೂ, ತಾನು ಬ್ರಹ್ಮಭಾರ್ಯೆಯಾಗಿರುವುದು ಸರ್ವಥಾ ಧರ್ಮವೆಂದೂ ಮತ್ತು ತಮ್ಮಿಬ್ಬರ ಸಂಬಂಧವು ಅನಾದಿ ಅನಂತ ಕಾಲದ್ದೆಂದೂ ತಿಳಿದವಳಾಗಿದ್ದರೂ, ಸ್ತ್ರೀಸ್ವಭಾವವಾದ ಲಜ್ಜೆಯನ್ನು ಪ್ರದರ್ಶಿಸುವುದಕ್ಕಾಗಿ ಬ್ರಹ್ಮನು ಮಗಳಾದ ತನ್ನನ್ನು ಕೂಡುವುದು ಅಧರ್ಮವೆಂದು ಭಯಪಟ್ಟವಳಂತೆ ತೋರಿಕೊಂಡಳು. ವಸ್ತುತಃ ಗೋ ಮುಂತಾಗಿ ಅನೇಕ ವಿಧವಾದ ಸೃಷ್ಟಿಯು ಸಿದ್ಧಿಸಲೆಂದೆ ಅವಳು ಗೋವು ಮೊದಲಾದ ರೂಪವನ್ನು ತೆಗೆದುಕೊಂಡಳು. ಬ್ರಹ್ಮನು ವೃಷಭಾದಿ ರೂಪಗಳನ್ನು ತೆಗೆದುಕೊಂಡು

ಗೋವು ಮುಂತಾದ ಎಲ್ಲ ಪ್ರಾಣಿಗಳನ್ನು ಚೆನ್ನಾಗಿ ಸೃಷ್ಟಿ ಮಾಡಿದನು. ಹೀಗೆ ಸೃಷ್ಟಿ ಮಾಡುವುದರಿಂದ ಬ್ರಹ್ಮನಿಗೆ ಸೃಷ್ಟಿ ಎಂದು ಹೆಸರಾಯಿತು. ಯಾರು ಇದನ್ನು ತಿಳಿಯುತ್ತಾನೆಯೋ ಅವನು ಇರುವೆಯಿಂದ ಆರಂಭಿಸಿ ರುದ್ರ ದೇವರ ವರೆಗಿರುವ ಪ್ರಾಣಿರಾಶಿಯಲ್ಲಿ ತನ್ನ ಯೋಗ್ಯತೆಗೆ ತಕ್ಕಂತೆ ಸಾಕ್ಷಾತ್ ಬ್ರಹ್ಮನ ಮಗನಾಗಿ ಹುಟ್ಟುತ್ತಾನೆ.

**ಅಗ್ನಿ ಅನ್ನಗಳ ಸೃಷ್ಟಿ :**

**ಉಪನಿಷತ್–ಅಥೇತ್ಯಭ್ಯಮಂಥತ್ । ಸ ಮುಖಾಚ್ಚ ಯೋನೇರ್ಹಸ್ತಾಭ್ಯಾಂ ಚಾಗ್ನಿಮಸೃಜತ।ತಸ್ಮಾದೇತದುಭಯಮಲೋಮಕಮಂತರತಃ। ಅಲೋಮಕಾ ಹಿ ಯೋನಿರಂತರತಃ । ತದ್ಯದಿದಮಾಹುರಮುಂ ಯಜಾಮುಂ ಯಜೇತ್ಯೇಕೈಕಂ ದೇವಮೇತಸ್ಯೈವ ಸಾ ವಿಸೃಷ್ಟಿಃ । ಏಷ ಉ ಹ್ಯೇವ ಸರ್ವೇ ದೇವಾಃ । ಅಥ ಯತ್ ಕಿಂಚೇದಮಾರ್ದ್ರಂ ತದ್ ರೇತಸೋಽಸೃಜತ। ತದು ಸೋಮಃ। ಏತಾವದ್ ವಾ ಇದಮನ್ನಂ ಚೈವಾನ್ನಾದಶ್ಚ । ಸೋಮ ಏವಾನ್ನಂ। ಅಗ್ನಿರನ್ನಾದಃ । ಸೈಷಾ ಬ್ರಹ್ಮಣೋಽತಿಸೃಷ್ಟಿಃ, ಯಚ್ಛ್ರೇಯಸೋ ದೇವಾನಸೃಜತ । ಅಥ ಯನ್ಮರ್ತ್ಯಃ ಸನ್ನಮೃತಾನಸೃಜತ । ತಸ್ಮಾದತಿಸೃಷ್ಟಿಃ । ಅತಿಸೃಷ್ಟ್ಯಾಂ ಹಾಸ್ಯೈತಸ್ಯಾಂ ಭವತಿ ಯ ಏವಂ ವೇದ ।**

**॥ ಇತಿ ಪ್ರಾಜಾಪತ್ಯ ಬ್ರಾಹ್ಮಣಂ ॥**

ಬ್ರಹ್ಮನು ಹೀಗೆ ಅನ್ನ ಉಣ್ಣುವ ಪ್ರಾಣಿಗಳನ್ನು ಸೃಷ್ಟಿಸಿದ ಬಳಿಕ ಅನ್ನಪಾಕ ಮಾಡುವ ಅಗ್ನಿಯನ್ನೂ ಅನ್ನವನ್ನೂ ಸೃಷ್ಟಿಮಾಡುವೆನೆಂದು ಯೋಚಿಸಿದನು. ಅನಂತರ ಬಾಯಿಯ ಎರಡು ತುಟಿಗಳನ್ನೂ, ಎರಡು ಹಸ್ತಗಳನ್ನೂ ಪರಸ್ಪರವಾಗಿ ಉಜ್ಜಿದನು. ಆದರಿಂದ ಬಾಯಿ ಮತ್ತು ಎರಡು ಹಸ್ತಗಳಿಂದ ಅಗ್ನಿಯನ್ನು ಉತ್ಪಾದಿಸಿದನು. ಹೀಗೆ ಉತ್ಪತ್ತಿ ಸ್ಥಾನವಾದ್ದರಿಂದ ಬಾಯಿ ಮತ್ತು ಹಸ್ತ ಇವೆರಡರೊಳಗೆ ರೋಮಗಳಿಲ್ಲ. ಯೋನಿಯೊಳಗೆ ರೋಮವಿಲ್ಲವೆಂಬುದು ಪ್ರಸಿದ್ಧವಷ್ಟೆ ? ಒಬ್ಬೊಬ್ಬ ದೇವತೆಯನ್ನುದ್ದೇಶಿಸಿ ರುದ್ರನನ್ನು ಪೂಜಿಸು, ಇಂದ್ರನನ್ನು ಪೂಜಿಸು ಎಂದು ಮುಂತಾಗಿ ಪೂಜ್ಯರೆಂದು ಪ್ರಸಿದ್ಧರಾದ ದೇವತೆಗಳೆಲ್ಲರ ಸೃಷ್ಟಿ ಬ್ರಹ್ಮನದೇ ಶ್ರೇಷ್ಠಸೃಷ್ಟಿಯಾಗಿದೆ. ಹೀಗೆ ಅವನೇ ಎಲ್ಲ ದೇವತೆಗಳಿಗೂ ಕಾರಣ ಹಾಗೂ ಸ್ವಾಮಿಯಾದ್ದರಿಂದ ಎಲ್ಲ ದೇವತೆಗಳ ಹೆಸರಿನಿಂದಲೂ ಅವನೇ ಕರೆಸಿಕೊಳ್ಳುತ್ತಾನೆ ಎಂದು ವೇದವನ್ನು ತಿಳಿದವರು ಹೇಳುತ್ತಾರೆ. ಚತುರ್ಮುಖ ಬ್ರಹ್ಮನಿಗೆ ಈ ಸೃಷ್ಟಿಕರ್ತೃತ್ವ ಮಹಿಮೆಯು ಪರಮಾತ್ಮನ ಉಪಾಸನೆಯಿಂದಾದ ಪ್ರಸಾದದಿಂದಲೇ ಲಬ್ಧವಾದುದು. ಅನ್ನಪಾಚಕನಾದ ಅಗ್ನಿಯ ಸೃಷ್ಟಿಯ ಅನಂತರ

ಬ್ರಹ್ಮನು ರೇತಸ್ಸಿನಿಂದ ದ್ರವಾತ್ಮಕ ಅನ್ನವನ್ನು ಸೃಷ್ಟಿಸಿದನು. ಈ ಅನ್ನವು ಸೋಮ ನಿಂದ ಅಭಿಮನ್ಯಮಾನವಾದುದು. ಇನ್ನು ಬೇರೇನೂ ಸೃಷ್ಟಿ ಮಾಡಬೇಕಾದುದಿಲ್ಲ. ಅನ್ನ, ಅನ್ನಪಾಚಕ ಮತ್ತು ಅನ್ನಭೋಕ್ತೃಗಳಾದ ಪ್ರಜಗಳು ಈ ಮೂರೆ ಸೃಜ್ಯ ವಾದುದಷ್ಟೆ? ಸೋಮನೆ ದ್ರವರೂಪವಾದ ಅನ್ನದ ಅಭಿಮಾನಿ. ತಾನು ಆದ್ರ್ರನಾಗದೆ ದ್ರವರೂಪವಾದ ಅನ್ನವನ್ನು ಪಚನ ಮಾಡುವವನು ಅಗ್ನಿ. ಬ್ರಹ್ಮನು ಮಾಡಿದ ಈ ದೇವತೆಗಳ ಸೃಷ್ಟಿಯು ತನಗಿಂತ ಶ್ರೇಷ್ಠವಾದ ಸೃಷ್ಟಿ. ಏಕೆಂದರೆ ಬ್ರಹ್ಮನು ತನಗಿಂತ ಉತ್ತಮರಾದ ದೇವತೆಗಳನ್ನು ಸೃಷ್ಟಿಸಿದನು. ದೇವತೆಗಳು ಬ್ರಹ್ಮನಿಗಿಂತ ಯೋಗ್ಯತೆ ಯಲ್ಲಿ ಕಡಿಮೆಯೇ. ಆದರೂ ಶರೀರದಲ್ಲಿ ಉತ್ತಮರು. ಹೇಗೆಂದರೆ ಬ್ರಹ್ಮನು ಪುರುಷ ಶರೀರ ತೊರೆದು, ವೃಷಭಾದಿ ಪ್ರಾಣಿಗಳ ನಶ್ವರ ಶರೀರವನ್ನು ತಾಳಿದನು. ದೇವತೆ ಗಳ ದೇಹವು ಪ್ರಾಣಿಗಳ ಶರೀರದಷ್ಟು ನಶ್ವರವಲ್ಲ. ಆದ್ದರಿಂದ ಅಧಿಕ ಆಯುಸ್ಸುಳ್ಳ ದೇಹದ ದೃಷ್ಟಿಯಿಂದ ದೇವತೆಗಳು ಉತ್ತಮರು. ಹೀಗೆ ಬ್ರಹ್ಮನ ಸೃಷ್ಟಿಯು ತನ ಗಿಂತ ಶ್ರೇಷ್ಠವಾದ ಸೃಷ್ಟಿ ಎನಿಸಿದೆ. ಯಾರು ಬ್ರಹ್ಮನ ಈ ಶ್ರೇಷ್ಠವಾದ ಸೃಷ್ಟಿ ಯನ್ನು ತಿಳಿಯುತ್ತಾನೆಯೋ ಅವನು ಶ್ರೇಷ್ಠವಾದ ಸೃಷ್ಟಿಯಲ್ಲಿ ಸೇರುತ್ತಾನೆ ಎಂದರೆ ದೇವಲೋಕದಲ್ಲಿ ಜನಿಸುತ್ತಾನೆ.

**ಭಾಷ್ಯ—ಅಥಾನ್ನಾದಮಥಾಪ್ಯನ್ನಂ ಸ್ರಕ್ಷ್ಯಾಮೀತಿ ವಿಚಿಂತಯನ್ ।**
**ಓಷ್ಠದ್ವಯಂ ಮಮಂಥಾಂತರ್ಹಸ್ತೌ ಚೈವ ಪರಸ್ಪರಮ್ ।**
**ತಸ್ಮಾನ್ಮುಖಾಚ್ಚೈವ ಹಸ್ತಾಭ್ಯಾಮಂತರೇಽಗ್ನಿರಜಾಯತ ।**
**ಏವಂ ಸರ್ವಸ್ಯ ಹೇತುತ್ವಾತ್ ಸರ್ವಸ್ಯಾಧಿಪತಿತ್ವತಃ ।**
**ಸರ್ವೇ ದೇವಾ ಏಷ ಏವೇತ್ಯಾಹುರ್ವೇದವಿದೋ ಜನಾಃ ।**
**ಸ್ವತಂತ್ರೇಷು ಯತಃ ಶಬ್ದಾ ವರ್ತೇಯುಃ ಸರ್ವ ಏವ ಚ ।**
**ಸ ರೇತಸಃ ಪುನಃ ಸೋಮಮಸೃಜದ್ ಬ್ರಹ್ಮವಿದ್ವರಃ ।**
**ಸರ್ವಾಧಿಕೋಽಪಿ ಯೋಗ್ಯತ್ವಾನ್ಮರ್ತ್ಯಧರ್ಮತಯಾ ಪುರಾ ।**
**ಅವಮೋ ಯೋಗ್ಯತಾಹೀನಾನಪ್ಯಾಯುರ್ಮಾತ್ರತೋಽಧಿಕಾನ್ ।**
**ಯತೋಽಸ್ರಾಗತಿಸೃಷ್ಟಿಸ್ತದೇವಂ ಯೋ ವೇದ ಪೂರುಷಃ ।**
**ವಿಷ್ಣೋಃ ಪ್ರಸಾದತಃ ಸೃಷ್ಟಿಂ ದೇವಲೋಕೇ ಸ ಜಾಯತೇ ।**
**ಆತ್ಮಯೋಗ್ಯಾನುಸಾರೇಣ ಸುಖಜ್ಞಾನಾದಿಯುಕ್ ತಥಾ ।**
**ಇತಿ ಬ್ರಹ್ಮತರ್ಕೇ ॥**

**ಭಗವದುಪಾಸನಾಮಾಹಾತ್ಮ್ಯಮೇತದಿತಿ ದರ್ಶಯಿತುಂ 'ತದ್ಯದಿದ-ಮಾಹುಃ' ಇತ್ಯಾದ್ಯಾರಂಭಃ ॥**

**ಇತಿ ಪ್ರಾಜಾಪತ್ಯ ಬ್ರಾಹ್ಮಣಂ ॥**

**ಅನುವಾದ**–ಅನಂತರ ಅನ್ನಪಚನಾಗ್ನಿಯನ್ನೂ,ಅನ್ನವನ್ನೂ ಸೃಷ್ಟಿಸುತ್ತೇನೆಂದು ಆಲೋಚಿಸಿ ಬ್ರಹ್ಮನು ಎರಡು ತುಟಿಗಳನ್ನು ಒಳಭಾಗದಲ್ಲಿಯೂ ಮತ್ತು ಎರಡು ಹಸ್ತಗಳನ್ನು ಪರಸ್ಪರವಾಗಿಯೂ ಉಜ್ಜಿದನು. ಆಗ ಬಾಯಿಂದ ಮತ್ತು ಕೈಗಳೊಳಗಿಂದ ಅಗ್ನಿಯು ಉತ್ಪನ್ನನಾದನು. ಹೀಗೆ ಚತುರ್ಮುಖನು ಎಲ್ಲ ದೇವತೆಗಳಿಗೂ ಕಾರಣನೂ ಅಧಿಪತಿಯೂ ಆದ್ದರಿಂದ ವೇದವನ್ನು ತಿಳಿದವರು 'ಎಲ್ಲಾ ದೇವತೆಗಳೂ ಇವನೇ' ಎಂದು ಹೇಳುತ್ತಾರೆ. ಏಕೆಂದರೆ ಸ್ವಾತಂತ್ರ್ಯ ಹೊಂದಿರುವವನನ್ನೇ ಎಲ್ಲ ಶಬ್ದಗಳೂ ಮುಖ್ಯವಾಗಿ ಹೇಳುತ್ತವೆ. ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠನಾದ ಬ್ರಹ್ಮನು ರೇತಸ್ಸಿನಿಂದ ಪುನಃ ಸೋಮನನ್ನು ಸೃಷ್ಟಿಸಿದನು. ಬ್ರಹ್ಮನು ಸ್ವರೂಪ ಯೋಗ್ಯತೆಯಲ್ಲಿ ಉಳಿದ ಎಲ್ಲ ದೇವತೆಗಳಿಗಿಂತ ಉತ್ತಮನಾಗಿದ್ದರೂ ಕೂಡ, ಸಶ್ವರವಾದ ವೃಷಭಾದಿ ಶರೀರವನ್ನು ಹೊಂದಿದ ಕಾರಣದಿಂದ, ದಿವ್ಯಶರೀರ ಉಳ್ಳ ದೇವತೆಗಳಿಗಿಂತ ಕಡಿಮೆ ಎನಿಸಿ, ಯೋಗ್ಯತೆಯಲ್ಲಿ ಕಡಿಮೆಯಾದರೂ ಬಹಳ ಆಯುಸ್ಸನ್ನು ಹೊಂದಿದ ಮಾತ್ರದಿಂದ ಉತ್ತಮರೆನಿಸಿದ ದೇವತೆಗಳನ್ನು ಸೃಷ್ಟಿಮಾಡಿದುದರಿಂದ ಬ್ರಹ್ಮನು ಮಾಡಿದ ದೇವಸೃಷ್ಟಿ ಅವನಿಗಿಂತ ಉತ್ತಮಸೃಷ್ಟಿ. ಹೀಗೆ ಯಾರು ತಿಳಿಯುತ್ತಾನೆಯೋ ಅವನು ವಿಷ್ಣುವಿನ ಅನುಗ್ರಹದಿಂದ ದೇವಲೋಕದಲ್ಲಿ ಜನಿಸಿ ತನ್ನ ಯೋಗ್ಯತೆಗನುಗುಣವಾಗಿ ಸುಖಜ್ಞಾನಾದಿಗಳನ್ನು ಪಡೆಯುತ್ತಾನೆ ಎಂದು ಬ್ರಹ್ಮತರ್ಕದಲ್ಲಿ ಹೇಳಿದೆ.

ಬ್ರಹ್ಮನ ದೇವಸ್ರಷ್ಟೃತ್ವವು ಪರಮಾತ್ಮನ ಉಪಾಸನೆಯಿಂದಾದ ಅನುಗ್ರಹದಿಂದ ಉಂಟಾದುದು ಎಂದು ತಿಳಿಸಲು ತತೋ ಮನುಷ್ಯಾ ಅಜಾಯಂತ ಎಂದು ಮೊದಲು ಹೇಳಿದ ದೇವಸೃಷ್ಟಿಯನ್ನೇ 'ಯದಿದಮಾಹುಃ' ಎಂದು ಪುನಃ ಹೇಳಿದೆ. ಆದ್ದರಿಂದ ಪುನರುಕ್ತಿಯಾಗದಿರುವುದರಿಂದ ಮನುಷ್ಯಶಬ್ದಕ್ಕೆ ಜ್ಞಾನಿಗಳಾದ ದೇವತೆಗಳೆಂದು ಅರ್ಥ ಗ್ರಹಿಸುವುದು ಅಯುಕ್ತವಾಗುವುದಿಲ್ಲ.

ಇಲ್ಲಿಗೆ ಪ್ರಾಜಾಪತ್ಯ ಬ್ರಾಹ್ಮಣವು ಮುಗಿಯಿತು.

**ಸರ್ವಗುಣಪೂರ್ಣತ್ವೋಪಾಸನೆ :**

**ಉಪನಿಷತ್**—**ತದ್ಧೇದಂ ತರ್ಹ್ಯವ್ಯಾಕೃತಮಾಸೀತ್ । ತನ್ನಾಮರೂಪಾಭ್ಯಾಮೇವ ವ್ಯಾಕ್ರಿಯತ 'ಅಸೌನಾಮಾಽಯಮಿದಂರೂಪಃ' ಇತಿ । ತದಿದಮಪ್ಯೇತರ್ಹಿ ನಾಮರೂಪಾಭ್ಯಾಮೇವ ವ್ಯಾಕ್ರಿಯತೇ 'ಅಸೌನಾಮಾಯಮಿದಂರೂಪಃ' ಇತಿ । ಸ ಏಷ ಇಹ ಪ್ರವಿಷ್ಟ ಆ ನಖಾಗ್ರೇಭ್ಯಃ । ಯಥಾ ಕ್ಷುರಃ ಕ್ಷುರಧಾನೇಽವಹಿತಃ ಸ್ಯಾತ್ । ವಿಶ್ವಂಭರೋ ವಾ ವಿಶ್ವಂಭರಕುಲಾಯೇ । ತಂ ನ ಪಶ್ಯಂತಿ । ಅಕೃತ್ಸ್ನೋ ಹಿ ಸಃ ।**

**ಪ್ರಾಣನ್ನೇವ ಪ್ರಾಣೋ ನಾಮ ಭವತಿ। ವದನ್ ವಾಕ್। ಪಶ್ಯನ್ ಚಕ್ಷುಃ। ಶೃಣ್ವನ್ ಶ್ರೋತ್ರಂ। ಮನ್ವಾನೋ ಮನಃ। ತಾನ್ಯಸ್ಯೈತಾನಿ ಕರ್ಮನಾಮಾನ್ಯೇವ। ಸ ಯೋಽತ ಏಕೈಕಮುಪಾಸ್ತೇ ನ ಸ ವೇದ। ಅಕೃತ್ಸ್ನೋ ಹ್ಯೇಷೋಽತ ಏಕೈಕೇನ ಭವತಿ। ಆತ್ಮೇತ್ಯೇವೋಪಾಸೀತ। ಅತ್ರ ಹ್ಯೇತೇ ಸರ್ವ ಏಕಂ ಭವಂತಿ। ತದೇತತ್ ಪದನೀಯಮಸ್ಯ ಸರ್ವಸ್ಯ ಯದಯಮಾತ್ಮಾ। ಅನೇನ ಹ್ಯೇತತ್ ಸರ್ವಂ ವೇದ। ಯಥಾ ಹ ವೈ ಪದೇನಾನುವಿಂದೇದೇವಂ ಕೀರ್ತಿಂ ಶ್ಲೋಕಂ ವಿಂದತೇ ಯ ಏವಂ ವೇದ।**

ಪ್ರಲಯಕಾಲದಲ್ಲಿ ವಿಕಾರಶೂನ್ಯರಾಗಿ ಪರಬ್ರಹ್ಮ ಮತ್ತು ಲಕ್ಷ್ಮಿಯರಿದ್ದರು. ಈ ಜಗತ್ತು ಸೂಕ್ಷ್ಮರೂಪವಾಗಿದ್ದಿತು. ಪರಬ್ರಹ್ಮನು ಸೂಕ್ಷ್ಮಜಗತ್ತನ್ನು ಹೆಸರು ಆಕಾರಗಳಿಂದ ವ್ಯಕ್ತವಾಗುವಂತೆ ಮಾಡಿದನು. ಅದರಿಂದ ಈ ಪದಾರ್ಥವು ಈ ನಾಮವುಳ್ಳದ್ದು, ಈ ರೂಪವುಳ್ಳದ್ದು ಎಂದಾಯಿತು. ಆದಿಕಾಲದಲ್ಲಿ ಪರಮಾತ್ಮನು ವಸ್ತುಗಳನ್ನು ನಾಮರೂಪಗಳಿಂದ ಪ್ರಕಟೀಕರಿಸಿದ ಕಾರಣದಿಂದಲೇ ಈಗಲೂ ಜನರು ವಸ್ತುಗಳನ್ನು ನಾಮರೂಪಗಳಿಂದಲೇ ಪ್ರಕಟೀಕರಿಸುತ್ತಾರೆ. ಹೀಗೆ ಜಗತ್ಕಾರಣನಾದ್ದರಿಂದ ಪರಮಾತ್ಮನನ್ನು ಉಪಾಸನೆ ಮಾಡಬೇಕು. ಆದರೆ ಪ್ರಾಣ ಎಂದು ಮುಂತಾಗಿ ಉಪಾಸನೆ ಮಾಡಬಾರದು. ಆತ್ಮ ಎಂದೇ ಉಪಾಸನೆ ಮಾಡಬೇಕು. ಏಕೆಂದರೆ ಜಗತ್ಕರ್ತೃವಾದ ಶ್ರೀಹರಿಯು ಕತ್ತಿಯು ಒರೆಯಲ್ಲಿ ವ್ಯಾಪಿಸಿರುವಂತೆ, ವಾಯುವು ಶರೀರದಲ್ಲಿ ವ್ಯಾಪಿಸಿರುವಂತೆ, ತಾನು ಸೃಷ್ಟಿಸಿದ ಬ್ರಹ್ಮಾದಿ ಶರೀರಗಳಲ್ಲಿ ತಲೆಯ ಕೂದಲಿನಿಂದ ಹಿಡಿದು ಉಗುರಿನ ತುದಿಯವರೆಗೆ ಪ್ರವೇಶಿಸಿ ವ್ಯಾಪಿಸಿದ್ದಾನೆ. ತಮ್ಮ ದೇಹದಲ್ಲಿ ಪ್ರವಿಷ್ಟನಾಗಿದ್ದರೂ ಪಾಮರರು ಈ ಶ್ರೀಹರಿಯನ್ನು ತಿಳಿಯುವುದಿಲ್ಲ. ಪ್ರವಿಷ್ಟನಾದ ಶ್ರೀಹರಿಯು ಶ್ವಾಸವ್ಯಾಪಾರವನ್ನು ಮಾಡುವವನಾಗಿ ಪ್ರಾಣನೆನಿಸುತ್ತಾನೆ. ಮಾತನಾಡುವವನಾಗಿ ವಾಕ್ ಎನಿಸುತ್ತಾನೆ. ನೋಡುವವನಾಗಿ ಚಕ್ಷುಸ್ ಎನಿಸುತ್ತಾನೆ. ಕೇಳುವವನಾಗಿ ಶ್ರೋತ್ರನೆನಿಸುತ್ತಾನೆ. ತಿಳಿಯುವವನಾಗಿ ಮನಸ್ಸು ಎನಿಸುತ್ತಾನೆ. ಈ ಎಲ್ಲ ನಾಮಗಳೂ ಒಂದೊಂದು ಕ್ರಿಯೆಯನ್ನು ಮಾತ್ರ ನಿಮಿತ್ತ ಮಾಡಿಕೊಂಡು ಹೊರಟಿವೆ. ಪರಮಾತ್ಮನ ಒಂದೊಂದೇ ಕ್ರಿಯೆಯನ್ನೇ ತಿಳಿಸುತ್ತವೆ. ಯಾರು ಇವುಗಳಲ್ಲಿ ಪ್ರಾಣವಾಗಾದಿ ಒಂದೊಂದು ನಾಮದಿಂದಲೇ ಶ್ರೀಹರಿಯನ್ನು ಉಪಾಸನೆ ಮಾಡುತ್ತಾನೆಯೋ ಅವನು ಬ್ರಹ್ಮನನ್ನು ಪೂರ್ಣವಾಗಿ ಉಪಾಸನೆ ಮಾಡುತ್ತಿಲ್ಲ. ಬ್ರಹ್ಮನ ಸರ್ವಗುಣಪೂರ್ಣತ್ವಜ್ಞಾನವು ಅವನಿಗೆ ಉಂಟಾಗಿಲ್ಲ. ಒಂದೊಂದೇ ಗುಣವನ್ನು ಉಪಾಸನೆ ಮಾಡುವ ಉಪಾಸಕನು ಆದರಿಂದ ತನಗೆ ಅಪೇಕ್ಷಿತವಾದ ಜ್ಞಾನಾನಂದಾದಿ ಎಲ್ಲ ಗುಣಗಳನ್ನೂ ಪಡೆಯಲು ಸಾಧ್ಯವಿಲ್ಲದಿರುವುದರಿಂದ ಅಪೂರ್ಣನಾಗುತ್ತಾನೆ. ಅಪೂರ್ಣನಾದ ಉಪಾಸಕನು

ಉಪಾಸನೆ ಮಾಡುವ ಪರಬ್ರಹ್ಮನೂ ಅಪೂರ್ಣನೆನಿಸುತ್ತಾನೆ. ಆದ್ದರಿಂದ ಅವನನ್ನು ಆತ್ಮಾ ಎಂದೇ ಉಪಾಸನೆ ಮಾಡಬೇಕು. ಆತ್ಮಶಬ್ದವು ಕೇವಲ ಸ್ವಾಮಿತ್ವವನ್ನೇ ಹೇಳುವುದಿಲ್ಲ. ಜ್ಞಾನಾನಂದಾದಿ ಗುಣಗಳೂ ಪ್ರಾಣನಾದಿ ಕರ್ಮಗಳೂ ಎಲ್ಲವೂ ಆತ್ಮಶಬ್ದಾರ್ಥದಲ್ಲಿ ಸೇರುತ್ತವೆ. ಆತ್ಮಶಬ್ದವು ಹೇಳುವ ಆ ಎಲ್ಲ ಗುಣಗಳಿಗೂ ಶ್ರೀಹರಿಯು ಆಶ್ರಯನು. ಏಕೆಂದರೆ ಆತ್ಮಾ ಎಂದು ಅವನನ್ನು ಉಪಾಸನೆ ಮಾಡುವವನು ಕೂಡ ಸ್ವಯೋಗ್ಯವಾದ ಸರ್ವವನ್ನೂ ತಿಳಿಯುತ್ತಾನೆ ಮತ್ತು ಆನಂದಾದಿ ಸ್ವಯೋಗ್ಯ ಸಕಲಗುಣಗಳನ್ನೂ ಪಡೆಯುತ್ತಾನೆ. ಹೇಗೆ ಲೋಕದಲ್ಲಿ ಆಯಾ ಸಾಧನಗಳಿಂದ ಆಯಾ ಫಲವನ್ನು ಪಡೆಯುತ್ತಾರೆಯೋ ಹಾಗೆ ಯಾರು ಶ್ರೀಹರಿಯನ್ನು ಸರ್ವಗುಣಪೂರ್ಣನೆಂದು ತಿಳಿದು ಆತ್ಮಾ ಎಂದು ಉಪಾಸನೆ ಮಾಡುವನೋ ಅವನು ಕೀರ್ತಿಯನ್ನೂ ಪರಮಾನಂದವನ್ನೂ ಪರಮಜ್ಞಾನವನ್ನೂ ಪಡೆಯುತ್ತಾನೆ.

**ಭಾಷ್ಯ–ವಿಶ್ವಂಭರೋ ವಾಯುಃ । 'ಅಕೃತ್ಸ್ನೋ ಹಿ ಸಃ' ಇತ್ಯಸ್ಯಾಭಿಪ್ರಾಯಃ 'ಸ ಯೋಽತ ಏಕೈಕಮುಪಾಸ್ತೇ ನ ಸ ವೇದೇ'ತ್ಯಾದಿ । ಪ್ರಾಣ ಇತ್ಯಾದಿ ನಾಮಾನಿ ಪರಮೇಶ್ವರಸ್ಯ ನ ಸರ್ವಗುಣಸಂಪೂರ್ಣತಾಂ ವದಂತಿ । ಕಿಂತು ಪ್ರಾಣನಾದಿಕರ್ಮಕರ್ತೃತ್ವಮೇವ ವದಂತಿ । ಆತ್ಮಶಬ್ದ ಏವ ಸರ್ವಗುಣಪೂರ್ಣತ್ವಂ ವದತಿ । ಅಸ್ಯ ಸರ್ವಸ್ಯ ಗುಣಜಾತಸ್ಯಾಯಮಾತ್ಮೈವ ಪದನೀಯ ಆಶ್ರಯೋ ಯಸ್ಮಾದತಸ್ತಂ ಸರ್ವಗುಣವಾಚಕೇನಾತ್ಮಶಬ್ದೇನೈವೋಪಾಸೀತ । 'ಅನೇನ ಹ್ಯೇತತ್ ಸರ್ವಂ ವೇದ'ಯಸ್ಮಾತ್ ಸರ್ವಜ್ಞಾನಪ್ರದಸ್ತಸ್ಮಾತ್ ಸರ್ವಗುಣಪೂರ್ಣ ಇತ್ಯೇವೋಪಾಸನಂ ತಸ್ಯ ಯುಕ್ತಮ್ । ತದುಪಾಸನಾದೇವ ಸರ್ವಜ್ಞತ್ವಾದಯೋ ಗುಣಾ ಭವಂತಿ, ಕಿಮು ತಸ್ಯೇತಿ । ಪದ್ಯತೇಽನೇನೇತಿ ಪದಂ ಸಾಧನಂ । ಯಥಾ ತತ್ತತ್ಸಾಧನೇನ ತತ್ತತ್ಫಲಂ ಪ್ರಾಪ್ನುಯಾದೇವಂ ಸರ್ವಗುಣಯುಕ್ತತ್ವೇನ ಭಗವದುಪಾಸನಾತ್ ಕೀರ್ತಿಂ ಶ್ಲೋಕಂ ಚ ವಿಂದತೇ । ಶಂ ಲೋಕಃ ಶ್ಲೋಕಃ। ಪರಮಾನಂದಂ ಪರಮಂ ಜ್ಞಾನಂ ಚೇತ್ಯರ್ಥಃ । 'ಲುಕ್ ಪ್ರಕಾಶೇ' ಇತಿ ಧಾತೋಃ ।**

**ಅನುವಾದ**—ವಿಶ್ವಂಭರ ಎಂದರೆ ಜಾಠರಾಗ್ನಿಯಲ್ಲ, ವಾಯು. ಅಕೃತ್ಸ್ನೋ ಹಿ ಸಃ ಎಂಬ ವಾಕ್ಯದ ಅಭಿಪ್ರಾಯವನ್ನು ಸ ಯೋಽತ ಏಕೈಕ ಮುಪಾಸ್ತೇ ನ ಸ ವೇದ ಇತ್ಯಾದಿ ವಾಕ್ಯವು ತಿಳಿಸುತ್ತದೆ. ಪರಮಾತ್ಮನಲ್ಲಿ ಜೀವನಪ್ರದತ್ವ ಮುಂತಾಗಿ ಒಂದೊಂದೇ ಗುಣ ಅಥವಾ ಕ್ರಿಯೆಯನ್ನು ಉಪಾಸನೆ ಮಾಡುವವನು ಅದರಿಂದ ಪೂರ್ಣಫಲವನ್ನು ಪಡೆಯದೆ ಅಪೂರ್ಣನಾಗುತ್ತಾನೆ. ಅಂತಹ ಅಪೂರ್ಣನ ಉಪಾಸನೆಗೆ ವಿಷಯನಾದುದರಿಂದ ಪರಮಾತ್ಮನು ಅಪೂರ್ಣ ಎಂದು ಕರೆಯಲ್ಪಡುತ್ತಾನೆ.

ಹೊರತು, ಅಪೂರ್ಣನೇ ಆಗುವುದಿಲ್ಲ ಎಂದು ಅಭಿಪ್ರಾಯ. ಪ್ರಾಣ ಇತ್ಯಾದಿ ನಾಮಗಳು ಪರಮಾತ್ಮನ ಸರ್ವಗುಣಪೂರ್ಣತ್ವವನ್ನು ಹೇಳುವುದಿಲ್ಲ. ಜೀವನಪ್ರದಾನ ಮೊದಲಾದ ಒಂದೊಂದು ಕ್ರಿಯೆಯ ಕರ್ತೃತ್ವವನ್ನೇ ಹೇಳುತ್ತವೆ. ಆತ್ಮಶಬ್ದ ಒಂದೇ ಸರ್ವಗುಣಪೂರ್ಣತ್ವವನ್ನು ಹೇಳುತ್ತದೆ. ಉಪನಿಷತ್ತಿನಲ್ಲಿ 'ಅಸ್ಯ ಸರ್ವಸ್ಯ' ಎಂದರೆ, ಈ ಎಲ್ಲ ಜ್ಞಾನಾನಂದಾದಿ ಗುಣಸಮೂಹಕ್ಕೆ ಈ ಆತ್ಮನೇ 'ಪದನೀಯ' ಎಂದರೆ ಆಶ್ರಯನಾಗಿರುವುದರಿಂದ ಅವನನ್ನು ಸರ್ವಗುಣವಾಚಕವಾದ ಆತ್ಮಶಬ್ದ ದಿಂದಲೇ ಉಪಾಸನೆ ಮಾಡಬೇಕು. ಅವನು ಸರ್ವಗುಣಾಶ್ರಯ ಹೇಗೆಂದರೆ, 'ಅನೇನ ಹ್ಯೇತತ್ಸರ್ವಂ ವೇದ'–ಅನೇನ ಈ ಶ್ರೀಹರಿಯಿಂದಲೇ, ಏತತ್ಸರ್ವಂ ವೇದ ಈ ಎಲ್ಲವನ್ನೂ ತಿಳಿಯುತ್ತಾನೆ, ಸರ್ವಜ್ಞನಾಗುತ್ತಾನೆ. ಉಪಾಸಕನಿಗೆ ಸ್ವಯೋಗ್ಯ ವಾದ ಸಾರ್ವಜ್ಞ್ಯವನ್ನು ಕೊಡುವುದರಿಂದ ಅವನು ಸರ್ವಗುಣಪೂರ್ಣ. ಆದ್ದರಿಂದ ಸರ್ವಗುಣಪೂರ್ಣನೆಂದು ಉಪಾಸನೆ ಮಾಡಬೇಕು. ಅವನ ಉಪಾಸನೆಯಿಂದಲೇ ಸರ್ವಜ್ಞತ್ವಾದಿ ಗುಣಲಾಭವುಂಟಾಗುತ್ತದೆ. ಇನ್ನು ಅವನಿಗೆ ಆ ಎಲ್ಲ ಗುಣ ಗಳಿವೆಯೆಂದು ಹೇಳುವುದೇನು ಎಂದು ಅರ್ಥ. ಪದ್ಯತೇ ಅನೇನ–'ಪಡೆಯಲು ಸಾಧನ' ಎಂಬ ವ್ಯುತ್ಪತ್ತಿಯಿಂದ ಪದ ಎಂದರೆ ಸಾಧನ. ಆಯಾ ಸಾಧನದಿಂದ ಆಯಾ ಫಲವನ್ನು ಪಡೆಯುವಂತೆ ಸರ್ವಗುಣಯುಕ್ತನೆಂದು ಭಗವಂತನನ್ನು ಉಪಾ ಸನೆ ಮಾಡುವುದರಿಂದ ಕೀರ್ತಿಯನ್ನೂ ಶ್ಲೋಕವನ್ನೂ ಪಡೆಯುತ್ತಾನೆ. ಶ್ಲೋಕ ಎಂದರೆ 'ಶಂ' ಮತ್ತು 'ಲೋಕ'ಗಳು. ಆದ್ದರಿಂದ ಶ್ಲೋಕಂ ಎಂದರೆ, ಪರಮಾನಂದ ಮತ್ತು ಪರಮಜ್ಞಾನಗಳನ್ನು ಎಂದರ್ಥ. ಲುಕ್ ಧಾತುವು ಜ್ಞಾನ ಎನ್ನುವ ಅರ್ಥ ದಲ್ಲಿದೆ. ಆದ್ದರಿಂದ ಲೋಕ ಎಂದರೆ ಪರಮಜ್ಞಾನ.

**ಭಾಷ್ಯ–** **ಆಸೀದೇಕೋ ಹರಿಃ ಪೂರ್ವಂ ದೇವೀ ನಾರಾಯಣೀ ತಥಾ ।**
**ಅನ್ಯದವ್ಯಕ್ತತಾಂ ಯಾತಂ ತದ್ ವ್ಯಕ್ತಮಕರೋದ್ಧರಿಃ ।**
**ಸೃಷ್ಟ್ವಾ ಜಗದಿದಂ ಸರ್ವಂ ಸೃಷ್ಟ್ವಾ ದೇಹಾಂಶ್ಚ ಸರ್ವಶಃ ।**
**ಆ ಕೇಶಾದಾ ನಖಾಗ್ರೇಭ್ಯಃ ಪ್ರವಿಷ್ಟಃ ಪುರುಷೋತ್ತಮಃ ।**
**ಯಥಾ ಪ್ರಾಣಃ ಶರೀರೇಷು ಕ್ಷುರೋ ಯದ್ವತ್ ಕ್ಷುರಸ್ತುಕೇ ।**
**ಪ್ರವಿಷ್ಟಮಪಿ ತಂ ವಿಷ್ಣುಂ ನ ಪಶ್ಯಂತಿ ಪೃಥಗ್ ಜನಾಃ ।**
**ಪ್ರವಿಷ್ಟ ಇತಿ ಜಾನಂಶ್ಚ ನೈನಂ ಜಾನಾತಿ ಸರ್ವಶಃ ।**
**ಯಸ್ಮಾತ್ ತದ್ಗುಣಭಾಗೋಽಯಂ ಪ್ರವೇಶಃ ಪ್ರಾಣನಾದಿ ಚ ।**
**ತಸ್ಮಾತ್ ಪ್ರಾಣಾದಿನಾಮಾನಿ ಕರ್ಮನಾಮಾನಿ ತಸ್ಯ ತು ।**
**ತಸ್ಮಾತ್ ಪ್ರಾಣಾದಿನಾಮ್ನಾಯ ಉಪಾಸ್ತೇ ಹರಿಮವ್ಯಯಂ ।**
**ಅಕೃತ್ಸ್ನೋಪಾಸಕಃ ಸ ಸ್ಯಾದ್ ಯಸ್ಮಾತ್ ತದ್ಗುಣಭಾಗವಿತ್ ।**

**ಅನುವಾದ**—ಪ್ರಲಯಕಾಲದಲ್ಲಿ ಶ್ರೀಹರಿ ಮತ್ತು ಲಕ್ಷ್ಮಿ ಇಬ್ಬರೇ ಇದ್ದರು. ಉಳಿದುದು ಅವ್ಯಕ್ತವಾಗಿದ್ದಿತು. ಅದನ್ನು ಶ್ರೀಹರಿಯು ವ್ಯಕ್ತವನ್ನಾಗಿ ಮಾಡಿದನು. ಆ ಪುರುಷೋತ್ತಮನು ಈ ಸಕಲ ಜಗತ್ತನ್ನೂ ಸೃಷ್ಟಿಸಿ, ಎಲ್ಲಾ ದೇವಗಳನ್ನೂ ಸೃಷ್ಟಿಸಿ, ವಾಯುವು ಶರೀರದಲ್ಲಿ ಪ್ರವೇಶಿಸುವಂತೆ ಮತ್ತು ಕತ್ತಿಯು ಒರೆಯಲ್ಲಿ ಪ್ರವೇಶಿಸುವಂತೆ, ಕೇಶದಿಂದ ನಖದ ತುದಿಯವರೆಗೂ ಪ್ರವೇಶಿಸಿದನು. ವಿಷ್ಣುವು ಶರೀರದಲ್ಲಿ ಪ್ರವಿಷ್ಟನಾಗಿದ್ದರೂ, ಪಾಮರರು ಅವನನ್ನು ತಿಳಿಯುವುದಿಲ್ಲ. ಪ್ರವಿಷ್ಟನಾಗಿದ್ದಾನೆ, ಜೀವನಪ್ರದನಾಗಿದ್ದಾನೆ ಎಂದು ಮುಂತಾಗಿ ತಿಳಿದವನೂ ಅವನನ್ನು ಪೂರ್ಣವಾಗಿ ತಿಳಿಯುವುದಿಲ್ಲ. ಏಕೆಂದರೆ ಶರೀರಪ್ರವೇಶ, ಜೀವಧಾರಣ ಮೊದಲಾದವು ಅವನ ಗುಣಗಳಲ್ಲಿ ಒಂದುಭಾಗ ಮಾತ್ರ. ಆದ್ದರಿಂದ ಯಾವನು ಶ್ರೀಹರಿಯನ್ನು ಪ್ರಾಣ ಮುಂತಾದ ಯಾವುದಾದರೊಂದು ನಾಮದಿಂದ ಉಪಾಸನೆ ಮಾಡುತ್ತಾನೆಯೋ ಅವನು ಪರಮಾತ್ಮನ ಗುಣದ ಒಂದು ಭಾಗವನ್ನು ಮಾತ್ರ ತಿಳಿಯುವುದರಿಂದ ಅಪೂರ್ಣೋಪಾಸಕನಾಗುತ್ತಾನೆ.

ಭಾಷ್ಯ–ಪೂರ್ಣತ್ವೇಽಪಿ ಪರೇಶಸ್ಯ ಯಸ್ತು ತದ್ಗುಣಭಾಗವಿತ್ ।
ಅಕೃತ್ಸ್ನವಿತ್ ಸ್ಯಾತ್ ಕೃತ್ಸ್ನಸ್ಯ ವೇತ್ತಾಽಽತ್ಮೇತಿವಿದೇವ ಯಃ ।
ಚಿದಾನಂದಾದಯೋ ಯಸ್ಯ ಗುಣಾ ಆಪ್ತಾಃ ಸದೈವ ತು ।
ಸ ಆತ್ಮೇತಿ ಪ್ರವಿಜ್ಞೇಯೋ ಗುಣಾನಾಮಾಪ್ತಿತೋ ಹರಿಃ ।
ಪ್ರಾಣನಾದೀನಿ ಕರ್ಮಾಣಿ ಚಾಽತ್ಮಶಬ್ದೋದಿತಾನಿ ತು ।
ತದೇತದಾತ್ಮರೂಪಂ ಹಿ ಗುಣಾನಾಮಾಶ್ರಯತ್ವತಃ ।
ಪದನೀಯಮಿತಿ ಪ್ರೋಕ್ತಂ ಯತಸ್ತಜ್ಜ್ಞೋಽಪಿ ಸರ್ವವಿತ್ ।
ಸಾರ್ವಜ್ಞಾದಿ ಗುಣಾಸ್ತಸ್ಯ ಕಿಮುತಾಽತ್ಮೇಶ್ವರಸ್ಯ ತು ।
ಏವಂ ಸರ್ವಗುಣೈರ್ಯುಕ್ತಂ ಸರ್ವಜೀವೇಶ್ವರಂ ಹರಿಂ ।
ಯೋ ವೇದ ತತ್ತತ್ ಸಾಧ್ಯಂ ತು ಯಥಾ ತೈಸ್ತೈಸ್ತು ಸಾಧನೈಃ ।
ಪ್ರಾಪ್ನುಯಾದೇವನೇವಾಸೌ ಕೀರ್ತಿಂ ಚ ಪರಮಂ ಸುಖಂ ।
ಜ್ಞಾನಂ ಚ ಪರಮಂ ವಿಂದೇನ್ಮುಕ್ತಃ ಸನ್ ನಾತ್ರ ಸಂಶಯಃ ।

**ಅನುವಾದ**—ಪರಮಾತ್ಮನು ಗುಣಪೂರ್ಣನಾಗಿದ್ದರೂ ಯಾರು ಅವನ ಗುಣದ ಒಂದು ಭಾಗವನ್ನು ಮಾತ್ರ ತಿಳಿಯುತ್ತಾನೆಯೋ ಅವನು ಅಪೂರ್ಣವಾಗಿ ತಿಳಿದವನಾಗುತ್ತಾನೆ. ಶ್ರೀಹರಿಯನ್ನು ಆತ್ಮಾ ಎಂದು ತಿಳಿದವನೇ ಪೂರ್ಣವಾಗಿ ತಿಳಿದವನಾಗುತ್ತಾನೆ. ಏಕೆಂದರೆ ಚಿದಾನಂದಾದಿ ಸರ್ವಗುಣಗಳು ಯಾವಾಗಲೂ ಯಾರನ್ನು ಹೊಂದಿವೆಯೋ ಅಂತಹ ಶ್ರೀಹರಿಯು ಆತ್ಮಾ. ಚಿದಾನಂದಾದಿ ಗುಣ ಮಾತ್ರವಲ್ಲದೆ

ಜೀವನಪ್ರದತ್ವಾದಿಕರ್ಮಗಳೂ ಆತ್ಮಶಬ್ದದಿಂದ ಹೇಳಲ್ಪಡುತ್ತವೆ. ಈ ಆತ್ಮರೂಪವು ಗುಣಗಳಿಗೆ ಆಶ್ರಯವಾದುದರಿಂದ ಪದನೀಯ ಎಂದು ಹೇಳಲ್ಪಡುತ್ತದೆ. ಇದನ್ನು ತಿಳಿದವನೂ ಸರ್ವಜ್ಞನಾಗಿ ಮೋಕ್ಷದಲ್ಲಿ ಸ್ವಯೋಗ್ಯಸರ್ವಗುಣಗಳನ್ನು ಹೊಂದಿದವನಾಗುವಾಗ, ಇನ್ನು ಆ ಶ್ರೀಹರಿಯಲ್ಲಿ ಸಾರ್ವಜ್ಞ್ಯ ಮುಂತಾದ ಎಲ್ಲ ಗುಣಗಳೂ ಇವೆ ಎಂದು ಬೇರೆ ಏನು ಹೇಳಬೇಕು ? ಹೀಗೆ ಸರ್ವಜೀವೇಶ್ವರನಾದ ಶ್ರೀಹರಿಯನ್ನು ಸರ್ವಗುಣಪೂರ್ಣನೆಂದು ಯಾರು ತಿಳಿಯುತ್ತಾನೆಯೋ ಅವನು ಆಯಾ ಸಾಧನಗಳಿಂದ ಆಯಾ ಫಲವನ್ನು ಪಡೆಯುವಂತೆ ಮುಕ್ತನಾಗಿ ಕೀರ್ತಿಯನ್ನೂ ಪರಮಸುಖವನ್ನೂ ಪರಮ ಜ್ಞಾನವನ್ನೂ ಪಡೆಯುತ್ತಾನೆ. ಈ ವಿಷಯದಲ್ಲಿ ಸಂಶಯವಿಲ್ಲ.

**ಉಪನಿಷತ್—ತದೇತತ್ ಪ್ರೇಯಃ ಪುತ್ರಾತ್, ಪ್ರೇಯೋ ವಿತ್ತಾತ್, ಪ್ರೇಯೋಽನ್ಯಸ್ಮಾತ್ ಸರ್ವಸ್ಮಾದಂತರತರಂ ಯದಯಮಾತ್ಮಾ । ಸ ಯೋಽನ್ಯಮಾತ್ಮನಃ ಪ್ರಿಯಂ ಬ್ರುವಾಣಂ ಬ್ರೂಯಾತ್ 'ಪ್ರಿಯಂ ರೋತ್ಸ್ಯಸಿ' ಇತಿ ಈಶ್ವರೋ ಹ।ತಥೈವ ಸ್ಯಾತ್। ಆತ್ಮಾನಮೇವ ಪ್ರಿಯಮುಪಾಸೀತ । ಸ ಯ ಆತ್ಮಾನಮೇವ ಪ್ರಿಯಮುಪಾಸ್ತೇ ನ ಹಾಸ್ಯ ಪ್ರಿಯಂ ಪ್ರಮಾಯುಕಂ ಭವತಿ ।**

ಸರ್ವಶರೀರಾಂತರ್ಗತ ಜೀವಾಂತರ್ಗತವಾದ ಪರಮಾತ್ಮನ ರೂಪವು ಪುತ್ರನಿಗಿಂತಲೂ ಹೆಚ್ಚು ಪ್ರಿಯವಾದದ್ದು. ಹಣಕ್ಕಿಂತಲೂ ಹೆಚ್ಚು ಪ್ರಿಯವಾದದ್ದು. ತನ್ನ ಆತ್ಮವೇ ಮೊದಲಾದ ಉಳಿದೆಲ್ಲಕ್ಕಿಂತಲೂ ಅತಿಶಯವಾಗಿ ಪ್ರಿಯವಾದದ್ದು. ಯಾವ ಸಜ್ಜನನು ಶ್ರೀಹರಿವ್ಯತಿರಿಕ್ತವಾದ ತನ್ನ ಸ್ವರೂಪ ಮೊದಲಾದವನ್ನೆ ಪ್ರಿಯ ಎಂದು ಹೇಳುವ ದುರಾತ್ಮನನ್ನು ಕುರಿತು ನಿನ್ನ ಸುಖವನ್ನು ನೀನೇ ಹಾಳುಮಾಡಿಕೊಳ್ಳುತ್ತೀಯೇ ಎಂದು ಹೇಳುವನೋ ಅವನು ಆ ದುರ್ಜನನ ಸುಖನಾಶ ವಿಷಯದಲ್ಲಿ ಸಮರ್ಥನೇ ಆಗುತ್ತಾನೆ. ಏಕೆಂದರೆ ಅವನ ಮಾತಿನಂತೆಯೇ ಆಗುತ್ತದೆ. ಆದ್ದರಿಂದ ಆತ್ಮಶಬ್ದವಾಚ್ಯನಾದ ಹರಿಯನ್ನೇ ಪ್ರಿಯನೆಂದು ಉಪಾಸನೆ ಮಾಡಬೇಕು. ಹಾಗೆ ಉಪಾಸನೆ ಮಾಡುವವನ ಸುಖಕ್ಕೆ ಎಂದೂ ಚ್ಯುತಿ ಬರುವುದಿಲ್ಲ.

**ಭಾಷ್ಯ—ಸ ಏಷ ವಿಷ್ಣುರ್ಭಗವಾನ್ ಪುತ್ರಾತ್ ವಿತ್ತಾತ್ ತಥಾಽತ್ಮನಃ ।**
**ಅನ್ಯಸ್ಮಾದಪಿ ಸರ್ವಸ್ಮಾತ್ ಪ್ರೇಷ್ಠ ಏವ ಸ್ವಭಾವತಃ ।**
**ಆತ್ಮನೋಽಪಿ ಪ್ರಿಯತ್ವಂ ತು ತೇನೈವ ಕೃತಮಂಜಸಾ ।**
**ಆತ್ಮನೋ ನಿರಯಾಯೈವ ಕುರ್ಯಾತ್ ಕರ್ಮಾಣಿ ನಿತ್ಯಶಃ ।**
**ಯತೋಽತಃ ಸ್ವಾತ್ಮನಶ್ಚಾಪಿ ಸ್ವಾಪ್ರಿಯತ್ವಮುದಾಹೃತಮ್ ।**

**ಸ ಚೇದಪ್ರಿಯಕೃದ್ ವಿಷ್ಣುರ್ನಾಽತ್ಮಾಽಪಿ ಪ್ರಿಯತಾಂ ವ್ರಜೇತ್ ।**
**ಅಸ್ಮಿನ್ ಪ್ರಿಯೇ ಪ್ರಿಯಂ ಸರ್ವಂ ತಸ್ಮಾದೇಕಃ ಪ್ರಿಯೋ ಹರಿಃ ।**
**ಸ ಚಾಽತ್ಮಶಬ್ದೇನೋದ್ದಿಷ್ಟೋ ಯಸ್ಮಾದಾಪ್ತಗುಣಃ ಪ್ರಭುಃ ।**

**ಅನುವಾದ**—ಆ ಸರ್ವಾಂತರ್ಯಾಮಿಯಾದ ಭಗವಾನ್ ವಿಷ್ಣುವೇ ಪುತ್ರನಿಗಿಂತಲೂ, ಹಣಕ್ಕಿಂತಲೂ, ತನಗಿಂತಲೂ ಉಳಿದೆಲ್ಲಕ್ಕಿಂತಲೂ. ಸ್ವಾಭಾವಿಕವಾಗಿ ಅತ್ಯಂತ ಪ್ರಿಯನಾದವನು. ಜೀವನು ತನಗೆ ತಾನೇ ಪುತ್ರಾದಿಗಳೆಲ್ಲಕ್ಕಿಂತಲೂ ಹೆಚ್ಚು ಪ್ರಿಯನಾಗಿರುವುದೂ ಪರಮಾತ್ಮನಿಂದಾಗಿಯೇ. ಏಕೆಂದರೆ ಕೆಲವು ಜೀವರು ತಮಗೆ ನರಕವನ್ನುಂಟುಮಾಡುವ ಕರ್ಮಗಳನ್ನು ತಾವೇ ಯಾವಾಗಲೂ ಮಾಡುವುದರಿಂದ ತಮಗೆ ತಾವೇ ಅಪ್ರಿಯರಾಗಿರುವುದೂ ಉಂಟು. ಹೀಗೆ ತಮಗೆ ತಾವೇ ಅಪ್ರಿಯರಾಗಿರುವುದೂ ಜೀವರಿಗೆ ತಮ್ಮ ವಶದಲ್ಲಿಲ್ಲ. ವಿಷ್ಣುವು ಜೀವನನ್ನು ಅಪ್ರಿಯನನ್ನಾಗಿ ಮಾಡಿದರೆ, ಜೀವನು ತನಗೆ ಅಪ್ರಿಯನಾಗುತ್ತಾನೆ. ಹಾಗೆಯೇ ವಿಷ್ಣುವು ಪ್ರಿಯನಾದರೆ ಎಲ್ಲವೂ ಪ್ರಿಯವಾಗುತ್ತದೆ. ಆದ್ದರಿಂದ ವಿಷ್ಣುವೇ ಮುಖ್ಯಪ್ರಿಯನಾದವನು. ಆ ವಿಷ್ಣುವೇ ಗುಣಪೂರ್ಣನಾಗಿರುವುದರಿಂದ ಆತ್ಮಶಬ್ದದಿಂದ ಉಕ್ತನಾಗಿದ್ದಾನೆ.

**ಭಾಷ್ಯ—ಅತೋ ವಿಷ್ಣೋಃ ಪ್ರಿಯಂ ಬ್ರೂಯಾದ್**
**ಯಃ ಸ್ವಾತ್ಮಾದ್ಯಂ ದುರಾತ್ಮವಾನ್ ।**
**ಪ್ರಿಯರೋಧಂ ಕರೋಷೀತಿ**
**ತಂ ಬ್ರೂಯಾದ್ ವೈಷ್ಣವೋ ಮಹಾನ್ ।**
**ಏವಂ ವದನ್ ವೈಷ್ಣವಸ್ತು ಸಮರ್ಥಃ ಪ್ರಿಯರೋಧನೇ ।**
**ತಸ್ಯ ಸ್ಯಾಚ್ಚ ವಿಶೇಷೇಣ ತದುಕ್ತ್ಯೈವಾಪಿ ದುಃಖಿನಃ ।**
**ತಸ್ಮಾತ್ ಸರ್ವಪ್ರಿಯೋ ವಿಷ್ಣುರಿತ್ಯುಪಾಸ್ತೇ ಸದಾಽಪಿ ಯಃ ।**
**ನಾಸ್ಯ ಪ್ರಿಯಮನಿತ್ಯಂ ಸ್ಯಾದಸ್ಯ ಪ್ರೀತಿಃ ಸದಾ ಭವೇತ್ ।**
**ತಸ್ಮಾತ್ ಸರ್ವಪ್ರಿಯಂ ವಿಷ್ಣುಮುಪಾಸೀತೈವ ನಿತ್ಯಶಃ ।**
**ನಿತ್ಯಪ್ರಿಯಕರೋ ವಿಷ್ಣುರ್ಭವೇತ್ ತಸ್ಯಾಪ್ಯಜಃ ಸ್ವಯಮ್ ।**
**ಇತ್ಯಧ್ಯಾತ್ಮೇ ॥**

**ಅನುವಾದ**—ಹೀಗೆ ವಿಷ್ಣುವೇ ಮುಖ್ಯಪ್ರಿಯನಾಗಿರುವುದರಿಂದ ಅವನಿಗಿಂತಲೂ ಹೆಚ್ಚಾಗಿ ತನ್ನ ಸ್ವರೂಪವನ್ನೂ ಪುತ್ರಾದಿಗಳನ್ನೂ ಪ್ರಿಯವೆಂದು ಯಾವ ದುರಾತ್ಮನು ಹೇಳುತ್ತಾನೆಯೋ ಅವನನ್ನು ಕುರಿತು ಮಹಾತ್ಮನಾದ ವೈಷ್ಣವನು 'ನಿನ್ನ ಸುಖವನ್ನು ನೀನೇ ನಾಶಪಡಿಸುತ್ತಿದ್ದೀಯೆ' ಎಂದು ಹೇಳಬೇಕು. ಹೀಗೆ ಹೇಳುತ್ತಲೇ ವೈಷ್ಣವನು ಅವನ ಸುಖ ನಾಶಪಡಿಸಲು ಸಮರ್ಥನಾಗುತ್ತಾನೆ. ಆ

ದುರ್ಜನನು ಅಂತಹ ಮಾತನ್ನು ಆಡಿದ ಕಾರಣದಿಂದಲೇ ದುಃಖವನ್ನು ಪಡೆಯುವ ನಾದರೂ ವೈಷ್ಣವನ ಶಾಪರೂಪವಾದ ಈ ಮಾತಿನಿಂದ ವಿಶೇಷವಾದ ದುಃಖವನ್ನು ಪಡೆಯುತ್ತಾನೆ. ಆದ್ದರಿಂದ ವಿಷ್ಣುವು ಎಲ್ಲಕ್ಕಿಂತಲೂ ಮುಖ್ಯಪ್ರಿಯನಾಗಿರುವುದ ರಿಂದ, ಯಾರು ಹಾಗೆ ಯಾವಾಗಲೂ ಉಪಾಸನೆ ಮಾಡುತ್ತಾನೆಯೋ ಅವನ ಸುಖವು ನಶ್ವರವಾಗಿರುವುದಿಲ್ಲ. ಅವನಿಗೆ ಯಾವಾಗಲೂ ಸುಖ ಉಂಟಾಗುತ್ತದೆ. ಆದ್ದರಿಂದ ವಿಷ್ಣುವನ್ನು ಎಲ್ಲಕ್ಕಿಂತ ಹೆಚ್ಚು ಪ್ರಿಯನೆಂದೇ ಯಾವಾಗಲೂ ಉಪಾಸನೆ ಮಾಡ ಬೇಕು. ಜನನರಹಿತನಾದ ವಿಷ್ಣುವು ಅಂತಹ ಉಪಾಸಕನಿಗೆ ಯಾವಾಗಲೂ ಸುಖ ವನ್ನೇ ಮಾಡುತ್ತಾನೆ, ಎಂದು ಅಧ್ಯಾತ್ಮ ಎಂಬ ಗ್ರಂಥದಲ್ಲಿ ಹೇಳಿದೆ.

**ಅಹಂ ಬ್ರಹ್ಮಾಸ್ಮಿ ಎಂಬುದು ಪರಮಾತ್ಮನ ಗುಣಪೂರ್ಣತ್ವೋಪಾಸನೆ :**

**ಉಪನಿಷತ್—ತದಾಹುರ್ಯದ್ ಬ್ರಹ್ಮವಿದ್ಯಯಾ ಸರ್ವಂ ಭವಿಷ್ಯಂತೋ ಮನುಷ್ಯಾ ಮನ್ಯಂತೇ 'ಕಿಮು ತದ್ ಬ್ರಹ್ಮಾವೇದ್ ಯಸ್ಮಾತ್ ತತ್ ಸರ್ವಮಭವದಿ'ತಿ ।**

ಬ್ರಹ್ಮವಿದ್ಯೆಯಿಂದ ತಮ್ಮ ಯೋಗ್ಯತೆಗನುಗುಣವಾಗಿ ಸ್ವರೂಪದಲ್ಲಿ ಪೂರ್ಣತೆ ಯನ್ನು ಪಡೆಯುವ ಮಹಾತ್ಮರು 'ಬ್ರಹ್ಮವಿದ್ಯೆಯಿಂದ ಯೋಗ್ಯವಾದ ಎಲ್ಲವೂ ಅಂದರೆ ಜ್ಞಾನಾನಂದಾತ್ಮಕವಾದ ಸ್ವರೂಪವು ಅಭಿವ್ಯಕ್ತವಾಗುತ್ತದೆ' ಎಂದು ಹೇಳು ತ್ತಾರೆ. ಈ ವಿಷಯದಲ್ಲಿ ಕೆಲವು ಮನುಷ್ಯರು ಪ್ರಶ್ನೆ ಮಾಡುತ್ತಾರೆ– ಜೀವ ಸ್ವರೂಪವು ಬ್ರಹ್ಮಜ್ಞಾನದಿಂದಲೇ ಅಭಿವ್ಯಕ್ತವಾಗುವುದಾದರೆ, ಬ್ರಹ್ಮನು ತನ್ನ ಪೂರ್ಣತೆಯನ್ನು ತಾನು ಯಾವಾಗಲೂ ಪಡೆದಿರುವುದರಿಂದ ಅವನೂ ಕೂಡಾ ತನ್ನ ಸ್ವರೂಪವನ್ನು ತಿಳಿದೇ ಪೂರ್ಣನಾದನೇನು ?

**ಭಾಷ್ಯ—ಬ್ರಹ್ಮವಿದ್ಯಯಾ ಸರ್ವಂ ಭವಿಷ್ಯಂತಃ ಆತ್ಮಯೋಗ್ಯತಾಪೂರ್ತಿಂ ಪ್ರಾಪ್ನುವಂತೋ ಮಹಾಂತೋ ಯದಾಹುಃ 'ಬ್ರಹ್ಮವಿದ್ಯಯಾ ಸ್ವ ಯೋಗ್ಯಂ ಸರ್ವಂ ಪ್ರಾಪ್ಯತ' ಇತಿ । 'ನಿತ್ಯನಿರ್ದುಃಖಾನಂದಾನುಭವ ರೂಪೋ ಹಿ ಸ್ವತ ಉತ್ತಮೋ ಜೀವಃ । ತಾದೃಶಂ ರೂಪಮಜ್ಞಾನಾತ್ ತಿರೋಹಿತಂ ಬ್ರಹ್ಮವಿದ್ಯಯಾಽಭಿವ್ಯಜ್ಯತ ಏವ । ನ ಚಾನ್ಯಥಾಽಭಿ ವ್ಯಜ್ಯತ' ಇತಿ ಸಂತೋ ಯದಾಹುಃ ತತ್ರ ಕೇಚಿನ್ಮನುಷ್ಯಾ ಇತಿ ಮನ್ಯಂತೇ–'ಸ್ವರೂಪಮಪಿ ಬ್ರಹ್ಮವಿದ್ಯಯಾ ಅಭಿವ್ಯಜ್ಯತೇ ಚೇತ್ ತದ್ ಬ್ರಹ್ಮಾಪಿ ಯಸ್ಮಾತ್ ಸರ್ವಮಭವತ್ ಪರಿಪೂರ್ಣಮಭವತ್ ತಸ್ಮಾತ್ ಸ್ವರೂಪಂ ಜ್ಞಾತ್ವೈವಾಭವತ್ ಕಿಮು'ತಿ ।**

**ಅನುವಾದ**—ಬ್ರಹ್ಮಾಪರೋಕ್ಷ ಜ್ಞಾನದಿಂದ ಎಲ್ಲವನ್ನೂ ಹೊಂದುವ

ಎಂದರೆ, ತಮಗೆ ಯೋಗ್ಯವಾದ ಪೂರ್ಣತ್ವವನ್ನು ಹೊಂದುವ ಮಹಾತ್ಮರು ಹೇಳು ತ್ತಾರೆ– 'ಬ್ರಹ್ಮಾಪರೋಕ್ಷ ಜ್ಞಾನದಿಂದ ಎಲ್ಲವೂ ಲಭಿಸುತ್ತದೆ' ಎಂದು. ಅಂದರೆ ಮುಕ್ತಿಯೋಗ್ಯಜೀವನು ಸ್ವಭಾವತಃ ನಿತ್ಯನಿರ್ದುಃಖಾನಂದಜ್ಞಾನಸ್ವರೂಪನಾಗಿದ್ದಾನೆ. ಅಂತಹ ಸ್ವರೂಪವು ಅಜ್ಞಾನದಿಂದ ಮುಚ್ಚಲ್ಪಟ್ಟಿದ್ದು ಬ್ರಹ್ಮಾಪರೋಕ್ಷ ಜ್ಞಾನ ದಿಂದ ಅಭಿವ್ಯಕ್ತವಾಗುತ್ತದೆ. ಕೇವಲ ಕರ್ಮಾದಿ ಸಾಧನಗಳಿಂದ ಅಭಿವ್ಯಕ್ತವಾಗುವು ದಿಲ್ಲ. ಹೀಗೆ ಸಜ್ಜನರು ಏನು ಹೇಳುತ್ತಾರೆಯೋ ಆ ವಿಷಯದಲ್ಲಿ ಕೆಲವು ಮನುಷ್ಯರು ಈ ರೀತಿ ಭಾವಿಸುತ್ತಾರೆ– ಜೀವನ ಸ್ವರೂಪವೂ ಬ್ರಹ್ಮಜ್ಞಾನದಿಂದಲೇ ಅಭಿವ್ಯಕ್ತ ವಾಗುವುದಾದರೆ ಆ ಬ್ರಹ್ಮನೂ ಪೂರ್ಣನಾಗಿರುವುದರಿಂದ ಅವನೂ ತನ್ನ ಸ್ವರೂಪ ವನ್ನು ತಿಳಿದುಕೊಂಡೇ ಪೂರ್ಣನಾದನೋ ಹೇಗೆ ?

**ಉಪನಿಷತ್—ಬ್ರಹ್ಮ ವಾ ಇದಮಗ್ರ ಆಸೀತ್ । ತದಾತ್ಮಾನಮೇವಾವೇ- ದಹಂ ಬ್ರಹ್ಮಾಸ್ಮೀತಿ । ತಸ್ಮಾತ್ ತತ್ ಸರ್ವಮಭವತ್ । ತದ್ ಯೋ ಯೋ ದೇವಾನಾಂ ಪ್ರತ್ಯಬುಧ್ಯತ ಸ ಏವ ತದಭವತ್ ।ತಥರ್ಷೀಣಾಂ। ತಥಾ ಮನುಷ್ಯಾಣಾಂ । ತದ್ಧೈತತ್ ಪಶ್ಯನ್ ಋಷಿರ್ವಾಮದೇವಃ ಪ್ರತಿಪೇದೇ 'ಅಹಂ ಮನುರಭವಂ ಸೂರ್ಯಶ್ಚೇ'ತಿ । ತದಿದಮಪ್ಯೇತರ್ಹಿ ಯ ಏವಂ ವೇದ 'ಅಹಂ ಬ್ರಹ್ಮಾಸ್ಮೀ'ತಿ ಸ ಇದಂ ಸರ್ವಂ ಭವತಿ । ತಸ್ಯ ಹ ನ ದೇವಾಶ್ಚ ನಾಭೂತ್ಯಾ ಈಶತೇ। ಆತ್ಮಾ ಹ್ಯೇಷಾಂ ಸ ಭವತಿ।**

ಈ ಜಗತ್ತಿನ ಸೃಷ್ಟಿಗಿಂತ ಮೊದಲು ಬ್ರಹ್ಮನೇ ಇದ್ದನು. ಅವನು 'ಎಲ್ಲರಿಗೂ ಅಂತರ್ಯಾಮಿಯಾದ್ದರಿಂದ ಯಾರಿಗೂ ತ್ಯಜಿಸಲು ಸಾಧ್ಯವಿಲ್ಲದವನು, ಪೂರ್ಣನಾದ ವನು ಮತ್ತು ಯಾವಾಗಲೂ ಇದ್ದೇನೆಂದು ತಿಳಿಯಲ್ಪಡುವವನು' ಎಂದು ತನ್ನನ್ನೇ ತಿಳಿದವನು. ಆದ್ದರಿಂದ ಅವನು ಯಾವಾಗಲೂ ಪೂರ್ಣನಾಗಿದ್ದಾನೆ. ದೇವತೆ ಗಳಲ್ಲಿ ಯಾರು ಯಾರು ಅವನ ಈ ಅಹೇಯತ್ವಾದಿ ಗುಣಗಳನ್ನು ಹೇಗೆ ಹೇಗೆ ಉಪಾಸನೆ ಮಾಡಿದರೋ ಅವರು ತಮ್ಮ ಆ ಜ್ಞಾನಕ್ಕೆ ಮತ್ತು ಯೋಗ್ಯತೆಗೆ ಅನು ಗುಣವಾಗಿ ಜ್ಞಾನಾನಂದಾದಿಗಳಲ್ಲಿ ಪೂರ್ಣತ್ವವನ್ನು ಪಡೆದರು. ಹಾಗೆಯೇ ಋಷಿಗಳ ಲ್ಲಿಯೂ ಕೂಡ. ಮನುಷ್ಯರಲ್ಲಿಯೂ ಕೂಡ. ಆ ಪರಬ್ರಹ್ಮನನ್ನು ಸಾಕ್ಷಾತ್ಕರಿಸಿಕೊಂಡ ವಾಮದೇವ ಋಷಿಯು ಬ್ರಹ್ಮನ ಸರ್ವಜೀವಾಹೇಯತ್ವಾದಿಗುಣಗಳನ್ನು 'ಅಹಂ ಮನುರಭವಂ ಸೂರ್ಯಶ್ಚ' ಎಂಬ ಸೂಕ್ತದಿಂದ ಪ್ರತಿಪಾದ್ಯಗಳನ್ನಾಗಿ ಕಂಡುಕೊಂಡನು. ದೇವತೆಗಳೇ ಮೊದಲಾದವರು ಹಿಂದೆ ಬ್ರಹ್ಮನನ್ನು ತಿಳಿದು ಪೂರ್ಣರಾದುದಷ್ಟೇ ಅಲ್ಲ, 'ಈಗಲೂ ಯಾರು ಹರಿಯನ್ನು ಅಹೇಯ, ಪೂರ್ಣ ಮತ್ತು ಯಾವಾಗಲೂ ಇರುವವನೆಂದು ತಿಳಿಯಲ್ಪಡುವವನೆಂದೂ, ಅವನು ತನ್ನನ್ನು ಹಾಗೇ ತಿಳಿಯುವ ನೆಂದೂ ಉಪಾಸನೆ ಮಾಡುವನೋ ಅವನು ಸ್ವಯೋಗ್ಯವಾದ ಆನಂದಾದಿ ಪೂರ್ಣತೆ

ಯನ್ನು ಪಡೆಯುತ್ತಾನೆ. ದೇವತೆಗಳೂ ಕೂಡಾ ಅವನಿಗೆ ಈ ಜ್ಞಾನದ ಫಲ ಬರುವುದನ್ನು ತಡೆಯಲಾರರು. ತಡೆಯಲು ಸಾಮರ್ಥ್ಯವಿಲ್ಲ ಎಂದಲ್ಲ. ಹರಿಯು ಈ ದೇವತೆಗಳಿಗೆ ಸ್ವಾಮಿಯಾಗಿದ್ದಾನೆ. ಆದ್ದರಿಂದ ಪ್ರೀತಿಯಿಂದಲೇ ದೇವತೆಗಳು ಹರಿಪ್ರಿಯನಾದ ಜ್ಞಾನಿಗೆ ವಿಘ್ನ ಮಾಡುವುದಿಲ್ಲ.

**ಉಪನಿಷತ್–ಅಥ ಯೋಽನ್ಯಾಂ ದೇವತಾಮುಪಾಸ್ತೇ 'ಅನ್ಯೋಽಸಾವನ್ಯೋಽಹಮಸ್ಮೀ'ತಿ ನ ಸ ವೇದ । ಯಥಾ ಪಶುಃ । ಏವಂ ಸ ದೇವಾನಾಂ । ಯಥಾ ಹ ವೈ ಬಹವಃ ಪಶವೋ ಮನುಷ್ಯಂ ಭುಂಜ್ಯುರೇವಮೇಕೈಕಃ ಪುರುಷೋ ದೇವಾನ್ ಭುನಕ್ತಿ । ಏಕಸ್ಮಿನ್ನೇವ ಪಶಾವಾದೀಯಮಾನೇ ಪ್ರಿಯಂ ಭವತಿ ಕಿಮು ಬಹುಷು । ತಸ್ಮಾದೇಷಾಂ ತನ್ನ ಪ್ರಿಯಂ ಯದೇತನ್ಮನುಷ್ಯಾ ವಿದ್ಯುಃ ।**

ಯಾರು ಜೀವವಿಲಕ್ಷಣನಾದ ವಿಷ್ಣುರೂಪ ದೇವತೆಯನ್ನು, 'ವಿಷ್ಣುವು ಬೇರೆ, ಅಹೇಯತ್ವಾದಿ ಗುಣವುಳ್ಳವನು ಬೇರೆ' ಎಂದು ಉಪಾಸನೆ ಮಾಡುತ್ತಾನೆಯೋ, ಅಹೇಯತ್ವಾದಿಗುಣ ಉಳ್ಳವನು ಬೇರೆ ವಿಷ್ಣುವು ಬೇರೆ ಎಂದು ತಿಳಿದು, ಬ್ರಹ್ಮರುದ್ರಾದಿ ಇತರ ದೇವತೆಯನ್ನೇ ಯಾರು ಉಪಾಸನೆ ಮಾಡುತ್ತಾನೆಯೋ, ಯಾರು ಜೀವವಿಲಕ್ಷಣನಾದ ವಿಷ್ಣುರೂಪ ದೇವತೆಯನ್ನು ಜೀವವಿಲಕ್ಷಣನಲ್ಲವೆಂದೂ 'ಅಹೇಯತ್ವಾದಿಗುಣವುಳ್ಳವನು ಅನ್ಯ, ಈ ವಿಷ್ಣುವು ಅನ್ಯ' ಎಂದೂ ಉಪಾಸನೆ ಮಾಡುತ್ತಾನೆಯೋ, ಯಾರು ಜೀವ ವಿಲಕ್ಷಣನಾದ ವಿಷ್ಣುರೂಪದೇವತೆಯನ್ನು ತನ್ನ ಗುಣಗಳಿಂದಲೂ ಭಿನ್ನನೆಂದೂ, ಅಹೇಯತ್ವಾದಿ ಗುಣವುಳ್ಳವನು ಅನ್ಯ, ಈ ವಿಷ್ಣುವು ಅನ್ಯ ಎಂದೂ ಉಪಾಸನೆ ಮಾಡುತ್ತಾನೆಯೋ ಅವನು ಸರಿಯಾಗಿ ತಿಳಿದಿಲ್ಲ. ಅವನು ಕೇವಲ ಮನುಷ್ಯರ ಭೋಜನಕ್ಕೆ ಉಪಯುಕ್ತವಾದ ಹಾಲು ಮೊಸರು ಮುಂತಾದ ಪದಾರ್ಥವನ್ನೊದಗಿಸುವ ಜ್ಞಾನರಹಿತ ಪಶುವಿನಂತೆ. ಆದರೆ ಜ್ಞಾನಿಯಾದವನು ದೇವತೆಗಳಿಗೆ ಪಶುವಿನಂತೆ ಪ್ರಿಯನಾಗಿರುತ್ತಾನೆ. ಹೇಗೆ ಅನೇಕ ಪಶುಗಳು ಒಬ್ಬ ಮನುಷ್ಯನಿಗೆ ಭೋಜನ ಪದಾರ್ಥಗಳನ್ನು ಒದಗಿಸಿಕೊಡುತ್ತವೆಯೋ ಹಾಗೆ ಒಬ್ಬೊಬ್ಬ ಜ್ಞಾನಿಯೂ ಅನೇಕ ದೇವತೆಗಳಿಗೆ ಸಂತೋಷವನ್ನುಂಟಮಾಡುತ್ತಾನೆ. ಲೋಕದಲ್ಲಿ ಒಂದು ಪಶುವನ್ನು ತೆಗೆದುಕೊಂಡು ಬಂದರೂ ಸಂತೋಷವಾಗುತ್ತದೆ. ಇನ್ನು ಅನೇಕ ಪಶುಗಳಿಂದ ಸಂತೋಷವಾಗುತ್ತದೆ ಎಂದು ಬೇರೆ ಹೇಳುವುದೇನು? ಆದ್ದರಿಂದ ಅನೇಕ ಪಶುಗಳಂತೆ ಒಬ್ಬನೇ ಜ್ಞಾನಿ ಸಂತೋಷದಾಯಕನಾಗಿರುವುದರಿಂದ ಆವನು ದೇವತೆಗಳಿಗೆ ಅತ್ಯಂತ ಪ್ರಿಯನೆಂದು ಬೇರೆ ಹೇಳಬೇಕಾಗಿಲ್ಲ. ಆದ್ದರಿಂದ ಮನುಷ್ಯರು ವಿಷ್ಣುವಿಗಿಂತ ಅನ್ಯದೇವತೆಗಳನ್ನು ಉಪಾಸನೆ ಮಾಡುವುದು ದೇವತೆಗಳಿಗೆ ಸರ್ವಥಾ ಅಪ್ರಿಯ.

**ಭಾಷ್ಯ–ಸತ್ಯಮ್ । ತದಪಿ ಸ್ವರೂಪಂ ನಿತ್ಯಾಪರೋಕ್ಷಜ್ಞಾನೇನ ಸರ್ವದಾ ಜಾನಾತ್ಯೇವ। ಅತ ಏವ ಸರ್ವದಾ ಪರಿಪೂರ್ಣಮಿತಿ ತೇಷಾಂ ಪರಿಹಾರಃ। 'ತದಾತ್ಮಾನಮೇವಾವೇತ್ ತಸ್ಮಾತ್ ಸರ್ವಮಭವದಿ'ತಿ, 'ಆತ್ಮಾ ವಾ ಇದಮೇಕ ಏವಾಗ್ರ ಆಸೀತ್' 'ಸದೇವ ಸೋಮ್ಯೇದಮಗ್ರ ಆಸೀತ್' ಇತ್ಯಾದಿವತ್ ಸದಾತನಂ ಜ್ಞಾನಂ, ಪೂರ್ಣಭಾವಂ ಚಾಹ ।**

**ಅನುವಾದ**—'ನಿಜ. ಬ್ರಹ್ಮನೂ ಕೂಡಾ ನಿತ್ಯಾಪರೋಕ್ಷಜ್ಞಾನದಿಂದ ತನ್ನ ಸ್ವರೂಪವನ್ನು ಯಾವಾಗಲೂ ತಿಳಿದೇ ಇದ್ದಾನೆ. ಮತ್ತು ಆದರಿಂದ ಯಾವಾಗಲೂ ಪರಿಪೂರ್ಣನಾಗಿದ್ದಾನೆ. ಮೊದಲಿಗೆ ಅಪರಿಪೂರ್ಣನಾಗಿದ್ದು ಜ್ಞಾನದಿಂದ ಪೂರ್ಣತ್ವ ಹೊಂದಿಲ್ಲ' ಎಂದು ಅವರಿಗೆ ಉತ್ತರ. 'ಅವನು ತನ್ನನ್ನೇ ತಿಳಿದುಕೊಂಡನು, ಆದ್ದರಿಂದ ಪರಿಪೂರ್ಣನಾದನು' ಎಂಬ ವಾಕ್ಯವು 'ಆತ್ಮನೊಬ್ಬನೇ ಈ ಜಗತ್ತಿಗಿಂತ ಮೊದಲು ಇದ್ದನು' 'ಸತ್' ಎಂದು ಕರೆಸಲ್ಪಡುವ ಬ್ರಹ್ಮನೊಬ್ಬನೇ ಈ ಜಗತ್ತಿಗಿಂತ ಮೊದಲು ಇದ್ದನು' ಎಂಬ ವಾಕ್ಯಗಳಂತೆ 'ತಿಳಿದುಕೊಂಡನು, ಪರಿಪೂರ್ಣನಾದನು' ಎಂಬ ಭೂತಕಾಲದ ಕ್ರಿಯಾಪದಗಳಿಂದ 'ಯಾವಾಗಲೂ ತಿಳಿದಿದ್ದಾನೆ, ಯಾವಾಗಲೂ ಪೂರ್ಣನಾಗಿದ್ದಾನೆ' ಎಂಬ ಅರ್ಥವನ್ನೇ ಬೋಧಿಸುತ್ತದೆ ಹೊರತು ಮೊದಲಿಗೆ ಅಪೂರ್ಣನಾಗಿದ್ದು ಬಳಿಕ ಪರಿಪೂರ್ಣನಾದನೆಂದಲ್ಲ.

**'ಅಹಂ ಬ್ರಹ್ಮಾಸ್ಮಿ' ಅಭೇದ ಬೋಧಕವಲ್ಲ :**

**ಭಾಷ್ಯ—'ಇದಮಗ್ರೇ' ಅಸ್ಯಾಗ್ರ ಇತಿ ಷಷ್ಠ್ಯರ್ಥೇ ದ್ವಿತೀಯಾ । ಅಹಂ ಅಹೇಯಂ, ಬ್ರಹ್ಮ ಪರಿಪೂರ್ಣಂ, ಅಸ್ಮಿ ಸರ್ವದಾಽಸ್ತೀತಿ ನೇಯ್ಯಂ ಇತ್ಯೇತೈಃ ವಿಶೇಷಣೈಃ ಆತ್ಮಾನಂ ಸ್ವರೂಪಮೇವಾವೇತ್ ।**

**ಯದ್ಯಹಂಶಬ್ದಃ ಅಸ್ಮಚ್ಛಬ್ದಾರ್ಥವಾಚೀ ಅಸ್ಮಿಶಬ್ದಶ್ಚೋತ್ತಮಪುರುಷೇ ತದಾಽಽತ್ಮಾನಮಿತಿ ವ್ಯರ್ಥಂ ಸ್ಯಾತ್ । ಅತಃ 'ಅಹಂ' 'ಅಸ್ಮಿ' ಶಬ್ದೌ ಉಕ್ತಾರ್ಥಾವೇವ। ಅಗ್ರೇ ಅನಾದಿಕಾಲತ ಏವ ವಿದ್ಯಮಾನಮಾತ್ಮಾನಂ ಜಾನಾತಿ ಚ ತದ್ ಬ್ರಹ್ಮೇತ್ಯರ್ಥಃ । ಸರ್ವನಿಯಂತೃತ್ವೇನ ಸರ್ವಗತತ್ವಾದಹೇಯಮ್ ।**

**ಅನುವಾದ**—'ಇದಮಗ್ರೇ' ಎಂದರೆ 'ಈ ಜಗತ್ತಿನ ಮೊದಲಿನಲ್ಲಿ' ಎಂದು ಅರ್ಥ. ಇದಂ ಎಂಬಲ್ಲಿ ಇರುವ ದ್ವಿತೀಯಾ ವಿಭಕ್ತಿ ಷಷ್ಠೀ ವಿಭಕ್ತಿಯ ಅರ್ಥದಲ್ಲಿದೆ. 'ತದಾತ್ಮಾನಮೇವಾವೇದ್ ಅಹಂ ಬ್ರಹ್ಮಾಸ್ಮೀತಿ' ಎಂದರೆ, ಅಹಂ–ಯಾರಿಂದಲೂ ತ್ಯಜಿಸಲು ಸಾಧ್ಯವಿಲ್ಲದವನು, ಬ್ರಹ್ಮ–ಪರಿಪೂರ್ಣನಾದವನು, ಅಸ್ಮಿ–ಯಾವಾಗಲೂ

ಇದ್ದಾನೆಂದು ತಿಳಿಯಬೇಕಾದವನು. 'ಈ ಮೂರು ವೈಶಿಷ್ಟ್ಯಗಳಿಂದ ಕೂಡಿದವನು ತಾನೆಂದು ಬ್ರಹ್ಮನು ತನ್ನ ಸ್ವರೂಪವನ್ನೇ ತಿಳಿದನು' ಎಂಬರ್ಥ.

ಅಹಂ ಶಬ್ದವು ನಾನು ಎಂಬ ಅರ್ಥದಲ್ಲಿ ಇದೆ ಎಂದೂ, ಅಸ್ಮಿ ಶಬ್ದವು ಉತ್ತಮಪುರುಷದ ಕ್ರಿಯಾಪದವೆಂದೂ ಇಟ್ಟುಕೊಳ್ಳುವ ಪಕ್ಷದಲ್ಲಿ 'ತದವೇತ್ ಅಹಂ ಬ್ರಹ್ಮಾಸ್ಮೀತಿ'–'ಅದು ತಿಳಿದುಕೊಂಡಿತು ನಾನು ಬ್ರಹ್ಮನಾಗಿದ್ದೇನೆ' ಎಂದು ಇಷ್ಟೇ ಹೇಳಿದರೆ ಸಾಕಾಗುತ್ತಿತ್ತು. ಯಾರನ್ನು ತಿಳಿದುಕೊಂಡಿತು ಎಂದು ಕರ್ಮಪದದ ಆಕಾಂಕ್ಷೆಯಿಲ್ಲದಿರುವುದರಿಂದ 'ಆತ್ಮಾನಂ ಅವೇತ್' 'ತನ್ನನ್ನು ತಿಳಿದುಕೊಂಡಿತು' ಎಂದು ಕರ್ಮಪದ ವ್ಯರ್ಥವಾದೀತು. ಆದ್ದರಿಂದ ಅಹಂ ಮತ್ತು ಅಸ್ಮಿ ಶಬ್ದಗಳಿಗೆ ನಾವು ಹೇಳಿದ ಅರ್ಥವನ್ನೇ ತೆಗೆದುಕೊಳ್ಳಬೇಕು. ಹಾಗಾದರೆ ಈ ವಾಕ್ಯದಿಂದಲೇ 'ಬ್ರಹ್ಮನಿಗೆ ಬ್ರಹ್ಮಜ್ಞಾನ ಉಂಟೆ' ಎಂಬ ಪ್ರಶ್ನೆಗೆ ಉತ್ತರ ಬಂದಿರುವುದರಿಂದ 'ಬ್ರಹ್ಮ ವಾ ಇದಮಗ್ರ ಆಸೀತ್' ಎಂಬ ವಾಕ್ಯಕ್ಕೆ ಏನು ಪ್ರಯೋಜನ ಎಂಬ ಪ್ರಶ್ನೆ ಬರುತ್ತದೆ. ಅದಕ್ಕೆ ಹೀಗೆ ಪರಿಹಾರ ಹೇಳಬೇಕು–'ತದಾತ್ಮಾನಮೇವಾವೇತ್, ತಸ್ಮಾತ್ ಸರ್ವಮಭವತ್'–'ಅನಾದಿಕಾಲದಿಂದಲೂ ಅವನು ತನ್ನನ್ನೇ ತಿಳಿದುಕೊಂಡಿದ್ದಾನೆ, ಆದ್ದರಿಂದ ಅನಾದಿಕಾಲದಿಂದಲೂ ಪೂರ್ಣನಾಗಿದ್ದಾನೆ' ಎಂದು ಉಪನಿಷತ್ತು ಹೇಳುತ್ತಿದೆ. ಒಂದು ಪಕ್ಷ ಬ್ರಹ್ಮನೇ ಅನಾದಿಯಾಗಿರದಿದ್ದರೆ ಅವನ ಜ್ಞಾನವಾಗಲೀ, ಅವನ ಪೂರ್ಣತೆಯಾಗಲೀ ಅನಾದಿಯಾಗುವುದು ಹೇಗೆ ಎಂಬ ಪ್ರಶ್ನೆಗೆ, ಬ್ರಹ್ಮನೂ 'ಅಗ್ರೇ' ಅನಾದಿಕಾಲದಿಂದಿರುವವನು, ಅಂತಹ ತನ್ನನ್ನು ಅನಾದಿಕಾಲದಿಂದ ಬ್ರಹ್ಮನು ತಿಳಿದಿದ್ದಾನೆ ಎಂದು ಹೇಳಲು 'ಬ್ರಹ್ಮ ವಾ ಇದಮಗ್ರ ಆಸೀತ್' ಎನ್ನುವ ವಾಕ್ಯ ಹೊರಟಿದೆ. ಆದ್ದರಿಂದ ವ್ಯರ್ಥವಲ್ಲ. ಪರಮಾತ್ಮನು ಸರ್ವನಿಯಾಮಕನಾದ್ದರಿಂದ್ಲ ಸರ್ವಗತನಾಗಿದ್ದಾನೆ. ಎಲ್ಲರಿಗೂ ಅಂತರ್ಯಾಮಿಯಾಗಿರುವುದರಿಂದ ಯಾರೂ ಅವನನ್ನು ತ್ಯಜಿಸಲು ಸಾಧ್ಯವಿಲ್ಲ. ಆದ್ದರಿಂದಲೇ ಅವನು ಅಹೇಯು.

**ಭಾಷ್ಯ**—**'ತದ್, ಯೋಽಹಂ ಸೋಽಸೌ ಯೋಽಸೌ ಸೋಽಹಮ್' 'ಯೋಽಸಾವಸೌ ಪುರುಷಃ ಸೋಽಹಮಸ್ಮಿ' ಇತ್ಯಾದಿಷ್ವಪ್ಯಹಂಶಬ್ದೋಽಂತರ್ಯಾಮಿತ್ವೇನಾಹೇಯತ್ವವಾಚೀ। 'ತತ್ ಸತ್ಯಂ ಸ ಆತ್ಮಾಽತತ್ತ್ವಮಸೀ'ತಿ ಭೇದಸ್ಯ ನವಕೃತ್ವೋಽಭ್ಯಾಸಾತ್।**

**ಅನುವಾದ**—ಜೀವ-ಬ್ರಹ್ಮೈಕ್ಯ ಪ್ರಮಾಣ ಸಿದ್ಧವಾಗಿದ್ದರೆ, ಐಕ್ಯಪರವಾಗಿ ವ್ಯಾಖ್ಯಾನ ಮಾಡಬಹುದಾಗಿತ್ತು. ಆದರೆ 'ತದ್ಯೋಽಹಂ ಸೋಽಸೌ ಯೋಽಸೌ ಸೋಽಹಂ' 'ಯೋಽಸಾವಸೌ ಪುರುಷಃ ಸೋಽಹಮಸ್ಮಿ' ಮುಂತಾದ ವಾಕ್ಯಗಳಲ್ಲಿಯೂ ಅಹಂಶಬ್ದವು ಅಂತರ್ಯಾಮಿಯಾದ ಕಾರಣದಿಂದ ಅಹೇಯನಾದ ಪರಮಾತ್ಮನನ್ನೇ ಹೇಳುತ್ತದೆ. ಹೊರತು ಜೀವ-ಬ್ರಹ್ಮಾಭೇದವನ್ನಲ್ಲ. 'ತತ್ತ್ವಮಸಿ'

ವಾಕ್ಯದಲ್ಲೂ 'ತತ್ಸತ್ಯಂ ಸ ಆತ್ಮಾ ಅತತ್ ತ್ವಮಸಿ– ಅವನು ಸ್ವಾಮಿ, ನೀನು ಅವನಲ್ಲ' ಎಂದು ಜೀವಬ್ರಹ್ಮಭೇದವನ್ನು ಒಂಭತ್ತು ಸಲ ಪುನಃ ಪುನಃ ಉಪದೇಶ ಮಾಡಿರು ವುದರಿಂದ ಜೀವಬ್ರಹ್ಮಾಭೇದವು ಈ ವಾಕ್ಯದಿಂದಲೂ ಸಿದ್ಧವಾಗುವುದಿಲ್ಲ.

**'ಅತತ್ ತ್ವಮಸಿ' ಅಭೇದನಿರಾಕರಣೆಗಾಗಿಯೇ ಇದೆ :**

**ಭಾಷ್ಯ—'ತದ್ಯೋಽಹಂ ಸೋಽಸೌ' 'ಅಹಂ ಬ್ರಹ್ಮಾಸ್ಮಿ' ಇತ್ಯಾದಿ ವಾಕ್ಯಾನಾಂ ಸಮ್ಯಗರ್ಥಾಪರಿಜ್ಞಾನಾತ್ ಭ್ರಾಂತಿಪ್ರಾಪ್ತಸ್ತ್ವಭೇದಃ 'ಅತತ್ ತ್ವಮಸಿ' ಇತಿ ನವಕೃತ್ವೋ ನಿರಾಕ್ರಿಯತೇ । 'ತದ್ಧೈಕ ಆಹುರಸದೇವೇದಮಗ್ರ ಆಸೀದೇಕಮೇವಾದ್ವಿತೀಯಂ । ಕುತಸ್ತು ಖಲು ಸೋಮ್ಯೈವಂ ಸ್ಯಾತ್।ಕಥಮಸತಃ ಸಜ್ಜಾಯೇತ'ಇತ್ಯಾದಿನಾ 'ಅಸದ್ವಾ ಇದಮಗ್ರ ಆಸೀದಸತಃ ಸದಜಾಯತ' ಇತ್ಯಾದಿಶ್ರುತ್ಯರ್ಥಾಪರಿ-ಜ್ಞಾನೋತ್ಥಭ್ರಮೋ ಯಥಾ ನಿವಾರ್ಯತೇ ಏವಂ 'ಅತತ್ ತ್ವಮಸಿ' ಇತಿ ವಾಕ್ಯೇನಾಪಿ । 'ಸ ಆತ್ಮಾ' ಇತಿ ಶಬ್ದಾಚ್ಚ । ಆತ್ಮಶಬ್ದಸ್ಯ ಪರಮಾತ್ಮನಿ ಮುಖ್ಯತ್ವೇಽಪಿ ಜೀವೇ ಭ್ರಾಂತಿರುಪಪದ್ಯತೇ । ತನ್ನಿವೃತ್ತ್ಯರ್ಥಂ ಚ 'ಅತತ್ ತ್ವಮಸಿ' ಇತ್ಯಾಹ ।**

**ಅನುವಾದ**—'ಈ ಜಗತ್ತಿಗಿಂತ ಮೊದಲು, ಅಸತ್ ಮಾತ್ರ ಇದ್ದಿತು. ಅದ ರಿಂದ ಸತ್ ಉಂಟಾಯಿತು' ಎಂಬ ಶ್ರುತಿಯ ಅರ್ಥವನ್ನು ತಿಳಿಯದೆ ಉಂಟಾದ ಭ್ರಮವನ್ನು 'ಕೆಲವರು ಅಸತ್ತಿನಿಂದ ಸತ್ ಪದಾರ್ಥ ಉಂಟಾಯಿತೆಂದು ಹೇಳು ತ್ತಾರೆ. ಇದು ಹೇಗೆ ಸಾಧ್ಯ ? ಅಸತ್ತಿನಿಂದ ಸತ್ ಹೇಗೆ ಉಂಟಾದೀತು ?' ಎಂಬ ಶ್ರುತಿಯು ನಿವಾರಣೆ ಮಾಡಿದಂತೆ, 'ನಾನೇ ಅವನು' ಅಂದರೆ, 'ನನ್ನ ಅಂತರ್ಯಾಮಿ ಯಾದ ಹರಿಯ ರೂಪವೇ ಆ ಸೂರ್ಯನ ಅಂತರ್ಯಾಮಿ ರೂಪ'. 'ಪರಬ್ರಹ್ಮನು ಅಹೇಯನೂ ಪೂರ್ಣನೂ ಸದಾ ಇರುವವನೆಂದು ತಿಳಿಯಲ್ಪಡುವವನೂ ಆಗಿರು ವನು' ಎಂದು ಮುಂತಾದ ಶ್ರುತಿಗಳ ಅರ್ಥದ ಪರಿಜ್ಞಾನವಿಲ್ಲದೆ ಉಂಟಾದ ಜೀವ ಬ್ರಹ್ಮಾಭೇದಭ್ರಮವು, 'ನೀನು ಆ ಪರಬ್ರಹ್ಮನಲ್ಲ' ಎಂದು ಒಂಭತ್ತು ಸಲ ಪುನಃ ಪುನಃ ನಿರಾಕರಿಸಲ್ಪಡುತ್ತದೆ. 'ಅವನು ಆತ್ಮಾ' ಎಂಬ ಶಬ್ದಗಳಿಂದಲೂ ಜೀವ ಬ್ರಹ್ಮಾಭೇದದ ಭ್ರಾಂತಿ ಬರಲು ಸಾಧ್ಯವಿದೆ. ಏಕೆಂದರೆ ಆತ್ಮಶಬ್ದವು ಪರಮಾತ್ಮ ನಲ್ಲಿಯೇ ಮುಖ್ಯವಾದರೂ ಅಮುಖ್ಯವಾಗಿ ಜೀವನನ್ನು ಹೇಳುತ್ತದೆ. ಆದ್ದರಿಂದ 'ಅವನು ಆತ್ಮಾ' ಎಂಬ ವಾಕ್ಯದಿಂದ 'ಆ ಬ್ರಹ್ಮನು ಜೀವ' ಎಂದು ಭ್ರಾಂತಿ ಬರ ಬಹುದು. ಅದನ್ನು ನಿವಾರಿಸಲು 'ನೀನು ಆ ಬ್ರಹ್ಮನಲ್ಲ' ಎಂದು ಉಪನಿಷತ್ತು ಹೇಳುತ್ತದೆ.

**ಭಾಷ್ಯ—ಯಚ್ಚಾಪ್ನೋತಿ ಯದಾದತ್ತೇ ಯಚ್ಚಾತ್ತಿ ವಿಷಯಾನಿಹ ।**
**ಯಚ್ಚಾಸ್ಯ ಸಂತತೋ ಭಾವಸ್ತಸ್ಮಾದಾತ್ಮೇತಿ ಭಣ್ಯತೇ ।**

**ಇತ್ಯಾದಿನಾ ವ್ಯಾಪ್ತ್ಯಾದಿಕಂ 'ಐತದಾತ್ಮ್ಯಮಿದಂ ಸರ್ವಂ' ಇತ್ಯನೇನೋಚ್ಯತೇ ।**

**'ಪೂರ್ಣತ್ವವಾಚ್ಯಾತ್ಮ ಶಬ್ದ ಆತ್ಮಾ ಪೂರ್ಣತ್ವತೋ ಹರಿಃ' ಇತ್ಯಾದಿನಾ 'ಸ ಆತ್ಮಾ' ಇತಿ ಪೂರ್ಣತ್ವಮಭಿಧೀಯತೇ ।**

**ಅನುವಾದ**—'ಐತದಾತ್ಮ್ಯಮಿದಂ ಸರ್ವಂ' ಎಂಬ ವಾಕ್ಯವೂ ಜೀವಬ್ರಹ್ಮಾಭೇದವನ್ನು ಹೇಳುವುದಿಲ್ಲ. 'ಪರಬ್ರಹ್ಮನು ಸರ್ವವ್ಯಾಪ್ತನಾದ್ದರಿಂದಲೂ, ಸರ್ವಾಧಿಪತಿಯಾದ್ದರಿಂದಲೂ, ಸರ್ವಸಂಹರ್ತೃವಾದ್ದರಿಂದಲೂ, ನಿತ್ಯನಾದ್ದರಿಂದಲೂ ಆತ್ಮನೆಂದು ಕರೆಯಲ್ಪಡುತ್ತಾನೆ' ಎಂದು ಪ್ರಮಾಣವಚನವಿರುವುದರಿಂದ ಪರಬ್ರಹ್ಮನ ಸರ್ವವ್ಯಾಪ್ತತ್ವಾದಿಗಳೇ 'ಐತದಾತ್ಮ್ಯಮಿದಂ ಸರ್ವಂ' ಎಂಬಲ್ಲಿ ಆತ್ಮಶಬ್ದದಿಂದ ಹೇಳಲ್ಪಡುತ್ತದೆ. 'ಆತ್ಮಶಬ್ದವು ಪೂರ್ಣತ್ವವಾಚಕ. ಹರಿಯು ಪೂರ್ಣನಾದ್ದರಿಂದ ಆತ್ಮ ಎನಿಸಿದ್ದಾನೆ' ಎಂಬ ಪ್ರಮಾಣಾನುಸಾರ 'ಸ ಆತ್ಮಾ' ಎಂದರೆ 'ಪರಬ್ರಹ್ಮನು ಪೂರ್ಣ' ಎಂದರ್ಥ. ಹೊರತು ಅವನು ಜೀವ ಎಂದು ಅರ್ಥವಲ್ಲ.

**ಮೃತ್ಪಿಂಡಾದಿ ದೃಷ್ಟಾಂತಗಳೂ ಭೇದಕ್ಕೇ ಅನುಕೂಲ :**

**ಭಾಷ್ಯ–'ಯಥಾ ಸೋಮ್ಯೈಕೇನ ಮೃತ್ಪಿಂಡೇನ' ಇತಿ ಸದೃಶವಿಜ್ಞಾನೇನ ಸದೃಶಾಂತರಂ ವಿಜ್ಞಾತಂ ಭವತೀತ್ಯುಕ್ತಮ್ । 'ಲೋಹಮಣಿನೇ'ತಿ ಮಣಿಶಬ್ದಾತ್ ಪ್ರಧಾನವಿಜ್ಞಾನೇನಾಪ್ರಧಾನಂ ಸರ್ವಂ ವಿಜ್ಞಾತಂ ಭವತೀತಿ । 'ಮಣಿರ್ಮುಖಂ ಪ್ರಧಾನಶ್ಚೇತ್ಯುತ್ತಮಸ್ಯ ವಚೋ ಭವೇತ್' ಇತಿ ವಚನಾತ್ । 'ಯಥಾ ಸೋಮ್ಯೈಕೇನ ನಖನಿಕೃಂತನೇನ ಸರ್ವಂ ಕಾರ್ಷ್ಣಾಯಸಂ ವಿಜ್ಞಾತಂ ಸ್ಯಾತ್' ಇತಿ ಪುನರಪಿ ಸದೃಶೇನ ವಿಜ್ಞಾತೇನ ಸದೃಶಾಂತರಂ ವಿಜ್ಞಾತಂ ಭವತೀತ್ಯಭ್ಯಾಸಸ್ತಾತ್ಪರ್ಯಾರ್ಥಃ ।**

**ಅನುವಾದ**—'ಹೇಗೆ ಒಂದು ಮಣ್ಣಿನ ಮುದ್ದೆಯನ್ನು ತಿಳಿದರೆ...'ಎಂಬ ವಾಕ್ಯದಿಂದಲೂ ಜಗನ್ಮಿಥ್ಯಾತ್ವ ಸಿದ್ಧಿಸುವುದಿಲ್ಲ. ಅಲ್ಲಿ ಸದೃಶವಾದ ಒಂದು ವಸ್ತುವಿನ ಜ್ಞಾನದಿಂದ ಸದೃಶವಾದ ಇನ್ನೊಂದು ವಸ್ತುವು ವಿಜ್ಞಾತವಾಗುತ್ತದೆ ಎಂದೇ ಹೇಳಿದೆ. 'ಲೋಹಮಣಿನಾ' ಎಂಬಲ್ಲಿ ಮಣಿಶಬ್ದದಿಂದ 'ಪ್ರಧಾನವಾದ ವಸ್ತುವಿನ ಜ್ಞಾನದಿಂದ ಅಪ್ರಧಾನವಾದ ವಸ್ತುವು ವಿಜ್ಞಾತವಾಗುತ್ತದೆ' ಎಂದೇ ಹೇಳಲ್ಪಟ್ಟಿದೆ. ಏಕೆಂದರೆ 'ಮಣಿ ಮುಖ ಪ್ರಧಾನ ಶಬ್ದಗಳು 'ಉತ್ತಮ' ಎಂಬ ಅರ್ಥ ಕೊಡುತ್ತವೆ' ಎಂದು ವಚನವಿದೆ. 'ಹೇಗೆ ಒಂದು ನಖನಿಕೃಂತನವನ್ನು ತಿಳಿದರೆ ಎಲ್ಲ ಕಬ್ಬಿಣದ

ಪದಾರ್ಥಗಳ ಜ್ಞಾನ ಉಂಟಾಗುವುದೋ' ಎಂಬ ವಾಕ್ಯದಿಂದ ಪುನಃ 'ಒಂದು ಸದೃಶ ವಸ್ತುವಿನ ಜ್ಞಾನದಿಂದ ಇನ್ನೊಂದು ಸದೃಶ ವಸ್ತುವು ಜ್ಞಾತವಾಗುತ್ತದೆ' ಎಂದು ಹೇಳುವುದು ಈ ವಿಷಯದಲ್ಲಿ ಶ್ರುತಿಗೆ ಆದರ ಉಂಟೆಂದು ತಿಳಿಸುವುದಕ್ಕಾಗಿ.

**ಭಾಷ್ಯ—ಉಪಾದಾನವಿವಕ್ಷಾಯಾಮೇಕತ್ವವಿವಕ್ಷಾಯಾಂ ಚೈಕೇನೇತಿ ವಿಶೇಷಣಂ, ಪಿಂಡೇನೇತಿ, ಏಕೇನ ಮಣಿನೇತಿ, ಪುನರೇಕೇನೇತಿ ಚ ವಿಶೇಷ-ಣಾನಿ ವ್ಯರ್ಥಾನಿ ಭವೇಯುಃ । ತಸ್ಮಿನ್ ಪಕ್ಷೇ 'ಮೃದಾ ವಿಜ್ಞಾತಯಾ, ಲೋಹೇನ ವಿಜ್ಞಾತೇನ, ಕಾಷ್ಣಾರ್ಯಸೇನ ಚ ವಿಜ್ಞಾತೇನ ಸರ್ವಂ ವಿಜ್ಞಾತಂ ಭವತೀ'ತಿ ವಕ್ತವ್ಯಂ । ನ ಹ್ಯೇಕಮೃತ್ಪಿಂಡವಿಕಾರಭೂತಂ ಸರ್ವಂ ಮೃನ್ಮಯಂ । ನ ಚ ತೇನೈಕ್ಯಂ ಸರ್ವಸ್ಯ ವಿದ್ಯತೇ । ನ ಚೈಕ ಲೋಹಮಣಿಕಾರ್ಯಂ ಸರ್ವಂ ಲೋಹಮಯಂ । ನ ಚ ತೇನೈಕೀ ಭೂತಮ್ । ನ ಚೈಕನಖನಿಕೃಂತನಕಾರ್ಯಂ ಸರ್ವಂ ಕಾಷ್ಣಾರ್ಯಸಂ ।**

**ಅನುವಾದ**—ಈ ಮೂರು ದೃಷ್ಟಾಂತಗಳು ಉಪಾದಾನ ಉಪಾದೇಯಭಾವ ವನ್ನು ಮತ್ತು ಉಪಾದಾನ ಉಪಾದೇಯಗಳ ಏಕತ್ವವನ್ನು ತಿಳಿಸುವ ಉದ್ದೇಶದಿಂದ ಪ್ರವೃತ್ತವಾಗಿವೆಯೆಂದು ಒಪ್ಪಿದರೆ ಮೊದಲನೆಯ ದೃಷ್ಟಾಂತದಲ್ಲಿ 'ಏಕೇನ' ಮತ್ತು 'ಪಿಂಡೇನ' ಎಂಬ ವಿಶೇಷಣಗಳೂ ಎರಡನೆಯ ದೃಷ್ಟಾಂತದಲ್ಲಿ 'ಏಕೇನ' ಮತ್ತು 'ಮಣಿನಾ' ಎಂಬ ವಿಶೇಷಣಗಳೂ ಮೂರನೆಯ ದೃಷ್ಟಾಂತದಲ್ಲಿ ಪುನಃ 'ಏಕೇನ' ಎಂಬ ವಿಶೇಷಣವೂ ವ್ಯರ್ಥವೂ ಮತ್ತು ವಿರುದ್ಧವೂ ಆಗುತ್ತವೆ. ಈ ಪಕ್ಷದಲ್ಲಿ 'ಮಣ್ಣನ್ನು ತಿಳಿದರೆ ಮಣ್ಣಿನಿಂದ ಮಾಡಿದುದೆಲ್ಲ ತಿಳಿಯುತ್ತದೆ, ಲೋಹವನ್ನು ತಿಳಿದರೆ ಲೋಹ ದಿಂದ ಮಾಡಿದುದೆಲ್ಲ ತಿಳಿಯುತ್ತದೆ, ಕಬ್ಬಿಣವನ್ನು ತಿಳಿದರೆ ಕಬ್ಬಿಣದಿಂದಾದುದು ಎಲ್ಲ ತಿಳಿಯುತ್ತದೆ' ಎಂದು ಇಷ್ಟೇ ಸಾಕು. 'ಏಕೇನ, ಪಿಂಡೇನ' ಮೊದಲಾದ ಮೇಲೆ ಹೇಳಿದ ಯಾವ ಶಬ್ದಗಳಿಗೂ ಪ್ರಯೋಜನವಿಲ್ಲ. ಇಷ್ಟೇ ಅಲ್ಲ, ಅವುಗಳ ಉಪಾ ದಾನೋಪಾದೇಯಭಾವರೂಪ ಪ್ರಮೇಯಕ್ಕೆ ವಿರುದ್ಧವೂ ಆಗುತ್ತವೆ. ಏಕೆಂದರೆ ಒಂದು ಮೃತ್ಪಿಂಡದಿಂದ ಕೆಲವು ಮೃಣ್ಮಯ ಪದಾರ್ಥಗಳು ಉಂಟಾಗಬಹುದೇ ಹೊರತು ಸಕಲ ಮೃಣ್ಮಯ ಪದಾರ್ಥಗಳು ಉಂಟಾಗಲಾರವು. ಹೀಗೆ ಏಕ ಮೃತ್ಪಿಂಡಕ್ಕೂ ಸಕಲ ಮೃಣ್ಮಯಗಳಿಗೂ ಉಪಾದಾನ ಉಪಾದೇಯ ಭಾವವೇ ಇಲ್ಲ ದಿರುವುದರಿಂದ ಏಕ ಮೃತ್ಪಿಂಡಕ್ಕೂ ಸಕಲ ಮೃಣ್ಮಯಗಳಿಗೂ ಐಕ್ಯವೇ ಇಲ್ಲ. ಹಾಗೆಯೇ ಒಂದು ಲೋಹಮಣಿಯಿಂದ ಎಲ್ಲ ಲೋಹಮಯಗಳು ಉಂಟಾಗಲಾರವು. ಅವುಗಳಿಗೆ ಉಪಾದಾನೋಪಾದೇಯ ಭಾವವಿಲ್ಲದುದರಿಂದ ಐಕ್ಯವೂ ಇಲ್ಲ. ಹಾಗೆಯೇ ಒಂದು ನಖನಿಕೃಂತನದಿಂದ ಎಲ್ಲಾ ಕಬ್ಬಿಣದ ಪದಾರ್ಥಗಳುಂಟಾಗುವುದಿಲ್ಲ. ಅವು ಗಳಿಗೆ ಉಪಾದಾನ ಉಪಾದೇಯ ಭಾವವಾಗಲೀ ಐಕ್ಯವಾಗಲೀ ಇಲ್ಲ. ಆದ್ದರಿಂದ ಈ ವಿಶೇಷಣಗಳು ವ್ಯರ್ಥವೂ ವಿರುದ್ಧವೂ ಆಗುತ್ತವೆ.

**ವಾಚಾರಂಭಣವಾಕ್ಯ ಜಗತ್ ಸತ್ಯತ್ವಕ್ಕೆ ಬಾಧಕವಲ್ಲ :**

**ಭಾಷ್ಯ—'ವಾಚಾರಂಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಂ' ಇತ್ಯಾದಿ ಪ್ರಧಾನಪರಿಜ್ಞಾನೇ ಗುಣಭೂತಂ ಪರಿಜ್ಞಾತಮಿವ ಭವತೀತ್ಯತ್ರ ದೃಷ್ಟಾಂತಾಂತರಮ್ । ವಾಚಾ ನಾಮ್ನಾಮಾರಂಭಣಂ ವಿಕಾರಃ । ವಿವಿಧತ್ವೇನ ಕರ್ತುಂ ಯೋಗ್ಯಮಿತಿ ವಿಕಾರಃ । ಸತ್ಯಂ ಸರ್ವದಾ ವಿದ್ಯಮಾನಂ ನಾಮಧೇಯಂ ಮೃತ್ತಿಕೇತ್ಯೇವ । ಸಂಕೇತ ರೂಪೇಣ ನಾನಾವಿಧಾನಿ ನಾಮಾನಿ ಕರ್ತುಂ ಶಕ್ಯಂತೇ । ತಥಾಪಿ ಶಾಸ್ತ್ರ ಪ್ರಯೋಗಸಿದ್ಧಮೃತ್ತಿಕಾದಿನಾಮಪರಿಜ್ಞಾನಾತ್ ತತ್ತನ್ನಾಮವಿದ್ ಭವತಿ । ಏವಂ ನಿತ್ಯಾಸಾಮ್ಯಾತಿಶಯಸರ್ವಗುಣಪರಿಪೂರ್ಣ ಪರಮೇಶ್ವರ ಪರಿಜ್ಞಾನಾತ್ ಸರ್ವವಿದ್ ಭವತೀತಿ ।**

**ಅನುವಾದ**—ಈ ಮೇಲಿನ ಮೂರು ದೃಷ್ಟಾಂತ ವಾಕ್ಯಗಳ ಕೊನೆಯಲ್ಲಿ 'ವಾಚಾರಂಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಂ', 'ವಾಚಾ ರಂಭಣಂ ವಿಕಾರೋ ನಾಮಧೇಯಂ ಲೋಹಮಣಿರಿತ್ಯೇವ ಸತ್ಯಂ', ವಾಚಾರಂಭಣಂ ವಿಕಾರೋ ನಾಮಧೇಯಂ ಕಾರ್ಷ್ಣಾಯಸಮಿತ್ಯೇವ ಸತ್ಯಂ' ಎಂದು, ವಿಕಾರ ಎಂದರೆ ಉಪಾದೇಯಕ್ಕೆ ಮಿಥ್ಯಾತ್ವವನ್ನೂ, ಉಪಾದಾನಕ್ಕೆ ಸತ್ಯತ್ವವನ್ನೂ ಹೇಳಿದೆ. ಮೇಲಿನ ಮೂರು ದೃಷ್ಟಾಂತಗಳಲ್ಲಿ ಹೇಳಿದ ಏಕವಿಜ್ಞಾನೇನ ಸರ್ವವಿಜ್ಞಾನಕ್ಕೆ ಈ ವಿಕಾರ ಮಿಥ್ಯಾತ್ವವು ಉಪಪಾದಕ ಎಂಬುದು ಶ್ರುತಿಯ ಅಭಿಪ್ರಾಯ. ಆದ್ದರಿಂದ ಪ್ರಾಧಾನ್ಯ ಮತ್ತು ಸಾದೃಶ್ಯದಿಂದ, ಏಕವಿಜ್ಞಾನೇನ ಸರ್ವವಿಜ್ಞಾನ ಹೇಗೆ ಶ್ರುತಿಗೆ ಅಭಿಪ್ರೇತವಾಗಿರಬಲ್ಲದು, ಎಂಬ ಆಕ್ಷೇಪಕ್ಕೆ ಹೀಗೆ ಸಮಾಧಾನ– ಪ್ರಧಾನಪರಿಜ್ಞಾನ ದಿಂದ ಅಪ್ರಧಾನವಾದುದು ಪರಿಜ್ಞಾತವಾದಂತೆ,ಅಂದರೆ ಅದರ ಫಲ ಸಿಗುತ್ತದೆ ಎಂಬ ವಿಷಯದಲ್ಲಿ 'ವಾಚಾರಂಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಂ' ಎನ್ನುವುದು ಇನ್ನೊಂದು ದೃಷ್ಟಾಂತ. ವಾಚಾ–ವಾಗಿಂದ್ರಿಯದಿಂದ ಆರಂಭಣಂ– ಸಂಸ್ಕೃತೇತರವಾದ ಮಣ್ಣು ಮುಂತಾದ ನಾಮಗಳ ಉತ್ಪತ್ತಿಯು, ವಿಕಾರಃ–ಪುರುಷೇ ಚ್ಛಾಧೀನವಾದ್ದರಿಂದ ಅನೇಕ ರೀತಿಯಲ್ಲಿ ಮಾಡಲು ಯೋಗ್ಯವಾದುದು ಹಾಗೂ ವಿನಾಶಿ. ಸತ್ಯಂ–ಸರ್ವದಾ ಇರುವ, ನಾಮಧೇಯಂ–ನಾಮವು, ಮೃತ್ತಿಕೇತ್ಯೇವ– ಮೃತ್ತಿಕಾ ಎಂಬ ಸಂಸ್ಕೃತ ಶಬ್ದ ಮಾತ್ರ. ಮಣ್ಣು ಎಂಬ ಒಂದು ವಸ್ತುವಿಗೆ ಸಂಕೇತರೂಪವಾಗಿ ಮಣ್ಣು, ಮಿಟ್ಟಿ ಎಂದು ಮುಂತಾಗಿ ಅನೇಕ ವಿಧವಾದ ನಾಮ ಗಳನ್ನು ಮಾಡಲು ಬರುತ್ತದೆ. ಆದರೂ ಶಾಸ್ತ್ರಪ್ರಯೋಗಸಿದ್ಧವಾದ ಮೃತ್ತಿಕಾ ಎಂಬ ನಾಮವನ್ನು ತಿಳಿದರೆ, ಉಳಿದ ಮಣ್ಣು ಮೊದಲಾದ ನಾಮಗಳನ್ನು ತಿಳಿದರೆ ಏನು ಕೀರ್ತ್ಯಾದಿ ಪ್ರಯೋಜನವೋ ಅದು ಆಗಿಯೇ ಆಗುತ್ತದೆ. ಹಾಗೆಯೇ ನಿತ್ಯನೂ

ಸಮಾಧಿಕರಹಿತನೂ ಸರ್ವಗುಣಪರಿಪೂರ್ಣನೂ ಆದ್ದರಿಂದಲೇ ಪ್ರಧಾನನಾದ ಪರಮೇಶ್ವರನ ಪರಿಜ್ಞಾನದಿಂದ ಲಭಿಸುವ ಫಲದಲ್ಲಿ ಅನಿತ್ಯವೂ, ಸಮಾಧಿಕ ಉಳ್ಳದ್ದೂ ಅಲ್ಪಗುಣ ಉಳ್ಳದ್ದೂ ಆದ್ದರಿಂದಲೇ ಅಪ್ರಧಾನವಾದ ಜಗತ್ತಿನ ಜ್ಞಾನದಿಂದ ಉಂಟಾಗುವ ಫಲವು ಸುತರಾಂ ಅಂತರ್ಭಾವ ಹೊಂದುವುದು.

**ಭಾಷ್ಯ—ಯಥೈಕಸ್ಮಿನ್ ಜನಪದೇ ಪ್ರಧಾನಪುರುಷೇಷು ಪರಿಜ್ಞಾತೇಷ್ವಾಹೂತೇಷ್ವಾಗತೇಷು ವಿನಾಶಿತೇಷು ರಕ್ಷಿತೇಷು ವಾ ಸರ್ವೋ ಜನಪದಃ ಪರಿಜ್ಞಾತ ಆಹೂತ ಆಗತೋ ವಿನಾಶಿತೋ ರಕ್ಷಿತ ಇತ್ಯುಚ್ಯತೇ। ಯಥಾ ಚ ರಾಜಸು ನಾಶಿತೇಷು 'ನಾಶಿತಾ ಪೃಥಿವೀ ಸರ್ವಾ ಧಾರ್ತರಾಷ್ಟ್ರೇಣ ದುರ್ನಯೈಃ' ಇತಿ। ಯಥಾ ಚ ಕೇಷಾಂಚಿತ್ ಪುರುಷಾಣಾಂ ರಕ್ಷಣೇನ 'ಶಶಾಸ ಪೃಥಿವೀಂ ಸರ್ವಾಂ ಸಶೈಲವನಕಾನನಾಮ್' ಇತಿ। ಏವಂ ಸರ್ವೋತ್ತಮಸ್ಯ ಪರಮೇಶ್ವರಸ್ಯ ವಿಜ್ಞಾನಾತ್ ಸರ್ವಂ ವಿಜ್ಞಾತಮಿವ ಭವತಿ। ನ ಚ ಮೃನ್ಮಾತ್ರವಿಜ್ಞಾನಾತ್ ಘಟಶರಾವಾದಿಸಂಸ್ಥಾ ವಿಜ್ಞಾತಾ ಭವಂತಿ ಮುಖ್ಯತಃ। ತಥಾ ಸತಿ ದೃಷ್ಟಮೃದಃ ಪುರುಷಸ್ಯ ಘಟಶರಾವಾದಿಜಿಜ್ಞಾಸಾ ನ ಸ್ಯಾತ್।**

**ಅನುವಾದ**—'ಯೇನಾಶ್ರುತಂ ಶ್ರುತಂ ಭವತಿ', 'ಅವಿಜ್ಞಾತಂ ವಿಜ್ಞಾತಂ' ಎಂಬಲ್ಲಿ ಅವಿಜ್ಞಾತವಾದುದು ವಿಜ್ಞಾತವಾಗುತ್ತದೆ ಎಂಬ ಮುಖ್ಯವಾದ ಅರ್ಥವನ್ನು ಬಿಟ್ಟು ನಿರೂಢಲಕ್ಷಣೆಯಿಂದ 'ಅವಿಜ್ಞಾತವಾದುದನ್ನು ತಿಳಿದರೆ ಏನು ಫಲವೋ ಆ ಫಲವು ಉಂಟಾಗುತ್ತದೆ' ಎಂಬ ಅರ್ಥವನ್ನು ಅಂಗೀಕರಿಸಲಾಗಿದೆ. ಇಂತಹ ಅಮುಖ್ಯ ಪ್ರಯೋಗಕ್ಕೆ ಪ್ರಯೋಜನದ ಆವಶ್ಯಕತೆ ಇಲ್ಲ.

ಹೇಗೆ ಒಂದು ಗ್ರಾಮದಲ್ಲಿ ಪ್ರಧಾನ ಪುರುಷನನ್ನು ತಿಳಿದರೆ, ಆಹ್ವಾನ ಮಾಡಿದರೆ, ನಾಶಮಾಡಿದರೆ, ರಕ್ಷಿಸಿದರೆ ಅಥವಾ ಪ್ರಧಾನಪುರುಷರು ಆಗಮಿಸಿದರೆ ಸಮಸ್ತವಾದ ಗ್ರಾಮವೇ ತಿಳಿಯಲ್ಪಟ್ಟಿದೆ, ಆಹ್ವಾನ ಮಾಡಲ್ಪಟ್ಟಿದೆ, ನಾಶಮಾಡಲ್ಪಟ್ಟಿದೆ, ರಕ್ಷಿಸಲ್ಪಟ್ಟಿದೆ ಅಥವಾ ಸಮಸ್ತ ಗ್ರಾಮವೇ ಆಗಮಿಸಿದೆ ಎಂದು ಹೇಳಲ್ಪಡುತ್ತದೆಯೋ, ಹೇಗೆ ದುರ್ಯೋಧನನ ದುರ್ನೀತಿಯು ರಾಜರನ್ನು ನಾಶಪಡಿಸಿದರೆ 'ದುರ್ಯೋಧನನ ದುರ್ನೀತಿಗಳಿಂದ ಸಮಸ್ತ ಪೃಥಿವಿಯೂ ನಾಶಮಾಡಲ್ಪಟ್ಟಿತು' ಎಂದು ಹೇಳಲ್ಪಡುತ್ತದೆಯೋ, ಹೇಗೆ ಕೆಲವು ಪುರುಷರನ್ನು ರಕ್ಷಣೆ ಮಾಡಿದರೆ 'ಪರ್ವತ ಕಾಡುಗಳಿಂದ ಸೇರಿದ ಸಮಸ್ತವಾದ ಭೂಮಿಯನ್ನು ರಕ್ಷಿಸಿದನು' ಎಂದು ಹೇಳಲ್ಪಡುತ್ತದೆಯೋ ಹಾಗೆಯೇ ಸರ್ವೋತ್ತಮನಾದ ಪರಮೇಶ್ವರನ ಜ್ಞಾನ ಉಂಟಾದರೆ ಅದರಿಂದ ಎಲ್ಲ ಜಗತ್ತಿನ ಜ್ಞಾನ ಉಂಟಾಗುತ್ತದೆ, ಅಂದರೆ ಎಲ್ಲವನ್ನೂ ತಿಳಿದಂತೆ ಆಗುತ್ತದೆ. ಸರ್ವಜ್ಞಾನದಿಂದಲೂ ಏನು ಪ್ರಯೋಜನವೋ ಅದು ಪರ

ಮೇಶ್ವರ ಜ್ಞಾನದ ಫಲದಲ್ಲಿ ಅಂತರ್ಭಾವ ಹೊಂದುತ್ತದೆ ಎಂಬ ಅಭಿಪ್ರಾಯದಿಂದ ಏಕವಿಜ್ಞಾನೇನ ಸರ್ವವಿಜ್ಞಾನವನ್ನು ಹೇಳಲಾಗಿದೆ. ಹೀಗೆ ಅಮುಖ್ಯಾರ್ಥವನ್ನು ತೆಗೆದುಕೊಳ್ಳದೆ ಮುಖ್ಯಾರ್ಥವನ್ನಂತೂ ತೆಗೆದುಕೊಳ್ಳಲು ಬರುವುದಿಲ್ಲ. ಏಕೆಂದರೆ 'ಒಂದು ಮೃತ್ಪಿಂಡವನ್ನು ತಿಳಿದರೆ ಲೋಕದ ಎಲ್ಲಾ ಮೃನ್ಮಯವೂ ತಿಳಿಯಲ್ಪಡುತ್ತವೆ' ಎಂಬುದು ಮುಖ್ಯವಾದ ಅರ್ಥ. ಆದರೆ ಒಂದು ಮೃತ್ಪಿಂಡದ ಆಕಾರವನ್ನು ತಿಳಿದರೆ ಘಟ ಶರವಾದಿ ಎಲ್ಲ ಮೃನ್ಮಯಗಳ ಆಕಾರವೇನೂ ತಿಳಿಯುವುದಿಲ್ಲ. ಹಾಗೆ ತಿಳಿದಿದ್ದರೆ ಮಣ್ಣನ್ನು ತಿಳಿದ ಮನುಷ್ಯನಿಗೆ ಘಟಶರಾವಾದಿ ವಿಷಯದಲ್ಲಿ ಜಿಜ್ಞಾಸೆಯೇ ಉಂಟಾಗಬಾರದು. ತಿಳಿದಿರುವ ವಿಷಯದಲ್ಲಿ ಜಿಜ್ಞಾಸೆಯಿಲ್ಲವಷ್ಟೆ. ಆದ್ದರಿಂದ ಮುಖ್ಯಾರ್ಥದಲ್ಲಿ ಬಾಧಕವಿರುವುದರಿಂದ 'ಒಂದು ಮೃತ್ಪಿಂಡವನ್ನು ತಿಳಿದರೆ ಬೇರೆ ಎಲ್ಲ ಮೃನ್ಮಯವನ್ನೂ ತಿಳಿದಂತಾಗುತ್ತದೆ' ಎಂಬ ಅಮುಖ್ಯಾರ್ಥವನ್ನೇ ಮಾಡಬೇಕು.

**ಸೃಷ್ಟಿ ಕಥನದ ಉದ್ದೇಶ ಹರಿಸರ್ವೋತ್ತಮತ್ವಸಿದ್ಧಿ :**

**ಭಾಷ್ಯ—ಸೃಷ್ಟಿಕಥನಂ ಚ ಪ್ರಾಧಾನ್ಯಾರ್ಥಮ್ । 'ತ್ರೀಣಿ ರೂಪಾಣೀತ್ಯೇವ ಸತ್ಯಂ' ಇತ್ಯಪಿ ಪ್ರಾಧಾನ್ಯಾರ್ಥಮೇವಾಭಿಮಾನಿದೇವತಾಪೇಕ್ಷಯಾ ।**

**ತೇಜೋಽಭಿಮಾನವಾನ್ ಬ್ರಹ್ಮಾ ವಾಯುಶ್ಚಾಬಭಿಮಾನವಾನ್ ।**
**ರುದ್ರಃ ಕ್ಷಿತ್ಯಭಿಮಾನೀ ಚಾಪ್ಯೇತನ್ಮಯಮಿದಂ ಜಗತ್ ।**
**ಅಭಿಮನ್ಯಮಾನಸಹಿತಾಸ್ತ್ರಯ ಏತೇಽಭಿಮಾನಿನಃ ।**
**ವಿಷ್ಣೋರ್ಜಾತಾಃ ಕ್ರಮೇಣೈವ ಪೂರ್ವಸ್ಮಾದುತ್ತರೋತ್ತರಂ ।**
**ತೇಜೋಽಬನ್ನಾಭಿಧಾ ತಸ್ಮಾದ್ ಏಷಾಮೇವ ಪ್ರಕೀರ್ತಿತಾ ।**
**ಏತೇ ಚ ತ್ರೀಣಿ ರೂಪಾಣೀತ್ಯಭಿಧಾಗೋಚರಾಃ ಸುರಾಃ ।**
**ಬ್ರಹ್ಮವಾಯುಗಿರೀಶೇಭ್ಯಸ್ತೇಭ್ಯೋ ಜಾತಮಿದಂ ಜಗತ್ ।**
**ಅತೋಽಗ್ನಿ ಸೂರ್ಯಸೋಮಾನಾಮಪಿ ರೂಪಂ ತದುದ್ಭವಮ್ ।**
**ಅತೋಽಗ್ನಿಸೂರ್ಯಸೋಮಾನಾಂ ನಾಮಾಪ್ಯೇಷಾಂ ಪ್ರಕೀರ್ತಿತಂ ।**
**ಸಾದನಾದ್ ಯಮನಾಚ್ಚೈವ ಸತ್ಯಮೇಷಾಂ ತ್ರಯಃ ಸುರಾಃ ।**
**ತೇಷಾಂ ಸತ್ಯಂ ಹರಿಃ ಸಾಕ್ಷಾದ್ ಯತಸ್ತೇಷಾಂ ನಿಯಾಮಕಃ ।**
**ಪ್ರಧಾನೇ ಸತ್ಯಶಬ್ದೋಽಯಂ ಶ್ರುತಿಭಿಃ ಸಮುದಾಹೃತಃ ।**

**ಅನುವಾದ**—ಪರಬ್ರಹ್ಮನು ಮಾತ್ರ ಮೊದಲು ಒಬ್ಬನೇ ಇದ್ದನೆಂದೂ, ಅವನು ಈ ಜಗತ್ತನ್ನು ಸೃಷ್ಟಿಸಿದನೆಂದೂ ಹೇಳಿರುವುದು 'ಪರಮಾತ್ಮನು ಪ್ರಧಾನ ಮತ್ತು ಜಗತ್ತು ಅಪ್ರಧಾನ' ಎಂದು ತಿಳಿಸುವುದಕ್ಕಾಗಿ. 'ಅಪಾಗಾದಗ್ನೇರಗ್ನಿತ್ವಂ ವಾಚಾರಂಭಣಂ ವಿಕಾರೋ ನಾಮಧೇಯಂ ತ್ರೀಣಿ ರೂಪಾಣೀತ್ಯೇವ ಸತ್ಯಂ' ಎಂಬ

ಮುಂದಿನ ವಾಕ್ಯವೂ, ತೇಜಸ್ಸು ಅಪ್ ಅನ್ನಗಳಿಗೆ ಮಾತ್ರ ಸತ್ಯತ್ವವನ್ನು ಹೇಳಿ, ಅವುಗಳ ಕಾರ್ಯಗಳಿಗೆ ಮಿಥ್ಯಾತ್ವವನ್ನು ಹೇಳಲು ಹೊರಟಿಲ್ಲ. ತೇಜಸ್ಸು ಅಪ್ ಅನ್ನಗಳು ಮಾತ್ರ ಸತ್ಯ ಎಂದು ಹೇಳುವ ಉದ್ದೇಶವಿದ್ದರೆ 'ಇತಿ' ಎಂಬ ಶಬ್ದವು ವ್ಯರ್ಥವಾಗುತ್ತದೆ. ಆದ್ದರಿಂದ 'ತೇಜೋಬನ್ನಗಳ ಅಭಿಮಾನಿದೇವತೆಗಳಿಗೆ ತ್ರೀಣಿ ರೂಪಾಣಿ ಎಂಬ ನಾಮವೂ, ಅಗ್ನ್ಯಾದಿ ನಾಮವೂ ಮುಖ್ಯವಾಗಿದೆ' ಎಂದು ಹೇಳುತ್ತದೆ. ಇವನ್ನು ಹೇಳುವುದೂ ಸಹ, ಆ ದೇವತೆಗಳನ್ನು ಸೃಷ್ಟಿಸಿದ ಪರಮಾತ್ಮ ಅವರಿಗಿಂತ ಉತ್ತಮ ಎಂದು ತಿಳಿಸುವುದಕ್ಕಾಗಿಯೇ.

ಬ್ರಹ್ಮನು ತೇಜಸ್ಸಿಗೆ ಅವಾಂತರಾಭಿಮಾನಿ. ವಾಯು 'ಅಪ್'ಗೆ ಅಭಿಮಾನಿ. ರುದ್ರನು ಕ್ಷಿತ್ಯಭಿಮಾನಿ. ಈ ಜಗತ್ತು ತೇಜೋಬನ್ನಾತ್ಮಕವಾದುದು. ತೇಜೋಬನ್ನ ಸಹಿತವಾಗಿ ಅವುಗಳ ಅಭಿಮಾನಿದೇವತೆಗಳು ಸಾಕ್ಷಾತ್ ವಿಷ್ಣುವಿನಿಂದಲೇ ಕ್ರಮವಾಗಿ ಹುಟ್ಟಿದರು. ಅದು ಹೇಗೆಂದರೆ–ಪರಮಾತ್ಮನಿಂದ ಮೊದಲಿಗೆ ತೇಜಸ್ಸೂ, ತದಭಿಮಾನಿಯಾದ ಬ್ರಹ್ಮನೂ ಜನಿಸಿದರು. ಪರಮಾತ್ಮ ಮತ್ತು ಬ್ರಹ್ಮನಿಂದ ಜಲವೂ ತದಭಿಮಾನಿಯಾದ ವಾಯುವೂ ಜನಿಸಿದರು. ಪರಮಾತ್ಮ ಮತ್ತು ವಾಯುವಿನಿಂದ ಅನ್ನವೂ ತದಭಿಮಾನಿಯಾದ ರುದ್ರನೂ ಜನಿಸಿದರು. ತೇಜೋಬನ್ನಗಳಿಗೆ ಅಭಿಮಾನಿಗಳಾದುದರಿಂದ ಈ ಮೂರು ದೇವತೆಗಳಿಗೆ ತೇಜಸ್, ಅಪ್, ಅನ್ನ ಎಂಬ ಹೆಸರು ಮುಖ್ಯವಾಗಿ ಪ್ರಸಿದ್ಧವಾಗಿದೆ. ಈ ಮೂರು ದೇವತೆಗಳಿಗೇ 'ತ್ರೀಣಿರೂಪಾಣಿ' ಎಂಬ ಹೆಸರು ಮುಖ್ಯವಾಗಿದೆ. ಆ ಬ್ರಹ್ಮ, ವಾಯು, ರುದ್ರರಿಂದ ಈ ಸಮಸ್ತವಾದ ಜಗತ್ತು ಉಂಟಾಗಿದೆ. ಅಗ್ನಿ, ಸೂರ್ಯ, ಸೋಮ ವಿದ್ಯುತ್ತುಗಳ ಕೆಂಪುಬಣ್ಣವು ಬ್ರಹ್ಮನಿಂದಲೂ, ಶುಕ್ಲವರ್ಣವು ವಾಯುವಿನಿಂದಲೂ, ಕೃಷ್ಣವರ್ಣವು ರುದ್ರನಿಂದಲೂ ಉಂಟಾಗಿದೆ. ಆದ್ದರಿಂದ ಅಗ್ನಿ ಸೂರ್ಯ ಸೋಮ ವಿದ್ಯುತ್ತುಗಳ ಅಗ್ನಿ,ಸೂರ್ಯ, ಸೋಮ, ವಿದ್ಯುತ್ ಎಂಬ ನಾಮಗಳು ಮುಖ್ಯವಾಗಿ ಬ್ರಹ್ಮ ವಾಯು ರುದ್ರರನ್ನೇ ಹೇಳುತ್ತವೆ. ಅಗ್ನಿ, ಸೂರ್ಯ ಸೋಮಾದಿಗಳಿಗೆ ಸತ್–ವಿನಾಶವನ್ನೂ, ಯ–ನಿಯಮನವನ್ನೂ ಮಾಡುವುದರಿಂದ ಅಗ್ನಿ, ಸೂರ್ಯ ಸೋಮಾದಿಗಳಿಗೆ ಬ್ರಹ್ಮ ವಾಯು ರುದ್ರರು ಸತ್ಯರು. ಬ್ರಹ್ಮ ವಾಯು ರುದ್ರರಿಗೆ ನಿಯಾಮಕನಾದ್ದರಿಂದ ಸಾಕ್ಷಾತ್ ಹರಿಯು ಅವರಿಗೆ ಸತ್ಯನು. ಮುಖ್ಯ ಎಂಬ ಅರ್ಥದಲ್ಲಿಯೂ ಈ ಸತ್ಯ ಶಬ್ದವಿದೆ ಎಂದು ಶ್ರುತಿಗಳು ಹೇಳುತ್ತಿವೆ.

**ಮೃತ್ಪಿಂಡಾದಿ ದೃಷ್ಟಾಂತಗಳ ಅಭಿಪ್ರಾಯ :**

**ಭಾಷ್ಯ—ಯಥೈವ ಸರ್ವಲೋಹಾನಾಂ ಪ್ರಧಾನಂ ಕಾಂಚನಂ ಸ್ಮೃತಮ್ ।**
**ಯಥಾ ಮೃತ್ಪಿಂಡ ಸದೃಶಾ ಮೃನ್ಮಯಾಃ ಸರ್ವ ಏವ ಚ ।**
**ಯಥಾ ಕಾಷ್ಣಾ೯ಯಸಂ ಸರ್ವಂ ಸಮಂ ಕಾಷ್ಣಾ೯ಯಸಾಂತರೇ ।**

ಏವಂ ಸರ್ವಸ್ಯ ಜಗತಃ ಸದೃಶಃ ಶ್ರೇಷ್ಠ ಏವ ಚ ।
ಹರಿಸ್ತೇನ ತು ತಜ್ಜ್ಞಾನಾತ್ ಜಗತ್ ಜ್ಞಾತಮಿವಾಖಿಲಮ್ ।
ಸ ಸೃಷ್ಟಾ ಚೈವ ಸಂಹರ್ತಾ ನಿಯಂತಾ ರಕ್ಷಿತಾ ಹರಿಃ ।
ತೇನ ವ್ಯಾಪ್ತಮಿದಂ ಸರ್ವಮೈತದಾತ್ಮ್ಯಮತೋ ವಿದುಃ ।
ಸ ಆತ್ಮಾ ಪೂರ್ಣಗುಣತಃ ಸ ಸೂಕ್ಷ್ಮಃ ಸರ್ವಗಃ ಸದಾ ।
ಸರ್ವೋತ್ತಮತ್ವಾತ್ ಸತ್ಯಂ ತಜ್ಜೀವಾಭಿನ್ನಂ ತದಾಸುರಾಃ ।
ವಿದುರ್ನ ತ್ವಂ ತಥಾ ವಿದ್ಧಿ ಶ್ವೇತಕೇತೋ ಕದಾಚನ ।

**ಅನುವಾದ**—ಹೇಗೆ ಸುವರ್ಣವು ಎಲ್ಲಾ ಲೋಹಗಳಿಗಿಂತ ಪ್ರಧಾನವೋ, ಹೇಗೆ ಎಲ್ಲಾ ಮೃನ್ಮಯಗಳೂ ಮೃತ್ಪಿಂಡಕ್ಕೆ ಸದೃಶವಾಗಿವೆಯೋ, ಹೇಗೆ ಎಲ್ಲಾ ಕಬ್ಬಿಣವೂ ಬೇರೆ ಕಬ್ಬಿಣಕ್ಕೆ ಸದೃಶವಾಗಿವೆಯೋ ಹಾಗೆಯೇ ಹರಿಯು ಸರ್ವಜಗತ್ತಿಗಿಂತ ಪ್ರಧಾನನಾಗಿದ್ದಾನೆ, ಮತ್ತು ಜಗತ್ತಿಗೆ ಸದೃಶನಾಗಿದ್ದಾನೆ. ಆದ್ದರಿಂದ ಅವನ ಜ್ಞಾನ ಉಂಟಾದರೆ ಜಗತ್ತೂ ಜ್ಞಾತವಾದಂತೆಯೇ ಸರಿ. ಆ ಹರಿಯು ಈ ಜಗತ್ತಿನ ಸೃಷ್ಟಿಕರ್ತ, ಸಂಹಾರಕ, ನಿಯಾಮಕ ಮತ್ತು ರಕ್ಷಕ. ಆದ್ದರಿಂದ ಸನ್ಮೂಲಾಃ ಸದಾಯತನಾಃ ಸತ್ಪ್ರತಿಷ್ಠಾಃ ಎನ್ನಲಾಗಿದೆ. ಈ ಜಗತ್ತು ಅವನಿಂದ ವ್ಯಾಪ್ತವಾಗಿದೆ. ಆದ್ದರಿಂದ ಈ ಜಗತ್ತನ್ನು 'ಐತದಾತ್ಮ್ಯ' ಎಂದು ಕರೆಯುತ್ತಾರೆ. ಅವನು ಗುಣಪೂರ್ಣನಾದುದರಿಂದ ಆತ್ಮಾ ಎನಿಸುತ್ತಾನೆ. ಅವನು ಸೂಕ್ಷ್ಮನಾದ್ದರಿಂದ ಅಣಿಮಾ. ಸರ್ವಗತನೂ ಆದ್ದರಿಂದ ಈ ಜಗತ್ತು ಅವನಿಂದ ವ್ಯಾಪ್ತವೂ ಆಗಿದೆ. ಸರ್ವೋತ್ತಮನಾದುದರಿಂದ ಅವನು ಸತ್ಯನೆನಿಸುತ್ತಾನೆ. ಅಸುರರು ಮಾತ್ರ ಅವನನ್ನು ಜೀವಾಭಿನ್ನನೆಂದು ತಿಳಿಯುತ್ತಾರೆ. ವಸ್ತುತಃ, ಶ್ವೇತಕೇತುವೇ, ನೀನು ಎಂದೂ ಹಾಗೆ ತಿಳಿಯಬೇಡ.

**ಜೀವೇಶ್ವರ ಭೇದಜ್ಞಾನವೇ ಮೋಕ್ಷಸಾಧನ :**

**ಭಾಷ್ಯ**—ಕಿಂತು ವಿಷ್ಣುಃ ಪೃಥಕ್ ಸರ್ವ ದೇವದೇವೇಶ್ವರಃ ಪ್ರಭುಃ ।
ಪೃಥಗೇವಾಹಮತ್ಯಲ್ಪಶಕ್ತಿಜ್ಞಾನ ಸುಖಾದಿಕಃ ।
ಇತ್ಯೇವ ವಿದ್ಧಿ ಸತತಮತೋ ಮೋಕ್ಷಮವಾಪ್ಸ್ಯಸಿ ।
ಸರ್ವೋತ್ತಮ ಇತಿ ಜ್ಞಾತೋ ವಿಷ್ಣುರ್ಮೋಕ್ಷಮಿಮಂ ನಯೇತ್ ।
ಜೀವರೂಪತಯಾ ಜ್ಞಾತಸ್ತಮೋಽಂಧಂ ಪ್ರಾಪಯೇತ್ ಪ್ರಭುಃ ।
ವಿಷ್ಣೋರ್ದಾಸತಯಾ ವಿಷ್ಣೋಃ ಸಾಮೀಪ್ಯಂ ಮೋಕ್ಷ ಉಚ್ಯತೇ ।
ನ ವಿಷ್ಣುತ್ವಂ ತು ಮೋಕ್ಷಃ ಸ್ಯಾದೇಷೋಽಹಮಿತಿ ಚಾಽಸ್ಮೃತೇಃ ।
ಸಂಸಾರಸಾಗರಾತ್ ತೀರ್ಣೋ ಮುಕ್ತೋಽಹಮಿತಿ ಚಾಽಸ್ಮೃತಿಃ ।
ಯದಾ ತದಾ ವಿಮೋಕ್ಷೇಣ ಕಿಂ ಫಲಂ ಜ್ಞಾನಿನೋ ಭವೇತ್ ।

**ಅನುವಾದ**—ಮತ್ತೇನೆಂದರೆ 'ಅತತ್ ತ್ವಮಸಿ' ದೇವದೇವೇಶ್ವರನಾದ ಪ್ರಭುವಾದ ವಿಷ್ಣುವು ಭಿನ್ನ, ಅತ್ಯಲ್ಪ ಶಕ್ತಿ ಜ್ಞಾನ ಸುಖಿಗಳನ್ನು ಹೊಂದಿದ ನಾನು ಭಿನ್ನ ಎಂದೇ ತಿಳಿದುಕೋ. ಇದರಿಂದ ಮೋಕ್ಷವನ್ನು ಪಡೆಯುತ್ತಿ. ಏಕೆಂದರೆ ವಿಷ್ಣುವು ಸರ್ವೋತ್ತಮ ಎಂದು ತಿಳಿದುಕೊಂಡ ಜೀವನಿಗೇ ವಿಷ್ಣುವು ಮೋಕ್ಷವನ್ನು ಕೊಡುತ್ತಾನೆ, ಅವನನ್ನು ಜೀವರೂಪನೆಂದು ತಿಳಿದರೆ ತಮಸ್ಸಿಗೆ ಕಳುಹಿಸುತ್ತಾನೆ. ವಿಷ್ಣುವಿನ ದಾಸನಾಗಿದ್ದೇನೆಂದು ತಿಳಿದುಕೊಳ್ಳುತ್ತ ವಿಷ್ಣುವಿನ ಸಮೀಪದಲ್ಲಿರುವುದಕ್ಕೆ ಮೋಕ್ಷ ಎಂದು ಹೆಸರು. ವಿಷ್ಣುವೇ ಆಗುವುದು ಮೋಕ್ಷವಲ್ಲ. ಏಕೆಂದರೆ ನಾನು ವಿಷ್ಣು ಎಂದು ಮುಕ್ತನಿಗೆ ಅನುಭವ ಬರುವುದಿಲ್ಲ. 'ವಿಷ್ಣುತ್ವವು ಮುಕ್ತನಲ್ಲಿದ್ದರೂ ಅದರ ಜ್ಞಾನ ಅವನಿಗೆ ಇರಲೇಬೇಕೆಂಬ ನಿಯಮವಿಲ್ಲದಿರುವುದರಿಂದ ಅವನಿಗೆ ಅನುಭವವು ಬರುವುದಿಲ್ಲ' ಎಂದು ವಾದಿಸಿದರೆ, 'ನಾನು ಸಂಸಾರವನ್ನು ದಾಟಿದ್ದೇನೆ, ಮುಕ್ತನಾಗಿದ್ದೇನೆ' ಎಂಬ ಅನುಭವವೂ ಮುಕ್ತನಿಗೆ ಇಲ್ಲವೆಂದಾಗಲಿ. ಮುಕ್ತನಿಗೆ ಅಂತಹ ಅನುಭವವೇ ಇಲ್ಲವೆಂದು ಹೇಳಿದರೆ ಅಂತಹ ಮೋಕ್ಷದಿಂದ ಜ್ಞಾನಿಗೆ ಏನು ಪ್ರಯೋಜನ ?

**ಭಾಷ್ಯ—ಯಥಾ ಮಧುಕರೈರ್ನಾನಾವಿಧಪುಷ್ಪರಸೈಃ ಸಹ ।**
**ಮಧುತ್ವಂ ಪ್ರಾಪಿತಃ ಸಂವಿದಭಾವಾನ್ನ ಸುಖೀ ಭವೇತ್ ।**
**ಯಥಾ ನದ್ಯೋ ನ ಮುಕ್ತಾ ಹಿ ಸಮುದ್ರಂ ಪ್ರಾಪಿತಾ ಅಪಿ ।**
**ಇಯಮಸ್ಮೀತಿ ಚಾಜ್ಞಾನಾದ್ ಯಥಾ ಸುಪ್ತೋ ನ ಮುಚ್ಯತೇ ।**
**ಪ್ರಲಯೇಽಪಿ ಹರಿಂ ಪ್ರಾಪ್ತಃ ಪೃಥಕ್ತ್ವಜ್ಞಾನವರ್ಜನಾತ್ ।**
**ಏವಂ ಜೀವೇಶಯೋರ್ಭೇದಜ್ಞಾನಾದ್ ವಿಷ್ಣೋಃ ಸದೋಚ್ಚತಾಂ ।**
**ಜ್ಞಾತ್ವೈವ ಮುಚ್ಯತೇ ತಸ್ಮಾದೇವಂ ಜಾನೀಹಿ ಪುತ್ರಕ ।**
**ಇತ್ಯಾದಿ ಬ್ರಹ್ಮಾಂಡೇ ॥**
**ಮಗ್ನಸ್ಯ ಹಿ ಪರೇಽಜ್ಞಾನೇ ಕಿಂ ನ ದುಃಖತರಂ ಭವೇತ್ ।**
**ಇತಿ ಮೋಕ್ಷಧರ್ಮೇ ॥**

**ಅನುವಾದ**—'ಉತ್ಕೃಷ್ಟವಾದ ಮೋಕ್ಷಾವಸ್ಥೆಯೇ ಪುರುಷಾರ್ಥ. ಅದರ ಜ್ಞಾನದ ಆವಶ್ಯಕತೆಯಿಲ್ಲವೆ'ಂದು ಹೇಳುವುದು ಸರಿಯಲ್ಲ. ಒಂದು ಪುಷ್ಪರಸವು ಭೃಂಗಗಳಿಂದ ನಾನಾವಿಧ ಪುಷ್ಪರಸಗಳೊಡನೆ ಒಂದು ಕಡೆ ಸೇರಿಸಲ್ಪಟ್ಟು ಮಧು ರೂಪವಾದ ಉತ್ಕೃಷ್ಟ ವಸ್ತುವಾಗುತ್ತದೆ. ಆದರೆ ಆ ಪುಷ್ಪರಸಕ್ಕೆ ಜ್ಞಾನವಿಲ್ಲದಿರುವುದರಿಂದ ಆ ಉತ್ಕೃಷ್ಟಾವಸ್ಥೆಯ ಸುಖವನ್ನು ಅನುಭವಿಸುವುದಿಲ್ಲ. ಹಾಗೆಯೇ ಮುಕ್ತನಿಗೆ ಮೋಕ್ಷದ - ಜ್ಞಾನವಿಲ್ಲದಿದ್ದರೆ ಅವನು ಸುಖಿಯಾಗಲಾರ. 'ಉತ್ಕೃಷ್ಟ ವಾದ ವಸ್ತುವನ್ನು ಹೊಂದುವುದೇ ಪುರುಷಾರ್ಥ ಹೊರತು ಉತ್ಕೃಷ್ಟ ಅವಸ್ಥೆಯೆ

ಪುರುಷಾರ್ಥವಲ್ಲ' ಎನ್ನುವುದೂ ಸರಿಯಲ್ಲ. ನದಿಗಳು ಉತ್ಕೃಷ್ಟ ವಸ್ತುವಾದ ಸಮುದ್ರವನ್ನು ಸೇರಿದರೂ ಅವುಗಳಿಗೆ ಅಲ್ಲಿ ಪರಸ್ಪರ ಭೇದಜ್ಞಾನವಿರುವುದಿಲ್ಲವಾದ್ದರಿಂದ ಅವು ಸುಖಿಗಳಾಗಿರುವುದಿಲ್ಲ. ಉತ್ಕೃಷ್ಟ ವಸ್ತುವಾದ ವಿಷ್ಣುವನ್ನು ಹೊಂದುವುದು ಮಾತ್ರವೂ ಪುರುಷಾರ್ಥವಲ್ಲ. ಸುಷುಪ್ತಿಯಲ್ಲಿಯೂ, ಪ್ರಲಯದಲ್ಲಿಯೂ ಜೀವನು ವಿಷ್ಣುವನ್ನು ಹೊಂದಿದರೂ ಸಹ ಭೇದಜ್ಞಾನವಿಲ್ಲದಿರುವುದರಿಂದ ಆಗ ಅವನು ಮುಕ್ತನೆನಿಸುವುದಿಲ್ಲ. ಆದ್ದರಿಂದ ಭೇದಜ್ಞಾನವಿಲ್ಲದ ಮುಕ್ತಿಯಿಲ್ಲ. ಹರಿಯ ಸರ್ವೋತ್ತಮತ್ವವನ್ನೂ, ಜೀವೇಶ ಭೇದವನ್ನೂ ತಿಳಿದೇ ಮುಕ್ತನಾಗುತ್ತಾನೆ. ಆದ್ದರಿಂದ ಪುತ್ರನೇ, ಹೀಗೆ ತಿಳಿ' ಎಂದು ಬ್ರಹ್ಮಾಂಡ ಪುರಾಣದಲ್ಲಿ ಹೇಳಿದೆ. 'ಮುಕ್ತನು ಮಹಾ ಅಜ್ಞಾನದಲ್ಲಿ ಮುಳುಗಿದ್ದರೆ, ಅವನಿಗೆ ಸರ್ವಥಾ ಜ್ಞಾನವಿಲ್ಲದಿದ್ದರೆ ಅದು ಅತ್ಯಂತ ದುಃಖರೂಪವಾಗಿರುವುದಿಲ್ಲವೇ ?' ಎಂದು ಮೋಕ್ಷಧರ್ಮದಲ್ಲಿಯೂ ಹೇಳಿದೆ.

**ಭೇದವು ಮೋಕ್ಷದಲ್ಲಿಯೂ ಇರುವುದರಿಂದ ಸತ್ಯ :**

**ಭಾಷ್ಯ—'ತಸ್ಮೈ ಸ್ವಲೋಕಂ ಭಗವಾನ್ ಸಭಾಜಿತಃ ಸಂದರ್ಶಯಾಮಾಸ' ಇತ್ಯುಕ್ತ್ವಾ,**

**'ನ ವರ್ತತೇ ಯತ್ರ ರಜಸ್ತಮಸ್ತಯೋಃ**
**ಸತ್ವಂ ಚ ಮಿಶ್ರಂ ನ ಚ ಕಾಲವಿಕ್ರಮಃ ।**
**ನ ಯತ್ರ ಮಾಯಾ ಕಿಮುತಾಪರೇ ಹರೇ-**
**ರನುವ್ರತಾ ಯತ್ರ ಸುರಾಸುರಾರ್ಚಿತಾಃ ।'**
**ಇತಿ ಭಾಗವತೇ ।**

**'ಅದರ್ಶಯತ್ ಸ್ವಕಂ ಲೋಕಂ ಬ್ರಹ್ಮಣೇ ವಿಷ್ಣುರವ್ಯಯಃ ।**
**ಯಸ್ಮಾತ್ ಪದಾತ್ ಪರಂ ನಾಸ್ತಿ ಯತ್ರ ಮುಕ್ತಾ ಉಪಾಸತೇ।'**
**ಇತಿ ಚ ಹರಿವಂಶೇಷು ।**

**ಅತಃ 'ಪರಂ ನ ಯತ್ ಪದಂ' ಇತ್ಯತ್ರಾಪಿ ಯಚ್ಛಬ್ದಸ್ಯ ಯಸ್ಮಾದಿತ್ಯರ್ಥಃ ।**

**'ಯತ್ತದಿತ್ಯಾದಯಃ ಶಬ್ದಾಃ ಪಂಚಮ್ಯರ್ಥಾಶ್ಚ ಕೀರ್ತಿತಾಃ'**
**ಇತಿ ಚ ।**

**ಅನುವಾದ**—ಭೇದಶ್ರುತಿಗಳು ಅವಿದ್ಯಾಕಲಿತ್ಪವಾದ ಭೇದವನ್ನು ಮಾತ್ರ ಹೇಳುತ್ತವೆ. ಆದ್ದರಿಂದ ಭೇದಶ್ರುತಿಗಳ ವಿರೋಧದ ಭಯದಿಂದ 'ಅಹಂ ಬ್ರಹ್ಮಾಸ್ಮಿ' 'ತದ್ಯೋಽಹಂ' ಮೊದಲಾದ ಅದ್ವೈತ ಶ್ರುತಿಗಳಿಗೆ ಬೇರೆ ಅರ್ಥವನ್ನು ಮಾಡಬೇಕಾದ ಆಗತ್ಯವಿಲ್ಲ ಎಂಬ ಆಕ್ಷೇಪ ಸರಿಯಲ್ಲ. ಭೇದಶ್ರುತಿಗಳು ಅವಿದ್ಯಾ

ಕಲ್ಪಿತ ಭೇದವನ್ನು ಹೇಳುವುದಿಲ್ಲ. ಏಕೆಂದರೆ ಅವಿದ್ಯಾನಿವೃತ್ತಿಯಾದ ಮೇಲೆಯೂ ಮೋಕ್ಷದಲ್ಲಿ ಭೇದವಿದೆ ಎಂಬುದು ಸಿದ್ಧವಾಗಿದೆ.

'ಪೂಜಿಸಲ್ಪಟ್ಟ ಪರಮಾತ್ಮನು ಬ್ರಹ್ಮನಿಗೆ ತನ್ನ ಲೋಕವನ್ನು ಪ್ರದರ್ಶಿಸಿದನು' ಎಂದು ಹೇಳಿ ಭಾಗವತದಲ್ಲಿ 'ಅದು ಎಂತಹ ಲೋಕವೆಂದರೆ, ಎಲ್ಲಿ ರಜೋಗುಣ ತಮೋಗುಣಗಳೂ ಅವುಗಳಿಂದ ಮಿಶ್ರವಾದ ಸತ್ತ್ವಗುಣವೂ ಇಲ್ಲವೋ, ಎಲ್ಲಿ ಕಾಲವು ವಿಕಾರವನ್ನುಂಟುಮಾಡುವ ತನ್ನ ಸಾಮರ್ಥ್ಯವನ್ನು ಕಳೆದುಕೊಂಡಿದೆಯೋ, ಎಲ್ಲಿ ಪ್ರಕೃತಿಯಾಗಲೀ, ಉಳಿದ ಪ್ರಕೃತಿ ಕಾರ್ಯವಾಗಲೀ ಇಲ್ಲವೋ, ಸುರರಿಂದ ಮತ್ತು ಸಜ್ಜನರಾದ ಅಸುರರಿಂದ ಪೂಜಿತರಾದ ಜೀವರು ಎಲ್ಲಿ ಪರಮಾತ್ಮನಿಗೆ ಸೇವಕರಾಗಿದ್ದಾರೆಯೋ ಅಂತಹ ಲೋಕ' ಎಂದು ಹೇಳಿದೆ. ಇಲ್ಲಿ 'ತನ್ನ ಲೋಕ' ಎಂದರೆ ಮೋಕ್ಷ. ಅಲ್ಲಿಯೇ ಈ ಶ್ಲೋಕದಲ್ಲಿ ಹೇಳಿದ ಎಲ್ಲ ಲಕ್ಷಣಗಳೂ ಅನ್ವಯಿಸುತ್ತವೆ. ಅಲ್ಲಿಯೂ ಜೀವರು ಹರಿಗೆ ಸೇವಕರಾಗಿದ್ದಾರೆ ಎಂದು ಹೇಳಿದ ಮೇಲೆ ಮೋಕ್ಷದಲ್ಲಿಯೂ ಭೇದವಿದೆ ಎಂದಾಯಿತು. 'ಈ ಭಾಗವತ ಶ್ಲೋಕದಲ್ಲಿ ವರ್ಣಿಸಲ್ಪಟ್ಟ ಮೋಕ್ಷ ಪರಮ ಮೋಕ್ಷವಲ್ಲ, ಅಮುಖ್ಯಮೋಕ್ಷ. ಆದ್ದರಿಂದ ಅಲ್ಲಿ ಭೇದವಿದ್ದರೂ ಪರಮ ಮೋಕ್ಷದಲ್ಲಿ ಭೇದವಿಲ್ಲ' ಎಂಬ ಶಂಕೆ ಸರಿಯಲ್ಲ. 'ಅವಿನಾಶಿಯಾದ ವಿಷ್ಣುವು, ಯಾವುದಕ್ಕಿಂತ ಉತ್ತಮವಾದ ಸ್ಥಾನವಿಲ್ಲವೋ, ಎಲ್ಲಿ ಮುಕ್ತರು ಪರಮಾತ್ಮನನ್ನು ಉಪಾಸನೆ ಮಾಡುತ್ತಾರೆಯೋ ಅಂತಹ ತನ್ನ ಲೋಕವನ್ನು ಬ್ರಹ್ಮನಿಗೆ ತೋರಿಸಿದನು' ಎಂದು ಹರಿವಂಶದಲ್ಲಿದೆ. ಇಲ್ಲಿ 'ಯಾವುದಕ್ಕಿಂತ ಉತ್ತಮವಾದ ಸ್ಥಾನವಿಲ್ಲವೋ' ಎಂದು ಹೇಳಿದುದರಿಂದ ಇದು ಪರಮ ಮೋಕ್ಷವೇ. ಆದ್ದರಿಂದ ಭಾಗವತ ಶ್ಲೋಕದಲ್ಲಿ 'ಸಂದರ್ಶಯಾಮಾಸ' ಎಂದಾದ ಮೇಲಿರುವ 'ಪರಂ ನ ಯತ್ ಪದಮ್' ಎಂಬ ವಾಕ್ಯಶೇಷಕ್ಕೆ 'ಯತ್ ಪದಂ–ಯಾವ ಸ್ಥಾನವು, ಪರಂ ನ–ಎಲ್ಲಕ್ಕಿಂತ ಶ್ರೇಷ್ಠವಲ್ಲವೋ' ಎಂದು ಅರ್ಥಮಾಡದೆ, 'ಯತ್–ಯಾವುದಕ್ಕಿಂತ, ಪರಂ ಪದಂ–ಶ್ರೇಷ್ಠವಾದ ಸ್ಥಾನವು, ನ–ಇಲ್ಲವೋ' ಎಂಬ ಅಭಿಪ್ರಾಯವಾದ್ದರಿಂದ 'ಯತ್' ಎಂಬ ಪದಕ್ಕೆ 'ಯಸ್ಮಾತ್– ಯಾವುದಕ್ಕಿಂತ' ಎಂದು ಅರ್ಥ ಗ್ರಹಿಸಬೇಕು. ಏಕೆಂದರೆ 'ಯತ್ ತತ್ ಮೊದಲಾದ ಶಬ್ದಗಳಿಗೆ ಪ್ರಥಮಾ ವಿಭಕ್ತಿಯ ಅರ್ಥದಂತೆ ಪಂಚಮೀ ವಿಭಕ್ತಿಯ ಅರ್ಥವೂ ಇದೆ' ಎಂದು ಅನುಶಾಸನವಿದೆ.

**ಭಾಷ್ಯ—'ವಿದ್ಯಾಽಽತ್ಮನಿ ಭಿದಾಬೋಧಃ'**

**'ಕ್ಷ್ಮಾಂಭೋನಲಾನಿಲವಿಯನ್ಮನಇಂದ್ರಿಯಾರ್ಥ**
**ಭೂತಾದಿಭಿಃ ಪರಿವೃತಃ ಪ್ರತಿಸಂಜಿಹೀರ್ಷುಃ ।**
**ಅವ್ಯಾಕೃತಂ ವಿಶತಿ ಯರ್ಹಿ ಗುಣತ್ರಯಾತ್ಮಾ**
**ಕಾಲಂ ಪರಂ ಸ್ವಮನುಭೂಯ ಪರಃ ಸ್ವಯಂಭೂಃ ॥**
**ಏವಂ ಪರೇತ್ಯ ಭಗವಂತಮನುಪ್ರವಿಷ್ಟಾ**

**ಯೇ ಯೋಗಿನೋ ಜಿತಮರುನ್ಮನಸೋ ವಿರಾಗಾಃ ।**
**ತೇನೈವ ಸಾಕಮಮೃತಂ ಪುರುಷಂ ಪುರಾಣಂ**
**ಬ್ರಹ್ಮ ಪ್ರಧಾನಮುಪಯಾಂತ್ಯಗತಾಭಿಮಾನಾಃ ||'**
**'ಭೇದದೃಷ್ಟ್ಯಾಽಭಿಮಾನೇನ ನಿಃಸಂಗೇನಾಪಿ ಕರ್ಮಣಾ' ಇತ್ಯಾದಿ ಚ||**

**ಅನುವಾದ**—'ಭೇದಜ್ಞಾನವು ಮಿಥ್ಯಾಜ್ಞಾನವಾಗಿರುವುದರಿಂದ ಶ್ರುತಿಗಳಿಗೆ ಅದ್ವೈತವಿವಕ್ಷೆ ಇಲ್ಲವೆನ್ನುವುದು ಹೇಗೆ' ಎಂಬ ಶಂಕೆ ಸರಿಯಲ್ಲ. 'ಪರಮಾತ್ಮನ ವಿಷಯದಲ್ಲಿ ಅವನು ಎಲ್ಲರಿಗಿಂತ ಭಿನ್ನನಾಗಿದ್ದಾನೆ ಎಂಬ ಜ್ಞಾನವೇ ತತ್ತ್ವಜ್ಞಾನ' ಎಂಬ ಭಾಗವತ ವಾಕ್ಯವು ಭೇದಜ್ಞಾನವು ಯಥಾರ್ಥಜ್ಞಾನವೆಂದು ತಿಳಿಸುತ್ತದೆ. 'ಗುಣತ್ರಯಗಳಿಗೆ ಅಭಿಮಾನಿಯೂ, ಸರ್ವಜೀವೋತ್ತಮನೂ ಆದ ಬ್ರಹ್ಮನು ದ್ವಿಪರಾರ್ಧರೂಪವಾದ ತನ್ನ ಕಾಲವು ಮುಗಿದ ಮೇಲೆ ತಾನು ಸೃಷ್ಟಿಸಿದ ಜಗತ್ತನ್ನು ಸಂಹರಿಸುವ ಇಚ್ಛೆಯುಳ್ಳವನಾಗಿ ಪೃಥಿವೀ ಮೊದಲಾದ ಪಂಚಭೂತಗಳು, ಮನಸ್ಸು, ಇಂದ್ರಿಯಗಳು, ಶಬ್ದ ಮೊದಲಾದ ಗುಣಗಳು, ವೈಕಾರಿಕ ತೈಜಸ ತಾಮಸವೆಂಬ ಮೂರು ವಿಧವಾದ ಅಹಂಕಾರತತ್ತ್ವ, ಇವುಗಳ ಅಭಿಮಾನಿ ದೇವತೆಗಳು ಇಷ್ಟ ರಿಂದಲೂ ಕೂಡಿಕೊಂಡು ಲಕ್ಷ್ಮಿಯ ದ್ವಾರಾ ಪರಮಾತ್ಮನನ್ನು ಪ್ರವೇಶಿಸುತ್ತಾನೆ. ವಾಯುಜಯ ಮತ್ತು ಮನೋನಿಗ್ರಹವುಳ್ಳ ಜ್ಞಾನಿಗಳು ತಮ್ಮ ಯೋಗಶಕ್ತಿಯಿಂದ ಶರೀರವನ್ನು ಬಿಟ್ಟು, ತಾವು ಜೀವರು ಎಂಬ ಜ್ಞಾನದಿಂದ ಕೂಡಿದವರಾಗಿಯೇ ಚತುರ್ಮುಖಬ್ರಹ್ಮನ ಜೊತೆಯಲ್ಲಿ ಸರ್ವೋತ್ತಮನೂ, ಗುಣಪೂರ್ಣನೂ ಆದ ಪರ ಬ್ರಹ್ಮನನ್ನು ಹೊಂದುತ್ತಾರೆ.' ಈ ಭಾಗವತ ಶ್ಲೋಕಗಳಲ್ಲಿಯೂ 'ಮೋಕ್ಷದಲ್ಲಿ ಜೀವರು ಪರಮಾತ್ಮನನ್ನು ಪ್ರವೇಶಿಸುತ್ತಾರೆ'. 'ಪರಮಾತ್ಮನನ್ನು ಹೊಂದುತ್ತಾರೆ' ಎಂದು ಹೇಳಿರುವುದರಿಂದ ಮೋಕ್ಷದಲ್ಲಿ ಜೀವೇಶ್ವರ ಭೇದವಿದೆ, ಅದು ಮಿಥ್ಯೆಯಲ್ಲ ಎಂದು ಸ್ಪಷ್ಟವಾಗುತ್ತದೆ. ಇದು ಬ್ರಹ್ಮದೇವರ ಮೋಕ್ಷದ ಪ್ರಕರಣವಾದುದರಿಂದ ಈ ಮೋಕ್ಷ ಪರಮಮೋಕ್ಷವೆಂದೇ ಒಪ್ಪಬೇಕು.

'ಭೇದಜ್ಞಾನದಿಂದಲೂ, ಪರಮಾತ್ಮನ ವಿಷಯದಲ್ಲಿ ಭಕ್ತಿಯಿಂದಲೂ, ನಿಷ್ಕಾಮಕರ್ಮದಿಂದಲೂ ಚತುರ್ಮುಖನು ಮೋಕ್ಷವನ್ನು ಪಡೆದು ಮುಕ್ತರಿಗೂ ಅಧಿಪತಿ ಯಾಗಿರುತ್ತಾನೆ'ಎಂಬಲ್ಲಿಯೂ ಭೇದಜ್ಞಾನವು ಚತುರ್ಮುಖನ ಮೋಕ್ಷಕ್ಕೆ ಕಾರಣವಾದ ಜ್ಞಾನವೆಂದು ಹೇಳಿರುವುದರಿಂದ ಭೇದಜ್ಞಾನವು ಮಿಥ್ಯಾಜ್ಞಾನವಲ್ಲ. 'ಮುಕ್ತ ಚತುರ್ಮುಖನು ಉಳಿದ ಮುಕ್ತರಿಗೆ ಅಧಿಪತಿಯಾಗಿರುತ್ತಾನೆ' ಎಂದು ಹೇಳಿದುದ ರಿಂದಲೂ ಪರಮಮೋಕ್ಷದಲ್ಲಿ ಜೀವರಿಗೆ ಪರಸ್ಪರ ಭೇದವು ಸಿದ್ಧವಾಗುತ್ತದೆ.

**ಭಾಷ್ಯ**—**'ಅಧಿಪತ್ಯಮೃತೇ ಚೈವ ಆನಂದೇನ ಚ ಕರ್ಮಣಾ ।**
**ಸರ್ವೇ ತೇ ಬ್ರಹ್ಮಣಸ್ತುಲ್ಯಾ ಭೋಗೇನ ವಿಷಯೇಣ ಚ ।**

ನಾನಾತ್ವೇನಾಭಿಸಂಬುದ್ಧಾಸ್ತದಾ ತತ್ಕಾಲಭಾವಿನಾ ।
ಪ್ರಕೃತೌ ಕರಣಾತೀತಾಃ ಸ್ವಾತ್ಮನ್ಯೇವ ವ್ಯವಸ್ಥಿತಾಃ ।
ಪ್ರದರ್ಶಯಿತ್ವಾ ಹ್ಯಾತ್ಮಾನಂ ಪ್ರಕೃತಿಸ್ತೇಷು ಸರ್ವಶಃ ।
ಪುರುಷಾನ್ಯಬಹುತ್ವೇನ ಪ್ರತೀತಾ ನ ಪ್ರವರ್ತತೇ ।
ಪ್ರವರ್ತತಿ ಪುನಃ ಸರ್ಗೇ ತೇಷಾಂ ಸಾ ನ ಪ್ರವರ್ತತೇ ।
ಸಂಯೋಗಃ ಪ್ರಕೃತೇರ್ನ್ಯೇಷಾಂ ಮುಕ್ತಾನಾಂ ತತ್ತ್ವದರ್ಶನಾತ್ ।
ಸಮಾ ದುಃಖನಿವೃತ್ತಿಸ್ತು ಮುಕ್ತಾನಾಮಪಿ ಸರ್ವಶಃ ।
ಮಾನುಷಾದಿವಿರಿಂಚಾಂತಂ ಸುಖಂ ಮುಕ್ತೌ ಶತೋತ್ತರಮ್।'
ಇತ್ಯಾದಿ ವಾಯುಪ್ರೋಕ್ತೇ ॥

**ಅನುವಾದ**—'ಮೋಕ್ಷದಲ್ಲಿ ಜೀವರು ಜಗದ್ ವ್ಯಾಪಾರವನ್ನು ಬಿಟ್ಟು ಆನಂದ ದಿಂದಲೂ, ಕರ್ಮದಿಂದಲೂ,ವಿಷಯಭೋಗದಿಂದಲೂ ಪರಮಾತ್ಮನಿಗೆ ಸದೃಶರಾಗಿಯೇ ಇರುತ್ತಾರೆ, ಅಭಿನ್ನರಾಗಿರುವುದಿಲ್ಲ. ಆಗ ಆ ಕಾಲದಲ್ಲಿಯೂ ಇರುವ ಭೇದದ ಸ್ಪಷ್ಟವಾದ ಜ್ಞಾನವನ್ನು ಹೊಂದಿರುತ್ತಾರೆ. ಪ್ರಕೃತಿ ನಿರ್ಮಿತವಾದ ಇಂದ್ರಿಯಗಳನ್ನು ಹೊಂದಿರದೆ ಸ್ವರೂಪಭೂತವಾದ ಚಿದಾನಂದಾತ್ಮಕವಾದ ದೇಹದಲ್ಲಿಯೇ ಇರುತ್ತಾರೆ. ಪ್ರಕೃತಿಯು ಅವರಿಗೆ ಪರಮಾತ್ಮಜ್ಞಾನವನ್ನುಂಟುಮಾಡಿ ತಾನೂ ಅವರಿಗೆ ಪ್ರತೀತ ವಾಗಿ, ಪ್ರಕೃತಿಪುರುಷ ವಿವೇಕದಿಂದ ತಾನು ಅವರ ವಿಷಯದಲ್ಲಿ ಪ್ರವೃತ್ತಿಯನ್ನು ಮಾಡುವುದಿಲ್ಲ. ಅಮುಕ್ತರಾದ ಜೀವರು ಇನ್ನೂ ಬಹುಸಂಖ್ಯೆಯಲ್ಲಿರುವುದರಿಂದ ಅವರ ಸೃಷ್ಟ್ಯಾದಿಗಳಲ್ಲಿ ಪ್ರವೃತ್ತವಾಗುತ್ತದೆ. ಮುಕ್ತರಿಗೆ ತತ್ತ್ವಜ್ಞಾನವುಂಟಾಗಿರು ವುದರಿಂದ ಪ್ರಕೃತಿಯ ಜೊತೆಯಲ್ಲಿ ಸಂಯೋಗವುಂಟಾಗುವುದಿಲ್ಲ. ಆದ್ದರಿಂದಲೇ ಎಲ್ಲಾ ಮುಕ್ತರಿಗೂ ದುಃಖನಿವೃತ್ತಿಯು ವಿಷಯದಲ್ಲಿ ಸಮಾನತೆ ಇದೆ. ಸುಖವು ಮನುಷ್ಯರಿಂದ ಆರಂಭಿಸಿ ಬ್ರಹ್ಮದೇವರವರೆಗೆ ನೂರುಪಟ್ಟು ಹೆಚ್ಚುತ್ತಾ ಹೋಗು ತ್ತದೆ. ಆದ್ದರಿಂದ ತಾರತಮ್ಯಕ್ಕೂ ಭಂಗವಿಲ್ಲ' ಎಂದು ವಾಯುಪ್ರೋಕ್ತ ಎಂಬ ಗ್ರಂಥದಲ್ಲಿ ಹೇಳಿದೆ.

**ಜೀವೇಶಾಭೇದಜ್ಞಾನ ಶಾಸ್ತ್ರಕ್ಕೆ ಅಸಮ್ಮತ :**

ಭಾಷ್ಯ—'ಐಕಾತ್ಮ್ಯಂ ನಾಮ ಯದಿದಂ ಕೇಚಿದ್ ಬ್ರೂಯುರನೈಪುಣಾಃ ।
ಶಾಸ್ತ್ರತತ್ತ್ವಮವಿಜ್ಞಾಯ ತಥಾವಾದಬಲಾ ಜನಾಃ ।
ಕಾಮಕ್ರೋಧಾಭಿಭೂತತ್ವಾದಹಂಕಾರವಶಂ ಗತಾಃ ।
ಯಾಥಾತಥ್ಯಮವಿಜ್ಞಾಯ ಶಾಸ್ತ್ರಾಣಾಂ ಶಾಸ್ತ್ರದಸ್ಯವಃ ।
ಬ್ರಹ್ಮಸ್ತೇನಾ ನಿರಾನಂದಾ ಅಪಕ್ವಮನಸೋಽಶಿವಾಃ ।
ವೈಗುಣ್ಯಮೇವ ಪಶ್ಯಂತಿ ನ ಗುಣಾನಿ ನಿಯುಂಜತೇ ।

ತೇಷಾಂ ತಮಃಶರೀರಾಣಾಂ ತಮ ಏವ ಪರಾಯಣಮ್ ।'
'ಅನ್ಯ ಈಶಸ್ತಥಾನ್ಯೋಽಹಂ ಇತಿ ಜ್ಞಾನಂ ವಿಪಶ್ಚಿತಾಮ್ ।
ಆಧಿಕ್ಯಜ್ಞಾನಮೀಶಸ್ಯ ಯತೋಽನ್ಯತ್ವೇನ ಯುಜ್ಯತೇ ।'
'ಯತಃ ಸ್ವರೂಪತಶ್ಚಾನ್ಯೋ ಜಾತಿತಃ ಶ್ರುತಿತೋಽರ್ಥತಃ ।
ಕಥಮಸ್ಮಿ ಸ ಇತ್ಯೇವ ಸಂಬಂಧಃ ಸ್ಯಾದಸಂಹಿತಃ ।'
'ಬಹವಃ ಪುರುಷಾ ಬ್ರಹ್ಮನ್ ಉತಾಹೋ ಏಕ ಏವ ತು ।
ಕೋ ಹ್ಯತ್ರ ಪುರುಷಶ್ರೇಷ್ಠಸ್ತಂ ಭವಾನ್ ವಕ್ತುಮರ್ಹತಿ ।

ವೈಶಂಪಾಯನ ಉವಾಚ—

ನೈತದಿಚ್ಛಂತಿ ಪುರುಷಮೇಕಂ ಕುರುಕುಲೋದ್ವಹ ।
ಬಹೂನಾಂ ಪುರುಷಾಣಾಂ ಹಿ ಯಥೈಕಾ ಯೋನಿರುಚ್ಯತೇ ।
ತಥಾ ತಂ ಪುರುಷಂ ವಿಶ್ವಮಾಖ್ಯಾಸ್ಯಾಮಿ ಗುಣಾಧಿಕಮ್ ।'

ಇತಿ ಚ ಮೋಕ್ಷಧರ್ಮೇ ।

**ಅನುವಾದ**—'ಕೆಲವು ಅಜ್ಞಾನಿಗಳು ಜೀವಬ್ರಹ್ಮೈಕ್ಯವನ್ನು ಹೇಳುತ್ತಾರೆ. ಅವರು 'ಅಹಂ ಬ್ರಹ್ಮಾಸ್ಮಿ' ಮೊದಲಾದ ಶ್ರುತಿಯ ನಿಜವಾದ ಅರ್ಥವನ್ನು ತಿಳಿಯದೆ ಸಮಾನ ವಿಭಕ್ತಿ ಮೊದಲಾದುವನ್ನು ಅವಲಂಬಿಸಿ ಭ್ರಾಂತರಾಗುತ್ತಾರೆ. ಕಾಮ,ಕ್ರೋಧ, ಅಹಂಕಾರಗಳಿಗೆ ವಶರಾಗಿ'ದ್ವಾ ಸುಪರ್ಣಾ' ಮೊದಲಾದ ಶ್ರುತಿಗಳ ನಿಜವಾದ ಅರ್ಥವನ್ನು ತಿಳಿಯದೆ ಅವುಗಳನ್ನು ಅತತ್ತ್ವಾವೇದಕವೆಂದು ಹೇಳಿ ಶಾಸ್ತ್ರವನ್ನೇ ಕದಿಯುತ್ತಾರೆ. ಶಾಸ್ತ್ರವು ತತ್ತ್ವಾವೇದಕವಲ್ಲ, ಪ್ರಮಾಣವಲ್ಲ ಎನ್ನುವುದೂ ಶಾಸ್ತ್ರವನ್ನು ಇಲ್ಲದಂತೆ ಮಾಡುವುದೂ ಎರಡೂ ಕಳ್ಳತನವೇ. ಜೀವಬ್ರಹ್ಮೈಕ್ಯವನ್ನು ಹೇಳಿ ಗುಣಪೂರ್ಣನಾದ ಬ್ರಹ್ಮನನ್ನೇ ಕದಿಯುತ್ತಾರೆ, ಅವರ ಈ ಕಾಮಕ್ರೋಧಗಳಿಗೆ ಮೂಲಕಾರಣ ಅವರ ಆನಂದರಹಿತವಾದ ಅಮಂಗಳ ಸ್ವರೂಪ ಮತ್ತು ಅಪಕ್ವವಾದ ಮನಸ್ಸು. ಪರಮಾತ್ಮ ಜೀವರಲ್ಲಿ ಸರ್ವಜ್ಞತ್ವ ಮತ್ತು ಅಲ್ಪಜ್ಞತ್ವರೂಪವಾದ ವಿರುದ್ಧ ಗುಣವಿದ್ದರೂ ಅವುಗಳನ್ನು ಪಾರಮಾರ್ಥಿಕವೆಂದು ಅಂಗೀಕರಿಸದೆ, ಬ್ರಹ್ಮನು ನಿರ್ಗುಣನೆಂದೇ ಹೇಳುತ್ತಾರೆ. ತಮೋಗುಣಪ್ರಧಾನವಾದ ಸ್ವರೂಪವುಳ್ಳ ಅವರಿಗೆ ಅಂಧಂತಮಸ್ಸೇ ಶಾಶ್ವತವಾದ ನೆಲೆಯಾಗುತ್ತದೆ. ಜ್ಞಾನಿಗಳು ಮಾತ್ರ 'ಪರಮಾತ್ಮನು ಭಿನ್ನ ಮತ್ತು ನಾನು ಭಿನ್ನ' ಎಂದು ತಿಳಿಯುತ್ತಾರೆ. ಏಕೆಂದರೆ ಪರಮಾತ್ಮನು ಜೀವನಿಗಿಂತ ಭಿನ್ನನೆಂದು ತಿಳಿದರೆ ಮಾತ್ರ ಪರಮಾತ್ಮನಿಗೆ ಸರ್ವೋತ್ತಮತ್ವವನ್ನು ತಿಳಿದಂತಾಗುತ್ತದೆ. ಪರಮಾತ್ಮನು ವ್ಯಾಪ್ತ, ಜೀವನು ಅಣು ಎಂಬ ಸ್ವರೂಪಭೇದ: ಪರಮಾತ್ಮನು ಈಶ, ಜೀವನು ಅಸ್ವತಂತ್ರ ಎಂಬ ಜಾತಿಭೇದ: ಪರಮಾತ್ಮನು ಕರ್ಮಫಲಭೋಕ್ತೃವಲ್ಲ, ಜೀವನು ಕರ್ಮಫಲಭೋಕ್ತೃ ಎಂಬ ಶ್ರುತ್ಯುಕ್ತವಾದ

ವೈಲಕ್ಷಣ್ಯ; ಪರಮಾತ್ಮನು ಪೂರ್ಣಕಾಮ, ಜೀವನು ಅಲ್ಪಕಾಮ ಎಂಬ ಪುರುಷಾರ್ಥ ವೈಲಕ್ಷಣ್ಯಗಳಿರುವಾಗ 'ನಾನೇ ಬ್ರಹ್ಮ' ಎಂಬ ಅಯೋಗ್ಯವಾದ ಅಭೇದ ಸಂಬಂಧವು ಜೀವಪರಮಾತ್ಮರಲ್ಲಿ ಹೇಗೆ ಕೂಡುತ್ತದೆ ?' 'ಮುನಿಯೇ, ಲೋಕದಲ್ಲಿ ಚೇತನರು ಅನೇಕರೇ ಅಥವಾ ಒಬ್ಬನೇ ? ಅನೇಕರಾದರೆ ಅವರಲ್ಲಿ ಯಾರು ಶ್ರೇಷ್ಠ ? ಏಕೆ ಶ್ರೇಷ್ಠ ? ಈ ವಿಷಯವನ್ನು ಪೂಜ್ಯನಾದ ನೀನು ತಿಳಿಸಬೇಕು' ವೈಶಂಪಾಯನನು ಹೇಳುತ್ತಾನೆ—'ಕುರುಕುಲ ಶ್ರೇಷ್ಠನಾದ ಜನಮೇಜಯನೇ, ಚೇತನನೊಬ್ಬನೇ ಎಂಬು ದನ್ನು ಯಾವ ಜ್ಞಾನಿಗಳೂ ಒಪ್ಪುವುದಿಲ್ಲ. ಚೇತನರು ಅನೇಕರು. ಇವರೆಲ್ಲರಿಗೂ ಕಾರಣನಾದ ಒಬ್ಬ ಚೇತನನೇ ಶ್ರೇಷ್ಠನು. ಏಕೆಂದರೆ ಅವನು ವ್ಯಾಪ್ತನಾಗಿದ್ದಾನೆ, ಗುಣಪೂರ್ಣನಾಗಿದ್ದಾನೆ ಎಂದು ಹೇಳುತ್ತೇನೆ' ಎಂದೂ ಮೋಕ್ಷಧರ್ಮದಲ್ಲಿ ಹೇಳಿದೆ.

**ಭಾಷ್ಯ—ದ್ವಾವಿಮೌ ಪುರುಷೌ ಲೋಕೇ ಕ್ಷರಶ್ಚಾಕ್ಷರ ಏವ ಚ ।**
**ಕ್ಷರಃ ಸರ್ವಾಣಿ ಭೂತಾನಿ ಕೂಟಸ್ಥೋಽಕ್ಷರ ಉಚ್ಯತೇ ।**
**ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ ।**
**ಯೋ ಲೋಕತ್ರಯಮಾವಿಶ್ಯ ಬಿಭರ್ತ್ಯವ್ಯಯ ಈಶ್ವರಃ ।**
**ಯಸ್ಮಾತ್ ಕ್ಷರಮತೀತೋಽಹಮಕ್ಷರಾದಪಿ ಚೋತ್ತಮಃ ।**
**ಅತೋಽಸ್ಮಿ ಲೋಕೇ ವೇದೇ ಚ ಪ್ರಥಿತಃ ಪುರುಷೋತ್ತಮಃ ।**
**ಯೋ ಮಾಮೇವಮಸಂಮೂಢೋ ಜಾನಾತಿ ಪುರುಷೋತ್ತಮಂ ।**
**ಸ ಸರ್ವವಿದ್ ಭಜತಿ ಮಾಂ ಸರ್ವಭಾವೇನ ಭಾರತ ।**
**ಇತಿ ಗುಹ್ಯತಮಂ ಶಾಸ್ತ್ರಮಿದಮುಕ್ತಂ ಮಯಾಽನಘ ।**
**ಏತದ್ ಬುದ್ಧ್ವಾ ಬುದ್ಧಿಮಾನ್ ಸ್ಯಾತ್ ಕೃತಕೃತ್ಯಶ್ಚ ಭಾರತ ।**
**ಇತಿ ಚ ॥**

**ಅನುವಾದ**—'ಈ ಜಗತ್ತಿನಲ್ಲಿ ಚೇತನರು ಕ್ಷರ ಮತ್ತು ಅಕ್ಷರ ಎಂದು ಎರಡೇ ಬಗೆಯವರು. ಬ್ರಹ್ಮಾದಿ ಸರ್ವಜೀವರು ಶರೀರನಾಶವುಳ್ಳ ಪ್ರಯುಕ್ತ ಕ್ಷರರೆನಿಸು ತ್ತಾರೆ. ಶರೀರನಾಶವಿಲ್ಲದೇ ಇರುವುದರಿಂದ ಲಕ್ಷ್ಮಿಯು ಅಕ್ಷರಳೆನಿಸುತ್ತಾಳೆ. ಪುರು ಷೋತ್ತಮನಾದವನು ಇವರಿಬ್ಬರಿಗಿಂತ ಭಿನ್ನನಾದವನು. ಅವನು ಶ್ರುತಿ ಸ್ಮೃತಿ ಗಳಲ್ಲಿ ಪರಮಾತ್ಮನೆಂದು ಕರೆಯಲ್ಪಡುತ್ತಾನೆ. ಅವನು ಎಲ್ಲಾ ಲೋಕಗಳನ್ನೂ ಪ್ರವೇಶಿಸಿ ಧರಿಸಿದ್ದಾನೆ. ಆದ್ದರಿಂದಲೂ ಅವನು ಪುರುಷೋತ್ತಮ. ಲೋಕಗಳು ನಾಶವಾದರೂ ಅವುಗಳ ಒಳಗಿರುವ ಅವನು ನಾಶವಾಗುವುದಿಲ್ಲ. ಇದು ಅವನ ಅಚಿಂತ್ಯಶಕ್ತಿಯಿಂದ ಕೂಡುತ್ತದೆ. ಕ್ಷರಾಕ್ಷರ ಪುರುಷರಿಗಿಂತ ಉತ್ತಮನಾದ ಪ್ರಯುಕ್ತ ಪೌರುಷೇಯ ಗ್ರಂಥಗಳಲ್ಲಿಯೂ, ಅಪೌರುಷೇಯ ಗ್ರಂಥಗಳಲ್ಲಿಯೂ ಪುರುಷೋ ತ್ತಮನೆಂದು ಕರೆಯಲ್ಪಡುವವನು ನಾನೇ. ಈ ಪುರುಷೋತ್ತಮತ್ವವು ನನ್ನಲ್ಲಿ

ಬೇಸರಿಗೆ ಮಾತ್ರ ಎಂದು ಅಥವಾ ಅಪಾರಮಾರ್ಥಿಕ ಎಂದು ಮೋಹಕ್ಕೊಳಗಾಗದೆ ನನ್ನನ್ನು ನಿಜವಾಗಿಯೂ ಪುರುಷೋತ್ತಮನೆಂದು ಯಾರು ಅಂಗೀಕರಿಸುತ್ತಾರೋ ಅವರು ಎಲ್ಲವನ್ನೂ ತಿಳಿದಂತಾಗುವುದು. ಏಕೆಂದರೆ ಇದೇ ಎಲ್ಲಾ ಶಾಸ್ತ್ರಗಳ ಒಟ್ಟು ಅರ್ಥ. ಹೀಗೆ ತಿಳಿದು ನನ್ನನ್ನು ಭಜಿಸುವವನು ಎಲ್ಲಾ ರೀತಿಯಿಂದಲೂ ನನ್ನನ್ನು ಭಜಿಸುತ್ತಾನೆ. ಇದು ಅತ್ಯಂತ ರಹಸ್ಯವಾದ ಶಾಸ್ತ್ರದ ಪ್ರಮೇಯ. ಶುದ್ಧಸ್ವಭಾವದ ಅರ್ಜುನನೇ, ಇದನ್ನು ನಾನು ನಿನಗೆ ತಿಳಿಸಿದ್ದೇನೆ. ಇದನ್ನು ತಿಳಿದವನು ಅಪರೋಕ್ಷ ಜ್ಞಾನವನ್ನು ಪಡೆದು ಮುಕ್ತನಾಗುತ್ತಾನೆ' ಎಂದೂ ಗೀತೆಯಲ್ಲಿ ಹೇಳಿದೆ. ಆದ್ದರಿಂದ ಜೀವಬ್ರಹ್ಮೈಕ್ಯವು ಶಾಸ್ತ್ರದಲ್ಲಿ ವಿವಕ್ಷಿತವಲ್ಲ.

**ಬ್ರಹ್ಮ ಮತ್ತು ಅವನ ಗುಣಗಳಿಗೆ ಭೇದಜ್ಞಾನದಿಂದ ಅನರ್ಥ :**

**ಭಾಷ್ಯ—ಬ್ರಹ್ಮಣಸ್ತದ್ಗುಣಾನಾಂ ಚ ಭೇದದರ್ಶ್ಯಧರಂ ತಮಃ ।**
**ಭೇದಾಭೇದಪ್ರದರ್ಶೀ ಚ ಮಧ್ಯಮಂ ತು ತಮೋ ವಿಶೇತ್ ।**
**ಈಷದ್‌ಭೇದಪ್ರದರ್ಶೀ ಚ ತಮ ಏವೋತ್ತರಂ ವ್ರಜೇತ್ ।**
**ವಿಜಾನೀಯಾತ್ ತತೋ ಬ್ರಹ್ಮ ಸದಾ ಸರ್ವಗುಣಾತ್ಮಕಮ್ ।**
**ಗುಣಾನಾಂ ಚ ವಿಶೇಷೋಽಸ್ತಿ ನ ವಿಭೇದಃ ಕಥಂಚನ ।**
**ತೇ ಚ ಸರ್ವೇ ಗುಣಾಃ ಪೂರ್ಣಾಸ್ತಚ್ಛರೀರಃ ಪರಃ ಸ್ಮೃತಃ ।**
**ಆನಂದಜ್ಞಾನಶಕ್ತ್ಯಾದಿದೇಹಂ ವಿಷ್ಣುಂ ತು ಯೇ ಜನಾಃ ।**
**ಅದೇಹಂ ಭೂತದೇಹಂ ವಾ ವಿದುಸ್ತೇ ಚಾಧರಂ ತಮಃ ।**
**ತಥಾ ಪ್ರಕೃತಿದೇಹಜ್ಞಾಃ ಕರ್ಮದೇಹವಿದೋಽಪಿ ವಾ ।**
**ತಸ್ಮಾದಾನಂದಚಿದ್ದೇಹಂ ಚಿದಾನಂದಶಿರೋಮುಖಮ್ ।**
**ಚಿದಾನಂದಭುಜಂ ಜ್ಞಾನಸುಖೈಕಪದಸಾಂಗುಲಿಮ್ ।**
**ಆಕೇಶಾದಾ ನಖಾಗ್ರೇಭ್ಯಃ ಪೂರ್ಣಚಿತ್ಸುಖಶಕ್ತಿಕಮ್ ।**
**ಪ್ರತ್ಯೇಕಂ ಚ ಗುಣಾಂಸ್ತಾಂಸ್ತು ಸದಾ ಸರ್ವಗುಣಾತ್ಮಕಾನ್ ।**
**ಜ್ಞಾತ್ವಾ ವಿಮುಚ್ಯತೇ ವಿಷ್ಣೋಃ ಪ್ರಸಾದಾನ್ಮಾನುಷೋಽಪಿ ಸನ್ ॥**

**ಅನುವಾದ**—ಬ್ರಹ್ಮನಿಗೂ ಅವನ ಗುಣಗಳಿಗೂ ಭೇದವನ್ನು ತಿಳಿಯುವವನು ಅತ್ಯಂತ ದುಃಖಮಯವಾದ ಕೆಳಗಿನ ತಮಸ್ಸಿಗೆ ಹೋಗುತ್ತಾನೆ. ಭೇದಾಭೇದವನ್ನು ತಿಳಿಯುವವನು ಮಧ್ಯಮ ತಮಸ್ಸಿಗೆ ಹೋಗುತ್ತಾನೆ. ಬ್ರಹ್ಮನ ಗುಣಗಳು ಕೆಲವು ಸ್ವರೂಪ ಭೂತವಾದವು ಮತ್ತು ಕೆಲವು ಭಿನ್ನವಾದವು ಎಂದು ತಿಳಿಯುವವನು ಮೇಲಿನ ತಮಸ್ಸಿಗೆ ಹೋಗುತ್ತಾನೆ. ಆದ್ದರಿಂದ ಹರಿಯು ಸದಾ ಸರ್ವಗುಣಾತ್ಮಕನೆಂದೇ ತಿಳಿಯಬೇಕು. ಗುಣಗಳಿಗೆ ಭೇದವಿಲ್ಲ. ವಿಶೇಷವಿದೆ. ಎಲ್ಲಾ ಗುಣಗಳೂ ಪೂರ್ಣವಾಗಿವೆ. ಗುಣಗಳೇ ಪರಮಾತ್ಮನ ಶರೀರ. ಜ್ಞಾನಾನಂದಾದಿಗಳನ್ನೇ

ದೇಹವಾಗಿ ಹೊಂದಿರುವ ವಿಷ್ಣುವನ್ನು ಯಾರು ಶರೀರರಹಿತನೆಂದು ಅಥವಾ ಪ್ರಾಕೃತಶರೀರ ಉಳ್ಳವನೆಂದು ತಿಳಿಯುತ್ತಾರೆಯೋ ಅವರು ಕೆಳಗಿನ ತಮಸ್ಸಿಗೆ ಹೋಗುತ್ತಾರೆ. ಅವನಿಗೆ ಭೌತಿಕವಾದ ಶರೀರ ಉಂಟೆಂದೂ, ಕರ್ಮನಿರ್ಮಿತವಾದ ಶರೀರ ಉಂಟೆಂದೂ ತಿಳಿಯುವವರೂ ಹಾಗೆಯೇ ಕೆಳಗಿನ ತಮಸ್ಸಿಗೆ ಹೋಗುತ್ತಾರೆ. ಆದ್ದರಿಂದ ಪರಮಾತ್ಮನು ಚಿದಾನಂದ ದೇಹನೆಂದೂ ಅವನ ಶಿರಸ್ಸು, ಮುಖ, ಭುಜ, ಪಾದ, ಅಂಗುಲಿಗಳು, ಕೇಶದಿಂದ ಪ್ರಾರಂಭಿಸಿ ಉಗುರಿನ ತುದಿಯವರೆಗೆ ಎಲ್ಲವೂ ಪೂರ್ಣ ಚಿತ್ಸುಖಶಕ್ತಿರೂಪವಾದವುಗಳೆಂದೂ,ಚಿದಾನಂದಾದಿಗುಣಗಳಲ್ಲಿ ಒಂದೊಂದು ಗುಣವೂ ಸರ್ವಗುಣಾತ್ಮಕವಾದುದು ಎಂದೂ ಯಾರು ತಿಳಿಯುತ್ತಾನೆಯೋ ಅವನು ಮನುಷ್ಯನಾದರೂ ಸಹ ವಿಷ್ಣುವಿನ ಪ್ರಸಾದದಿಂದ ಮುಕ್ತನಾಗುತ್ತಾನೆ.

**ಬ್ರಹ್ಮ ಮತ್ತು ಜೀವರಿಗೆ ಅಭೇದ ತಿಳಿದರೂ ಅನರ್ಥ :**

**ಭಾಷ್ಯ—ಜೀವಾಭೇದಂ ತಥಾಽಭೇದಂ ಜಗತಾ ಯೇ ವಿದುಃ ಪ್ರಭೋಃ ।**
**ತೇಽಪಿ ಯಾಂತಿ ತಮೋ ಘೋರಮಧರಂ ಬ್ರಹ್ಮತಸ್ಕರಾಃ ।**
**ಭೇದಾಭೇದಂ ವಿದುರ್ಯೇ ಚ ಜೀವೈಸ್ತು ಜಗತಾಽಪಿ ವಾ ।**
**ಪರಸ್ಯ ಬ್ರಹ್ಮಣೋ ಯಾಂತಿ ತಮಸ್ತೇಽಪ್ಯುತ್ತರಂ ಸದಾ ।**
**ಅಭೇದಜ್ಞಾಃ ಪ್ರಕೃತ್ಯಾಽಪಿ ಭೇದಾಭೇದವಿದಸ್ತಥಾ ।**
**ತೇಽಪಿ ಯಾಂತಿ ತಮೋ ಘೋರಮಧರಂ ಚೋತ್ತರಂ ಕ್ರಮಾತ್ ।**
**ತಸ್ಮಾತ್ ಸರ್ವೋತ್ತಮಂ ವಿಷ್ಣುಂ ಪೂರ್ಣಸರ್ವಗುಣೋಚ್ಛ್ರಿತಂ ।**
**ವಿಜಾನೀಯಾದ್ ವಿಮುಕ್ತ್ಯರ್ಥಂ ಸರ್ವತಶ್ಚ ವಿಲಕ್ಷಣಮ್ ॥**

**ಅನುವಾದ**—ಯಾರು ಹರಿಗೆ ಜೀವಾಭೇದವನ್ನೂ ಜಗತ್ತಿನಿಂದ ಅಭೇದವನ್ನೂ ತಿಳಿಯುತ್ತಾರೆಯೋ ಅವರು ಗುಣಪರಿಪೂರ್ಣನಾದ ಹರಿಯನ್ನೇ ಇಲ್ಲವೆನಿಸಿದ್ದರಿಂದ ಬ್ರಹ್ಮತಸ್ಕರರೆನಿಸಿಕೊಂಡು ಕೆಳಗಿನ ತಮಸ್ಸಿಗೆ ಹೋಗುತ್ತಾರೆ. ಬ್ರಹ್ಮನಿಗೆ ಜೀವರಿಂದ ಮತ್ತು ಜಗತ್ತಿನಿಂದ ಯಾರು ಭೇದಾಭೇದವನ್ನು ತಿಳಿಯುತ್ತಾರೆಯೋ ಅವರು ಮೇಲಿನ ತಮಸ್ಸಿಗೆ ಹೋಗುತ್ತಾರೆ. ಮಹಾಲಕ್ಷ್ಮಿಗೂ ಬ್ರಹ್ಮನಿಗೂ ಅಭೇದವನ್ನು ತಿಳಿಯುವವರು ಕೆಳಗಿನ ತಮಸ್ಸಿಗೂ, ಭೇದಾಭೇದವನ್ನು ತಿಳಿಯುವವರು ಮೇಲಿನ ತಮಸ್ಸಿಗೂ ಹೋಗುತ್ತಾರೆ. ಆದ್ದರಿಂದ ಮೋಕ್ಷವನ್ನು ಪಡೆಯಲು ವಿಷ್ಣುವು ಸರ್ವವಿಲಕ್ಷಣನೆಂದೂ, ಸರ್ವಗುಣಪೂರ್ಣನೆಂದೂ, ಸರ್ವೋತ್ತಮನೆಂದೂ ತಿಳಿಯಬೇಕು.

**ಭಾಷ್ಯ—ಅಂಧಂತಮಃ ಪ್ರವಿಶಂತಿ ಯೇ ದೇಹಂ ಪರಮಾತ್ಮನಃ ।**
**ಭಿನ್ನಂ ವಿಜಾನತೇ ವಿಷ್ಣೋರ್ಭಿನ್ನಾಭಿನ್ನವಿದೋಽಪಿ ವಾ ।**
**ಅಂಧಂತಮಃ ಪ್ರವಿಶಂತಿ ಪ್ರಾದುರ್ಭಾವಾಂಸ್ತು ಯೇಽಪಿ ವಾ ।**

ಸರ್ವಭೂತಸ್ಥಿತಾನ್ ವಾಽಪಿ ಭಿನ್ನಾನ್ ಜಾನಂತಿ ಯೇಽಖಿಲಾನ್ ।
ಭಿನ್ನಾಭಿನ್ನವಿದೋ ವಾಽಪಿ ಶಿರಃಪಾಣ್ಯಾದಿಕಂ ತಥಾ ।
ಭಿನ್ನಂ ಮಿಥೋ ವಿಜಾನೀಯುರ್ಭಿನ್ನಾಭಿನ್ನವಿದೋಽಪಿ ವಾ ।
ತೇಽಪಿ ಯಾಂತಿ ತಮೋ ಘೋರಂ ಯತೋ ನೈವೋತ್ಥಿತಿಃ ಕ್ವಚಿತ್।
ಪ್ರಾದುರ್ಭಾವತಯಾ ಯೇ ಚ ತದನ್ಯಾನ್ ಜಾನತೇ ವಿಭೋಃ ।
ತೇಽಪಿ ಯಾಂತಿ ತಮೋ ಘೋರಂ ತಸ್ಮಾನ್ನೈವಂವಿದೋ ವಿದುಃ ।
ಮತ್ಸ್ಯ ಕೂರ್ಮ ಕ್ರೋಡ ಸಿಂಹ ವಟು ಭಾರ್ಗವ ರಾಘವಾಃ ।
ಕೃಷ್ಣ ಬುದ್ಧ ಕಲ್ಕಿ ದತ್ತ ಹಯಶೀರ್ಷೈತರೇಯಕಾಃ ।
ಪಾರಾಶರ್ಯಶ್ಚ ಕಪಿಲೋ ವೈಕುಂಠೋ ವೃಷಭಸ್ತಥಾ ।
ಯಜ್ಞೋ ಧನ್ವಂತರಿಶ್ಚೈವ ಸ್ತ್ರೀರೂಪಸ್ತಾಪಸೋ ಮನುಃ ।
ನಾರಾಯಣೋ ಹರಿಃ ಕೃಷ್ಣ ಉಪೇಂದ್ರಃ ಸರ್ವ ಏವ ಚ ।
ಏವಮಾದ್ಯಾ ಹರೇಃ ಸಾಕ್ಷಾತ್ ಪ್ರಾದುರ್ಭಾವಾಃ ಪ್ರಕೀರ್ತಿತಾಃ ।

**ಅನುವಾದ**—ಯಾರು ಪರಮಾತ್ಮನಿಗೂ ಅವನ ದೇಹಕ್ಕೂ ಭೇದವನ್ನಾಗಲೀ ಭೇದಾಭೇದವನ್ನಾಗಲೀ ತಿಳಿಯುತ್ತಾರೆಯೋ ಅವರು ಅಂಧಂತಮಸ್ಸಿಗೆ ಹೋಗುತ್ತಾರೆ. ಪರಮಾತ್ಮನ ಅವತಾರ ರೂಪಗಳಲ್ಲಿಯೂ, ಅಂತರ್ಯಾಮಿರೂಪಗಳಲ್ಲಿಯೂ ಯಾರು ಭೇದವನ್ನು ಅಥವಾ ಭೇದಾಭೇದವನ್ನು ತಿಳಿಯುತ್ತಾರೆಯೋ ಅವರು ಅಂಧಂತಮಸ್ಸಿಗೆ ಹೋಗುತ್ತಾರೆ. ಪರಮಾತ್ಮನ ದೇಹದ ಶಿರಃಪಾಣ್ಯಾದಿಗಳಿಗೆ ಪರಸ್ಪರ ಭೇದವನ್ನು ಅಥವಾ ಭೇದಾಭೇದವನ್ನು ತಿಳಿಯುವವರೂ ತಮಸ್ಸಿಗೆ ಹೋಗುತ್ತಾರೆ. ಆ ತಮಸ್ಸಿನಿಂದ ಎಂದೂ ಮೇಲೆ ಬರುವಂತೆಯೇ ಇಲ್ಲ. ಪೃಥು ಮೊದಲಾದವರನ್ನು ಯಾರು ಪರಮಾತ್ಮನ ಅವತಾರ ಎಂದು ತಿಳಿಯುತ್ತಾರೆಯೋ ಅವರೂ ತಮಸ್ಸಿಗೆ ಹೋಗುತ್ತಾರೆ. ಆದ್ದರಿಂದ ಜ್ಞಾನಿಗಳು ಹೀಗೆ ತಿಳಿಯಬಾರದು. ಮತ್ಸ್ಯ, ಕೂರ್ಮ, ವರಾಹ, ನರಸಿಂಹ, ವಾಮನ, ಪರಶುರಾಮ, ರಾಮ, ಕೃಷ್ಣ, ಬುದ್ಧ, ಕಲ್ಕಿ, ದತ್ತ, ಹಯಗ್ರೀವ, ಐತರೇಯ, ವ್ಯಾಸ, ಕಪಿಲ, ವೈಕುಂಠ, ವೃಷಭ, ಯಜ್ಞ, ಧನ್ವಂತರಿ, ಮೋಹಿನಿ, ತಾಪಸಮನು, ನಾರಾಯಣ, ಹರಿ, ಕೃಷ್ಣ, ಉಪೇಂದ್ರ ಮೊದಲಾದುವುಗಳೆಲ್ಲವೂ ಪರಮಾತ್ಮನ ಅವತಾರರೂಪಗಳು ಎಂದು ಪ್ರಸಿದ್ಧವಾಗಿವೆ.

**ಲಕ್ಷ್ಮೀ ಬ್ರಹ್ಮಾದಿ ದೇವತಾಸ್ವರೂಪ ಮತ್ತು ತಾರತಮ್ಯ :**

**ಭಾಷ್ಯ**—ಶ್ರೀರ್ಭೂರ್ದುರ್ಗಾಽಂಭೃಣೀ ಹ್ರೀಶ್ಚ ಮಹಾಲಕ್ಷ್ಮೀಶ್ಚ ದಕ್ಷಿಣಾ ।
ಸೀತಾ ಜಯಂತೀ ಸತ್ಯಾ ಚ ರುಕ್ಮಿಣೀತ್ಯಾದಿಭೇದಿತಾ ।
ಪ್ರಕೃತಿಸ್ತೇನ ಚಾವಿಷ್ಟಾ ತದ್ವಶಾ ನ ಹರಿಃ ಸ್ವಯಮ್ ।
ತತೋಽನಂತಾಂಶಹೀನಾ ಚ ಬಲಜ್ಞಪ್ತಿಸುಖಾದಿಭಿಃ ।

ಗುಣೈಃ ಸರ್ವೈಸ್ತಥಾಽಪ್ಯಸ್ಯ ಪ್ರಸಾದಾದ್ ದೋಷವರ್ಜಿತಾ ।
ಸರ್ವದಾ ಸುಖರೂಪಾ ಚ ಸರ್ವದಾ ಜ್ಞಾನರೂಪಿಣೀ ।

**ಅನುವಾದ**—ಶ್ರೀ, ಭೂ, ದುರ್ಗಾ, ಅಂಭೃಣೀ, ಮಹಾಲಕ್ಷ್ಮೀ, ದಕ್ಷಿಣಾ, ಸೀತಾ, ಜಯಂತೀ, ಸತ್ಯಭಾಮಾ, ರುಕ್ಮಿಣೀ ಮೊದಲಾದವು ರಮಾರೂಪ ಪ್ರಕೃತಿಯ ರೂಪ ವಿಶೇಷಗಳು. ಈ ಪ್ರಕೃತಿಯು ಪರಮಾತ್ಮನಿಂದ ಆವಿಷ್ಟಳು ಮತ್ತು ಪರಮಾತ್ಮನಿಗೆ ಅಧೀನಳು. ಪರಮಾತ್ಮನಿಂದ ಅಭಿನ್ನಳಲ್ಲ. ಬಲಜ್ಞಾನ ಸುಖಾದಿ ಎಲ್ಲಾ ಗುಣಗಳಲ್ಲಿಯೂ ಹರಿಗೆ ಅನಂತಾಂಶದಿಂದ ನ್ಯೂನಳು. ಆದರೂ ಹರಿಯ ಅನುಗ್ರಹದಿಂದ ಅವಳು ಯಾವಾಗಲೂ ದೋಷರಹಿತಳಾಗಿಯೂ ಜ್ಞಾನ ರೂಪಳಾಗಿಯೂ ಸುಖರೂಪಳಾಗಿಯೂ ಇದ್ದಾಳೆ.

ಭಾಷ್ಯ—ಪ್ರಾಣಃ ಸೂತ್ರಂ ಮಹಾನ್ ಬ್ರಹ್ಮಾ ಚಿತ್ತಂ ವಾಯುರ್ಬಲಂ ಧೃತಿಃ।
ಸ್ಥಿತಿರ್ಯೋಗಶ್ಚ ವೈರಾಗ್ಯಂ ಜ್ಞಾನಂ ಪ್ರಜ್ಞಾ ಸ್ಮೃತಿಃ ಸುಖಮ್ ।
ಮೇಧಾಮುಕ್ತಿರ್ವಿಷ್ಣುಭಕ್ತಿರಾದಿಗೋಪ್ತೋ ಮಹಾಪ್ರಭುಃ ।
ಋಜುಃ ಸುಮಾನೋ ವಿಜ್ಞಾತಾ ಮಹಾಧ್ಯಾತಾ ಮಹಾಗುರುಃ ।
ಹನೂಮಾನ್ ಭೀಮ ಆನಂದ ಇತ್ಯಾದಿಬಹುರೂಪಿಣಃ ।
ಹಿರಣ್ಯಗರ್ಭಾ ಯೇಽತೀತಾ ಯೇ ಭಾವ್ಯಾ ಯಶ್ಚ ವರ್ತತೇ ।
ಸರ್ವೇ ವಿಷ್ಣುವಶಾ ನಿತ್ಯಂ ವಿಮುಕ್ತೇರಪ್ಯನಂತರಮ್ ।

**ಅನುವಾದ**—ಪ್ರಾಣ, ಸೂತ್ರ, ಮಹತ್ತತ್ತ್ವಾಭಿಮಾನಿಯಾದ ಮಹಾನ್, ಬ್ರಹ್ಮಾ, ಚಿತ್ತಾಭಿಮಾನಿಯಾದ ಚಿತ್ತ, ವಾಯು ಬಲ ಧೃತಿ ಸ್ಥಿತಿ ಯೋಗ ವೈರಾಗ್ಯ ಜ್ಞಾನ ಪ್ರಜ್ಞಾ ಸ್ಮೃತಿ ಸುಖ ಮೇಧಾ ಮುಕ್ತಿ ವಿಷ್ಣುಭಕ್ತಿ ಆದಿಗೋಪ ಮಹಾ ಪ್ರಭು ಋಜು ಸುಮಾನ ವಿಜ್ಞಾತಾ ಮಹಾಧ್ಯಾತಾ ಮಹಾಗುರು ಹನೂಮಾನ್ ಭೀಮ ಆನಂದ ಮೊದಲಾದ ರೂಪಗಳುಳ್ಳ ಈಗಿರುವ, ಹಿಂದೆ ಇದ್ದ ಮತ್ತು ಮುಂದೆ ಬರುವ ಎಲ್ಲಾ ಬ್ರಹ್ಮರೂ ಸಮಾನರು. ಇವರೆಲ್ಲರೂ ಮುಕ್ತಿಗೆ ಮೊದಲೂ ಮತ್ತು ಮುಕ್ತಿಯ ನಂತರವೂ ವಿಷ್ಣುವಿಗೆ ವಶರಾಗಿರುತ್ತಾರೆ.

ಭಾಷ್ಯ—ಏತೇಭ್ಯಃ ಶ್ರೀಸ್ತು ಮುಕ್ತೇಭ್ಯೋ ಗುಣೈಃ ಕೋಟಿಗುಣೋತ್ತರಾ ।
ಜ್ಞಾನಾನಂದಬಲಾದಿಭ್ಯಃ ಸರ್ವೇಭ್ಯಃ ಸರ್ವದೈವ ತು ।
ಭಿನ್ನಾ ಭಿನ್ನಾಶ್ಚ ತೇ ಸರ್ವೇ ಬ್ರಹ್ಮಾಣಸ್ತು ಪರಸ್ಪರಮ್ ।
ಅಭಿಮಾನಃ ಪೃಥಕ್ ತೇಷಾಮಾನಂದಃ ಸಹ ಭುಜ್ಯತೇ ।
ತೇ ತು ಭಿನ್ನಾ ಹರೇರ್ನಿತ್ಯಂ ಶ್ರಿಯೋಽನ್ಯೇಭ್ಯಸ್ತಥೈವ ಚ ।
ಆವಿಷ್ಟೋ ವಿಷ್ಣುರೇತೇಷು ನ ವಿಷ್ಣುಸ್ತತ್ಸ್ವರೂಪಕಃ ।

**ವಿಷ್ಣೋರತಿಪ್ರಿಯತ್ವಾತ್ ತೇ ಹ್ಯರ್ಧ್ಯರ್ಧಾ ಇತಿ ಚೋದಿತಾಃ ।**
**ವಿಷ್ಣೋಃ ಕೇವಲಭೇದೇಽಪಿ ಶೇಷಾದಿಭ್ಯಃ ಪ್ರಿಯಾ ಯತಃ ।**
**ವಿಷ್ಣೋಃ ಪ್ರಿಯತ್ವೇ ತದ್ಭಕ್ತೌ ತಜ್ಜ್ಞಾನೇ ಚ ಶ್ರಿಯಸ್ತು ತೇ ।**
**ಮುಕ್ತಾ ಅಪ್ಯವರಾ ನಿತ್ಯಂ ಸರ್ವೇ ಕೋಟಿಗುಣೇನ ಚ ।**

**ಅನುವಾದ**—ಈ ಬ್ರಹ್ಮರು ಮುಕ್ತರಾದ ಮೇಲೆಯೂ ಲಕ್ಷ್ಮಿಯು ಜ್ಞಾನಾನಂದ ಬಲಗಳಲ್ಲಿ ಅವರಿಗಿಂತ ಕೋಟಿಗುಣಗಳಿಂದ ಅಧಿಕಳು. ಆದ್ದರಿಂದ ಅವರಿಗಿಂತ ಯಾವಾಗಲೂ ಉತ್ತಮಳು. ಈ ಬ್ರಹ್ಮರೆಲ್ಲರೂ ಪರಸ್ಪರವಾಗಿ ಭಿನ್ನಭಿನ್ನರು. ಅವರ ಅಭಿಮಾನಗಳು ಬೇರೆ ಬೇರೆ. ಆದರೆ ತಮ್ಮ ಸ್ವರೂಪಭೂತವಾದ ಆನಂದ ವನ್ನು ಎಲ್ಲಾ ಬ್ರಹ್ಮರೂ ಪರಮಾತ್ಮನ ಜೊತೆಯಲ್ಲಿಯೇ ಒಟ್ಟಿಗೆ ಅನುಭವಿಸುತ್ತಾರೆ. ಈ ಸಹಭೋಗದೃಷ್ಟಿಯಿಂದ ಬ್ರಹ್ಮರು ಪರಮಾತ್ಮನಿಂದಲೂ, ಪರಸ್ಪರವಾಗಿಯೂ ಅಭಿನ್ನರು ಎಂದು ಉಪಚರಿತವಾಗಿ ಹೇಳುವುದುಂಟು, ಮುಖ್ಯವಾಗಿ ಅಲ್ಲ. ಏಕೆಂದರೆ ಇವರೆಲ್ಲರೂ ವಿಷ್ಣುವಿಗಿಂತಲೂ, ಲಕ್ಷ್ಮಿಗಿಂತಲೂ, ಉಳಿದೆಲ್ಲರಿಗಿಂತಲೂ ಯಾವಾಗಲೂ ಭಿನ್ನರು. ಪರಮಾತ್ಮನು ಇವರಲ್ಲಿ ವಿಶೇಷವಾಗಿ ಆವಿಷ್ಟನಾಗಿದ್ದಾನೆ. ಆದ್ದರಿಂದ ಇವರ ರೂಪಗಳಿಗೆ ಪರಮಾತ್ಮನ ಅವತಾರಗಳೆಂದು ಹೇಳುವುದೂ ಉಂಟು. ವಿಷ್ಣುವು ಇವರಿಗಿಂತ ಭಿನ್ನ. ವಿಷ್ಣುವಿನಿಂದ ಇವರು ಭಿನ್ನರಾಗಿದ್ದರೂ ವಿಷ್ಣುವಿಗೆ ಶೇಷಾದಿ ದೇವತೆಗಳಿಗಿಂತ ಇವರು ಹೆಚ್ಚು ಪ್ರಿಯರಾದುದರಿಂದ 'ಅರ್ಧ್ಯರ್ಧ' ಎಂದು ಕರೆಯಲ್ಪಡುತ್ತಾರೆ. ಇವರು ಮುಕ್ತರಾದ ಮೇಲೂ ವಿಷ್ಣು ಪ್ರಿಯತ್ವ, ವಿಷ್ಣು ಭಕ್ತಿ, ವಿಷ್ಣು ಜ್ಞಾನ ಮೊದಲಾದ ಗುಣಗಳಲ್ಲಿ ಲಕ್ಷ್ಮಿಗಿಂತ ಕೋಟಿಪಾಲು ನ್ಯೂನರು.

**ಭಾಷ್ಯ—ಸರಸ್ವತೀ ಚ ಗಾಯತ್ರೀ ಶ್ರದ್ಧಾಽದ್ಯಾ ಪ್ರೀತಿರೇವ ಚ।**
**ಸರ್ವವೇದಾತ್ಮಿಕಾ ಬುದ್ಧಿರನುಭೂತಿಃ ಸುಖಾತ್ಮಿಕಾ ।**
**ಗುರುಭಕ್ತಿರ್ಹರೌ ಪ್ರೀತಿಃ ಸರ್ವಮಂತ್ರಾತ್ಮಿಕಾ ಭುಜಿಃ ।**
**ಶಿವಕನ್ಯೇಂದ್ರಸೇನಾ ಚ ದ್ರೌಪದೀ ಕಾಶಿಜಾ ತಥಾ ।**
**ಚಂದ್ರೇತ್ಯಾದಿಸ್ವರೂಪಾ ಯಾಸ್ತೇಭ್ಯಃ ಶತಗುಣಾವರಾಃ ।**
**ವಿಷ್ಣುಭಕ್ತೌ ಚ ತತ್ಪ್ರೀತೌ ಜ್ಞಾನಾನಂದಾದಿಕೇಷು ಚ ।**
**ಮುಕ್ತೇಃ ಪಶ್ಚಾದಪಿ ಗುಣೈಃ ಸರ್ವೈರ್ಬ್ರಹ್ಮಭ್ಯ ಈರಿತಾಃ ॥**

**ಅನುವಾದ**—ಸರಸ್ವತೀ ಗಾಯತ್ರೀ ಶ್ರದ್ಧಾ ಆದ್ಯಾ ಪ್ರೀತಿ ಸರ್ವವೇದಾ ಬುದ್ಧಿ ಅನುಭೂತಿ ಸುಖಿ ಗುರುಭಕ್ತಿ ಹರಿಪ್ರೀತಿ ಸರ್ವಮಂತ್ರಾ ಭುಜಿ ಶಿವಕನ್ಯಾ ಇಂದ್ರಸೇನಾ ದ್ರೌಪದೀ ಕಾಶಿಜಾ ಚಂದ್ರಾ ಮೊದಲಾದ ರೂಪಗಳುಳ್ಳ ಅತೀತ,ವರ್ತಮಾನ ಮತ್ತು ಅನಾಗತ ಸರಸ್ವತಿಯರು ವಿಷ್ಣು ಪ್ರಿಯತ್ವ, ವಿಷ್ಣುಭಕ್ತಿ,

ಜ್ಞಾನ ಆನಂದ ಮೊದಲಾದ ಗುಣಗಳಲ್ಲಿ ಬ್ರಹ್ಮರುಗಳಿಗಿಂತ ನೂರುಪಾಲು ಕಡಿಮೆ ಯುವರು. ಮುಕ್ತಿಯ ಅನಂತರದಲ್ಲಿಯೂ ಅವರು ಬ್ರಹ್ಮರುಗಳಿಗಿಂತ ಕಡಿಮೆಯುವ ರಾಗಿಯೇ ಇರುತ್ತಾರೆ.

**ವಿವರಣೆ**—ಸರ್ವವೇದಾ, ಗುರುಭಕ್ತಿ , ಪರಿಪ್ರೀತಿ, ಸರ್ವಮಂತ್ರಾ ಮೊದ ಲಾದವು ಸರ್ವವೇದ ಮೊದಲಾದವುಗಳಿಗೆ ಅಭಿಮಾನಿಯಾದ ರೂಪಗಳು. ವಾಯು ದೇವರೇ ಬ್ರಹ್ಮರಾಗುವಾಗ ಭಾರತಿಯೇ ಸರಸ್ವತಿಯಾಗುವುದರಿಂದ ಇಬ್ಬರಿಗೂ ಪರ ಸ್ಪರವಾದ ಎಲ್ಲ ಹೆಸರುಗಳೂ ಇರುತ್ತವೆ. ಹೀಗೆಯೇ ರುದ್ರ ಶೇಷ ಮೊದಲಾದವರ ವಿಷಯದಲ್ಲಿಯೂ ತಿಳಿಯಬೇಕು.

**ಭಾಷ್ಯ—ಶೇಷಃ ಸದಾಶಿವಶ್ಚೋರ್ಧ್ವಃ ತಪೋಽಹಂಕಾರ ಏವ ಚ ।**
**ನರೋಽಪಟೋ ಲಕ್ಷ್ಮಣಶ್ಚ ರೌಹಿಣೇಯಃ ಶುಕಸ್ತಥಾ ।**
**ಸದ್ಯೋಜಾತೋ ವಾಮದೇವಶ್ಚಾಘೋರಸ್ತತ್ಪುಮಾನಪಿ ।**
**ದುರ್ವಾಸಾ ದ್ರೌಣಿರೌರ್ವಶ್ಚ ಜೈಗೀಷವ್ಯಾದಿರೂಪಕಾಃ ।**
**ಪೂರ್ವೋಕ್ತೈಶ್ಚ ಗುಣೈಃ ಸರ್ವೈಸ್ತಾಭ್ಯಃ ಶತಗುಣಾವರಾಃ।**
**ಮುಕ್ತೇಃ ಪಶ್ಚಾದಪಿ ಸದಾ ಅತೀತಾನಾಗತಾಶ್ಚ ಯಾಃ ।**
**ಅತೀತಾನಾಗತಾ ಯೇ ಚ ಸರ್ವಶೋಽಪ್ಯವರಾಃ ಸದಾ ।**

**ಅನುವಾದ**—ಶೇಷ ಸದಾಶಿವ ಊರ್ಧ್ವ ತಪ ಅಹಂಕಾರ ನರ ಅಪಟ ಲಕ್ಷ್ಮಣ ಬಲರಾಮ ಶುಕ ಸದ್ಯೋಜಾತ ವಾಮದೇವ ಅಘೋರ ತತ್ಪುರುಷ ದುರ್ವಾಸ ಅಶ್ವತ್ಥಾಮ ಔರ್ವ ಜೈಗೀಷವ್ಯ ಮೊದಲಾದ ರೂಪಗಳುಳ್ಳ ಅತೀತ, ವರ್ತಮಾನ ಮತ್ತು ಅನಾಗತರಾದ ಶೇಷರು ಅತೀತ, ವರ್ತಮಾನ ಮತ್ತು ಅನಾಗತ ರಾದ ಎಲ್ಲ ಸರಸ್ವತಿಯರಿಗಿಂತ ವಿಷ್ಣುಭಕ್ತಿ ಮೊದಲಾದ ಗುಣಗಳಲ್ಲಿ, ಮುಕ್ತಿಗೆ ಮೊದಲೂ ಮತ್ತು ಅನಂತರವೂ ನೂರುಪಾಲು ಕಡಿಮೆಯುವರು.

**ಭಾಷ್ಯ—ಏವಂ ಸುಪರ್ಣಾಃ ಸರ್ವೇಽಪಿ ಸಮಾಃ ಶೇಷೈಃ ಸದೈವ ತು ।**
**ಸರ್ವೈರ್ಗುಣೈಸ್ತಥಾ ಮುಕ್ತಾ ತದ್ಭಾರ್ಯಾಸ್ತಚ್ಛತಾವರಾಃ ।**
**ತಾಭ್ಯಃ ಶತಾವರಾಸ್ತ್ವಿಂದ್ರಾಃ ಪುರಂದರ ಇತೀರಿತಾಃ ।**
**ತೇಭ್ಯಃ ಶತಾವರಾಸ್ತ್ವನ್ಯೇ ಇಂದ್ರಾಶ್ಚಾನ್ಯಾಶ್ಚ ದೇವತಾಃ ।**
**ದ್ವಿತ್ರಿಪಂಚಾದಿಗುಣತಃ ಪರಸ್ಪರವಿಶೇಷಿಣಃ ।**
**ಸನತ್ಕುಮಾರಾಸ್ತು ಸದಾ ಪುರಂದರಸಮಾ ಮತಾಃ ।**
**ಸನಕಾದ್ಯಾ ನಾರದಶ್ಚ ದಕ್ಷಭೃಗ್ವಾದಯೋಽಪಿ ಚ ।**
**ದೇವಾವರಾ ಯಥಾ ತದ್ವನ್ಮನವೋಽಪಿ ಪ್ರಕೀರ್ತಿತಾಃ ।**

ತ್ರಿಚತುರ್ಭಾಗಭೇದೇನ ತೇಽಪ್ಯನ್ಯೋನ್ಯವಿಶೇಷಿಣಃ ।
ವಾಲೀ ಗಾಧಿರ್ವಿಕುಕ್ಷಿಶ್ಚ ಪಾರ್ಥ ಇಂದ್ರಃ ಪುರಂದರಃ ।
ಸುದರ್ಶನಶ್ಚ ಭರತಃ ಪ್ರದ್ಯುಮ್ನಃ ಸ್ಕಂದ ಏವ ಚ ।
ಸನತ್ಕುಮಾರಃ ಕಾಮಶ್ಚೇತ್ಯೇಕ ಏವ ವ್ಯವಸ್ಥಿತಃ ।
ಸ್ವಾಯಂಭುವೋ ಮನುರ್ದಕ್ಷೋ ವಾಯುಃ ಸ್ವರ್ಗಾಧಿಪಸ್ತಥಾ ।
ಬೃಹಸ್ಪತಿಶ್ಚಾನಿರುದ್ಧ ಏತೇ ಸೂರ್ಯಾದಿತೋಽಧಿಕಾಃ ।
ಸೂರ್ಯಶ್ಚ ಚಂದ್ರಮಾಶ್ಚೈವ ಯಮಶ್ಚೈತೇ ತ್ರಯಃ ಸುರಾಃ ।
ಪ್ರೋಕ್ತೇಭ್ಯಸ್ತ್ವವರಾಶ್ಚಾನ್ಯದೇವೇಭ್ಯೋಽಪಿ ಸದಾಽಧಿಕಾಃ ।

**ಅನುವಾದ**—ಹೀಗೆಯೇ ಗರುಡರೆಲ್ಲರೂ ಸಂಸಾರದಲ್ಲಿಯೂ, ಮುಕ್ತಿಯಲ್ಲಿಯೂ ಶೇಷರಿಗೆ ಎಲ್ಲಾ ಗುಣದಿಂದಲೂ ಸಮರು. ಗರುಡ ಶೇಷ ರುದ್ರರ ಪತ್ನಿಯರಾದ ಸೌಪರ್ಣಿ ವಾರುಣಿ ಪಾರ್ವತಿಯರು ತಮ್ಮ ಪತಿಗಳಿಗಿಂತ ನೂರುಪಾಲು ಕಡಿಮೆಯವರು. ಈ ಪತ್ನಿಯರಿಗಿಂತ ಪುರಂದರನಾಮಕ ಇಂದ್ರರು ನೂರುಪಾಲು ಕಡಿಮೆಯವರು. ವಿಷ್ಣು, ವಾಯು, ಪುರಂದರರಿಗಿಂತ ಬೇರೆಯಾದ ಇಂದ್ರರು ಮತ್ತು ಪರ್ಜನ್ಯ ಮಿತ್ರಾದಿ ಬೇರೆ ದೇವತೆಗಳು ಪುರಂದರರಿಗಿಂತ ಬಹಳಪಾಲು ಕಡಿಮೆಯವರು. ಈ ಪರ್ಜನ್ಯ ಮಿತ್ರ ಮೊದಲಾದ ದೇವತೆಗಳಿಗೆ ಗುಣಗಳಲ್ಲಿ ಎರಡುಪಾಲು, ಮೂರುಪಾಲು, ಐದುಪಾಲು ಎಂದು ಮುಂತಾಗಿ ಬಹಳ ವ್ಯತ್ಯಾಸ ಇದೆ. ಸನತ್ಕುಮಾರರು ಯಾವಾಗಲೂ ಪುರಂದರರಿಗೆ ಸಮಾನರು. ಸನತ್ಕುಮಾರರನ್ನು ಬಿಟ್ಟು ಉಳಿದ ಸನಕಾದಿಗಳು ನಾರದ, ದಕ್ಷ, ಭೃಗು, ತಾಪಸಮನು ವ್ಯತಿರಿಕ್ತ ಮನುಗಳು ಇವರೆಲ್ಲರೂ ಪುರಂದರರಿಗಿಂತ ಕೆಳಗಿನವರು. ಇವರ ಗುಣಗಳಲ್ಲಿಯೂ ಮೂರುನಾಲ್ಕು ಪಾಲು ವ್ಯತ್ಯಾಸವಿದೆ. ವಾಲಿ ಗಾಧಿ ವಿಕುಕ್ಷಿ ಪಾರ್ಥ ಇಂದ್ರ ಪುರಂದರ ಇವೆಲ್ಲವೂ ಒಬ್ಬ ದೇವತೆಯ ಎಂದರೆ ಪುರಂದರನ ಹೆಸರು. ಹಾಗೆಯೇ ಸುದರ್ಶನ ಭರತ ಪ್ರದ್ಯುಮ್ನ ಸ್ಕಂದ ಸನತ್ಕುಮಾರ ಕಾಮ ಎಲ್ಲವೂ ಒಬ್ಬನೇ ದೇವತೆಯ ಎಂದರೆ ಮನ್ಮಥನ ಹೆಸರು. ಸ್ವಾಯಂಭುವಮನು ದಕ್ಷ ಸ್ವರ್ಗಾಧಿಪತಿವಾಯು, ಬೃಹಸ್ಪತಿ ಅನಿರುದ್ಧ ಇವರು ಸೂರ್ಯ ಚಂದ್ರ ಯಮರಿಗಿಂತ ಉತ್ತಮರು. ಸೂರ್ಯ ಚಂದ್ರ ಯಮರು ಈ ದೇವತೆಗಳಿಗಿಂತ ಕಡಿಮೆಯವರಾದರೂ ಉಳಿದ ದೇವತೆಗಳಿಗಿಂತ ಸದಾ ಉತ್ತಮರು, ಪರಸ್ಪರವಾಗಿ ಸಮಾನರು.

**ಭಾಷ್ಯ**—ಕಾರ್ತವೀರ್ಯಃ ಪೃಥುಶ್ಚೈವ ದೌಷ್ಯಂತಿರ್ಭರತಸ್ತಥಾ ।
ಶಶಬಿಂದುಶ್ಚ ಮಾಂಧಾತಾ ಕಕುತ್ಸ್ಥಾದ್ಯಾಸ್ತಥಾಽಪರೇ ।
ಸರ್ವೇ ತೇ ವಿಷ್ಣುನಾಽಽವಿಷ್ಟಾ ವಿಷ್ಣೋರ್ಭಿನ್ನಾಃ ಸದೈವ ತು ।
ಶತಾವರಾಶ್ಚ ದೇವೇಭ್ಯಃ ಕರ್ಮದೇವಾ ಇತಿ ಸ್ಮೃತಾಃ ।

ತುಂಬರುಪ್ರಮುಖಾ ಯೇ ಚ ತಥೋರ್ವಶ್ಯಾದಿಕಾ ಅಪಿ ।
ವಿಶ್ವಾಮಿತ್ರಬ್ರಹ್ಮಪುತ್ರಾನ್ಯತೇ ಚಾಪ್ಯೃಷಯೋಽಖಿಲಾಃ ।
ಸೂರ್ಯಾದಿಭ್ಯೋಽಥಮಾಶ್ಚೈವ ಮನ್ವಾದಿಭ್ಯಸ್ತಥೈವ ಚ ।
ವೈವಸ್ವತೋ ಮನುರ್ನಿತ್ಯಂ ವಿಷ್ಣ್ವಾವೇಶೀ ತತೋಽಧಿಕಃ ।
ಕಾರ್ತವೀರ್ಯಾದಿರಾಜಭ್ಯೋ ದೇವಭೃತ್ಯಾಃ ಶತಾವರಾಃ ।

**ಅನುವಾದ**—ಕಾರ್ತವೀರ್ಯ ಪೃಥು ದುಷ್ಯಂತನ ಮಗನಾದ ಭರತ ಶಶಬಿಂದು ಮಾಂಧಾತೃ ಕಕುತ್ಸ್ಥ ಮೊದಲಾದವರೆಲ್ಲರೂ ವಿಷ್ಣುವಿಗಿಂತ ಸದಾ ಭಿನ್ನರು ಮತ್ತು ವಿಷ್ಣುವಿನ ವಿಶೇಷಾವೇಶದಿಂದ ವಿಷ್ಣ್ವವತಾರರೆನಿಸಿದವರು. ಅಗ್ನಿ ಮೊದಲಾದ ದೇವತೆಗಳಿಗಿಂತ ನೂರುಪಾಲು ಕಡಿಮೆಯವರು. ಇವರಿಗೆ ಕರ್ಮದೇವತೆಗಳೆಂದು ಹೆಸರು. ತುಂಬುರು ಮೊದಲಾದ ಗಂಧರ್ವರು, ಊರ್ವಶಿ ಮೊದಲಾದ ಅಪ್ಸರೆಯರು, ವಿಶ್ವಾಮಿತ್ರರನ್ನೂ, ಬ್ರಹ್ಮನ ಮಕ್ಕಳಾದ ಮರೀಚ್ಯಾದಿಗಳನ್ನೂ ಬಿಟ್ಟು ಉಳಿದ ಎಲ್ಲಾ ಋಷಿಗಳು ಮತ್ತು ದೇವಭೃತ್ಯರು ಸೂರ್ಯಾದಿಗಳಿಗಿಂತಲೂ, ಮನ್ವಾದಿಗಳಿಗಿಂತಲೂ, ಕಾರ್ತವೀರ್ಯಾದಿ ರಾಜರುಗಳಿಗಿಂತಲೂ ನೂರುಪಾಲು ಕಡಿಮೆಯವರು. ತಾಪಸಮನು ವಿಷ್ಣುವೇ. ಸ್ವಾಯಂಭುವ ಮನು ಸೂರ್ಯನಿಗಿಂತ ಉತ್ತಮ. ಉಳಿದ ಮನುಗಳಲ್ಲಿ ವೈವಸ್ವತಮನುವು ವಿಷ್ಣುವಿನ ವಿಶೇಷಾವೇಶ ಪ್ರಯುಕ್ತ ಉತ್ತಮ.

**ಭಾಷ್ಯ**—ಆಜಾನದೇವಾಸ್ತೇ ಪ್ರೋಕ್ತಾಃ ತೇಭ್ಯಸ್ತು ಪಿತರಶ್ಚಿರಾಃ ।
ಪಿತೃಣಾಂ ಸಪ್ತಕಂ ಯತ್ತತ್ ಕರ್ಮದೇವಸಮಂ ಮತಮ್ ।
ವಿಶ್ವಾಮಿತ್ರೋ ಬ್ರಹ್ಮಪುತ್ರೈಃ ಸಮೋ ಮುನಿರುದಾಹೃತಃ ।
ಆಚಾರ್ಯಃ ಪಿತೃಣಾಂ ಚಾಸೌ ಪಿತೃಭಿಃ ಸಹ ಪಠ್ಯತೇ ।
ಆಜಾನೇಭ್ಯಶ್ಚ ಪಿತರೋ ಹ್ಯಷ್ಟಭ್ಯೋಽನ್ಯೇ ಶತಾವರಾಃ ।
ಕರ್ಮದೇವಗಣಾ ಅಷ್ಟಗಂಧರ್ವಾಸ್ತತ್ಪರೇ ಶತಮ್ ।
ಆಜಾನದೇವಾಸ್ತೇಭ್ಯೋಽನ್ಯೇ ಪಿತೃಭ್ಯಶ್ಚ ಶತಾವರಾಃ ।

**ಅನುವಾದ**—ದೇವಕುಲದಲ್ಲಿ ಜನಿಸಿದ್ದು ನಾಮಪ್ರಸಿದ್ಧಿ ಇಲ್ಲದಿರುವ ದೇವಭೃತ್ಯರು ಆಜಾನ ದೇವತೆಗಳು. ಅವರಿಗಿಂತ ಚಿರಪಿತೃಗಳು ನೂರುಪಾಲು ಕಡಿಮೆಯವರು. ಆದರೆ ಚಿರಪಿತೃಗಳಲ್ಲಿಯೂ ಏಳು ಜನರು ಕಾರ್ತವೀರ್ಯಾದಿ ಕರ್ಮದೇವತೆಗಳಿಗೆ ಸಮರು. ವಿಶ್ವಾಮಿತ್ರರು ಬ್ರಹ್ಮಪುತ್ರರಾದ ಮರೀಚಿ ಮೊದಲಾದವರಿಗೆ ಸಮಾನರಾದ ಋಷಿಗಳು, ಇವರು ಚಿರಪಿತೃಗಳಿಗೆ ಆಚಾರ್ಯರಾದ ಪ್ರಯುಕ್ತ ಚಿರಪಿತೃಗಳೊಂದಿಗೆ ಇವರ ಹೆಸರೂ ಬರುತ್ತದೆ. ಆದ್ದರಿಂದ ಚಿರಪಿತೃಗಳು ಏಳು ಜನ ಮತ್ತು ವಿಶ್ವಾಮಿತ್ರರು ಈ ಎಂಟು ಜನರನ್ನು ಬಿಟ್ಟು ಉಳಿದ ಪಿತೃಗಳು ಆಜಾನ ದೇವತೆಗಳಿಗಿಂತ ನೂರುಪಾಲು ಕಡಿಮೆಯವರು. ಗಂಧರ್ವರಲ್ಲಿ ಎಂಟು ಮಂದಿ ಕರ್ಮ

ದೇವಗಣ ಸಮಾನರು. ಅವರನ್ನು ಬಿಟ್ಟು ನೂರು ಮಂದಿ ಆಜಾನದೇವತೆಗಳಲ್ಲಿ ಸೇರುತ್ತಾರೆ. ಇವರಿಬ್ಬರನ್ನೂ ಬಿಟ್ಟು ಉಳಿದ ಗಂಧರ್ವರು ಪಿತೃಗಳಿಗಿಂತ ನೂರು ಪಾಲು ಕಡಿಮೆಯವರು.

**ಭಾಷ್ಯ—ಸ್ವಮುಖೇನೈವ ದೇವೈರ್ಯೆ ಆಜ್ಞಾಪ್ಯಾಃ ಸರ್ವದಾ ಗಣಾಃ ।**
**ಅಖ್ಯಾತಾ ದೇವಗಂಧರ್ವಾ ಯೇ ತ್ವನ್ಯಮುಖಗೋಚರಾಃ ।**
**ಮಾನುಷಾಸ್ತೇ ತು ಗಂಧರ್ವಾಸ್ತೇಭ್ಯಸ್ತೇ ಚ ಶತಾವರಾಃ ।**
**ತೇಭ್ಯಃ ಶತಾವರಾಶ್ಚೈವ ಮನುಷ್ಯೇಷೂತ್ತಮಾ ಗಣಾಃ ।**
**ದೇವಾದಿಷ್ವೇಷು ಸರ್ವೇಷು ಪ್ರೋಕ್ತಾ ಅಪಿ ವಿಶೇಷಿಣಃ ।**
**ಪಂಚಾಂಶತೋ ದಶಾಂಶಾದ್ ವಾ ಸ್ವಸ್ವಜಾತ್ಯಾಂ ಪರಸ್ಪರಮ್ ।**
**ದೇವಸ್ತ್ರಿಯೋ ದಶಾಂಶೋನಾಃ ಸ್ವಪತಿಭ್ಯಸ್ತಥಾ ಪರಾಃ ।**
**ಅಷ್ಟಾಂಶೋನಾಃ ಪ್ರವಿಜ್ಞೇಯಾ ಯಾಸಾಂ ಮುಕ್ತೌ ಸಹ ಸ್ಥಿತಿಃ ।**

**ಅನುವಾದ**—ಯಾರಿಗೆ ದೇವತೆಗಳು ತಮ್ಮ ಮುಖದಿಂದಲೇ ನೇರವಾಗಿ ಆಜ್ಞೆಯನ್ನು ಕೊಡುತ್ತಾರೆಯೋ ಅವರು ದೇವಗಂಧರ್ವರು. ಇವರು ಪಿತೃಗಳಿಗಿಂತ ನೂರು ಪಾಲು ಕಡಿಮೆಯವರು. ಯಾರಿಗೆ ದೇವತೆಗಳು ಇನ್ನೊಬ್ಬರ ಮೂಲಕ ತಮ್ಮ ಆಜ್ಞೆಯನ್ನು ಕೊಡುತ್ತಾರೆಯೋ ಅವರು ಮನುಷ್ಯಗಂಧರ್ವರು. ದೇವಗಂಧರ್ವರಿಗಿಂತ ಮನುಷ್ಯಗಂಧರ್ವರು ನೂರುಪಾಲು ಕಡಿಮೆಯವರು. ಮನುಷ್ಯೋತ್ತಮರು ಮನುಷ್ಯಗಂಧರ್ವರಿಗಿಂತ ನೂರುಪಾಲು ಕಡಿಮೆಯವರು. ಸಮರೆಂದು ಹೇಳಲ್ಪಟ್ಟ ದೇವತೆಗಳ ಗಣದಲ್ಲಿ ಐದು ಅಥವಾ ಹತ್ತುಪಾಲು ಪರಸ್ಪರ ವ್ಯತ್ಯಾಸವಿರುತ್ತದೆ. ಮುಕ್ತಿಯಲ್ಲಿ ಜೊತೆಯಲ್ಲಿರುವ ದೇವಸ್ತ್ರೀಯರು ತಮ್ಮ ಪತಿಗಳಿಗಿಂತ ಹತ್ತುಗುಣ ಕಡಿಮೆಯವರಾಗಿಯೂ, ಗಂಧರ್ವ ಸ್ತ್ರೀಯರು ತಮ್ಮ ಪತಿಗಳಿಗಿಂತ ಎಂಟು ಗುಣ ಕಡಿಮೆಯವರಾಗಿಯೂ ಇರುತ್ತಾರೆ.

**ವಿವರಣೆ**—ಎಲ್ಲಿ ದೇವತೆಗಳಿಗೂ ಅವರ ಪತ್ನಿಯರುಗಳಿಗೂ ಸ್ಪಷ್ಟವಾಗಿ ನೂರುಪಾಲು ವ್ಯತ್ಯಾಸವನ್ನು ಹೇಳಿಲ್ಲವೋ ಅಂತಹ ಕಡೆ ಹತ್ತುಪಾಲು ವ್ಯತ್ಯಾಸವನ್ನು ಹೇಳಬೇಕು. ದೇವತೆಗಳು ಅವತಾರ ಮಾಡಿದಾಗ ತಮ್ಮ ನಿಯತ ಪತ್ನಿಯನ್ನು ಬಿಟ್ಟು ಬೇರೆ ಸ್ತ್ರೀಯನ್ನು ಪತ್ನಿಯಾಗಿ ಪಡೆದರೆ ಆ ಪತ್ನಿಯರು ಅತ್ಯಂತ ನಿಕೃಷ್ಟರೂ ಆಗಿರಬಹುದು.

**ಭಾಷ್ಯ—ಅನಾದಿಶ್ಚ ವಿಶೇಷೋಽಯಂ ಸರ್ವೇಷಾಂ ಮಾನುಷಾದಿನಾಮ್ ।**
**ಇಯಂ ನೀಚೋಚ್ಚತಾ ಕ್ವಾಪಿ ನ ಕೇನಾಪಿ ಹ್ಯಪೋದಿತುಮ್ ।**
**ಶಕ್ಯತೇ ಯೋಽನ್ಯಥಾ ಕರ್ತುಮಿಚ್ಛೇತ್ ಸೋಽಪಿ ತಮೋ ವ್ರಜೇತ್ ।**

**ಯೋಽಪಿ ವೇದ ಸಮತ್ವೇನ ಸರ್ವಾನ್ ನೀಚೋಚ್ಚತಃ ಸ್ಥಿತಾನ್ ।**
**ಸೋಽಪಿ ಯಾತಿ ತಮೋ ಘೋರಂ ಯಶ್ಚ ಸಾಮ್ಯಮುದೀರಯೇತ್।**

**ಅನುವಾದ**—ಈ ಮನುಷ್ಯಾದಿಗಳೆಲ್ಲರ ತಾರತಮ್ಯ ವ್ಯವಸ್ಥೆಯೂ ಅನಾದಿಯಾದುದು, ತಾತ್ಕಾಲಿಕವಲ್ಲ. ಇದನ್ನು ಎಲ್ಲಿಯೂ ಯಾರೂ ನಾಶ ಮಾಡಲು ಸಾಧ್ಯವಿಲ್ಲ. ಇದನ್ನು ಬದಲಾಯಿಸಲು ಇಚ್ಛಿಸುವವನೂ ತಮಸ್ಸಿಗೆ ಹೋಗುತ್ತಾನೆ. ಈ ತಾರತಮ್ಯವನ್ನು ಹೊಂದಿರುವ ಎಲ್ಲರನ್ನೂ ಯಾರು ಸಮಾನರೆಂದು ತಿಳಿಯುತ್ತಾನೆಯೋ ಮತ್ತು ಯಾರು ಸಮಾನರೆಂದು ಹೇಳುತ್ತಾನೆಯೋ ಅವರಿಬ್ಬರೂ ಘೋರವಾದ ತಮಸ್ಸಿಗೆ ಹೋಗುತ್ತಾರೆ.

**ಭಾಷ್ಯ—ಮಾನುಷೋತ್ತಮಮಾರಭ್ಯ ಬ್ರಹ್ಮಾಂತಾನಾಂ ಪ್ರಯತ್ನತಃ ।**
**ವಿಷ್ಣೋರ್ಭಕ್ತಿಜ್ಞಾನಪೂರ್ವಂ ಭವೇನ್ಮುಕ್ತಿಃ ಪ್ರಸಾದತಃ ।**
**ಭಕ್ತಿಜ್ಞಾನಾದಯಃ ಸರ್ವೇ ಸರ್ವೇಷಾಮಪ್ಯನಾದಯಃ ।**
**ಅನಾದಿಕಾಲಾದಾರಭ್ಯ ವೃದ್ಧಾನಾಮುತ್ತರೋತ್ತರವತ್ ।**
**ತತ್ತದ್ಯೋಗ್ಯತಯಾ ಪೂರ್ತೌ ವಿಷ್ಣೋರ್ದೃಷ್ಟಿಃ ಪ್ರಜಾಯತೇ ।**
**ಯಥೋದಂಚನಕುಂಭಾದೇಃ ಸರಿತ್ಸಾಗರಯೋರಪಿ ।**
**ಅಲ್ಪೇನ ಮಹತಾ ವಾಪಿ ಪೂರ್ತಿರ್ಯೋಗ್ಯತಯಾ ಭವೇತ್ ।**
**ಏವಂ ನರಾದಿಬ್ರಹ್ಮಾಂತಜೀವಾನಾಂ ಸಾಧನೈರಪಿ ।**
**ಅನಾದಿಸಿದ್ಧೈರ್ಭಕ್ತ್ಯಾದ್ಯೈಃ ಪೂರ್ತಿರ್ಯೋಗ್ಯತಯಾ ಭವೇತ್ ।**
**ಅಲ್ಪೈಃ ಪೂರ್ತಿಸ್ತಥಾಽಲ್ಪಾನಾಂ ಮಹದ್ಭಿರ್ಮಹತಾಮಪಿ ।**
**ಭಕ್ತ್ಯಾದ್ಯೈರ್ಜಾಯತೇ ತೇಷಾಂ ಸಾಧನೈರ್ನಾನ್ಯಥಾ ಕ್ವಚಿತ್ ।**

**ಅನುವಾದ**—ಮನುಷ್ಯೋತ್ತಮರಿಂದ ಆರಂಭಿಸಿ ಬ್ರಹ್ಮಪರ್ಯಂತ ಚೇತನರು ವಿಷ್ಣುವಿನಲ್ಲಿ ಭಕ್ತಿಜ್ಞಾನಾದಿಪೂರ್ವಕವಾಗಿ ನಿಷ್ಕಾಮಕರ್ಮ ಶ್ರವಣಾದಿಗಳನ್ನು ಮಾಡಿದರೆ ಇನ್ನೂ ಹೆಚ್ಚು ಭಕ್ತಿಜ್ಞಾನಾದಿಗಳು ಉಂಟಾಗಿ ವಿಷ್ಣುವಿನ ಅನುಗ್ರಹದಿಂದ ಮುಕ್ತಿಯಾಗುತ್ತದೆ. ಎಲ್ಲಾ ಸಜ್ಜೀವರಿಗೂ ಸೂಕ್ಷ್ಮರೂಪದಲ್ಲಿ ಭಕ್ತಿಜ್ಞಾನಾದಿಗಳು ಅನಾದಿ. ಶ್ರವಣಾದಿ ಪ್ರಯತ್ನದಿಂದ ಕ್ರಮೇಣ ಅದು ವೃದ್ಧಿಯಾಗಿ ತಮ್ಮ ತಮ್ಮ ಯೋಗ್ಯತೆಗನುಗುಣವಾಗಿ ಪೂರ್ತಿಯಾದಾಗ ವಿಷ್ಣುವಿನ ದರ್ಶನ ಉಂಟಾಗುತ್ತದೆ. ತಂಬಿಗೆ ಕೊಡ ಮೊದಲಾದವುಗಳು ನದಿಯಲ್ಲಿಯೇ ಆಗಲಿ, ಸಮುದ್ರದಲ್ಲಿಯೇ ಆಗಲಿ ತಮ್ಮ ತಮ್ಮ ಯೋಗ್ಯತೆಗನುಗುಣವಾಗಿ ಅಲ್ಪವಾದ ಅಥವಾ ಅಧಿಕವಾದ ನೀರಿನಿಂದ ತುಂಬಿಕೊಳ್ಳುವಂತೆ ಮನುಷ್ಯರಿಂದ ತೊಡಗಿ ಚತುರ್ಮುಖನವರೆಗಿನ ಜೀವರಲ್ಲಿ ಅನಾದಿ ಸಿದ್ಧವಾದ ಭಕ್ತ್ಯಾದಿ ಸಾಧನಗಳೂ ಆನಂದಾದಿಫಲಗಳೂ

ಅಭಿವೃದ್ಧಿ ಹೊಂದಿ ಅಲ್ಪರಿಗೆ ಅಲ್ಪವಾದ ಸಾಧನ ಫಲಗಳಿಂದಲೂ, ಮಹಾತ್ಮರಿಗೆ ಬಹಳ ಸಾಧನ ಫಲಗಳಿಂದಲೂ ಪ್ರೀತಿ ಉಂಟಾಗುತ್ತದೆ.

**ಮೋಕ್ಷಸಾಧನಗಳು :**

**ಭಾಷ್ಯ—ಶ್ರವಣಂ ಮನನಂ ಚೈವ ಧ್ಯಾನಂ ಭಕ್ತಿಸ್ತಥಾ ದೃಶಿಃ ।**
**ಜ್ಞಾನಂ ಚೋಕ್ತವಿಶೇಷಾಣಾಂ ಸರ್ವೇಷಾಂ ಸಾಧನಂ ಭವೇತ್ ।**
**ತ್ಯಕ್ತ್ವೈತಾನಿ ನ ಕಸ್ಯಾಪಿ ಭವೇನ್ಮೋಕ್ಷಃ ಕದಾಚನ ।**
**ಸರ್ವೋತ್ತಮತಯಾ ಜ್ಞಾನಪೂರ್ವಕಃ ಸ್ನೇಹ ಏವ ತು ।**
**ಭಕ್ತಿರ್ವಿಷ್ಣೌ ಸಮುದ್ದಿಷ್ಟಾ ತದನ್ಯೇಷಾಂ ತು ಯೋಗ್ಯತಃ ।**
**ವಿಷ್ಣುಭಕ್ತಿರ್ದೇವಭಕ್ತಿರ್ಗುರೌ ಭಕ್ತಿಸ್ತಥೈವ ಚ ।**
**ತತ್ತತ್ಶ್ರೈಷ್ಠ್ಯಾನುಸಾರೇಣ ಮುಕ್ತೌ ನಿಯತಸಾಧನಮ್ ।**
**ಭಕ್ತಿಪೂರ್ತೌ ಭವೇನ್ಮುಕ್ತಿಃ ತದಭಾವೇ ಚ ನೋ ಭವೇತ್ ।**
**ಭಕ್ತಿಜ್ಞಾನಂ ತಥಾ ಧ್ಯಾನಂ ಮುಕ್ತಾನಾಮಪಿ ಸರ್ವಶಃ ।**
**ನಿಯಮೇನ ನ ಹೀಯಂತೇ ಮುಕ್ತಾನಾಂ ತೇ ಸ್ವರೂಪಕಾಃ ।**
**ಸಾಧನಾನಿ ತು ಸರ್ವಾಣಿ ಭಕ್ತಿಜ್ಞಾನಪ್ರವೃದ್ಧಯೇ ।**
**ನೈವಾನ್ಯಸಾಧನಂ ಭಕ್ತಿಃ ಫಲರೂಪಾ ಹಿ ಸಾ ಯತಃ ।**

**ಅನುವಾದ**—ಶ್ರವಣ ಮನನ ತಾರತಮ್ಯದಿಂದಿರುವ ಆನಂದಾದಿಗಳ ಯಥಾರ್ಥವಾದ ಜ್ಞಾನ, ಧ್ಯಾನ, ಭಕ್ತಿ, ಅಪರೋಕ್ಷಜ್ಞಾನ ಇವು ದೇವಾದಿಗಳೆಲ್ಲರಿಗೂ ಮೋಕ್ಷಸಾಧನಗಳು. ಇವುಗಳನ್ನು ಬಿಟ್ಟು ಯಾರಿಗೂ ಎಂದೂ ಮೋಕ್ಷವಾಗುವುದಿಲ್ಲ. ವಿಷ್ಣುವನ್ನು ಸರ್ವೋತ್ತಮನೆಂದು ತಿಳಿದು ಸ್ನೇಹ ಮಾಡುವುದೇ ವಿಷ್ಣುಭಕ್ತಿ. ಉಳಿದ ಲಕ್ಷ್ಮೀ ಮೊದಲಾದವರನ್ನು ಅವರವರ ಯೋಗ್ಯತೆಗೆ ಅನುಗುಣವಾಗಿ ಉತ್ತಮರೆಂದು ತಿಳಿದು ಮಾಡುವ ಸ್ನೇಹ ದೇವಭಕ್ತಿ. ಹಾಗೆಯೇ ಗುರುಭಕ್ತಿಯೂ ಕೂಡ. ಇವು ಮೂರು ಮೋಕ್ಷಕ್ಕೆ ನಿಯತಸಾಧನಗಳು. ಭಕ್ತಿಯು ಪೂರ್ಣವಾದರೆ ಮುಕ್ತಿಯಾಗುತ್ತದೆ, ಇಲ್ಲದಿದ್ದರೆ ಇಲ್ಲ. ಮುಕ್ತರಿಗೂ ಕೂಡ ಭಕ್ತಿಜ್ಞಾನಧ್ಯಾನಗಳಿಗೆ ಎಂದೂ ಚ್ಯುತಿ ಇರುವುದಿಲ್ಲ.ಅವು ಮುಕ್ತ ಜೀವರ ಸ್ವರೂಪವಾಗಿರುತ್ತವೆ.ಶ್ರವಣಾದಿ ಸಾಧನಗಳೂ ಭಕ್ತಿಜ್ಞಾನವೃದ್ಧಿಗಾಗಿ ಇರುತ್ತವೆ. ಆದರೆ ಭಕ್ತಿಯು ಇನ್ನೊಂದಕ್ಕೆ ಸಾಧನವಲ್ಲ. ಏಕೆಂದರೆ ಅದು ಫಲರೂಪವಾಗಿರುತ್ತವೆ.

**ಭಾಷ್ಯ—ಸ್ವಾತ್ಮೋತ್ತಮೇಷು ವಿದ್ವೇಷಾತ್ ತಮೋ ನಿಯಮತೋ ವ್ರಜೇತ್ ।**
**ಗುಣಾನಾಮಲ್ಪತಾಜ್ಞಾನಂ ತತ್ಸ್ತ್ರೀರಾಗಃ ತಥೈವ ಚ ।**
**ತತ್ಪ್ರತೀಪೇ ಚ ಯಾ ಬುದ್ಧಿಃ ತ್ರಿವಿಧೋ ದ್ವೇಷ ಉಚ್ಯತೇ ।**

ದ್ವೇಷೋಜ್ಝಿತಾ ಚ ಯಾ ಭಕ್ತಿಃ ಸಾ ಮೋಕ್ಷಂ ನಿಯಮಾನ್ನಯೇತ್।
ನಿರ್ದುಃಖಂ ತು ಸುಖಂ ನಿತ್ಯಂ ಮೋಕ್ಷ ಇತ್ಯಭಿಧೀಯತೇ ।
ಚಿದಾನಂದಶಿರೋದೇಹಪಾಣಿಪಾದಾತ್ಮಕಾಃ ಸದಾ ।
ಸರ್ವದೋಷವಿನಿರ್ಮುಕ್ತಾ ಮುಕ್ತಾಃ ಕ್ರೀಡಂತಿ ನಿತ್ಯಶಃ ।
ಅನಾದಿಕಾಲಾದಾರಭ್ಯ ಯಾ ಭಾರ್ಯಾಸ್ತಾಃ ಸದೈವ ತು ।
ಬ್ರಹ್ಮಾದೀನಾಂ ವಿಮುಕ್ತೌ ಚ ಭಾರ್ಯಾಃ ಸ್ಯುರ್ನಿಯಮಾತ್ ಸದಾ ।
ನ ಕದಾಚಿತ್ ವಿಮುಕ್ತಾನಾಂ ಭಾರ್ಯಾಃ ಕಾಶ್ಚಿತ್ ಸ್ಯುರನ್ಯಗಾಃ ।
ನ ಕದಾಚಿದ್ ವಿಯೋಗಶ್ಚ ನ ವಿದ್ವೇಷೋ ನ ಚಾರತಿಃ ।
ಮೋದಂತೇ ಸಹಿತಾಃ ಸರ್ವೇ ಸದಾ ವಿಷ್ಣುಪರಾಯಣಾಃ ।
ಇತ್ಯಾದಿ ಪೈಂಗಿಶ್ರುತಿಃ ।

**ಅನುವಾದ**—ತಮಗಿಂತ ಉತ್ತಮರಲ್ಲಿ ಮಾಡುವ ದ್ವೇಷದಿಂದ ನಿಶ್ಚಯವಾಗಿ ತಮಸ್ಸಾಗುತ್ತದ. ಉತ್ತಮರ ಗುಣಗಳಲ್ಲಿ ಅಲ್ಪತಾಜ್ಞಾನ, ಅವರ ಪತ್ನಿಯಲ್ಲಿ ಆಸೆ ಪಡುವುದು ಮತ್ತು ಅವರಿಗೆ ವಿರೋಧ ಮಾಡುವ ಬುದ್ಧಿ ಇವು ದ್ವೇಷದ ಮೂರು ರೀತಿಗಳು. ಇಂತಹ ದ್ವೇಷದಿಂದ ರಹಿತವಾದ ಭಕ್ತಿಯು ನಿಶ್ಚಯವಾಗಿ ಮೋಕ್ಷವನ್ನು ದೊರಕಿಸಿ ಕೊಡುತ್ತದೆ. ದುಃಖಮಿಶ್ರವಲ್ಲದ ನಿತ್ಯವಾದ ಸುಖಕ್ಕೆ ಮೋಕ್ಷವೆಂದು ಹೆಸರು. ಮುಕ್ತರು ಸ್ವರೂಪಭೂತಜ್ಞಾನಾನಂದಮಯ ಶಿರಸ್ಸು ಮೈ ಕೈ ಕಾಲು ಮುಂತಾದವುಗಳುಳ್ಳವರಾಗಿ ಎಲ್ಲ ದೋಷಗಳಿಂದಲೂ ಮುಕ್ತರಾಗಿ ಯಾವಾಗಲೂ ಕ್ರೀಡೆಯಾಡುತ್ತ ಸಂತೋಷಪಡುತ್ತಾರೆ. ಬ್ರಹ್ಮಾದಿದೇವತೆಗಳಿಗೆ ಅನಾದಿಕಾಲದಿಂದಲೂ ಯಾರು ಪತ್ನಿಯರೋ ಅವರೇ ಮುಕ್ತಿಯಲ್ಲಿಯೂ ಸದಾ ಪತ್ನಿಯರು. ಮುಕ್ತಜೀವರ ಪತ್ನಿಯರು ಯಾವ ಕಾಲದಲ್ಲಿಯೂ ಪರಪುರುಷನ ಸಂಬಂಧವನ್ನು ಹೊಂದುವುದಿಲ್ಲ. ಮುಕ್ತದಂಪತಿಗಳಿಗೆ ಎಂದೂ ವಿಯೋಗವಾಗುವುದಿಲ್ಲ. ಪರಸ್ಪರ ದ್ವೇಷ ಉಂಟಾಗುವುದಿಲ್ಲ ಮತ್ತು ಸಂಭೋಗಕ್ಕೆ ಚ್ಯುತಿಬರುವುದಿಲ್ಲ. ಎಲ್ಲರೂ ವಿಷ್ಣುಭಕ್ತರಾಗಿ ಉಳಿದ ಮುಕ್ತರಿಂದೊಡಗೂಡಿ ಸುಖವನ್ನೇ ಅನುಭವಿಸುತ್ತಾರೆ ಎಂದು ಮೊದಲಾಗಿ ಪೈಂಗಿಶ್ರುತಿ ಇದೆ.

**'ಏಕಮೇವಾದ್ವಿತೀಯಂ' ಮುಂತಾದುದು ಅಭೇದ ಪರವಲ್ಲ :**

**ಭಾಷ್ಯ—'ಏಕಮೇವಾದ್ವಿತೀಯಂ' 'ನೇಹನಾನಾಽಸ್ತಿ ಕಿಂಚನ । ಮೃತ್ಯೋಃ ಸ ಮೃತ್ಯುಮಾಪ್ನೋತಿ ಯ ಇಹ ನಾನೇವ ಪಶ್ಯತಿ । ಏಕಧೈವಾನು-ದ್ರಷ್ಟವ್ಯಮೇತದಪ್ರಮಯಂ ಧ್ರುವಮ್' 'ಮೃತ್ಯೋಃ ಸ ಮೃತ್ಯುಂ ಗಚ್ಛತಿ ಯ ಇಹ ನಾನೇವ ಪಶ್ಯತಿ' 'ಏಕಧೈವಾನುದ್ರಷ್ಟವ್ಯಂ ನೇಹ ನಾನಾಽಸ್ತಿ ಕಿಂಚನ ।ಮೃತ್ಯೋಃ ಸ ಮೃತ್ಯುಂ ಗಚ್ಛತಿ ಯ ಇಹ ನಾನೇವ**

**ಪಶ್ಯತಿ । ಯಥೋದಕಂ ದುರ್ಗೇ ವೃಷ್ಟಂ ಪರ್ವತೇಷು ವಿಧಾವತಿ। ಏವಂ ಧರ್ಮಾನ್ ಪೃಥಕ್ ಪಶ್ಯಂಸ್ತಾನೇವಾನುವಿಧಾವತಿ' ಇತ್ಯಾದಿ ಚ।**

**ಅನುವಾದ**—'ಏಕಮೇವಾದ್ವಿತೀಯಂ' ಎಂಬ ಛಾಂದೋಗ್ಯೋಪನಿಷತ್ತಿನ ವಾಕ್ಯವಾಗಲೀ, 'ನೇಹ ನಾನಾಽಸ್ತಿ...ಧ್ರುವಮ್' ಎನ್ನುವ ಇದೇ ಬೃಹದಾರಣ್ಯಕೋಪನಿಷತ್ತಿನ ವಾಕ್ಯವಾಗಲೀ, 'ಮೃತ್ಯೋಃ ಸ ಮೃತ್ಯುಂ...' ಇತ್ಯಾದಿ ಕಾಠಕೋಪನಿಷತ್ತಿನ ವಾಕ್ಯವಾಗಲೀ ಜೀವಬ್ರಹ್ಮಾಭೇದದಲ್ಲಿ ಪ್ರಮಾಣವಾಗುವುದಿಲ್ಲ.

**ವಿವರಣೆ**—ಕೊನೆಗೆ ಉದಾಹರಿಸಿದ 'ಮೃತ್ಯೋಃ ಸ ಮೃತ್ಯುಂ ಗಚ್ಛತಿ' ಎಂಬ ಕಾಠಕವಾಕ್ಯದಲ್ಲಿ 'ಏಕಧೈವಾನುದ್ರಷ್ಟವ್ಯಂ' ಎಂಬುದು ಮಾಧ್ಯಂದಿನ ಶಾಖಾಗತವಾಕ್ಯ. ಅಥವಾ 'ಮೃತ್ಯೋಃ ಸ ಮೃತ್ಯುಂ ಗಚ್ಛತಿ...' ಎನ್ನುವುದೇ ಶಾಖಾಂತರಗತ ವಾಕ್ಯ.

**ಭಾಷ್ಯ**—**ಇಹೇತಿ ಪರಮೇಶ್ವರರೂಪೇಷು ಅವಯವೇಷು ಧರ್ಮೇಷು ಚ ಕಿಂಚನ ನಾನಾ ನಾಸ್ತೀತ್ಯರ್ಥಃ । 'ಏಕಮೇವಾದ್ವಿತೀಯಮ್' ಇತಿ ತತ್ಸಮೋಽಧಿಕೋ ವಾ ತದನಧೀನೋ ವಾ ನಾಸ್ತೀತಿ ಸತಾತ್ಪರ್ಯಂ ನಿಷಿಧ್ಯತೇ ।**

**ಏಕ ಏವಾದ್ವಿತೀಯೋಽಸೌ ಹರಿರ್ದೇವೇಷು ಸರ್ವದಾ ।**
**ಏಕ ಏವಾದ್ವಿತೀಯೋಽಸಾವಶ್ವಮೇಧಃ ಕ್ರತುಷ್ವಪಿ ।**
**ಏಕೈವ ವಾಽದ್ವಿತೀಯಾ ಸಾ ವಿಷ್ಣುಭಕ್ತಿಸ್ತು ಸಾಧನೇ ।**
**ಏಕ ಏವಾದ್ವಿತೀಯೋಽಸೌ ಪ್ರಣವೋ ಮಂತ್ರ ಉಚ್ಯತೇ ।**
**ಇತ್ಯಾದಿ ವಚನಾತ್ ।**

**ಯಥೈಕಮುತ್ತಮಪುರುಷಮಪೇಕ್ಷ್ಯ 'ತಸ್ಮಿನ್ ಪುರೇ ಸ ಏಕ ಏವ, ನಾನ್ಯೋಽಸ್ತೀ'ತ್ಯುಕ್ತೇಽಪಿ ತತ್ಸದೃಶಸ್ತದಧಿಕೋ ವಾಽನ್ಯೋ ನಾಸ್ತೀತ್ಯುಕ್ತಂ ಭವತಿ ।**

**ಏಕ ಏವಾದ್ವಿತೀಯೋಽಸೌ ತದತಂತ್ರಸ್ಯ ವರ್ಜನಾತ್ ।**
**ತತ್ಸಮಸ್ಯಾಧಿಕಸ್ಯಾಪಿ ಹ್ಯಭಾವಾತ್ ಪುರುಷೋತ್ತಮಃ ।**
**ಇತಿ ಚ ಬ್ರಾಹ್ಮೇ ॥**

**ಅನುವಾದ**—ಇಹ ಎಂದರೆ ಪರಮೇಶ್ವರನ ರೂಪಗಳಲ್ಲಿ ಅವಯವಗಳಲ್ಲಿ ಮತ್ತು ಧರ್ಮಗಳಲ್ಲಿ 'ಕಿಂಚನ ನಾನಾ ನಾಸ್ತಿ' ಯಾವುದೂ ಬೇರೆಬೇರೆಯಾಗಿ ಇಲ್ಲ ಎಂದು ಅರ್ಥ. 'ಏಕಮೇವಾದ್ವಿತೀಯಂ' ಎಂಬ ವಾಕ್ಯದಿಂದ ಅವನಿಗೆ ಸಮನಾದವನಾಗಲೀ, ಅಧಿಕನಾದವನಾಗಲೀ ಅಥವಾ ಅಧೀನನಲ್ಲದವನಾಗಲೀ ಇಲ್ಲವೆಂದು ತಾತ್ಪರ್ಯಪೂರ್ವಕವಾಗಿ ನಿರಾಕರಿಸಲ್ಪಡುತ್ತದೆ.

'ಎಲ್ಲಾ ದೇವತೆಗಳಲ್ಲಿ ಹರಿಯೊಬ್ಬನೇ ಯಾವಾಗಲೂ ಅದ್ವಿತೀಯನಾದವನು. ಎಲ್ಲಾ ಯಾಗಗಳಲ್ಲಿ ಅಶ್ವಮೇಧಯಾಗ ಒಂದೇ ಹೇಗೆ ಅದ್ವಿತೀಯವಾದುದೋ, ಮೋಕ್ಷಸಾಧನೆಯಲ್ಲಿ ವಿಷ್ಣುಭಕ್ತಿಯೊಂದೇ ಹೇಗೆ ಅದ್ವಿತೀಯವಾದುದೋ, ಮಂತ್ರಗಳಲ್ಲಿ ಪ್ರಣವ ಒಂದೇ ಹೇಗೆ ಅದ್ವಿತೀಯವೆಂದು ಕರೆಯಲ್ಪಡುತ್ತದೆಯೋ ಹಾಗೆ ಎಂದು ದೃಷ್ಟಾಂತಪೂರ್ವಕವಾಗಿ ಸ್ಮೃತಿಯಲ್ಲಿ ವ್ಯಾಖ್ಯಾನ ಮಾಡಿರುವುದರಿಂದ ಶ್ರುತಿಗೆ ಹೀಗೆಯೇ ಅರ್ಥವನ್ನು ಗ್ರಹಿಸಬೇಕು.

ಉತ್ತಮ ಪುರುಷನೊಬ್ಬನನ್ನು ಗಮನದಲ್ಲಿಟ್ಟುಕೊಂಡು 'ಈ ಪಟ್ಟಣದಲ್ಲಿ ಅವನೊಬ್ಬನೇ ಇದ್ದಾನೆ, ಬೇರೆ ಯಾರೂ ಇಲ್ಲ' ಎಂದು ಹೇಳಿದರೂ ಅವನಿಗೆ ಸಮಾನನಾದವನು ಅಥವಾ ಅಧಿಕನಾದವನು ಇಲ್ಲವೆಂದು ಹೇಗೆ ಅರ್ಥವಾಗುತ್ತದೆಯೋ ಹಾಗೆಯೇ ಇಲ್ಲಿಯೂ. 'ತನಗೆ ಅಧೀನರಾಗದವರು ಇಲ್ಲದಿರುವುದರಿಂದ, ಸಮರು ಮತ್ತು ಅಧಿಕರು ಇಲ್ಲದಿರುವುದರಿಂದ, ಪುರುಷೋತ್ತಮನೊಬ್ಬನೇ ಅದ್ವಿತೀಯ' ಎಂದು ಬ್ರಹ್ಮಪುರಾಣದಲ್ಲಿಯೂ ಹೇಳಿದೆ.

**ಭಾಷ್ಯ—ಸ್ವಗತಭೇದಾವಿವಕ್ಷಾಯಾಮಿಹೇತಿ ವಿಶೇಷಣಂ ವ್ಯರ್ಥಂ ಸ್ಯಾತ್ ।**
**'ನಾನೇವೇ'ತಿ ಭೇದಾಭೇದನಿರಾಕರಣಾರ್ಥಮ್ ।**
**ವಿರುದ್ಧೋಭಯಸಂಯೋಗ ಇವಶಬ್ದಃ ಪ್ರದಿಶ್ಯತೇ ।**
**ಇತಿ ಶಬ್ದತತ್ತ್ವೇ ।**
**ಪರ್ವತೇಷು ದುರ್ಗೇ ಪರ್ವತಾಗ್ರೇ ವೃಷ್ಟಂ ಯಥಾಽಧೋ ವಿಧಾವತಿ ಏವಂ ಪೃಥಗ್ ದೃಷ್ಟಾನ್ ಧರ್ಮಾನನ್ವೇವ ತದನಂತರಮೇವಾಧೋಽಂಧೇ ತಮಸಿ ವಿಧಾವತಿ ।**
**ಭೇದೇನ ದರ್ಶನಾದ್ ವ್ಯಾಪಿ ಭೇದಾಭೇದೇನ ದರ್ಶನಾತ್ ।**
**ವಿಷ್ಣೋರ್ಗುಣಾನಾಂ ರೂಪಾಣಾಂ ತದಂಗಾನಾಂ ಮುಖಾದಿನಾಂ ।**
**ತಥಾದರ್ಶನಕಾಲಾತ್ತು ಕ್ಷಿಪ್ರಮೇವ ತಮೋ ವ್ರಜೇತ್ ।**
**ಇತಿ ಬ್ರಹ್ಮಾಂಡೇ ।**

**ಅನುವಾದ**—ಪರಬ್ರಹ್ಮನಲ್ಲಿ ಪರಬ್ರಹ್ಮಧರ್ಮಗಳ ಭೇದವನ್ನು ನಿಷೇಧಿಸುವ ಅಭಿಪ್ರಾಯವಿಲ್ಲದಿದ್ದರೆ, ಭೇದವೆಂಬ ವಸ್ತುವೇ ಎಲ್ಲೂ ಇಲ್ಲವೆನ್ನುವುದಾದರೆ 'ಇಹ—ಈ ಪರಬ್ರಹ್ಮನಲ್ಲಿ' ಎಂಬ ವಿಶೇಷಣವು ವ್ಯರ್ಥವಾಗುತ್ತದೆ. ಎಲ್ಲಿಯೂ ಇಲ್ಲದ ಶಶವಿಷಾಣಾದಿಗಳನ್ನು 'ಇಲ್ಲಿ ಇಲ್ಲ, ಅಲ್ಲಿ ಇಲ್ಲ' ಎಂದು ಮುಂತಾಗಿ ಹೇಳುವುದು ಕಂಡಿಲ್ಲ. 'ನಾನೇವ' ಎಂಬಲ್ಲಿ ಇವ ಶಬ್ದವು ಭೇದಾಭೇದವನ್ನು ನಿರಾಕರಿಸುವುದಕ್ಕಾಗಿ. 'ನಾನಾ' ಎಂದು ಭೇದವನ್ನು ಹೇಳಿ 'ಇವ' ಎಂದು ಅದಕ್ಕೆ ವಿರುದ್ಧವಾದ ಅಭೇದವನ್ನು ಹೇಳಿದೆ. 'ವಿರುದ್ಧವಾದ ಇನ್ನೊಂದನ್ನು ಸಮುಚ್ಚಯ ಮಾಡುವಾಗ ಇವ

ವಟ್ಟಿದ್ದು ಪ್ರಯೋಗಿಸಲ್ಪಡುತ್ತದೆ' ಎಂದು ಶಬ್ದತತ್ತ್ವದಲ್ಲಿ ಹೇಳಿದೆ. ಆದ್ದರಿಂದ ಇಲ್ಲಿ ನಾನಾ ಪದಾರ್ಥವಾದ ಅಭೇದವನ್ನೂ ಸೇರಿಸಿ ಭೇದಾಭೇದವನ್ನು ನಿಷೇಧಿಸಲಾಗಿದೆ. 'ಯಥೋದಕಂ ದುರ್ಗೇ ವೃಷ್ಟಂ' ಎಂಬ ವಾಕ್ಯವೂ ಜೀವಬ್ರಹ್ಮಭೇದವನ್ನು ನಿಷೇಧಿಸುತ್ತಿಲ್ಲ. ಆ ವಾಕ್ಯಕ್ಕೆ 'ಪರ್ವತಗಳ ಅಗ್ರಭಾಗದಲ್ಲಿ ಬಿದ್ದ ನೀರು ಹೇಗೆ ಕೆಳಗೆ ವೇಗವಾಗಿ ಹರಿಯುತ್ತದೆಯೋ ಹಾಗೆ ಪರಮಾತ್ಮನ ಧರ್ಮಗಳನ್ನು ಪರಮಾತ್ಮನಿಂದ ಅಥವಾ ಪರಸ್ಪರವಾಗಿ ಭಿನ್ನವಾಗಿ ತಿಳಿದರೆ, ಅಂತಹ ಜ್ಞಾನ ಬಂದ ತಕ್ಷಣವೇ ಅಂಧಂತಮಸ್ಸಿಗೆ ಧಾವಿಸುತ್ತಾನೆ' ಎಂದರ್ಥ. ಪರಮಾತ್ಮನಲ್ಲಿ ಧರ್ಮಗಳೇ ಇಲ್ಲದಿರುತ್ತಿದ್ದರೆ ಉಪನಿಷತ್ತಿನಲ್ಲಿ 'ಪೃಥಕ್-ಭಿನ್ನವಾಗಿ' ಎಂದು ಹೇಳಿದುದು ವ್ಯರ್ಥವಾಗುತ್ತಿತ್ತು.

'ವಿಷ್ಣುವಿನ ಗುಣಗಳಿಗೂ, ರೂಪಗಳಿಗೂ, ಮುಖಾದಿ ಅವಯವಗಳಿಗೂ ಭೇದವನ್ನಾಗಲೀ, ಭೇದಾಭೇದವನ್ನಾಗಲೀ ತಿಳಿದರೆ ಅಂತಹ ಜ್ಞಾನ ಬಂದೊಡನೆಯೇ ತಮಸ್ಸಿಗೆ ಹೋಗುತ್ತಾನೆ' ಎಂದು ಬ್ರಹ್ಮಾಂಡಪುರಾಣದಲ್ಲಿ ಹೇಳಿದೆ.

**ಭಾಷ್ಯ**—**'ಜುಷ್ಟಂ ಯದಾ ಪಶ್ಯತ್ಯನ್ಯಮೀಶಮಸ್ಯ ಮಹಿಮಾನಮಿತಿ ವೀತಶೋಕಃ' 'ದ್ವಾ ಸುಪರ್ಣಾ ಸಯುಜಾ ಸಖಾಯಾ'**

**'ಯೋ ವೇದ ನಿಹಿತಂ ಗುಹಾಯಾಂ ಪರಮೇ ವ್ಯೋಮನ್ । ಸೋऽಶ್ನುತೇ ಸರ್ವಾನ್ ಕಾಮಾನ್ ಸಹ ಬ್ರಹ್ಮಣಾ ವಿಪಶ್ಚಿತೇತಿ ।'**

**'ಏತಮಾನಂದಮಯಮಾತ್ಮಾನಮುಪಸಂಕ್ರಮ್ಯ । ಇಮಾನ್ ಲೋಕಾನ್ ಕಾಮಾನ್ನೀ ಕಾಮರೂಪ್ಯನುಸಂಚರನ್'**

**'ಅಥಾತ ಆನಂದಸ್ಯ ಮೀಮಾಂಸಾ ಭವತಿ' ಇತ್ಯಾರಭ್ಯ ಮಾನುಷಾದಿ ಬ್ರಹ್ಮಾಂತಾನಾಂ ಮುಕ್ತಾನಾಮಾನಂದೇ ಶತಗುಣವಿಶೇಷಶ್ಚೋಚ್ಯತೇ ।**

**ಅನುವಾದ**—'ಜೀವನು ಯಾವಾಗ ಎಲ್ಲರಿಂದ ಸೇವಿಸಲ್ಪಟ್ಟ ಹರಿಯನ್ನೂ ಅವನ ಮಹಿಮೆಯನ್ನೂ 'ಇತಿ' ಎಂದರೆ 'ತದೇತತ್ ಸತ್ಯಮ್' ಎಂದು ಮುಂತಾಗಿ ಹಿಂದೆ ಹೇಳಿದಂತೆ ಸತ್ಯವನ್ನಾಗಿ ತಿಳಿಯುತ್ತಾನೆಯೋ ಆಗ ಅವನು ಮುಕ್ತನಾಗುತ್ತಾನೆ'.

'ಜೊತೆಗೂಡಿರುವ ಸ್ನೇಹಿತರಾದ ಜೀವ ಮತ್ತು ಈಶ್ವರರೆಂಬ ಎರಡು ಪಕ್ಷಿಗಳು ಅಶ್ವತ್ಥ ವೃಕ್ಷದಂತಿರುವ ಒಂದೇ ಶರೀರದಲ್ಲಿದ್ದಾರೆ. ಅವುಗಳಲ್ಲಿ ಜೀವನು ಅಸ್ವಾದುವಾದ ಕರ್ಮಫಲವನ್ನು ಸ್ವಾದುವೆಂದು ಭ್ರಮಿಸಿ ತಿನ್ನುತ್ತಾನೆ. ಈಶ್ವರನು ಕರ್ಮಫಲವನ್ನು ಅನುಭವಿಸದೆ ಎಲ್ಲೆಡೆ ಪ್ರಕಾಶಿಸುತ್ತಾನೆ'.

ಹೀಗೆ ಅದ್ವೈತವು ಪ್ರಮಾಣಬಾಧಿತವಾಗಿರುವುದರಿಂದ 'ಏಕಮೇವಾದ್ವಿತೀಯಂ' ಮುಂತಾದ ವಾಕ್ಯಗಳು ಅದ್ವೈತ ಪರವಾಗಲಾರವು. ಭೇದ ವಾಕ್ಯಗಳು ಸಂಸಾರದಲ್ಲಿ ಮಾತ್ರ ಭೇದವನ್ನು ಹೇಳುತ್ತವೆ ಎನ್ನಬಾರದು. ಶ್ರುತಿಗಳು ಮುಕ್ತಿಯಲ್ಲಿಯೂ

ಜೀವೇಶ್ವರಭೇದವನ್ನು ಪ್ರತಿಪಾದಿಸುವುದು ಕಂಡುಬರುತ್ತದೆ- 'ಯಾರು ಶ್ರೇಷ್ಠನಾದ ಹೃದಯಾಕಾಶದಲ್ಲಿರುವ ಹರಿಯನ್ನು ತಿಳಿಯುತ್ತಾನೆಯೋ ಅವನು ಸರ್ವಜ್ಞನಾದ ಬ್ರಹ್ಮನ ಜೊತೆಯಲ್ಲಿ ಎಲ್ಲಾ ಭೋಗಗಳನ್ನು ಅನುಭವಿಸುತ್ತಾನೆ' ಈ ವಾಕ್ಯದಲ್ಲಿ 'ಬ್ರಹ್ಮನ ಜೊತೆಯಲ್ಲಿ' ಎಂದು ಹೇಳಿರುವುದರಿಂದ ಮುಕ್ತಿಯಲ್ಲಿಯೂ ಭೇದವು ಉಕ್ತವಾಗಿದೆ.

'ಈ ಆನಂದಮಯನಾದ ಹರಿಯ ಒಳಗೆ ಹೋಗಿ ಯಥೇಚ್ಛವಾಗಿ ಅನ್ನ ಉಣ್ಣುತ್ತಾನೆ. ತನ್ನಿಚ್ಛೆಗನುಸಾರ ರೂಪಗಳನ್ನು ಧರಿಸುತ್ತಾನೆ, ಲೋಕಗಳಲ್ಲೆಲ್ಲಾ ಸಂಚರಿಸುತ್ತಾ ಸಾಮಗಾನ ಮಾಡುತ್ತಾನೆ'. ಇಲ್ಲಿಯೂ ಮುಕ್ತಿಯಲ್ಲಿ ಭೇದ ಉಕ್ತವಾಗಿದೆ.

'ಅಥಾತ ಆನಂದಸ್ಯ ಮೀಮಾಂಸಾ ಭವತಿ' ಎಂದು ಆರಂಭಿಸಿ ಮುಕ್ತರಾದ ಮನುಷ್ಯರಿಂದ ಹಿಡಿದು ಬ್ರಹ್ಮರವರೆಗೆ ಆನಂದದಲ್ಲಿ ನೂರುನೂರು ಪಾಲು ಆಧಿಕ್ಯವು ಹೇಳಲ್ಪಡುತ್ತದೆ. ಹೀಗೆ ಆನಂದತಾರತಮ್ಯವನ್ನು ಹೇಳಿರುವುದರಿಂದಲೂ ಮುಕ್ತಿಯಲ್ಲಿ ಭೇದವು ಸಿದ್ಧವಾಗುತ್ತದೆ.

**ಮುಕ್ತರಲ್ಲಿ ತಾರತಮ್ಯಕ್ಕೆ ಪ್ರಮಾಣ :**

**ಭಾಷ್ಯ—ಮುಕ್ತಾನಾಂ ಚಾಯಂ ವಿಶೇಷಃ 'ಶ್ರೋತ್ರಿಯಸ್ಯ ಚಾಕಾಮಹತಸ್ಯ' ಇತಿ ವಿಶೇಷಣಾತ್ । ನ ಹಿ ಬ್ರಹ್ಮಾದೀನಾಮನಧಿಗತಶ್ರುತಿತ್ವಂ ಕೇಷಾಂಚಿದಸ್ತಿ । ನ ಚ ಬ್ರಹ್ಮಾಣ ಏವ ಕೇಚನಾಕಾಮಹತಾಃ ಕೇಚನ ಕಾಮಹತಾ ಇತ್ಯತ್ರ ಪ್ರಮಾಣಮಸ್ತಿ । ತಸ್ಮಾತ್ ಶ್ರೋತ್ರಿಯ ಇತಿ ಪ್ರಾಪ್ತಶ್ರುತಿಫಲತ್ವಾನ್ಮುಕ್ತ ಉಚ್ಯತೇ । ಅಕಾಮಹತತ್ವಂ ಚ ಮುಖ್ಯಂ ಮುಕ್ತಸ್ಯೈವ ।**

**ಪ್ರಾಪ್ತಶ್ರುತಿಫಲತ್ವಾತ್ತು ಶ್ರೋತ್ರಿಯಾಃ ಪ್ರಾಪ್ತಮೋಕ್ಷಿಣಃ ।**
**ತ ಏವ ಚಾಪ್ತಕಾಮತ್ವಾತ್ ತಥಾಽಕಾಮಹತಾಃ ಶ್ರುತಾಃ ।**
**ಇತಿ ಭಾರತೇ ।**

**ಬ್ರಹ್ಮಣೋಽಪಿ ಹ್ಯಮುಕ್ತಸ್ಯ ನಾಕಾಮಹತತಾ ಪರಾ ।**
**ಯತಸ್ತಸ್ಯಾಪಿ ಕಾಮಸ್ಯ ಕ್ಷಣವ್ಯವಹಿತಿರ್ಭವೇತ್ । ಇತಿ ಚ ।**

**ಅನುವಾದ**—ಜೀತನ ತಾರತಮ್ಯವು ಸಂಸಾರದಲ್ಲಿ ಮಾತ್ರವೇ ಅಲ್ಲ, 'ಶ್ರೋತ್ರಿಯಸ್ಯ ಚಾಕಾಮಹತಸ್ಯ' ಎಂದು ವಿಶೇಷಣವಿರುವುದರಿಂದ ಮೋಕ್ಷದಲ್ಲಿಯೂ ಈ ತಾರತಮ್ಯವಿದೆ. 'ಸ ಏಕೋ ಬ್ರಹ್ಮಣ ಆನಂದಃ । ಶ್ರೋತ್ರಿಯಸ್ಯ ಚಾಕಾಮಹತಸ್ಯ' ಎಂದು ತೈತ್ತಿರೀಯೋಪನಿಷತ್ತಿನ ವಾಕ್ಯವಿದೆ. ಇಲ್ಲಿ ಶ್ರೋತ್ರಿಯಸ್ಯ ಮತ್ತು

ಅಕಾಮಹತತ್ವ ಎಂಬ ವಿಶೇಷಣಗಳು ಚತುರ್ಮುಖಬ್ರಹ್ಮಭಿನ್ನರಾದ ಅಲ್ಪ ಜೀವರಿಗೆ ಅನ್ವಯಿಸುತ್ತದೆಯೋ ಅಥವಾ ಚತುರ್ಮುಖನಿಗೆ ಸಮರಾಗಿದ್ದು ಅದೇ ಹೆಸರುಳ್ಳ ಕೆಲವರಿಗೆ ಅನ್ವಯಿಸುತ್ತದೆಯೋ ? ಅಲ್ಪ ಜೀವರಿಗೆ ಅನ್ವಯಿಸುತ್ತದೆ ಎಂದಾದರೆ, ಆ ಅಲ್ಪ ಜೀವರು ಶ್ರೋತ್ರಿಯರು ಮತ್ತು ಅಕಾಮಹತರು ಹೊರತು ಬ್ರಹ್ಮನು ಶ್ರೋತ್ರಿಯ ಮತ್ತು ಅಕಾಮಹತನಲ್ಲ ಎಂದು ಅರ್ಥವಾಗುತ್ತದೆ. ಇದು ಅಸಂಭಾವಿತ. ಬ್ರಹ್ಮನಿಗೆ ಸಮಾನರಾದ ಜೀವರಿಗೆ ಅನ್ವಯಿಸುತ್ತದೆ ಎಂದರೆ ಆ ಜೀವರು ಶ್ರೋತ್ರಿಯರು ಮತ್ತು ಅಕಾಮಹತರು ಹೊರತು ಬ್ರಹ್ಮನು ಶ್ರೋತ್ರಿಯ ಮತ್ತು ಅಕಾಮಹತನಲ್ಲ ಎಂದಾಗುತ್ತದೆ. ಇದೂ ಅಪ್ರಾಮಾಣಿಕವಾದುದು. ಅಮುಕ್ತ ಬ್ರಹ್ಮಾದಿಗಳಿಗೂ ಈ ವಿಶೇಷಣಗಳು ಅನ್ವಯಿಸುವುದಿಲ್ಲ. ಏಕೆಂದರೆ ಅವರಲ್ಲಿ ಮುಖ್ಯವಾದ ಶ್ರೋತ್ರಿಯತ್ವವಾಗಲೀ, ಮುಖ್ಯವಾದ ಅಕಾಮಹತತ್ವವಾಗಲೀ ಇಲ್ಲ. ಆದ್ದರಿಂದ ಮುಖ್ಯಶ್ರೋತ್ರಿಯನು ಶಾಸ್ತ್ರಶ್ರವಣಫಲವನ್ನು ಪಡೆದವನು, ಮುಕ್ತ ಎಂದೇ ಅರ್ಥ. ಮುಖ್ಯವಾದ ಅಕಾಮಹತತ್ವವೂ ಕೂಡಾ ಮುಕ್ತನಿಗೇ ಇರುತ್ತದೆ. 'ಶಾಸ್ತ್ರಶ್ರವಣಫಲವನ್ನು ಪಡೆದಿರುವುದರಿಂದ ಮುಖ್ಯವಾಗಿ ಶ್ರೋತ್ರಿಯರು ಎಂದರೆ ಮುಕ್ತರು. ಅವರೇ ಆಪ್ತಕಾಮರಾದ್ದರಿಂದ ಮುಖ್ಯವಾಗಿ ಅಕಾಮಹತರು ಎಂದು ಶ್ರುತಿಯಲ್ಲಿ ಕರೆಯಲ್ಪಡುತ್ತಾರೆ' ಎಂದು ಭಾರತದಲ್ಲಿದೆ. 'ಅಮುಕ್ತನಾದ ಬ್ರಹ್ಮನಿಗೂ ಕೂಡ ಮುಖ್ಯವಾದ ಅಕಾಮಹತತ್ವವಿಲ್ಲ. ಏಕೆಂದರೆ ಅವನಿಗೂ ಇಚ್ಛೆಯು ಪೂರೈಸಲು ಕ್ಷಣ ವಿಲಂಬವಿರುತ್ತದೆ' ಎಂದೂ ಇದೆ.

**ಭಾಷ್ಯ—ಕಾಮಹತತಾ ಕಾಮೇನೋಪದ್ರವಃ ।**

**ಬ್ರಹ್ಮಣೋ ಹ್ಯಲ್ಪದುಃಖಂ ಸ್ಯಾತ್ ತದಪ್ಯನಭಿಮಾನತಃ ।**
**ನಾಸ್ತ್ಯತ್ಮಸಂಬದ್ಧತಯಾ ಭೋಗಾಭಾವಾತ್ ಕಥಂಚನ ।**

**ಇತಿ ಚ ।**

**ನ ಚಾನ್ಯಸ್ಯ ಕಸ್ಯಚಿತ್ ಶ್ರೋತಿಯಸ್ಯಾಕಾಮಹತಸ್ಯ ಚ ಬ್ರಹ್ಮಣಾ ಸಮಂ ಸುಖಂ ಯುಜ್ಯತೇ ।**

**ಜ್ಞಾನಮಪ್ರತಿಘಂ ಯಸ್ಯ ವೈರಾಗ್ಯಂ ಚ ಜಗತ್ಪತೇಃ ।**
**ಐಶ್ವರ್ಯಂ ಚೈವ ಧರ್ಮಶ್ಚ ಸಹ ಸಿದ್ಧಂ ಚತುಷ್ಟಯಮ್ ।**

**ಇತ್ಯಾದಿನಾ ಶ್ರೋತ್ರಿಯತ್ವಾದಿ ಗುಣೈಸ್ತಸ್ಯೈವಾನ್ಯೇಭ್ಯ ಆಧಿಕ್ಯಾತ್ ।**

**ಅನುವಾದ**–ಕಾಮ ಹತತ್ವ ಎಂದರೆ ಇಚ್ಛಿಸಿದ ವಸ್ತುವು ದೊರೆಯದೆ ಅಥವಾ ವಿಲಂಬವಾಗಿ ದೊರೆತು ಉಂಟಾಗುವ ದುಃಖ.

'ದುಃಖವಿಲ್ಲದವನೆಂದು ಪ್ರಸಿದ್ಧನಾದ ಬ್ರಹ್ಮನಿಗೂ ಅಂತಃಕರಣದಲ್ಲಿ ಸ್ವಲ್ಪ

ದುಃಖವಿದೆ. ಅಭಿಮಾನ ರಹಿತನಾದುದರಿಂದ ಆ ದುಃಖವನ್ನು ಭೋಗಿಸುವುದಿಲ್ಲ ವಾದ್ದರಿಂದ ಅವನ ಆತ್ಮಕ್ಕೆ ಸಂಬಂಧಿಸಬಲ್ಲ ದುಃಖವಿಲ್ಲ' ಎಂದೂ ಹೇಳಿದೆ.

'ಬೇರೆ ಯಾವನೇ ಶ್ರೋತ್ರಿಯನಿಗೆ ಮತ್ತು ಅಕಾಮಹತನಿಗೆ ಬ್ರಹ್ಮದೇವರಿಗೆ ಸಮನಾದ ಸುಖವು ಉಪಪನ್ನವಾಗುವುದಿಲ್ಲ. ಏಕೆಂದರೆ 'ಪೂರ್ಣವಾದ ಜ್ಞಾನ, ವೈರಾಗ್ಯ, ಐಶ್ವರ್ಯ, ಧರ್ಮ ಈ ನಾಲ್ಕು ಜಗತ್ಪತಿಯಾದ ಬ್ರಹ್ಮದೇವರಿಗೆ ಮಾತ್ರವೇ ಸ್ವಾಭಾವಿಕವಾಗಿ ಸಿದ್ಧವಾಗಿವೆ' ಎಂದು ಮುಂತಾದ ಪ್ರಮಾಣಗಳಿಂದ ಶ್ರೋತ್ರಿಯತ್ವಾದಿ ಗುಣಗಳಿಂಧ ಬ್ರಹ್ಮನೇ ಉಳಿದೆಲ್ಲರಿಗೂ ಶ್ರೇಷ್ಠನಾದವನು ಎಂದು ತಿಳಿಯುತ್ತದೆ. ಆದ್ದರಿಂದ ಶ್ರೋತ್ರಿಯತ್ವಾದಿ ಗುಣಪ್ರಯುಕ್ತವಾದ ಸುಖವೂ ಬೇರೆಯವರಿಗಿಂತ ಬ್ರಹ್ಮದೇವರಲ್ಲಿಯೇ ಅಧಿಕವೆಂದೂ ಅವರಿಗೆ ಸಮನಾದ ಸುಖ ಅನ್ಯರಿಗಿಲ್ಲವೆಂದೂ ಹೇಳಬೇಕು.

**ಭಾಷ್ಯ—ನ ಚೇಂದ್ರಪದಾದ್ ವಿರಕ್ತಸ್ಯೇಂದ್ರಸಮಂ ಸುಖಂ, ಬ್ರಹ್ಮಪದಾದ್ ವಿರಕ್ತಸ್ಯ ತತ್ಸಮಮಿತ್ಯತ್ರ ಕಿಂಚಿನ್ಮಾನಮಸ್ತಿ । ದೃಷ್ಟವಸ್ತುನಿ ವಿರಾಗೇ ಆಯಾಸಾಭಾವಾತ್ ಕಶ್ಚಿತ್ ಸುಖವಿಶೇಷೋ ದೃಶ್ಯತೇ । ಅನ್ಯತ್ರ ಬ್ರಹ್ಮಪದಾದ್ ವಿರಕ್ತಸ್ಯೇಂದ್ರಾದಿಪದಾದ್ ವಿರಕ್ತಸ್ಯ ಚ ನ ಹಿ ಕಶ್ಚಿತ್ ವಿಶೇಷೋ ದೃಶ್ಯತೇ । ಅತೋಽನುಭವವಿರುದ್ಧತ್ವಾದ್ ಯತ್ಕಿಂಚಿದೇತತ್ ।**

**ನರಾದಿಬ್ರಹ್ಮಪರ್ಯಂತಂ ವಿಮುಕ್ತಾನಾಂ ಶತೋಚ್ಛ್ರಯಃ ।**
**ನಿಃಶೇಷದುಃಖಹೀನಾನಾಂ ನಿತ್ಯಾನಂದೈಕಭೋಗಿನಾಮ್ ।**
**ಅಪ್ಯಾನಂದೇ ಮಿಥೋ ಹ್ಯುಕ್ತಸ್ತ್ವಧ್ವರ್ಯೂಣಾಂ ಶ್ರುತೌ ಪೃಥಕ್।**
**ಇತಿ ಹರಿವಂಶೇಷು॥**

**ಅನುವಾದ**—ಇಂದ್ರನ ಪದವಿಯಲ್ಲಿ ಆಸೆಯಿಲ್ಲದವನಿಗೆ ಇಂದ್ರನಿಗೆ ಸಮಾನವಾದ ಸುಖ, ಬ್ರಹ್ಮಪದವಿಯಲ್ಲಿ ಆಸೆ ಇಲ್ಲದವನಿಗೆ ಬ್ರಹ್ಮನಿಗೆ ಸಮಾನವಾದ ಸುಖ ಎಂಬ ವಿಷಯದಲ್ಲಿ ಯಾವ ಪ್ರಮಾಣವೂ ಇಲ್ಲ. ಕೃಷಿಯಿಂದ ಸಿಗುವ ವಸ್ತುಗಳಾದ ಧಾನ್ಯ ಮೊದಲಾದವುಗಳಲ್ಲಿ ವಿರಕ್ತಿಯುಂಟಾದರೆ ಕೃಷಿಯಿಂದುಂಟಾಗುವ ಆಯಾಸವಿಲ್ಲವಾದ್ದರಿಂದ ಸ್ವಲ್ಪ ಸುಖವುಂಟಾಗುತ್ತದೆ. ಈ ದೃಷ್ಟಾಂತದಲ್ಲಿಯೂ ಕೃಷಿಮಾಡುವವನ ಸುಖಕ್ಕೆ ಸಮಾನವಾದ ಸುಖವು ವಿರಕ್ತನಿಗೆ ಉಂಟಾಗುತ್ತದೆ ಎಂಬುದಿಲ್ಲ. ಪ್ರಕೃತದಲ್ಲಿ ಇಂದ್ರಪದವಿಯಲ್ಲಿ ವಿರಕ್ತನಾದವನಿಗಿಂತ ಬ್ರಹ್ಮಪದವಿಯಲ್ಲಿ ವಿರಕ್ತನಾದವನಿಗೆ ಹೆಚ್ಚು ಸುಖವೆನ್ನುವುದೂ ಕಂಡುಬರುವುದಿಲ್ಲ. ಏಕೆಂದರೆ ಮಂತ್ರಿಪದವಿಯಲ್ಲಿ ವಿರಕ್ತನಾದವನಿಗಿಂತ ರಾಜಪದವಿಯಲ್ಲಿ ವಿರಕ್ತನಾದವನಿಗೆ ಹೆಚ್ಚು ಸುಖವೇನೂ ಇಲ್ಲ. ರಾಜನಿಗಿಂತ ರಾಜನ ಪದವಿಯಲ್ಲಿ ವಿರಕ್ತನಾದವನಿಗೆ ಹೆಚ್ಚು

ಸುಖ ಅನುಭವವಿರುದ್ಧವೆನ್ನುವುದು ಸ್ಪಷ್ಟ. ಆದ್ದರಿಂದ ಇಂತಹ ಕಲ್ಪನೆಗಳನ್ನು ಉಪೇಕ್ಷೆ ಮಾಡಬೇಕು. ಆದ್ದರಿಂದ ಈ ಆನಂದತಾರತಮ್ಯ ಶ್ರುತಿಯು ಮುಕ್ತರಿಗೇ ಸಂಬಂಧಿಸಿದೆ.

'ಸಮಸ್ತ ದುಃಖರಹಿತರೂ ನಿತ್ಯಸುಖವನ್ನೇ ಅನುಭವಿಸುವವರೂ ಆದ ಮನುಷ್ಯೋತ್ತಮಾದಿ ಬ್ರಹ್ಮಪರ್ಯಂತ ಮುಕ್ತರಿಗೇ ಆನಂದದಲ್ಲಿ ನೂರು ನೂರು ಪಟ್ಟು ಹೆಚ್ಚಳವು ತೈತ್ತಿರೀಯೋಪನಿಷತ್ತಿನಲ್ಲಿ ಹೇಳಲ್ಪಟ್ಟಿದೆ' ಎಂದು ಹರಿವಂಶದಲ್ಲಿಯೂ ಉಕ್ತವಾಗಿದೆ.

**ಭಾಷ್ಯ—'ಯದಾ ಹ್ಯೇವೈಷ ಏತಸ್ಮಿನ್ನುದರಮಂತರಂ ಕುರುತೇ' ಇತ್ಯತ್ರಾಪಿ ಏತಸ್ಮಿನ್ನಿತಿ ವಿಶೇಷಣಾತ್ ಸ್ವಗತಭೇದನಿಷೇಧ ಏವ ।**

**ಅಭೇದಮೀಶರೂಪಾಣಾಂ ಭೇದಂ ಜೀವೇಶಯೋರಪಿ ।**
**ಯಃ ಪಶ್ಯೇತ್ ಸ್ಥಿರಯಾ ಬುದ್ಧ್ಯಾ ಭಕ್ತಿಮಾನ್ ಸ ವಿಮುಚ್ಯತೇ ।**
**ಇತಿ ಭವಿಷ್ಯತ್ಪುರಾಣೇ ।**

**'ಪರಂಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ।ಸ ಉತ್ತಮಃ ಪುರುಷಃ । ಸ ತತ್ರ ಪರ್ಯೇತಿ ಜಕ್ಷನ್ ಕ್ರೀಡನ್ ರಮಮಾಣಃ ಸ್ತ್ರೀಭಿರ್ವಾ ಯಾನೈರ್ವಾ।'**

**'ಯಸ್ಯ ಲೋಕಂ ಸಮಾಸಾದ್ಯ ಸ್ವರೂಪಮಭಿಪದ್ಯತೇ ।**
**ಜೀವಃ ಪರ್ಯೇತಿ ವಿಷ್ಣೋಶ್ಚ ಸಮೀಪೇ ತತ್ಪ್ರಸಾದತಃ ।**
**ಯತ್ಪ್ರಸಾದಾತ್ ಸ ಪರ್ಯೇತಿ ಸ ವಿಷ್ಣುಃ ಪುರುಷೋತ್ತಮಃ।'**

**'ಅಕ್ಷಣ್ವಂತಃ ಕರ್ಣವಂತಃ ಸಖಾಯೋ**
**ಮನೋಜವೇಷ್ವಸಮಾ ಬಭೂವುಃ ।**
**ಆದಘ್ನಾಸ ಉಪಕಕ್ಷಾಸ ಉ ತ್ವೇ**
**ಹ್ರದಾ ಇವ ಸ್ನಾತ್ವಾ ಉ ತ್ವೇ ದದೃಶ್ರೇ ।'**

**'ದುಗ್ಧಸಾಗರಗಾಃ ಕೇಚಿತ್ ಕೇಚಿದಶ್ವತ್ಥಕಕ್ಷಗಾಃ ।**
**ಅಮೃತ ಹ್ರದೇಷು ಕೇಚಿಚ್ಚ ಪಿಬಂತಿ ಸ್ನಾತವತ್ ಸದಾ ।**
**ಕೇಚಿತ್ ಪಶ್ಯಂತಿ ತಂ ದೇವಂ ಸದಾ ಕೇಚಿತ್ ಸಮೀಪಗಾಃ ।'**

**'ಅಣಿಂ ನ ರಥ್ಯಮಮೃತಾಧಿತಸ್ಥುರಿಹ ಬ್ರವೀತು ಯ ಉ ತಚ್ಚಿಕೇತತ್'**

**'ರಥ್ಯಮಾಣಿಮಿವಾಶ್ರಿತ್ಯ ಮುಕ್ತಾಃ ಸರ್ವೇ ವ್ಯವಸ್ಥಿತಾಃ ।**
**ಯಂ ವಿಷ್ಣುಂ ದೇವದೇವೇಶಂ ನಮಸ್ತಸ್ಮೈ ಸ್ವಯಂಭುವೇ ।'**
**ಇತ್ಯಾದಿ ಚ ॥**

**ಅನುವಾದ**—'ಯದಾಪ್ಯೇಷ್ಯೈಷ...' ಎಂಬ ಶ್ರುತಿಯಲ್ಲಿ ಪಂಚಭೇದಜ್ಞಾನಿಗೆ ಅನರ್ಥವನ್ನು ಹೇಳಿಲ್ಲ. 'ಏತಸ್ಮಿನ್-ಈ ಪರಬ್ರಹ್ಮನಲ್ಲಿ' ಭೇದವನ್ನು ತಿಳಿದರೆ ಅನರ್ಥ ಎಂದು ವಿಶೇಷಣವಿಟ್ಟು ಹೇಳಿರುವುದರಿಂದ, ಪರಮಾತ್ಮನಲ್ಲಿ ಸ್ವಗತಭೇದ ತಿಳಿದವನಿಗೆ ಮಾತ್ರ ಅನರ್ಥವನ್ನು ಹೇಳಿದ್ದಾರೆ. ಆದ್ದರಿಂದ ಪರಮಾತ್ಮನಲ್ಲಿ ಸ್ವಗತ ಭೇದವಿಲ್ಲವೆಂದು ಸಿದ್ಧವಾಗುತ್ತದೆ ಹೊರತು ಜೀವನಿಂದಲೂ ಭೇದವಿಲ್ಲವೆಂದು ಸಿದ್ಧ ವಾಗುವುದಿಲ್ಲ. ಸ್ವಗತಭೇದನಿಷೇಧ ಪಕ್ಷದಲ್ಲಿಯೂ 'ಉದರ'ಶಬ್ದ ವ್ಯರ್ಥವೆನ್ನ ಕೂಡದು. ಉದರಶಬ್ದಕ್ಕೆ ಜೀವರಲ್ಲಿರತಕ್ಕ ಎಂದರ್ಥ. 'ಉದ್-ಉಚ್ಚೈಃ, ಅಃ-ಪರಮಾತ್ಮಾ ಯೇಷ್ವಸ್ತೀ ಉದಾಃ ಜೀವಾಃ । ತದ್ಗತಂ ಉದರಂ' ಯಾರು ಜೀವರಲ್ಲಿ ಪರಮಾತ್ಮ ಭೇದವಿರುವಂತೆ ಪರಮಾತ್ಮನಲ್ಲಿಯೂ ಪರಮಾತ್ಮಭೇದವಿದೆ ಎಂದು ತಿಳಿಯುತ್ತಾರೆಯೋ ಅವರಿಗೆ ಅನರ್ಥವುಂಟಾಗುತ್ತದೆ ಎಂದು ಶ್ರುತ್ಯರ್ಥ. 'ಸ್ಥಿರವಾದ ಬುದ್ಧಿಯಿಂದ ಭಕ್ತಿಯುತನಾಗಿ ಯಾರು ಈಶ್ವರನ ರೂಪಗಳಿಗೆ ಅಭೇದವನ್ನೂ, ಜೀವೇಶ್ವರರಿಗೆ ಭೇದವನ್ನೂ ತಿಳಿಯುತ್ತಾನೆಯೋ ಅವನು ಮೋಕ್ಷ ಪಡೆಯುತ್ತಾನೆ' ಎಂದು ಭವಿಷ್ಯತ್ಪುರಾಣದಲ್ಲಿದೆ.

'ಜೀವನು ಪರಮಪ್ರಕಾಶರೂಪನಾದ ಪರಬ್ರಹ್ಮನನ್ನು ಹೊಂದಿ ತನ್ನ ಸ್ವರೂಪದ ಅಭಿವ್ಯಕ್ತಿಯನ್ನು ಪಡೆಯುತ್ತಾನೆ. ಆ ಪರಮಪ್ರಕಾಶರೂಪನಾದ ಭಗವಂತನು ಉತ್ತಮ ಪುರುಷ. ಮುಕ್ತನು ಅವನ ಬಳಿಯಲ್ಲಿ ಉಣ್ಣುತ್ತಾ, ಆಟವಾಡುತ್ತಾ, ಸ್ತ್ರೀಯರ ಜೊತೆಯಲ್ಲಿ ಸಂತೋಷಪಡುತ್ತಾ ವಾಹನಗಳಲ್ಲಿ ಸಂಚರಿಸುತ್ತಾನೆ.'

'ಯಾರ ಲೋಕವನ್ನು ಹೊಂದಿ ಜೀವನು ತನ್ನ ಸ್ವರೂಪಾಭಿವ್ಯಕ್ತಿಯನ್ನು ಪಡೆಯುವನೋ ಆ ವಿಷ್ಣುವಿನ ಅನುಗ್ರಹದಿಂದ ಅವನ ಸಮೀಪದಲ್ಲಿ ಮುಕ್ತನು ಸಂಚರಿಸುತ್ತಾನೆ. ಯಾರ ಅನುಗ್ರಹದಿಂದ ಅವನು ಸಂಚರಿಸುವನೋ ಅಂತಹ ವಿಷ್ಣುವು ಪುರುಷೋತ್ತಮ'.

'ಕಣ್ಣು ಕಿವಿ ಮೊದಲಾದ ಇಂದ್ರಿಯಗಳ ಪೂರ್ಣಫಲವನ್ನು ಪಡೆದ ಮುಕ್ತರು ಜ್ಞಾನ ಮೊದಲಾದ ಮನಸ್ಸಿನ ಸಾಮರ್ಥ್ಯದಲ್ಲಿ ಪರಸ್ಪರ ಅಸಮಾನರಾದರೂ ಪರಸ್ಪರ ಮಿತ್ರರಾಗಿರುತ್ತಾರೆ. ಕೆಲವರು ಕ್ಷೀರ ಸಮುದ್ರದಲ್ಲಿಯೂ ಕೆಲವರು ವನಗಳ ಸಮೀಪದಲ್ಲಿಯೂ ಕ್ರೀಡಿಸುತ್ತಿರುತ್ತಾರೆ. ಕೆಲವರು ಅಮೃತ ಸರೋವರಗಳಲ್ಲಿ ಬಹಳ ಅಮೃತ ಪಾನಮಾಡಿ ಅದರಲ್ಲಿ ಸ್ನಾನ ಮಾಡಿದವರಂತಿರುತ್ತಾರೆ. ಇನ್ನು ಕೆಲವರು ಹರಿಯನ್ನು ಸದಾ ನೋಡುತ್ತಿರುತ್ತಾರೆ'.

'ಕೆಲವರು ಕ್ಷೀರಸಾಗರದಲ್ಲಿಯೂ,ಕೆಲವರು ಅಶ್ವತ್ಥ ವನದಲ್ಲಿಯೂ ಇರುತ್ತಾರೆ. ಕೆಲವರುಅಮೃತ ಸರೋವರಗಳಲ್ಲಿ ಬಹಳ ಅಮೃತಪಾನ ಮಾಡಿ ಅದರಲ್ಲಿ ಸ್ನಾನ ಮಾಡಿದವರಂತೆ ಇರುತ್ತಾರೆ. ಕೆಲವರು ಅಂದರೆ ದೇವತೆಗಳು ಆ ದೇವನನ್ನು

ಯಾವಾಗಲೂ ನೋಡುತ್ತಿರುತ್ತಾರೆ. ಕೆಲವರು ಅವನ ಸಮೀಪದಲ್ಲಿಯೇ ಇರುತ್ತಾರೆ'.

'ರಥದಲ್ಲಿರುವ ಎಲ್ಲ ವಸ್ತುಗಳೂ ರಥದ ಚಕ್ರದ ಕೀಲನ್ನು ಆಶ್ರಯಿಸಿಕೊಂಡಿರುವಂತೆ ಮುಕ್ತರು ಹರಿಯನ್ನು ಆಶ್ರಯಿಸಿಕೊಂಡಿದ್ದಾರೆ. ಯಾರು ಇದಕ್ಕೆ ವಿರುದ್ಧವಾಗಿ ಭಾವಿಸುತ್ತಾನೆಯೋ ಅವನು ನನ್ನೆದುರಿಗೆ ಹಾಗೆ ಹೇಳಲಿ'.

'ರಥದ ಚಕ್ರದ ಕೀಲನ್ನು ರಥದಲ್ಲಿರುವ ವಸ್ತುವೆಲ್ಲವೂ ಆಶ್ರಯಿಸಿದಂತೆ ಎಲ್ಲಾ ಮುಕ್ತರೂ ಯಾವ ದೇವದೇವನಾದ ವಿಷ್ಣುವನ್ನು ಆಶ್ರಯಿಸಿದ್ದಾರೋ ಆ ಸ್ವಯಂಭುವಾದ ವಿಷ್ಣುವಿಗೆ ನಮಸ್ಕಾರ'. ಇವೇ ಮೊದಲಾದವು ಮುಕ್ತಿಯಲ್ಲಿಯೂ ಭೇದವಿದೆ ಎನ್ನಲು ಪ್ರಮಾಣಗಳು.

**'ಸ ಯಶ್ಚಾಯಮಶರೀರಃ' ಎಂಬ ವಾಕ್ಯವೂ ಜೀವೇಶ್ವರಾಭೇದ ಪರವಲ್ಲ :**

**ಭಾಷ್ಯ-'ತೌ ಯತ್ರ ವಿಹೀಯೇತೇ' ಇತ್ಯತ್ರಾಪಿ ಪರಮಾತ್ಮೈವ ।**

**ಶರೀರಾನಭಿಮಾನೀ ಯೋ ಹೃದಿ ಸಂಸ್ಥೋ ಜನಾರ್ದನಃ ।**
**ಅಭಿಮಾನವತೋ ದೇಹೇ ಜೀವಸ್ಯ ಸ ನಿಯಾಮಕಃ ।**
**ಸ ಏವ ಸೂರ್ಯಸಂಸ್ಥಶ್ಚ ಹಂಸಃ ಸೋಽಹಮಿತಿ ಶ್ರುತಃ ।**
**ಹಂತೃತ್ವಾದ್ ಹಂಸನಾಮಾಽಸೌ ಸೋಽಹಂ ಚಾಸಾವಹೇಯತಃ ।**
**ಸ ಏವ ಸೂರ್ಯಸಂಸ್ಥೇನ ರೂಪೇಣೈವಾಕ್ಷಿಣಿ ಸ್ಥಿತಃ ।**
**ಸೂರ್ಯಸಂಸ್ಥಾದ್ಧಿ ರೂಪಾತ್ ಸ ವಿಭಕ್ತೋಽಕ್ಷಿಣಿ ಸಂಸ್ಥಿತಃ ।**
**ಗಚ್ಛತೋ ಮ್ರಿಯಮಾಣಸ್ಯ ತಾವುಭಾವಪಿ ದೇಹತಃ ।**
**ತಯೋರ್ದೇಹವಿಹಾನೇ ತು ಭವೇತಾರಿಷ್ಟದರ್ಶನಮ್ ।**
**ತದಾ ಸಂಚಿಂತಯೇದ್ ದೇವಂ ತಮೇವ ಪುರುಷೋತ್ತಮಮ್ ।**
**ಇತ್ಯಾದಿ ಹರಿವಂಶೇಷು ॥**

**ಅನುವಾದ**—'ಸ ಯಶ್ಚಾಯಮಶರೀರಃ ಪ್ರಜ್ಞಾತ್ಮಾ । ಯಶ್ಚಾಸಾವಾದಿತ್ಯೇ ಏಕಮೇತದಿತ್ಯವೋಚಾಮ' ಎಂಬ ಶ್ರುತಿಯೂ ಜೀವೇಶಾಭೇದವನ್ನು ಹೇಳುತ್ತದೆ ಎನ್ನಕೂಡದು. ಇದು ಜೀವ ಮತ್ತು ಸೂರ್ಯರಲ್ಲಿ ಅಂತರ್ಗತವಾದ ವಿಷ್ಣುರೂಪಗಳಿಗೇ ಅಭೇದವನ್ನು ಹೇಳುತ್ತದೆ. 'ತೌ ಯತ್ರ ವಿಹೀಯೇತೇ–ಪರಮಾತ್ಮನ ಆ ಎರಡು ರೂಪಗಳು ಶರೀರದಿಂದ ಹೊರಟು ಹೋದಾಗ' ಎಂಬು ಪರಮಾತ್ಮನ ಅನಿರುದ್ಧ ಪ್ರದ್ಯುಮ್ನ ಈ ಎರಡು ರೂಪಗಳೇ ಹೇಳಲ್ಪಡುತ್ತವೆ. ಪರಮಾತ್ಮನು ಒಬ್ಬನೇ ಆದರೂ ಅವನಿಗೆ ಇರುವ ಅನೇಕ ರೂಪಗಳ ದೃಷ್ಟಿಯಿಂದ ದ್ವಿವಚನ ಮತ್ತು ಬಹುವಚನಗಳು ಕೂಡುತ್ತವೆ. 'ಶರೀರಾಭಿಮಾನರಹಿತನಾದ, ಎಲ್ಲರ ಹೃದಯದಲ್ಲಿರುವ

ಜನಾರ್ದನನು ಶರೀರಾಭಿಮಾನವುಳ್ಳ ಜೀವರ ದೇಹಕ್ಕೆ ನಿಯಾಮಕನಾಗಿದ್ದಾನೆ. ಅವನೇ ಸೂರ್ಯನಲ್ಲಿರುವವನು. ಅವನು ಹಂಸಃ, ಸಃ, ಅಹಂ ಎಂದು ಶ್ರುತಿಗಳಲ್ಲಿ ಉಕ್ತನಾಗಿದ್ದಾನೆ. ದುಷ್ಟರನ್ನು ಹನನ ಮಾಡುವುದರಿಂದ ಹಂಸನೆಂದೂ, ಸರ್ವೋತ್ತಮನಾದ್ದರಿಂದ ಸಃ ಎಂದೂ, ಜೀವರಿಗೆ ತ್ಯಜಿಸಲು ಅರ್ಹನಲ್ಲವಾದ್ದರಿಂದ ಅಹಂ ಎಂದೂ ಕರೆಯಲ್ಪಡುತ್ತಾನೆ. ಅವನು ಸೂರ್ಯಗತವಾದ ತನ್ನ ರೂಪದಿಂದಲೇ ಅಂದರೆ ಅದರಿಂದ ಹೊರಟ ಇನ್ನೊಂದು ರೂಪದಿಂದ ಅಕ್ಷಿಗೆ ನಿಯಾಮಕನಾಗಿದ್ದಾನೆ. ಮರಣ ಸನ್ನಿಹಿತನಾದ ಜೀವನ ದೇಹದಿಂದ ಜೀವಾಂತರ್ಗತ, ಸೂರ್ಯಾಂತರ್ಗತವೆಂಬ ಆ ಎರಡು ರೂಪಗಳು ಹೊರಗೆ ಹೋಗುತ್ತವೆ. ಅವು ಶರೀರದಿಂದ ಹೋದಾಗ ಸೂರ್ಯನು ಚಂದ್ರನಂತೆ ಕಾಣುವುದು ಮೊದಲಾದ ಅರಿಷ್ಟದರ್ಶನವುಂಟಾಗುತ್ತದೆ. ಆಗ ಪುರುಷೋತ್ತಮನಾದ ಆ ದೇವನನ್ನೇ ಭಕ್ತಿಯಿಂದ ಚಿಂತನೆ ಮಾಡಬೇಕು' ಎಂದು ಮೊದಲಾಗಿ ಹರಿವಂಶದಲ್ಲಿ ಹೇಳಿದೆ.

**ಭಾಷ್ಯ—'ಕ್ಷೇತ್ರಜ್ಞ ಏತಾ ಮನಸೋ ವಿಭೂತೀಃ**
**ಜೀವಸ್ಯ ಮಾಯಾರಚಿತಾ ಅನಿತ್ಯಾಃ ।**
**ಆವಿರ್ಹಿತಾಶ್ಚಾಪಿ ತಿರೋಹಿತಾಶ್ಚ**
**ಶುದ್ಧೋ ವಿಚಷ್ಟೇ ಹ್ಯವಿಶುದ್ಧಕರ್ತುಃ ॥**
**ಕ್ಷೇತ್ರಜ್ಞ ಆತ್ಮಾ ಪುರುಷಃ ಪುರಾಣಃ**
**ಸಾಕ್ಷಾತ್ ಸ್ವಯಂಜ್ಯೋತಿರಜಃ ಪರೇಶಃ ।**
**ನಾರಾಯಣೋ ಭಗವಾನ್ ವಾಸುದೇವಃ**
**ಸ್ವಮಾಯಯಾತ್ಮನ್ ವ್ಯವಧೀಯಮಾನಃ'॥ ಇತಿ ಭಾಗವತೇ ।**
**'ಸ್ವೇಚ್ಛಯೈವಾವೃತೋ ವಿಷ್ಣುಃ ಜೀವೇ ತಿಷ್ಠತಿ ನಿತ್ಯದಾ ।**
**ಯೋಽಸೌ ನಿಯಾಮಯನ್ ಜೀವಂ ಕ್ಷೇತ್ರಜ್ಞ ಇತಿ ಶಬ್ದಿತಃ ।**
**ಇತಿ ಹರಿವಂಶೇಷು ॥**

**ಅನುವಾದ**—'ಶುದ್ಧನಾದ ಕ್ಷೇತ್ರಜ್ಞನು ತನ್ನ ಇಚ್ಛೆಯಿಂದ ನಿರ್ಮಿಸಲ್ಪಟ್ಟ, ಅನಿತ್ಯವಾದ, ಜಾಗ್ರತ್ ಮತ್ತು ಸ್ವಪ್ನಾವಸ್ಥೆಗಳಲ್ಲಿ ಸ್ಪಷ್ಟವಾಗಿಯೂ ಸುಷುಪ್ತಿಯಲ್ಲಿ ಅಸ್ಪಷ್ಟವಾಗಿಯೂ ತೋರುವ,ಜೀವನ ಮನೋವಿಕಾರವಾದ ಸುಖದುಃಖಾದಿಗಳನ್ನು ಪ್ರತ್ಯಕ್ಷವಾಗಿ ನೋಡುತ್ತಾನೆ' ಎಂದು ಭಾಗವತ ಹೇಳುತ್ತಿದೆ. ಇಲ್ಲಿ ಕ್ಷೇತ್ರಜ್ಞನೆಂದರೆ ಪರಮಾತ್ಮ. ಏಕೆಂದರೆ, 'ಕ್ಷೇತ್ರಜ್ಞನಾದ, ವ್ಯಾಪ್ತನಾದ, ಪೂರ್ಣಷಡ್ಗುಣೈಶ್ವರ್ಯ ಸಂಪನ್ನನಾದ, ಅನಾದಿಯಾದ, ಸ್ವಯಂ ಜ್ಯೋತಿಯಾದ, ಜನ್ಮರಹಿತನಾದ, ಪರೇಶನಾದ, ವಾಸುದೇವನೆನಿಸಿದ ಭಗವಾನ್ ನಾರಾಯಣನೇ ತನ್ನ ಇಚ್ಛೆಯಿಂದಲೇ ಜೀವನಲ್ಲಿದ್ದು ಮರೆಯಾಗಿರುತ್ತಾನೆ' ಎಂದೂ ಭಾಗವತದಲ್ಲಿ ಹೇಳಿದೆ. ಇಲ್ಲಿ ಸ್ವಮಾಯೆ

ಎಂದರೆ ಅವಿದ್ಯೆಯಿಲ್ಲ, ಸ್ವೇಚ್ಛೆ. ಏಕೆಂದರೆ 'ಜೀವನಿಗೆ ನಿಯಾಮಕನಾಗಿ ಕ್ಷೇತ್ರಜ್ಞನೆಂದು ಕರೆಯಲ್ಪಡುವ ವಿಷ್ಣುವು ಸ್ವೇಚ್ಛೆಯಿಂದಲೇ ಸದಾ ಜೀವನಲ್ಲಿದ್ದೂ ಮರೆಯಾಗಿದ್ದಾನೆ' ಎಂದು ಪರಿಪಂಲದಲ್ಲಿ ಹೇಳಿದೆ.

**ಭಾಷ್ಯ—'ಅಶರೀರಃ ಪ್ರಜ್ಞಾತ್ಮಾ' ಇತಿ ವಿಶೇಷಣಾಚ್ಚ ಪರಮಾತ್ಮಾ । ನ ಹಿ ಜೀವಸ್ಯಾಶರೀರತ್ವಮಮುಕ್ತಸ್ಯ। 'ಏಷ ತ ಆತ್ಮಾಂತರ್ಯಾಮ್ಯಮೃತೋಽತೋಽನ್ಯದಾರ್ತಮ್' ಇತಿ ಚ। ನ ಹಿ ಜೀವಾದನ್ಯಸ್ಯಾರ್ತಿರುಪಪದ್ಯತೇ । 'ಸರ್ವೇಷಾಂ ಭೂತಾನಾಮಂತರಪುರುಷಃ ಸಮ ಆತ್ಮೇತಿ ವಿದ್ಯಾತ್' ಇತ್ಯಾದಿ ಶ್ರುತಿಭ್ಯಶ್ಚ ।**

**ಬ್ರಹ್ಮಾದಯೋ ಹಿ ಭೂತಾನಿ ತೇಷಾಮಂತರ್ಗತೋ ಹರಿಃ ।**
**ಸಮಃ ಸ ಸರ್ವಭೂತೇಷು ಯ ಏವಂ ವೇದ ತತ್ತ್ವವಿತ್ ।'**

**ಇತಿ ಭಾರತೇ ॥**

**ಅನುವಾದ**—'ಸ ಯಶ್ಚಾಯಮಶರೀರಃ ಪ್ರಜ್ಞಾತ್ಮಾ' ಎಂಬುದು ಜೀವಪರ ಮತ್ತು 'ಯಶ್ಚಾಸಾವಾದಿತ್ಯೇ' ಎಂಬುದು ಪರಮಾತ್ಮ ಪರ, 'ಏಕಮೇತದಿತ್ಯೇವೋಪಾಸೀತ' ಎಂಬುದು ಜೀವೇಶಾಭೇದಪರ. ಆದ್ದರಿಂದ ದ್ವಿರೂಪನಾದ ಹರಿ ಇಲ್ಲಿ ಉಕ್ತನಾಗಿಲ್ಲ' ಎಂಬ ಆಕ್ಷೇಪಕ್ಕೆ ಹೀಗೆ ಸಮಾಧಾನ- 'ಅಶರೀರಃ ಪ್ರಜ್ಞಾತ್ಮಾ' ಎಂದು ವಿಶೇಷಣವಿರುವುದರಿಂದ 'ಸ ಯಶ್ಚಾಯಂ' ಎಂದು ಶ್ರುತಿಯಲ್ಲಿ ಹೇಳಲ್ಪಟ್ಟವನು ಪರಮಾತ್ಮನೇ. ಏಕೆಂದರೆ ಅಮುಕ್ತನಾದ ಜೀವನಿಗೆ ಅಶರೀರತ್ವವು ಕೂಡುವುದಿಲ್ಲ. ಮುಕ್ತನಾದ ಜೀವನು 'ಅಶರೀರಂ ವಾವ ಸಂತಂ' ಎಂಬ ಶ್ರುತಿಯಂತೆ ಅಶರೀರನಾದರೂ ಈ ಶ್ರುತಿಯಲ್ಲಿ ಅವನನ್ನು ತೆಗೆದುಕೊಳ್ಳಲು ಬರುವುದಿಲ್ಲ. 'ತೌ ಯತ್ರ ವಿಹೀಯೇತೇ' ಎಂಬ ಉತ್ತರವಾಕ್ಯದಲ್ಲಿ ಶರೀರದಿಂದ ಪರಮಾತ್ಮನ ರೂಪಗಳ ನಿರ್ಗಮನವನ್ನು ಹೇಳಿದ್ದಾರೆ. ಇದು ಅಮುಕ್ತ ಜೀವನ ಶರೀರದಲ್ಲಿ ಮಾತ್ರ ಸಾಧ್ಯ. ಆದ್ದರಿಂದ ಇಲ್ಲಿ ಅಶರೀರನೆಂದರೆ ಪರಮಾತ್ಮನೇ. ದ್ವಿರೂಪನಾದ ಅವನೇ ಇಲ್ಲಿ ಪ್ರಸ್ತುತನಾಗಿದ್ದಾನೆ. ಪ್ರಜ್ಞಾತ್ಮಾ ಎಂದರೆ ಜೀವನಿಯಾಮಕ ಎಂದು ಅರ್ಥ. ಜೀವನಿಯಾಮಕತ್ವವು ವಿಷ್ಣುವಿನಲ್ಲಿಯೇ ಪ್ರಸಿದ್ಧ. ಏಕೆಂದರೆ 'ನಿತ್ಯಮುಕ್ತನಾದ ಈ ಆತ್ಮನು ನಿನ್ನ ಅಂತರ್ಯಾಮಿ. ಅಂತರ್ಯಾಮಿಯಿಂದ ಭಿನ್ನವಾದುದೆಲ್ಲವೂ ಅಂತರ್ಯಾಮಿಯಿಂದಲೇ ದುಃಖವನ್ನು ಹೊಂದುತ್ತದೆ' ಎಂದು ಶ್ರುತಿ ಇದೆ. ಈ ಶ್ರುತಿಯಿಂದ ವಿಷ್ಣುವಿಗೆ ದುಃಖಿನಿಯಾಮಕತ್ವವು ತಿಳಿಯುತ್ತದೆ. ದುಃಖಿಗಳು ಜೀವರೇ ಹೊರತು ಜಡವಲ್ಲ. ಆದ್ದರಿಂದ ಜೀವನಿಯಾಮಕತ್ವವೇ ಈ ಶ್ರುತಿಯಿಂದ ಸಿದ್ಧವಾಗುತ್ತದೆ. 'ಸರ್ವಜೀವರ ಒಳಗಿದ್ದು ನಿಯಾಮಕನಾದ ವಿಷ್ಣುವು ಸಮ ಎಂದು ತಿಳಿಯಬೇಕು' ಎಂದು ಉಪಸಂಹಾರದಲ್ಲಿಯೂ ಶ್ರುತಿ ಇದೆ. ಈ

ಶ್ರುತಿಯಲ್ಲಿ 'ಭೂತಾನಾಂ' ಎಂದರೆ ಜಡವಾದ ಪಂಚಭೂತಗಳು ಎಂದು ಅರ್ಥವಲ್ಲ. 'ಸ ಮ ಆತ್ಮಾ' ಎಂದರೆ ಅವನು ನನ್ನ ಸ್ವರೂಪ ಎಂದೂ ಅರ್ಥವಲ್ಲ. ಏಕೆಂದರೆ, 'ಭೂತಾನಿ ಎಂದರೆ ಬ್ರಹ್ಮಾದಿಗಳು. ಹರಿಯು ಅವರೊಳಗಿರುವನು. ಅವನು ಸರ್ವಜೀವರಲ್ಲಿಯೂ ಸಮನಾಗಿದ್ದಾನೆ. ಯಾರು ಹೀಗೆ ತಿಳಿಯುವನೋ ಅವನೇ ತತ್ತ್ವಜ್ಞಾನಿ' ಎಂದು ಭಾರತದಲ್ಲಿ ಹೇಳಿದೆ.

**ಭಾಷ್ಯ—ನ ಚ ಮುಖ್ಯೇ ಸತಿ ಲಕ್ಷಣಾ ನಾಮ ಯುಜ್ಯತೇ । ನ ಚ ಮುಖ್ಯತ ಏವ ಜೀವೇಶಯೋರೈಕ್ಯಂ ಯುಕ್ತಮ್ । ಪ್ರತ್ಯಕ್ಷವಿರೋಧಾದೇವ । 'ತಮೇವಂ ವಿದ್ವಾನಮೃತ ಇಹ ಭವತಿ ನಾನ್ಯಃ ಪಂಥಾ ಅಯನಾಯ ವಿದ್ಯತೇ' ಇತ್ಯಾದೇಃ ಸಹಸ್ರಶೀರ್ಷತ್ವಾದಿ ಸರ್ವೇಶತ್ವ ಸರ್ವ ಜ್ಯಾಯಸ್ತ್ವಾದಿಜ್ಞಾನಾದೇವ ಮೋಕ್ಷಃ ಪ್ರತೀಯತೇಽನನ್ಯಯೋಗೇನ । ನ ಚಾತ್ರೈಕ್ಯ ಜ್ಞಾನಮುಕ್ತಮ್ । 'ಪುರುಷ ಏವೇದಂ ಸರ್ವಂ' ಇತ್ಯ-ತ್ರಾಪಿ ಸರ್ವೇಶಿತೃತ್ವಮೇವೋಕ್ತಮ್ 'ಉತಾಮೃತತ್ವಸ್ಯೇಶಾನಃ' ಇತಿ ವಾಕ್ಯಶೇಷಾತ್ ।**

**ಅನುವಾದ**—'ಸ ಯಶ್ಚಾಯಮಶರೀರಃ ಪ್ರಜ್ಞಾತ್ಮಾ' 'ಯಶ್ಚಾಸಾವಾದಿತ್ಯೇ' ಈ ವಾಕ್ಯಗಳಲ್ಲಿ ಮೊದಲನೆಯದರಿಂದ ಜೀವನನ್ನೂ, ಎರಡನೆಯದರಿಂದ ಪರ ಮಾತ್ಮನನ್ನೂ ಹೇಳಿ 'ಏಕಮೇತದ್' ಎಂಬ ವಾಕ್ಯದಿಂದ ಅವರಿಗೆ ಐಕ್ಯವನ್ನು ಶ್ರುತಿಯು ಹೇಳುವುದಾದರೆ ಮೊದಲನೆಯ ಎರಡು ವಾಕ್ಯಗಳು ವಿರುದ್ಧವಾದ ಭಾಗ ವನ್ನು ತ್ಯಜಿಸಿ, ಲಕ್ಷಣಾವೃತ್ತಿಯಿಂದ ಚೈತನ್ಯ ಮಾತ್ರವನ್ನು ಪ್ರತಿಪಾದಿಸುತ್ತವೆ ಎನ್ನ ಬೇಕು. ಆದರೆ ಸರ್ವವಿಧದಿಂದಲೂ ಮುಖ್ಯಾರ್ಥವು ಕೂಡದಿರುವಾಗ ಮಾತ್ರ ಲಕ್ಷಣಾವೃತ್ತಿಯನ್ನನುಸರಿಸಬೇಕು. ಇಲ್ಲದಿದ್ದರೆ ಎಲ್ಲಾ ಕಡೆಯೂ ಲಕ್ಷಣಾವೃತ್ತಿ ಯನ್ನು ಆಶ್ರಯಿಸುವ ಪ್ರಸಂಗ ಬರುತ್ತದೆ. ವಾಕ್ಯಗಳಿಗೆ ನಾವು ಹೇಳಿದಂತೆ ಮುಖ್ಯ ವೃತ್ತಿಯಿಂದ ಅರ್ಥಾಂತರವನ್ನು ಮಾಡಲು ಬರುವಾಗ ಲಕ್ಷಣಾವೃತ್ತಿಯನ್ನು ಆಶ್ರ ಯಿಸಿ ಚೈತನ್ಯ ಮಾತ್ರಕ್ಕೆ ಅಭೇದವನ್ನು ಹೇಳಬೇಕಾದ ಅಗತ್ಯವಿಲ್ಲ. ಇನ್ನು ಲಕ್ಷಣಾ ವೃತ್ತಿ ಇಲ್ಲದೆಯೆ ಜೀವ ಮತ್ತು ಪರಮಾತ್ಮರಿಗೆ ಅಭೇದವನ್ನು ಹೇಳುವುದೂ ಸರಿ ಯಲ್ಲ. 'ಯಃ ಸರ್ವಜ್ಞಃ' ಇತ್ಯಾದಿ ಶ್ರುತಿಯಿಂದ ಪ್ರತೀತನಾದ ಈಶ್ವರನು ನಾನಲ್ಲ ಎಂಬ ಭೇದಪ್ರತ್ಯಕ್ಷವಿರೋಧವು ಅಪರಿಹಾರ್ಯವಾಗಿರುವುದರಿಂದ ಶ್ರುತಿಯು ಅಭೇದವನ್ನು ಹೇಳಲು ಸಾಧ್ಯವಿಲ್ಲ. 'ಅವನನ್ನು ಈ ಪ್ರಕಾರದಿಂದ ತಿಳಿ ದವನು ಮುಕ್ತನಾಗುತ್ತಾನೆ. ಮೋಕ್ಷಕ್ಕೆ ಬೇರೆ ಮಾರ್ಗವಿಲ್ಲ' ಎಂದು ಮೊದಲಾದ ಶ್ರುತಿಗಳಿಂದ ಜೀವೇಶ್ವರಭೇದ ಸಾಧಕವಾದ ಸಹಸ್ರಶೀರ್ಷತ್ವಾದಿ, ಸರ್ವೇಶ್ವರತ್ವ ಸರ್ವೋತ್ತಮತ್ವಾದಿ ಪ್ರಕಾರಗಳಿಂದ ಪರಮಾತ್ಮನ ಜ್ಞಾನವೇ ಮೋಕ್ಷಕ್ಕೆ ಸಾಧನ,

ಐಕ್ಯ ಜ್ಞಾನವು ಮೋಕ್ಷಕ್ಕೆ ಸಾಧನವಲ್ಲ ಎಂದು ತಿಳಿದುಬರುತ್ತದೆ. 'ಪುರುಷ ಏವೇದಂ ಸರ್ವಂ' ಎಂದು ಮೊದಲು ಐಕ್ಯವನ್ನು ಹೇಳಿ ಕೊನೆಯಲ್ಲಿ 'ತಮೇವಂ ವಿದ್ವಾನ್' 'ಐಕ್ಯಜ್ಞಾನವು ಮೋಕ್ಷಸಾಧನ'ವೆಂದು ಹೇಳಿದೆ ಎನ್ನುವುದೂ ಸರಿಯಲ್ಲ. ಏಕೆಂದರೆ 'ಪುರುಷ ಏವೇದಂ ಸರ್ವಂ' ಎಂಬಲ್ಲಿ ಪರಮಾತ್ಮನಿಗೆ ಅಮುಕ್ತ ಸರ್ವಜೀವ ನಿಯಾಮಕತ್ವವನ್ನೇ ಹೇಳಿದೆ, ಐಕ್ಯವನ್ನಲ್ಲ. ಏಕೆಂದರೆ ಉತ್ತರಾರ್ಧವಲ್ಲಿ 'ಉತಾಮೃತತ್ವಸ್ಯೇಶಾನಃ'ಎಂದು ಮುಕ್ತನಿಯಾಮಕತ್ವವನ್ನು ಹೇಳಿದೆ. ಪೂರ್ವಾರ್ಧ ದಲ್ಲಿ ಅಮುಕ್ತೈಕ್ಯವನ್ನು ಹೇಳಿ ಉತ್ತರಾರ್ಧದಲ್ಲಿ ಮುಕ್ತೇಶತ್ವವನ್ನು ಹೇಳಿದರೆ ಸಂಸಾರಾವಸ್ಥೆಯಲ್ಲಿ ಅಭೇದವನ್ನೂ, ಮುಕ್ತಿಯಲ್ಲಿ ಭೇದವನ್ನೂ ಹೇಳಿದಂತಾಯಿತು. ಇದನ್ನು ಯಾವ ವಾದಿಯೂ ಅಂಗೀಕರಿಸುವುದಿಲ್ಲ.

**ಪುರುಷ ಏವೇದಂ ಸರ್ವಂ ಎಂಬುದೂ ಭೇದಪರ :**

**ಭಾಷ್ಯ—ಪುರುಷ ಏವೇದಂ ಸರ್ವಂ ಭೂತಂ ಭವ್ಯಂ ಭವಚ್ಚ ಯತ್ ।**
**ಇತ್ಯುಚ್ಯತೇ ತದೀಶತ್ವಾನ್ನ ತು ಸರ್ವಸ್ವರೂಪತಃ ।**
**ಭೂತಭವ್ಯಾದಿಜಾತಸ್ಯ ಮುಕ್ತಾನಾಮಪಿ ಚೇಶ್ವರಃ ।**
**ಇತ್ಯುಚ್ಯತೇ ಶ್ರುತೌ ವಿಷ್ಣುಃ ಸರ್ವದಾ ಪುರುಷೋತ್ತಮಃ ।**
**ಇತಿ ಭಾರತೇ ॥**

**ಅನುವಾದ**—'ಎಲ್ಲಕ್ಕೂ ಪರಮಾತ್ಮನೇ ಈಶನಾದ ಕಾರಣದಿಂದ ಭೂತ ಭವಿಷ್ಯತ್ ವರ್ತಮಾನ ಇವೆಲ್ಲವೂ ಪುರುಷನೇ ಎಂದು ಶ್ರುತಿಯಲ್ಲಿ ಹೇಳಲ್ಪಡುತ್ತದೆ ಹೊರತು ಎಲ್ಲವೂ ಈಶ್ವರನೇ ಎಂಬ ಕಾರಣದಿಂದಲ್ಲ. ಪುರುಷೋತ್ತಮನಾದ ವಿಷ್ಣುವು ಭೂತ ಭವ್ಯಾದಿ ಸಕಲ ಅಮುಕ್ತಜೀವನಿಯಾಮಕನಾದ್ದರಿಂದ ಮುಕ್ತರಿಗೂ ಒಡೆಯನೆ ಎಂದು 'ಉತಾಮೃತತ್ವಸ್ಯೇಶಾನೋ ಯದನ್ನೇನಾತಿರೋಹತಿ' ಎಂಬ ಶ್ರುತಿಯಲ್ಲಿ ಹೇಳಿದೆ' ಎಂದು ಭಾರತದಲ್ಲಿದೆ. ಸಂಸಾರದಲ್ಲಿ ತನ್ನ ಅಧೀನರಾಗಿರುವ ಜೀವರು ಮುಕ್ತಿಯಲ್ಲಿ ತನ್ನ ಅಧೀನರಾಗಿಲ್ಲದಿರುವ ಪಕ್ಷದಲ್ಲಿ ಪರಮಾತ್ಮನು ಮುಕ್ತಿ ಯನ್ನೇ ಕೊಡಲಾರನು ಎಂಬುದು ಇದರ ಭಾವ.

**ಭಕ್ತಿಯೇ ಮೋಕ್ಷಸಾಧನ :**

**ಭಾಷ್ಯ—ಸರ್ವಸ್ಮಾದುತ್ತಮ ಇತಿ ಸಮ್ಯಕ್ ಸ್ನೇಹಯುತಾ ಮತಿಃ ।**
**ಸುಸ್ಥಿರಾ ಭಕ್ತಿರುದ್ದಿಷ್ಟಾ ತಯಾ ಮೋಕ್ಷೋ ನ ಚಾನ್ಯತಃ ।**
**ತಯಾ ಮೋಕ್ಷೋ ಭವತ್ಯೇವ ಸಾ ಚೇತ್ ಪೂರ್ಣಾ ಸ್ವಯೋಗ್ಯತಃ।**
**ಅಪರೋಕ್ಷದೃಶಾ ಯುಕ್ತಾ ಸಾ ಪೂರ್ಣೇತ್ಯಭಿಧೀಯತೇ ।**
**ಅಪರೋಕ್ಷದೃಶಿಶ್ಚಾಪಿ ಮಹಾಚಾರ್ಯೋಕ್ತದರ್ಶನಮ್ ।**

**ಸೋಽಪಿ ಯನ್ಮೋಕ್ಷನಿಯತಂ ಮನಸಾ ಸಮುದೀರಯೇತ್ ।**
**ತಸ್ಯ ದರ್ಶನತೋ ಯಾತಿ ಮುಕ್ತಿಂ ನಾಸ್ತ್ಯತ್ರ ಸಂಶಯಃ ।**
**ಧ್ಯಾನಂ ಚ ಗುರುಶುಶ್ರೂಷಾ ನಿತ್ಯನೈಮಿತ್ತಿಕಾಃ ಕ್ರಿಯಾಃ ।**
**ತೀರ್ಥದಾನಜಪಾದ್ಯಾಶ್ಚ ಸ್ವಾಧ್ಯಾಯೋ ಹರಿಕೀರ್ತನಮ್ ।**
**ದ್ವಾದಶ್ಯಾದಿ ವ್ರತಂ ಚೈವ ತುಲಸ್ಯಾದ್ಯೈರಥಾರ್ಚನಮ್ ।**
**ಸರ್ವಂ ಭಕ್ತ್ಯರ್ಥಮುದ್ದಿಷ್ಟಂ ನಿಷ್ಫಲಂ ತತ್ ತಯಾ ವಿನಾ ।**

**ಅನುವಾದ**—ಐಕ್ಯಜ್ಞಾನವು ಮೋಕ್ಷಸಾಧನವಲ್ಲ ಏಕೆಂದರೆ, ಗಾಢ ಸ್ನೇಹದಿಂದ ಯುಕ್ತವಾದ ಸುಸ್ಥಿರವಾದ ಹರಿಸರ್ವೋತ್ತಮತ್ವ ಜ್ಞಾನಕ್ಕೆ ಭಕ್ತಿ ಎಂದು ಹೆಸರು. ಅದರಿಂದಲೇ ಮೋಕ್ಷವಾಗುತ್ತದೆ. ಬೇರೆ ಯಾವುದರಿಂದಲೂ ಆಗುವುದಿಲ್ಲ. ತನ್ನ ಯೋಗ್ಯತೆಗನುಗುಣವಾಗಿ ಆ ಭಕ್ತಿಯು ಪೂರ್ಣವಾದಾಗ ಅದರಿಂದ ನಿಃಸಂಶಯವಾಗಿ ಮುಕ್ತಿಯಾಗುತ್ತದೆ. ಅಪರೋಕ್ಷಜ್ಞಾನದಿಂದ ಕೂಡಿದಾಗ ಭಕ್ತಿ ಪೂರ್ಣಭಕ್ತಿ ಎನಿಸುತ್ತದೆ. ಶಿಷ್ಯನ ಯೋಗ್ಯತೆಯನ್ನು ತಿಳಿದ ಗುರುವು ಉಪದೇಶ ಮಾಡಿದ ಭಗವದ್ರೂಪದ ದರ್ಶನವೆ ಅಪರೋಕ್ಷಜ್ಞಾನವೆನಿಸುತ್ತದೆ. ಗುರುವು ಐಹಿಕ ಸುಖಾದಿ ಉದ್ದೇಶದಿಂದ ಉಪದೇಶಿಸಿದ ಭಗವದ್ರೂಪದ ಅಪರೋಕ್ಷವು ಮೋಕ್ಷ ಸಾಧನವಾಗದಿದ್ದರೂ, ಮೋಕ್ಷ ಉಂಟಾಗಲಿ ಎಂಬ ಉದ್ದೇಶದಿಂದ, ಪ್ರಸನ್ನವಾದ ಮನಸ್ಸಿನಿಂದ ಉಪದೇಶಿಸಿದ ಭಗವದ್ರೂಪದ ಅಪರೋಕ್ಷದಿಂದ ಮೋಕ್ಷವು ಆಗಿಯೇ ಆಗುತ್ತದೆ. ಇದರಲ್ಲಿ ಯಾವ ಸಂಶಯವೂ ಇಲ್ಲ. ಕೆಲವು ಕಡೆ ಧ್ಯಾನದಿಂದಲೇ ಅಥವಾ ಪೂಜೆಯಿಂದಲೇ ಮೋಕ್ಷವಾಗುತ್ತದೆ ಎಂದು ಹೇಳುವ ವಾಕ್ಯಗಳಿವೆ. ಅವುಗಳ ಅಭಿಪ್ರಾಯವೇನೆಂದರೆ– ಧ್ಯಾನ, ಗುರುಸೇವೆ, ನಿತ್ಯನೈಮಿತ್ತಿಕ ಕರ್ಮಗಳು, ತೀರ್ಥಯಾತ್ರೆ, ದಾನ, ಜಪಾದಿ, ಸ್ವಾಧ್ಯಾಯ,ಹರಿನಾಮಕೀರ್ತನೆ, ಏಕಾದಶ್ಯಾದಿ ವ್ರತಗಳು, ತುಲಸಿಮುಂತಾದವುಗಳಿಂದ ಹರಿಯ ಪೂಜೆ ಮೊದಲಾದವೆಲ್ಲವೂ ಮೋಕ್ಷಕಾರಣವಾದ ಭಕ್ತಿಯನ್ನು ಸಂಪಾದಿಸುವ ಉದ್ದೇಶದಿಂದ ಕೂಡಿದೆ. ಭಕ್ತಿ ಇಲ್ಲದಿದ್ದರೆ ಆ ಧ್ಯಾನಾದಿಗಳೆಲ್ಲವೂ ನಿಷ್ಫಲ ಎಂದು.

**ಭಾಷ್ಯ—ವಿಷ್ಣುಭಕ್ತಿಯುತೋ ಮುಕ್ತಿಂ ಯಾತಿ ನಾನ್ಯಃ ಕಥಂಚನ ।**
**ಏತದನ್ಯತ್ತು ಯತ್ ಶಾಸ್ತ್ರಂ ನ ತತ್ ಶಾಸ್ತ್ರಂ ಕುವರ್ತ್ಮ ತತ್ ।**
**ವಿಷ್ಣೋರ್ಭಕ್ತಿಮೃತೇ ಮುಕ್ತಿರ್ಜೀವಾಭೇದೋ ಹರೇರಪಿ ।**
**ಶಿವಬ್ರಹ್ಮಾದಿಸಾಮ್ಯಂ ಚ ಹರೇರ್ಮೋಹಾರ್ಥಮುಚ್ಯತೇ ।**
**ದೈತ್ಯಾನಾಂ ಮೋಹನಾರ್ಥಾಯ ವಿಷ್ಣೋರನ್ಯಸಮಾನತಾ ।**
**ಹೀನತಾ ವೋಚ್ಯತೇ ಶಾಸ್ತ್ರೈರ್ನ ತದ್ ಗ್ರಾಹ್ಯಂ ಮುನೀಷಿಭಿಃ ।**

ವಿಷ್ಣುರ್ವಾಯುು ಗಿರೀಶೇಂದ್ರ ದೇವ ವಿಪ್ರಾಃ ಕ್ರಮಾತ್ ಸದಾ ।
ಸಾಮರ್ಥ್ಯತೋ ವಿಹೀನಾಸ್ತು ಗುಣೈಃ ಸರ್ವೈಸ್ತಥೈವ ಚ ।
ಹೀನೋ ವಿಷ್ಣುರ್ನ ಕಸ್ಯಾಪಿ ಸರ್ವತಶ್ಚೋತ್ತಮೋತ್ತಮಃ ।
ಏತದನ್ಯತ್ತು ಯತ್ ಶಾಸ್ತ್ರಂ ತದಾಸುರವಿಮೋಹನಮ್ ।
ತಸ್ಮಾತ್ ಸರ್ವೋತ್ತಮಂ ವಿಷ್ಣುಂ ನಿಶ್ಚಿತ್ಯ ಪರಮಂ ವ್ರಜೇತ್ ।
ಇತಿ ಹರಿವಂಶೇಷು ॥

**ಅನುವಾದ**—'ವಿಷ್ಣುಭಕ್ತಿಯುಳ್ಳವನೇ ಮುಕ್ತಿಯನ್ನು ಪಡೆಯುತ್ತಾನೆ. ಬೇರೆ ಯಾರೂ ಯಾವ ರೀತಿಯಿಂದಲೂ ಮೋಕ್ಷವನ್ನು ಪಡೆಯುವುದಿಲ್ಲ. ಇದಕ್ಕೆ ವ್ಯತಿರಿಕ್ತವಾಗಿ ಹೇಳುವ ಪಾಶುಪತಾದಿ ಶಾಸ್ತ್ರವು ಶಾಸ್ತ್ರವಲ್ಲ. ಅದು ಕುಮಾರ್ಗ. ವೈಷ್ಣವ ಪುರಾಣಗಳಲ್ಲಿಯೇ ಕೆಲವೆಡೆ ವಿಷ್ಣುಭಕ್ತಿಯಿಲ್ಲದೆ ಮೋಕ್ಷ, ಹರಿಗೆ ಜೀವಾಭೇದ ಮತ್ತು ಹರಿಗೆ ಬ್ರಹ್ಮರುದ್ರಾದಿ ಸಾಮ್ಯಗಳನ್ನು ಹೇಳಿದ್ದರೆ ಅದು ಮೋಹನಾರ್ಥ. ವಿಷ್ಣುವಿಗೆ ಅನ್ಯಸಮಾನತೆ ಅಥವಾ ಅನ್ಯರಿಗಿಂತ ಹೀನತೆಯು ಶಾಸ್ತ್ರದಲ್ಲಿ ದೈತ್ಯರ ಮೋಹನಾರ್ಥವಾಗಿ ಹೇಳಲ್ಪಟ್ಟಿದೆ. ಅವನ್ನು ವಿವೇಕಿಗಳು ಸ್ವೀಕರಿಸಬಾರದು. ವಿಷ್ಣು ವಾಯು ರುದ್ರ ಇಂದ್ರ ದೇವತೆಗಳು ಮತ್ತು ಋಷಿಗಳು ಕ್ರಮವಾಗಿ ಸಾಮರ್ಥ್ಯದಲ್ಲಿಯೂ, ಜ್ಞಾನಾದಿಗುಣಗಳಲ್ಲಿಯೂ ಕಡಿಮೆಯಾಗುತ್ತಾ ಹೋಗುತ್ತಾರೆ. ವಿಷ್ಣುವು ಯಾರಿಗಿಂತಲೂ ಕಡಿಮೆಯಲ್ಲ. ಅವನು ಸರ್ವೋತ್ತಮೋತ್ತಮ. ಇದಕ್ಕೆ ವಿರುದ್ಧವಾಗಿ ಹೇಳುವ ಶಾಸ್ತ್ರವು ಅಸುರರ ವಿಮೋಹನೆಗಾಗಿ ಹಾಗೆ ಹೇಳುತ್ತದೆ. ಆದ್ದರಿಂದ ವಿಷ್ಣುವು ಸರ್ವೋತ್ತಮನೆಂದು ನಿಶ್ಚಯಜ್ಞಾನದಿಂದಲೇ ಮುಕ್ತಿಯನ್ನು ಪಡೆಯಬೇಕು' ಎಂದು ಹರಿವಂಶದಲ್ಲಿ ಹೇಳಿದೆ.

**ಭಾಷ್ಯ**—ತುಲಾಪುರುಷದಾನಾದ್ಯೈರಶ್ವಮೇಧಾದಿಭಿರ್ಮಖೈಃ ।
ವಾರಾಣಸೀ ಪ್ರಯಾಗಾದಿ ತೀರ್ಥಸ್ನಾನಾದಿಭಿಃ ಪ್ರಿಯೇ ।
ಗಯಾಶ್ರಾದ್ಧಾದಿಭಿಃ ಪಿತ್ರ್ಯೈರ್ವೇದಪಾಠಾದಿಭಿರ್ಜಪೈಃ ।
ತಪೋಭಿರುಗ್ರೈರ್ನಿಯಮೈರ್ಯಮೈರ್ಭೂತದಯಾದಿಭಿಃ ।
ಗುರುಶುಶ್ರೂಷಣೈಃ ಸತ್ಯೈರ್ಧರ್ಮೈರ್ವರ್ಣಾಶ್ರಮೋದಿತೈಃ ।
ಜ್ಞಾನ ಧ್ಯಾನಾದಿಭಿಃ ಸಮ್ಯಕ್ ಚರಿತೈರ್ಜನ್ಮಜನ್ಮನಿ ।
ನ ಯಾಂತಿ ತತ್ ಪರಂ ಶ್ರೇಯೋ ವಿಷ್ಣುಂ ಸರ್ವೇಶ್ವರೇಶ್ವರಮ್ ।
ಸರ್ವಭಾವೈರನಾಶ್ರಿತ್ಯ ಪುರಾಣಪುರುಷೋತ್ತಮಮ್ ।
ಇತಿ ಪಾದ್ಮೇ ॥

ಭಾವೋ ಭಕ್ತಿಃ ಸಮುದ್ದಿಷ್ಟಸ್ತದ್ವಾನ್ ಭಾವುಕ ಉಚ್ಯತೇ ।
ಇತಿ ನಾರಸಿಂಹೇ ॥

**ಅನುವಾದ**—'ಪ್ರಿಯೇ, ಸರ್ವೇಶ್ವರನಾದ ಪುರಾಣಪುರುಷೋತ್ತಮನಾದ ವಿಷ್ಣುವನ್ನು ಶ್ರವಣಾದಿ ಸರ್ವವಿಧವಾದ ಭಕ್ತಿಯಿಂದ ಆಶ್ರಯಿಸದೆ, ತುಲಾಭಾರ ಮೊದಲಾದ ದಾನಗಳಿಂದಾಗಲೀ, ಅಶ್ವಮೇಧ ಮೊದಲಾದ ಯಜ್ಞಗಳಿಂದಾಗಲೀ, ಕಾಶೀ ಪ್ರಯಾಗಾದಿ ತೀರ್ಥಸ್ನಾನಗಳಿಂದಾಗಲೀ, ಗಯಾಶ್ರಾದ್ಧ ಮೊದಲಾದ ಪಿತೃ ಕರ್ಮಗಳಿಂದಾಗಲೀ, ವೇದಪಾಠ ಮೊದಲಾದ ಜಪಗಳಿಂದಾಗಲೀ, ಉಗ್ರವಾದ ತಪಸ್ಸು ಮುಂತಾದ ನಿಯಮಗಳಿಂದಾಗಲೀ, ಪ್ರಾಣಿದಯೆ ಮೊದಲಾದ ಯಮಗಳಿಂದಾಗಲೀ ಗುರುಸೇವೆಯಿಂದಾಗಲೀ, ಸತ್ಯವಚನದಿಂದಾಗಲೀ, ವರ್ಣಾಶ್ರಮವಿಹಿತವಾದ ಧರ್ಮ ಗಳಿಂದಾಗಲೀ ಪ್ರತಿಜನ್ಮದಲ್ಲಿಯೂ ಚೆನ್ನಾಗಿ ಮಾಡಿದ ಜ್ಞಾನಧ್ಯಾನಾದಿಗಳಿಂದಾಗಲೀ ಪರಮಪುರುಷಾರ್ಥವಾದ ಮೋಕ್ಷವನ್ನು ಪಡೆಯುವುದಿಲ್ಲ' ಎಂದು ಪಾದ್ಮಪುರಾಣದಲ್ಲಿ ಹೇಳಿದೆ. ಇಲ್ಲಿ 'ಸರ್ವಭಾವೈಃ' ಎಂದರೆ 'ಸರ್ವಾತ್ಮಕತ್ವ ಬುದ್ಧಿ' ಎಂದರ್ಥವಲ್ಲ. 'ಭಾವ ಎಂದರೆ ಭಕ್ತಿ. ಭಕ್ತಿಯುಳ್ಳವನನ್ನು ಭಾವುಕನೆಂದು ಕರೆಯುತ್ತಾರೆ' ಎಂದು ನಾರಸಿಂಹ ಪುರಾಣದಲ್ಲಿ ಹೇಳಿದೆ. ಆದ್ದರಿಂದ ಶ್ರವಣಾದಿ ನವವಿಧವಾದ ಎಲ್ಲ ಭಕ್ತಿ ಗಳಿಂದಲೂ ವಿಷ್ಣುವನ್ನು ಆಶ್ರಯಿಸಬೇಕೆಂದು ಅರ್ಥ.

**ಭಾಷ್ಯ—ಮುಕ್ತಾನಾಮಪಿ ಸಿದ್ಧಾನಾಂ ನಾರಾಯಣಪರಾಯಣಃ ।**
**ಸುದುರ್ಲಭಃ ಪ್ರಶಾಂತಾತ್ಮಾ ಕೋಟಿಷ್ವಪಿ ಮಹಾಮತೇ ।**
**ಇತಿ ಶ್ರೀ ಭಾಗವತ ವಚನಂ ಚ 'ಪರಾಯಣ' ಇತಿ ವಿಶೇಷಣಾನ್ನ ನಾರಾಯಣಾಯನತ್ವಂ ವಿನಾ ಮುಕ್ತಿದ್ಯೋತಕಮ್ ।**

**ಅನುವಾದ**—'ಶರೀರಾಭಿಮಾನವನ್ನು ತೊರೆದು ಸಿದ್ಧರಾದ ಮುಕ್ತರಲ್ಲಿಯೂ ಪ್ರಶಾಂತ ಮನಸ್ಸುಳ್ಳ ನಾರಾಯಣಪರಾಯಣನಾದವನು ಕೋಟಿಗೆ ಒಬ್ಬನೂ ಸಿಗು ವುದು ಕಷ್ಟ' ಎಂಬ ಭಾಗವತವಚನವು ವಿಷ್ಣುಭಕ್ತಿ ಇಲ್ಲದೆಯೂ ಮೋಕ್ಷ ಉಂಟಾಗು ತ್ತದೆ ಎನ್ನುವುದಿಲ್ಲ. ಇಲ್ಲಿ 'ನಾರಾಯಣಪರಾಯಣನು ದುರ್ಲಭ' ಎಂದು ಹೇಳಿದೆ. 'ನಾರಾಯಣಾಯನನು ದುರ್ಲಭ' ಎಂದು ಹೇಳಿಲ್ಲ. ಬ್ರಹ್ಮನೊಬ್ಬನೇ ನಾರಾಯಣ ಪರಾಯಣ. ಅಂದರೆ ನಾರಾಯಣನಲ್ಲಿ ಪರಮಭಕ್ತಿ ಉಳ್ಳವ. ಉಳಿದೆಲ್ಲ ಮುಕ್ತರೂ ನಾರಾಯಣಾಯನರು, ನಾರಾಯಣನಲ್ಲಿ ಭಕ್ತಿ ಉಳ್ಳವರು. ಆದ್ದರಿಂದ 'ಮುಕ್ತ ರಲ್ಲಿ ಬ್ರಹ್ಮನಂತೆ ನಾರಾಯಣಪರಾಯಣನಾದವನು ಕೋಟಿಗೊಬ್ಬನೂ ದೊರೆಯು ವುದು ಕಷ್ಟ' ಎಂದು ಅರ್ಥ. ವಿಷ್ಣುಭಕ್ತಿ ಇಲ್ಲದೆ ಮೋಕ್ಷ ಉಂಟಾಗುವುದಾಗಿದ್ದರೆ 'ನಾರಾಯಣಾಯನನು ಸುದುರ್ಲಭ' ಎಂದು ಇರಬೇಕಾಗಿತ್ತು.

**ಕಾರ್ಯತಾವಾದ ನಿರಾಕರಣೆ :**

**ಭಾಷ್ಯ–ನ ಚ ಸಿದ್ಧೇಽರ್ಥೇ ತಾತ್ಪರ್ಯಾಭಾವೋ ವಕ್ತುಂ ಯುಕ್ತಃ। 'ಅಸ್ತ್ಯತ್ರ ತವ ಪಿತಾ ರಾಜಾ' ಇತ್ಯಾದಿಷು ಸಿದ್ಧ ಏವ ತಾತ್ಪರ್ಯದರ್ಶನಾತ್ ।**

**ನ ಚ ತತ್ರ ಕಾರ್ಯೇ ತಾತ್ಪರ್ಯಂ ಕಲ್ಪಯಿತುಂ ಯುಕ್ತಂ । ಸುಖ ಸಾಧನತ್ವ ಜ್ಞಾನೇನೈವ ಪ್ರವೃತ್ತ್ಯುಪಪತ್ತೇಃ ವಾಕ್ಯಸ್ಯ ಸ್ವಾರ್ಥಮಾತ್ರ ಪರ್ಯವಸಾನಾತ್ । ಅಧಿಕ ಕಲ್ಪನಾಯಾಮಶ್ರುತ ಕಲ್ಪನಾಪ್ರಸಕ್ತಿಃ ।**

**ಅನುವಾದ**—ಸಿದ್ಧವಾದ ವಸ್ತುವಿನಲ್ಲಿ ವಾಕ್ಯಕ್ಕೆ ತಾತ್ಪರ್ಯವೇ ಇಲ್ಲವೆಂದು ಹೇಳುವುದು ಸರಿಯಲ್ಲ. ಬಾಲ್ಯದಲ್ಲಿಯೇ ತಂದೆತಾಯಿಗಳಿಂದ ಅಗಲಿದ ರಾಜ ಕುಮಾರನು ಇತರ ಬಾಲಕರನ್ನು ನೋಡಿ ಅವರಂತೆ ತನಗೂ ತಂದೆತಾಯಿಗಳು ಇರ ಬೇಕೆಂದು ಊಹಿಸಿ, 'ಅವರು ಯಾರು? ಹೇಗಿದ್ದಾರೆ? ಎಲ್ಲಿದ್ದಾರೆ?' ಎಂದು ತಿಳಿದು ಕೊಳ್ಳಲು ಅಪೇಕ್ಷಿಸಿದಾಗ 'ಈ ದೇಶದ ರಾಜನು ನಿನ್ನ ತಂದೆ' ಎಂದು ಮುಂತಾಗಿ ಆ ಬಾಲಕನಿಗೆ ತಿಳಿದವನು ಹೇಳುವ ವಾಕ್ಯಕ್ಕೆ ಸಿದ್ಧವಾದ ಅರ್ಥದಲ್ಲಿಯೇ ತಾತ್ಪರ್ಯವು ಕಂಡುಬರುತ್ತದೆ. ಅಲ್ಲಿಯೂ ಕೂಡ 'ನೀನು ಅಲ್ಲಿಗೆ ಹೋಗು ಅವನನ್ನು ನೋಡು' ಎಂದು ಅಧ್ಯಾಹಾರ ಮಾಡಿ 'ಗಮನ' 'ದರ್ಶನ'ರೂಪವಾದ ಕಾರ್ಯದಲ್ಲಿಯೇ ತಾತ್ಪರ್ಯವನ್ನು ಹೇಳುವುದು ಸರಿಯಲ್ಲ. ಒಂದು ಕಾರ್ಯವನ್ನು ಸುಖಸಾಧನ ಎಂದು ತಿಳಿಯುವುದರಿಂದಲೇ ಪ್ರವೃತ್ತಿ ಉಂಟಾಗುತ್ತದೆ. ಹೀಗೆ ವಾಕ್ಯವು ಸಿದ್ಧವಾದ ಅರ್ಥವನ್ನು ಮಾತ್ರ ಹೇಳಿದರೂ ಪ್ರವೃತ್ತಿಕಾರಣವಾಗುವುದರಿಂದ 'ವಾಕ್ಯಪ್ರಯೋ ಗವು ಸಾರ್ಥಕವಾಗುತ್ತದೆ, ಅದು ಕಾರ್ಯವನ್ನೇ ತಿಳಿಸಬೇಕೆಂದೇನೂ ಇಲ್ಲ. ಹೀಗಿ ದ್ದರೂ 'ರಾಜನು ನಿನ್ನ ತಂದೆ' ಎಂಬ ವಾಕ್ಯದಲ್ಲಿಲ್ಲದ ಹೋಗು, ನೋಡು ಮುಂತಾದ ಪದಗಳನ್ನು ಕಲ್ಪಿಸಿಕೊಂಡರೆ 'ಅಶ್ರುತಕಲ್ಪನಾ' ಎಂಬ ದೋಷ ಬರುತ್ತದೆ.

**ವಿವರಣೆ**—"'ತತ್ತ್ವಮಸಿ' ಮೊದಲಾದ ವೇದವಾಕ್ಯವು ಜೀವಬ್ರಹ್ಮಭೇದವನ್ನು ತಿಳಿಸುತ್ತದೆ ಎಂದು ಹೇಳಿದುದಕ್ಕೆ ಪ್ರಾಭಾಕರರು ಆಕ್ಷೇಪಿಸುತ್ತಾರೆ–"ನಮ್ಮ ಪ್ರಯತ್ನ ದಿಂದಾಗುವ ಕ್ರಿಯೆ ಮತ್ತು ಅದಕ್ಕೆ ಸಂಬಂಧಿಸಿದ ವಸ್ತುಗಳನ್ನೇ ಬೋಧಿಸುವುದು ವಾಕ್ಯಗಳ ಉದ್ದೇಶ. ಭೇದ ಮೊದಲಾದವು ನಮ್ಮ ಪ್ರಯತ್ನದಿಂದಾಗುವ ವಸ್ತು ಗಳಲ್ಲ. ಅವು ಸಿದ್ಧವಸ್ತುಗಳು. ಆದ್ದರಿಂದ ಅವುಗಳಲ್ಲಿ ವೇದವಾಕ್ಯಗಳಿಗೆ ತಾತ್ಪರ್ಯ ವಿರಲು ಸಾಧ್ಯವಿಲ್ಲ" ಎಂದು. ಈ ಆಕ್ಷೇಪ ಸರಿಯಲ್ಲ. ವಾಕ್ಯವು 'ಕಾರ್ಯ'ವನ್ನು ತಿಳಿಸಿಯೇ ಸಾರ್ಥಕತೆಯನ್ನು ಪಡೆಯಬೇಕೆಂದೇನೂ ಇಲ್ಲ. ಸಿದ್ಧವಾದ ವಸ್ತುಗಳನ್ನು ತಿಳಿಸಿದಾಗಲೂ ನಮ್ಮ ಕುತೂಹಲವು ಉಪಶಮನಗೊಳ್ಳುತ್ತದೆ. ಬಾಲ್ಯದಿಂದಲೂ ಹೆತ್ತವರನ್ನು ಕಾಣದ ಬಾಲಕ ಅವರಿಗಾಗಿ ಚಡಪಡಿಸುತ್ತಿರುವಾಗ 'ಇವರೇ ನಿನ್ನ ತಂದೆತಾಯಂದಿರು' ಎಂದು ಹೇಳಿದಾಗ ಸಮಾಧಾನಗೊಳ್ಳುತ್ತಾನೆ. ಇಲ್ಲಿ ವಾಕ್ಯ ಯಾವ ಕಾರ್ಯವನ್ನೂ ತಿಳಿಸುತ್ತಿಲ್ಲ. ಆದರೂ ಸಾರ್ಥಕತೆಯನ್ನು ಪಡೆದಿದೆ. ಆದ್ದ ರಿಂದ 'ವಾಕ್ಯವು ಕಾರ್ಯವನ್ನೇ ಬೋಧಿಸಬೇಕು' ಎಂಬ ನಿರ್ಬಂಧ ಯುಕ್ತವಲ್ಲ. 'ವಾಕ್ಯವನ್ನು ಮತ್ತೊಬ್ಬರಿಗಾಗಿ ಪ್ರಯೋಗ ಮಾಡಲಾಗುತ್ತದೆ. ಅದು ಸಾರ್ಥಕವಾಗ

ಬೇಕಾದರೆ ಆದರಿಂದ ಅವರಲ್ಲಿ ಪ್ರವೃತ್ತಿ ಅಥವಾ ನಿವೃತ್ತಿ ಉಂಟಾಗಬೇಕು. ವಾಕ್ಯವು 'ಇದನ್ನು ಮಾಡುವುದು ಸಾಧ್ಯ, ಇದು ಅಸಾಧ್ಯ' ಎಂದು ತಿಳಿಸಿದರೆ ಮಾತ್ರ ಪ್ರವೃತ್ತಿ ನಿವೃತ್ತಿಗಳು ಆಗುತ್ತವೆ. ಆದ್ದರಿಂದ 'ಇವರು ನಿನ್ನ ತಂದೆ' ಎಂದು ತಿಳಿಸುವ ವಾಕ್ಯ ದಲ್ಲೂ 'ಹೋಗು, ಅವರನ್ನು ನೋಡು' ಎಂಬ ಪದಗಳನ್ನು ಜೋಡಿಸಿಕೊಂಡೇ ಸಾರ್ಥಕತೆಯನ್ನು ಹೇಳಬೇಕು'ಎಂದು ಮೀಮಾಂಸಕರ ವಾದ. ಆದರೆ ವಿಧಿ-ನಿಷೇಧ ಗಳನ್ನು ತಿಳಿಸಿಯೇ ವಾಕ್ಯವು ಪ್ರವೃತ್ತಿ ಅಥವಾ ನಿವೃತ್ತಿಗೆ ಕಾರಣವಾಗಬೇಕಿಲ್ಲ. ಸುಖಕ್ಕೆ ಸಾಧನವಾದ ವಸ್ತುವನ್ನು ತಿಳಿಸುವುದರಿಂದ ಪ್ರವೃತ್ತಿಗೂ ದುಃಖಕ್ಕೆ ಸಾಧನ ವಾದುದನ್ನು ತಿಳಿಸುವುದರಿಂದ ನಿವೃತ್ತಿಗೂ ಕಾರಣವಾಗುತ್ತದೆ. ತಂದೆತಾಯಂದಿರು ಆ ಬಾಲಕನಿಗೆ ಸುಖಸಾಧನರಾದ್ದರಿಂದ ಅವರನ್ನು ಪರಿಚಯಿಸಿಕೊಡುವುದರಿಂದಲೇ ಆ ವಾಕ್ಯದ ಉದ್ದೇಶವು ಪೂರ್ಣಗೊಳ್ಳುತ್ತದೆ. ಹೀಗಿದ್ದರೂ 'ಹೋಗು, ಅವರನ್ನು ನೋಡು' ಎಂದು ಇಲ್ಲದ ಪದಗಳನ್ನು ಕಲ್ಪಿಸಿಕೊಂಡು ವಾಕ್ಯದ ಉದ್ದೇಶ ಪರ್ಯವ ಸಾನವನ್ನು ಹೇಳುವುದು 'ಅಶ್ರುತಕಲ್ಪನಾ' ದೋಷವೆನಿಸುವುದು.

**ಭಾಷ್ಯ—ಯಜೇತ ಇತ್ಯಾದಿಷ್ವಪಿ ಯಜನಾದೇಃ ಸುಖಸಾಧನತಾಮಾತ್ರಂ ಪ್ರತೀಯತೇ । ನ ಶಬ್ದಸ್ಯ ಪ್ರೇರಕತಾ । ವಾಕ್ಯಮಾತ್ರಸ್ಯ ಪ್ರೇರಕತ್ವೇ ಸರ್ವೈರ್ವಿಹಿತಮನಿಷ್ಟಸಾಧನಮಪಿ ಕ್ರಿಯೇತ ।**

**ಅನುವಾದ**—'ಜೋತಿಷ್ಟೋಮೇನ ಸ್ವರ್ಗಕಾಮೋ ಯಜೇತ' ಎಂಬ ವೇದ ವಾಕ್ಯದ 'ಯಜೇತ' ಎಂಬ ಪದದಲ್ಲಿರುವ 'ಲಿಙ್' ಪ್ರತ್ಯಯವು 'ಯಜ್' ಧಾತುವಿನ ಅರ್ಥವಾದ ಯಾಗವನ್ನು 'ಅದು ಇಷ್ಟಸಾಧನ' ಎಂದಿಷ್ಟೇ ತಿಳಿಸುತ್ತದೆ ಹೊರತು, ಆ ಪ್ರತ್ಯಯವು 'ಯಾಗವನ್ನು ಮಾಡಲು ಸಾಧ್ಯ' ಎಂದು ಬೋಧಿಸುವುದಿಲ್ಲ. ವಾಕ್ಯವು 'ಇದು ಇಷ್ಟಸಾಧನ' ಎಂದು ತಿಳಿಸದೆಯೇ 'ಇದು ನಿನಗೆ ಮಾಡಲು ಸಾಧ್ಯ' ಎಂದು ತಿಳಿಸುವುದರಿಂದಲೇ ಪ್ರವೃತ್ತಿಗೆ ಕಾರಣವಾಗುವುದಾದರೆ ವಿಷವನ್ನು ತಿನ್ನು ಎಂದು ಮುಂತಾಗಿ ಯಾರೇ ವಿಧಿಸಿದರೂ ಅಂತಹ ಅನಿಷ್ಟ ಸಾಧನದಲ್ಲಿಯೂ ಪ್ರವೃತ್ತಿಯು ಆಗಬೇಕಾದೀತು.

**ನಿವರಣೆ**—"'ಯಜೇತ' ಮುಂತಾದ ವಿಧಿವಾಕ್ಯಗಳನ್ನು ಕೇಳಿದಾಗ ಯಾಗವೇ ಮೊದಲಾದ ಕ್ರಿಯೆಯಲ್ಲಿ ಪ್ರವೃತ್ತಿ ಉಂಟಾಗುತ್ತದೆ. ಏಕೆಂದರೆ, 'ಯಾಗವು ಕೃತಿ ಸಾಧ್ಯ' ಎಂದು 'ಯಜೇತ' ಎಂಬ ಪದ ತಿಳಿಸುತ್ತದೆ. ಅದನ್ನು ಕೇಳಿದಾಗ ನಮ್ಮಲ್ಲಿ ಪ್ರವೃತ್ತಿ ಉಂಟಾಗುತ್ತದೆ. ಹೀಗೆ ನಮ್ಮ ಪ್ರವೃತ್ತಿಗೆ ಕಾರಣವಾದುದು ಕಾರ್ಯತಾ ಜ್ಞಾನ–ಇದು ನನ್ನ ಕೃತಿಯಿಂದ ಸಾಧ್ಯ ಎಂಬ ತಿಳುವಳಿಕೆ". ಇದು ಪ್ರಾಭಾಕರರ ಅಭಿ ಪ್ರಾಯ. ಆದರೆ ವಸ್ತುತಃ ನಮ್ಮ ಪ್ರವೃತ್ತಿಗೆ ಕಾರಣವಾದುದು ಇಷ್ಟಸಾಧನತಾಜ್ಞಾನ

'ಇದು ನನಗೆ ಸುಖಸಾಧನವಾಗಿದೆ' ಎಂಬ ತಿಳುವಳಿಕೆ. ಈ ಜ್ಞಾನವಿಲ್ಲದೆ ಪ್ರವೃತ್ತಿ ಉಂಟಾಗುವುದಿಲ್ಲ. ಸುಖಸಾಧನ ಎಂದು ತಿಳಿದರೆ ಮಾತ್ರ 'ಇದನ್ನು ಮಾಡಬೇಕು' ಎಂಬ ಬುದ್ಧಿ ಉಂಟಾಗುತ್ತದೆ. ಅದರಿಂದ ಕಾರ್ಯದಲ್ಲಿ ತೊಡಗುತ್ತೇವೆ. ಆದ್ದರಿಂದ 'ಲಿಙ್' ಪ್ರತ್ಯಯವು ಪ್ರವೃತ್ತಿಗೆ ಕಾರಣವಾಗಬೇಕಾದರೆ ಅದು ಇಷ್ಟಸಾಧನತ್ವವನ್ನೇ ತಿಳಿಸಬೇಕು, ಕಾರ್ಯತ್ವವನ್ನಲ್ಲ. ಕಾರ್ಯತಾಜ್ಞಾನವೇ ಪ್ರವೃತ್ತಿಗೆ ಕಾರಣ, ಅದನ್ನೇ ಪ್ರತ್ಯಯವು ತಿಳಿಸುತ್ತದೆ ಎಂದು ಹೇಳುವುದಾದರೆ 'ವಿಷವನ್ನು ತಿನ್ನು'ಎಂದು ಯಾರೇ ಹೇಳಿದರೂ 'ವಿಷ ಭಕ್ಷಣವು ನನ್ನ ಕೃತಿಯಿಂದ ಸಾಧ್ಯ' ಎಂದು ತಿಳಿಯುವುದ ರಿಂದ ವಿಷವನ್ನು ತಿನ್ನಲೂ ಪ್ರವೃತ್ತಿಯಾಗಬೇಕಾದೀತು. ಹೀಗೆ ಇಷ್ಟಸಾಧನತಾ ಜ್ಞಾನವೇ ಪ್ರವೃತ್ತಿಗೆ ಕಾರಣವಾದ್ದರಿಂದ ವೇದವು ಯಾಗದಲ್ಲಿ ಪ್ರವೃತ್ತಿಯನ್ನುಂಟು ಮಾಡಿಸಬೇಕಾದರೆ 'ಯಾಗವು ಇಷ್ಟಸಾಧನ'ವೆಂದೇ ತಿಳಿಸಬೇಕು. ಇದನ್ನು ತಿಳಿಸಲು ಲಿಙ್ ಪದದ ಹೊರತು ಬೇರೆ ಪದಗಳಿಲ್ಲ. ಆದ್ದರಿಂದ ಲಿಙ್ ಪ್ರತ್ಯಯಕ್ಕೆ 'ಇಷ್ಟ ಸಾಧನತ್ವ' ಎಂಬ ಅರ್ಥವನ್ನಂತೂ ಹೇಳಲೇಬೇಕು. ಪುನಃ ಅದಕ್ಕೆ 'ಕಾರ್ಯತ್ವ' ಎಂಬ ಅರ್ಥವನ್ನು ಹೇಳುವುದು ಅನಾವಶ್ಯಕ. ಲಿಙ್ ಪ್ರತ್ಯಯವು 'ಯಾಗವು ಇಷ್ಟ ಸಾಧನ' ಎಂದು ತಿಳಿಸಿದರೆ ಅದು ನಮ್ಮ ಯತ್ನದಿಂದ ಸಾಧ್ಯ ಹೌದೋ ಅಲ್ಲವೋ ಎಂಬುದನ್ನು ನಮ್ಮ ಬುದ್ಧಿಯೇ ನಿರ್ಧರಿಸುತ್ತದೆ. ಅದನ್ನೂ ಪ್ರತ್ಯಯವೇ ಹೇಳ ಬೇಕಾಗಿಲ್ಲ. ಆದ್ದರಿಂದ ಲಿಙ್ ಮೊದಲಾದ ಪ್ರತ್ಯಯಗಳಿಗೆ ಇಷ್ಟಸಾಧನತ್ವವೇ ಅರ್ಥ, ಕಾರ್ಯತ್ವವಲ್ಲ,

**ಭಾಷ್ಯ**—**ವ್ಯುತ್ಪತ್ತಿರಪಿ ಸಿದ್ಧೇ ಸಾಂಗುಲಿನಿರ್ದೇಶಾದಿನಾ ಯುಜ್ಯತೇ । ನ ಚ ಕುತ್ರಚಿತ್ ಸುಖಸಾಧನಂ ವಿನಾ ಕಾರ್ಯಾನ್ವಿತಂ ವಿದ್ಯತೇ । ಲಿಙಾದ್ಯ-ರ್ಥೋಽಪಿ ಸುಖಸಾಧನತ್ವಮೇವ । ನ ಚ ಕಾರ್ಯಾನ್ವಿತ ಏವ ತಾತ್ಪರ್ಯಮಿತ್ಯತ್ರ ಕಿಂಚಿನ್ಮಾನಮ್ ।**

**ಅನುವಾದ**—ಭಾಷೆಯನ್ನು ಕಲಿಯುತ್ತಿರುವ ಮಗುವಿಗೆ ಜನರನ್ನು ಬೆಟ್ಟು ಮಾಡಿ ತೋರಿಸಿ 'ಇವನು ತಂದೆ, ಇವನು ಅಣ್ಣ' ಎಂದು ಮುಂತಾಗಿ ಹೇಳುವುದ ರಿಂದ ತಂದೆ ಅಣ್ಣ ಮುಂತಾದ 'ಸಿದ್ಧ' ವಸ್ತುಗಳಲ್ಲಿಯೇ ತಂದೆ ಅಣ್ಣ ಮುಂತಾದ ಶಬ್ದಗಳ ವ್ಯುತ್ಪತ್ತಿಯುಂಟಾಗುತ್ತದೆ. ಸುಖಸಾಧನವಾಗಿರದೆ ಕಾರ್ಯವಾಗಿರುವ ವಸ್ತು ಎಲ್ಲೂ ಇಲ್ಲವಾದ್ದರಿಂದ ಕಾರ್ಯಾನ್ವಿತವಾದ ವಸ್ತುವೂ ಇಲ್ಲ. ಲಿಙಾದಿ ಗಳಿಗೂ ಇಷ್ಟಸಾಧನತ್ವವೇ ಅರ್ಥ. 'ವೇದದಲ್ಲಿರುವ ಶಬ್ದಗಳಲ್ಲಿ ಲಿಙಾದಿ ಪ್ರತ್ಯಯ ಗಳಿಗೆ ಕಾರ್ಯದಲ್ಲಿಯೂ ಉಳಿದ ಪದಗಳಿಗೆ ಕಾರ್ಯಾನ್ವಿತದಲ್ಲಿಯೂ ತಾತ್ಪರ್ಯವಿದೆ' ಎಂಬ ವಿಷಯದಲ್ಲಿಯೂ ಯಾವ ಪ್ರಮಾಣವೂ ಇಲ್ಲ.

**ವಿವರಣೆ**—ಶಬ್ದದಿಂದ ಅರ್ಥದ ಜ್ಞಾನ ಬರಬೇಕಾದರೆ ಆ ಶಬ್ದಕ್ಕೂ

ಅರ್ಥಕ್ಕೂ ಇರುವ ಸಂಬಂಧವು ತಿಳಿದಿರಬೇಕು. ಇದಕ್ಕೆ ವ್ಯುತ್ಪತ್ತಿ ಎಂದು ಹೆಸರು. ಈ ವ್ಯುತ್ಪತ್ತಿಯು ಬಾಲಕನಿಗೆ ಹಿರಿಯರು ನಡೆಸುವ ವ್ಯವಹಾರದಿಂದ ಬರುತ್ತದೆ. ಹಿರಿಯರು ನೀಡುವ ಆದೇಶವನ್ನು ಅನುಸರಿಸಿ ಕಿರಿಯರು ನಡೆಸುವ ಚಲನವಲನ ಗಳನ್ನು ಆಸಕ್ತಿಯಿಂದ ನಿರೀಕ್ಷಿಸಿದ ಬಾಲಕ ಯಾವ ಶಬ್ದಕ್ಕೆ ಏನು ಅರ್ಥ ಎಂದು ತಿಳಿದುಕೊಳ್ಳುತ್ತಾನೆ. ಹಿರಿಯರ ಈ ವ್ಯವಹಾರವೆಲ್ಲವೂ ಕಾರ್ಯಸಂಬಂಧಿಯಾಗಿಯೇ ಇರುವುದರಿಂದ 'ಶಬ್ದವು ಕಾರ್ಯ ಅಥವಾ ಕಾರ್ಯಕ್ಕೆ ಸಂಬಂಧಿಸಿದ ಅರ್ಥವನ್ನು ತಿಳಿಸುತ್ತದೆ' ಎಂದು ಬಾಲಕ ನಿರ್ಧರಿಸುತ್ತಾನೆ. ಅದಕ್ಕೆ ಅನುಗುಣವಾಗಿ 'ವೇದ ದಲ್ಲಿರುವ ಶಬ್ದಗಳೂ ಇದೇರೀತಿ ಕಾರ್ಯ, ಕಾರ್ಯಾನ್ವಿತ ಅರ್ಥಗಳನ್ನೇ ಹೇಳುತ್ತವೆ' ಎಂದು ತಿಳಿಯುತ್ತಾನೆ. ಹೀಗಿರುವಾಗ 'ಯಜೇತ' ಮುಂತಾದ ವೈದಿಕ ಶಬ್ದಗಳು ಕಾರ್ಯವನ್ನು ಬೋಧಿಸದೆ ಇಷ್ಟಸಾಧನತ್ವವನ್ನು ಬೋಧಿಸುವುದು ಹೇಗೆ ? ಇದು ಪ್ರಾಭಾಕರರ ಪ್ರಶ್ನೆ. ಅದಕ್ಕೆ ಉತ್ತರ–'ಮಗುವು ಹಿರಿಯರ ವ್ಯವಹಾರದಿಂದ ಆರಂಭದಲ್ಲೇ ಪದಗಳಿಗೆ ಕಾರ್ಯವು ಅರ್ಥ ಎಂದು ತಿಳಿಯುತ್ತದೆ' ಎನ್ನುವುದು ಸರಿ ಯಲ್ಲ. ಹಿರಿಯರು ಮಗುವನ್ನು ಕೂಡಿಸಿಕೊಂಡು ಕೈಮಾಡಿ ತೋರಿಸಿ 'ಇವನು ನಿನ್ನ ತಂದೆ' ಎಂದು ಅನೇಕ ಬಾರಿ ಹೇಳಿದಾಗ 'ತಂದೆ ಎಂಬ ಶಬ್ದಕ್ಕೆ ಈ ವ್ಯಕ್ತಿಯು ಅರ್ಥ' ಎಂದು ಮಗು ತಿಳಿದುಕೊಳ್ಳುತ್ತದೆ. ಹೀಗೆ ಕ್ರಮೇಣ ಒಂದೊಂದೇ ಶಬ್ದ ಗಳಿಗೆ ಬೇರೆ ಬೇರೆ ಅರ್ಥಗಳೊಂದಿಗಿರುವ ಸಂಬಂಧವನ್ನು ತಿಳಿದುಕೊಳ್ಳುತ್ತದೆ. ಆದ್ದ ರಿಂದ ಪ್ರಾಥಮಿಕ ವ್ಯುತ್ಪತ್ತಿ ಸಿದ್ಧವಸ್ತುಗಳಲ್ಲಿ ಉಂಟಾಗುತ್ತದೆಯೇ ಹೊರತು ಕಾರ್ಯದಲ್ಲಿ ಅಲ್ಲ.

ಪ್ರಾಭಾಕರರು ಪ್ರಶ್ನೆ ಮಾಡುತ್ತಾರೆ–'ಯಾಗವು ನಮ್ಮ ಕೃತಿಯಿಂದ ಸಾಧ್ಯ ವಾಗುತ್ತದೆ. ಕೃತಿಯ ಉದ್ದೇಶವೂ ಯಾಗವೇ. ಇಷ್ಟಕ್ಕೆ ಸಾಧನವಾದುದೂ ಅದೇ. ಹೀಗೆ ಕೃತಿಸಾಧ್ಯತ್ವ, ಕೃತಿಉದ್ದೇಶ್ಯತ್ವ, ಇಷ್ಟಸಾಧನತ್ವ ಇವು ಮೂರು ಯಾಗ ದಲ್ಲಿಯೇ ಇರುವ ಧರ್ಮಗಳು. ಇವುಗಳಲ್ಲಿ ಕೃತಿಸಾಧ್ಯತ್ವ ಮತ್ತು ಕೃತಿಉದ್ದೇಶತ್ವ ಗಳೇ ಜೊತೆಗೂಡಿ ಕಾರ್ಯತ್ವವೆನಿಸುತ್ತವೆ. ಅರ್ಥಾತ್ ಕೃತಿಯಿಂದ ಸಾಧಿಸಲ್ಪಡುವ ಕೃತಿಗೆ ಉದ್ದೇಶವಾಗಿರುವ ವಸ್ತುವೇ ಕಾರ್ಯವೆನಿಸುತ್ತದೆ. ವಿಷಭಕ್ಷಣ ನಮ್ಮ ಕೃತಿಯಿಂದ ಸಾಧ್ಯವಾದರೂ ಅದು ಇಷ್ಟಸಾಧನವಲ್ಲವಾದ್ದರಿಂದ ನಮ್ಮ ಕೃತಿಯ ಉದ್ದೇಶವಾಗದು. ಆದ್ದರಿಂದ ಅದು ಕಾರ್ಯವಲ್ಲ. ಚಂದ್ರಮಂಡಲವನ್ನು ತರುವುದು ಇಷ್ಟಕ್ಕೆ ಸಾಧನವಾದುದರಿಂದ ನಮ್ಮ ಕೃತಿಯ ಉದ್ದೇಶವಾಗಿರಬಹು ದಾದರೂ ಅದು ನಮ್ಮ ಕೃತಿಯಿಂದ ಅಸಾಧ್ಯವಾದುದು. ಆದ್ದರಿಂದ ಅದೂ ಕಾರ್ಯ ವಲ್ಲ. ಇಷ್ಟಸಾಧನತ್ವವು ಕೃತಿಯ ಉದ್ದೇಶ ಯಾವುದು ಎಂದು ನಿರ್ಧರಿಸಲು ನಿಮಿತ್ತ ಮಾತ್ರವಾಗಿ ಇರುತ್ತದೆ ಹೊರತು ಅದೂ ಕಾರ್ಯತ್ವವೆನಿಸುವುದಿಲ್ಲ' ಎಂದು. ಆದರೆ ಇದೂ ಸರಿಯಲ್ಲ. ಇಷ್ಟಸಾಧನತ್ವವೇ ಕಾರ್ಯತ್ವ. ಮೀಮಾಂಸಕರು ಹೇಳು

ವಂತೆ ಇಷ್ಟಸಾಧನತ್ವವು ಕೃತ್ಯುದ್ದೇಶ್ಯತ್ವಕ್ಕೆ ನಿಮಿತ್ತವಲ್ಲ. 'ನಮ್ಮ ಕೃತಿಯ ಉದ್ದೇಶ ಯಾಗ' ಎಂದರೆ 'ನಮ್ಮ ಇಷ್ಟಕ್ಕೆ ಸಾಧನವಾದುದು ಯಾಗ'ಎಂದೇ ಅರ್ಥ. ಆದ್ದರಿಂದ ಕೃತ್ಯುದ್ದೇಶ್ಯತ್ವ ಮತ್ತು ಇಷ್ಟಸಾಧನತ್ವ ಇವೆರಡೂ ಬೇರೆಯಲ್ಲ. ಇನ್ನು ಲಿಙ್ಪ್ರತ್ಯಯಕ್ಕೆ ಕೃತಿಸಾಧ್ಯತ್ವವು ಅರ್ಥವೇ ಅಲ್ಲ. 'ಕಾರ್ಯವು ನಮ್ಮ ಕೃತಿ ಇದ್ದಾಗ ಆಗುತ್ತದೆ, ಕೃತಿ ಇಲ್ಲದಿದ್ದರೆ ಆಗುವುದಿಲ್ಲ' ಎಂಬ ಅನ್ವಯ ವ್ಯತಿರೇಕಗಳಿಂದಲೇ 'ಕಾರ್ಯವು ಕೃತಿ ಸಾಧ್ಯ' ಎಂದು ತಿಳಿದು ಬರುತ್ತದೆ. ಅದನ್ನು ಪ್ರತ್ಯಯವು ಹೇಳ ಬೇಕಾಗಿಲ್ಲ. ಹೀಗೆ ಮೀಮಾಂಸಕರು ಹೇಳುವ ಕಾರ್ಯತ್ವದ ಒಂದು ಅಂಶ ಲಿಙ್ ಪ್ರತ್ಯಯದ ಅರ್ಥವೇ ಅಲ್ಲ; ಮತ್ತೊಂದು ಅಂಶವಾದ ಕೃತ್ಯುದ್ದೇಶ್ಯತ್ವವೂ ಇಷ್ಟ ಸಾಧನತ್ವವೂ ಒಂದೇ, ಬೇರೆಯಲ್ಲ. ಆದ್ದರಿಂದ ಇಷ್ಟಸಾಧನತಾಕ್ಕಿಂತ ಬೇರೆಯಾದ ಕಾರ್ಯತ್ವವೇ ಇಲ್ಲದಿರುವುದರಿಂದ ಲಿಙಾದಿಗಳಿಗೆ ಇಷ್ಟಸಾಧನತ್ವವೇ ಅರ್ಥ.

**ಭಾಷ್ಯ—ಸುಖಸಾಧನಮೇವೈಕಂ ನೃಣಾಂ ವೇದಃ ಪ್ರದರ್ಶಯೇತ್ ।**
**ನ ಕುರ್ವಿತಿ ನರಂ ಕ್ವಾಪಿ ಪ್ರೇರಯತ್ಯತ್ರ ಕಂಚನ ।**
**ಸುಖಸಾಧನತಾಜ್ಞಾನಾತ್ ಸುಖಪ್ರಾಪ್ತ್ಯರ್ಥಮಿಚ್ಛಯಾ ।**
**ಪ್ರವರ್ತತೇ ತತೋ ವೇದಃ ಸಿದ್ಧಸ್ಯೈವ ಪ್ರದರ್ಶಕಃ ।**
**ನ ತು ಕಾರಕತಾಂ ಕ್ವಾಪಿ ವೇದಃ ಪ್ರಾಪ್ನೋತಿ ಕಸ್ಯಚಿತ್ ।**
**ಇತಿ ಬ್ರಾಹ್ಮೇ ।**

**ಅತಸ್ತದ್ವಿರೋಧಿ ಕಥನಂ ಮೋಹಹತ ಏವ ।**

**ಅನುವಾದ**–"ಕಾರ್ಯದಲ್ಲಿ ಮತ್ತು ಕಾರ್ಯಾನ್ವಿತದಲ್ಲಿ ವೇದಕ್ಕೆ ತಾತ್ಪರ್ಯವಿದೆ ಎಂಬಲ್ಲಿ ಪ್ರಮಾಣವಿಲ್ಲವೆಂದಿಷ್ಟೇ ಅಲ್ಲ. ಅದು ಪ್ರಮಾಣವಿರುದ್ಧವೂ ಕೂಡ. 'ವೇದವು ಸಾಮಾನ್ಯಾಧಿಕಾರಿಗಳಿಗೆ 'ಹರಿಯು ಇಷ್ಟಸಾಧನ' ಎಂದೇ ತಿಳಿಸುತ್ತದೆ, ಉತ್ತಮಾಧಿ ಕಾರಿಗಳಿಗೆ ಹರಿ ಎಂಬ ಇಷ್ಟವಸ್ತುವನ್ನೇ ಬೋಧಿಸುತ್ತದೆ ಹೊರತು, ಯಾರನ್ನೂ 'ನೀನು ಇಂತಹುದನ್ನು ಮಾಡು'ಎಂದು ಪ್ರಾಭಾಕರರು ಹೇಳುವಂತೆ ಕಾರ್ಯದಲ್ಲಿ ಪ್ರೇರಿ ಸುವುದಿಲ್ಲ. ಹರಿಯು ಸುಖಕ್ಕೆ ಕಾರಣನೆಂದು ತಿಳಿದವನು ಸುಖಪ್ರಾಪ್ತಿಯ ಇಚ್ಛೆ ಯಿಂದ ಪ್ರವೃತ್ತಿ ಮಾಡುತ್ತಾನೆ. ಆದ್ದರಿಂದ ವೇದವು ಸಿದ್ಧವಾದ ವಸ್ತುವನ್ನೇ ಬೋಧಿಸುತ್ತದೆ. 'ಇದನ್ನು ಮಾಡು' ಎಂದು ಬೋಧಿಸಿ ಯಾರಿಗೂ ಪ್ರವರ್ತಕ ವಾಗುವುದಿಲ್ಲ" ಎಂದು ಬ್ರಾಹ್ಮಪುರಾಣದಲ್ಲಿ ಹೇಳಿದೆ. ಆದ್ದರಿಂದ ಇದಕ್ಕೆ ವಿರುದ್ಧ ವಾಗಿ ವೇದವು ಕಾರ್ಯ ಮತ್ತು ಕಾರ್ಯಾನ್ವಿತವನ್ನೇ ಬೋಧಿಸುತ್ತದೆ ಎಂದು ಹೇಳುವುದು ಭ್ರಾಂತಿಯಿಂದಲೇ ಸರಿ.

**ಭಾಷ್ಯ–ಕಾರ್ಯಾನ್ವಿತೇ ಶಕ್ತಿರಿತಿ ವದತಾ ಸಿದ್ಧವಾಕ್ಯಾನಾಂ ಪ್ರಾಮಾಣ್ಯಮಂಗೀ–ಕೃತಂ ಚ । ಅನ್ಯಥಾ 'ವಸಂತೇ ವಸಂತೇ ಜ್ಯೋತಿಷಾ ಯಜೇತ'**

**ಇತ್ಯಾದೌ ವಸಂತಾದಿಲಕ್ಷಣವಾಕ್ಯಾನಾಂ ಸ್ಥಾನಾಂತರಸ್ಥಾನಾಂ ಸ್ವಾರ್ಥೇ ಪ್ರಾಮಾಣ್ಯಾಭಾವಾದ್ ವಸಂತಾದ್ಯಸಿದ್ಧೇರ್ಯಾಗಾದ್ಯಸಿದ್ಧಿಃ ।**

**ಕಾರ್ಯಾನ್ವಿತೇ ಶಕ್ತಿರಿತ್ಯುಕ್ತೇ ಕಾರ್ಯಪದಸ್ಯ ಕಾರ್ಯಾನ್ವಯಾಭಾವಾದ-ಶಕ್ತ್ಯಾ ವಿಧ್ಯಾದೇರಸಿದ್ಧಿಶ್ಚ । 'ಕಾರ್ಯಪದಸ್ಯ ಸ್ವತ ಏವ ಶಕ್ತಿರನ್ಯೇಷಾಂ ಕಾರ್ಯಾನ್ವಿತತ್ವೇನ' ಇತ್ಯಂಗೀಕಾರೇ ಕಲ್ಪನಾಗೌರವಮ್ । ಸ್ವಾರ್ಥೇ ಶಕ್ತಿರಿತ್ಯಂಗೀಕಾರೇ ನ ಕಶ್ಚಿದ್ ವಿರೋಧಃ ।**

**ಅನುವಾದ**—ವೇದವು ಕಾರ್ಯಪರವಾದರೂ 'ಆತ್ಮಾನಮುಪಾಸೀತ' ಮೊದಲಾದ ವಿಧಿಗಳಲ್ಲಿ ಉಪಾಸನಾ ವಿಷಯನಾದ ಪರಮಾತ್ಮನನ್ನೂ, ಜೀವಪರಮಾತ್ಮ ಭೇದವನ್ನೂ ತಿಳಿಸುವ 'ಸತ್ಯಂ ಜ್ಞಾನಮನಂತಂ ಬ್ರಹ್ಮ', 'ದ್ವಾಸುಪರ್ಣಾ' ಮೊದಲಾದ ಸಿದ್ಧವಾಕ್ಯಗಳ ಪ್ರಾಮಾಣ್ಯಕ್ಕೆ ಯಾವ ಬಾಧಕವೂ ಇಲ್ಲ. ಏಕೆಂದರೆ ಕಾರ್ಯಾನ್ವಿತದಲ್ಲಿ ಶಕ್ತಿ ಎಂದು ಹೇಳುವ ಪ್ರಾಭಾಕರರೂ ಸಿದ್ಧವಾಕ್ಯಗಳಿಗೆ ಸಿದ್ಧಾರ್ಥದಲ್ಲಿ ತಾತ್ಪರ್ಯವನ್ನು ಅಂಗೀಕರಿಸಿದ್ದಾರೆ. ಇಲ್ಲದಿದ್ದರೆ 'ವಸಂತೇ ವಸಂತೇ ಜ್ಯೋತಿಷಾ ಯಜೇತ' ಮೊದಲಾದ ವಾಕ್ಯಗಳಿಂದ ಯಾಗಸ್ವರೂಪ ಮುಂತಾದವು ಸಿದ್ಧವಾಗುವುದಿಲ್ಲ. ಈ ವಾಕ್ಯದಲ್ಲಿ ಜ್ಯೋತಿಷ್ಟೋಮಯಾಗವನ್ನು ವಸಂತಕಾಲದಲ್ಲಿ ಮಾಡಬೇಕು ಎಂದು ಹೇಳಲಾಗಿದೆ. ವಸಂತಕಾಲದ ಸ್ವರೂಪವನ್ನು ಹೇಳುವ ವಾಕ್ಯ ಈ ಪ್ರಕರಣದಲ್ಲಿ ಇಲ್ಲ. ಬೇರೆ ಸ್ಥಾನದಲ್ಲಿದೆ. ಅದು ಸಿದ್ಧ ಬೋಧಕ ವಾಕ್ಯ. ಅದು ಈ ಪ್ರಕರಣದಲ್ಲಿದ್ದಿದ್ದರೆ ಜ್ಯೋತಿಷ್ಟೋಮದ ಅಂಗವಾಗಿ ವಸಂತಕಾಲವನ್ನು ಹೇಳುವುದರಿಂದ ಕಾರ್ಯಾನ್ವಿತವಾಗಿಯೇ ಅದನ್ನು ಬೋಧಿಸಿದಂತಾಗುತ್ತಿತ್ತು. ಅದು ಬೇರೆ ಪ್ರಕರಣದಲ್ಲಿರುವುದರಿಂದ ಹಾಗೆ ಹೇಳಲು ಬರುವುದಿಲ್ಲ. ಆದ್ದರಿಂದ ಸ್ವತಂತ್ರವಾಗಿ ಸಿದ್ಧಸ್ವರೂಪವನ್ನು ಬೋಧಿಸುವ ವಸಂತಾದಿಲಕ್ಷಣ ವಾಕ್ಯಕ್ಕೆ ವಸಂತಾದಿ ಸಿದ್ಧವಸ್ತುಗಳಲ್ಲಿ ತಾತ್ಪರ್ಯವನ್ನು ಅಂಗೀಕರಿಸಬೇಕು. ಇಲ್ಲದಿದ್ದರೆ ವಸಂತಾದಿ ಸ್ವರೂಪವೇ ಸಿದ್ಧವಾಗುವುದಿಲ್ಲವಾದ್ದರಿಂದ ವಸಂತ ಸಂಬಂಧಿಯಾದ ಯಾಗದ ಸ್ವರೂಪವೂ ಸಿದ್ಧಿಸುವುದಿಲ್ಲ.

ಇನ್ನು ಕಾರ್ಯಾನ್ವಿತದಲ್ಲಿ ಶಕ್ತಿ ಎಂದು ಹೇಳುವುದೂ ಸರಿಯಲ್ಲ. ಏಕೆಂದರೆ ಲಿಙ್ ಕಾರ್ಯವನ್ನು ಮಾತ್ರ ಹೇಳುತ್ತದೆ. ಉಳಿದ ಪದಗಳು ಕಾರ್ಯಾನ್ವಿತವಾದ ಸಿದ್ಧಾರ್ಥವನ್ನು ಹೇಳುತ್ತವೆ. ಕಾರ್ಯಕ್ಕೆ ಕಾರ್ಯಾನ್ವಯವಿಲ್ಲವಾದ್ದರಿಂದ 'ಕಾರ್ಯಾನ್ವಿತೇ ಶಕ್ತಿಃ' ಎಂಬ ನಿಯಮದಂತೆ ಕೇವಲ ಕಾರ್ಯದಲ್ಲಿ ಲಿಙ್‌ಗೇ ಶಕ್ತಿ ಇಲ್ಲ. ಹೀಗಾಗಿ ಲಿಙನಿಂದ ಕಾರ್ಯವೇ ಸಿದ್ಧವಾಗುವುದಿಲ್ಲ. 'ಲಿಙ್‌ಗೆ ಕಾರ್ಯದಲ್ಲಿ ಶಕ್ತಿ, ಉಳಿದ ಪದಗಳಿಗೆ ಕಾರ್ಯಾನ್ವಿತದಲ್ಲಿ ಶಕ್ತಿ' ಎಂದೇ ನಿಯಮವನ್ನು ಒಪ್ಪಿದರೆ ಎರಡು ಪ್ರಯೋಜಕಗಳನ್ನು ಅಂಗೀಕರಿಸುವುದರಿಂದ ಕಲ್ಪನಾಗೌರವ ಬರುತ್ತದೆ. ಎಲ್ಲಾ ಪದಗಳಿಗೂ

ಯೋಗ್ಯೇತರಾನ್ವಿತವಾದ ಸ್ವಾರ್ಥದಲ್ಲಿ ಶಕ್ತಿಯನ್ನು ಒಪ್ಪಿದರೆ ಯಾವ ದೋಷವೂ ಬರುವುದಿಲ್ಲ.

**ವಿವರಣೆ**—'ವೈದಿಕ ಪದಗಳು ಕಾರ್ಯಕ್ಕೆ ಸಂಬಂಧಿಸಿದ ವಸ್ತುಗಳನ್ನೇ ತಿಳಿಸುತ್ತವೆ' ಎಂದು ಮೀಮಾಂಸಕರು ಹೇಳುತ್ತಾರೆ. ಆದರೂ 'ಕಾರ್ಯದ ಸಂಬಂಧವಿಲ್ಲದ ಸಿದ್ಧರೂಪವಾದ ಅರ್ಥಗಳನ್ನೂ ಶಬ್ದಗಳು ಬೋಧಿಸುತ್ತವೆ' ಎಂದೂ ಅವರು ಒಪ್ಪಬೇಕು. ವೇದವಾಕ್ಯವು 'ವಸಂತಕಾಲದಲ್ಲಿ ಜ್ಯೋತಿರ್ಯಾಗವನ್ನು ಮಾಡಬೇಕು' ಎಂದು ಹೇಳುತ್ತದೆ. ಆದರೆ ವಸಂತಕಾಲ ಯಾವುದು? ಎಂಬ ವಿವರಣೆ ವೇದದಲ್ಲಿ ಇಲ್ಲ. ಅದನ್ನು ಇತರ ಗ್ರಂಥಗಳಲ್ಲಿ ತಿಳಿಸಲಾಗಿದೆ. ಆ ಗ್ರಂಥಗಳು ವೇದಕ್ಕೆ ಪೂರಕವಾಗಿ ವಸಂತಕಾಲದ ವಿವರಣೆಯನ್ನು ನೀಡದೆ ಸ್ವತಂತ್ರವಾಗಿಯೇ ಆ ಕಾಲದ ಲಕ್ಷಣವನ್ನು ನಿರೂಪಿಸುತ್ತಿವೆ. ಆದ್ದರಿಂದ ಅಲ್ಲಿ ಸಿದ್ಧರೂಪವಾದ ಅರ್ಥದಲ್ಲೇ ಶಬ್ದಗಳಿಗೆ ತಾತ್ಪರ್ಯ ಎಂದು ಒಪ್ಪಬೇಕು.

ಮೀಮಾಂಸಕರ ರೀತಿಯಿಂದ ಲಿಙ್ ಮೊದಲಾದ ಪದಗಳು ಕಾರ್ಯಸ್ವರೂಪವನ್ನೇ ತಿಳಿಸುತ್ತವೆ. ಉಳಿದ ಪದಗಳು ಕಾರ್ಯಾನ್ವಿತ ಅರ್ಥಗಳನ್ನು ಹೇಳುತ್ತವೆ. ಹೀಗೆ ಕೆಲವು ಶಬ್ದಗಳಿಗೆ ಕಾರ್ಯವೇ ಅರ್ಥವಾದರೆ ಮತ್ತೆ ಕೆಲವಕ್ಕೆ ಕಾರ್ಯಕ್ಕೆ ಸಂಬಂಧಿಸಿದ ವಸ್ತುಗಳು ಅರ್ಥ, ಇದು ಗೌರವ. 'ಎಲ್ಲ ಶಬ್ದಗಳೂ ತಮ್ಮ ಅರ್ಥವನ್ನು ಮಾತ್ರವಲ್ಲದೆ ಜೊತೆಯಲ್ಲಿರುವ ಇನ್ನೊಂದು ಶಬ್ದದ ಅರ್ಥದೊಂದಿಗಿರುವ ಸಂಬಂಧವನ್ನೂ ತಿಳಿಸುತ್ತವೆ ಏಕೆಂದರೆ ವಾಕ್ಯದಿಂದ ಅರ್ಥಗಳು ಬಿಡಿಬಿಡಿಯಾಗಿ ತಿಳಿಯುವುದಿಲ್ಲ. ಒಂದಕ್ಕೊಂದು ಸಂಬಂಧಿಸಿಯೇ ತಿಳಿಯುತ್ತವೆ. ಆದ್ದರಿಂದ ಶಬ್ದಗಳು ಅರ್ಥವನ್ನು ತಿಳಿಸುವಂತೆ ಅವುಗಳಿಗಿರುವ ಸಂಬಂಧವನ್ನೂ ತಿಳಿಸುತ್ತವೆ. ಹೀಗೆ ಶಬ್ದಗಳು ಯೋಗ್ಯವಾದ ಇತರ ಅರ್ಥಗಳೊಂದಿಗಿರುವ ಸಂಬಂಧದ ಜೊತೆಗೇ ತಮ್ಮ ಅರ್ಥವನ್ನು ತಿಳಿಸುತ್ತವೆ. ಇದು ಎಲ್ಲ ಶಬ್ದಗಳಿಗೂ ಅನ್ವಯಿಸುವ ಏಕಸೂತ್ರ. ಇದೇ ಆಚಾರ್ಯರು ಹೇಳಿದ 'ಅನ್ವಿತಾಭಿಧಾನವಾದ'.

**ಭಾಷ್ಯ—ಕರ್ತವ್ಯತಾಮಾತ್ರೇ ವಾಕ್ಯಪ್ರಾಮಾಣ್ಯಾಂಗೀಕಾರೇ ಕರ್ಮಪ್ರಯೋಜನೇ ಪ್ರಮಾಣಾಭಾವಾತ್ ತತ್ರಾಪಿ ತಾತ್ಪರ್ಯಮಂಗೀಕರ್ತವ್ಯಮೇವೇತಿ ಸಿದ್ಧಮೇವ ಸಿದ್ಧೇ ತಾತ್ಪರ್ಯಮ್ ।**

**ಚಿತ್ರಾದಿತಾರಕಾದ್ವಂದ್ವಂ ಯದಾ ಪೂರ್ಣೇಂದುಸಂಯುತಮ್ ।**

**ಚೈತ್ರಾದಿ ಮಾಸಾ ವಿಜ್ಞೇಯಾಃ ।**

**ಇತ್ಯಾದೌ ವಸ್ತುಯಾಥಾರ್ಥ್ಯೇ ತಥಾ ಜ್ಞಾನೇ ಚೋಭಯತ್ರ ತಾತ್ಪರ್ಯದರ್ಶನಾದ್ ಉಪಾಸನಾವಾಕ್ಯೇಷ್ವಪ್ಯುಪಾಸನಾಯಾಂ ವಸ್ತುಯಾಥಾರ್ಥ್ಯೇ ಚೋಭಯತ್ರ ತಾತ್ಪರ್ಯಂ ಯುಕ್ತಮ್ ।**

**ಅನುವಾದ**—ಸ್ಥಾನಾಂತರದಲ್ಲಿರುವ ವಸಂತಾದಿಲಕ್ಷಣಗಳನ್ನು ಹೇಳುವ ವಾಕ್ಯಕ್ಕೆ ಮಾತ್ರವಲ್ಲ, 'ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ' ಮೊದಲಾದ ವಿಧಿವಾಕ್ಯಗಳಲ್ಲಿರುವ ಸ್ವರ್ಗಕಾಮಾದಿ ಪದಗಳಿಗೂ ಸಿದ್ಧಾರ್ಥದಲ್ಲಿ ತಾತ್ಪರ್ಯವನ್ನು ಒಪ್ಪಬೇಕು. ಕಾರ್ಯತ್ವದಲ್ಲಿ ಮಾತ್ರ ವಾಕ್ಯಗಳಿಗೆ ತಾತ್ಪರ್ಯವನ್ನು ಅಂಗೀಕಾರ ಮಾಡಿದರೆ 'ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ' ಮೊದಲಾದ ವಾಕ್ಯಗಳಲ್ಲಿ ಯಾಗ ರೂಪ ಕರ್ಮದಲ್ಲಿ ಸ್ವರ್ಗರೂಪ ಪ್ರಯೋಜನದಲ್ಲಿ ತಾತ್ಪರ್ಯವಿಲ್ಲದಂತಾಗುವುದರಿಂದ ಯಾಗವಾಗಲೀ ಸ್ವರ್ಗವಾಗಲೀ ಸಿದ್ಧವಾಗುವುದಿಲ್ಲವಾದ್ದರಿಂದ ಸಿದ್ಧವಸ್ತುಗಳಾದ ಅವುಗಳಲ್ಲಿಯೂ ತಾತ್ಪರ್ಯವನ್ನು ಒಪ್ಪಲೇಬೇಕು. ಆದ್ದರಿಂದ ಸಿದ್ಧವಸ್ತುಗಳಲ್ಲಿ ತಾತ್ಪರ್ಯವು ಸಿದ್ಧಿಸುತ್ತದೆ.

ವಸಂತಾದಿ ಸ್ವರೂಪ ಸಿದ್ಧವಾಗದೆ ಆ ಕಾಲದಲ್ಲಿ ಮಾಡುವ ಯಾಗ ಸ್ವರೂಪ ಸಿದ್ಧವಾಗದು ಎಂದು ಒಪ್ಪೋಣ. ಆದರೆ ಉಪಾಸನಾವಿಷಯ ಸಿದ್ಧವಾಗದೆ ಉಪಾಸನಾಸ್ವರೂಪ ಸಿದ್ಧವಾಗದು ಎನ್ನುವುದನ್ನು ಏಕೆ ಒಪ್ಪಬೇಕು? ಅಸತ್ಯೋ ಪಾಸನೆ ಮಾಡಬಹುದಷ್ಟೆ? ಎಂಬ ಆಕ್ಷೇಪ ಬಂದರೆ ಹೀಗೆ ಹೇಳಬೇಕು—'ಚಿತ್ರಾದಿ ತಾರಕಾದ್ವಂದ್ವಂ' ಇತ್ಯಾದಿ ವಾಕ್ಯವು ಚೈತ್ರಾದಿ ಮಾಸಗಳ ಲಕ್ಷಣವನ್ನು ಹೇಳುತ್ತದೆ- 'ಹಸ್ತಾ-ಚಿತ್ರಾ ಅಥವಾ ಚಿತ್ರಾ-ಸ್ವಾತಿ ಈ ಮೊದಲಾದ ನಕ್ಷತ್ರದ್ವಂದ್ವದಲ್ಲಿ ಯಾವ ಮಾಸದಲ್ಲಿ ಪೂರ್ಣಚಂದ್ರನು ಬರುತ್ತಾನೆಯೋ ಆ ಮಾಸವನ್ನು ಚೈತ್ರಾದಿ ಮಾಸವೆಂದು ತಿಳಿಯಬೇಕು' ಎಂದು. ಈ ವಾಕ್ಯಕ್ಕೆ ಇಂದಿಗೂ ಜ್ಯೋತಿಃ ಶಾಸ್ತ್ರ ಪ್ರಕಾರ ಚೈತ್ರಾದಿಮಾಸ ಸ್ವರೂಪ, ಚೈತ್ರಾದಿ ಮಾಸಗಳ ಜ್ಞಾನ ಇವೆರಡರಲ್ಲಿಯೂ ತಾತ್ಪರ್ಯವಿರುವಂತೆ 'ಆತ್ಮಾನಮೇವ ಲೋಕಮುಪಾಸೀತ' ಎಂಬ ವಿಧಿವಾಕ್ಯದಲ್ಲಿ ಉಪಾಸನೆ ಮತ್ತು ಉಪಾಸನಾಕ್ರಿಯೆಗೆ ವಿಷಯನಾದ ಆತ್ಮನ ಸ್ವರೂಪ ಇವೆರಡ ರಲ್ಲಿಯೂ ತಾತ್ಪರ್ಯವನ್ನು ಒಪ್ಪಬೇಕು.

**ಭಾಷ್ಯ—ಉಪಾಸನಾಯಾಃ ಕಾರ್ಯತ್ವೇ ವಿಷ್ಣೋರಾತ್ಮತ್ವ ಏವ ಚ ।**
**ಉಭಯತ್ರಾಪಿ ತಾತ್ಪರ್ಯಮಾತ್ಮೋಪಾಸಾದಿಕೇ ವಿಧೌ ।**
**ತಸ್ಮಾದಸತ್ಯಂ ನ ಧ್ಯಾಯೇದ್ ಧ್ಯಾಯೇತ್ ತತ್ಸತ್ಯತಾ ಯಥಾ ।**
**ವಿಚಾರ್ಯ ಮತಿಮಾನ್ ವಾಕ್ಯೈಃ ಬಹುಭಿಃ ಸ್ವಾರ್ಥವಾಚಕೈಃ ।**
**ಇತಿ ಹರಿವಂಶೇಷು ।**

**ತಸ್ಮಾದಿಷ್ಟಸಾಧನ ಜ್ಞಾನಮೇವ ಸರ್ವವಾಕ್ಯಾರ್ಥಃ ।**

**ಅನುವಾದ**—ವಸ್ತುತಃ ಅಸತ್ಯೋಪಾಸನೆ ನಿಷಿದ್ಧವೂ ಆಗಿದೆ. "ಆತ್ಮೋ ಪಾಸನೆಯನ್ನು ವಿಧಾನ ಮಾಡುವ ವಾಕ್ಯಗಳಿಗೆ ವಿಷ್ಣುವಿನ ಆತ್ಮತ್ವ (ಸ್ವಾಮಿತ್ವ) ದಲ್ಲಿಯೂ, ಉಪಾಸನೆಯನ್ನು ಮಾಡಬೇಕು ಎಂಬಲ್ಲಿಯೂ ತಾತ್ಪರ್ಯವಿದೆ.

ಅಸತ್ಯೋಪಾಸನೆ ಅನರ್ಥಕರವಾದ್ದರಿಂದ ಅಸತ್ಯವಾದುದನ್ನು ಧ್ಯಾನಮಾಡಬಾರದು. ವಿವೇಕಿಯಾದವನು ಸ್ವಾರ್ಥವನ್ನು ಹೇಳುವ 'ನಾಮಾದಿಸ್ಥಿತಿರೇವಾತ್ರ ಬ್ರಹ್ಮಣೋ ಹಿ ವಿಧೀಯತೇ' ಎಂದು ಮುಂತಾದ ಅನೇಕವಾಕ್ಯಗಳಿಂದ ವಿಚಾರ ಮಾಡಿ 'ನಾಮ ಬ್ರಹ್ಮೇತ್ಯುಪಾಸೀತ' ಮೊದಲಾದ ವಾಕ್ಯಗಳಿಗೆ ಹೇಗೆ ಅರ್ಥಮಾಡಿದರೆ ಅರ್ಥವು ಸತ್ಯವಾಗುತ್ತದೆಯೋ ಹಾಗೆ, ನಾಮವು ಬ್ರಹ್ಮನನ್ನು ಆಶ್ರಯಿಸಿಕೊಂಡಿದೆ ಇತ್ಯಾದಿಯಾಗಿ, ಅರ್ಥಮಾಡಿಕೊಂಡು ಧ್ಯಾನ ಮಾಡಬೇಕು" ಎಂದು ಹರಿವಂಶದಲ್ಲಿ ಹೇಳಿದೆ. ಉಪಾಸನಾಕರ್ತವ್ಯತ್ವವೂ ಇಷ್ಟಸಾಧನತ್ವವೆ. ಹೀಗೆ ಇಷ್ಟಸಾಧನತ್ವಕ್ಕಿಂತ ಭಿನ್ನವಾದ ಕಾರ್ಯತ್ವವು ಇಲ್ಲದಿರುವುದರಿಂದ ಎಲ್ಲ ವಾಕ್ಯಗಳೂ ಇಷ್ಟಸಾಧನದ ಜ್ಞಾನವನ್ನೇ ಉಂಟುಮಾಡಿಕೊಡುತ್ತವೆ ಎನ್ನಬೇಕು.

**ತಾರ್ಕಿಕಾದಿಗಳಿಗೆ ಆಗಮವಿರೋಧ ಅಪರಿಹಾರ್ಯ :**

**ಭಾಷ್ಯ—ತಾರ್ಕಿಕಾಣಾಂ ತೂಕ್ತವಚನಾನಾಂ ಪ್ರಾಮಾಣ್ಯಂ ಸಿದ್ಧಮೇವ ।**
**ಅತಸ್ತದ್ವಿರೋಧಿ ಕಥನಂ ಮೋಹತ ಏವ ।**

**ಅನುಮಾಯಾ ವಿರೋಧಶ್ಚೇತ್ ಪ್ರತ್ಯಕ್ಷೇಣಾಽಗಮೇನ ವಾ ।**
**ಸೈವಾಪ್ರಮಾಣತಾಂ ಗಚ್ಛೇದಾಗಮದ್ವಿಟ್ ತಥಾಽಕ್ಷಜವಾನ್ ।**
**ತಸ್ಮಾದಾಗಮ ಏವೈಕೋ ಮಾನಾನಾಮುತ್ತಮೋತ್ತಮಃ ।**
**ಧರ್ಮಾರ್ಥ ಕಾಮ ಮೋಕ್ಷಾಣಾಂ ಸಾಕ್ಷಾದೇವ ಪ್ರದಾಯಕಃ ।**

**ಇತಿ ವಾಯುಪ್ರೋಕ್ತವಚನಾನ್ನಾನುಮಾನವಿರೋಧೋ ವಕ್ತುಂ ಯುಜ್ಯತೇ । ಸರ್ವತ್ರಾನಿವಾರ್ಯತ್ವಾಚ್ಚ ಪ್ರತ್ಯನುಮಾನಸ್ಯ ।**

**ಅನುವಾದ**—ತಾರ್ಕಿಕರು ಈಶ್ವರನಿಗೆ ಅನಂತಗುಣಗಳನ್ನಾಗಲೀ, ಗುಣಾತ್ಮಕವಾದ ಶರೀರವನ್ನಾಗಲೀ ಒಪ್ಪುವುದಿಲ್ಲ. ಈಶ್ವರನಿಗೆ ಜ್ಞಾನ, ಇಚ್ಛಾ, ಪ್ರಯತ್ನ, ಸಂಖ್ಯಾ, ಪರಿಮಾಣ, ಪೃಥಕ್ತ್ವ, ಸಂಯೋಗ ಮತ್ತು ವಿಭಾಗ ಈ ಎಂಟೇ ಗುಣಗಳು. ಶರೀರವಿಲ್ಲ. ಜೀವರಿಗೆ ಸುಖದುಃಖಾದಿ ಸರ್ವ ವಿಶೇಷಗುಣಗಳ ಸಮೂಲ ನಾಶವೇ ಮೋಕ್ಷ, ಆದ್ದರಿಂದ ಮೋಕ್ಷದಲ್ಲಿ ಆನಂದವೇ ಇಲ್ಲವೆಂದ ಮೇಲೆ ಆನಂದ ತಾರತಮ್ಯ ಸುತರಾಂ ಇಲ್ಲ ಎನ್ನುತ್ತಾರೆ. ಆದರೆ ಇವರಿಗೆ ಮೇಲೆ ಹೇಳಿದ ಪ್ರಮಾಣ ವಿರೋಧ ಅಪರಿಹಾರ್ಯ. ಏಕೆಂದರೆ ಅವರೂ ವೇದಾದಿಗಳಿಗೆ ಪ್ರಾಮಾಣ್ಯವನ್ನು ಒಪ್ಪುವರು. ವೇದಾದಿಗಳಲ್ಲಿ ಪರಮಾತ್ಮನಿಗೆ ಅನಂತಕಲ್ಯಾಣಗುಣಗಳನ್ನೂ ಗುಣಾತ್ಮಕಶರೀರವನ್ನೂ, ಮುಕ್ತರಿಗೆ ಆನಂದವನ್ನೂ ಆನಂದ ತಾರತಮ್ಯವನ್ನೂ ಹೇಳುವ ವಾಕ್ಯಗಳಿವೆ. ಅವುಗಳ ವಿರೋಧ ಅವರಿಗೆ ಬರುತ್ತದೆ. ಅವರಿಗೆ ವೇದಾದಿ ವಚನ ವಿರೋಧವಿರುವಂತೆ ನಮಗೂ ಅಕ್ಷಪಾದಾದಿ ತಾರ್ಕಿಕಗ್ರಂಥವಚನ ವಿರೋಧ ಬರುವು

ದಿಲ್ಲವೇ ? ಎಂಬ ಶಂಕೆ ಸರಿಯಲ್ಲ. ಉಭಯಸಮ್ಮತ ಪ್ರಮಾಣವೆನಿಸಿರುವ ವೇದಾದಿಗಳ ವಿರೋಧ ಬರುವುದರಿಂದ, ವೇದಾದಿಗಳಿಗೆ ವಿರುದ್ಧವಾಗಿ ಅಕ್ಷಪಾದಾದಿ ತಾರ್ಕಿಕರು ಹೇಳಿರುವುದೇ ಭ್ರಾಂತಿ ಮೂಲಕವಾಗಿದ್ದು ಅಪ್ರಮಾಣವೆನಿಸುತ್ತದೆ. ಈಶ್ವರನಿಗೆ ಶರೀರವಿಲ್ಲವೆಂದೂ, ಜೀವರಿಗೆ ಸಕಲ ವಿಶೇಷ ಗುಣೋಚ್ಛೇದವೇ ಮೋಕ್ಷವೆಂದೂ ಅನುಮಾನದಿಂದ ಸಾಧನೆ ಮಾಡಲು ಬರುವುದರಿಂದ, ಅನುಮಾನ ವಿರೋಧ ನಮಗೆ ಬರುವುದಿಲ್ಲವೇ? ಎಂಬ ಶಂಕೆಯೂ ಸರಿಯಲ್ಲ. ವೇದಾದಿಗಳಿಗೆ ಅನುಮಾನ ವಿರೋಧವೇ ಬರುವುದಿಲ್ಲ. ಏಕೆಂದರೆ "ಅನುಮಾನಕ್ಕೆ ಪ್ರತ್ಯಕ್ಷ ಅಥವಾ ಆಗಮದಿಂದ ವಿರೋಧ ಬಂದರೆ ಅನುಮಾನವೇ ಅಪ್ರಮಾಣವಾಗುತ್ತದೆ. ಹಾಗೆಯೇ ಆಗಮದಿಂದ ಕೃಷ್ಣನನ್ನು ತಿಳಿದು ಆ ಆಗಮಕ್ಕೆ ವಿರುದ್ಧವಾಗಿ, 'ಕೃಷ್ಣನು ಜನಿಸಿದನು' ಎಂದು ಪ್ರತ್ಯಕ್ಷದಿಂದ ಕಂಡರೆ ಆ ಪ್ರತ್ಯಕ್ಷಕ್ಕೆ 'ದೇವಕ್ಯಾಂ ದೇವರೂಪಿಣ್ಯಾಂ ವಿಷ್ಣುಃ ಸರ್ವಗುಹಾಶಯಃ| ಆವಿರಾಸೀತ್' ಇತ್ಯಾದಿ ಉಪಜೀವ್ಯ ಆಗಮವಿರೋಧ ಬರುವುದರಿಂದ ಪ್ರತ್ಯಕ್ಷವೇ ಅಪ್ರಮಾಣವಾಗುತ್ತದೆ. ಇತರ ಪ್ರಮಾಣಗಳಿಗಿಂತ ಪ್ರಬಲವಾದುದರಿಂದ ಆಗಮ ಒಂದೇ ಪರಮೋತ್ತಮವಾದ ಪ್ರಮಾಣ. ಅದು ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ನಾಲ್ಕು ಪುರುಷಾರ್ಥಗಳನ್ನೂ ಸಾಕ್ಷಾತ್ ಸಂಪಾದಿಸಿಕೊಡುವಂತಹುದು" ಎಂದು ವಾಯುಪ್ರೋಕ್ತ ವಚನವಿದೆ. ತಾರ್ಕಿಕರ ಅನುಮಾನಗಳಿಗೆ ಆಗಮದ ಬೆಂಬಲವಿಲ್ಲ. ಆಗಮದ ಸಹಾಯವಿಲ್ಲದ ಯಾವುದೇ ಅನುಮಾನಕ್ಕೂ ಪ್ರತ್ಯನುಮಾನವನ್ನು ಹೇಳಲು ಬರುವುದರಿಂದ ಅಂತಹ ಕೇವಲ ಅನುಮಾನವು ಆಗಮದಲ್ಲಿ ಹೇಳಿದ ಯಾವ ಪ್ರಮೇಯಕ್ಕೂ ವಿರೋಧಿಯಾಗಲಾರದು.

**ಭಾಷ್ಯ—ನಿರ್ಣಯಸ್ತ್ವಾಗಮೇನೈವ ನಾನುಮಾಽಗಮವರ್ಜಿತಾ |**
**ಕ್ವಚಿನ್ನಿರ್ಣೀತಿಹೇತುಃ ಸ್ಯಾದತಃ ಶಾಸ್ತ್ರಾದ್ ವಿನಿರ್ಣಯಃ |**
**ಇತಿ ಭಾರತೇ ||**

**ನ ಚ ವೇದಾತ್ಮಕೇತಿಹಾಸಪುರಾಣೋಕ್ತನ್ಯಾಯಂ ಪರಿತ್ಯಜ್ಯ ಯೇನ ಕೇನಚಿತ್ ಕ್ಲೃಪ್ತನ್ಯಾಯೋ ಯುಜ್ಯತೇ |**

**ಅನುವಾದ**—'ಆಗಮದಿಂದಲೇ ತತ್ತ್ವನಿರ್ಣಯವನ್ನು ಮಾಡಬೇಕು. ಆಗಮ ಸಹಾಯವಿಲ್ಲದ ಅನುಮಾನವು ಎಂದೂ ತತ್ತ್ವನಿರ್ಣಯಕ್ಕೆ ಸಹಾಯಕವಾಗುವುದಿಲ್ಲ. ಆದ್ದರಿಂದ ಶಾಸ್ತ್ರದಿಂದಲೇ ನಿರ್ಣಯ ಮಾಡಬೇಕು' ಎಂದು ಭಾರತದಲ್ಲಿ ಹೇಳಿದೆ.

ತಾರ್ಕಿಕರ ಅನುಮಾನಗಳಿಗೆ ಅಕ್ಷಪಾದಾದಿ ಆಗಮಗಳ ಬೆಂಬಲವಿದ್ದರೂ, ಆ ಅನುಮಾನಗಳು ಗ್ರಾಹ್ಯವಲ್ಲ. ಏಕೆಂದರೆ ಸದಾಗಮವೆನಿಸಿರುವ ವೇದಗಳಲ್ಲಿಯೂ ಪಂಚಮವೇದವಾದ ಇತಿಹಾಸ ಪುರಾಣಗಳಲ್ಲಿಯೂ ಹೇಳಿರುವ ನ್ಯಾಯವನ್ನು ಬಿಟ್ಟು ಅಕ್ಷಪಾದ, ಕಣಾದ ಮುಂತಾದ ಯಾರ್ಯಾರೋ ಹೇಳಿದ ದುರಾಗಮ ಮೂಲಕವಾದ ನ್ಯಾಯದಿಂದ ತತ್ತ್ವನಿರ್ಣಯ ಮಾಡುವುದು ಯೋಗ್ಯವಲ್ಲ.

**ಸದಾಗಮ ದುರಾಗಮ ವಿವೇಕ :**

**ಭಾಷ್ಯ—ಅಕ್ಷಪಾದ ಕಣಾದೌ ಚ ಸಾಂಖ್ಯಯೋಗಾರ್ಹತಾಸ್ತಥಾ ।**
**ಶಿವ ಶಕ್ತಿ ಮಹಾಯಾನ ಲೋಕಾಯತ ಪುರಃಸರಾಃ ।**
**ಗಾಣಪತ್ಯಾಶ್ಚ ಸೌರಾಶ್ಚ ಸರ್ವೇ ಪ್ರೋಕ್ತಾ ದುರಾಗಮಾಃ ।**
**ಋಗ್ಯಜುಃಸಾಮಾಥರ್ವಾಶ್ಚೇತಿಹಾಸಪುರಾಣಕೌ ।**
**ಸ್ವಾಗಮಾ ಇತಿ ಸಂಪ್ರೋಕ್ತಾ ಮೀಮಾಂಸಾ ಧರ್ಮ ಏವ ಚ ।**
**ಇತಿ ಪಾದ್ಮೇ ।**

**ಪಂಚರಾತ್ರಂ ಭಾರತಂ ಚ ಮೂಲರಾಮಾಯಣಂ ತಥಾ ।**
**ಇತಿಹಾಸ ಇತಿ ಪ್ರೋಕ್ತೋ ಬ್ರಾಹ್ಮಾದ್ಯಂ ಚ ಪುರಾಣಕಮ್ ।**
**ಇತಿ ಪ್ರಕಾಶಿಕಾಯಾಮ್ ॥**

**ವೇದಾಶ್ಚೈವೇತಿಹಾಸಾಶ್ಚ ಪುರಾಣಂ ಭಾಗವತಂ ತಥಾ ।**
**ಮೂಲಪ್ರಮಾಣಮುದ್ದಿಷ್ಟಂ ಮೀಮಾಂಸಾ ಚ ತಥೋತ್ತರಾ ।**
**ಏತೇಷಾಮವಿರೋಧೇ ತು ಮಾನಮನ್ಯದುದೀರಿತಮ್ ।**
**ಏತೇಷಾಂ ತು ವಿರುದ್ಧಂ ಯದಪ್ರಮಾಣಂ ವಿದೋ ವಿದುಃ ।**
**ಇತಿ ವ್ಯಾಸಸ್ಮೃತೌ ।**

**ವಿಷ್ಣೋಃ ಸರ್ವೋತ್ತಮತ್ವಸ್ಯ ಜ್ಞಾನಾರ್ಥಂ ಶಾಸ್ತ್ರಮಿಷ್ಯತೇ ।**
**ಅತಸ್ತತ್ಸಾಧಕಂ ಶಾಸ್ತ್ರಂ ದುಃಶಾಸ್ತ್ರಂ ತದ್ವಿರೋಧಿ ಯತ್ ।**
**ಇತಿ ಬ್ರಹ್ಮಾಂಡೇ ।**

**ವಿಷ್ಣೋಃ ಸರ್ವೋತ್ತಮತ್ವಂ ಚ ತದ್ಭಕ್ತ್ಯಾ ಮೋಕ್ಷ ಏವ ಚ ।**
**ಶಾಸ್ತ್ರಾರ್ಥ ಇತಿ ನಿರ್ದಿಷ್ಟಃ ಸರ್ವಶಾಸ್ತ್ರಾರ್ಥನಿರ್ಣಯಾತ್ ।**
**ಇತಿ ಪಾದ್ಮೇ ।**

**ಅನುವಾದ**—ವೇದಾದಿಗಳೇ ಸದಾಗಮಗಳು. ಬೇರೆಲ್ಲವೂ ದುರಾಗಮಗಳು. ಏಕೆಂದರೆ 'ಅಕ್ಷಪಾದ ಮತ್ತು ಕಣಾದರು ಮಾಡಿದ ತರ್ಕಶಾಸ್ತ್ರ, ಸಾಂಖ್ಯಶಾಸ್ತ್ರ, ಯೋಗಶಾಸ್ತ್ರ, ಜೈನಾಗಮ, ಶೈವಾಗಮ, ಶಾಕ್ತಾಗಮ, ಬೌದ್ಧಾಗಮ, ಚಾರ್ವಾಕ ಶಾಸ್ತ್ರ, ಗಾಣಪತ್ಯಾಗಮ, ಸೌರಾಗಮ ಇವೆಲ್ಲವೂ ದುರಾಗಮಗಳೆಂದು ಕರೆಯಲ್ಪಡುತ್ತವೆ. ಋಗ್ಯಜುಃಸಾಮಾಥರ್ವಣ ವೇದಗಳು, ಇತಿಹಾಸ ಪುರಾಣಗಳು, ಮೀಮಾಂಸಾ ಧರ್ಮಶಾಸ್ತ್ರ ಇವು ಸದಾಗಮಗಳೆನಿಸುತ್ತವೆ' ಎಂದು ಪಾದ್ಮಪುರಾಣದಲ್ಲಿದೆ.

'ಪಂಚರಾತ್ರ ಭಾರತ ಮೂಲರಾಮಾಯಣಗಳು ಇತಿಹಾಸವೆಂದೂ, ಬ್ರಾಹ್ಮ ಮೊದಲಾದವು ಪುರಾಣಗಳೆಂದೂ ಕರೆಯಲ್ಪಡುತ್ತವೆ' ಎಂದು ಪ್ರಕಾಶಿಕಾ ಎಂಬ ಗ್ರಂಥದಲ್ಲಿ ಹೇಳಿದೆ.

'ವೇದಗಳು, ಇತಿಹಾಸಗಳು ಭಗವಂತನ ಮಹಿಮೆಯನ್ನು ಹೇಳುವ ಪುರಾಣಗಳು ಮತ್ತು ಬ್ರಹ್ಮಮೀಮಾಂಸಾ ಇವು ಮುಖ್ಯಪ್ರಮಾಣಗಳೆನಿಸುತ್ತವೆ. ಇವುಗಳ ವಿರೋಧವಿಲ್ಲದಿದ್ದರೆ ಮನ್ವಾದಿ ಸ್ಮೃತಿ ಮುಂತಾದ ಬೇರೆಯವೂ ಪ್ರಮಾಣವಾಗುತ್ತದೆ, ಇವುಗಳಿಗೆ ವಿರೋಧಿಯಾದುದು ಅಪ್ರಮಾಣವೆಂದು ಜ್ಞಾನಿಗಳು ತಿಳಿಯುತ್ತಾರೆ' ಎಂದು ವ್ಯಾಸಸ್ಮೃತಿಯಲ್ಲಿ ಹೇಳಿದೆ.

'ವಿಷ್ಣುವಿನ ಸರ್ವೋತ್ತಮತ್ವ ಜ್ಞಾನದ ಸಲುವಾಗಿಯೇ ಶಾಸ್ತ್ರವಿದೆ. ಆದ್ದರಿಂದ ವಿಷ್ಣುವಿನ ಸರ್ವೋತ್ತಮತ್ವವನ್ನು ಸಾಧಿಸುವುದೆಲ್ಲವೂ ಶಾಸ್ತ್ರ. ಅದಕ್ಕೆ ವಿರೋಧಿಯಾದುದೆಲ್ಲವೂ ದುಃಶಾಸ್ತ್ರ' ಎಂದು ಬ್ರಹ್ಮಾಂಡ ಪುರಾಣದಲ್ಲಿ ಹೇಳಿದೆ.

ಸರ್ವಶಾಸ್ತ್ರಾರ್ಥ ನಿರ್ಣಯ ಮಾಡಿ, ವಿಷ್ಣುವು ಸರ್ವೋತ್ತಮನೆಂಬುದೂ ವಿಷ್ಣುಭಕ್ತಿಯಿಂದಲೇ ಮೋಕ್ಷವೆಂಬುದೂ ಶಾಸ್ತ್ರಾರ್ಥವೆಂದು ನಿರ್ದಿಷ್ಟವಾಗಿದೆ ಎಂದು ಪಾದ್ಮಪುರಾಣದಲ್ಲಿ ಹೇಳಿದೆ.

**ಆಗಮವು ಪ್ರಮಾಣ :**

**ಭಾಷ್ಯ—ನ ಚಾಽಗಮಸ್ಯಾಪ್ರಾಮಾಣ್ಯಂ ವಕ್ತುಂ ಯುಕ್ತಮ್ । ತತ್–ಪ್ರಮಾಣಾಭಾವಾತ್ । ಸ್ವತಃಪ್ರಾಮಾಣ್ಯಾಚ್ಚ । ತದನಂಗೀಕಾರೇ ಚಾನವಸ್ಥಾನಾತ್ ।**

**ಅನುವಾದ**—ಆಗಮಕ್ಕೆ ಅಪ್ರಾಮಾಣ್ಯವನ್ನು ಹೇಳುವುದು ಯುಕ್ತವಲ್ಲ. ಏಕೆಂದರೆ ಅವು ಅಪ್ರಮಾಣವೆನ್ನಲು ಪ್ರಮಾಣವಿಲ್ಲ. ಪ್ರತ್ಯಕ್ಷಾದಿಗಳೇ ಪ್ರಮಾಣವೆಂದರೆ ಪ್ರತ್ಯಕ್ಷಾದಿಗಳ ಪ್ರಾಮಾಣ್ಯದ ವಿಷಯದಲ್ಲೂ ಪ್ರಮಾಣವಿಲ್ಲ. ಪ್ರತ್ಯಕ್ಷಾದಿಗಳ ಪ್ರಾಮಾಣ್ಯ ಸ್ವತಃ ಎನ್ನುವುದಾದರೆ ಆಗಮ ಪ್ರಾಮಾಣ್ಯವೂ ಸ್ವತಃ. ಆದ್ದರಿಂದ ಅಪ್ರಾಮಾಣ್ಯವನ್ನು ಹೇಳಲಾಗದು. ಪ್ರಾಮಾಣ್ಯ ಪರತಃ ಎಂದರೆ ಅನವಸ್ಥಾ ದೋಷ ಬರುತ್ತದೆ. ಆಗಮಪ್ರಾಮಾಣ್ಯ ವಿಷಯದಲ್ಲಿ ಪ್ರಮಾಣವಿಲ್ಲವೆಂದೂ ಹೇಳಕೂಡದು. ಏಕೆಂದರೆ ಅದರ ಪ್ರಾಮಾಣ್ಯ ಸ್ವತಃ ಸಿದ್ಧ. ಪ್ರಾಮಾಣ್ಯ ಸ್ವತಸ್ತ್ವ ಒಪ್ಪದಿದ್ದಲ್ಲಿ ಅನವಸ್ಥಾ ದೋಷ ಅಪರಿಹಾರ್ಯ.

**ವಿವರಣೆ**—ಶಬ್ದವೇ ಪ್ರಮಾಣವಲ್ಲ. ಹೀಗಿರುವಾಗ ಶಬ್ದವಿಶೇಷವಾದ ವೇದಾದಿಗಳು ಪ್ರಮಾಣವಾಗುವುದು ಹೇಗೆ ಎಂಬ ಬೌದ್ಧರ ಆಕ್ಷೇಪಕ್ಕೆ ಉತ್ತರ ಹೀಗೆ—

ವೇದಾದಿ ಆಗಮಗಳಿಗೆ ಅಪ್ರಾಮಾಣ್ಯವನ್ನು ಹೇಳುವುದು ಸರಿಯಲ್ಲ. ಏಕೆಂದರೆ ಅಪ್ರಾಮಾಣ್ಯಸಾಧಕ ಪ್ರಮಾಣವಿರುವುದರಿಂದ ಆವುಗಳನ್ನು ಅಪ್ರಮಾಣಗಳೆಂದು

ಹೇಳುವುದೋ ಅಥವಾ ಪ್ರಾಮಾಣ್ಯಸಾಧಕ ಪ್ರಮಾಣವಿಲ್ಲದಿರುವುದರಿಂದಲೋ ? ಮೊದಲನೆಯ ಪಕ್ಷ ಸರಿಯಲ್ಲ. ಏಕೆಂದರೆ ಅವುಗಳಿಗೆ ಅಪ್ರಾಮಾಣ್ಯಸಾಧಕವಾದ ಯಾವ ಪ್ರಮಾಣವೂ ಇಲ್ಲ. 'ಪ್ರತ್ಯಕ್ಷಾದಿಗಳಿವೆ' ಎನ್ನುವುದಾದರೆ ಆ ಪ್ರತ್ಯಕ್ಷಾದಿಗಳಿ ಅಪ್ರಮಾಣವೇಕಾಗಬಾರದು? 'ಅದರ ಪ್ರಾಮಾಣ್ಯ ಸ್ವತಃ ಸಿದ್ಧ. ಏಕೆಂದರೆ, ಹಾಗೆ ಒಪ್ಪದಿದ್ದರೆ ಅನವಸ್ಥೆ ಬರುತ್ತದೆ' ಎನ್ನುವುದಾದರೆ ಆಗಮಕ್ಕೆ ಸ್ವತಃ ಪ್ರಾಮಾಣ್ಯವೇಕಿಲ್ಲ? ಆದ್ದರಿಂದ ಆಗಮಕ್ಕೆ ಅಪ್ರಾಮಾಣ್ಯ ಹೇಳಲಾಗದು. ಆಗಮ ಪ್ರಾಮಾಣ್ಯ ವಿಷಯದಲ್ಲಿ ಪ್ರಮಾಣವಿಲ್ಲದಿರುವುದರಿಂದ ಅಪ್ರಮಾಣವೆನ್ನುವ ಎರಡನೆಯ ಪಕ್ಷವೂ ಸರಿಯಲ್ಲ. ಆಗಮಪ್ರಾಮಾಣ್ಯವು ಪ್ರಾಮಾಣ್ಯಸ್ವತಸ್ತ್ವದಿಂದ ಸಿದ್ಧವಾಗುತ್ತದೆ. ಪ್ರಾಮಾಣ್ಯ ಸ್ವತಸ್ತ್ವ ಒಪ್ಪದಿದ್ದರೆ ಅನವಸ್ಥೆ ಬರುತ್ತದೆ. ಅದು ಹೇಗೆಂದರೆ– ಪ್ರಾಮಾಣ್ಯಜ್ಞಾನವೇ ಇಲ್ಲದಿದ್ದರೆ ನಿಃಸಂದಿಗ್ಧವಾಗಿ ಕಾರ್ಯದಲ್ಲಿ ಪ್ರವೃತ್ತಿ ಉಂಟಾಗುವುದಿಲ್ಲ. ಜ್ಞಾನವನ್ನೇನೋ ಸಾಕ್ಷಿಯು ಗ್ರಹಿಸುತ್ತದೆ. ಅದರ ಪ್ರಾಮಾಣ್ಯವನ್ನೂ ಸಾಕ್ಷಿ ಗ್ರಹಿಸದಿದ್ದರೆ ಇನ್ನೊಂದು ಜ್ಞಾನವು ಪ್ರಾಮಾಣ್ಯವನ್ನು ಗ್ರಹಿಸುತ್ತದೆ ಎಂದು ಹೇಳಬೇಕು. ಆ ಇನ್ನೊಂದು ಜ್ಞಾನದ ಪ್ರಾಮಾಣ್ಯದ ಜ್ಞಾನವಾದರೂ ಹೇಗೆ ಉಂಟಾಗುತ್ತದೆ? ಎಂದು ಪ್ರಶ್ನೆ ಬರುತ್ತದೆ. ಆಗ ಮತ್ತೊಂದು ಜ್ಞಾನವು ಅದರ ಪ್ರಾಮಾಣ್ಯವನ್ನು ಗ್ರಹಿಸುತ್ತದೆ ಎಂದು ಸಮಾನ ನ್ಯಾಯದಿಂದ ಒಪ್ಪಬೇಕಾಗುತ್ತದೆ. ಈ ಪರಂಪರೆಗೆ ಎಲ್ಲಿಯೂ ಕೊನೆಯೇ ಇಲ್ಲ. ಇಂತಹ ಅಪ್ರಾಮಾಣಿಕ ಜ್ಞಾನಪರಂಪರೆಯನ್ನು ಅಂಗೀಕರಿಸಬೇಕಾಗುತ್ತದೆ. ಇದಕ್ಕೆ ಅನವಸ್ಥಾದೋಷವೆಂದು ಹೆಸರು. ಅದನ್ನು ಪರಿಹಾರ ಮಾಡಿಕೊಳ್ಳಲು ಪ್ರಾಮಾಣ್ಯ ಜ್ಞಾನವನ್ನು ಯಾವ ಸಾಕ್ಷಿಯು ಗ್ರಹಿಸುತ್ತದೆಯೋ ಅದೇ ಸಾಕ್ಷಿಯೇ ಅದರ ಪ್ರಾಮಾಣ್ಯವನ್ನೂ ಗ್ರಹಿಸುತ್ತದೆ ಎಂದು ಒಪ್ಪಬೇಕು. ಜ್ಞಾನಕ್ಕೆ ಸ್ವತಃ ಪ್ರಾಮಾಣ್ಯವೆಂದರೆ ಇದೇ. ಇಲ್ಲಿ ಸಾಕ್ಷಿಯ ಪ್ರಾಮಾಣ್ಯಜ್ಞಾನ ಹೇಗೆ ಉಂಟಾಗುತ್ತದ? ಎಂಬ ಪ್ರಶ್ನೆ ಸಹಜವಾಗಿ ಬರುತ್ತದೆ. ಆದರೆ ಸಾಕ್ಷಿ ಸ್ವಪ್ರಕಾಶ. ಅದು ತನ್ನನ್ನೂ, ತನ್ನ ಪ್ರಾಮಾಣ್ಯವನ್ನೂ ಎರಡನ್ನೂ ತಾನೇ ಗ್ರಹಿಸುತ್ತದೆ. ಆದ್ದರಿಂದ ಪ್ರಾಮಾಣ್ಯ ಗ್ರಹಣಕ್ಕೆ ಬೇರೆ ಜ್ಞಾನವನ್ನು ಒಪ್ಪದಿರುವುದರಿಂದ ಅನವಸ್ಥಾ ದೋಷಕ್ಕೆ ಆಸ್ಪದವೇ ಇಲ್ಲ. ಸಾಕ್ಷಿಯ ಬದಲಾಗಿ ಮೊದಲನೆಯ ಪ್ರಮಾಣಜ್ಞಾನವನ್ನೇ ಸ್ವಪ್ರಕಾಶ ಎಂದು ಹೇಳಲು ಬರುವುದಿಲ್ಲ. ಮೊದಲನೆಯ ಜ್ಞಾನ ಅಂತಃಕರಣ ಪರಿಣಾಮವಾದ್ದರಿಂದ ಜಡ. ಅದು ಸ್ವಪ್ರಕಾಶವಾಗಲಾರದು. ಸಾಕ್ಷಿಯು ಚೈತನ್ಯರೂಪ. ಆದ್ದರಿಂದ ಸ್ವಪ್ರಕಾಶ.

**ಭಾಷ್ಯ**– **ಆಗಮಾಪ್ರಾಮಾಣ್ಯಸಾಧಕಾನುಮಾನಾದೇರಪ್ಯಾಗಮವದಪ್ರಾಮಾಣ್ಯ ಪ್ರಾಪ್ತೇಶ್ಚ । ವಿಶೇಷ ಪ್ರಮಾಣಾಭಾವಾತ್ । ಸ್ವೀಕೃತತ್ವಾಚ್ಚ ತೈರಪಿ ಸ್ವಾಗಮಪ್ರಾಮಾಣ್ಯಸ್ಯ । ನ ಹ್ಯನುಮಾನಾದಿನಾ ಸಪ್ತಮಲ**

**ಧಾರಣ ಚೈತ್ಯವಂದನಾದೇಃ ಸ್ವರ್ಗಸಾಧನತ್ವಂ ಜ್ಞಾತುಂ ಶಕ್ಯಮ್ । ನ ಚ ಪ್ರತ್ಯಕ್ಷಮಾತ್ರ ಪ್ರಾಮಾಣ್ಯವಾದಿನಸ್ತತ್ಸಿದ್ಧಮಾಗಮಾಪ್ರಾಮಾಣ್ಯಂ। ಅತಸ್ತೇಷಾಂ ಪ್ರತ್ಯಕ್ಷವದನುಮಾನವಚ್ಚಾಂಗೀಕರ್ತವ್ಯಂ ಆಗಮ ಪ್ರಾಮಾಣ್ಯಮ್ ।**

**ಅನುವಾದ**—ಅನುಮಾನದಿಂದ ಆಗಮಕ್ಕೆ ಅಪ್ರಾಮಾಣ್ಯವನ್ನು ಸಾಧಿಸುತ್ತೇವೆಂದು ಹೇಳಿದರೆ, ಆಗಮಕ್ಕೆ ಅಪ್ರಾಮಾಣ್ಯವನ್ನು ಸಾಧಿಸಿದಂತೆ ಅನುಮಾನಾದಿಗಳಿಗೂ ಅಪ್ರಾಮಾಣ್ಯವನ್ನು ಸಾಧಿಸಬಹುದು. ಅನುಮಾನಾದಿಗಳಿಗೆ ಅಪ್ರಾಮಾಣ್ಯ ವಿರಲಿ ಎಂದರೆ, ಆಗಮಗಳಿಗೆ ಅಪ್ರಾಮಾಣ್ಯ ಸಾಧಕಾನುಮಾನವೂ ಅಪ್ರಮಾಣವಾಗುವುದರಿಂದ, ಆಗಮಕ್ಕೆ ಅಪ್ರಾಮಾಣ್ಯವನ್ನು ಅನುಮಾನ ಹೇಗೆ ಸಾಧಿಸೀತು? ಆಗಮಾಪ್ರಾಮಾಣ್ಯವನ್ನು ಸಾಧಿಸುವ ಅನುಮಾನ ಮಾತ್ರ ಪ್ರಮಾಣ,ಅನುಮಾನಾದಿಗಳ ಅಪ್ರಾಮಾಣ್ಯವನ್ನು ಸಾಧಿಸುವ ಅನುಮಾನವು ಪ್ರಮಾಣವಲ್ಲ ಎನ್ನುವಲ್ಲಿ ವಿಶೇಷ ಪ್ರಮಾಣವೇನೂ ಇಲ್ಲ. ವಸ್ತುತಃ ಪ್ರತ್ಯಕ್ಷ ಮತ್ತು ಅನುಮಾನಗಳು ಪ್ರಮಾಣ, ಆಗಮ ಮಾತ್ರ ಅಪ್ರಮಾಣವೆನ್ನುವ ವಿಷಯದಲ್ಲಿ ಯಾವ ವಿಶೇಷ ಪ್ರಮಾಣವೂ ಇಲ್ಲ. ಆದ್ದರಿಂದ ಆಗಮ ಅಪ್ರಮಾಣವಲ್ಲ. ಬೌದ್ಧಾದಿಗಳು ತಮ್ಮ ತಮ್ಮ ಆಗಮಗಳಿಗೆ ಪ್ರಾಮಾಣ್ಯವನ್ನು ಒಪ್ಪಿರುವುದರಿಂದಲೂ ಆಗಮವು ಯಾವುದೂ ಪ್ರಮಾಣವಲ್ಲವೆಂದರೆ ಸ್ವವ್ಯಾಹತವೂ ಆಗುತ್ತದೆ. ಆಗಮ ಪ್ರಾಮಾಣ್ಯವನ್ನು ಒಪ್ಪದೆ ಆಗಮಶಾಸ್ತ್ರಗಳು ಕೇವಲ ಸಂಭಾವನಾ ಮಾತ್ರೋಪಯೋಗಿ ಎನ್ನುವುದಾದರೆ ಕೇವಲ ಅನುಮಾನ ಅಥವಾ ಪ್ರತ್ಯಕ್ಷದಿಂದ ಸಪ್ತಮಲಧಾರಣ ಮತ್ತು ಬುದ್ಧ ವಂದನೆಗಳಿಗೆ ಸ್ವರ್ಗಸಾಧನತ್ವವನ್ನು ನಿಶ್ಚೈಸಲು ಸಾಧ್ಯವಿಲ್ಲವೆಂದಾದೀತು. ಪ್ರತ್ಯಕ್ಷ ಮಾತ್ರವೇ ಪ್ರಮಾಣವೆಂದು ಹೇಳುವ ಚಾರ್ವಾಕನಿಗೂ ಆಗಮಾಪ್ರಾಮಾಣ್ಯವು ಪ್ರತ್ಯಕ್ಷ ವಿಷಯವಲ್ಲವಾದ್ದರಿಂದ ಪ್ರತ್ಯಕ್ಷದಿಂದ ಆಗಮಾಪ್ರಾಮಾಣ್ಯವು ಸಿದ್ಧವಾಗುವುದಿಲ್ಲ. ಆದ್ದರಿಂದ ಅವರೂ ಕೂಡ ಪ್ರತ್ಯಕ್ಷ ಮತ್ತು ಅನುಮಾನಗಳಂತೆಯೇ ಆಗಮವೂ ಪ್ರಮಾಣ ಎಂದು ಒಪ್ಪಬೇಕು.

**ಭಾಷ್ಯ—ಉಕ್ತಂ ಚ ಭವಿಷ್ಯತ್ಪರ್ವಣಿ—**

**ಯೇನೋಕ್ತಮಾಗಮಾಮಾತ್ವಂ ಕುತಸ್ತದಿತಿ ತಂ ವದೇತ್ ।**
**ಪ್ರತ್ಯಕ್ಷಾದೇರ್ಯದಿ ಬ್ರೂಯಾತ್ ತನ್ಮಾತ್ವಂ ಕ್ವೇತಿ ತಂ ವದೇತ್ ।**
**ತತ್ ಸ್ವತಶ್ಚೇದಾಗಮಸ್ಯ ಪ್ರಾಮಾಣ್ಯಂ ನ ಸ್ವತಃ ಕುತಃ ।**
**ಪರತಶ್ಚೇತ್ ಪ್ರಮಾಣಸ್ಯ ನ ಕಸ್ಯಾಪಿ ಸ್ಥಿತಿರ್ಭವೇತ್ ।**

**ಅಂಗೀಕೃತಂ ಚ ಪ್ರಾಮಾಣ್ಯಂ ಸರ್ವೈರಪ್ಯಾಗಮಸ್ಯ ತು ।**
**ಯತಃ ಸ್ವಪಕ್ಷಪ್ರಾಮಾಣ್ಯಂ ವಿರೋಧೇಽಪ್ಯಕ್ಷಜಾದಿನಾ ।**
**ಅಂಗೀಕುರ್ವಂತಿ ತತ್ಪಕ್ಷಃ ಪ್ರತ್ಯಕ್ಷಾದಿವಿರೋಧಕಃ ।**

**ಅನುವಾದ**—ಈ ವಿಷಯವು ಭವಿಷ್ಯತ್ಪರ್ವದಲ್ಲಿಯೂ ಹೇಳಲ್ಪಟ್ಟಿದೆ—ಆಗಮಾಪ್ರಾಮಾಣ್ಯವನ್ನು ಹೇಳುವವನನ್ನು 'ಅದು ಯಾವುದರಿಂದ ಸಿದ್ಧವಾಗುತ್ತದೆ' ಎಂದು ಕೇಳಬೇಕು. 'ಪ್ರತ್ಯಕ್ಷ ಮತ್ತು ಅನುಮಾನದಿಂದ' ಎಂದು ಹೇಳಿದರೆ 'ಅವುಗಳ ಪ್ರಾಮಾಣ್ಯವು ಹೇಗೆ ಸಿದ್ಧವಾಗುತ್ತದೆ' ಎಂದು ಕೇಳಬೇಕು. 'ಪ್ರತ್ಯಕ್ಷ ಅನುಮಾನಗಳಿಗೆ ಸ್ವತಃ ಪ್ರಾಮಾಣ್ಯ' ಎಂದು ಹೇಳಿದರೆ, 'ಆಗಮಕ್ಕೆ ಏಕೆ ಸ್ವತಃ ಪ್ರಾಮಾಣ್ಯವಿಲ್ಲ ? ಆಗಮಕ್ಕೂ ಸ್ವತಃ ಪ್ರಾಮಾಣ್ಯವನ್ನು ಒಪ್ಪಲೇಬೇಕು. ಈ ತೊಂದರೆಯ ಪರಿಹಾರಕ್ಕಾಗಿ ಪ್ರತ್ಯಕ್ಷ ಅನುಮಾನಗಳಿಗೂ ಪರತಃ ಪ್ರಾಮಾಣ್ಯವನ್ನು ಒಪ್ಪಿದರೆ ಆಗ ಅನವಸ್ಥಾದೋಷವು ಬರುತ್ತದೆ. ವಸ್ತುತಃ ಆಗಮವನ್ನು ಅಪ್ರಮಾಣವೆನ್ನುವವರು ಎಲ್ಲರೂ ಆಗಮಪ್ರಾಮಾಣ್ಯವನ್ನು ಅಂಗೀಕರಿಸಿಯೇ ಇದ್ದಾರೆ. ಏಕೆಂದರೆ ತಮ್ಮ ಪಕ್ಷಕ್ಕೆ ಪ್ರತ್ಯಕ್ಷಾದಿ ವಿರೋಧವಿದ್ದರೂ 'ತಮ್ಮ ಮತಸ್ಥಾಪಕರು ಹೇಳಿದ್ದಾರೆ' ಎಂಬ ಕಾರಣದಿಂದ ತಮ್ಮ ತಮ್ಮ ಪಕ್ಷಗಳನ್ನು ಒಪ್ಪುತ್ತಾರೆ. ಅವರ ಪಕ್ಷಗಳಿಗೆ ಪ್ರತ್ಯಕ್ಷಾದಿ ವಿರೋಧವು ಇರುವ ಬಗ್ಗೆ ಸಂಶಯ ಬೇಡ. ಇದ್ದೇ ಇದೆ.

**ಬೌದ್ಧಾದಿಗಳಿಗೆ ಪ್ರತ್ಯಕ್ಷಾಗಮಗಳ ವಿರೋಧ :**

**ಭಾಷ್ಯ—ಶೂನ್ಯತಾ ಕ್ಷಣಿಕತ್ವಂ ಚ ಜ್ಞಾನಮಾತ್ರತ್ವಮೇವ ಚ ।**
**ಭಾವಾಭಾವಾತ್ಮತಾ ಸಾಕಂ ಶರೀರಾತ್ಮತ್ವಮೇವ ಚ ।**
**ಪ್ರತ್ಯಕ್ಷೇಣ ವಿರುಧ್ಯಂತೇ ಮದ್ದೇಹ ಇತಿ ದರ್ಶನಾತ್ ।**
**ಭಾವರೂಪಸ್ಥಿರತ್ವಾದೇಃ ಜ್ಞಾನಾದ್ ಭೇದಸ್ಯ ದರ್ಶನಾತ್ ।**
**ದೇಹಭೇದೋ ಯದ್ಯಮುಖ್ಯೋ ದೇಹೈಕ್ಯೇ ಮುಖ್ಯತಾ ಕುತಃ ।**
**ಜಾತಿಸ್ಮೃತಿಪ್ರಮಾಣಾಚ್ಚ ನ ಯುಕ್ತಾ ದೇಹರೂಪತಾ ।**
**ಅನುಷ್ಠಾಯ ಚ ಶಾಸ್ತ್ರಾರ್ಥಂ ಫಲಭೋಗಸ್ಯ ದರ್ಶನಾತ್ ।**
**ಪ್ರತ್ಯಕ್ಷಾದೇರ್ವಿರುದ್ಧತ್ವಾತ್ ಸೌಗತಾದ್ಯಾ ದುರಾಗಮಾಃ ।**
**ಬಹ್ವಾಗಮ ವಿರೋಧಾಚ್ಚ ದುಷ್ಟತ್ವಂ ತೇಷು ಸಂಸ್ಥಿತಮ್ ।**

**ಅನುವಾದ**—ಜಗತ್ತು ಶೂನ್ಯ, ಕ್ಷಣಿಕ, ಜ್ಞಾನರೂಪ ಎಂದು ಬೌದ್ಧಮತ ಪ್ರಭೇದಗಳು. ಪದಾರ್ಥಗಳು ಏಕಕಾಲದಲ್ಲಿ ಸತ್ ಆಗಿರುತ್ತವೆ, ಅಸತ್ತಾಗಿರುತ್ತವೆ, ಸತ್ ಮತ್ತು ಅಸತ್ ಎರಡೂ ಆಗಿರುತ್ತವೆ, ಎರಡಕ್ಕಿಂತ ವಿಲಕ್ಷಣವೂ ಆಗಿರುತ್ತವೆ ಎಂದು ಮುಂತಾಗಿ ಜೈನ ಮತ. ದೇಹವೇ ಆತ್ಮ ಎಂದು ಚಾರ್ವಾಕ ಮತ. ಇವೆ

ಲ್ಲವೂ ಪ್ರತ್ಯಕ್ಷ ವಿರುದ್ಧವಾದವು. ಏಕೆಂದರೆ 'ನನ್ನ ದೇಹ' ಎಂದು ದೇಹಭೇದ ಪ್ರತ್ಯಕ್ಷವಿದೆ. ಪ್ರಪಂಚದಲ್ಲಿ ಸತ್ತ್ವಸ್ಥಿರತ್ವಾದಿ ಅನುಭವವೂ ಇದೆ. ಜ್ಞಾನಕ್ಕೂ ಘಟಕ್ಕೂ ಭೇದದ ಅನುಭವವಿದೆ " 'ನನ್ನ ದೇಹ' ಎಂಬುದು ಅಮುಖ್ಯ ಪ್ರಯೋಗ. ನಿಜವಾಗಿ ದೇಹಾತ್ಮೈಕ್ಯವೇ ಇದೆ" ಎಂದು ಹೇಳಿದರೆ, 'ನಾನು ಸ್ಥೂಲನಾಗಿದ್ದೇನೆ' ಎಂದು ಮುಂತಾದ ದೇಹೈಕ್ಯ ವ್ಯವಹಾರವೇಕೆ ಮುಖ್ಯ? 'ನಾನು ದೇಹ' ಎಂಬ ಅನುಭವವಿಲ್ಲದಿರುವುದರಿಂದ ಅಮುಖ್ಯ ವೇಕಾಗಬಾರದು ? ದೇಹವೇ ಆತ್ಮನಾಗಿದ್ದರೆ ಮರಣಾನಂತರ ದೇಹನಾಶವಾದಂತೆ ಆತ್ಮನಾಶವೂ ಆಗುತ್ತದೆ. ಹೀಗಿರುವಾಗ ಅಲ್ಲಲ್ಲಿ ಕಂಡುಬರುವ ಪೂರ್ವಜನ್ಮಸ್ಮರಣೆಯನ್ನು ಹೇಗೆ ಕೂಡಿಸುವುದು? ಒಂದು ದೇಹಕ್ಕೆ ಅನುಭವ, ಇನ್ನೊಂದಕ್ಕೆ ಸ್ಮರಣೆ ಕೂಡದು ತಾನೆ? ದೇಹಾತಿರಿಕ್ತ ಆತ್ಮ ಇದ್ದರೆ ಅವನಿಗೆ ಒಂದು ದೇಹ ಹೋಗಿ ಇನ್ನೊಂದು ದೇಹ ಬಂದರೂ ಪೂರ್ವಜನ್ಮ ಸ್ಮರಣೆಯನ್ನು ಸಮರ್ಥಿಸಬಹುದು. ಒಂದು ಜನ್ಮದಲ್ಲಿ ಮಾಡಿದ ದೇವತಾರ್ಚನಾದಿ ಅನುಷ್ಠಾನಕ್ಕೆ ಇನ್ನೊಂದು ಜನ್ಮದಲ್ಲಿ ಫಲಭೋಗ ಉಂಟಾಗುವುದು ಶಾಸ್ತ್ರಸಿದ್ಧ ವಾಗಿರುವುದರಿಂದಲೂ ಆತ್ಮನು ದೇಹ ರೂಪನಲ್ಲ. ಹೀಗೆ ಪ್ರತ್ಯಕ್ಷಾದಿ ವಿರೋಧ ವಿರುವುದರಿಂದ ಬೌದ್ಧಾದಿ ಆಗಮಗಳು ದುರಾಗಮಗಳು. ಬಹು ಆಗಮಗಳ ವಿರೋಧವಿರುವುದರಿಂದಲೂ ಅವು ದುಷ್ಟಾಗಮಗಳೆಂದು ಸಿದ್ಧವಾಗುತ್ತದೆ.

**ಭಾಷ್ಯ—ಪ್ರಾಮಾಣ್ಯಂ ಸ್ವೀಕೃತಂ ಯೈಸ್ತು ವೇದಾನಾಮಾಗಮಾ ಹಿ ತೇ ।**
**ಶತಕೋಟಯಃ ಪಂಚರಾತ್ರಂ ಪುರಾಣಂ ತಾವದೇವ ಚ ।**
**ರಾಮಸ್ಯ ಚರಿತಂ ತಾವತ್ ತಾವದನ್ಯಚ್ಚ ಸರ್ವಶಃ ।**
**ಅನಂತಾಶ್ಚ ತಥಾ ವೇದಾಃ ಸಾಂಗೋಪಾಂಗಾಶ್ಚ ಸರ್ವಶಃ ।**
**ಸರ್ವಾಧಿಕ್ಯಂ ಯತ್ರ ವಿಷ್ಣೋಸ್ತಾತ್ಪರ್ಯಾತ್ ಸಮುದೀರ್ಯತೇ ।**
**ವಿಂಶದೇವ ಸಹಸ್ರಾಣಿ ಶ್ಲೋಕಾನಾಂ ಸಮುದೀರಿತಮ್ ।**
**ಬಾರ್ಹಸ್ಪತ್ಯಂ ತಥಾ ಬೌದ್ಧಂ ಭಾವಾಭಾವಮತಂ ತಥಾ ।**
**ಶಿವಶಕ್ತ್ಯಾದಿಕಂ ಯಚ್ಚ ಕಿಂಚಿತ್ಪ್ರಾಮಾಣ್ಯ ಸಂಯುತಮ್ ।**
**ತ್ರಿಂಶತ್ಕೋಟ್ಯೇವ ತತ್ ಸರ್ವಮತೋ ಮಾನಂ ನ ತತ್ ಸ್ಮೃತಮ್।**

**ಅನುವಾದ**—ಯಾವ ಶಾಸ್ತ್ರಗಳು ವೇದಕ್ಕೆ ಪ್ರಾಮಾಣ್ಯವನ್ನು ಒಪ್ಪುತ್ತವೆಯೊ ಅವೇ ಆಗಮಗಳೆಂದು ಶಾಸ್ತ್ರದಲ್ಲಿ ಪ್ರಸಿದ್ಧವಾಗಿವೆ. ಬೌದ್ಧಾದಿ ಶಾಸ್ತ್ರಗಳಲ್ಲ. ಈ ಆಗಮಗಳು ಗಾತ್ರದಲ್ಲಿಯೂ ಬೌದ್ಧಾದಿ ಶಾಸ್ತ್ರಗಳಿಗಿಂತ ಹೆಚ್ಚು. ಪಂಚರಾತ್ರಾಗಮ, ಪುರಾಣಗಳು, ರಾಮಾಯಣ ಮತ್ತು ಬೇರೆ ಸ್ಮೃತ್ಯಾದಿಗಳು ಪ್ರತಿಯೊಂದೂ ನೂರು ನೂರು ಕೋಟಿ ಗ್ರಂಥಗಳನ್ನು ಒಳಗೊಂಡಿವೆ. ಮೂವತ್ತೆರಡು ಅಕ್ಷರಗಳಿಗೆ ಒಂದು ಗ್ರಂಥವೆಂದು ಹೆಸರು. ಶಿಕ್ಷಾ, ಕಲ್ಪ, ನಿರುಕ್ತ, ವ್ಯಾಕರಣ, ಛಂದಸ್ಸು, ಜ್ಯೋತಿಷವೆಂಬ

ಆರು ಅಂಗಗಳಿಂದಲೂ ಮತ್ತು ಉಪಾಂಗಗಳಿಂದಲೂ ಕೂಡಿದ ವೇದವಂತೂ ಅನಂತವಾಗಿದೆ. ಎಲ್ಲಿ ವಿಷ್ಣುವಿಗೆ ತಾತ್ಪರ್ಯ ಪೂರ್ವಕವಾಗಿ ಸರ್ವೋತ್ತಮತ್ವವು ಹೇಳಲ್ಪಡುತ್ತದೆಯೋ ಅದೇ ಮುಖ್ಯವಾಗಿ ಆಗಮ. ವೇದಪ್ರಾಮಾಣ್ಯವನ್ನು ಒಪ್ಪುವ ಶಾಸ್ತ್ರಗಳು ಆಗಮಗಳು ಎಂದು ಸಾಮಾನ್ಯ ದೃಷ್ಟಿಯಿಂದ ಹೇಳಿದುದು. ಅಕ್ಷಪಾದ, ಕಣಾದರು ವೇದಪ್ರಾಮಾಣ್ಯವನ್ನು ಒಪ್ಪಿದರೂ ವಿಷ್ಣು ಸರ್ವೋತ್ತಮತ್ವವನ್ನು ಹೇಳದಿರುವುದರಿಂದ ಅವರ ತರ್ಕಶಾಸ್ತ್ರ ಮುಖ್ಯವಾಗಿ ಆಗಮವಲ್ಲ. ಚಾರ್ವಾಕ ಬೌದ್ಧ ಜೈನ ಗ್ರಂಥಗಳು ಪ್ರತಿಯೊಂದೂ ಇಪ್ಪತ್ತು ಸಾವಿರ ಶ್ಲೋಕಗಳಾಗುತ್ತವೆ. ವೇದ ಪ್ರಾಮಾಣ್ಯವನ್ನು ಒಪ್ಪುವುದರಿಂದ ಕಿಂಚಿತ್ ಪ್ರಾಮಾಣ್ಯವಿರುವ ಶೈವಾಗಮ, ಶಾಕ್ತಾಗಮ ಮುಂತಾದವು ಎಲ್ಲವೂ ಸೇರಿ ಮೂವತ್ತು ಕೋಟಿ ಶ್ಲೋಕಗಳು ಮಾತ್ರವೇ ಆಗುತ್ತವೆ. ಹೀಗೆ ಬಹು ಸಂಖ್ಯೆಯುಳ್ಳದ್ದಿರುವ ವೇದಾದಿ ಪ್ರಮಾಣಗಳಿಗೆ ವಿರುದ್ಧವಾದ, ಅಲ್ಪಸಂಖ್ಯೆಯ ಬೌದ್ಧಾದಿ ಶಾಸ್ತ್ರಗಳಾವುವೂ ಪ್ರಮಾಣವಲ್ಲ.

**ವೇದವು ಪ್ರಮಾಣಗಳಲ್ಲಿ ಶ್ರೇಷ್ಠ :**

**ಭಾಷ್ಯ—ಬಹುಮಾನವಿರುದ್ಧಂ ಯನ್ನ ತನ್ಮಾನಂ ವಿದೋ ವಿದುಃ ।**
**ಗುಣಸಾಮ್ಯೇऽಪಿ ಕಿಮುತ ಗುಣಾಧಿಕವಿರೋಧಿ ಯತ್ ।**
**ಯಥಾ ಬಹೂನಾಂ ಜ್ಞಾನಾನಾಂ ಸಮಾನಾಂ ಗುಣತೋऽಪಿ ಚ ।**
**ವಿರೋಧ್ಯೇಕಂ ತು ಯದ್ ಜ್ಞಾನಂ ನ ಮಾನತ್ವಂ ಗಮಿಷ್ಯತಿ ।**
**ಪ್ರತ್ಯಕ್ಷಾದೌ ಹಿ ಬಹುಭಿಃ ಸಮ್ಯೈರೇಕಮುಪೋದ್ಯತೇ ।**

**ಅನುವಾದ**—ಬಹುಪ್ರಮಾಣ ವಿರುದ್ಧವಾದ ಒಂದು ಪ್ರಮಾಣವು ಅವೆರಡಕ್ಕೂ ಆಗಮತ್ವಾದಿ ಗುಣಸಾಮ್ಯವಿದ್ದರೂ ಪ್ರಮಾಣವಾಗುವುದಿಲ್ಲವೆಂದು ಜ್ಞಾನಿಗಳು ತಿಳಿಯುತ್ತಾರೆ. ಇನ್ನು ಬಹುಪ್ರಮಾಣಗಳು ಗುಣದಿಂದಲೂ ಅಧಿಕವಾಗಿದ್ದರೆ ಅವುಗಳಿಗೆ ವಿರೋಧಿಯಾದ ಮತ್ತು ಗುಣದಿಂದ ಹೀನವಾದ ಶಾಸ್ತ್ರಪ್ರಮಾಣವಾಗುವುದಿಲ್ಲವೆಂಬುದು ಸುತರಾಂ ಸಿದ್ಧವಾಗುತ್ತದೆ. ಬಹುತ್ವಪ್ರಯುಕ್ತಪ್ರಾಬಲ್ಯಕ್ಕಿಂತ ಸ್ವಭಾವ ಪ್ರಾಬಲ್ಯವೇ ಮೇಲು ಎಂದೂ ಜ್ಞಾನಿಗಳು ತಿಳಿಯುತ್ತಾರೆ. ಪ್ರತ್ಯಕ್ಷಾದಿಗಳಲ್ಲಿ ಗುಣದಲ್ಲಿ ಸಮಾನವಾದ, ಬಹುಪ್ರಮಾಣಗಳಿಗೆ ವಿರುದ್ಧವಾದ ಒಂದು ಪ್ರಮಾಣವು ಆಭಾಸವಾಗುತ್ತದೆ ಎಂಬುದು ದೃಷ್ಟವಾಗಿದೆ. ಉದಾಹರಣೆಗೆ– 'ಇದಂ ರಜತಂ' ಎಂಬ ದೋಷಯುಕ್ತವಾದ ಒಂದು ಪ್ರತ್ಯಕ್ಷವು 'ನೇದಂ ರಜತಂ' ಎಂಬ ಪ್ರತ್ಯಕ್ಷ, ದಾಹ ಮತ್ತು ಛೇದರೂಪವಾದ ಒಂದು ಯುಕ್ತಿ, 'ನೇದಂ ರಜತಂ' ಎಂಬ ಆಪ್ತವಾಕ್ಯ ಈ ಮೂರು ನಿರ್ದೋಷ ಜ್ಞಾನಗಳಿಂದ ಬಾಧಿಸಲ್ಪಡುತ್ತದೆ. 'ವಿಮತಂ ಮಿಥ್ಯಾ ದೃಶ್ಯತ್ವಾತ್' ಎಂಬ ಒಂದು ಅನುಮಾನವು 'ಘಟಃ ಸನ್' ಇತ್ಯಾದಿ ಪ್ರತ್ಯಕ್ಷ, 'ಪ್ರಮಾಣ ದೃಷ್ಟತ್ವಾತ್' ಎಂಬ ಯುಕ್ತಿ, 'ವಿಶ್ವಂ ಸತ್ಯಂ'

ಎಂಬ ಆಗಮ ಈ ಮೂರು ನಿರ್ದೋಷಜ್ಞಾನಗಳಿಂದ ಬಾಧಿಸಲ್ಪಡುತ್ತದೆ. 'ಇದಂ ರಜತಂ' ಎಂಬ ಒಂದು ವಾಕ್ಯವೂ 'ವಿಶ್ವಂ ಮಿಥ್ಯಾ' ಎಂಬ ಒಂದು ವಾಕ್ಯವೂ ಪ್ರತ್ಯಕ್ಷಾದಿ ಬಹುಪ್ರಮಾಣಗಳಿಂದ ಬಾಧಿಸಲ್ಪಡುತ್ತದೆ: ಇಲ್ಲಿ ಜ್ಞಾನತ್ವಾದಿ ಗುಣಗಳು ಸಮಾನವೆ ಆದರೂ ಒಂದು ಜ್ಞಾನವು ಬಹುಜ್ಞಾನ ವಿರೋಧದಿಂದ ಬಾಧಿತವಾಗುವುದು ಕಂಡಿದೆ. ಇದೇ ರೀತಿ ಬಹುತ್ವ ಪ್ರಯುಕ್ತವಾಗಿ ವೇದಗಳಿಗೆ ಪ್ರಾಮಾಣ್ಯವು ಲಭಿಸುತ್ತದೆ. ಆದ್ದರಿಂದ ಬೌದ್ಧಾದಿ ಶಾಸ್ತ್ರಗಳಿಗೆ ಪ್ರತ್ಯಕ್ಷಾದಿ ವಿರೋಧ ಪ್ರಯುಕ್ತ ಅಪ್ರಾಮಾಣ್ಯವಿರುವಾಗ ಅವುಗಳ ವಿರೋಧದಿಂದ ವೇದಾದಿಗಳಿಗೆ ಅಪ್ರಾಮಾಣ್ಯ ಹೇಗೆ ಸಿದ್ಧಿಸೀತು ?

**ಭಾಷ್ಯ—ತಸ್ಮಾದ್ವೇದಾಃ ಪ್ರಮಾಣಂ ಸ್ಯುರ್ಬಾಹುಲ್ಯಾದೇವ ಕಿಂ ಪುನಃ ।**
**ಅದೋಷತ್ವಾದ್ ಗುಣಾಚ್ಚೈವ ಬಲವತ್‌ಕಾರ್ಯಸಾಧನಾತ್ ।**
**ವೇದೋಕ್ತಕರ್ಮಯುಕ್ತಾನಾಂ ತಥಾ ಸಿದ್ಧಿಮತಾಮಪಿ ।**
**ವೇದಬಾಹ್ಯಕ್ರಿಯಾಯೋಗಾನ್ನ ಬಾಧಃ ಕ್ವಾಪಿ ದೃಶ್ಯತೇ ।**
**ವೇದೋಕ್ತಕರ್ಮಸಿದ್ಧಾನಾಂ ನಾಬಾಧ್ಯಂ ದೃಶ್ಯತೇ ಕ್ವಚಿತ್ ।**
**ಅಸಾಧ್ಯಂ ವಾ ತತೋ ವೇದಾಃ ಪ್ರಾಮಾಣ್ಯಂ ನಿಶ್ಚಯಾದ್ ಗತಾಃ।**
**ಇತಿ ।**

**ಅನುವಾದ**—ವಸ್ತುತಃ ವೇದಾದಿಗಳು ಅಪ್ರಮಾಣಗಳೆನ್ನಲು ಪ್ರಮಾಣ ಇಲ್ಲ ಎನ್ನುವುದಷ್ಟೇ ಅಲ್ಲ,ಅವು ಪ್ರಮಾಣ ಎಂಬ ವಿಷಯದಲ್ಲಿ ಪ್ರಮಾಣವೂ ಇದೆ. ಪರಸ್ಪರ ವಿರೋಧಿ ಜ್ಞಾನಗಳಲ್ಲಿ ಗುಣಸಾಮ್ಯವಿದ್ದರೂ, ಬಹುತ್ವಪ್ರಯುಕ್ತ ಪ್ರಾಮಾಣ್ಯವನ್ನು ನಿರ್ಧರಿಸಲಾಗುವುದರಿಂದ ಕೇವಲ ಬಹುತ್ವದಿಂದಲೇ ವೇದಾದಿಗಳಿಗೆ ಪ್ರಾಮಾಣ್ಯ ಸಿದ್ಧಿಸುತ್ತದೆ, ಎಂದಮೇಲೆ ಅಪೌರುಷೇಯತ್ವ ಪ್ರಯುಕ್ತ ನಿರ್ದೋಷತ್ವರೂಪ ಗುಣದಿಂದ ಸುತರಾಂ ಪ್ರಾಮಾಣ್ಯ ಸಿದ್ಧವಾಗುತ್ತದೆ. ವೇದೋಕ್ತ ಕರ್ಮಾನುಷ್ಠಾನ ಮಾಡುವವರಿಗೆ ಮತ್ತು ಅದರಲ್ಲಿ ಸಿದ್ಧಿಯನ್ನು ಪಡೆದವರಿಗೆ ವೇದಬಾಹ್ಯರಾದ ಬೌದ್ಧಾದಿಗಳು ಮಾಡುವ ಮಾರಣಾದಿ ಅಭಿಚಾರ ಕ್ರಿಯೆಗಳಿಂದ ಯಾವ ಬಾಧೆಯೂ ಉಂಟಾಗುವುದಿಲ್ಲ. ಅಂತಹ ವೈದಿಕರು ವೇದಬಾಹ್ಯರನ್ನುದ್ದೇಶಿಸಿ ಮಾಡಿದ ಅಭಿಚಾರಕ್ರಿಯೆಯಿಂದ ಅವರಿಗೆ ಬಾಧೆಯಾಗದಿರುವುದೂ ಇಲ್ಲ. ಅಂತಹ ವೈದಿಕರಿಗೆ ಅಸಾಧ್ಯವಾದುದು ಯಾವುದೂ ಇಲ್ಲ. ಆದ್ದರಿಂದ ಇಂತಹ ಪ್ರಬಲ ಕಾರ್ಯಸಾಧಕತ್ವವು ಇರುವುದರಿಂದಲೂ ಕೂಡಾ ವೇದಗಳು ನಿಶ್ಚಯವಾಗಿ ಬೌದ್ಧಾದಿ ಶಾಸ್ತ್ರಗಳಿಗಿಂತ ಪ್ರಬಲವಾಗಿದ್ದು ಪ್ರಮಾಣವೆನಿಸುತ್ತವೆ ಎಂದೂ ಪ್ರಮಾಣವಚನವಿದೆ.

**ಪ್ರತ್ಯಕ್ಷ, ಅನುಮಾನ, ಶಬ್ದಗಳೆಂದು ಮೂರೇ ಪ್ರಮಾಣಗಳು :**

**ಭಾಷ್ಯ—ಪ್ರತ್ಯಕ್ಷಮನುಮಾನಂ ಚ ವಾಕ್ಯಂ ಚೇತಿ ತ್ರಿಧಾ ಪ್ರಮಾ ।**
**ಉಪಮಾದ್ಯಂ ಪ್ರಮಾಣಂ ಯದೇತೇಷ್ವಂತರ್ಗತಂ ಹಿ ತತ್ ।**

ನಿರ್ದೋಷೇಂದ್ರಿಯ ಸಂಯೋಗಃ ಪ್ರತ್ಯಕ್ಷಮಿತಿ ಗೀಯತೇ ।
ನಿರ್ದೋಷಯುಕ್ತಿರನುಮಾ ತಾದೃಶೋಕ್ತಿಸ್ತಥಾಽಽಗಮಃ ।
ಮಾನಂ ಚೈವ ವಿಶೇಷೇಣ ನಿರ್ದೋಷ ಜ್ಞಾನಸಾಧನಮ್ ।
ಅರ್ಥಾಪತ್ತಿಶ್ಚೋಪಮಾ ಚ ಸಂಭವಾದ್ಯನುಮೈವ ತು ।
ದುಃಖಾದ್ಯಭಾವಃ ಪ್ರತ್ಯಕ್ಷಂ ಬಾಹ್ಯಗಶ್ಚಾನುಮಾ ಸ್ಮೃತಾ ।
ಯೋಗ್ಯಸ್ಯಾನುಪಲಬ್ಧ್ಯಾಖ್ಯಾ ಯುಕ್ತಿರೇವ ಹಿ ಬಾಹ್ಯಗಾ ।
ಮನಸಃ ಸಂಪ್ರಯೋಗೋ ಯೋ ದುಃಖಾದಿರಹಿತಾತ್ಮನಃ ।
ಅಭಾವರೂಪಂ ಪ್ರತ್ಯಕ್ಷಂ......॥

**ಅನುವಾದ**—ಪ್ರತ್ಯಕ್ಷ, ಅನುಮಾನ ಮತ್ತು ಆಗಮ ಎಂದು ಅನುಪ್ರಮಾಣಗಳು ಮೂರು ವಿಧ. ಉಪಮಾನ ಮೊದಲಾದ ಅನುಪ್ರಮಾಣಗಳು ಇವುಗಳಲ್ಲಿಯೇ ಅಂತರ್ಭಾವವನ್ನು ಹೊಂದುತ್ತವೆ; ನಿರ್ದೋಷಾರ್ಥೇಂದ್ರಿಯ ಸನ್ನಿಕರ್ಷಕ್ಕೆ ಪ್ರತ್ಯಕ್ಷವೆಂದು ಹೆಸರು. ನಿರ್ದೋಷ ಯುಕ್ತಿಯೇ ಅನುಮಾನ. ನಿರ್ದೋಷ ಶಬ್ದವೇ ಆಗಮ. ಇವು ಪ್ರತ್ಯಕ್ಷ, ಅನುಮಾನ ಮತ್ತು ಆಗಮಗಳಿಗೆ ವಿಶೇಷ ಲಕ್ಷಣಗಳು. ಯಥಾರ್ಥಜ್ಞಾನ ಸಾಧನತ್ವವು ಮೂರಕ್ಕೂ ಸಾಮಾನ್ಯವಾದ ಲಕ್ಷಣ. ಅರ್ಥಾಪತ್ತಿ, ಉಪಮಾನ ಮತ್ತು ಸಂಭವ, ಪರಿಶೇಷ ಮೊದಲಾದವುಗಳು ಅನುಮಾನದಲ್ಲಿಯೇ ಅಂತರ್ಭಾವ ಹೊಂದುತ್ತವೆ. ದುಃಖರಹಿತನಾದ ಆತ್ಮನಿಗೆ ಮನಃ ಸಂಯೋಗದಿಂದ 'ನನ್ನಲ್ಲಿ ದುಃಖವಿಲ್ಲ' ಎಂಬ ಜ್ಞಾನವು ಬರುವುದರಿಂದ ಅದು ಪ್ರತ್ಯಕ್ಷದಲ್ಲಿ ಸೇರುತ್ತದೆ. ಬಾಹ್ಯವಸ್ತುವಿನ ಅಭಾವಜ್ಞಾನವು ಬೇಗ ಉಂಟಾದರೆ ಪ್ರತ್ಯಕ್ಷದಲ್ಲಿಯೂ, ವಿಮರ್ಶೆಮಾಡಿ ನಿಧಾನವಾಗಿ ಉಂಟಾದರೆ ಅನುಮಾನದಲ್ಲಿಯೂ ಅಂತರ್ಭಾವ ಹೊಂದುತ್ತದೆ. 'ಮನೆಯಲ್ಲಿ ಆನೆ ಇಲ್ಲ' ಎಂಬ ಜ್ಞಾನವು ಆಲೋಚನೆ ಇಲ್ಲದೆಯೆ ಉಂಟಾಗುವುದರಿಂದ ಪ್ರತ್ಯಕ್ಷದಲ್ಲಿ ಸೇರುತ್ತದೆ. ಕತ್ತಲೆಯಲ್ಲಿ ಕೈಯಿಂದ ತಡಕಿ ಅನಂತರ ಉಂಟಾಗುವ ಘಟಾಭಾವಜ್ಞಾನವು 'ಇಲ್ಲಿ ಘಟವಿಲ್ಲ, ಏಕೆಂದರೆ ಅದು ಇರುತ್ತಿದ್ದರೆ ಕೈಗೆ ಸಿಗುತ್ತಿತ್ತು. ಸಿಗದಿದ್ದುದರಿಂದ ಇಲ್ಲ' ಎಂಬ ಅನುಮಾನದಲ್ಲಿಯೇ ಅಂತರ್ಭಾವ ಹೊಂದುತ್ತದೆ.

**ವಿವರಣೆ**—ಬದುಕಿರುವ ವ್ಯಕ್ತಿಯು ಮನೆಯಲ್ಲಿ ಇಲ್ಲವೆಂದು ತಿಳಿದರೆ ಹೊರಗಿದ್ದಾನೆ ಎಂದು ಊಹಿಸುವುದು ಅರ್ಥಾಪತ್ತಿ. ಇದು 'ಬದುಕಿರುವ ವ್ಯಕ್ತಿಯು ಒಂದು ಕಡೆ ಇಲ್ಲದಿದ್ದರೆ ಬೇರೆ ಕಡೆ ಇದ್ದೇ ಇರುತ್ತಾನೆ' ಎಂಬ ವ್ಯಾಪ್ತಿ ಜ್ಞಾನದಿಂದ ಉಂಟಾದ ಅನುಮಾನ. ಸಾದೃಶ್ಯ ಜ್ಞಾನಸಾಧನವು ಉಪಮಾನ. 'ಗೋವು ಗವಯಸದೃಶವಾಗಿದೆ, ಗವಯವು ಗೋಸದೃಶವಾಗಿರುವುದರಿಂದ' ಎಂದು ಸಾದೃಶ್ಯಜ್ಞಾನವು ಅನುಮಾನದಿಂದ ಉಂಟಾಗುವುದರಿಂದ ಅನುಮಾನದಲ್ಲಿ

ಅಂತರ್ಭಾವ ಹೊಂದುತ್ತದೆ. 'ಗೋ ಮತ್ತು ಗವಯಗಳು ಸದೃಶವಾಗಿವೆ' ಎಂಬ ಆಪ್ತವಾಕ್ಯದಿಂದ ಸಾದೃಶ್ಯಜ್ಞಾನ ಬಂದರೆ ಅದು ಆಗಮದಲ್ಲಿ ಅಂತರ್ಭಾವ ಹೊಂದುತ್ತದೆ. 'ಈ ಅವಳಿಮಕ್ಕಳು ಸದೃಶರಾಗಿದ್ದಾರೆ' ಎಂದು ಪ್ರತ್ಯಕ್ಷವೂ ಬರಬಹುದು. ಆದ್ದರಿಂದ ಉಪಮಾನವು ಆಯಾ ಸಂದರ್ಭಗಳನ್ನನುಸರಿಸಿ ಪ್ರತ್ಯಕ್ಷ ಅನುಮಾನ, ಆಗಮಗಳಲ್ಲಿ ಅಂತರ್ಭಾವ ಹೊಂದುತ್ತದೆ. 'ನೂರು ಇದ್ದವನ ಬಳಿ ಐವತ್ತು ಇದ್ದೇ ಇದೆ' ಎನ್ನುವ ಜ್ಞಾನ ಸಂಭವವೆಂಬ ಪ್ರಮಾಣ. ಇದು 'ಯಾರ ಬಳಿ ಅಧಿಕವಿದೆಯೋ ಅವನ ಬಳಿ ಅದಕ್ಕಿಂತ ಕಡಿಮೆ ಇದ್ದೇ ಇದೆ' ಎನ್ನುವ ಅನುಮಾನದಲ್ಲಿ ಅಂತರ್ಭಾವ ಹೊಂದುತ್ತದೆ. ಹೀಗೆಯೇ ಚೈತ್ರಮೈತ್ರರಿಬ್ಬರಲ್ಲಿ 'ಇವನು ಚೈತ್ರನಲ್ಲದಿದ್ದರೆ ಮೈತ್ರನಾಗಿರುತ್ತಾನೆ' ಎಂಬ ಪರಿಶೇಷ ಪ್ರಮಾಣವು ಅನುಮಾನದಲ್ಲಿ ಅಂತರ್ಭಾವ ಹೊಂದುತ್ತದೆ. 'ಅಭಾವಜ್ಞಾನಸಾಧನವಾದದ್ದು ಅಭಾವ ಪ್ರಮಾಣ' ಎಂದು ಮೀಮಾಂಸಕರು ಹೇಳುತ್ತಾರೆ. ಇದು ಪ್ರತ್ಯಕ್ಷ ಅಥವಾ ಅನುಮಾನದಲ್ಲಿ ಅಂತರ್ಭಾವ ಹೊಂದುತ್ತದೆ.

**ಚಿನ್ಮಯವಾದ ಮನಸ್ಸು ಪ್ರಮಾಣ :**

**ಭಾಷ್ಯ—......ಮನಶ್ಚ ದ್ವಿವಿಧಂ ಸ್ಮೃತಂ ।**
**ಚೇತನಂ ಚ ಜಡಂ ಚೇತಿ ಚಕ್ಷುರಾದ್ಯಂ ತಥೈವ ಚ ।**
**ಚೇತನಂ ತ್ವಿಂದ್ರಿಯಂ ಹ್ಯಾತ್ಮಸ್ವರೂಪಾನ್ನಾಪರಂ ಸ್ಮೃತಮ್ ।**
**ಮುಕ್ತಾನಾಂ ಚೇತನಂ ತ್ವೇವ ಬದ್ಧಾನಾಮುಭಯಂ ತಥಾ ।**
**ಸ್ವರೂಪೇಣಾಪಿ ಸಂಯೋಗಃ ಸ್ವರೂಪಸ್ಯೈವ ಯುಜ್ಯತೇ ।**
**ಯಥಾ ರತ್ನಸ್ಯ ಸಂಯೋಗಃ ತತ್ಪ್ರಕಾಶೇನ ನಿತ್ಯದಾ ।**
**ರತ್ನಸ್ಯ ಚ ಪ್ರಕಾಶಸ್ಯ ನ ಭೇದಃ ಕಶ್ಚಿದಿಷ್ಯತೇ ।**
**ವಿಶೇಷೋ ನಾಮ ವಿಜ್ಞೇಯೋ ವಿಶೇಷಾದ್ ದೃಷ್ಟಿಗೋಚರಃ ।**

**ಅನುವಾದ**—ದುಃಖಾಭಾವ ಮನೋವೇದ್ಯವೆಂದ ಮಾತ್ರಕ್ಕೆ ಸಾಕ್ಷಿವೇದ್ಯತ್ವವಿಲ್ಲವೆಂದಾಗುವುದಿಲ್ಲ. ಏಕೆಂದರೆ, ಮನಸ್ಸು ಚೇತನ ಮತ್ತು ಜಡ ಎಂದು ಎರಡು ವಿಧ. ಚಕ್ಷುರಾದಿ ಇಂದ್ರಿಯಗಳೂ ಹಾಗೆಯೇ ಎರಡು ವಿಧ. ಚೇತನರೂಪವಾದ ಮನಸ್ಸು ಮತ್ತು ಚಕ್ಷುರಾದಿಗಳು ಆತ್ಮಸ್ವರೂಪವೇ. ಆತ್ಮಸ್ವರೂಪಕ್ಕೂ ಆ ಇಂದ್ರಿಯಗಳಿಗೂ ಭೇದವಿಲ್ಲ. ಮುಕ್ತರಿಗೆ ಮತ್ತು ಪರಮಾತ್ಮನಿಗೆ ಕೇವಲ ಚೇತನ ರೂಪವಾದ ಇಂದ್ರಿಯಗಳೇ ಇರುತ್ತವೆ. ಜಡರೂಪವಾದ ಇಂದ್ರಿಯಗಳು ಇರುವುದಿಲ್ಲ. ಸಂಸಾರಿ ಚೇತನರಿಗೆ ಎರಡು ವಿಧವಾದ ಇಂದ್ರಿಯಗಳೂ ಇರುತ್ತವೆ. ಚೇತನ ಮನಸ್ಸೇ ಸಾಕ್ಷಿ ಎನಿಸುತ್ತದೆ. 'ಈ ಚೇತನಮನಸ್ಸಿಗೂ ಆತ್ಮನಿಗೂ ಸಂಯೋಗವುಂಟಾಗಿ ಆತ್ಮನಲ್ಲಿ ದುಃಖಾಭಾವ ಪ್ರತ್ಯಕ್ಷ ಬರುತ್ತದೆ' ಎಂದು ಹಿಂದೆ ಹೇಳಿದೆ.

ಮನಸ್ಸೂ ಆತ್ಮಸ್ವರೂಪವೆಂದ ಮೇಲೆ ಅದಕ್ಕೂ ಮತ್ತು ಆತ್ಮನಿಗೂ ಹೇಗೆ ಸಂಯೋಗವುಂಟಾಗುತ್ತದೆ? ಎಂದರೆ,ಸ್ವರೂಪಕ್ಕೂ ಸ್ವರೂಪದೊಂದಿಗೆ ಸಂಯೋಗವು ವಿಶೇಷ ಬಲದಿಂದ ಕೂಡುತ್ತದೆ. ರತ್ನ ಮತ್ತು ಅದರ ಪ್ರಕಾಶಕ್ಕೆ ಭೇದವಿಲ್ಲದಿದ್ದರೂ ಸರ್ವದಾ ಅವುಗಳಿಗೆ ಸಂಯೋಗವಿರುವಂತೆ ಇಲ್ಲಿಯೂ ಕೂಡ. ಭೇದವಿಲ್ಲದಿರುವ ಕಡೆ ಭೇದಕಾರ್ಯವನ್ನು ನಿರ್ವಾಹ ಮಾಡಲು 'ವಿಶೇಷ' ಎಂಬ ಪದಾರ್ಥವಿರುತ್ತದೆ ಎಂದು ತಿಳಿಯಬೇಕು. ಈ ವಿಶೇಷವು ಕೆಲವು ಸ್ಥಳಗಳಲ್ಲಿ ವ್ಯವಹಾರ ವಿಶೇಷದಿಂದ ಊಹಿಸಿ ತಿಳಿದುಕೊಳ್ಳಲು ಬರುತ್ತದೆ, ಕೆಲವೆಡೆ ಪ್ರತ್ಯಕ್ಷವೇ ಆಗಿದೆ.

**ವಿಶೇಷವನ್ನು ಸಾಧಿಸುವ ಬಗೆ :**

**ಭಾಷ್ಯ—ವಿಷ್ಣೋರೇವ ಸ್ವರೂಪಾಣಾಂ ತದ್ಗುಣಾನಾಂ ತಥೈವ ಚ ।**
**ತಸ್ಯೈವ ಶಿರಆದೀನಾಂ ನೈವ ಭೇದೋಽಸ್ತಿ ಕಶ್ಚನ ।**
**ಅಭೇದೇಽಪಿ ವಿಶೇಷೇಣ ವ್ಯವಹಾರಃ ಪೃಥಗ್ ಭವೇತ್ ।**
**ವಿಷ್ಣೋರ್ಜಡೇನ ಜೀವೈಶ್ಚ ಭೇದ ಏವ ಶ್ರಿಯಾ ತಥಾ ।**
**ವಿಷ್ಣೋಃ ಕ್ರಿಯಾಶ್ಚ ಯಾಃ ಕಾಶ್ಚಿದಭೇದಸ್ತೈರಪಿ ಧ್ರುವಃ ।**
**ಕಾದಾಚಿತ್ಕತ್ವಮಪ್ಯಾಸಾಂ ವಿಶೇಷೇಣೈವ ಯುಜ್ಯತೇ ।**
**ಏವಂ ವಿಮುಕ್ತಜೀವಾನಾಂ ಸ್ವರೂಪೈಃ ಸ್ವಗುಣೈರಪಿ ।**
**ಸ್ವಕ್ರಿಯಾಭಿಸ್ತಥೈವೈಕ್ಯಂ ನಿತ್ಯಂ ಸ್ಯಾವಯವೈರಪಿ ।**

**ಅನುವಾದ**—ವಿಷ್ಣುವಿನ ಸ್ವರೂಪಕ್ಕೂ, ಅವನ ಗುಣಗಳಿಗೂ, ಅವನ ಶಿರ ಆದಿ ಅವಯವಗಳಿಗೂ ಭೇದವು ಇಲ್ಲವೇ ಇಲ್ಲ. ಅಭೇದವಿದ್ದರೂ ಭೇದವ್ಯವಹಾರ ಇದೆ. ಇದು ವಿಶೇಷ ಬಲದಿಂದ ಎನ್ನಬೇಕು. ಅಭೇದವಿರುವಲ್ಲಿ ಮಾತ್ರ ಈ ವಿಶೇಷ. ವಿಷ್ಣುವಿಗೆ ಜಡಗಳಿಂದಲೂ, ಜೀವರಿಂದಲೂ ಮತ್ತು ಲಕ್ಷ್ಮಿಯಿಂದಲೂ ಭೇದವೇ ಇದೆ. ಆದ್ದರಿಂದ ಅಲ್ಲಿ ವಿಶೇಷವಿಲ್ಲ; ಭೇದದಿಂದಲೇ ಭೇದ ವ್ಯವಹಾರ. ವಿಷ್ಣುವಿನ ಕ್ರಿಯೆಗಳಿಗೂ ಮತ್ತು ವಿಷ್ಣುವಿಗೂ ಅಭೇದವೇ ಇದೆ. ಆದ್ದರಿಂದ ವಿಶೇಷದ ಬಲದಿಂದಲೇ ಭೇದ ವ್ಯವಹಾರ. ಸೃಷ್ಟಿ ಸಂಹಾರ ಮೊದಲಾದ ಕ್ರಿಯೆಗಳು ವಿಷ್ಣುವಿನಿಂದ ಅಭಿನ್ನ, ಅನಾದಿ ನಿತ್ಯ. ಆದರೂ ಕ್ರಿಯೆಗಳಿಗೆ ಕಾದಾಚಿತ್ಕತ್ವ ಅಂದರೆ ಒಂದು ಕಾಲದಲ್ಲಿ ಇರುವಿಕೆ, ಇನ್ನೊಂದು ಕಾಲದಲ್ಲಿ ಇಲ್ಲದಿರುವಿಕೆ ವ್ಯವಹಾರದಲ್ಲಿದೆ. ಇದೂ ವಿಶೇಷ ಬಲದಿಂದ ಕೂಡುತ್ತದೆ ಎನ್ನಬೇಕು. ಹಾಗೆಯೇ ಮುಕ್ತ ಜೀವರ ಸ್ವರೂಪಕ್ಕೂ, ಅವರ ಗುಣಗಳಿಗೂ ಕ್ರಿಯೆಗಳಿಗೂ ಮತ್ತು ಅವಯವಗಳಿಗೂ ಅಭೇದವೇ ಇದೆ. ಆದರೂ ಭೇದ ವ್ಯವಹಾರವಿದೆ. ಆದ್ದರಿಂದ ಅಲ್ಲಿಯೂ ವಿಶೇಷವನ್ನು ಅಂಗೀಕರಿಸಬೇಕು.

**ಭಾಷ್ಯ—ಭೇದಾಭೇದಸ್ತು ಬದ್ಧಾನಾಂ ಗುಣೈಃ ಸ್ವೈಃ ಕರ್ಮಭಿಸ್ತಥಾ ।**
**ಅಂಶಾಂಶಿನೋರ್ಗುಣಸ್ಯಾಪಿ ಗುಣಿನಃ ಕರ್ಮತದ್ವತೋಃ ।**
**ಕಾರ್ಯೋಪಾದಾನಯೋಶ್ಚೈವ ವ್ಯಕ್ತಿಸಾಮಾನ್ಯಯೋರಪಿ ।**
**ಭೇದಾಭೇದಃ ಸಮುದ್ದಿಷ್ಟೋ ವಿನಾಶೋ ಯತ್ರ ದೃಶ್ಯತೇ ।**
**ಏಕಸ್ಮಿನ್ ವಿದ್ಯಮಾನೇಽಪಿ ತಯೋರೇಕಸ್ಯ ಕಸ್ಯಚಿತ್ ।**
**ಅವಿನಾಭಾವನಿಯಮೋ ಯತ್ರಾಭೇದಸ್ತು ತತ್ರ ಹಿ ।**
**ಅಭೇದಶ್ಚ ಸ್ವಭಿನ್ನೇನ ಭೇದಾಭೇದಸ್ತು ತತ್ರ ಚ ।**
**ಭೇದಾಭೇದೋ ನ ತು ಕ್ವಾಪಿ ವಿಷ್ಣೋರಸ್ತಿ ಕದಾಚನ ।**
**ಭೇದ ಏವ ತು ಜೀವಾದ್ಯೈಃ ಕೇವಲಾಭೇದ ಆತ್ಮನಿ ।**

**ಅನುವಾದ**–ಸಂಸಾರಿಗಳಿಗೆ ಚಿಂತೆ ಮೊದಲಾದ ತಮ್ಮ ಗುಣಗಳಿಂದಲೂ ಪುಣ್ಯ ಪಾಪ ಕರ್ಮಗಳಿಂದಲೂ ಭೇದಾಭೇದವಿದೆ. ಅಂಶ–ಅಂಶಿ (ಉದಾ–ಪಟ ಮತ್ತು ಅದರ ಒಂದು ಗೇಣು ಭಾಗ), ಗುಣ–ಗುಣಿ (ಮಾವಿನ ಹಣ್ಣಿನ ಹಸುರು ಬಣ್ಣ ಮತ್ತು ಹಣ್ಣು), ಕರ್ಮ–ಕರ್ಮವುಳ್ಳದ್ದು (ಪಟದ ಚಲನೆ ಮತ್ತು ಪಟ), ಉಪಾದಾನ–ಉಪಾದೇಯ (ಮಣ್ಣು ಮತ್ತು ಮಡಿಕೆ), ವ್ಯಕ್ತಿ–ಜಾತಿ (ವ್ಯಕ್ತಿ ಮತ್ತು ಬ್ರಾಹ್ಮಣತ್ವ) ಇವುಗಳಲ್ಲಿ ಒಂದಿದ್ದರೂ ಇನ್ನೊಂದು ವಿನಾಶವಾಗುವ ಕಡೆಯಲ್ಲಿ ಭೇದಾಭೇದವಿದೆ. ಎಲ್ಲಿ ಎರಡೂ ಯಾವಾಗಲೂ ಇರುತ್ತವೆಯೋ, ಒಂದಕ್ಕೂ ವಿನಾಶವಾಗುವುದಿಲ್ಲವೋ ಅಲ್ಲಿ ಅಭೇದವೇ ಇದೆ. ಪ್ರತಿಯೊಂದು ವಸ್ತುವಿನಲ್ಲಿಯೂ ತನ್ನಿಂದ ಅಭೇದವೂ, ಇತರ ವಸ್ತುಗಳಿಂದ ಭೇದವೂ ಇರುವುದರಿಂದ ಭೇದಾಭೇದವು ಎಲ್ಲದರಲ್ಲಿಯೂ ಇದೆ. ಆದರೂ ಒಂದು ವಸ್ತುವಿನಲ್ಲಿ ಇನ್ನೊಂದು ವಸ್ತುವಿನಿಂದ ಅಭೇದವೂ ಮತ್ತು ಭೇದವೂ ಇದ್ದರೆ ಮಾತ್ರ 'ಭೇದಾಭೇದ'ವಿದೆ ಎನ್ನುತ್ತೇವೆ. ಮಾವಿನಕಾಯಿಯಲ್ಲಿ ಹಸಿರು ಬಣ್ಣವಿರುವವರೆಗೆ ಹಸಿರುಬಣ್ಣದಿಂದ ಅಭೇದ ಪ್ರತೀತಿ. ಹಸಿರು ಹೋಗಿ ಹಳದಿ ಬಣ್ಣ ಬಂದ ಮೇಲೆ ಹಸಿರುಬಣ್ಣದಿಂದ ಭೇದ ಪ್ರತೀತಿ. ಹೀಗೆ ಒಂದೇ ಹಸಿರುಬಣ್ಣದಿಂದ ಭೇದ ಅಭೇದ ಪ್ರತೀತಿ ಇರುವುದರಿಂದ ಮಾವಿನ ಕಾಯಿಗೂ ಹಸಿರುಬಣ್ಣಕ್ಕೂ ಆ ಬಣ್ಣ ಇರುವವರೆಗೆ ಸದಾ ಭೇದಾಭೇದವನ್ನು ಹೇಳುತ್ತೇವೆ. ಹಾಗೆ ವಿಷ್ಣುವಿಗೆ ದ್ವಿತ್ವಾದಿಗಳಿಂದ ಹೊರತು ಬೇರೆ ಯಾವ ವಸ್ತುವಿನಿಂದಲೂ ಭೇದಾಭೇದವಿಲ್ಲ. ತನ್ನ ರೂಪಗುಣಕ್ರಿಯಾದಿಗಳಿಂದ ಅಭೇದವೇ ಇದೆ. ಜೀವಾದಿಗಳಿಂದ ಭೇದವೇ ಇದೆ. ಆದ್ದರಿಂದ ಭೇದಾಭೇದವು ವಿಷ್ಣುವಿನಲ್ಲಿ ಇಲ್ಲ.

**ಪರಮಾತ್ಮನ ಕ್ರಿಯೆಗಳು ನಿತ್ಯ :**

**ಭಾಷ್ಯ—ಸ್ವರೂಪೇಷು ವಿಶೇಷೋ ಯಃ ಸ್ವರೂಪಂ ತಸ್ಯ ಸೋಽಪಿ ತು ।**
**ಕ್ರಿಯಾಣಾಂ ಚ ನ ನಾಶೋಽಸ್ತಿ ತಚ್ಛಕ್ತೇಃ ಪೂರ್ವಕಾಲತಃ ।**

**ಅನುವಾದ**—'ಪರಮಾತ್ಮನ ರೂಪಾದಿಗಳಲ್ಲಿ ಭೇದವಿಲ್ಲದಿದ್ದರೂ ವಿಶೇಷವಿದೆ. 'ಇದು ವಿಶೇಷ, ಪರಮಾತ್ಮನು ಆ ವಿಶೇಷವುಳ್ಳವನು' ಎಂಬ ವ್ಯವಹಾರವನ್ನು ಕೂಡಿಸಲು ಭೇದವನ್ನು ಒಪ್ಪಬೇಕು. ಆದ್ದರಿಂದ 'ವಿಷ್ಣುವಿನಲ್ಲಿ ಅಭೇದವೇ ಇದೆ, ಭೇದವಿಲ್ಲ'ಎಂಬುದು ಹೇಗೆ ಕೂಡುತ್ತದೆ?' ಎಂಬ ಪ್ರಶ್ನೆಗೆ ಉತ್ತರ–ಯದ್ಯಪಿ ಪರಮಾತ್ಮನ ಸ್ವರೂಪಗಳಲ್ಲಿ ವಿಶೇಷವಿದೆ. ಆದರೆ ಆ ವಿಶೇಷ ಬೇರೆ, ಪರಮಾತ್ಮ ಬೇರೆಯಲ್ಲ, ವಿಶೇಷವೂ ಪರಮಾತ್ಮನ ಸ್ವರೂಪವೇ. ಆದ್ದರಿಂದ ಅಭೇದವೇ ಇದೆ. ಭೇದವಿಲ್ಲ.

'ವಿಷ್ಣುವು ನಿತ್ಯ. ಅವನ ಕ್ರಿಯೆಗಳು ಅನಿತ್ಯ. ನಿತ್ಯವಾದುದಕ್ಕೂ ಅನಿತ್ಯವಾದುದಕ್ಕೂ ಕೇವಲ ಅಭೇದವಿರಲು ಸಾಧ್ಯವಿಲ್ಲ. ಭೇದಾಭೇದವನ್ನೇ ಒಪ್ಪಬೇಕು. ಆದ್ದರಿಂದ ವಿಷ್ಣುವಿನಲ್ಲಿ ಭೇದಾಭೇದವಿಲ್ಲವೆಂದು ಹೇಳಿದುದು ಹೇಗೆ ಸರಿಯಾಗುತ್ತದೆ?' ಎಂಬ ಪ್ರಶ್ನೆಗೆ ಉತ್ತರ—ವಿಷ್ಣುವಿಗೆ ಹೇಗೆ ನಾಶವಿಲ್ಲವೋ ಹಾಗೆ ಅವನ ಕ್ರಿಯೆಗಳಿಗೂ ನಾಶವಿಲ್ಲ. ಎರಡೂ ನಿತ್ಯವಾದುದರಿಂದ ಅಭೇದವೇ ಇದೆ.

"ಆದರೂ ಈಶ್ವರನ ಕ್ರಿಯೆಗೆ ನಾಶವಿಲ್ಲವೆಂದು ಹೇಳಿದರೆ ಬಾಧಕವಿದೆ. ಸೃಷ್ಟಿಸಮಯದಲ್ಲಿ ಸಂಹಾರಕ್ರಿಯೆ ನಾಶವಾಗದೆ ಹಾಗೆಯೇ ಇರುವುದರಿಂದ, ಸೃಷ್ಟಿಯಾಗುವಾಗಲೇ ಸಂಹಾರವೂ ಆಗುವುದೆಂದು ಶ್ರುತಿಗಳು ಹೇಳಬೇಕಾಗಿದ್ದಿತು. ಹಾಗೆಯೇ ವಸ್ತುಗಳ ಉತ್ಪತ್ತಿ ಮತ್ತು ವಿನಾಶಗಳು ಒಂದೇ ಕಾಲದಲ್ಲಿ ಆಗಬೇಕಾಗಿದ್ದಿತು" ಎಂಬ ಶಂಕೆಗೆ ಸಮಾಧಾನ—ಕ್ರಿಯಾಶಕ್ತಿಯು ಅನಾದಿಕಾಲದಿಂದಲೂ ಇರುವುದರಿಂದ ಸೃಷ್ಟಿಸಮಯದಲ್ಲಿ ಸಂಹಾರಕ್ರಿಯೆಯೂ, ಸಂಹಾರಸಮಯದಲ್ಲಿ ಸೃಷ್ಟಿಕ್ರಿಯೆಯೂ ಇದ್ದೇ ಇದೆ. ಆದರೆ ಮೇಲೆ ಹೇಳಿದ ದೋಷವಿಲ್ಲ. ಕಾರ್ಯಜನನಶಕ್ತಿಗೇ ಕ್ರಿಯೆ ಎಂದು ಹೆಸರು. ಅದು ಅನಾದಿಕಾಲದಿಂದಲೂ ಇದ್ದೇ ಇದೆ. ಈ ಶಕ್ತಿಯು ಅಭಿವ್ಯಕ್ತವಾದಾಗ ಮಾತ್ರ ಸೃಷ್ಟಿಯು ಉಂಟಾಗುತ್ತದೆ. ಮತ್ತು ಸೃಷ್ಟಿಕ್ರಿಯೆಯ ವ್ಯವಹಾರವೂ ಉಂಟಾಗುತ್ತದೆ. ಆದ್ದರಿಂದ ಸಂಹಾರಸಮಯದಲ್ಲಿ ಸೃಜನಶಕ್ತಿ ಇದ್ದರೂ, ಶ್ರುತಿಗಳಲ್ಲಿ ಆಗ ಆ ಕ್ರಿಯೆಯನ್ನು ಹೇಳಿರಬೇಕೆಂಬ ಪ್ರಸಂಗವಿಲ್ಲ.

**ಭಾಷ್ಯ—ವಿಶೇಷ ಏವೋಪರತಿಃ ಕ್ರಿಯಾಯಾಃ ಸಮುದೀರಿತಾ ।**

**ಅನುವಾದ**—'ಹಾಗಾದರೆ ಶಕ್ತಿಯ ವ್ಯಕ್ತಿ ಎಂದರೇನು? ಪ್ರತೀತಿಯೆಂದು ಅರ್ಥವಲ್ಲ. ಈಶ್ವರನಿಗೆ ಶಕ್ತಿಯ ಪ್ರತೀತಿಯು ನಿತ್ಯ ಸಿದ್ಧವಾಗಿರುವುದರಿಂದ ಮೊದಲು ಹೇಳಿದ ಎಲ್ಲಾ ದೋಷಗಳೂ ಬರುತ್ತವೆ. ಬೇರೊಬ್ಬರ ಪ್ರತೀತಿ ಎಂದರೆ, ಈಶ್ವರನ ಶಕ್ತಿಯ ಪ್ರತೀತಿ ಬೇರೆಯವರಿಗೆ ಯಾವಾಗಲೂ ಇಲ್ಲವಾದ ಕಾರಣ, ಯಾವಾಗಲೂ ಸೃಷ್ಟಿ ಮೊದಲಾದವು ಆಗದೆಯೇ ಇರಬೇಕಾಗುತ್ತದೆ'. ಈ ಪ್ರಶ್ನೆಗೆ 'ಶಕ್ತಿಯ ಅವಸ್ಥಾವಿಶೇಷಕ್ಕೇ ವ್ಯಕ್ತಿ ಎಂದು ಹೆಸರು' ಎಂದು ಉತ್ತರ. 'ಹಾಗಾದರೆ ಅಭಿವ್ಯಕ್ತವಾದ ಸೃಷ್ಟಿಶಕ್ತಿಯು ಸಂಹಾರಕಾಲದಲ್ಲಿ ಉಪರತವಾಗುತ್ತದೆಯೋ ಇಲ್ಲವೋ ? ಉಪರತ

ವಾಗುವುದಿಲ್ಲವೆಂದರೆ ಸಂಹಾರ ಸಮಯದಲ್ಲಿಯೂ ಸೃಷ್ಟಿಯಾಗಬೇಕು. ಉಪರತ ವಾಗುವುದೆಂದರೆ ಉಪರತಿ ಎಂದರೇನು? ವಿನಾಶವಷ್ಟೇ? ಸೃಷ್ಟಿಶಕ್ತಿಯೇ ಸೃಷ್ಟಿಕ್ರಿಯೆ ಯಾದ ಮೇಲೆ, ಸೃಷ್ಟಿಶಕ್ತಿಗೆ ಉಪರತಿಯನ್ನು ಅಂದರೆ ವಿನಾಶವನ್ನು ಒಪ್ಪಿದರೆ ಸೃಷ್ಟಿ ಕ್ರಿಯೆಗೇ ವಿನಾಶವನ್ನು ಒಪ್ಪಿದಂತಾಯಿತಷ್ಟೆ? 'ಶಕ್ತಿಯ ವ್ಯಕ್ತಿಗೆ ವಿನಾಶವಾದರೂ ಶಕ್ತಿಗೆ ವಿನಾಶವಿಲ್ಲ' ಎಂದು ಹೇಳಲು ಬರುವುದಿಲ್ಲ. ಶಕ್ತಿ ಮತ್ತು ವ್ಯಕ್ತಿಗಳು ಅಭಿನ್ನವಾದುವು. ಆದ್ದರಿಂದ ಸೃಷ್ಟಿಕ್ರಿಯೆಗೇ ವಿನಾಶವನ್ನು ಒಪ್ಪಿದಂತಾಗುವುದು. ಅಭಿವ್ಯಕ್ತಿಗೆ ವಿನಾಶವನ್ನು ಒಪ್ಪಿದರೆ ಅದಕ್ಕೂ ಕ್ರಿಯೆಗೂ ಭೇದಾಭೇದವನ್ನು ಒಪ್ಪ ಬೇಕು. ಆಗ ಕ್ರಿಯೆಯಿಂದ ಅಭಿನ್ನನಾದ ಪರಮಾತ್ಮನಿಗೂ ಭೇದಾಭೇದವನ್ನು ಒಪ್ಪಿದಂತಾಯಿತು. ಹೀಗಿರುವಾಗ ಪರಮಾತ್ಮನಲ್ಲಿ ಅಭೇದ ಮಾತ್ರವೇ ಇರುವುದು ಎಂದು ಹಿಂದೆ ಹೇಳಿದುದು ಹೇಗೆ ಕೂಡುತ್ತದೆ?' ಎಂಬ ಪ್ರಶ್ನೆಗೆ ಉತ್ತರ–ಅಭಿವ್ಯಕ್ತ ವಾದ ಸೃಷ್ಟಿಕ್ರಿಯೆಗೆ ಉಪರತಿ ಇದ್ದೇ ಇದೆ. ಆದರೆ ಉಪರತಿ ಎಂದರೆ ಕ್ರಿಯೆಯ ಅವಸ್ಥಾ ವಿಶೇಷ ಹೊರತು ವಿನಾಶವಲ್ಲ. ಆದ್ದರಿಂದ ಯಾವ ದೋಷವೂ ಇಲ್ಲ.

**ಭಾಷ್ಯ—ವಿಶೇಷಸ್ಯ ವಿಶೇಷೋಽನ್ಯೋ ನ ಚೈವಾಸ್ತಿ ಕಥಂಚನ ।**
**ಸ್ವಸ್ಯಾಪಿ ತು ವಿಶೇಷಃ ಸ ಸ್ವಯಮೇವ ಭವಿಷ್ಯತಿ ।**
**ಯಥಾ ಜನೇರ್ಜನಿರ್ನಾನ್ಯಾ ತಸ್ಯಾ ವಸ್ತುಜನಿರ್ಜನಿಃ ।**
**ತಥಾಽಪಿ ತು ಜನಿತ್ವಾತ್ ಸಾ ಸತ್ವಂ ವಸ್ತುನ ಆನಯೇತ್ ।**
**ಏವಮೇವ ವಿಶೇಷೋಽಸೌ ವಿಶೇಷಾಂತರವರ್ಜಿತಃ ।**
**ಕರೋತಿ ನ ಕರೋತೀತಿ ವಿಶೇಷವ್ಯವಹಾರಕೃತ್ ।**

**ಅನುವಾದ**—"ಕ್ರಿಯೆಗೆ ಉಪರತಿ ಎಂದರೆ ಕ್ರಿಯೆಯ ಅವಸ್ಥಾ ವಿಶೇಷವೆಂದು ಅಂಗೀಕರಿಸಿದ್ದಾಯಿತು. ಈ ಅವಸ್ಥಾ ವಿಶೇಷಕ್ಕೆ ಉಪರತಿ ಇದೆಯೇ ಅಥವಾ ಇಲ್ಲವೆ? ಉಪರತಿ ಇಲ್ಲವೆಂದರೆ ಯಾವಾಗಲೂ ಸೃಷ್ಟ್ಯಾದಿಗಳೇ ಆಗದೇ ಹೋಗಬೇಕಾದೀತು. ಉಪರತಿ ಇದೆ ಎಂದರೆ, ಉಪರತಿ ಎಂದರೆ ವಿನಾಶವಾದ್ದರಿಂದ ವಿನಾಶವನ್ನು ಒಪ್ಪಿ ದಂತಾಯಿತು. ಅವಸ್ಥಾ ವಿಶೇಷಕ್ಕೆ ವಿನಾಶವನ್ನು ಒಪ್ಪಿದರೆ, ಕ್ರಿಯೆಗೂ ಅವಸ್ಥಾ ವಿಶೇಷಕ್ಕೂ ಅಭೇದವಿರುವುದರಿಂದ ಕ್ರಿಯೆಗೇ ವಿನಾಶವನ್ನು ಒಪ್ಪಿದಂತಾಯಿತು. 'ಅವಸ್ಥಾ ವಿಶೇಷಕ್ಕೆ ಉಪರತಿ ಎಂದರೆ ವಿನಾಶವಲ್ಲ. ಅದೂ ಅವಸ್ಥಾ ವಿಶೇಷವೆ' ಎಂದು ಹೇಳಿದರೆ, ಕ್ರಿಯೆಗೆ ಉಪರತಿ ಎಂದರೆ ಅವಸ್ಥಾ ವಿಶೇಷ, ಆ ಅವಸ್ಥಾ ವಿಶೇಷಕ್ಕೂ ಉಪರತಿ ಎಂದರೆ ಇನ್ನೊಂದು ಅವಸ್ಥಾ ವಿಶೇಷ, ಆ ಅವಸ್ಥಾ ವಿಶೇಷಕ್ಕೂ ಉಪರತಿ ಎಂದರೆ ಮತ್ತೊಂದು ಅವಸ್ಥಾ ವಿಶೇಷ, ಹೀಗೆ ಅನವಸ್ಥಾ ದೋಷ ಬರುತ್ತದೆ" ಎಂಬ ಆಕ್ಷೇಪಕ್ಕೆ ಪರಿಹಾರ– ಅವಸ್ಥಾವಿಶೇಷಕ್ಕೆ ಬೇರೆ ಇನ್ನೊಂದು ಅವಸ್ಥಾ ವಿಶೇಷ ಇಲ್ಲವೆ ಇಲ್ಲ. ಹಾಗಾದರೆ, ಅವಸ್ಥಾ ವಿಶೇಷಕ್ಕೆ ಉಪ ರತಿ ಹೇಗೆ? ಎಂದರೆ ಅವಸ್ಥಾ ವಿಶೇಷವು ತನಗೆ ತಾನೇ ಅವಸ್ಥಾ ವಿಶೇಷವಾಗುತ್ತದೆ.

ಉದಾ—ಘಟಾದಿ ವಸ್ತುವಿಗೆ ಉತ್ಪತ್ತಿ ಇದೆ. ಈ ಉತ್ಪತ್ತಿಯು ಅನಾದಿಯಲ್ಲವಾದ್ದರಿಂದ, ಅದಕ್ಕೂ ಒಂದು ಉತ್ಪತ್ತಿಯನ್ನು ಒಪ್ಪಬೇಕು. ಈ ಉತ್ಪತ್ತಿಯು ಘಟೋತ್ಪತ್ತಿಗಿಂತ ಭಿನ್ನವಾದರೆ, ಆ ಉತ್ಪತ್ತಿಯೂ ಅನಾದಿಯಲ್ಲವಾದ್ದರಿಂದ ಅದಕ್ಕೆ ಇನ್ನೊಂದು ಉತ್ಪತ್ತಿಯನ್ನು ಒಪ್ಪಬೇಕು. ಹೀಗೆ ಅನವಸ್ಥಾದೋಷ ಬರುತ್ತದೆ. ಆದ್ದರಿಂದ 'ಘಟೋತ್ಪತ್ತಿಯ ಉತ್ಪತ್ತಿಯು ಘಟೋತ್ಪತ್ತಿಗಿಂತ ಬೇರೆಯಲ್ಲ' ಎಂದು ಹೇಳಬೇಕು. ಆಗ ಅನವಸ್ಥಾ ದೋಷವಿಲ್ಲ. ಘಟದ ಉತ್ಪತ್ತಿಯೇ ಘಟೋತ್ಪತ್ತಿಯ ಉತ್ಪತ್ತಿ. ಹೊರತು, ಘಟದ ಉತ್ಪತ್ತಿ ಬೇರೆ, ಘಟೋತ್ಪತ್ತಿಯ ಉತ್ಪತ್ತಿ ಬೇರೆಯಲ್ಲ. ಘಟದ ಉತ್ಪತ್ತಿಯಾಗುತ್ತದೆ ಎಂದರೂ, ಘಟೋತ್ಪತ್ತಿಯ ಉತ್ಪತ್ತಿ ಆಗುತ್ತದೆ ಎಂದರೂ ಒಂದೇ ಅರ್ಥವೆಂದು ಲೌಕಿಕರೂ ಶಾಸ್ತ್ರಜ್ಞರೂ ಒಪ್ಪುತ್ತಾರೆ. ಆದರೂ ಘಟೋತ್ಪತ್ತಿಯ ಉತ್ಪತ್ತಿಯು ತನಗೂ ಮತ್ತು ಘಟಕ್ಕೂ ಉತ್ಪತ್ತಿ ಕ್ರಿಯೆಯಿಂದುಂಟಾಗುವ ಅಸ್ತಿತ್ವವನ್ನು ಸಂಪಾದನೆ ಮಾಡಿಕೊಡುತ್ತದೆ. ಹಾಗೆಯೇ ಅವಸ್ಥಾ ವಿಶೇಷಕ್ಕೆ ಬೇರೆ ಅವಸ್ಥಾ ವಿಶೇಷವನ್ನು ಒಪ್ಪದಿದ್ದರೂ ತಾನೇ 'ಸಂಹಾರ ಸಮಯದಲ್ಲಿ ಸಂಹಾರ ಮಾಡುತ್ತಾನೆ, ಸೃಷ್ಟಿಯನ್ನು ಮಾಡುವುದಿಲ್ಲ' ಇತ್ಯಾದಿ ವ್ಯವಹಾರವನ್ನು ನಿರ್ವಾಹ ಮಾಡುತ್ತದೆ.

**ಭಾಷ್ಯ—ವ್ಯಕ್ತಿಭಾವಂ ಗತಾ ಯಾ ತು ಕರೋತೀತಿ ಸ್ವರೂಪಿಣೀ ।**
**ಶಕ್ತಿರೂಪಸ್ಥಿತಾ ಸೈವ ಕ್ರಿಯಾಶಕ್ತಿರಿತೀರ್ಯತೇ ।**
**ಸಾ ಚ ವ್ಯಕ್ತಿಸ್ತು ಜನಿವತ್ ಕ್ರಿಯಾಯಾ ರೂಪಮೇವ ತು ।**
**ತಥಾಽಪಿ ತು ವಿಶೇಷೇಣ ಸ್ವರೂಪೇಣ ವಿಶೇಷಿಣೀ ।**
**ಜನೇರ್ಜನಿವದೇವಾಸೌ ಜ್ಞಾತವ್ಯಾಽವ್ಯತಿರೇಕತಃ ।**

**ಅನುವಾದ**–'ಆದರೂ ಶಕ್ತಿರೂಪಕ್ರಿಯೆಗೂ,ವ್ಯಕ್ತಿರೂಪಕ್ರಿಯೆಗೂ ಭೇದವೋ ಅಭೇದವೋ? ಭೇದವಿದೆ ಎಂದರೆ ಶಕ್ತಿರೂಪಕ್ರಿಯೆ ಮಾತ್ರ ನಿತ್ಯ, ವ್ಯಕ್ತಿರೂಪಕ್ರಿಯೆ ನಿತ್ಯವಲ್ಲ ಎಂದಾಗುತ್ತದೆ. ಅಭೇದವನ್ನು ಒಪ್ಪಿದರೆ ಸದಾ ಸಂಹಾರ ವ್ಯವಹಾರ ಪ್ರಸಂಗವು ಇದ್ದೇ ಇದೆ' ಎಂಬ ಆಕ್ಷೇಪಕ್ಕೆ ಸಮಾಧಾನ–ವ್ಯಕ್ತಿಭಾವವನ್ನು ಹೊಂದಿದ ಕ್ರಿಯೆಯು 'ಈಗ ಸಂಹಾರಾದಿಕ್ರಿಯೆಗಳನ್ನು ಮಾಡುತ್ತಾನೆ' ಎಂದು ಮುಂತಾದ ವ್ಯವಹಾರಕ್ಕೆ ಕಾರಣವಾಗುತ್ತದೆ. ಶಕ್ತಿರೂಪವಾಗಿದ್ದ ಅದೇ ಕ್ರಿಯೆಯು ಕ್ರಿಯಾಶಕ್ತಿ ಎನಿಸಿಕೊಳ್ಳುತ್ತದೆ. ಹೀಗೆ ಶಕ್ತಿ–ವ್ಯಕ್ತಿಗಳಿಗೆ ಭೇದವಿಲ್ಲದುದರಿಂದ ಯಾವ ದೋಷವೂ ಇಲ್ಲ. ಉತ್ಪತ್ತಿಯ ಉತ್ಪತ್ತಿಯು ಹೇಗೆ ವಸ್ತುವಿನ ಉತ್ಪತ್ತಿಗಿಂತ ಬೇರೆಯಲ್ಲವೋ, ಹಾಗೆಯೇ ಶಕ್ತಿಯ ವ್ಯಕ್ತಿಯು ಶಕ್ತಿಗಿಂತ ಬೇರೆಯಲ್ಲ. ಶಕ್ತಿ ಮತ್ತು ವ್ಯಕ್ತಿಗಳು ಅಭಿನ್ನವಾದರೂ ಅವುಗಳಲ್ಲಿ ವಿಶೇಷವಿರುವುದರಿಂದ 'ಸಂಹಾರಕಾಲದಲ್ಲಿ, ಸಂಹಾರ ಮಾಡುತ್ತಿದ್ದಾನೆ ಸೃಷ್ಟಿ ಮಾಡುತ್ತಿಲ್ಲ' ಎಂದು ಮುಂತಾಗಿ ವಿಶೇಷ ವ್ಯವಹಾರವು ಕೂಡುತ್ತದೆ. ಅಭೇದವಿರುವಲ್ಲಿ ಭೇದಕಾರ್ಯವನ್ನು ನಿರ್ವಾಹ ಮಾಡುವುದೇ

ವಿಶೇಷ. ಶಕ್ತಿ–ವ್ಯಕ್ತಿಗಳಿಗಿರುವ ವಿಶೇಷವೂ ವಿಶೇಷಿಗಳಾದ ಶಕ್ತಿ–ವ್ಯಕ್ತಿಗಳಿಂದ ಭಿನ್ನವಲ್ಲ. ಭಿನ್ನವಾದರೆ ಶಕ್ತಿ–ವ್ಯಕ್ತಿಗಳಿಗೇ ಭೇದವನ್ನು ಒಪ್ಪಬಹುದಾಗಿದ್ದಿತು. ಮತ್ತೇನೆಂದರೆ, ಆ ವಿಶೇಷವು ಶಕ್ತಿ–ವ್ಯಕ್ತಿಗಳ ಸ್ವರೂಪವೇ. ಆ ವಿಶೇಷವೇ 'ತಾನು ವಿಶೇಷ, ಶಕ್ತಿವ್ಯಕ್ತಿಗಳು ವಿಶೇಷಿಗಳು' ಎಂಬ ವ್ಯವಹಾರವನ್ನು ನಿರ್ವಾಹ ಮಾಡುತ್ತದೆ. ವಿಶೇಷವನ್ನೊಳಗೊಂಡ ಭೇದ ವ್ಯವಹಾರವನ್ನು ನಿರ್ವಹಿಸಲು ಇನ್ನೊಂದು ವಿಶೇಷವನ್ನು ಅಂಗೀಕರಿಸಬೇಕಾಗಿಲ್ಲ. ಅಂಗೀಕರಿಸಿದರೆ ಅನವಸ್ಥಾದೋಷವು ಬರುತ್ತದೆ. ಘಟದ ಉತ್ಪತ್ತಿಗಿಂತ ಉತ್ಪತ್ತಿಯ ಉತ್ಪತ್ತಿಯು ವ್ಯತಿರಿಕ್ತವಲ್ಲದಿದ್ದರೂ ಹೇಗೆ 'ಘಟವು ಉಂಟಾಯಿತು, ಘಟದ ಉತ್ಪತ್ತಿಯು ಉಂಟಾಯಿತು' ಎಂಬ ವ್ಯವಹಾರವನ್ನು ನಿರ್ವಹಿಸುತ್ತದೆಯೋ ಹಾಗೆಯೇ ವಿಶೇಷವು ವಿಶೇಷಿಗಳಿಗಿಂತ ಅಭಿನ್ನವಾದರೂ 'ತಾನು ವಿಶೇಷ, ಶಕ್ತಿ–ವ್ಯಕ್ತಿಗಳು ವಿಶೇಷ ಉಳ್ಳವು' ಎಂಬ ವ್ಯವಹಾರವನ್ನು ನಿರ್ವಹಿಸುತ್ತದೆ ಎಂದು ತಿಳಿಯಬೇಕು.

## ಮುಕ್ತರ ಕ್ರಿಯೆಗಳೂ ನಿತ್ಯ :

ಭಾಷ್ಯ—ಏವಂ ಮುಕ್ತಕ್ರಿಯಾ ನಿತ್ಯಾ ನಾನ್ಯೇಷಾಂ ಭ್ರಾಂತಿಸಂಭವಾತ್ ।
ಮುಕ್ತಾವುಚ್ಛೇದತಶ್ಚೈವ ನಿಃಶೇಷೇಣಾಖಿಲಸ್ಯ ಚ ।
ನೈವಂ ಮುಕ್ತಕ್ರಿಯಾಯಾಸ್ತು ತಸ್ಯಾಶ್ಚ ಪುನರುದ್ಭವಾತ್ ।
ಅಮುಕ್ತಾನಾಂ ಕ್ರಿಯಾ ಯಾಶ್ಚ ಮುಕ್ತಾವಪಿ ಸಮಾಸ್ಥಿತಾಃ ।
ಅಭಿನ್ನಾ ಇತಿ ತಾ ಜ್ಞೇಯಾ ಅಭಿವ್ಯಕ್ತೇಃ ಪುನಃಪುನಃ ।
ಚಿಂತನಾದಿಕ್ರಿಯಾಣಾಂ ತು ಮುಕ್ತಾವುಚ್ಛೇದತಃ ಸದಾ ।
ಕಿಂಮಯಾಕಾರ್ಯಮಾದೀನಾಂ ಭೇದಾಭೇದ ಉದೀರಿತಃ ।
ಅಚೇತನೇಷ್ವಸ್ವತಂತ್ರಾಃ ಕ್ರಿಯಾ ಯಸ್ಮಾತ್ ಸದೈವ ತು ।
ಭೇದಾಭೇದಸ್ತತೋ ಜ್ಞೇಯಃ ಸರ್ವತ್ರ ನಿಯಮೇನ ತು ।
ಈಶ್ವರಃ ಪ್ರಕೃತಿರ್ಜೀವಾ ಜಡಂ ಚೇತಿ ಚತುಷ್ಟಯಮ್ ।
ಪದಾರ್ಥಾನಾಂ ಸಮುದ್ದಿಷ್ಟಂ ತತ್ರೇಶೋ ವಿಷ್ಣುರುಚ್ಯತೇ ।
ಇತಿ ಬ್ರಹ್ಮತರ್ಕೇ ।

**ಅನುವಾದ**—ಹೀಗೆಯೇ ಮುಕ್ತರ ಕ್ರಿಯೆಯೂ ನಿತ್ಯ. ಆದ್ದರಿಂದ ಮುಕ್ತರಿಗೂ ಅವರ ಕ್ರಿಯೆಗೂ ಅಭೇದವೇ ಇದೆ. ಸಂಸಾರಿಗಳ ಕ್ರಿಯೆಯು ನಿತ್ಯವಲ್ಲ. ಏಕೆಂದರೆ ಆ ಕ್ರಿಯೆಗಳಿಗೆ ಉತ್ಪತ್ತಿ ಇದೆ. ಆ ಉತ್ಪತ್ತಿಯು ಭ್ರಾಂತಿಯಿಂದ ಉಂಟಾಗುತ್ತದೆ. ಅಮುಕ್ತರ ಎಲ್ಲಾ ಕ್ರಿಯೆಗಳೂ ಮುಕ್ತಿಯಲ್ಲಿ ಸಂಪೂರ್ಣವಾಗಿ ಸಂಸ್ಕಾರ ಸಹಿತವಾಗಿ ನಾಶ ಹೊಂದುವುದರಿಂದಲೂ ಅವು ನಿತ್ಯವಲ್ಲ. ಮುಕ್ತ ಕ್ರಿಯೆಯು

ಹಾಗಲ್ಲ. ಏಕೆಂದರೆ, ಅದೇ ಕ್ರಿಯೆಯೇ ಮತ್ತೆ ಮತ್ತೆ ಉದ್ಭವವನ್ನು ಹೊಂದು ತ್ತದೆ. ಮುಕ್ತರು ಬೇರೆ ಕ್ರಿಯೆಯನ್ನು ಮಾಡುವಾಗ ಮೊದಲನೆಯ ಕ್ರಿಯೆಯು ಶಕ್ತಿರೂಪದಲ್ಲಿರುತ್ತದೆ. ಅಮುಕ್ತರ ಯಾವ ಕ್ರಿಯೆಗಳು ಮುಕ್ತಿಯಲ್ಲಿ ನಾಶ ಹೊಂದದೆ ಅನುವೃತ್ತವಾಗಿರುತ್ತವೆಯೋ ಆ ಕ್ರಿಯೆಗಳಿಗೂ ಅಮುಕ್ತರಿಗೂ ಅತ್ಯಂತ ಅಭೇದವನ್ನೇ ತಿಳಿಯಬೇಕು. ಏಕೆಂದರೆ ಅದೇ ಕ್ರಿಯೆಯೇ ಮತ್ತೆ ಮತ್ತೆ ಅಭಿವ್ಯಕ್ತ ವಾಗುತ್ತವೆ. 'ಈಗ ನಾನು ಏನು ಮಾಡಲಿ' ಎಂದು ಮೊದಲಾದ ಅಮುಕ್ತರ ಚಿಂತಾರೂಪಕ್ರಿಯೆಗಳು ಮೋಕ್ಷದಲ್ಲಿ ನಾಶಹೊಂದುವುದರಿಂದ ಆ ಕ್ರಿಯೆಗೂ ಅಮುಕ್ತ ರಿಗೂ ಆ ಕ್ರಿಯೆ ಇರುವಾಗ ಭೇದಾಭೇದ. ಮೊರತು ಆ ಕ್ರಿಯೆ ಇರುವಾಗ ಅಭೇದ, ಅದು ನಾಶವಾದ ಮೇಲೆ ಭೇದ ಎಂದಲ್ಲ. ಜಡಕ್ರಿಯೆಗಳು ಯಾವಾಗಲೂ ಪರಾಧೀನ ಉತ್ಪತ್ತಿ ಉಳ್ಳವುಗಳೇ ಆಗಿರುವುದರಿಂದ ಅವುಗಳಿಗೆ ಜಡದಿಂದ ನಿಯಮೇನ ಭೇದಾ ಭೇದವನ್ನೇ ಎಲ್ಲಾ ಕಡೆಯಲ್ಲೂ ತಿಳಿಯಬೇಕು. ಹೀಗೆ ಈಶ್ವರ, ಮುಕ್ತಜೀವರು, ಅಮುಕ್ತ ಜೀವರು ಮತ್ತು ಜಡಗಳು ಈ ನಾಲ್ಕು ಪದಾರ್ಥಗಳ ಕ್ರಿಯೆಯ ಬಗ್ಗೆ ವಿಚಾರ ಮಾಡಿದ್ದಾಯಿತು. ಪದಾರ್ಥಗಳಿರುವುದೇ ಅಷ್ಟು. ಈ ನಾಲ್ಕು ಪದಾರ್ಥಗಳಲ್ಲಿ ಈಶ್ವರನೆಂದರೆ ವಿಷ್ಣುವೇ ಎಂದು ಬ್ರಹ್ಮತರ್ಕದಲ್ಲಿ ಹೇಳಿದೆ.

**ಭಾಷ್ಯ**—**'ಪರಾಽಸ್ಯ ಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನಬಲ ಕ್ರಿಯಾ ಚ' ಇತ್ಯಾದಿ ಶ್ರುತಯಶ್ಚ ।**

**ಶಕ್ತಿಶಕ್ತಿಮತೋಶ್ಚೈವ ವಿಶೇಷಸ್ಯ ವಿಶೇಷಿಣಃ ।**
**ಅವಿನಾಭಾವಿತಾ ಯತ್ರ ನ ಭೇದಸ್ತತ್ರ ವಿದ್ಯತೇ ।**
**ಸರ್ವಾಧಿಕಸುಖತ್ವಂ ಚ ಜ್ಞಾನಂ ಸರ್ವಾಧಿಕಂ ತಥಾ ।**
**ಸರ್ವಾಧಿಕಾ ಸರ್ವಶಕ್ತಿಃ ತೇಜಃ ಸರ್ವಾಧಿಕಂ ತಥಾ ।**
**ಇತ್ಯಾದಯೋ ಗುಣಾಃ ಸರ್ವೇ ಸ್ವರೂಪಂ ವೈಷ್ಣವಂ ಸದಾ ।**
**ಭೇದಾನ್ಯತ್ವಾದಯಃ ಶಬ್ದಾ ಅತದ್ರೂಪತ್ವವಾಚಕಾಃ ।**
**ಕ್ವಚಿದಂತರಶಬ್ದಶ್ಚ ವಿಶೇಷಸ್ಯೈವ ವಾಚಕಃ ।**
**ಏಕಸ್ಮಿನ್ನೇವ ಶಬ್ದಾನಾಂ ಯಸ್ತು ನಾನಾಸ್ವರೂಪಿಣಾಮ್ ।**
**ಪ್ರಯೋಜಕತ್ವಹೇತುಃ ಸ್ಯಾತ್ ಸ ವಿಶೇಷಃ ಪ್ರಕೀರ್ತಿತಃ । ಇತಿ ಚ।**

**ಅನುವಾದ**—'ಈಶ್ವರ ಕ್ರಿಯೆಗೂ ಮುಕ್ತರ ಕ್ರಿಯೆಗೂ ಈಶ್ವರ ಮತ್ತು ಮುಕ್ತರಿಂದ ಅಭೇದವನ್ನು ಹೇಳಿದಂತೆ, ಅಮುಕ್ತರ ಕ್ರಿಯೆಗೆ ಅಮುಕ್ತರಿಂದಲೂ ಜಡಕ್ರಿಯೆಗೆ ಜಡದಿಂದಲೂ ಅಭೇದವನ್ನು ಹೇಳಿ ಆ ಕ್ರಿಯೆಗಳಿಗೂ ಶಕ್ತಿ ವ್ಯಕ್ತಿ ರೂಪ ವನ್ನು ಒಪ್ಪಿ ಎಲ್ಲಾ ವ್ಯವಹಾರವನ್ನು ನಿರ್ವಹಿಸಬಹುದಲ್ಲ' ಎಂಬ ಶಂಕೆ ಸರಿಯಲ್ಲ—

ನಿತ್ಯತ್ವವನ್ನು ಹೇಳುವ ಅಬಾಧಿತ ಪ್ರಮಾಣವೂ ಮತ್ತು ಅದಕ್ಕೆ ವಿರುದ್ಧವಾದ ವ್ಯವಹಾರವೂ ಇರುವ ಕಡೆಯಲ್ಲಿ ಎರಡನ್ನೂ ಕೂಡಿಸುವುದಕ್ಕಾಗಿ ಈ ಶಕ್ತಿ ವ್ಯಕ್ತಿ ಕಲ್ಪನೆ ಮಾಡುವುದು ಯುಕ್ತ. ಅಮುಕ್ತರ ಮತ್ತು ಜಡಗಳ ಕ್ರಿಯೆಗೆ ನಿತ್ಯತ್ವವನ್ನು ಹೇಳುವ ಅಬಾಧಿತ ಪ್ರಮಾಣವಿಲ್ಲ. ಆದ್ದರಿಂದ ಈ ಕಲ್ಪನೆ ಮಾಡುವುದಿಲ್ಲ. ಈಶ್ವರನ ಕ್ರಿಯೆಗೆ ನಿತ್ಯತ್ವವನ್ನು ಹೇಳುವ ಪ್ರಮಾಣವಿರುವುದರಿಂದ ಈ ಕಲ್ಪನೆ ಮಾಡಬೇಕಾಗುತ್ತದೆ. ಪ್ರಮಾಣ– 'ಪರಮಾತ್ಮನ ಶ್ರೇಷ್ಠವಾದ ಶಕ್ತಿಯು ಅನೇಕ ವಿಧವಾಗಿ ಶ್ರುತವಾಗಿದೆ. ಆ ಶಕ್ತಿಯು ಸ್ವಾಭಾವಿಕವಾದುದು. ಜ್ಞಾನ ಬಲ ಮತ್ತು ಕ್ರಿಯೆಗಳೂ ಸ್ವಾಭಾವಿಕವಾದುವು' ಎಂಬ ಮೊದಲಾದ ಶ್ರುತಿಗಳಿವೆ.

ಶಕ್ತಿ ಮತ್ತು ಶಕ್ತಿಯುಳ್ಳದ್ದಕ್ಕೂ ಹಾಗೆಯೇ ವಿಶಿಷ್ಟ ಮತ್ತು ವಿಶೇಷಕ್ಕೂ ಎಲ್ಲಿ 'ಒಂದು ಇರುವಾಗ ಇನ್ನೊಂದು ಇದ್ದೇ ಇರುವುದು' ಎಂಬ ಅವಿನಾಭಾವ ನಿಯಮವಿದೆಯೋ ಅಲ್ಲಿ ಅಭೇದವೇ, ಭೇದವಿಲ್ಲ. ಸರ್ವಾಧಿಕ ಸುಖ, ಸರ್ವಾಧಿಕ ಜ್ಞಾನ, ಸರ್ವಾಧಿಕ ಶಕ್ತಿ, ಸರ್ವಾಧಿಕ ತೇಜಸ್ಸು ಇವೆಲ್ಲವೂ ಸರ್ವದಾ ವಿಷ್ಣುವಿನ ಸ್ವರೂಪವೇ. ಇಲ್ಲಿ ಅವಿನಾಭಾವ ನಿಯಮವಿರುವುದರಿಂದ ಅಭೇದ. ಸರ್ವಾಧಿಕ ಶಕ್ತಿ ಮತ್ತು ವಿಷ್ಣುವಿಗೆ ಅಭೇದವು ಶಕ್ತಿ ಶಕ್ತಿವುಳ್ಳವುಗಳ ಅಭೇದಕ್ಕೆ ದೃಷ್ಟಾಂತ. ಉಳಿದುದು ವಿಶೇಷ ಮತ್ತು ವಿಶಿಷ್ಟಗಳಿಗೆ ದೃಷ್ಟಾಂತ. ಶಕ್ತಿ ಶಕ್ತಿವುಳ್ಳವುಗಳಿಗೆ ಎಲ್ಲಿ ಅವಿನಾಭಾವ ನಿಯಮವಿಲ್ಲವೋ ಅಲ್ಲಿ ಭೇದಾಭೇದ. ಉದಾಹರಣೆಗೆ–ಚೈತ್ರನ ಗಮನಶಕ್ತಿ; ಇದು ಬೇರೆ ಸಮಯದಲ್ಲಿ ರೋಗದಿಂದಾಗಲೀ, ವಾರ್ಧಕ್ಯದಿಂದಾಗಲೀ ನಾಶಹೊಂದಬಹುದು. ಆದ್ದರಿಂದ ಅಲ್ಲಿ ಭೇದಾಭೇದ. ಹಾಗೆಯೇ ಎಲ್ಲಿ ವಿಶಿಷ್ಟ ಮತ್ತು ವಿಶೇಷಗಳಿಗೆ ಅವಿನಾಭಾವನಿಯಮವಿಲ್ಲವೋ ಅಲ್ಲಿಯೂ ಭೇದಾಭೇದ. ಉದಾಹರಣೆಗೆ—ಪರ್ವತ ಮತ್ತು ಅಗ್ನಿ. ಪರ್ವತವಿದ್ದೂ ಅಗ್ನಿನಾಶವಾಗಬಹುದು. ಅಲ್ಲಿಯೂ ಭೇದಾಭೇದವೇ. ಭೇದ, ಅನ್ಯತ್ವ ಮತ್ತು ಅಂತರ ಶಬ್ದಗಳು 'ಅದು ಅಲ್ಲ' ಎಂಬ ತಾದಾತ್ಮ್ಯವನ್ನು ನಿಷೇಧಿಸುತ್ತವೆ. ಕೆಲವು ಕಡೆ ಈ ಶಬ್ದಗಳು ಭೇದವನ್ನು ಹೇಳದೆ ವಿಶೇಷವನ್ನೇ ಹೇಳುತ್ತವೆ. ಭೇದವಿಲ್ಲದಿರುವ ಒಂದೇ ವಸ್ತುವಿನಲ್ಲಿ ನಾನಾ ವಿಧವಾದ ಅಪರ್ಯಾಯ ಶಬ್ದಗಳ ಪ್ರಯೋಗಕ್ಕೆ ಕಾರಣವಾದ ಮತ್ತು ಪ್ರಯೋಗವನ್ನು ಕೂಡಿಸುವ ವಸ್ತುವಿಗೆ 'ವಿಶೇಷ' ಎಂದು ಹೆಸರು.

**ವಿವರಣೆ**—ಗುಣ ಮತ್ತು ವಸ್ತುಗಳಿಗೆ ಎರಡು ವಿಧವಾದ ಸಂಬಂಧವಿರುತ್ತದೆ. ಅಭೇದ ಮತ್ತು ಭೇದಾಭೇದ. ಯಾವ ಗುಣವು ವಸ್ತುವಿನೊಂದಿಗೇ ಹುಟ್ಟಿ ಅದು ಇರುವವರೆಗೂ ಇದ್ದು ಅದು ನಾಶಹೊಂದಿದಾಗಲೇ ನಾಶವಾಗುವುದೋ ಅಂತಹ ಗುಣಕ್ಕೆ ವಸ್ತುವಿನೊಂದಿಗಿರುವ ಸಂಬಂಧ ಅಭೇದ. ಉದಾ–ಹತ್ತಿ ಮತ್ತು ಬಿಳಿ ಬಣ್ಣ. ಕೆಲವು ವಸ್ತುಗಳಲ್ಲಿ ಗುಣಗಳು ಸ್ವಲ್ಪಕಾಲದವರೆಗೆ ಮಾತ್ರ ಇದ್ದು ಆ ವಸ್ತು

ಇರುವಂತೆಯೇ ನಾಶಹೊಂದುತ್ತವೆ. ಅಂತಹ ಗುಣಗಳಿಗೆ ವಸ್ತುವಿನೊಂದಿಗಿರುವ ಸಂಬಂಧ ಭೇದಾಭೇದ. ಉದಾ–ಮಾವಿನಕಾಯಿ ಮತ್ತು ಅದರ ಹಸಿರುಬಣ್ಣ, ಮಾವು ಹಣ್ಣಾದಾಗ ಹಸಿರು ಹೋಗಿ ಹಳದಿಯಾಗುತ್ತದೆ. ಇಲ್ಲಿ ಹಸಿರು ಬಣ್ಣ ಮತ್ತು ಮಾವಿನಕಾಯಿಗೆ ಭೇದವೂ ಇದೆ ಅಭೇದವೂ ಇದೆ. ಹಸಿರುಬಣ್ಣ ಇರುವಾಗ ಭೇದಾಭೇದವಿರುತ್ತದೆ. ನಾಶವಾದ ಮೇಲೆ ಭೇದ ಮಾತ್ರವೇ ಇರುತ್ತದೆ. ಇದೇರೀತಿ ಕ್ರಿಯೆ ಮತ್ತು ವಸ್ತುಗಳಿಗೆ, ಅವಯವ ಮತ್ತು ಆ ಅವಯವವನ್ನು ಹೊಂದಿರುವ ವಸ್ತುಗಳಿಗೆ ಕೆಲವೆಡೆ ಅಭೇದವೂ ಮತ್ತೆ ಕೆಲವೆಡೆ ಭೇದಾಭೇದವೂ ಸಂಬಂಧವಾಗಿರುತ್ತದೆ. ಆದರೆ ಭಗವಂತನಿಗೆ ಅವನ ಗುಣ ರೂಪ ಕ್ರಿಯೆಗಳಿಂದ ಅಭೇದವೇ ಇರುತ್ತದೆ. ಇತರ ಜಡ–ಚೇತನಗಳಿಂದ ಭೇದವೇ ಇರುತ್ತದ. ಅವನಲ್ಲಿ ತಾತ್ಕಾಲಿಕವಾದ ಗುಣರೂಪಕ್ರಿಯೆಗಳು ಇಲ್ಲವಾದ್ದರಿಂದ ಯಾವ ವಸ್ತುವಿನೊಂದಿಗೂ ಭೇದಾಭೇದವೆಂಬ ಸಂಬಂಧ ಅವನಿಗಿಲ್ಲ.

ಹತ್ತಿಯೂ ಅದರ ಬಿಳಿಬಣ್ಣವೂ ಒಂದೇ ಆದರೂ 'ಹತ್ತಿಯು ಬಿಳಿಯಾಗಿದೆ' ಎನ್ನುತ್ತೇವೆ. ಅಂದರೆ ಹತ್ತಿಯೂ ಅದರ ಬಣ್ಣವೂ ಬೇರೆ ಬೇರೆ ಎಂಬಂತೆ ವ್ಯವಹರಿಸುತ್ತೇವೆ. ಇದಕ್ಕೆ ಕಾರಣವಾದುದು ವಿಶೇಷ ಎಂಬ ತತ್ವ. ಹೀಗೆ ಕೇವಲ ಅಭೇದವಿರುವ ಎರಡು ವಸ್ತುಗಳಲ್ಲಿ ಭೇದವಿರುವಂತೆ ವ್ಯವಹಾರ ನಡೆಸುವ ಕಾರ್ಯ ಈ ವಿಶೇಷದ್ದು. ಭೇದ ಅಥವಾ ಭೇದಾಭೇದವಿರುವಲ್ಲಿ ಈ ಕಾರ್ಯ ಭೇದದ್ದೇ ಆಗಿರುತ್ತದೆ. ಈ ವಿಶೇಷವೆಂಬ ತತ್ವವೂ ವಸ್ತುವಿನಿಂದ ಅಭಿನ್ನವೆ. ಆದರೂ 'ಈ ವಸ್ತುವಿನ ವಿಶೇಷ' ಎಂಬ ಭೇದವ್ಯವಹಾರಕ್ಕೂ ಅದೇ ಕಾರಣವಾಗುತ್ತದೆ. ವಿಶೇಷದ ಈ ಸ್ವಭಾವಕ್ಕೆ 'ಸ್ವನಿರ್ವಾಹಕತ್ವ' ಎಂದು ಹೆಸರು.

ಪರಮಾತ್ಮನಲ್ಲಿರುವ ಸೃಷ್ಟಿ, ಸಂಹಾರಕ್ರಿಯೆಗಳಿಗೆ ಅವನಿಂದ ಅಭೇದವಿದೆ ಎಂದು ಹೇಳಿದರೆ ಈ ಪ್ರಶ್ನೆ ಬರುತ್ತದೆ. ಈ ಕ್ರಿಯೆಗಳು ಸಾರ್ವಕಾಲಿಕವಲ್ಲ. ಕಲ್ಪದ ಆದಿಯಲ್ಲಿ ಸೃಷ್ಟಿಕ್ರಿಯೆಯೂ ಕಲ್ಪಾಂತದಲ್ಲಿ ಸಂಹಾರಕ್ರಿಯೆಯೂ ನಡೆಯುತ್ತದೆ. ಹೀಗೆ ಈ ಕ್ರಿಯೆಗಳು ತಾತ್ಕಾಲಿಕ. ಆದರೆ ಪರಮಾತ್ಮ ಸಾರ್ವಕಾಲಿಕ. ಆದ್ದರಿಂದ ಆ ಕ್ರಿಯೆಗಳಿಗೂ ಅವನಿಗೂ ಭೇದಾಭೇದವೇ ಇರಬೇಕು, ಅಭೇದ ಹೇಗೆ ? ಇದಕ್ಕೆ ಉತ್ತರ—ಪರಮಾತ್ಮನಲ್ಲಿರುವ ಈ ಎರಡು ಕ್ರಿಯೆಗಳೂ ಪರಮಾತ್ಮನಂತೆ ಶಾಶ್ವತವಾಗಿವೆ, ಈ ಕ್ರಿಯಾಶಕ್ತಿಯು ಎಂದೂ ಅವನಲ್ಲಿ ಇಲ್ಲವೆಂದಾಗುವುದಿಲ್ಲ. ಆದರೆ ಸಾಧನಸಲಕರಣೆಗಳು ಇರುವಾಗ ಅದು ಪ್ರಕಟಗೊಳ್ಳುತ್ತದೆ, ಇಲ್ಲವಾದರೆ ಸುಪ್ತವಾಗಿರುತ್ತದೆ. ಭಗವಂತನ ಕ್ರಿಯೆಗಳಲ್ಲಿರುವ ಈ ಎರಡು ಅವಸ್ಥೆಗಳನ್ನೇ ವ್ಯಕ್ತಿ, ಶಕ್ತಿಗಳೆಂದು ಕರೆಯಲಾಗುತ್ತದೆ. ಕಲ್ಪಾದಿಯಲ್ಲಿ ಸೃಜನ ಶಕ್ತಿಯು ವ್ಯಕ್ತವಾಗಿದ್ದು ಕಲ್ಪಾಂತ್ಯದಲ್ಲಿ ಸುಪ್ತವಾಗಿರುತ್ತದೆ. ಈ ಶಕ್ತಿ-ವ್ಯಕ್ತಿಗಳೆಂಬ ಎರಡು ಧರ್ಮಗಳೂ

ಆ ಕ್ರಿಯೆಯಿಂದ ಬೇರಲ್ಲ, ಆ ಕ್ರಿಯಾ ಸ್ವರೂಪವೇ ಆಗಿವೆ. ಆದ್ದರಿಂದ ಪರಮಾತ್ಮನಲ್ಲಿ ಭಿನ್ನಭಿನ್ನವಾದ ಯಾವ ಧರ್ಮಗಳೂ ಇಲ್ಲ.

**'ಅಹಂ ಬ್ರಹ್ಮಾಸ್ಮಿ' ಐಕ್ಯಪರವಲ್ಲವೆನ್ನಲು ಪ್ರಮಾಣಗಳ ಆಧಾರ :**

**ಭಾಷ್ಯ—ಯದಾಹುರ್ಬ್ರಹ್ಮವಿಜ್ಞಾನಾತ್ ಸಮಗ್ರತ್ವಂ ಯಿಯಾಸವಃ ।**
**ಬ್ರಹ್ಮಜ್ಞಾನಾತ್ ಸಮಗ್ರತ್ವಂ ನಾನ್ಯತಶ್ಚೇತಿ ನಿಶ್ಚಯಾತ್ ।**
**ತತ್ರ ಕೇಚಿನ್ಮನುಷ್ಯಾಸ್ತು ಮನ್ಯಂತೇ ಬ್ರಹ್ಮ ಕಿಂಮತೇಃ ।**
**ಸಮಗ್ರಭಾವಮಗಮದಿತಿ ಬ್ರೂಯಾಚ್ಚ ತಾನಿತಿ ।**
**ಬ್ರಹ್ಮಾಪಿ ಸರ್ವದಾಽಽತ್ಮಾನಮಹೇಯಂ ಗುಣಬೃಂಹಿತಂ ।**
**ಸರ್ವದಾಸ್ತೀತಿ ಮೇಯಂ ಚ ವಿಜಾನಾತಿ ತಥೈವ ತು ।**
**ಅತ ಏವ ಸಮಗ್ರತ್ವಂ ಸ್ವತ ಏವಾಸ್ಯ ಸರ್ವದಾ ।**
**ತದಹೇಯಂ ಪರಂ ಬ್ರಹ್ಮ ಯೋ ಯೋಽವೇದ್ ಗುಣಬೃಂಹಿತಂ ।**
**ಸರ್ವದಾಽಸ್ತೀತಿ ಮೇಯಂ ಚ ಸ ಸ ಯಾತಿ ಸಮಗ್ರತಾಮ್ ।**

**ಅನುವಾದ**—ಬ್ರಹ್ಮಜ್ಞಾನದಿಂದ ತಮಗೆ ಯೋಗ್ಯವಾದ ಪೂರ್ಣತೆಯನ್ನು ಹೊಂದಲಿಚ್ಛಿಸುವವರು ಹೇಳುತ್ತಾರೆ–'ಬ್ರಹ್ಮಜ್ಞಾನದಿಂದಲೇ ತಮಗೆ ಯೋಗ್ಯವಾದ ಪೂರ್ಣತೆಯುಂಟಾಗುತ್ತದೆ, ಬೇರೆ ಯಾವುದರಿಂದಲೂ ಆಗುವುದಿಲ್ಲ ವೆಂಬುದು ನಿಶ್ಚಯ'ಎಂದು. ಆ ವಿಷಯದಲ್ಲಿ ಕೆಲವು ಮನುಷ್ಯರು ಹೀಗೆ ಅಭಿಪ್ರಾಯಪಡುತ್ತಾರೆ–'ಆ ಬ್ರಹ್ಮನೂ ತನ್ನ ಜ್ಞಾನದಿಂದಲೇ ಪೂರ್ಣನಾದನೋ ಹೇಗೆ?'ಎಂದು. ಅವರಿಗೆ ಹೀಗೆ ಹೇಳಬೇಕು–ಕೇವಲ ಚತುರ್ಮುಖಾದಿ ಅಧಿಕಾರಿಗಳೇ ಅಲ್ಲದೆ ಬ್ರಹ್ಮನೂ ಕೂಡ ತನ್ನನ್ನು ಅಹೇಯನೆಂದೂ, ಗುಣಪೂರ್ಣನೆಂದೂ, ಸರ್ವದಾ ಇದ್ದಾನೆಂದು ತಿಳಿಯಲ್ಪಡಬೇಕಾದವನೆಂದೂ ಸರ್ವದಾ ತಿಳಿದಿದ್ದಾನೆ. ಆದ್ದರಿಂದಲೇ ಅವನು ಸ್ವತ ಏವ ಪೂರ್ಣನಾಗಿದ್ದಾನೆ. ಲಕ್ಷ್ಮೀ ಮೊದಲಾದವರು ಪರಮಾತ್ಮನಿಂದ ತಮ್ಮತಮ್ಮ ಯೋಗ್ಯತೆಗೆ ಅನುಗುಣವಾಗಿ ಪೂರ್ಣತೆಯನ್ನು ಪಡೆಯುತ್ತಾರೆ. ಆ ಪರಬ್ರಹ್ಮನು ಅಹೇಯನೆಂದೂ, ಗುಣಪೂರ್ಣನೆಂದೂ, ಸರ್ವದಾ ಇದ್ದಾನೆಂದು ತಿಳಿಯಲ್ಪಡಬೇಕಾದವನೆಂದೂ ಯಾರು ಯಾರು ತಿಳಿಯುತ್ತಾರೆಯೋ ಅವರೆಲ್ಲರೂ ತಮಗೆ ಯೋಗ್ಯವಾದ ಪೂರ್ಣತೆಯನ್ನು ಪಡೆಯುತ್ತಾರೆ.

**ಭಾಷ್ಯ—ಮುಖ್ಯಂ ಸಮಗ್ರಂ ತದ್ ಬ್ರಹ್ಮಜ್ಞಾನಸ್ಯಾಪಿ ಸಮಗ್ರತಃ ।**
**ಕಿಂಚಿತ್ ಸಮಗ್ರತಾಂ ದೇವಾಸ್ತೇಷಾಂ ಜ್ಞಾನಂ ಹಿ ತಾದೃಶಮ್ ।**

**ಅಪುಸ್ತತೋಽಥಮಾಂ ಜ್ಞಾನತಾದೃಕ್ತ್ವಾದ್ ಋಷಯೋಽಪಿ ತು ।**
**ಋಷಿಭ್ಯೋಽಪ್ಯಧಮಾಂ ಪ್ರಾಪುಃ ಮಾನುಷಾಶ್ಚ ಸಮಗ್ರತಾಮ್ ।**
**ಅಹೇಯಂ ಚ ಗುಣೈಃ ಪೂರ್ಣಂ ನಿತ್ಯಾಪ್ತಿಜ್ಞಾನಗೋಚರಮ್ ।**
**ಬ್ರಹ್ಮ ಪಶ್ಯನ್ ವಾಮದೇವಃ ಸೂಕ್ತಮೇತದ್ದದರ್ಶ ಹ ।**
**ಅಹಂ ಮನುಃ ಸೂರ್ಯ ಇತಿ ಸ್ವಾಂತರ್ಯಾಮ್ಯವೇಕ್ಷಯಾ ।**

**ಅನುವಾದ**—ಪರಮಾತ್ಮನಿಗೆ ನಿರವಧಿಕವಾದ ಪೂರ್ಣತ್ವವಿದೆ. ಏಕೆಂದರೆ, ಅವನ ಜ್ಞಾನವೂ ಹಾಗೆಯೇ ನಿರವಧಿಕವಾಗಿ ಪೂರ್ಣವಾಗಿದೆ. ಪರಮಾತ್ಮನಿಗೆ ಹೋಲಿಸಿದರೆ ದೇವತೆಗಳಿಗೆ ಅಲ್ಪಪೂರ್ಣತೆ. ಏಕೆಂದರೆ ಅವರ ಜ್ಞಾನವೂ ಅಪೂರ್ಣತೆಯನ್ನು ಪಡೆದಿದೆ. ಋಷಿಗಳಿಗೆ ಅದಕ್ಕಿಂತಲೂ ಕಡಿಮೆ ಜ್ಞಾನ. ಆದ್ದರಿಂದ ಅದಕ್ಕಿಂತಲೂ ಕಡಿಮೆ ಪೂರ್ಣತೆ. ಮನುಷ್ಯರಿಗೆ ಋಷಿಗಳಿಗಿಂತ ಕಡಿಮೆ ಜ್ಞಾನ ಮತ್ತು ಅದಕ್ಕನುಗುಣವಾದ ಪೂರ್ಣತೆ. ಪರಬ್ರಹ್ಮನು ಅಹೇಯನು, ಗುಣಪೂರ್ಣನು ಮತ್ತು ಸರ್ವದಾ ಇರುವವನೆಂದು ತಿಳಿಯಲ್ಪಡುವವನು ಎಂದು ಪ್ರತ್ಯಕ್ಷೀಕರಿಸಿಕೊಂಡ ವಾಮದೇವ ಋಷಿಯು ತನ್ನ ಅಂತರ್ಯಾಮಿಯ ದೃಷ್ಟಿಯಿಂದ 'ಅಹಂ ಮನುರಭವಂ ಸೂರ್ಯಶ್ಚ' ಇತ್ಯಾದಿ ಸೂಕ್ತಕ್ಕೆ ದ್ರಷ್ಟ್ರವಾದನು. ಅಂದರೆ ಈ ಸೂಕ್ತದಲ್ಲಿ ಹೇಳಲ್ಪಟ್ಟ ವಿಷಯಗಳು ವಾಮದೇವನ ಅಂತರ್ಯಾಮಿಯಾದ ಪರಮಾತ್ಮನಿಗೇ ಸಲ್ಲುತ್ತವೆ, ವಾಮದೇವನಿಗಲ್ಲ.

**ಭಾಷ್ಯ—ಅಹಂಶಬ್ದೋ ಯತೋ ವಿಷ್ಣೌ ತತಶ್ಚೋತ್ತಮಪೂರುಷಾಃ ।**
**ವರ್ತಂತೇಽಭವಮಿತ್ಯಾದ್ಯಾಃ ಸರ್ವಾಂತಸ್ಥೇ ಜನಾರ್ದನೇ ।**
**ಮನುರೇಷೋಽವಬೋಧತ್ವಾನ್ಮನ್ವಂತಸ್ಥೋ ಜನಾರ್ದನಃ ।**
**ಸ ಹ್ಯಾಚಾರಾನುವಾಚೇಶಃ ಪ್ರೇರಯನ್ ಮನುಮಾನಸಮ್ ।**
**ಸ ಏವ ಸೂರಿಭಿಃ ಪ್ರಾಪ್ಯಃ ಸೂರ್ಯಾಂತಸ್ಥೋ ಮುಮುಕ್ಷುಭಿಃ ।**
**ಸ ಏವ ಕಕ್ಷಗೈಃ ಸೇವ್ಯಃ ಕಕ್ಷೀವತಿ ಸಮಾಸ್ಥಿತಃ ।**
**ಸ ಏವ ಶುಕ್ರಸಂಸ್ಥಸ್ತು ನೀತೀಃ ಕವಯತಿ ಸ್ವಯಮ್ ।**
**ಯತಃ ಕವಿಃ ಸ ಕಾಮಸ್ಯ ಪ್ರೇರಣಾದುಶನಾ ಸ್ಮೃತಃ ।**
**ಸ ಏವ ಶಂಬರಪುರೋ ಬಿಭೇದೇಂದ್ರೇ ವ್ಯವಸ್ಥಿತಃ ।**
**ಸರ್ವಾಂತರ್ಯಾಮಕತ್ವಾತ್ತು ಸರ್ವಕರ್ಮಾ ಸ ಏವ ಹಿ ।**

**ಅನುವಾದ**—ಅಹಂ ಶಬ್ದವು ವಿಷ್ಣುವಿನಲ್ಲಿಯೇ ಮುಖ್ಯವಾದದ್ದರಿಂದ ಸರ್ವಾಂತಸ್ಥನಾದ ಜನಾರ್ದನನಲ್ಲಿ 'ಅಭವಂ, ಅಸ್ಮಿ' ಮೊದಲಾದ ಉತ್ತಮಪುರುಷ ಪ್ರಯೋಗಗಳು ಕೂಡುತ್ತವೆ. ಜ್ಞಾನರೂಪಿಯಾದುದರಿಂದ ಪರಮಾತ್ಮನಿಗೆ ಮನು

ಎಂದು ಹೆಸರು. ಅವನೇ ಸ್ವಾಯಂಭುವಮನುವಿನಲ್ಲಿದ್ದು, ಅವನ ಮನಸ್ಸನ್ನು ಪ್ರೇರಿಸಿ, ಆಚಾರಗಳನ್ನು ಉಪದೇಶಿಸಿದನು. ಸೂರಿಗಳಿಂದ ಪ್ರಾಪ್ಯನಾದ್ದರಿಂದ ಅವನೇ ಸೂರ್ಯನೆನಿಸಿ ಸೂರ್ಯಾಂತಸ್ಥನಾಗಿದ್ದಾನೆ. ಮುಮುಕ್ಷುಗಳಾದ, ಕಾಡಿನಲ್ಲಿ ವಾಸಿಸುವ ಋಷಿಗಳಿಂದ ಸೇವ್ಯನಾದುದರಿಂದ 'ಕಕ್ಷೀವಾನ್' ಎನಿಸಿ, ಕಕ್ಷೀವಾನ್ ಎಂಬ ಋಷಿಯ ಅಂತರ್ಯಾಮಿಯಾಗಿದ್ದಾನೆ. ನೀತಿಗಳನ್ನು ಸ್ವತಃ ನಿರೂಪಿಸುವುದರಿಂದ 'ಕವಿ' ಎನಿಸಿ, ಅವನೇ ಶುಕ್ರಾಂತಸ್ಥನಾಗಿದ್ದಾನೆ. ಕಾಮವನ್ನು ಎಂದರೆ, ಇಚ್ಛೆಯನ್ನು ಪ್ರೇರಿಸುವು ದರಿಂದ ಅವನಿಗೇ 'ಉಶನಾ' ಎಂದು ಹೆಸರು. ಅವನೇ ಇಂದ್ರನಲ್ಲಿದ್ದು ಶಂಬರಾ ಸುರನ ಪುರಗಳನ್ನು ಭೇದಿಸಿದನು. ಸರ್ವಾಂತರ್ಯಾಮಿಯಾಗಿರುವುದರಿಂದ ಅವನೇ ಎಲ್ಲ ಕರ್ಮಗಳನ್ನೂ ಮಾಡುವವನು. ಆದ್ದರಿಂದ ಅವನಿಗೇ 'ಸರ್ವಕರ್ಮಾ' ಎಂದು ಹೆಸರು.

**ವಿವರಣೆ**– 'ಅಹಂ ಮನುರಭವಂ ಸೂರ್ಯಶ್ಚಾಹಂ ಕಕ್ಷೀವಾನ್‌ಋಷಿರಸ್ಮಿ ವಿಪ್ರಃ' (ಋಗ್ವೇದ ೩–೬–೧೫) ಎಂಬ ಮಂತ್ರಕ್ಕೆ ಹೀಗೆ ಅರ್ಥ–ನನ್ನ ಅಂತರ್ಯಾಮಿಯು ಜ್ಞಾನರೂಪನಾದುದರಿಂದ ಮನುನಾಮಕನಾಗಿ ಮನ್ವಂತಸ್ಥನಾಗಿರುವನು. ಸೂರಿ ಪ್ರಾಪ್ಯನಾದುದರಿಂದ ಸೂರ್ಯನಾಮಕನಾಗಿ ಸೂರ್ಯಾಂತಸ್ಥನಾಗಿರುವನು. ವನವಾಸಿ ಗಳಿಂದ ಸೇವ್ಯನಾದುದರಿಂದ ಕಕ್ಷೀವಾನ್ ನಾಮಕನಾಗಿ, ಕಕ್ಷೀವಾನ್ ಋಷಿಯ ಅಂತಸ್ಥನಾಗಿಯೂ ಇರುವನು.

**ಭಾಷ್ಯ—ತತಃ ಸೂಕ್ತೇ ತಥೋವಾಚ ವಾಮದೇವಃ ಶ್ರಿಯಃಪತಿಮ್ ।**
**ಯೋ ಯೋಽಹೇಯಂ ಪರಂ ಬ್ರಹ್ಮ ಸದೈವಾಸ್ತೀತಿ ಮಾನಗಮ್ ।**
**ಇದಾನೀಮಪಿ ಜಾನಾತಿ ಸ್ವಯೋಗ್ಯಾಂ ಸ ಸಮಗ್ರತಾಮ್ ।**
**ಪ್ರಾಪ್ನೋತಿ ತಸ್ಯ ದೇವಾಶ್ಚ ನಾಭೂತಿಂ ಕರ್ತುಮೀಶತೇ ।**
**ಆತ್ಮಾ ಹಿ ವಿಷ್ಣುರ್ದೇವಾನಾಂ ತೇಷು ವ್ಯಾಪ್ತೋ ಯತಃ ಸದಾ ।**
**ನಿಯೋಕ್ತೃತ್ವೇನ ಕಾರ್ಯೇಷು ತಜ್ಜ್ಞೋ ಯಸ್ಮಾಚ್ಚ ಸಾಧಕಃ ।**
**ಯಸ್ಯ ಪ್ರೀತೋ ಹರಿರ್ನಿತ್ಯಂ ತಸ್ಯ ಪ್ರೀತಾಶ್ಚ ದೇವತಾಃ ।**
**ಪ್ರೀತಿಯೋಗಾನ್ನೈವ ತಸ್ಯ ವಿರುದ್ಧಂ ಕರ್ತುಮೀಶತೇ ।**

**ಅನುವಾದ**—ತನ್ನ ಅಂತರ್ಯಾಮಿಯಾದ ಮತ್ತು ಮನ್ವಾದಿಗಳ ಅಂತರ್ಯಾಮಿ ಯಾದ ಶ್ರೀಪತಿಯನ್ನು ಗಮನದಲ್ಲಿಟ್ಟುಕೊಂಡು ವಾಮದೇವ ಋಷಿಯು 'ಅಹಂ ಮನುರಭವಂ...' ಇತ್ಯಾದಿ ಹೇಳಿದನು. ಈಗಲೂ ಕೂಡ ಯಾರು ಯಾರು 'ಬ್ರಹ್ಮನು ಅಹೇಯನು ಮತ್ತು ಸದಾ ಇರುವವನೆಂದು ತಿಳಿಯಲ್ಪಡಬೇಕಾದವನೆಂ'ದು ತಿಳಿಯುತ್ತಾರೋ ಅವರೆಲ್ಲರೂ ತಮಗೆ ಯೋಗ್ಯವಾದ ಪೂರ್ಣತೆಯನ್ನು ಪಡೆಯು ತ್ತಾರೆ. ದೇವತೆಗಳೂ ಕೂಡ ಅಂತಹ ಜ್ಞಾನಿಯ ಜ್ಞಾನಫಲವನ್ನು ನಾಶಮಾಡಲು

ಸಮರ್ಥರಾಗುವುದಿಲ್ಲ. ಏಕೆಂದರೆ ವಿಷ್ಣುವು ಸರ್ವದಾ ದೇವತೆಗಳಿಗೆ ಸ್ವಾಮಿಯಾಗಿ ಅವರನ್ನು ಅವರವರ ಕಾರ್ಯಗಳಲ್ಲಿ ತೊಡಗಿಸುತ್ತಾ ಅವರಲ್ಲಿ ವ್ಯಾಪ್ತನಾಗಿದ್ದಾನೆ. ಇಂತಹ ಹರಿಯನ್ನು ಜ್ಞಾನಿಯು ತಿಳಿದಿರುತ್ತಾನೆ. ಯಾವ ಜ್ಞಾನಿಗೆ ಹರಿಯು ಪ್ರಸನ್ನನಾಗಿದ್ದಾನೋ ಅವನಿಗೆ ಎಲ್ಲ ದೇವತೆಗಳೂ ಪ್ರಸನ್ನರಾಗುತ್ತಾರೆ. ಪ್ರೀತಿ ಇರುವುದರಿಂದಲೇ ದೇವತೆಗಳು ಜ್ಞಾನಿಗೆ ವಿರುದ್ಧವಾದುದನ್ನು ಮಾಡುವುದಿಲ್ಲ ಹೊರತು ಸಾಮರ್ಥ್ಯವಿಲ್ಲದಿರುವುದರಿಂದಲ್ಲ.

**ಭಾಷ್ಯ—ಏವಂ ವಿಲಕ್ಷಣಂ ದೇವಮುಪಾಸ್ತೇ ಜೀವರೂಪಿಣಮ್ ।**
**ಅಹೇಯೋಽಸ್ತೀತಿ ಮೇಯೋಽನ್ಯೋಽಥಾನ್ಯೋಽಸೌ ಹರಿರಿತ್ಯಪಿ ।**
**ನ ಸ ವೇದ ಪರಂ ವಿಷ್ಣುಂ ಜೀವರೂಪೇಣ ವೇತ್ತಿ ಯತ್ ।**
**ನಾಹೇಯತ್ವಂ ಚ ವೇದಾಸ್ಯ ತಸ್ಮಾತ್ ಪಶುವದೀರಿತಃ ।**
**ದೇವಾನಾಂ ಪಶುವಚ್ಚಾಸೌ ಯೋ ವೇದಾಹೇಯರೂಪಿಣಮ್ ।**
**ಪಶವೋ ಬಹವೋ ಯದ್ವತ್ ಪುರುಷಂ ಭೋಜಯಂತ್ಯುತ ।**
**ತತ್ತ್ವಜ್ಞಃ ಪುರುಷಃ ತದ್ವದೇಕೋಽಪಿ ಬಹುಗಾ ಯಥಾ ।**
**ದೇವಾನ್ ಭೋಜಯತಿ ಜ್ಞಾನಸಂಪತ್ತ್ಯಾ ವಿಷ್ಣುಸಂಶ್ರಯಾತ್ ।**
**ಸ್ವೀಕಾರೇ ತು ಪಶೋಃ ಪ್ರೀತಿರೇಕಸ್ಯಾಪಿ ಭವಿಷ್ಯತಿ ।**
**ಬಹೂನಾಂ ಹಿ ಗವಾಂ ಲಾಭೇ ಪರಾ ಪ್ರೀತಿಶ್ಚ ಕಿಂ ಪುನಃ ।**
**ತಸ್ಮಾತ್ ಸುಬಹುಗೋರೂಪೇ ದೇವಾನಾಂ ತತ್ತ್ವವೇದಿನಿ ।**
**ಭವೇದಭ್ಯಧಿಕಾ ಪ್ರೀತಿರ್ವಿಷ್ಣ್ವಹೇಯತ್ವವೇದನಾತ್ ।**

**ಅನುವಾದ**—ಹೀಗೆ ವಿಲಕ್ಷಣನಾದ ದೇವನನ್ನು ಯಾರು 'ಜೀವರೂಪಿ'ಎಂದು ಉಪಾಸನೆ ಮಾಡುತ್ತಾನೆಯೋ, 'ಅಹೇಯನಾದವನೂ ಅಸ್ತಿ ಎಂದು ತಿಳಿಯಲ್ಪಡುವವನೂ ಅನ್ಯನಾದ ಶಬಲಬ್ರಹ್ಮ, ಹರಿಯು ನಿರ್ಗುಣ' ಎಂದು ಯಾರು ಉಪಾಸನೆ ಮಾಡುತ್ತಾನೆಯೋ ಅವನಿಗೆ ಸರಿಯಾದ ಜ್ಞಾನವಿಲ್ಲ. ಏಕೆಂದರೆ, ಅವನು ಸರ್ವೋತ್ತಮನಾದ ವಿಷ್ಣುವನ್ನು ಜೀವನೆಂದು ತಿಳಿದಿದ್ದಾನೆ, ವಿಷ್ಣುವಿನ ಅಹೇಯತ್ವ ಜ್ಞಾನವನ್ನು ಹೊಂದಿಲ್ಲ. ಆದ್ದರಿಂದ ಅವನು ಮನುಷ್ಯರ ವಶದಲ್ಲಿರುವ ಜ್ಞಾನವಿಲ್ಲದ ಪಶುವಿನಂತೆ. ಯಾರು ವಿಷ್ಣುವಿನ ಅಹೇಯತ್ವಾದಿಗಳನ್ನು ತಿಳಿಯುತ್ತಾನೆಯೋ ಅವನು ದೇವತೆಗಳಿಗೆ ಪ್ರಿಯವಾದ ಪಶುವಿನಂತೆ. ಅನೇಕ ಪಶುಗಳು ಹೇಗೆ ಮನುಷ್ಯನಿಗೆ ಭೋಜ್ಯಪದಾರ್ಥಗಳನ್ನು ಒದಗಿಸಿ ಸಂತೋಷಪಡಿಸುತ್ತವೆಯೋ ಹಾಗೆ ತತ್ತ್ವಜ್ಞಾನಿಯಾದವನು ಒಬ್ಬನೇ ಆದರೂ ಅನೇಕ ಗೋವುಗಳಂತೆ, ಪರಮಾತ್ಮನನ್ನು ಆಶ್ರಯಿಸಿರುವುದರಿಂದ ಅವನ ಜ್ಞಾನದ ಬಲದಿಂದ ದೇವತೆಗಳನ್ನು ಸಂತೋಷಪಡಿಸುತ್ತಾನೆ. ಒಂದು ಗೋವನ್ನು ಸ್ವೀಕರಿಸಿದರೂ ಸಂತೋಷವುಂಟಾಗುತ್ತದೆ. ಹೀಗಿರು

ವಾಗ ಅನೇಕ ಗೋವುಗಳು ಲಭಿಸಿದರೆ ಹೆಚ್ಚು ಸಂತೋಷವಾಗುವುದೆಂದು ಹೇಳುವುದೇನು? ಆದ್ದರಿಂದ ಅನೇಕ ಗೋಸದೃಶನಾದ ಒಬ್ಬ ತತ್ತ್ವಜ್ಞಾನಿಯು ವಿಷ್ಣುವಿನ ಅಹೇಯತ್ವವನ್ನು ತಿಳಿದಿರುವುದರಿಂದ ದೇವತೆಗಳಿಗೆ ಅವನಲ್ಲಿ ಅತ್ಯಧಿಕ ವಾದ ಪ್ರೀತಿಯುಂಟಾಗುತ್ತದೆ.

**ಭಾಷ್ಯ—ನಿತ್ಯಾಹೇಯಸ್ತಥೈವಾನ್ಯಸ್ತದನ್ಯೋ ವಿಷ್ಣುರಿತ್ಯಪಿ ।**
**ದೇವಾನಾಮಪ್ರಿಯಂ ಜ್ಞಾನಂ ನೈವಂ ವಿದ್ಯಾದತಃ ಪುಮಾನ್ ।**
**ವಿಷ್ಣೋರಹೇಯತಾಂ ಚೈವ ನಿತ್ಯತ್ವಂ ಪೂರ್ಣತಾಮಪಿ ।**
**ಯೋ ನ ವೇದ ತಥಾ ಯಶ್ಚ ಜೀವೈರೈಕ್ಯಂ ಹರೇರ್ವದೇತ್ ।**
**ಯಶ್ಚಾಸತ್ಯಂ ಜಗದ್ ಬ್ರೂಯಾತ್ ಸರ್ವೇ ತೇ ತಮಸಿ ಸ್ಫುಟಮ್।**
**ಮಜ್ಜಂತಿ ಸರ್ವವೇದೈರ್ಹಿ ಗುಣೈಃ ಸರ್ವೈರ್ಹರಿರ್ಯತಃ ।**
**ಪೂರ್ಣೋ ನಿತ್ಯಮಪೂರ್ಣಾಶ್ಚ ಜೀವಾ ಮುಕ್ತಾ ಅಪಿ ಸ್ಫುಟಮ್ ।**

**ಅನುವಾದ**—ನಿತ್ಯದಲ್ಲಿಯೂ ಅಹೇಯನಾಗಿರುವವನು ಬೇರೆ, ವಿಷ್ಣುವು ಅವನಿಗಿಂತ ಬೇರೆ ಎಂಬ ಜ್ಞಾನವು ದೇವತೆಗಳಿಗೆ ಅಪ್ರಿಯವಾದದ್ದು. ಆದ್ದರಿಂದ ಮನುಷ್ಯನು ಹಾಗೆ ತಿಳಿಯಬಾರದು. ವಿಷ್ಣುವಿನ ಅಹೇಯತ್ವವನ್ನೂ, ನಿತ್ಯತ್ವ ವನ್ನೂ, ಗುಣಪೂರ್ಣತ್ವವನ್ನೂ ಯಾರು ತಿಳಿಯುವುದಿಲ್ಲವೋ ಯಾರು ವಿಷ್ಣುವಿಗೆ ಜೀವರಿಂದ ಐಕ್ಯವನ್ನು ಹೇಳುತ್ತಾನೆಯೋ ಮತ್ತು ಯಾರು ಜಗತ್ತನ್ನು ಅಸತ್ಯ ವೆಂದು ಹೇಳುತ್ತಾನೆಯೋ ಅವರೆಲ್ಲರೂ ತಮಸ್ಸಿನಲ್ಲಿ ಮುಳುಗುತ್ತಾರೆ. ಏಕೆಂದರೆ ಎಲ್ಲ ವೇದಗಳೂ ಹರಿಯು ನಿತ್ಯನೆಂದೂ ಮತ್ತು ಗುಣಪೂರ್ಣನೆಂದೂ, ಮುಕ್ತ ಜೀವರೂ ಸಹ ಅಪೂರ್ಣರೇ ಎಂದೂ ಸ್ಪಷ್ಟವಾಗಿ ಹೇಳುತ್ತವೆ.

**ಭಾಷ್ಯ—ನಿಃಶೇಷದುಃಖಮೋಕೇನ ಸುಖೈಕಾನುಭವಸ್ತು ಯಃ ।**
**ಮೋಕ್ಷ ಇತ್ಯುಚ್ಯತೇ ವೇದೈಸ್ತೇಽಪಿ ಮುಕ್ತಾ ಹರಿಂ ಸದಾ ।**
**ಉಪಾಸತೇ ಜಗಚ್ಚೈತತ್ ಸರ್ವದಾಽದ್ಯಂತವರ್ಜಿತಮ್ ।**
**ನ ಕದಾಚಿಜ್ಜಗನ್ನಾಶೋ ನ ಕದಾಚಿತ್ ತದನ್ಯಥಾ ।**
**ಜಗತ್ ಪ್ರವಾಹರೂಪೇಣ ಸರ್ವದೈವ ವ್ಯವಸ್ಥಿತಮ್ ।**
**ಜ್ಞಾನತಃ ಕರ್ಮತೋ ವಾಽಪಿ ತಪಸಾ ಶಕ್ತಿತೋಽಪಿ ವಾ ।**
**ನ ಕಸ್ಯಾಪ್ಯನ್ಯಥಾಭಾವ್ಯಂ ಜಗದೇತತ್ ಕದಾಚನ ।**
**ಸತ್ಯೋ ವಿಷ್ಣುಃ ಶ್ರೀಶ್ಚ ಸತ್ಯಾ ಜೀವಾಃ ಸತ್ಯಾ ಜಡಂ ತಥಾ ।**
**ಅಸತ್ಯಂ ನಾಸ್ತಿ ಕಿಂಚಿಚ್ಚ ಸರ್ವೇಷಾಂ ಜ್ಞಾನ ಗೋಚರಮ್ ।**
**ಜ್ಞಾತ್ವಾ ವಿಷ್ಣುಮತೋ ಮುಕ್ತಿಂ ಪ್ರಾಪ್ನುಯಾತ್ ಪುರುಷೋತ್ತಮಂ**
**ಇತಿ ಭವಿಷ್ಯತ್ಪರ್ವಣಿ ।**

**ಅನುವಾದ**—ಸಕಲ ದುಃಖ ನಿವೃತ್ತಿಯಿಂದ ಕೂಡಿದ ಕೇವಲ ಸುಖಾನುಭವಕ್ಕೆ ವೇದದಲ್ಲಿ ಮೋಕ್ಷ ಎಂದು ಹೆಸರು. ಅಂತಹ ಮೋಕ್ಷವನ್ನು ಪಡೆದವರೂ ಕೂಡಾ ಸರ್ವದಾ ಶ್ರೀಹರಿಯನ್ನು ಉಪಾಸನೆ ಮಾಡುತ್ತಾರೆ. ಈ ಜಗತ್ತಿಗೆ ಯಾವಾಗಲೂ ಆದ್ಯಂತಗಳಿಲ್ಲ. ಬಾಧವೂ ಇಲ್ಲ. ಆದ್ಯಂತಗಳಿಲ್ಲದಿರುವ ಮತ್ತು ಬಾಧವಿಲ್ಲದಿರುವ ವಿಷಯದಲ್ಲಿ ಎಂದೂ ವ್ಯತ್ಯಾಸವಾಗುವುದಿಲ್ಲ. ಜಗತ್ತು ಪ್ರವಾಹರೂಪದಿಂದ ಯಾವಾಗಲೂ ಇದ್ದೇ ಇದೆ. ಜ್ಞಾನದಿಂದಾಗಲೀ, ಕರ್ಮದಿಂದಾಗಲೀ, ತಪಸ್ಸಿನಿಂದಾಗಲೀ, ಶಕ್ತಿಯಿಂದಾಗಲೀ ಯಾರೂ ಯಾವಾಗಲೂ ಈ ಜಗತ್ತನ್ನು ಬೇರೆ ರೀತಿ ಮಾಡಲು ಸಾಧ್ಯವಿಲ್ಲ. ವಿಷ್ಣುವು ಸತ್ಯ. ಲಕ್ಷ್ಮಿಯೂ ಸತ್ಯ. ಜೀವರೂ ಸತ್ಯ ಮತ್ತು ಜಡವೂ ಸತ್ಯ. ಎಲ್ಲರ ಜ್ಞಾನಕ್ಕೆ ವಿಷಯವಾದ ಯಾವುದೂ ಅಸತ್ಯವಲ್ಲ. ವಿಷ್ಣುವನ್ನು ಪುರುಷೋತ್ತಮನೆಂದು ತಿಳಿದು ಅವನಿಂದ ಮುಕ್ತಿಯನ್ನು ಪಡೆಯಬೇಕು ಎಂದು ಭವಿಷ್ಯತ್ಪರ್ವದಲ್ಲಿ ಹೇಳಿದೆ.

**ಭಾಷ್ಯ—ಇದಮಿತ್ಯಾತ್ಮನೋ ಯೋಗ್ಯಂ। ಸರ್ವಂ ಸಮಗ್ರಂ ಭವತಿ। ನಿರ್ದುಃಖಾನಂದಸ್ಯಾಪೇಕ್ಷಿತತ್ವಾನ್ಮನಸಿ ಸ್ಥಿತತ್ವೇನೇದಮಿತಿ ಯುಜ್ಯತೇ । 'ತತ್ ಸರ್ವಮಭವತ್' 'ಸರ್ವಂ ಭವಿಷ್ಯಂತಃ' ಇತ್ಯಾದಿನಾ ಸಮಗ್ರಭಾವಸ್ಯ ಪ್ರಸ್ತುತತ್ವಾತ್ ।**

**ಬ್ರಹ್ಮ ಪಶ್ಯನ್ ವಾಮದೇವೋ ಬ್ರಹ್ಮಣೋ ಮನ್ವಾದಿಜೀವೈರಹೇಯತ್ವಂ ಪ್ರತಿಪೇದೇ ।**

**ಬ್ರಹ್ಮ ಪಶ್ಯನ್ ವಾಮದೇವೋ ಬ್ರಹ್ಮಣೋऽಹೇಯತಾಂ ಸದಾ ।**
**ಮನ್ವಾದಿಭಿಃ ಸರ್ವಜೀವೈಃ ಪ್ರತಿಪೇದೇ ಹಿ ಮಂತ್ರದೃಕ್ ।**
**ಇತಿ ಬ್ರಾಹ್ಮೇ ।**

**ಅನುವಾದ**—'ಇದಂ' ಎಂದರೆ ತನಗೆ ಯೋಗ್ಯವಾದ ಎಂದು ಅರ್ಥ. ಇದಂ ಎಂಬ ಸರ್ವನಾಮವು ಪ್ರಕೃತವಾದುದನ್ನು ಪರಾಮರ್ಶೆ ಮಾಡುತ್ತದೆ. ವಕ್ತೃಶ್ರೋತೃಗಳ ಬುದ್ಧಿಯಲ್ಲಿ ಪ್ರಕೃತವಾಗುವುದು ಮುಖ್ಯ. ಗ್ರಂಥೋಕ್ತವಾಗುವುದು ಅದನ್ನು ಜ್ಞಾಪಿಸಿಕೊಡುವುದರಿಂದ ಅಮುಖ್ಯ. ಇಲ್ಲಿ ತನಗೆ ಯೋಗ್ಯವಾದ ನಿರ್ದುಃಖ ಸುಖಾನುಭವವು ಶ್ರೋತೃವಿನ ಮನಸ್ಸಿನಲ್ಲಿ ಸನ್ನಿಹಿತವಾಗಿ ಪ್ರಕೃತವಾಗಿರುವುದರಿಂದ ಅದನ್ನು 'ಇದಂ' ಶಬ್ದದಿಂದ ಪರಾಮರ್ಶೆ ಮಾಡಬಹುದು. 'ಸರ್ವಂ' ಎಂದರೆ ಸಮಗ್ರ, ಪೂರ್ಣ ಎಂದು ಅರ್ಥ. ಏಕೆಂದರೆ 'ತತ್ ಸರ್ವಮಭವತ್', 'ಸರ್ವಂ ಭವಿಷ್ಯಂತಃ' ಮೊದಲಾದವುಗಳಲ್ಲಿ ಸರ್ವಶಬ್ದದಿಂದ ಸಮಗ್ರತೆಯೇ ಪ್ರಸ್ತುತವಾಗಿದೆ.

'ಬ್ರಹ್ಮನನ್ನು ಪ್ರತ್ಯಕ್ಷೀಕರಿಸಿಕೊಂಡ ವಾಮದೇವನು ಬ್ರಹ್ಮನನ್ನು ಮನ್ವಾದಿ

ಜೀವರಿಂದ ಅಹೇಯನು ಎಂದು ತಿಳಿದನು' ಎಂಬುದು 'ತದ್ಧೈತತ್ ಪಶ್ಯನ್' ಎಂಬ ಮಂತ್ರಕ್ಕೆ ಇನ್ನೊಂದು ಅರ್ಥ. ಏಕೆಂದರೆ 'ಮಂತ್ರ ದ್ರಷ್ಟೃವಾದ ವಾಮದೇವನು ಬ್ರಹ್ಮನು ಮನ್ವಾದಿಸರ್ವಜೀವರಿಂದ ಅಹೇಯನು ಎಂದು ತಿಳಿದನು' ಎಂದು ಬ್ರಾಹ್ಮಪುರಾಣದಲ್ಲಿ ಮಂತ್ರವನ್ನು ವ್ಯಾಖ್ಯಾನಿಸಲಾಗಿದೆ.

**ವಿವರಣೆ**—'ಅಹಂ ಮನುರಭವಂ ಸೂರ್ಯಶ್ಚ' ಎಂಬ ಮಂತ್ರಕ್ಕೆ ವಾಮದೇವನ ಅಂತರ್ಯಾಮಿವಿವಕ್ಷೆಯಿಂದ ಮೊದಲು ಮಾಡಿದ ಅರ್ಥವೂ ಕೂಡುತ್ತದೆ. ಹಾಗೆಯೇ 'ಮನುಃ–ಮನ್ವಂತರ್ಯಾಮಿಯು ಮನುವಿನಿಂದ,ಅಹಂ–ಅಹೇಯನು, ಅಭವಂ–ಜನನ ರಹಿತನು. ಸೂರ್ಯಃ–ಸೂರ್ಯಾಂತರ್ಗತನು ಸೂರ್ಯನಿಂದ, ಅಹಂ–ಅಹೇಯನು, ಅಸ್ಮಿ–ಇದ್ದಾನೆಂದು ತಿಳಿಯಲ್ಪಡಬೇಕಾದವನು' ಎಂದು ಮೊದಲಾಗಿ ಇನ್ನೊಂದು ಅರ್ಥವೂ ಕೂಡುತ್ತದೆ. ಮೊದಲನೆಯ ಅರ್ಥದಲ್ಲಿ ಅಹಂ ಎಂಬ ಶಬ್ದವು ವಾಮದೇವನ ಅಂತರ್ಯಾಮಿಯಲ್ಲಿಯೆ ಮುಖ್ಯವಾದ್ದರಿಂದ 'ಅಭವಂ, ಅಸ್ಮಿ' ಮೊದಲಾದವು ಉತ್ತಮ ಪುರುಷ ಕ್ರಿಯಾಪದಗಳು ಅಂತರ್ಯಾಮಿಯಲ್ಲಿ ಮುಖ್ಯ; ಎರಡನೇ ಅರ್ಥದಲ್ಲಿ 'ಅಭವಂ ಅಸ್ಮಿ' ಮೊದಲಾದ ಪದಗಳೂ ಅಂತರ್ಯಾಮಿಯ ಗುಣವಿಶೇಷವನ್ನು ಹೇಳುವ ನಾಮಪದಗಳು ಎಂದು ಅಭಿಪ್ರಾಯ.

### 'ಅಹಂ ಬ್ರಹ್ಮಾಸ್ಮಿ' ಭೇದಪರವೆನ್ನುವುದೇ ಯುಕ್ತ :

**ಭಾಷ್ಯ—ತದಿದಂ ಬ್ರಹ್ಮ ಯೋಽಹೇಯತ್ವಾದಿಗುಣಮೇತರ್ಹ್ಯಪಿ ವೇದ । ಅಹಂಶಬ್ದಸ್ಯಾಹೇಯತ್ವಾನಂಗೀಕಾರೇ ಇದಂಶಬ್ದೋಽಪಿ ವ್ಯರ್ಥಃ । ಸರ್ವಸ್ವರೂಪತ್ವಂ ಹಿ ದುರ್ವಿದ್ವದ್ಭಿರಂಗೀಕ್ರಿಯತೇ । ಇದಂಶಬ್ದೇನ ಪರಬ್ರಹ್ಮವಿವಕ್ಷಾಯಾಂ ಬ್ರಹ್ಮಶಬ್ದೋ ವ್ಯರ್ಥಃ । 'ಇದಂ ಯೋಽಹಮಿತಿ ವೇದೇ'ತ್ಯೇವ ಸ್ಯಾತ್ । ಏವಂಶಬ್ದಶ್ಚ ವ್ಯರ್ಥಃ । ಅಸ್ಮತ್ಪಕ್ಷೇ ತು 'ತದಾತ್ಮಾನಮೇವಾವೇದಿತ್ಯಪಿ ಜ್ಞಾತವ್ಯ' ಮಿತ್ಯೇವಂಶಬ್ದಾರ್ಥಃ । ತತ್ಪಕ್ಷೇ ತದಪಿ ವ್ಯರ್ಥಮೇವ । ನ ಹಿ ತತ್ಪಕ್ಷೇ ತತ್ ಸ್ವಾತ್ಮಾನಂ ವೇತ್ತಿ । ವ್ಯಾಖ್ಯಾನ ವ್ಯಾಖ್ಯೇಯ ಭಾವಶ್ಚಾಗತಿಕಾ ಗತಿಃ ।**

**ಅನುವಾದ**—'ತದಿದಮಪ್ಯೇತರ್ಹಿ ಯ ಏವಂ ವೇದಾಹಂ ಬ್ರಹ್ಮಾಸ್ಮೀತಿ' ಎಂಬ ವಾಕ್ಯಕ್ಕೆ 'ತದಿದಂ–ಈ ಬ್ರಹ್ಮನನ್ನು,ಅಹಂಬ್ರಹ್ಮಾಸ್ಮೀತಿ–ಅಹೇಯತ್ವಾದಿ ಗುಣವುಳ್ಳವನು ಎಂದು ಯಾರು ತಿಳಿಯುವನೊ' ಎಂದು ಅರ್ಥ. ಅಹಂ ಶಬ್ದಕ್ಕೆ ಅಹೇಯ ಎಂದು ಅರ್ಥವನ್ನು ಅಂಗೀಕರಿಸದೆ 'ನಾನು' ಎಂದೆ ಅರ್ಥಗ್ರಹಿಸಿದರೆ 'ತದಾತ್ಮಾನಮೇವಾವೇತ್' ಎಂಬಲ್ಲಿರುವ 'ತದಾತ್ಮನಂ' ಎಂಬ ಶಬ್ದವಷ್ಟೇ ಅಲ್ಲದೆ 'ತದ್ಧಿದಮಪ್ಯೇತರ್ಹಿ' ಎಂಬಲ್ಲಿರುವ 'ತದ್' ಶಬ್ದವೂ 'ಇದಂ' ಶಬ್ದವೂ ವ್ಯರ್ಥ

ವಾಗುತ್ತದೆ. 'ಯ ಏವಂ ವೇದ ಅಹಂ ಬ್ರಹ್ಮಾಸ್ಮೀತಿ' ಎಂಬಲ್ಲಿ ಪರಭಾಷ್ಯದಲ್ಲಿ ಅಧ್ಯಾಹಾರ ಮಾಡಿಕೊಂಡಿರುವ 'ಆತ್ಮಾನಮೇವ' ಎಂಬ ಶಬ್ದವೂ ವ್ಯರ್ಥವಾಗುತ್ತದೆ. ಅಹೇಯತ್ವಾರ್ಥದ ಪಕ್ಷದಲ್ಲಿ, 'ಅಹೇಯ ಯಾವುದು ? ಗುಣಪೂರ್ಣ ಯಾವುದು?' ಎಂದು ಮುಂತಾಗಿ ಪ್ರಶ್ನೆ ಬಂದಾಗ 'ತದಿದಂ –ಈ ಪರಬ್ರಹ್ಮನನ್ನು' ಎಂದು ವಿಶೇಷ್ಯವಾಚಕ ಪದ ಬೇಕಾಗುತ್ತದೆ. ವ್ಯರ್ಥವಲ್ಲ. 'ಸ ಇದಂ ಸರ್ವಂ ಭವತಿ' ಎಂಬ ಭಾಗಕ್ಕೆ 'ಉಪಾಸಕನು ಸರ್ವಾಭಿನ್ನನಾಗುತ್ತಾನೆ' ಎಂದು ಪರರು ಮಾಡಿರುವ ವ್ಯಾಖ್ಯಾನ ಸರಿಯಲ್ಲ. ಏಕೆಂದರೆ, ಉಪಾಸಕನಿಗೆ ಸರ್ವಸ್ವರೂಪತ್ವವನ್ನು' ದುಷ್ಟ ವಿದ್ವಾಂಸರು ಮಾತ್ರ ಹೇಳುತ್ತಾರೆ. ಉಪಾಸಕನಿಗೆ ಬ್ರಹ್ಮತ್ವಾನುಸಂಧಾನ ಫಲವಾಗಿ ಸರ್ವಸ್ವರೂಪತ್ವ ಉಂಟಾಗುತ್ತದೆ ಎಂದು ಹೇಳಿದರೆ ಸರ್ವದಲ್ಲಿ ಮಿಥ್ಯಾಭೂತವಾದ ಜಡವೂ ಸೇರುವುದರಿಂದ ಉಪಾಸಕನಿಗೆ ಮಿಥ್ಯಾತ್ವಉಂಟಾದೀತು. ಅದನ್ನು ಅವರು ಸ್ವತಃ ಅಂಗೀಕರಿಸಿಲ್ಲ. "ಅಹಂ ಶಬ್ದಕ್ಕೆ ಅಹೇಯತ್ವಾದಿ ಅರ್ಥವನ್ನು ಅಂಗೀಕರಿಸದಿದ್ದರೂ 'ತದಿದಂ' ಶಬ್ದಗಳು ವ್ಯರ್ಥವಾಗುವುದಿಲ್ಲ. ತದಿದಂ ಎಂದರೆ ಸರ್ವಭೂತಾನುಪ್ರವಿಷ್ಟನಾದ ಬ್ರಹ್ಮ ಎಂದು ಅರ್ಥ" ಎಂದು ಪರರು ಹೇಳಿದರೆ ಅದಕ್ಕೆ ನಮ್ಮ ಪ್ರಶ್ನೆ–'ತದಾತ್ಮಾನಮೇವಾವೇತ್' ಎಂಬಲ್ಲಿ ನೀವು ತತ್ ಶಬ್ದಕ್ಕೆ ಅರ್ಥಮಾಡಿದಂತೆ ಇಲ್ಲಿಯೂ ತದಿದಂ ಶಬ್ದವು ಅವಿದ್ಯಾ ವಿಶಿಷ್ಟನಾದ ಉಪಾಸಕನನ್ನು ಹೇಳುತ್ತದೆಯೋ? ಅಥವಾ ಸಕಲ ಧರ್ಮಾತೀತ ಪರಬ್ರಹ್ಮನನ್ನು ಹೇಳುತ್ತದೆಯೋ ? ಉಪಾಸಕನನ್ನು ಹೇಳುತ್ತದೆನ್ನುವುದು ಸರಿಯಲ್ಲ. ಆಗ ಉಪಾಸಕನನ್ನು ಹೇಳುವ 'ಯಃ' ಎಂಬ ಶಬ್ದವು ವ್ಯರ್ಥವಾಗುತ್ತದೆ. ಧರ್ಮಾತೀತ ಪರಬ್ರಹ್ಮನನ್ನು ಹೇಳುತ್ತದೆ ಎಂದರೆ 'ಅಹಂ ಬ್ರಹ್ಮಾಸ್ಮಿ' ಎಂಬಲ್ಲಿರುವ ಬ್ರಹ್ಮ ಶಬ್ದವೂ, ಅಸ್ಮಿ ಶಬ್ದವೂ ವ್ಯರ್ಥವಾಗುತ್ತದೆ. ಆಗ 'ಇದಂ ಯೋऽಹಮಿತಿ ವೇದ' ಎಂದಿಷ್ಟೇ ಸಾಕು. "ಯಃ ಯಾವ ಉಪಾಸಕನು, ಇದಂ ಬ್ರಹ್ಮನನ್ನು, ಅಹಮಿತಿ ನಾನು ಎಂದು, ವೇದ ತಿಳಿಯುತ್ತಾನೆಯೋ" ಎಂದು ಅರ್ಥಮಾಡಿ ಅಷ್ಟರಿಂದಲೇ ಬ್ರಹ್ಮತ್ವಾನುಸಂಧಾನವನ್ನು ಹೇಳಲು ಬರುತ್ತದೆ. ನಮ್ಮ ವ್ಯಾಖ್ಯಾನದಲ್ಲಿ ಬ್ರಹ್ಮ, ಅಸ್ಮಿ ಶಬ್ದಗಳು ಬೇರೆ ಬೇರೆ ಗುಣಗಳನ್ನು ಹೇಳುವುದರಿಂದ ವ್ಯರ್ಥವಾಗುವುದಿಲ್ಲ. ಪರರ ವ್ಯಾಖ್ಯಾನದಲ್ಲಿ 'ಏವಂ' ಶಬ್ದವೂ ವ್ಯರ್ಥವಾಗುತ್ತದೆ. 'ಹೀಗೆ ತಿಳಿಯಬೇಕು' ಎಂಬ ಜ್ಞಾನದ ಪ್ರಕಾರವನ್ನು 'ಇತಿ' ಶಬ್ದವೇ ತಿಳಿಸುವುದರಿಂದ 'ಏವಂ' ಶಬ್ದಕ್ಕೆ ಪ್ರಯೋಜನವಿಲ್ಲ. ನಮ್ಮ ಪಕ್ಷದಲ್ಲಿಯಾದರೋ 'ತದಾತ್ಮಾನಮೇವಾವೇತ್' ಎಂದೂ ತಿಳಿಯಬೇಕೆಂದು 'ಏವಂ' ಶಬ್ದವು ತಿಳಿಸುತ್ತದೆ. ಅವರ ಪಕ್ಷದಲ್ಲಿಯೂ ಹೀಗೆಯೇ ಏವಂ ಶಬ್ದಕ್ಕೆ ಪ್ರಯೋಜನವನ್ನು ಹೇಳಲು ಬರುವುದಿಲ್ಲ. ಅವರು ಕರ್ಮ, ಕರ್ತೃ ವಿರೋಧವನ್ನು ಹೇಳುವುದರಿಂದ 'ತದಾತ್ಮಾನಮೇವಾವೇತ್' ಎಂಬ ವಾಕ್ಯಭಾಗಕ್ಕೆ ಸ್ವಕರ್ಮಕಜ್ಞಾನ ಕರ್ತೃತ್ವರೂಪ ಅರ್ಥವನ್ನು ಹೇಳಲು ಬರದಿರುವುದರಿಂದ ಏವಂ ಶಬ್ದವು ಅದನ್ನು ಸಂಗ್ರಹಿಸಲಾರದು. ಅವರ

ಪಕ್ಷದಲ್ಲಿ ಬ್ರಹ್ಮನು ತನ್ನನ್ನು ತಾನು ತಿಳಿಯಲಾರನೆಂಬುದು ಪ್ರಸಿದ್ಧವಷ್ಟೆ. ನಮ್ಮ ಪಕ್ಷದಲ್ಲಿ ವಿಶೇಷ ಬಲದಿಂದ ಒಬ್ಬನಿಗೇ ಜ್ಞಾನರೂಪವಾದ ಕ್ರಿಯೆಯನ್ನು ಕುರಿತು ಕರ್ತೃತ್ವವೂ, ಕರ್ಮತ್ವವೂ ಕೂಡುತ್ತದೆ. "ಏವಂ ಶಬ್ದವು ವ್ಯರ್ಥವಲ್ಲ. 'ಯ ಏವಂ ವೇದ' ಎಂದು ಸಾಮಾನ್ಯವಾಗಿ ಹೇಳಿದುದನ್ನೇ 'ಅಹಂ ಬ್ರಹ್ಮಾಸ್ಮೀತಿ' ಎಂದು ವಿಶೇಷವಾಗಿ ಹೇಳಿ 'ಏವಂ' ಶಬ್ದಾರ್ಥವನ್ನು ಸ್ಪಷ್ಟಪಡಿಸುತ್ತದೆ" ಎಂದು ಹೇಳುವುದೂ ಸರಿಯಲ್ಲ. ಬೇರೆ ಅರ್ಥವನ್ನೇನೂ ಹೇಳಲು ಸಾಧ್ಯವಾಗದಿದ್ದಾಗ 'ಹಿಂದೆ ಹೇಳಿದುದನ್ನೇ ಸ್ಪಷ್ಟಪಡಿಸುತ್ತದೆ' ಎಂದು ಒಪ್ಪಬೇಕು. ನಾವು ಹೇಳಿದಂತೆ ಏವಂ ಶಬ್ದಕ್ಕೆ ಬೇರೆ ಅರ್ಥವನ್ನು ಹೇಳಲು ಬರುವಾಗ 'ಅಹಂ ಬ್ರಹ್ಮಾಸ್ಮಿ' ಎಂಬುವುದು ಹಿಂದೆ ಹೇಳಿದುದರ ವ್ಯಾಖ್ಯಾನ ಎಂದು ಅಂಗೀಕರಿಸುವುದು ಸರಿಯಲ್ಲ.

**ವಿವರಣೆ**—'ತದಿದಮಪ್ಯೇತರ್ಹಿ ಯ ಏವಂ ವೇದ ಅಹಂ ಬ್ರಹ್ಮಾಸ್ಮೀತಿ' ಎಂಬ ಉಪನಿಷದ್ವಾಕ್ಯಕ್ಕೆ ಪರಭಾಷ್ಯದ ವ್ಯಾಖ್ಯಾನ 'ಯಾರು ತಾನೇ ಬ್ರಹ್ಮನೆಂದು ತಿಳಿಯುವನೋ' ಎಂದು. ಆದರೆ ಹೀಗೆ ವ್ಯಾಖ್ಯಾನ ಮಾಡಿದರೆ ಇಲ್ಲಿರುವ 'ತದಿದಂ ಏವಂ, ಅಸ್ಮಿ ಎಂಬ ಶಬ್ದಗಳು ವ್ಯರ್ಥ. ಅಷ್ಟೇ ಅಲ್ಲ, ಹಿಂದಿನ ವಾಕ್ಯದಿಂದ ಅವರು ತೆಗೆದುಕೊಂಡಿರುವ 'ಆತ್ಮಾನಮೇವ' ಎಂಬ ಶಬ್ದವೂ ವ್ಯರ್ಥ. 'ಯಃ ವೇದ ಅಹಂ ಬ್ರಹ್ಮ ಇತಿ' ಎಂದಿಷ್ಟೇ ಸಾಕು. 'ತದಿದಂ' ಎಂಬ ಶಬ್ದಕ್ಕೆ 'ಮೋಕ್ಷವನ್ನು ಬಯಸುವ ಬ್ರಹ್ಮರೂಪನಾದ ಉಪಾಸಕ' ಎಂದು ಅರ್ಥವನ್ನು ಹೇಳಿದರೆ ಆ ಉಪಾಸಕನನ್ನೇ ಹೇಳುವ 'ಯಃ' ಎಂಬ ಶಬ್ದ ವ್ಯರ್ಥವಾಗುತ್ತದೆ. 'ತದಿದಂ' ಅಂದರೆ 'ಸರ್ವಾತ್ಮಕನಾದ ಬ್ರಹ್ಮ' ಎಂದು ಹೇಳಿದರೆ ಬ್ರಹ್ಮ ಶಬ್ದವು ವ್ಯರ್ಥ. ಆದ್ದರಿಂದ ಈ ವಾಕ್ಯವನ್ನು ಬ್ರಹ್ಮೈಕ್ಯ ಪರವಾಗಿ ಅರ್ಥೈಸುವುದಾದರೆ 'ಯಃ ವೇದ ಅಹಂ ಬ್ರಹ್ಮ' 'ಯಾರು ತಾನು ಬ್ರಹ್ಮನೆಂದು ತಿಳಿಯುತ್ತಾನೋ' ಎನ್ನುವುದರಿಂದಲೇ ಐಕ್ಯಸಿದ್ಧಿಯಾಗುವುದರಿಂದ ಉಪನಿಷತ್ತಿನ ಅನೇಕ ಶಬ್ದಗಳು ವ್ಯರ್ಥವಾಗುತ್ತವೆ.

ನಮ್ಮ ರೀತಿಯಿಂದ ಹೀಗೆ ಅರ್ಥ– 'ತದಿದಂ ಈ ಬ್ರಹ್ಮನನ್ನು ಯಃ ಯಾರು ಏವಂ ಹಿಂದೆ ಹೇಳಿದಂತೆ "ಆ ಬ್ರಹ್ಮನು ತನ್ನನ್ನು 'ಅಹಂ ಬ್ರಹ್ಮಾಸ್ಮಿ' ಎಂದು ತಿಳಿದಿದೆ" ಎಂದೂ, ಅಹಂ ಬ್ರಹ್ಮ ಅಸ್ಮೀತಿ ಬ್ರಹ್ಮನು ಅಹೇಯತ್ವಾದಿಗುಣವುಳ್ಳವನೆಂದೂ ತಿಳಿಯುವನೋ' ಎಂದು. ಈಗ ಎಲ್ಲ ಶಬ್ದಗಳೂ ಸಾರ್ಥಕ.

'ಏವಂ' ಶಬ್ದಕ್ಕೆ ನಾವು ಹೇಳಿದ ಅರ್ಥವನ್ನು ಪರಭಾಷ್ಯಕಾರರು ಹೇಳಲಾಗದು. ಹಿಂದೆ ಉಪನಿಷತ್ತು 'ತದಾತ್ಮಾನಮೇವ ಅವೇತ್ ಅಹಂ ಬ್ರಹ್ಮಾಸ್ಮೀತಿ' ಎಂದು ಹೇಳಿದೆ. 'ಆ ಬ್ರಹ್ಮನು ತನ್ನನ್ನು ತಾನು ಅಹೇಯತ್ವಾದಿಗುಣವುಳ್ಳವನೆಂದು ಸರ್ವದಾ ತಿಳಿದಿದ್ದಾನೆ' ಎಂದು ಅದರ ಅರ್ಥ. ಅದನ್ನೇ ಪ್ರಕೃತ ವಾಕ್ಯದಲ್ಲಿರುವ 'ಏವಂ' ಶಬ್ದದಿಂದ ಹೇಳಲಾಗಿದೆ. ಆದರೆ ಪರಮತದಂತೆ ಹಿಂದಿನ ವಾಕ್ಯಕ್ಕೆ ನಾವು

ಹೇಳಿದ ಅರ್ಥವನ್ನು ಮಾಡಲು ಬರುವುದಿಲ್ಲ. 'ಬ್ರಹ್ಮನು ತನ್ನನ್ನು ತಾನು ತಿಳಿಯುತ್ತದೆ' ಎಂಬುದನ್ನು ಅವರು ಒಪ್ಪುವುದಿಲ್ಲ. ಏಕೆಂದರೆ, ಹೀಗೆ ಹೇಳಿದಾಗ ತಿಳಿದವನೂ ತಿಳಿಯಲ್ಪಡುವವನೂ ಬ್ರಹ್ಮನೇ ಆಗುತ್ತಾನೆ. ಇದು ವಿರುದ್ಧ. ಲೋಕದಲ್ಲಿ ತಿಳಿಯುವವನು ಆತ್ಮ. ತಿಳಿಯಲ್ಪಡುವವು ಇತರ ವಸ್ತುಗಳು. ಹೀಗೆ 'ಬ್ರಹ್ಮನು ತನ್ನನ್ನು ತಾನೇ ತಿಳಿಯುವುದು' ಲೋಕರೂಢಿಗೆ ವಿರುದ್ಧ. ಇದು ಪರರ ವಾದ. ಆದ್ದರಿಂದ ಏವಂ ಶಬ್ದಕ್ಕೆ ನಾವು ಹೇಳಿದ ಅರ್ಥವನ್ನು ಅವರು ಹೇಳಲು ಸಾಧ್ಯವಿಲ್ಲ.

**ಭಾಷ್ಯ—ಅಭಾವೇ ಪೃಥಗರ್ಥಾನಾಂ ವ್ಯಾಖ್ಯಾಮಭ್ಯಾಸಮೇವ ವಾ ।**
**ಕಲ್ಪಯೇನ್ನೈವ ತದ್ಭಾವೇ ವ್ಯಾಖ್ಯಾಽಭ್ಯಾಸಶ್ಚ ಯುಜ್ಯತೇ ।**
**ಇತಿ ಭಾರತೇ ॥**

**ಸ್ವರೂಪಜ್ಞಂ ತಥಾಽಹೇಯಂ ನಿತ್ಯಂ ಚ ಬ್ರಹ್ಮ ವೇತ್ತಿ ಯಃ ।**
**ಸಮಗ್ರಭಾವಂ ಗಚ್ಛೇತ್ ಸ ತತ್ಪ್ರಸಾದಾನ್ನ ಸಂಶಯಃ ।**
**ಇತಿ ಚ ।**

**ಸ ಈಶ್ವರ ಏಷಾಂ ದೇವಾನಾಮಾತ್ಮಾ ಭವತಿ । ಪುಲ್ಲಿಂಗಂ ಚ 'ತತ್ ಸತ್ಯಂ ಸ ಆತ್ಮಾ' ಇತ್ಯಾದಿವತ್ ಭವತಿ ।**
**ದೇವಾನಾಂ ವ್ಯಾಪಕತ್ವಾತ್ತು ತೇಷಾಮಾತ್ಮಾ ಹರಿಃ ಸದಾ ।**
**ತಜ್ಞಃ ಪ್ರಿಯಸ್ತತಸ್ತೇಷಾಂ ತಸ್ಯ ನಾಭೂತಿದಾಸ್ತತಃ ।**
**ಇತಿ ವಾಮನೇ ॥**

**ಅನುವಾದ**—'ಬೇರೆ ಅರ್ಥವಿಲ್ಲದಿದ್ದರೆ ಮಾತ್ರ ವ್ಯಾಖ್ಯಾನವೆಂದಾಗಲೀ, ಅಭ್ಯಾಸವೆಂದಾಗಲೀ ಕಲ್ಪನೆ ಮಾಡಬೇಕು. ಬೇರೆ ಅರ್ಥವನ್ನು ಹೇಳಲು ಬರುವಾಗ ವ್ಯಾಖ್ಯಾನವೆಂದಾಗಲೀ, ಅಭ್ಯಾಸವೆಂದಾಗಲೀ ಹೇಳುವುದು ಸರಿಯಲ್ಲ' ಎಂದು ಭಾರತದಲ್ಲಿ ಹೇಳಿದೆ. 'ಯ ಏವಂ ವೇದ' ಎಂಬಲ್ಲಿ 'ಏವಂ' ಶಬ್ದದಿಂದ 'ತದಾತ್ಮಾನಮೇವಾವೇತ್' ಎಂಬುದನ್ನು ಸಂಗ್ರಹಿಸಬೇಕು. ಏಕೆಂದರೆ, 'ಯಾರು ಬ್ರಹ್ಮನು ತನ್ನ ಸ್ವರೂಪವನ್ನು ತಾನೇ ತಿಳಿದಿರುವನೆಂದೂ, ಅಹೇಯನೆಂದೂ, ನಿತ್ಯನೆಂದೂ ತಿಳಿಯುತ್ತಾನೆಯೋ ಅವನು ಬ್ರಹ್ಮನ ಪ್ರಸಾದದಿಂದ ತನಗೆ ಯೋಗ್ಯವಾದ ಸಮಗ್ರತೆಯನ್ನು ಪಡೆಯುತ್ತಾನೆ. ಈ ವಿಷಯದಲ್ಲಿ ಸಂಶಯವಿಲ್ಲ' ಎಂದೂ ಹೇಳಲ್ಪಟ್ಟಿದೆ.

'ಆತ್ಮಾ ಹ್ಯೇಷಾಂ ಸ ಭವತಿ' ಎಂಬ ವಾಕ್ಯಕ್ಕೆ ವಿಷ್ಣುವು ದೇವತೆಗಳಿಗೆ ಸ್ವಾಮಿ ಎಂದರ್ಥ. ಇಲ್ಲಿ ನಪುಂಸಕಲಿಂಗದ 'ತತ್' ಶಬ್ದದಿಂದ ಪ್ರಕೃತನಾದ ಬ್ರಹ್ಮನನ್ನು ಪುಲ್ಲಿಂಗದ ಸಃ ಶಬ್ದದಿಂದ ಪರಾಮರ್ಶೆ ಮಾಡಲು ಸಾಧ್ಯವಿಲ್ಲ ಎಂಬ ಶಂಕೆ ಸರಿಯಲ್ಲ. 'ಆ ಪ್ರಭುವು ದೇವತೆಗಳಿಗೆ ಸ್ವಾಮಿಯಾಗುತ್ತಾನೆ' ಎಂದು ಹೇಳಿದಾಗ ಪುಲ್ಲಿಂಗದ ಅನುಪಪತ್ತಿ ಇಲ್ಲ. 'ತತ್ ಸತ್ಯಂ ಸ ಆತ್ಮಾ' ಎಂಬಲ್ಲಿ ನಪುಂಸಕಲಿಂಗದ 'ತತ್'ಶಬ್ದ

ದಿಂದ ಪ್ರಕೃತನಾದ ಬ್ರಹ್ಮನನ್ನೇ, ಆತ್ಮ ಶಬ್ದದ ಯೋಗವಿರುವುದರಿಂದ ಪುಲ್ಲಿಂಗದ 'ಸಃ' ಎಂಬ ಪದದಿಂದ ಪರಾಮರ್ಶೆ ಮಾಡಿದಂತೆ ಇಲ್ಲಿಯೂ ಆತ್ಮಶಬ್ದ ಯೋಗದ ಬಲದಿಂದಾಗಿ 'ಸಃ' ಎಂದು ಪರಾಮರ್ಶೆ ಮಾಡಬಹುದು. 'ಆತ್ಮಾಹ್ಯೇಷಾಂ ಸ ಭವತಿ' ಎನ್ನುವುದಕ್ಕೆ ಪರರು ಹೇಳುವ 'ಬ್ರಹ್ಮಜ್ಞಾನಿಯು ದೇವತೆಗಳಿಗೆ ಬ್ರಹ್ಮ ಸ್ವರೂಪನೇ ಆಗುತ್ತಾನೆ' ಎಂಬ ಅರ್ಥವು ಪ್ರಮಾಣ ವಿರುದ್ಧ. ಏಕೆಂದರೆ 'ದೇವತೆ ಗಳಲ್ಲಿ ಸದಾ ವ್ಯಾಪ್ತನಾದ್ದರಿಂದ ಹರಿಯು ಅವರಿಗೆ ಆತ್ಮನೆನಿಸುತ್ತಾನೆ. ಇದನ್ನು ತಿಳಿದ ಜ್ಞಾನಿಯು ಹರಿಗೆ ಪ್ರಿಯ. ಆದ್ದರಿಂದ ದೇವತೆಗಳಿಗೂ ಪ್ರಿಯ. ಆದ್ದ ರಿಂದಲೇ ದೇವತೆಗಳು ಅವನಿಗೆ ಜ್ಞಾನಫಲವನ್ನು ನಾಶಮಾಡುವುದಿಲ್ಲ' ಎಂದು ವಾಮನಪುರಾಣದಲ್ಲಿ ಹೇಳಿದೆ.

**ಭಾಷ್ಯ–ಸರ್ವೇಭ್ಯೋಽನ್ಯಾಂ ವಿಲಕ್ಷಣಾಂ ದೇವತಾಂ ಸ್ವಗುಣೇಭ್ಯೋಽಹೇಯ-ತ್ವಾದಿಭ್ಯಶ್ಚಾನ್ಯಾಂ ಯ ಉಪಾಸ್ತೇ । 'ಅಹೇಯೋಽಸ್ತೀತಿಮೇಯಶ್ಚಾ–ನ್ಯೋಽನ್ಯಶ್ಚಾಸೌ ವಿಷ್ಣುರಿ'ತಿ ಮತ್ವಾ ಯೋ ವಿಷ್ಣೋರನ್ಯಾಂ ದೇವತಾ-ಮುಪಾಸ್ತೇ 'ಅನ್ಯೋಽಸಾವನ್ಯೋಽಹಮಸ್ಮೀ'ತಿ ನ ಸ ವೇದೇತಿ ವಾ ।**

**ಜೀವಾದಿಭ್ಯೋ ಹರಿರ್ಭಿನ್ನಃ ತಂ ಯಃ ಸ್ವಗುಣಭೇದತಃ ।**
**ಅಹೇಯೋಽನ್ಯೋ ಹರಿಶ್ಚಾನ್ಯ ಇತಿ ಮತ್ವಾಽನ್ಯಮೇವ ವಾ ।**
**ಯ ಉಪಾಸ್ತೇ ನ ಸ ಜ್ಞಾನೀ ಮನುಷ್ಯಾಣಾಂ ಪಶುರ್ಹಿ ಸಃ ।**
**ಸಮ್ಯಗ್‌ಜ್ಞಾನೀ ತು ದೇವಾನಾಂ ಪಶುರಿತ್ಯಭಿಧೀಯತೇ । ಇತಿ ಚ ॥**

**ಅನುವಾದ**—ಸರ್ವಜೀವ ವಿಲಕ್ಷಣನಾದ ದೇವನನ್ನು ಯಾರು ತನ್ನ ಗುಣಗಳಾದ ಅಹೇಯತ್ವಾದಿಗಳಿಂದಲೂ ಭಿನ್ನನೆಂದು ಉಪಾಸನೆಮಾಡುತ್ತಾನೆಯೋ ಅವನು ತಿಳಿದಿರುವುದಿಲ್ಲ ಎಂದರ್ಥ. ಈ ಅರ್ಥದಲ್ಲಿ ಅನ್ಯಾಂ ಎಂಬ ಶಬ್ದದ ಆವೃತ್ತಿ ಮಾಡಿ ಸರ್ವಜೀವರಿಂದ ಅನ್ಯ ಎಂದೂ ಮತ್ತು ತನ್ನ ಗುಣಗಳಾದ ಅಹೇಯತ್ವಾದಿಗಳಿಂದ ಅನ್ಯ ಎಂದೂ ಅನ್ವಯ. ಅಥವಾ 'ಯಾರು ಅಹೇಯನಾದ ವನೂ ಅಸ್ತೀತಿ ಮೇಯನಾದವನೂ ಹರ ಹಿರಣ್ಯಗರ್ಭಾದಿಗಳಲ್ಲಿ ಒಬ್ಬನು. ವಿಷ್ಣುವು ಅಲ್ಲ ಎಂದು ತಿಳಿದು ಹರ ಹಿರಣ್ಯಗರ್ಭಾದಿಗಳನ್ನೇ ಉಪಾಸನೆ ಮಾಡು ತ್ತಾನೆಯೋ ಅವನು ತಿಳಿದಿರುವುದಿಲ್ಲ'. ಈ ಎರಡು ಅರ್ಥಗಳನ್ನು ಹೇಳುವ ಪ್ರಮಾಣವಚನ ಹೀಗಿದೆ—'ಹರಿಯು ಜೀವಾದಿಗಳಿಗಿಂತ ಭಿನ್ನನು. ಅವನನ್ನು ಯಾರು ಅವನ ಸ್ವಂತಗುಣಗಳಾದ ಅಹೇಯತ್ವಾದಿಗಳಿಂದಲೂ ಭಿನ್ನನೆಂದು ತಿಳಿಯು ತ್ತಾನೆಯೋ ಅವನು ತಿಳಿದಿರುವುದಿಲ್ಲ. ಅಹೇಯನಾದವನು ಬೇರೆ, ಹರಿಯು ಬೇರೆ ಎಂದು ತಿಳಿದು ಯಾರು ಹರಿಗಿಂತ ಭಿನ್ನನಾದವನನ್ನೇ ಉಪಾಸನೆ ಮಾಡುತ್ತಾನೆಯೋ

ಅವನೂ ಜ್ಞಾನಿಯಲ್ಲ. ಅವನು ಮನುಷ್ಯರ ಪಶುವಿನಂತೆ.. ಒಳ್ಳೆಯ ಜ್ಞಾನಿಯಾದವನು ದೇವತೆಗಳಿಗೆ ಪಶುವಿನಂತೆ ಎಂದು ಹೇಳಲ್ಪಡುತ್ತಾನೆ.'

**ವಿವರಣೆ**—'ಅಥ ಯೋಽನ್ಯಾಂ ದೇವತಾಮುಪಾಸ್ತೇ' ಎಂಬ ವಾಕ್ಯ, ಯಾರು ಜೀವಬ್ರಹ್ಮೈಕ್ಯವನ್ನು ಹೇಳಿ, ವಿಷ್ಣುವಿನ ಅಹೇಯತ್ವವನ್ನು ತಿಳಿಯುವುದಿಲ್ಲವೋ ಅವರ ನಿಂದಾಪರ ಮಾತ್ರವೇ ಅಲ್ಲ, ಈಶ್ವರನಿಗೆ ಜೀವಾದಿ ಭೇದವನ್ನು ಅಂಗೀಕರಿಸಿ, ಸ್ವಗುಣಗಳಿಂದಲೂ ಭೇದವನ್ನು ಅಂಗೀಕರಿಸುವ ತಾರ್ಕಿಕರ ನಿಂದಾಪರವೂ ಆಗಿದೆ ಮತ್ತು ವಿಷ್ಣುಭಿನ್ನರಾದ ಹರ ಹಿರಣ್ಯಗರ್ಭಾದಿಗಳೇ ಅನಂತಗುಣಪೂರ್ಣರೆಂದು ತಿಳಿದು ಯಾರು ಅವರನ್ನೇ ಉಪಾಸನೆ ಮಾಡುತ್ತಾರೋ ಅವರ ನಿಂದಾಪರವೂ ಆಗಿದೆ. ಅದು ಹೇಗೆಂದರೆ-

'ಸರ್ವೇಭ್ಯೋಽನ್ಯಾಂ ವಿಲಕ್ಷಣಾಂ ದೇವತಾಂ ಸ್ವಗುಣೇಭ್ಯೋಽ ಹೇಯತ್ವಾದಿಭ್ಯಶ್ಚಾನ್ಯಾಂ ಯ ಉಪಾಸ್ತೇ ನ ಸ ವೇದ' ಎಂದು ಒಂದು ಅನ್ವಯ. 'ಅಹೇಯೋಽಸ್ತೀತಿ ಮೇಯಶ್ಚಾಸ್ಯೋಽನ್ಯಶ್ಚಾಸೌ ವಿಷ್ಣುರಿತಿ ಮತ್ವಾ ಯೋ ವಿಷ್ಣೋರನ್ಯಾಂ ದೇವತಾಮುಪಾಸ್ತೇ ಅನ್ಯೋಽಸಾವನ್ಯೋಽಹಮಸ್ಮೀತಿ ನ ಸ ವೇದ' ಎಂದು ಎರಡನೆಯ ಅನ್ವಯ, ಎರಡನೆಯ ಅನ್ವಯದಲ್ಲಿ ಪುನಃ 'ಅನ್ಯೋಽಸಾವನ್ಯೋಽಹಮಸ್ಮೀತಿ' ಎಂದು ಹೇಳಿರುವುದು ಜ್ಞಾನಕ್ಕೂ ಮತ್ತು ಉಪಾಸನೆಗೂ ಸಮಾನ ವಿಷಯಕತ್ವವನ್ನು ಸೂಚಿಸುವುದಕ್ಕಾಗಿ.

**ಭಾಷ್ಯ—'ಏವಂ ಸ ದೇವಾನಾಮ್' ಇತ್ಯತ್ರ ಪೂರ್ವಃ ಸಮ್ಯಗ್‌ಜ್ಞಾನೀ ಪರಾಮೃಶ್ಯತೇ । 'ಏತನ್ಮನುಷ್ಯಾ ವಿದ್ಯುಃ' ಇತ್ಯತ್ರ 'ಏತತ್'ಶಬ್ದೇನ ವಿಷ್ಣೋರನ್ಯದೇವತೋಪಾಸನಮುಚ್ಯತೇ। ನ ಹ್ಯಜ್ಞಾನ್ಯೇವ ದೇವಾನಾಂ ಭೋಜಕಃ । ಜ್ಞಾನೀ ಹಿ ವಿಶೇಷೇಣ ಭೋಜಕಃ । 'ಅಥೋ ಅಯಂ ವಾ ಆತ್ಮಾ ಸರ್ವೇಷಾಂ ಭೂತಾನಾಂ ಲೋಕಃ' ಇತಿ ವಚನಾತ್ । 'ಸ ಯ ಏವಂವಿತ್ ಸರ್ವೇಷಾಂ ಭೂತಾನಾಮ್ ।' ಬ್ರಹ್ಮವಿಚ್ಚ ತತ್ರೋಚ್ಯತೇ । ಪ್ರಸ್ತುತತ್ವಾತ್ ।**

**ತತ್ತ್ವವಿದ್ ದೇವಗೌಃ ಪ್ರೋಕ್ತೋ ನರಗೌಶ್ಚಾಪ್ಯತತ್ತ್ವವಿತ್ ।**
**ತಸ್ಮಾದ್ ದೇವಾಸ್ತತ್ತ್ವವಿದೇ ಪ್ರಿಯಂ ಕುರ್ವಂತ್ಯತಂದ್ರಿತಾಃ ।**
**ಇತ್ಯಾಗ್ನೇಯೇ ।**

**'ತಸ್ಯ ಹ ನ ದೇವಾಶ್ಚ ನಾಭೂತ್ಯಾ ಈಶತೇ' ಇತಿ ದೇವಾನಾಂ ತತ್ತ್ವಜ್ಞಾನಂ ಪ್ರಿಯಮಿತ್ಯುಕ್ತಂ ಚ ।**

**ಅನುವಾದ**—'ಏವಂ ಸ ದೇವಾನಾಮ್' ಎಂಬಲ್ಲಿರುವ ಸಃ ಎಂಬ ಶಬ್ದದಿಂದ

'ಸ ಸ ವೇದ' ಎಂದು ಹಿಂದೆ ಪ್ರಕೃತನಾದ ಅಜ್ಞಾನಿಯನ್ನೇ ತೆಗೆದುಕೊಂಡರೆ, ಅಜ್ಞಾನಿಯು ದೇವಭೋಜಕನಾಗಲು ಸಾಧ್ಯವಿಲ್ಲ ಎಂಬ ಶಂಕೆಗೆ ಸಮಾಧಾನ–'ತದಿದ ಮಪ್ಯೇತರ್ಹಿ' ಎಂಬಲ್ಲಿ ಪ್ರಸ್ತುತನಾದ ಯಥಾರ್ಥಜ್ಞಾನಿಯನ್ನೇ 'ಏವಂ ಸ ದೇವಾ ನಾಮ್' ಎಂಬಲ್ಲಿ 'ಸಃ' ಎಂದು ಪರಾಮರ್ಶೆ ಮಾಡಿದೆ. ಯಥಾರ್ಥಜ್ಞಾನಿಯನ್ನು ಇಲ್ಲಿ ಪರಾಮರ್ಶೆ ಮಾಡಿದರೆ ಅವನಿಗೆ ದೇವಪ್ರಿಯತ್ವವನ್ನು ಹೇಳಿದಂತಾಗುತ್ತದೆ. ಆದರೆ 'ತಸ್ಮಾದೇತೇಷಾಂ ತನ್ನ ಪ್ರಿಯಂ ಯದೇತನ್ಮನುಷ್ಯಾ ವಿದ್ಯುಃ' ಎಂಬ ಉತ್ತರ ವಾಕ್ಯಭಾಗದಲ್ಲಿ ಮನುಷ್ಯರ ಸಮ್ಯಗ್‌ಜ್ಞಾನವು ದೇವತೆಗಳಿಗೆ ಅಪ್ರಿಯ ಎಂದು ಹೇಳಿ ರುವುದರಿಂದ ವಿರೋಧ ಬರುತ್ತದೆಎಂಬ ಆಕ್ಷೇಪಕ್ಕೆ ಸಮಾಧಾನ'ಏತನ್ಮನುಷ್ಯಾವಿದ್ಯುಃ ಎಂಬಲ್ಲಿ ಏತತ್ ಶಬ್ದದಿಂದ ಮನುಷ್ಯರ ಅನ್ಯದೇವತೋಪಾಸನೆಯು ಪರಾಮರ್ಶಿಸ ಲ್ಪಡುತ್ತದೆ. 'ಮನುಷ್ಯಾಃ ವಿಷ್ಣೋರನ್ಯಾಂ ದೇವತಾಂ ವಿದ್ಯುಃ 'ಮನುಷ್ಯರು ವಿಷ್ಣುಭಿನ್ನವಾದ ದೇವತೆಯನ್ನು ಉಪಾಸನೆ ಮಾಡುತ್ತಾರೆ, ಏತತ್ ದೇವಾನಾಂ ನ ಪ್ರಿಯಂ' ಇದು ದೇವತೆಗಳಿಗೆ ಪ್ರಿಯವಲ್ಲ' ಎಂದು ಅರ್ಥ. 'ಏವಂ ಸ ದೇವಾ ನಾಮ್' ಎಂಬಲ್ಲಿ 'ಸಃ' ಶಬ್ದದಿಂದ ಸನ್ನಿಹಿತವಾದ ಅಜ್ಞಾನಿಯನ್ನು ಪರಾಮರ್ಶೆ ಮಾಡದೆ, ದೂರೋಕ್ತನಾದ ಜ್ಞಾನಿಯನ್ನೇ ಪರಾಮರ್ಶೆ ಮಾಡುತ್ತೇವೆ. ಏಕೆಂದರೆ 'ಸಃ' ಶಬ್ದದಿಂದ ಹೇಳಲ್ಪಟ್ಟವನು ದೇವತೆಗಳಿಗೆ ಭೋಜಕನೆಂದು ಹೇಳಲ್ಪಟ್ಟಿದ್ದಾನೆ. ಅಜ್ಞಾನಿಯು ದೇವಭೋಜಕನಲ್ಲ. ಆದ್ದರಿಂದ ಅವನನ್ನು ತೆಗೆದುಕೊಳ್ಳಲು ಬರುವು ದಿಲ್ಲ. ಅಜ್ಞಾನಿಯು ಕರ್ಮಾದಿಗಳಿಂದ ದೇವತೆಗಳನ್ನು ಸಂತೋಷಪಡಿಸಿದರೂ ಜ್ಞಾನಿ ಯಂತೆ ಸಂತೋಷಪಡಿಸುವುದಿಲ್ಲ. ಜ್ಞಾನಿಯೇ ಮುಖ್ಯವಾಗಿ ದೇವತೆಗಳಿಗೆ ಭೋಜಕನು. ಏಕೆಂದರೆ 'ಈ ಪರಮಾತ್ಮನು ಸರ್ವಜೀವರಿಗೂ ಆಶ್ರಯ. ಬ್ರಹ್ಮ ಜ್ಞಾನಿಯು ಸರ್ವಜೀವರಿಗೂ ಭೋಜಕನು' ಎಂದು ಇದೇ ಬ್ರಾಹ್ಮಣದಲ್ಲಿ ವಚನವಿದೆ. ಹಾಗೆಯೇ ಸಪ್ತಾನ್ನ ಬ್ರಾಹ್ಮಣದಲ್ಲಿ 'ಸ ಯ ಏವಂವಿತ್ ಸರ್ವೇಷಾಂ ಭೂತಾನಾ ಮಾತ್ಮಾ ಭವತಿ'–ಹೀಗೆ ತಿಳಿಯುವ ಜ್ಞಾನಿಯು ಎಲ್ಲಾ ಜೀವರಿಗೂ ಭೋಜಕನಾಗು ತ್ತಾನೆ' ಎಂಬ ವಚನವಿದೆ. ಯದ್ಯಪಿ ಇದರ ಹಿಂದಿನ ವಾಕ್ಯದಲ್ಲಿ 'ಯದ್ಯಪ್ಯನೇವಂ ವಿದ್ ಮಹತ್ಪುಣ್ಯಂ ಕರ್ಮ ಕರೋತಿ' ಎಂಬುದಾಗಿ ಅಜ್ಞಾನಿಯು ಪ್ರಸ್ತುತನಾಗಿದ್ದಾನೆ. ಆದರೆ 'ಆತ್ಮಾನಮೇವ ಲೋಕಮುಪಾಸ್ತೇ' ಎಂಬಲ್ಲಿ ಜ್ಞಾನಿಯೂ ಪ್ರಸ್ತುತ ವಾಗಿರುವುದರಿಂದ ಏವಂವಿತ್ ಎಂಬಲ್ಲಿ ಜ್ಞಾನಿಯನ್ನೂ ಪರಾಮರ್ಶೆ ಮಾಡುತ್ತೇವೆ. 'ತತ್ತ್ವಜ್ಞಾನಿಯು ದೇವತೆಗಳ ಗೋವೆಂದೂ, ತತ್ತ್ವಜ್ಞಾನಿಯಲ್ಲದವನು ಮನುಷ್ಯರ ಗೋವೆಂದೂ ಹೇಳಲ್ಪಡುತ್ತಾರೆ. ಆದ್ದರಿಂದ ತತ್ತ್ವಜ್ಞಾನಿಗೆ ದೇವತೆಗಳು ಆಲಸ್ಯವಿಲ್ಲದೆ ಪ್ರಿಯವನ್ನು ಮಾಡುತ್ತಾರೆ' ಎಂದು ಆಗ್ನೇಯ ಪುರಾಣ ದಲ್ಲಿ ಹೇಳಿದೆ. 'ದೇವತೆಗಳು ತತ್ತ್ವಜ್ಞಾನಿಗೆ ದಾರಿದ್ರ್ಯವನ್ನು ಕೊಡಲು ಸಮರ್ಥ ರಾಗುವುದಿಲ್ಲ' ಎಂಬ ವಾಕ್ಯದಿಂದಲೂ ತತ್ತ್ವಜ್ಞಾನವು ದೇವತೆಗಳಿಗೆ ಪ್ರಿಯವೆಂದು ಹೇಳಲ್ಪಟ್ಟಿದೆ.

**ಭಾಷ್ಯ**—'ಅಸತ್ಯಮಪ್ರತಿಷ್ಠಂ ತೇ ಜಗದಾಹುರನೀಶ್ವರವ್' ಇತಿ ।
'ಯಚ್ಚಿಕೇತ ಸತ್ಯಮಿತ್ ತನ್ನ ಮೋಘಂ ।
ವಸು ಸ್ಪಾರ್ಹಮುತ ಜೇತೋತ ದಾತಾ'
'ಸತ್ಯೋ ಜೀವೇಶಯೋರ್ಭೇದಃ ಸತ್ಯಾ ವಿಷ್ಣೋರ್ಗುಣಾ ಅಪಿ ।
ಸತ್ಯಂ ಜಗದಿದಂ ಸರ್ವಂ ಸತ್ಯೇಶಜಗತೋರ್ಭಿದಿಃ ।'

ಇತ್ಯಾದೇಶ್ಚ ।

ಭೇದೇನೈವ ಜಗತ್ ಸರ್ವಂ ಭೇದೇನೇಶಂ ಗುಣೈಃ ಸಹ ।
ಭೇದೇನ ಜೀವಾನನ್ಯೋನ್ಯಂ ಮುಕ್ತಾಃ ಪಶ್ಯಂತಿ ಸರ್ವಶಃ ।
ನಿಃಶೇಷದುಃಖಹೀನಾಶ್ಚ ಕೇವಲಂ ಸುಖಭೋಗಿನಃ ।
ಜನ್ಮಮೃತ್ಯುವಿಹೀನಾಶ್ಚ ಕಾಲಸಂಬಂಧವರ್ಜಿತಾಃ ।
ರಜಸ್ತಮಃಸತ್ತ್ವಹೀನಾಃ ಪ್ರಕೃತ್ಯಾ ಚ ವಿವರ್ಜಿತಾಃ ।

ಇತ್ಯಾದಿ ಗಾರುಡ ವಚನಾನ್ನ ಜ್ಞಾನನಿವರ್ತ್ಯತಾ ವಕ್ತುಂ ಯುಕ್ತಾ ।

**ಅನುವಾದ**—'ನ ಇದಂ ಸರ್ವಂ ಭವತಿ' ಎನ್ನುವ ವಾಕ್ಯಕ್ಕೆ, ಇಂತಹ ಬ್ರಹ್ಮ ಜ್ಞಾನದಿಂದ ಅವಿದ್ಯಾಕೃತವಾದ ಅಸರ್ವತ್ವವನ್ನು ನಾಶಮಾಡಿ ಜ್ಞಾನಿಯು ಸರ್ವವೂ ಆಗುತ್ತಾನೆ ಎಂದು ಪರರು ಅರ್ಥಮಾಡಿ ಅಸರ್ವತ್ವಕ್ಕೆ ಜ್ಞಾನನಿವರ್ತ್ಯತ್ವವನ್ನು ಹೇಳುತ್ತಾರೆ. ಆದರೆ ಜ್ಞಾನನಿವರ್ತ್ಯತ್ವರೂಪವಾದ ಅಸತ್ಯತ್ವವನ್ನು ಹೇಳುವ ವಾದಿಗಳನ್ನು ಈ ವಚನಗಳು ನಿಂದಿಸಿವೆ—ಅಸುರರು ಜಗತ್ತನ್ನು ಅಸತ್ಯವೆಂದೂ, ಜ್ಞಾನಬಾಧ್ಯವೆಂದೂ, ಈಶ್ವರರಹಿತವಾದುದೆಂದೂ ಹೇಳುತ್ತಾರೆ ಎಂದು ಗೀತೆಯಲ್ಲಿ ಹೇಳಿದೆ. 'ಪರಮಾತ್ಮನು ಸೃಷ್ಟಿಸಿದ ಈ ಜಗತ್ತು ಸತ್ಯವೇ, ಮಿಥ್ಯೆಯಲ್ಲ. ಅವನು ಬಲಿ ಮೊದಲಾದವರನ್ನು ಜಯಿಸಿ, ಇಂದ್ರ ಮೊದಲಾದವರಿಗೆ ಸ್ಪೃಹಣೀಯವಾದ ವಸ್ತುಗಳನ್ನು ಕೊಡುವನು' ಎಂದು ಋಗ್ವೇದದಲ್ಲಿ ಹೇಳಿದೆ. 'ಜೀವೇಶ್ವರ ಭೇದವು ಸತ್ಯ, ವಿಷ್ಣುವಿನ ಗುಣಗಳು ಸತ್ಯ, ಈ ಜಗತ್ತೆಲ್ಲವೂ ಸತ್ಯ. ಈ ಜಗತ್ತಿಗೂ ಮತ್ತು ಈಶ್ವರನಿಗೂ ಇರುವ ಭೇದವು ಸತ್ಯ' ಎಂದೂ ಪ್ರಮಾಣವಿದೆ. 'ನಿಃಶೇಷದುಃಖ ರಹಿತರೂ, ಕೇವಲ ಸುಖವನ್ನೇ ಭೋಗಿಸುವವರೂ, ಜನ್ಮ ಮರಣ ಹೀನರೂ, ಕಾಲ ಸಂಬಂಧಕೃತ ವಿಕಾರರಹಿತರೂ, ಪ್ರಕೃತಿಕೃತ ವಿಕಾರರಹಿತರೂ ಆದ್ದರಿಂದ ಮುಕ್ತರಿಗೆ ಭ್ರಾಂತಿಯುಂಟಾಗಲು ಸಾಧ್ಯವಿಲ್ಲ. ಇಂತಹ ಮುಕ್ತರು ಈ ಜಗತ್ತು ಪರಸ್ಪರ ಭೇದವುಳ್ಳದ್ದೆಂದೂ, ಗುಣಸಹಿತನಾದ ಈಶ್ವರನು ಈ ಜಗತ್ತಿಗಿಂತ ಭಿನ್ನನೆಂದೂ ಜೀವರೂ ಸಹ ಪರಸ್ಪರ ಭಿನ್ನರೆಂದೂ ಕಾಣುತ್ತಾರೆ' ಎಂದು ಗಾರುಡ ವಚನವಿದೆ. ಆದ್ದರಿಂದ ಜಗತ್ತಿಗೆ ಜ್ಞಾನ ನಿವರ್ತ್ಯತ್ವವನ್ನು ಹೇಳುವುದು ಯುಕ್ತವಲ್ಲ.

ಐಕ್ಯವಾಕ್ಯಗಳು ಮೋಹನಾರ್ಥ :

ಭಾಷ್ಯ—ತಿರ್ಯಙ್ಮಾನುಷದೇವಾದಿವಿಷ್ಣುರೂಪೇಷ್ವಶಕ್ತತಾ ।
ಯಸ್ಮಿನ್ ಕಸ್ಮಿಂಶ್ಚ ವಿಷಯೇ ದುಃಖಿತ್ವಂ ಭಿನ್ನತಾಽಪಿ ವಾ ।
ಪ್ರಕೃತೇರ್ವಿಕಾರತಾ ವಾಽಪಿ ಚ್ಛೇದಭೇದವ್ರಣಾದಿ ವಾ ।
ಅಜ್ಞಾನಂ ನಾಶಿತಾ ವಾಽಪಿ ಜನ್ಮ ಜೀವೈರಭಿನ್ನತಾ ।
ಪ್ರಕೃತ್ಯಭಿನ್ನತಾ ವಾಽಪಿ ಜೀವಾಭೇದಃ ಪರಸ್ಪರಮ್ ।
ಜಡಾಭೇದೋಽಥವಾ ವಿಷ್ಣೋರ್ಮಿಥ್ಯಾತ್ವಂ ಜಗತೋಽಪಿ ವಾ ।
ಅಗುಣತ್ವಮದೇಹತ್ವಮಕರ್ತೃತ್ವಂ ತಥಾ ಹರೇಃ ।
ಸಮ್ಯಗ್ಭಕ್ತಿಮೃತೇ ಮುಕ್ತಿರ್ವಿಷ್ಣೌ ತದ್ದ್ವೇಷತಸ್ತಥಾ ।
ಮುಕ್ತಾವಭೋಗೋ ಜೀವಾನಾಂ ಮುಕ್ತೌ ಸಾಮ್ಯಂ ತಥೈವ ಚ ।
ಅರೂಪತ್ವಂ ಚ ಜೀವಾನಾಂ ಮುಕ್ತಾನಾಂ ಬಂಧಿನಾಮಪಿ ।
ನಾಮತೀರ್ಥಾದಿಭಿರ್ಮುಕ್ತಿಸ್ತತ್ತ್ವಜ್ಞಾನಂ ವಿನಾಽಪಿ ತು ।
ವಿಷ್ಣೋಃ ಸಕಾಶಾತ್ ಪ್ರಕೃತೇಃ ಬ್ರಹ್ಮಣೋಽನಂತರುದ್ರಯೋಃ ।
ಗರುಡೇಂದ್ರಸೂರ್ಯವಿಘ್ನಾದೇರಗ್ನಿಸೋಮಗುಹಾದಿನಾಮ್ ।
ಪ್ರದ್ಯುಮ್ನಸ್ಯಾನಿರುದ್ಧಸ್ಯ ದೇವವಿಪ್ರಾದಿನಾಮಪಿ ।
ಯೈಃ ಕೈಶ್ಚಾಪಿ ಗುಣೈರ್ವಿಷ್ಣೋಃ ಸಕಾಶಾದ್ ವರತಾ ತಥಾ ।
ಯದಾ ಕದಾಽಪಿ ಯತ್ನೈರ್ವಾ ವರಶಾಪಾದಿನಾಽಪಿ ವಾ ।
ತಪಸಾ ವಾಽಪ್ಯುಪಾಯೈರ್ವಾ ಯೋಗಜ್ಞಾನಾದಿನಾಽಪಿ ವಾ ।
ಸಾಮ್ಯಂ ವಾ ವಿಷ್ಣ್ವಧೀನತ್ವಾದನ್ಯಥೈಷಾಂ ಸ್ಥಿತಿಃ ಕೃತಿಃ ।
ಅಸಂಸಾರಿತ್ವಮೇಷಾಂ ಚಾಪ್ಯೇಷಾಮೀಶ್ವರತಾಽಪಿ ವಾ ।
ವಿನಾ ವಿಷ್ಣುಪ್ರಸಾದೇನ ಮುಕ್ತಿರೇಷಾಂ ಸಕಾಶತಃ ।
ವಿಷ್ಣೋಃ ಪ್ರಯೋಜನಾವಾಪ್ತಿರ್ವಿಷ್ಣೋ ದೋಷಶ್ಚ ಕಶ್ಚನ ।
ವಿಷ್ಣೋಃ ಸರ್ವೇಷು ರೂಪೇಷು ಸಂಪೂರ್ಣಗುಣಹೀನತಾ ।
ಭೇದೋ ವಾ ವಿಷ್ಣುರೂಪೇಷು ವಿಶೇಷೋ ವಾ ಗುಣೇಷು ಚ ।
ಶ್ರಿಯಃ ಸಕಾಶಾದಾಧಿಕ್ಯಂ ಬ್ರಹ್ಮಾದೇಃ ಸಾಮ್ಯಮೇವ ವಾ ।
ಬ್ರಹ್ಮವಾಯ್ವೋರನಂತಸ್ಯ ರುದ್ರಸ್ಯ ಗರುಡಸ್ಯ ಚ ।
ತೇಭ್ಯಶ್ಚೈವೇಂದ್ರಸೂರ್ಯಾದೇರ್ವಿಪ್ರಭೂಪಾದಿನಾಂ ತತಃ ।
ಬದ್ಧಾನಾಂ ಮುಕ್ತಿಗಾನಾಂ ವಾ ದೈತ್ಯಾನಾಂ ಮೋಕ್ಷ ಏವ ಚ ।
ಸರ್ವಂ ಮೋಹಾರ್ಥಮುದ್ದಿಷ್ಟಂ ವೇದೇಷು ಹರಿಣಾಽಪಿ ವಾ ।
ಬ್ರಹ್ಮಣಾ ವಾಽಥ ರುದ್ರೇಣ ದೇವೈಶ್ಚ ಮುನಿಭಿಸ್ತಥಾ ।

**ಅನುವಾದ**—ಪಶು, ಮನುಷ್ಯ, ದೇವತೆ ಮೊದಲಾದ ವಿಷ್ಣುರೂಪಗಳಲ್ಲಿ ಅಶಕ್ತಿ, ಯಾವುದಾದರೂ ವಿಷಯದಲ್ಲಿ ದುಃಖ, ರೂಪಗಳಲ್ಲಿ ಭೇದ ಪ್ರಕೃತಿ ವಿಕಾರತ್ವ, ಛೇದ ಭೇದ ವ್ರಣಾದಿಗಳು, ಅಜ್ಞಾನ, ನಾಶ, ಜನನ, ಜೀವಾಭೇದ, ಪ್ರಕೃತಿಯಿಂದ ಅಭೇದ, ಅಥವಾ ಜೀವರಿಗೆ ಪರಸ್ಪರಾಭೇದ, ವಿಷ್ಣುವಿಗೆ ಜಡಾಭೇದ, ಜಗತ್ತಿಗೆ ಮಿಥ್ಯಾತ್ವ, ಪರಿಗೆ ನಿರ್ಗುಣತ್ವ, ಅದೇಹತ್ವ ಮತ್ತು ಅಕರ್ತೃತ್ವ, ವಿಷ್ಣುಭಕ್ತಿ ಇಲ್ಲದೆ ಮೋಕ್ಷ, ವಿಷ್ಣುದ್ವೇಷದಿಂದ ಮೋಕ್ಷ, ಮುಕ್ತಿಯಲ್ಲಿ ಸುಖಾಭಾವ, ಮೋಕ್ಷದಲ್ಲಿ ಜೀವರಿಗೆ ಸಾಮ್ಯ, ಮೋಕ್ಷದಲ್ಲಿ ಮತ್ತು ಸಂಸಾರದಲ್ಲಿ ಜೀವರಿಗೆ ಅರೂಪತ್ವ, ತತ್ತ್ವಜ್ಞಾನವಿಲ್ಲದೆ ಕೇವಲ ನಾಮಸ್ಮರಣೆ ಅಥವಾ ತೀರ್ಥಸ್ನಾನದಿಂದ ಮುಕ್ತಿ, ಲಕ್ಷ್ಮಿ ಬ್ರಹ್ಮ, ಶೇಷ, ರುದ್ರ, ಗರುಡ, ಇಂದ್ರ, ಸೂರ್ಯ, ವಿಘ್ನೇಶ, ಅಗ್ನಿ, ಸೋಮ ಷಣ್ಮುಖ, ಪ್ರದ್ಯುಮ್ನ, ಅನಿರುದ್ಧ ಇಂತಹ ದೇವತೆಗಳಿಗೆ ಮತ್ತು ಋಷಿಗಳಿಗೆ ಕೆಲವು ಗುಣಗಳಲ್ಲಿ ವಿಷ್ಣುವಿಗಿಂತ ಶ್ರೇಷ್ಠತ್ವ, ಪ್ರಯತ್ನದಿಂದಾಗಲೀ ವರ ಶಾಪಾದಿಗಳಿಂದಾಗಲೀ, ತಪಸ್ಸಿನಿಂದಾಗಲೀ, ಉಪಾಯಗಳಿಂದಾಗಲೀ, ಯೋಗಜ್ಞಾನಾದಿಗಳಿಂದಾಗಲೀ ಯಾವಕಾಲದಲ್ಲಿಯಾದರೂ ವಿಷ್ಣುವಿನಿಂದ ಸಾಮ್ಯಪ್ರಾಪ್ತಿ, ವಿಷ್ಣ್ವಧೀನತ್ವವಿಲ್ಲದೆ ಅನ್ಯರಿಗೆ ಸ್ಥಿತಿ ಅಥವಾ ಕ್ರಿಯೆ, ಬ್ರಹ್ಮಾದಿಗಳಿಗೆ ನಿತ್ಯಮುಕ್ತತ್ವ ಅಥವಾ ಸರ್ವೇಶ್ವರತ್ವ, ವಿಷ್ಣುವಿನ ಅನುಗ್ರಹವಿಲ್ಲದೆ ಬ್ರಹ್ಮಾದಿಗಳ ಅನುಗ್ರಹದಿಂದ ಮೋಕ್ಷ, ವಿಷ್ಣುವಿಗೆ ಪ್ರಯೋಜನದ ಪ್ರಾಪ್ತಿ, ವಿಷ್ಣುವಿಗೆ ಯಾವುದಾದರೂ ದೋಷ, ವಿಷ್ಣುವಿಗೆ ಎಲ್ಲಾ ರೂಪಗಳಲ್ಲೂ ನಿರ್ಗುಣತ್ವ, ವಿಷ್ಣುರೂಪಗಳಲ್ಲಿ ಭೇದ, ವಿಷ್ಣುಗುಣಗಳಲ್ಲಿ ನೀಚೋಚ್ಚಭಾವ, ಬ್ರಹ್ಮಾದಿಗಳಿಗೆ ಲಕ್ಷ್ಮಿಗಿಂತ ಉತ್ತಮತ್ವ ಅಥವಾ ಲಕ್ಷ್ಮಿಯ ಸಾಮ್ಯ, ಬದ್ಧರಾದ ಅಥವಾ ಮುಕ್ತರಾದ ಗರುಡ ಶೇಷ ರುದ್ರರಿಗೆ ಬ್ರಹ್ಮವಾಯುಗಳಿಗಿಂತ ಆಧಿಕ್ಯ ಅಥವಾ ಅವರ ಸಾಮ್ಯ, ಇಂದ್ರಸೂರ್ಯಾದಿಗಳಿಗೆ ಗರುಡಶೇಷರುದ್ರರಿಗಿಂತ ಆಧಿಕ್ಯ ಅಥವಾ ಅವರ ಸಾಮ್ಯ, ಋಷಿಗಳಿಗೆ ಮತ್ತು ಚಕ್ರವರ್ತಿಗಳಿಗೆ ಇಂದ್ರಾದಿಗಳಿಗಿಂತ ಆಧಿಕ್ಯ ಅಥವಾ ಅವರ ಸಾಮ್ಯ, ದೈತ್ಯರಿಗೆ ಮೋಕ್ಷ- ಇವೆಲ್ಲವೂ ವೇದಗಳಲ್ಲಿ ಅಯೋಗ್ಯರ ಮೋಹನಾರ್ಥವಾಗಿ ಹೇಳಲ್ಪಟ್ಟಿವೆ. ಪುರಾಣಗಳಲ್ಲಿ ಮತ್ತು ಇತರ ಗ್ರಂಥಗಳಲ್ಲಿ ಹರಿಯಾಗಲೀ, ಬ್ರಹ್ಮನಾಗಲೀ ರುದ್ರನಾಗಲೀ, ದೇವತೆಗಳಾಗಲೀ, ಋಷಿಗಳಾಗಲೀ ಹೀಗೆ ಹೇಳಿದರೂ ಅದು ಮೋಹನಾರ್ಥವಾಗಿಯೇ.

**ಭಾಷ್ಯ—ಯಥಾ ಸುರಾಣಾಂ ಸುಜ್ಞಾನೇ ತಾತ್ಪರ್ಯಂ ಸರ್ವದಾ ಶ್ರುತೇಃ ।**
**ತಥಾ ದುಜ್ಞಾನಜನನೇ ತಾತ್ಪರ್ಯಮಸುರೇಷು ಚ ।**
**ಏವಮೇವ ಚ ದೇವಾನಾಂ ವಿಷ್ಣುಬ್ರಹ್ಮಾದಿನಾಮಪಿ ।**
**ವಿಷ್ಣೋಃ ಸರ್ವಗುಣೈಃ ಪೂರ್ತಿರಪಿ ಮತ್ಸ್ಯಾದಿರೂಪಿಣಃ ।**
**ಅಜೇಯತ್ವಮಭೇದ್ಯತ್ವಮಚ್ಛೇದ್ಯತ್ವಂ ಚ ಸರ್ವಶಃ ।**
**ಸರ್ವಾವತಾರರೂಪಾಣಾಮಪಿ ಚಿತ್ಸುಖರೂಪತಾ ।**

ಶ್ರೀಬ್ರಹ್ಮರುದ್ರಾದ್ಯಾಧಿಕ್ಯಂ ಸರ್ವೇಶತ್ವಂ ಸ್ವತಂತ್ರತಾ ।
ಸರ್ವಶಕ್ತಿಸ್ತತ್ಪ್ರಸಾದಾನ್ಮೋಕ್ಷೋ ಬ್ರಹ್ಮಾದಿನಾಮಪಿ ।
ತದ್ಭಕ್ತ್ಯೈವ ವಿಮೋಕ್ಷಶ್ಚ ಭೇದೋ ಜೀವೇಶಯೋರಪಿ ।
ಶ್ರೀಬ್ರಹ್ಮರುದ್ರಶಕ್ರಾದೇಃ ಕ್ರಮೇಣೈವ ನಿಜಾ ಗುಣಾಃ ।
ಸರ್ವದೋಷವ್ಯಪೇತತ್ವಂ ವಿಷ್ಣೋಃ ಸರ್ವತ್ರ ಸರ್ವದಾ ।
ಏತತ್ ಸರ್ವಂ ಸರ್ವವೇದೈರ್ವಿಷ್ವಾದ್ಯೈರ್ದೇವತಾಗಣೈಃ ।
ಋಷಿಭಿಃ ಕ್ಷತ್ರಿಯಾದ್ಯೈಶ್ಚ ಸಮ್ಯಕ್ ತಾತ್ಪರ್ಯತಃ ಸದಾ ।
ಉಕ್ತಂ ಸರ್ವೇಷು ಶಾಸ್ತ್ರೇಷು ತಸ್ಮಾದ್ ಗ್ರಾಹ್ಯಂ ಬುಭೂಷುಭಿಃ ।

**ಅನುವಾದ**—ಸಜ್ಜನರಿಗೆ ಯಥಾರ್ಥಜ್ಞಾನವನ್ನುಂಟು ಮಾಡುವುದರಲ್ಲಿ ಶ್ರುತಿಗೆ ತಾತ್ಪರ್ಯವಿದ್ದಂತೆ ದುರ್ಜನರಿಗೆ ಅಯಥಾರ್ಥಜ್ಞಾನವನ್ನುಂಟು ಮಾಡುವುದರಲ್ಲಿಯೂ ತಾತ್ಪರ್ಯವಿದೆ. ವಿಷ್ಣುವಿಗೂ ಮತ್ತು ಬ್ರಹ್ಮಾದಿ ದೇವತೆಗಳಿಗೂ ಕೂಡ ಹೀಗೆಯೇ ಅಭಿಪ್ರಾಯ. ಮತ್ಸ್ಯಾದಿ ರೂಪಗಳಲ್ಲಿಯೂ ವಿಷ್ಣುವಿಗೆ ಸರ್ವಗುಣ ಪೂರ್ಣತ್ವ, ಅವನಿಗೆ ಯಾರಿಂದಲೂ ಅಜೇಯತ್ವ, ಅಭೇದ್ಯತ್ವ ಮತ್ತು ಅಚ್ಛೇದ್ಯತ್ವ, ಸರ್ವಾವತಾರ ರೂಪಗಳಿಗೂ ಜ್ಞಾನಾನಂದ ರೂಪತ್ವ, ಶ್ರೀ ಬ್ರಹ್ಮರುದ್ರಾದ್ಯುತ್ತಮತ್ವ, ಸರ್ವೇಶ್ವರತ್ವ, ಸ್ವತಂತ್ರತ್ವ, ಸರ್ವಶಕ್ತತ್ವ, ಬ್ರಹ್ಮಾದಿಗಳಿಗೂ ಅವನ ಅನುಗ್ರಹದಿಂದಲೇ ಮೋಕ್ಷ, ವಿಷ್ಣುಭಕ್ತಿಯಿಂದಲೇ ಮೋಕ್ಷ, ಜೀವೇಶ್ವರ ಭೇದ, ಶ್ರೀ ಬ್ರಹ್ಮರುದ್ರೇಂದ್ರರಿಗೆ ತಮ್ಮ ಗುಣಗಳಲ್ಲಿ ತಾರತಮ್ಯ, ವಿಷ್ಣುವಿಗೆ ಸರ್ವತ್ರ ಸರ್ವದಾ ಸರ್ವದೋಷರಹಿತತ್ವ ಇವೆಲ್ಲವೂ ಎಲ್ಲಾ ವೇದಗಳಿಂದಲೂ, ವಿಷ್ವಾದಿ ದೇವತಾಗಣದಿಂದಲೂ, ಋಷಿಗಳಿಂದಲೂ, ಚಕ್ರವರ್ತಿಗಳಿಂದಲೂ ತಾತ್ಪರ್ಯಪೂರ್ವಕವಾಗಿ ಸರ್ವಶಾಸ್ತ್ರಗಳಲ್ಲಿಯೂ ಉಕ್ತವಾಗಿವೆ. ಆದ್ದರಿಂದ ಶ್ರೇಯಸ್ಕಾಮಿಗಳು ಇದನ್ನು ಸ್ವೀಕರಿಸಬೇಕು.

**ಭಾಷ್ಯ**—ಇದಂ ಸತ್ಯಮಿದಂ ಸತ್ಯಮಿದಂ ಸತ್ಯಂ ನ ಸಂಶಯಃ ।
ಕೋಟಿಭಿಃ ಶಪಥೈಶ್ಚಾಪಿ ನಿರ್ಣೀತಂ ದೇವತಾಗಣೈಃ ।
ಅನಾದಿಕಾಲತಶ್ಚಾಯಂ ಶಾಸ್ತ್ರಾರ್ಥೋ ನಾನ್ಯಥಾ ಕ್ವಚಿತ್ ।
ಪುನಶ್ಚಾನಂತಕಾಲೀನ ಏಷ ಏವ ನ ಸಂಶಯಃ ।
ಜ್ಞಾತವ್ಯಶ್ಚೈಷ ಏವಾರ್ಥಃ ಸರ್ವದೈವ ಬುಭೂಷುಭಿಃ ।
ಏವಂ ತು ಸ್ಥಿರಯಾ ಬುದ್ಧ್ಯಾ ಜ್ಞಾತ್ವಾ ಯಾಸ್ಯಥ ತತ್ಪರಮ್ ।
ಏವಂ ತೇ ಹಂಸರೂಪೇಣ ವಿಷ್ಣುನಾ ದೇವತಾಗಣಾಃ ।
ಬ್ರಹ್ಮಾದ್ಯಾ ಬೋಧಿತಾಃ ಸರ್ವೇ ತಥಾ ಜ್ಞಾತ್ವಾ ಪರಂ ಗತಾಃ ।

**ಸಾಕ್ಷಾದ್ವಿಷ್ಣುರ್ಹಂಸರೂಪ ಉಕ್ತ್ವೈವಂ ತು ದಿವೌಕಸಾವ್ |**
**ವಾಸುದೇವಾಖ್ಯರೂಪೇಣ ತೇನ ಸರ್ವಹೃದಿ ಸ್ಥಿತಃ |**
**ಸಂಕರ್ಷಣಾಖ್ಯರೂಪೇಣ ವಿವೇಶಾನಂತಮೇವ ಚ |**
**ತಂ ಧ್ಯಾಯತಿ ಸದಾನಂತಸ್ತಸ್ಮಾನ್ಮುಕ್ತಿಪದೇಚ್ಛಯಾ |**
**ಪ್ರದ್ಯುಮ್ನಾಖ್ಯೇನ ರೂಪೇಣ ಕಾಮಮೇವ ವಿವೇಶ ಸಃ |**
**ಹಂಸಸ್ತದ್ಧ್ಯಾನತೋ ಮುಕ್ತಿಂ ಕಾಮ ಇಚ್ಛತಿ ಸರ್ವದಾ |**
**ಅನಿರುದ್ಧಾಖ್ಯರೂಪೇಣ ಸೋಽನಿರುದ್ಧಂ ವಿವೇಶ ಹ |**
**ಹಂಸಸ್ತದ್ಧ್ಯಾನತೋ ಮುಕ್ತಿಮನಿರುದ್ಧಸ್ತಥೇಚ್ಛತಿ |**
**ಇತ್ಯಾದಿ ಬ್ರಹ್ಮಾಂಡಪುರಾಣೇ ತತ್ತ್ವನಿರ್ಣಯಗೀತಾಯಾವ್ |**

**ಅನುವಾದ**—'ಇದುವರೆಗೆ ಹೇಳಿದ ಈ ಪ್ರಮೇಯವೆಲ್ಲವೂ ಸತ್ಯ, ಸತ್ಯ,ಸತ್ಯ. ಇದರಲ್ಲಿ ಯಾವ ಸಂಶಯವೂ ಇಲ್ಲ. ಇದು ಕೋಟಿ ಶಪಥಗಳಿಂದ ದೇವತಾಗಣ ಗಳಿಂದ ನಿರ್ಣಯಿಸಲ್ಪಟ್ಟಿದೆ. ಅನಾದಿಕಾಲದಿಂದಲೂ ಇದೇ ಶಾಸ್ತ್ರಾರ್ಥ. ಬೇರೆ ಯಲ್ಲ. ಪುನಃ ಅನಂತಕಾಲದಲ್ಲಿ ಇದೇ ಶಾಸ್ತ್ರಾರ್ಥ. ಈ ವಿಷಯದಲ್ಲಿ ಸಂಶಯ ವಿಲ್ಲ. ಮುಮುಕ್ಷುಗಳು ಯಾವಾಗಲೂ ಈ ವಿಷಯವನ್ನೇ ತಿಳಿಯಬೇಕು. ಸುಸ್ಥಿರ ವಾದ ಬುದ್ಧಿಯಿಂದ ಹೀಗೆ ತಿಳಿದು ಆ ಸರ್ವೋತ್ತಮನಾದ ವಿಷ್ಣುವನ್ನು ಹೊಂದು ತ್ತೀರಿ'. ಹೀಗೆ ಹಂಸರೂಪಿಯಾದ ವಿಷ್ಣುವಿನಿಂದ ಬೋಧಿಸಲ್ಪಟ್ಟವರಾಗಿ ಬ್ರಹ್ಮಾದಿ ದೇವತೆಗಳು ಹಾಗೆಯೇ ತಿಳಿದು ಅವನನ್ನು ಹೊಂದಿದರು. ಸಾಕ್ಷಾತ್ ವಿಷ್ಣುವೇ ಹಂಸರೂಪದಿಂದ ದೇವತೆಗಳಿಗೆ ಹೀಗೆ ಉಪದೇಶ ಮಾಡಿ ವಾಸುದೇವರೂಪದಿಂದ ಸರ್ವರ ಹೃದಯದಲ್ಲಿ ನೆಲೆಸಿದ್ದಾನೆ. ಸಂಕರ್ಷಣರೂಪದಿಂದ ಶೇಷನನ್ನು ಪ್ರವೇಶಿಸಿ ದನು. ಅವನಿಂದ ಮೋಕ್ಷವನ್ನು ಬಯಸಿ ಶೇಷನು ಯಾವಾಗಲೂ ಅವನನ್ನು ಧ್ಯಾನ ಮಾಡುತ್ತಾನೆ. ಆ ಹಂಸರೂಪಿಯಾದ ವಿಷ್ಣುವು ಪ್ರದ್ಯುಮ್ನರೂಪದಿಂದ ಮನ್ಮಥನನ್ನು ಪ್ರವೇಶಿಸಿದನು. ಮನ್ಮಥನು ಅವನ ಧ್ಯಾನದಿಂದ ಮುಕ್ತಿಯನ್ನು ಬಯಸುತ್ತಾನೆ. ಆ ಹಂಸರೂಪಿಯಾದ ವಿಷ್ಣುವು ಅನಿರುದ್ಧರೂಪದಿಂದ ಅನಿರುದ್ಧ ನನ್ನು ಪ್ರವೇಶಿಸಿದನು. ಅನಿರುದ್ಧನು ಅವನ ಧ್ಯಾನದಿಂದ ಮುಕ್ತಿಯನ್ನು ಬಯಸು ತ್ತಾನೆ'- ಇತ್ಯಾದಿ ವಿಷಯಗಳು ಬ್ರಹ್ಮಾಂಡಪುರಾಣದಲ್ಲಿ ತತ್ತ್ವನಿರ್ಣಯ ಗೀತೆ ಯಲ್ಲಿ ಹೇಳಲ್ಪಟ್ಟಿವೆ.

**ಚತುರ್ಮುಖನಿಂದ ಕ್ಷತ್ರಿಯ ಜಾತಿಯ ಸೃಷ್ಟಿ :**

**ಉಪನಿಷತ್**—**ಬ್ರಹ್ಮ ವಾ ಇದಮಗ್ರ ಆಸೀದೇಕಮೇವ | ತದೇಕಂ ಸನ್ನ ವ್ಯಭವತ್ | ತಚ್ಛ್ರೇಯೋರೂಪಮತ್ಯಸೃಜತ ಕ್ಷತ್ರಂ | ಯಾನ್ಯೇತಾನಿ ದೇವತ್ರಾ ಕ್ಷತ್ರಾಣೀಂದ್ರೋ ವರುಣಃ ಸೋಮೋ ರುದ್ರಃ ಪರ್ಜನ್ಯೋ**

**ಯಮೋ ಮೃತ್ಯುರೀಶಾನ ಇತಿ । ತಸ್ಮಾತ್ ಕ್ಷತ್ರಾತ್ ಪರಂ ನಾಸ್ತಿ । ತಸ್ಮಾದ್ ಬ್ರಾಹ್ಮಣಃ ಕ್ಷತ್ರಿಯಮಧಸ್ತಾದುಪಾಸ್ತೇ ರಾಜಸೂಯೇ । ಕ್ಷತ್ರ ಏವ ಯಶೋ ದಧಾತಿ । ಸೈಷಾ ಕ್ಷತ್ರಸ್ಯ ಯೋನಿರ್ಯದ್ ಬ್ರಹ್ಮ। ತಸ್ಮಾದ್ ಯದ್ಯಪಿ ರಾಜಾ ಪರಮತಾಂ ಗಚ್ಛತಿ। ಬ್ರಹ್ಮೈವಾಂತತ ಉಪನಿಃಶ್ರಯತಿ ಸ್ವಾಂ ಯೋನಿಂ । ಯ ಉ ಏನಂ ಹಿನಸ್ತಿ ಸ್ವಾಂ ಸ ಯೋನಿಮೃಚ್ಛತಿ । ಸ ಪಾಪೀಯಾನ್ ಭವತಿ । ಯಥಾ ಶ್ರೇಯಾಂಸಂ ಹಿಂಸಿತ್ವಾ ।**

ಈ ಜಗತ್ತಿಗಿಂತ ಮೊದಲು ಚತುರ್ಮುಖನೊಬ್ಬನೇ ಇದ್ದನು. ಅವನು ಬ್ರಾಹ್ಮಣ ಜಾತಿಯುಳ್ಳವನಾಗಿ ಮೊದಲು ವಿಷ್ಣುವಿನಿಂದ ಜನಿಸಿದ್ದನು. ಒಬ್ಬನೇ ಇದ್ದುದರಿಂದ ಅವನು ಪರಿವಾರ ಸಮೇತನಾಗಿರಲಿಲ್ಲ. ತನಗೆ ಪರಿವಾರವನ್ನು ಬಯಸಿ ಅವನು ಉಳಿದ ಸರ್ವ ಜಾತಿಗಳಲ್ಲಿ ಉತ್ತಮವಾದ ಕ್ಷತ್ರಿಯ ಜಾತಿಯನ್ನು ಸೃಷ್ಟಿಸಿದನು. ದೇವತೆಗಳಲ್ಲಿ ಕ್ಷತ್ರಿಯರಾದ ಇಂದ್ರ ಶಬ್ದವಾಚ್ಯ ಗರುಡ, ವರುಣ, ಸೋಮ, ಅವನಿಗೆ ಸಮನಾದ ಸೂರ್ಯ, ಸದಾಶಿವ, ಪರ್ಜನ್ಯಶಬ್ದವಾಚ್ಯ ಇಂದ್ರ,ಅವನಿಗೆ ಸಮನಾದ ಕಾಮ, ಯಮ, ಮೃತ್ಯುಶಬ್ದವಾಚ್ಯ ಶೇಷ, ಈಶಾನಶಬ್ದವಾಚ್ಯ ವಾಯು– ಇವರುಗಳನ್ನು ಸೃಷ್ಟಿಸಿದನು. ಕ್ಷತ್ರಿಯ ಜಾತಿಯು ಉತ್ತಮ. ಅದಕ್ಕಿಂತ ಉತ್ತಮವಾದುದು ಬ್ರಾಹ್ಮಣಜಾತಿ ಹೊರತು ಮತ್ತೊಂದಿಲ್ಲ. ಆದುದರಿಂದಲೇ ರಾಜಸೂಯಯಾಗದಲ್ಲಿ ಬ್ರಾಹ್ಮಣನು ಕೆಳಗೆ ನಿಂತು ಸಿಂಹಾಸನದಲ್ಲಿ ಕುಳಿತ ರಾಜನಿಗೆ ಸೇವೆ ಸಲ್ಲಿಸುತ್ತಾನೆ. ಕೆಳಗೆ ನಿಂತು ಸೇವೆ ಮಾಡುವುದರಿಂದ ಕ್ಷತ್ರಿಯನಿಗೇ ಯಶಸ್ಸನ್ನುಂಟು ಮಾಡುತ್ತಾನೆ. ಎಂದರೆ, ಬ್ರಾಹ್ಮಣನು ಉತ್ತಮನೇ ಆದರೂ ಕ್ಷತ್ರಿಯನಿಗೆ ಯಶಸ್ಸನ್ನು ಕೊಡಲು ಕೆಳಗೆ ನಿಂತು ಸೇವೆಮಾಡುತ್ತಾನೆ. 'ಉತ್ತಮನೇ ಆದರೂ' ಎಂದು ಏಕೆ? ಕಡಿಮೆಯವನಾದುದರಿಂದಲೇ ಬ್ರಾಹ್ಮಣನು ಹಾಗೆ ಸೇವೆ ಮಾಡುತ್ತಾನೆ ಎಂದು ಏಕೆ ಹೇಳಬಾರದು? ಎಂದರೆ, ಯದ್ಯಪಿ ರಾಜನು ರಾಜಸೂಯಯಾಗವನ್ನು ಮಾಡುವ ಕಾರಣದಿಂದ ಆ ಸಮಯದಲ್ಲಿ ಶ್ರೇಷ್ಠತೆಯನ್ನು ಪಡೆಯುತ್ತಾನೆ. ಆದರೂ ಕ್ಷತ್ರಿಯನಿಗೆ ತತ್ತ್ವೋಪದೇಶಾದಿಗಳನ್ನು ಮಾಡುವುದರಿಂದ ಬ್ರಾಹ್ಮಣನು ಗುರು. ಆ ಕಾರಣದಿಂದ ರಾಜಸೂಯಯಾಗದ ಕೊನೆಯಲ್ಲಿ ರಾಜನು ತನಗೆ ಗುರುವಾದ ಬ್ರಾಹ್ಮಣನಿಗೆ ನಮಸ್ಕಾರ ಮಾಡಬೇಕು. ಯಾವ ಕ್ಷತ್ರಿಯನು ಬ್ರಾಹ್ಮಣನನ್ನು ಕೊಲ್ಲುತ್ತಾನೆಯೋ ಅವನು ತನ್ನ ತಂದೆಯನ್ನೇ ಕೊಲ್ಲುತ್ತಾನೆ. ಅಂದರೆ, ಗುಣಾಧಿಕನಾದ ತಂದೆಯನ್ನು ಕೊಂದರೆ ಯಾವ ಪಾಪವನ್ನು ಸಂಪಾದಿಸುತ್ತಾನೆಯೋ ಅಂತಹ ಪಾಪಕ್ಕೆ ಗುರಿಯಾಗುತ್ತಾನೆ.

**ಭಾಷ್ಯ—ವಿಷ್ಣೋರ್ಬ್ರಾಹ್ಮಣ ಜಾತಿಃ ಸನ್ ಬ್ರಹ್ಮಾ ಜಜ್ಞೇ ಚತುರ್ಮುಖಃ ।**

**ಇತೋಽಗ್ರೇ ಜಗತಸ್ತಸ್ಮಾತ್ ಕ್ಷತ್ರಜಾತಿರಜಾಯತ ।**
**ವಾಯುಃ ಸದಾಶಿವೋಽನಂತೋ ಗರುಡಃ ಶಕ್ರ ಏವ ಚ ।**
**ಕಾಮಶ್ಚ ವರುಣಶ್ಚೈವ ಸೋಮಃ ಸೂರ್ಯೋ ಯಮಸ್ತಥಾ ।**
**ಏವಮಾದ್ಯಾಃ ಕ್ಷತ್ರಿಯಾಸ್ತು ದೇವಾನಾಂ ಬ್ರಹ್ಮನಿರ್ಮಿತಾಃ ।**
**ಶ್ರೇಯಸೀ ಸರ್ವಜಾತಿಭ್ಯಃ ಕ್ಷತ್ರಜಾತಿರಿತಿ ಶ್ರುತಿಃ ।**
**ನೈವ ಕ್ಷತ್ರಾತ್ ಪರಾ ಜಾತಿರ್ಬ್ರಹ್ಮಜಾತಿಂ ವಿನಾ ಕ್ವಚಿತ್ ।**
**ಬ್ರಾಹ್ಮಣಾಚ್ಚ ಪರೋ ರಾಜಾ ರಾಜಸೂಯಾಶ್ವಮೇಧಯೋಃ ।**
**ಉಪಾಸ್ತೇ ರಾಜಸೂಯೇಽತೋ ಬ್ರಾಹ್ಮಣೋ ರಾಜಸೂಯಿನಮ್।**
**ಆಸೀನ ಆಸನಾಧಸ್ತಾತ್ ತಥಾಪಿ ಬ್ರಾಹ್ಮಣೋ ಗುರುಃ ।**
**ತಸ್ಮಾತ್ ಸ ರಾಜಸೂಯಾಂತೇ ಬ್ರಾಹ್ಮಣಾನ್ ವಂದಯೀತ ಚ ।**
**ಯಃ ಕ್ಷತ್ರಿಯೋ ಬ್ರಾಹ್ಮಣಹಾ ಪಿತೃಹಾ ಸ ಪ್ರಕೀರ್ತಿತಃ ।**
**ಪಾಪೀಯಾನೇವ ಭವತಿ ಹತ್ವಾ ಸ್ವಪಿತರಂ ಯಥಾ ।**
**ಇತಿ ವಾಮನೇ ॥**

**ಅನುವಾದ**—ಚತುರ್ಮುಖ ಬ್ರಹ್ಮನು ಬ್ರಾಹ್ಮಣ ಜಾತಿಯವನಾಗಿ ವಿಷ್ಣುವಿನಿಂದ ಜನಿಸಿದನು. ಆ ಬ್ರಹ್ಮನಿಂದ ಜಗತ್ತು ಸೃಷ್ಟಿಯಾಗುವುದಕ್ಕಿಂತ ಮೊದಲು ಕ್ಷತ್ರಿಯ ಜಾತಿಯು ಜನಿಸಿತು. ದೇವತೆಗಳಲ್ಲಿ ವಾಯು, ಸದಾಶಿವ, ಶೇಷ, ಗರುಡ, ಇಂದ್ರ, ಕಾಮ, ವರುಣ, ಸೋಮ, ಸೂರ್ಯ, ಯಮ ಮೊದಲಾದ ಕ್ಷತ್ರಿಯರು ಬ್ರಹ್ಮನಿಂದ ಜನಿಸಿದರು. ಸರ್ವಜಾತಿಗಳಿಗಿಂತಲೂ ಕ್ಷತ್ರಿಯ ಜಾತಿಯು ಶ್ರೇಷ್ಠವಾದುದು. ಬ್ರಾಹ್ಮಣ ಜಾತಿಯನ್ನು ಬಿಟ್ಟು, ಕ್ಷತ್ರಿಯ ಜಾತಿಗಿಂತ ಶ್ರೇಷ್ಠವಾದ ಜಾತಿ ಬೇರೆ ಯಾವುದೂ ಇಲ್ಲ. ರಾಜಸೂಯ ಮತ್ತು ಅಶ್ವಮೇಧಯಾಗವನ್ನು ಮಾಡುವಾಗ ರಾಜನು ಬ್ರಾಹ್ಮಣನಿಗಿಂತ ಶ್ರೇಷ್ಠ. ಆದ್ದರಿಂದ ರಾಜಸೂಯಯಾಗವನ್ನು ಮಾಡುತ್ತಿರುವ ರಾಜನನ್ನು ಬ್ರಾಹ್ಮಣನು ಸಿಂಹಾಸನಕ್ಕಿಂತ ಕೆಳಗೆ ಕುಳಿತು ಸೇವೆ ಮಾಡುತ್ತಾನೆ. ಆದರೂ ರಾಜನಿಗೆ ಬ್ರಾಹ್ಮಣನೇ ಗುರು. ಆದ್ದರಿಂದ ರಾಜಸೂಯಯಾಗದ ಕೊನೆಯಲ್ಲಿ ರಾಜನು ಬ್ರಾಹ್ಮಣರಿಗೆ ನಮಸ್ಕರಿಸಬೇಕು. ಬ್ರಾಹ್ಮಣನನ್ನು ಕೊಲ್ಲುವ ಕ್ಷತ್ರಿಯನು ಪಿತೃಘಾತಕನೆಂದು ಕರೆಯಲ್ಪಡುತ್ತಾನೆ. ಏಕೆಂದರೆ ತನ್ನ ತಂದೆಯನ್ನು ಕೊಂದರೆ ಹೇಗೆ ಪಾಪಕ್ಕೆ ಗುರಿಯಾಗುತ್ತಾನೆಯೋ, ಬ್ರಾಹ್ಮಣನನ್ನು ಕೊಂದರೂ ಹಾಗೆಯೇ ಅದೇ ಪಾಪಕ್ಕೆ ಗುರಿಯಾಗುತ್ತಾನೆ ಎಂದು ವಾಮನಪುರಾಣದಲ್ಲಿ ಹೇಳಿದೆ.

**ಭಾಷ್ಯ—ಸ್ವತೋಽಧಿಕಗುಣಂ ಹತ್ವಾ ಸಾಕ್ಷಾಚ್ಚ ಪಿತರಂ ಪುನಃ ।**
**ಕ್ಷತ್ರಸ್ಯ ಬ್ರಾಹ್ಮಣಂ ಹತ್ವಾ ತಾವಾನ್ ದೋಷೋ ಭವೇದ್ ಧ್ರುವಂ।**
**ಇತ್ಯಾಗ್ನೇಯೇ ।**

ಈಶಾನೋ ಮಾರುತಃ ಪ್ರಾಣೋ ವಾಯುರ್ಜಿಷ್ಣುಸ್ತಥೈವ ಚ ।
ಧೃಷ್ಣುಶ್ಚ ಪವಮಾನಶ್ಚ ಪವನಶ್ಚೇತಿ ಕಥ್ಯತೇ ।

ಇತಿ ಶಬ್ದತತ್ತ್ವೇ ।

ಮೃತ್ಯುಃ ಸಂಕರ್ಷಣಃ ಶೇಷಃ ಶೇತಾsನಂತಸ್ತಥೈವ ಚ ।
ಬಲಿರ್ಮಹಾವಿಷಶ್ಚೇತಿ ಭೂಧರಶ್ಚೇತಿ ಕಥ್ಯತೇ । ಇತಿ ।
ಇಂದ್ರಃ ಸುಪರ್ಣೋ ಗರುಡೋ ಮಹಾಭಾರೋ ಧುರಂಧರಃ ।
ವಿಶ್ವಜಿಚ್ಚಾಪ್ಯವಧ್ಯಶ್ಚ ವೈನತೇಯಶ್ಚ ಕಥ್ಯತೇ । ಇತಿ ।
ಪರ್ಜನ್ಯೋ ಮಘವಾಂಶ್ಚೈವ ಪುರುಹೂತಃ ಪುರಂದರಃ ।
ಪ್ರಾಚೀನ ಬರ್ಹಿರ್ಹರ್ಯಶ್ವಃ ಸೋಮಪೋ ಮೇಷಭುಕ್ ತಥಾ ।

ಇತಿ ಚ ।

ಯಶೋನಿಧಿರ್ಬ್ರಾಹ್ಮಣಸ್ತು ತದ್ ದಾತುಂ ಕ್ಷತ್ರಿಯೋ ಸ್ವಯಂ ।
ಅಧೋ ಬ್ರಾಹ್ಮಣ ಆಸೀನೋ ರಾಜಸೂಯೇ ಹಿ ಸೇವತೇ ।

ಇತಿ ಪ್ರತ್ಯಯೇ ॥

ಋಚ್ಛತಿ ವಿನಾಶಯತಿ । ರೀಙ್ ಕ್ಷಯೇ ಇತಿ ಧಾತೋಃ ।

**ಅನುವಾದ**–'ತನಗಿಂತ ಶ್ರೇಷ್ಠಗುಣಉಳ್ಳ ಜನ್ಮಕೊಟ್ಟ ತಂದೆಯನ್ನು ಕೊಂದರೆ ಎಷ್ಟು ದೋಷ ಬರುತ್ತದೆಯೋ, ಕ್ಷತ್ರಿಯನಿಗೆ ಬ್ರಾಹ್ಮಣನನ್ನು ಕೊಂದರೆ ಅಷ್ಟು ದೋಷ ನಿಶ್ಚಯವಾಗಿ ಬರುತ್ತದೆ' ಎಂದು ಆಗ್ನೇಯ ಪುರಾಣದಲ್ಲಿ ಹೇಳಿದೆ. ಮಂತ್ರದಲ್ಲಿ ಈಶಾನ ಎಂದರೆ ವಾಯು. ಏಕೆಂದರೆ, 'ಈಶಾನ, ಮಾರುತ, ಪ್ರಾಣ, ವಾಯು, ಜಿಷ್ಣು, ಧೃಷ್ಣು, ಪವಮಾನ, ಪವನ ಇಷ್ಟುಶಬ್ದಗಳು ಮುಖ್ಯಪ್ರಾಣನನ್ನು ಹೇಳುತ್ತವೆ' ಎಂದು ಶಬ್ದತತ್ತ್ವ ಎಂಬ ಗ್ರಂಥದಲ್ಲಿ ಹೇಳಿದೆ. ಮೃತ್ಯು ಎಂದರೆ ಶೇಷ. ಏಕೆಂದರೆ'ಮೃತ್ಯು, ಸಂಕರ್ಷಣ, ಶೇಷ, ಶೇತಾ,ಅನಂತ, ಬಲಿ, ಮಹಾವಿಷ, ಭೂಧರ ಎಂದು ಶೇಷನು ಕರೆಯಲ್ಪಡುತ್ತಾನೆ' ಎಂದು ಹೇಳಿದೆ. ಇಂದ್ರನೆಂದರೆ ಗರುಡ. ಏಕೆಂದರೆ 'ಸುಪರ್ಣ, ಗರುಡ, ಮಹಾಭಾರ, ಧುರಂಧರ, ವಿಶ್ವಜಿತ್, ಅವಧ್ಯ, ವೈನತೇಯ ಎಂದು ಗರುಡನು ಕರೆಯಲ್ಪಡುತ್ತಾನೆ' ಎಂದೂ ಹೇಳಿದೆ. ಪರ್ಜನ್ಯನೆಂದರೆ ಇಂದ್ರ. ಏಕೆಂದರೆ 'ಪರ್ಜನ್ಯ, ಮಘವಾನ್, ಪುರುಹೂತ, ಪುರಂದರ, ಪ್ರಾಚೀನಬರ್ಹಿ, ಹರ್ಯಶ್ವ, ಸೋಮಪ, ಮೇಷಭುಕ್ ಇವೆಲ್ಲವೂ ಇಂದ್ರನ ಹೆಸರುಗಳು'ಎಂದೂ ಹೇಳಲ್ಪಟ್ಟಿದೆ.

'ಬ್ರಾಹ್ಮಣನೇ ಬಹಳ ಯಶಸ್ಸುಳ್ಳವನು. ಅವನು ಕ್ಷತ್ರಿಯನಿಗೆ ಯಶಸ್ಸನ್ನು ಕೊಡುವುದಕ್ಕಾಗಿ ರಾಜಸೂಯಯಾಗದಲ್ಲಿ ತಾನು ಕೆಳಗೆ ಇದ್ದು ರಾಜನಿಗೆ ಸೇವೆ ಮಾಡುತ್ತಾನೆ' ಎಂದು ಪ್ರತ್ಯಯ ಎಂಬ ಗ್ರಂಥದಲ್ಲಿ ಹೇಳಿದೆ.

ಋಚ್ಛತಿ ಎಂದರೆ ಗಚ್ಛತಿ, ಹೋಗುತ್ತಾನೆ ಎಂಬ ಅರ್ಥ ಪ್ರಸಿದ್ಧವಾಗಿದೆ. ಆದರೆ ಇಲ್ಲಿ ಋಚ್ಛತಿ ಎಂದರೆ ವಿನಾಶಯತಿ—ನಾಶಮಾಡುತ್ತಾನೆ ಎಂದು ಅರ್ಥ. ರೀಜ್‌ಕ್ಷಯೇ—ನಾಶಹೊಂದುವುದು ಎಂದು ಧಾತುಪಾಠವಿದೆ.

**ವೈಶ್ಯ ಶೂದ್ರ ಜಾತಿಗಳ ಸೃಷ್ಟಿ :**

**ಉಪನಿಷತ್—ಸ ನೈವ ವ್ಯಭವತ್ । ಸ ವಿಶಮಸೃಜತ । ಯಾನ್ಯೇತಾನಿ ದೇವ ಜಾತಾನಿ ಗಣಶ ಆಖ್ಯಾಯಂತೇ ವಸವೋ ರುದ್ರಾ ಆದಿತ್ಯಾ ವಿಶ್ವೇ ದೇವಾ ಮರುತ ಇತಿ ।**

ಬ್ರಹ್ಮನು ಇನ್ನೂ ಅಪೇಕ್ಷಿತ ಪರಿವಾರದಿಂದ ಕೂಡಿದವನಾಗಿ ಆಗಲಿಲ್ಲ. ಇನ್ನೂ ಅನೇಕ ಪರಿವಾರವನ್ನು ಇಚ್ಛಿಸಿದ ಬ್ರಹ್ಮನು ದೇವತೆಗಳಲ್ಲಿ ಒಂದೊಂದು ಗುಂಪಾಗಿ ಹೇಳಲ್ಪಡುವವರನ್ನು ಅಂದರೆ, ಅಗ್ನಿಯನ್ನು ಬಿಟ್ಟು ಏಳು ವಸುಗಳನ್ನೂ, ಸದಾಶಿವ ನನ್ನು ಬಿಟ್ಟು ಹತ್ತು ಮಂದಿ ರುದ್ರರನ್ನೂ, ವಿವಸ್ವಾನ್ ಇಂದ್ರ ವರುಣ ಮತ್ತು ವಿಷ್ಣುವನ್ನು ಬಿಟ್ಟು ಎಂಟುಮಂದಿ ಆದಿತ್ಯರನ್ನೂ, ಹತ್ತು ಮಂದಿ ವಿಶ್ವೇದೇವರನ್ನೂ, ಮುಖ್ಯಪ್ರಾಣನನ್ನು ಬಿಟ್ಟು ನಲವತ್ತೊಂಭತ್ತು ಮರುತ್ತುಗಳನ್ನೂ ವೈಶ್ಯರನ್ನಾಗಿ ಸೃಷ್ಟಿಮಾಡಿದನು.

**ಉಪನಿಷತ್—ಸ ನೈವ ವ್ಯಭವತ್ । ಸ ಶೌದ್ರಂ ವರ್ಣಮಸೃಜತ ಪೂಷಣಂ। ಇಯಂ ವೈ ಪೂಷಾ। ಇಯಂ ಹೀದಂ ಸರ್ವಂ ಪುಷ್ಯತಿ ಯದಿದಂ ಕಿಂಚ।**

ಇನ್ನೂ ಅಪೇಕ್ಷಿತ ಪರಿವಾರವನ್ನು ಪಡೆಯದಿದ್ದ ಬ್ರಹ್ಮನು ಪೂಷಾ ಎಂಬ ಶೂದ್ರಜಾತಿಯ ದೇವತೆಯನ್ನು ಸೃಷ್ಟಿಸಿದನು. ಪೃಥಿವಿಯು ಎಲ್ಲ ಪ್ರಾಣಿಗಳನ್ನು ಪೋಷಿಸುತ್ತಾಳೆ. ಆದಕಾರಣ ಪೃಥಿವಿಗೆ ಪೂಷಾ ಎಂದು ಹೆಸರು.

**ಭಾಷ್ಯ—ವಿವಸ್ವದಿಂದ್ರ ವರುಣ ವಿಷ್ಣುಭ್ಯೋಽನ್ಯೇಽದಿತೇಃ ಸುತಾಃ ।**
**ರುದ್ರಾದನ್ಯೇ ತಥಾ ರುದ್ರಾ ವಾಯೋರನ್ಯೇ ಚ ವಾಯವಃ ।**
**ಅಗ್ನೇರನ್ಯೇ ಚ ವಸವೋ ವೈಶ್ಯಾ ಇತ್ಯೇವ ಕೀರ್ತಿತಾಃ ।**
**ಏಕ ಏವ ಹರೇರ್ಜಾತಃ ಪರಿವಾರ ವಿವರ್ಜಿತಃ ।**
**ವಾಯ್ವಾದೀನ್ ಕ್ಷತ್ರಿಯಾನ್ ಸೃಷ್ಟ್ವಾ ಪುನರಲ್ಪ ಪರಿಗ್ರಹಃ ।**
**ಇಚ್ಛನ್ ಬಹುಪರೀವಾರಂ ವೈಶ್ಯಾನ್ ದೇವಾನ್ ಸಸರ್ಜ ಹ ।**
**ತತೋ ಬಹುತರಾನಿಚ್ಛನ್ ಶೂದ್ರಾನ್ ದೇವಾನ್ ಸಸರ್ಜ ಚ ।**
**ಅಶ್ವಿನೌ ಪೃಥಿವೀ ಚೈವ ಕಾಲಾ ಮೃತ್ಯವ ಏವ ಚ ।**
**ಶೂದ್ರದೇವಾಃ ಸಮುದ್ದಿಷ್ಟಾ ದೇವವರ್ಣಾ ಇತಿ ಸ್ಮೃತಾಃ ।**

**ಅನುವಾದ**—ವಿವಸ್ವಾನ್ ಇಂದ್ರ ವರುಣ ಮತ್ತು ವಿಷ್ಣುವನ್ನು ಬಿಟ್ಟು ಉಳಿದ ಆದಿತ್ಯರೂ, ಉಮಾಪತಿಯನ್ನು ಬಿಟ್ಟು ಉಳಿದ ರುದ್ರರೂ, ಮುಖ್ಯಪ್ರಾಣನನ್ನು ಬಿಟ್ಟು ಉಳಿದ ಮರುತ್ತುಗಳೂ, ಅಗ್ನಿಯನ್ನು ಬಿಟ್ಟು ಉಳಿದ ವಸುಗಳೂ ವೈಶ್ಯರೆನಿಸುತ್ತಾರೆ. ಚತುರ್ಮುಖ ಬ್ರಹ್ಮನು ಒಬ್ಬನೇ ವಿಷ್ಣುವಿನಿಂದ ಜನಿಸಿದನು. ಅವನಿಗೆ ಪರಿವಾರವಿರಲಿಲ್ಲ. ಅದಕ್ಕಾಗಿ ವಾಯು ಮೊದಲಾದ ಕ್ಷತ್ರಿಯರನ್ನು ಸೃಷ್ಟಿಸಿದರೂ ಅಲ್ಪಪರಿವಾರವುಳ್ಳವನೇ ಆದನು. ಇನ್ನೂ ಹೆಚ್ಚಿನ ಪರಿವಾರವನ್ನು ಬಯಸಿ ವಸು ಮುಂತಾದ ವೈಶ್ಯದೇವತೆಗಳನ್ನು ಸೃಷ್ಟಿಸಿದನು. ಇನ್ನೂ ಹೆಚ್ಚಿನ ಪರಿವಾರವನ್ನು ಇಚ್ಛಿಸಿ ಶೂದ್ರದೇವತೆಗಳನ್ನು ಸೃಷ್ಟಿಸಿದನು. ಅಶ್ವಿನೀ ದೇವತೆಗಳು–ಪೃಥಿವೀ, ಕಾಲ, ಮೃತ್ಯು, ನಿರ್ಋತಿ ಇವರು ಶೂದ್ರದೇವತೆಗಳೆನಿಸುತ್ತಾರೆ. ದೇವತೆಗಳಲ್ಲಿ ಬ್ರಾಹ್ಮಣಾದಿ ವರ್ಣ ವಿಭಾಗ ಈ ರೀತಿ.

## ಧರ್ಮಾಭಿಮಾನಿ ಮುಖ್ಯಪ್ರಾಣನ ಸೃಷ್ಟಿ :

**ಉಪನಿಷತ್—ಸ ನೈವ ವ್ಯಭವತ್ । ತಚ್ಛ್ರೇಯೋರೂಪಮತ್ಯಸೃಜತ ಧರ್ಮಂ । ತದೇತತ್ ಕ್ಷತ್ರಸ್ಯ ಕ್ಷತ್ರಂ ಯದ್ ಧರ್ಮಃ । ತಸ್ಮಾದ್ ಧರ್ಮಾತ್ ಪರಂ ನಾಸ್ತಿ । ಅಥೋ ಅಬಲೀಯಾನ್ ಬಲೀಯಾಂಸಮಾಶಂಸತೇ ಧರ್ಮೇಣ । ಯಥಾ ರಾಜ್ಞೈವಂ । ಯೋ ವೈ ಸ ಧರ್ಮಃ ಸತ್ಯಂ ವೈ ತತ್। ತಸ್ಮಾತ್ ಸತ್ಯಂ ವದಂತಮಾಹುರ್ಧರ್ಮಂ ವದತೀತಿ । ಧರ್ಮಂ ವಾ ವದಂತಂ ಸತ್ಯಂ ವದತೀತಿ । ಏತದ್ಧ್ಯೇವೈತದುಭಯಂ ಭವತಿ ।**

ಚತುರ್ವರ್ಣವನ್ನು ಸೃಷ್ಟಿಸಿದ ಬ್ರಹ್ಮನು ಇನ್ನೂ ಅಪೇಕ್ಷಿತವಾದ ಪರಿವಾರದಿಂದ ಕೂಡಿದವನಾಗಲಿಲ್ಲ. ತಾನು ಸೃಷ್ಟಿಕರ್ತನಾದುದರಿಂದ ಮತ್ತು ಉಳಿದ ದೇವತೆಗಳು ಪಾಲಕರಾದ ಕಾರಣ ಧಾರಣ ಮತ್ತು ಪೋಷಣ ಕಾರ್ಯದಲ್ಲಿ ದಕ್ಷನಾದ ಒಬ್ಬ ದೇವತೆ ಇರಲಿಲ್ಲ. ಅಂತಹವನೊಬ್ಬನು ಇರಬೇಕೆಂದು ಯೋಚಿಸಿ ಆ ಚತುರ್ಮುಖನು ಸರ್ವಶ್ರೇಷ್ಠವಾದ, ಜಗದ್ಧಾರಕವಾದ, ಮೋಕ್ಷಸಾಧನಭೂತವಾದ ಮತ್ತು ಭಕ್ತ್ಯಾದಿ ಭಗವದ್ಧರ್ಮಾಭಿಮಾನಿಯಾದ ವಾಯುವಿನ ಒಂದು ರೂಪವನ್ನು ಸೃಷ್ಟಿಸಿದನು. ಶೇಷಾದಿಗಳಲ್ಲಿಯೂ ಇರುವ ಜಗದ್ಧಾರಕತ್ವವು ವಾಯುವಿಗೆ. ಅದು ಹೇಗೆಂದರೆ ವಾಯುವು ಶೇಷಾದಿಗಳಿಗೆ ಸ್ವಾಮಿ. ವಿಷ್ಣುವನ್ನು ಬಿಟ್ಟು ವಾಯುವಿಗಿಂತ ಶ್ರೇಷ್ಠರು ಯಾರೂ ಇಲ್ಲ. ಆದ್ದರಿಂದ ವಾಯುವಿಗೇ ಜಗದ್ಧಾರಕತ್ವ. ಸ್ವತಃ ವಿಷ್ಣುವಿನ ಸಮೀಪಕ್ಕೆ ಹೋಗಲು ಅಸಮರ್ಥನಾದವನು ವಿಷ್ಣುಭಕ್ತ್ಯಾದಿ ಧರ್ಮಾಭಿಮಾನಿಯಾದ ವಾಯುವಿನ ಅನುಗ್ರಹದಿಂದ ವಿಷ್ಣುವನ್ನು ಹೊಂದಲು ಇಚ್ಛಿಸುತ್ತಾನೆ. ಲೋಕದಲ್ಲಿ ಮಹಾರಾಜನ ಸಮೀಪಕ್ಕೆ ಹೋಗಲು ಅಸಮರ್ಥನಾದವನು ಯುವರಾಜನ ಸಹಾಯದಿಂದ ಮಹಾರಾಜನನ್ನು ಹೊಂದಲು ಹೇಗೆ ಇಚ್ಛಿಸುತ್ತಾನೆಯೋ

ಹಾಗೆ. ಧರ್ಮಾಭಿಮಾನಿಯಾದ ವಾಯುವಿನ ರೂಪವೇ ಸತ್ಯಾಭಿಮಾನಿಯೂ ಹೌದು. ಧರ್ಮ ಮತ್ತು ಸತ್ಯಕ್ಕೆ ಅಭಿಮಾನಿಯಾದ ರೂಪವು ಒಂದೇ ಆದುದರಿಂದಲೇ ಧರ್ಮವನ್ನು ಹೇಳುವವನನ್ನು ಸತ್ಯವನ್ನು ಹೇಳುತ್ತಾನೆಂದೂ, ಸತ್ಯವನ್ನು ಹೇಳುವವನನ್ನು ಧರ್ಮವನ್ನು ಹೇಳುತ್ತಾನೆಂದೂ ಜ್ಞಾನಿಗಳು ವ್ಯವಹರಿಸುತ್ತಾರೆ. ವಾಯುವಿನ ಈ ರೂಪವೇ ಧರ್ಮ ಮತ್ತು ಸತ್ಯ ಎರಡಕ್ಕೂ ಅಭಿಮಾನಿಯಾಗುತ್ತದೆ.

**ಭಾಷ್ಯ—ಸ್ರಷ್ಟಾ ಸ್ವಯಂ ಸಮುದ್ದಿಷ್ಟಃ ಪಾಲಕಾ ದೇವತಾ ಇಮಾಃ ।**
**ಧಾರಣಂ ಕಥಮಸ್ಯ ಸ್ಯಾದ್ ಗತಿಶ್ಚಾಸ್ಯ ಕಥಂ ಪರಾ।**
**ಇತಿ ಮತ್ವಾ ಹರೇರ್ಭಕ್ತಿಧರ್ಮರೂಪಂ ಪುನರ್ವಿಭುಃ ।**
**ಪ್ರಾಣಿನಾಂ ಧೈರ್ಯರೂಪಂ ಚ ವಾಯೋಃ ರೂಪಾಂತರಂ ಪುನಃ ।**
**ಸಸರ್ಜ ಮತಿಮಾನ್ ಬ್ರಹ್ಮಾ ವಿಷ್ಣೋಃರಾಜ್ಞಾಪುರಃಸರಃ ।**
**ತಸ್ಮಾದ್ ವಾಯೋಃ ಪರೋ ನಾಸ್ತಿ ಋತೇ ವಿಷ್ಣುಂ ಸನಾತನಮ್ ।**
**ಶೇಷಾದೀನಾಂ ಕ್ಷತ್ರಿಯಾಣಾಂ ವಾಯುರೇವಾಧಿಪಃ ಸ್ಮೃತಃ ।**
**ಧಾರಣಾತ್ ಧರ್ಮ ಇತ್ಯಾಹುರ್ವಾಯುರ್ಧಾರಯತಿ ಪ್ರಜಾಃ ।**
**ಅಬಲೋಽಪಿ ತತೋ ವಾಯೋರ್ವಿಷ್ಣುಭಕ್ತ್ಯಾದಿರೂಪಿಣಃ ।**
**ಪ್ರಾಪ್ತುಮಿಚ್ಛತಿ ಯುಕ್ತಃ ಸನ್ ವಿಷ್ಣುಂ ಸುಬಲವತ್ತರಮ್ ।**
**ಯಥೈವ ಯುವರಾಜೇನ ಮಹಾರಾಜಮಭೀಪ್ಸತಿ ।**
**ಪ್ರಾಪ್ತುಂ ಧರ್ಮಾಭಿಮಾನೀ ಸ ವಾಯುಃ ಸತ್ಯಾಭಿಮಾನವಾನ್ ।**
**ತಸ್ಮಾದಾಹುರ್ಧರ್ಮಮಿದಂ ಸತ್ಯವೇತ್ತೇತಿ ವೇದಿನಃ ।**
**ಸತ್ಯಜ್ಞಮಥ ಧರ್ಮಜ್ಞಂ ವಾಯುರ್ದೇವೋ ಯತಸ್ತಯೋಃ ।**
**ಇತಿ ನಾರದೀಯೇ ॥**

**ಅನುವಾದ**—ಮೇಧಾವಿಯೂ, ಅತ್ಯಂತ ಸಮರ್ಥನೂ ಆದ ಬ್ರಹ್ಮನು 'ನಾನು ಸೃಷ್ಟಿಕರ್ತ, ನಾನು ಸೃಷ್ಟಿಸಿದ ಈ ದೇವತೆಗಳು ಪಾಲನಕರ್ತರು.ಹೀಗಿರುವಾಗ ಈ ಜಗತ್ತಿಗೆ ಧಾರಣ ಮತ್ತು ಶ್ರೇಷ್ಠವಾದ ಮೋಕ್ಷವೆಂಬ ಸದ್ಗತಿ ಹೇಗೆ ಉಂಟಾಗುವುದೆಂ'ದು ಆಲೋಚಿಸಿ ವಿಷ್ಣುವಿನ ಆಜ್ಞಾಪೂರ್ವಕವಾಗಿ ವಿಷ್ಣುಭಕ್ತ್ಯಭಿಮಾನಿಯೂ, ಧರ್ಮಾಭಿಮಾನಿಯೂ ಮತ್ತು ಪ್ರಾಣಿಗಳ ಧೈರ್ಯಕ್ಕೆ ಅಭಿಮಾನಿಯೂ ಆದ ವಾಯುದೇವನ ರೂಪಾಂತರವನ್ನು ಸೃಷ್ಟಿಸಿದನು. ಆದ್ದರಿಂದ ಸನಾತನನಾದ ವಿಷ್ಣುವನ್ನು ಬಿಟ್ಟು ವಾಯುವಿಗಿಂತ ಶ್ರೇಷ್ಠರಾದವರು ಬೇರೆ ಯಾರೂ ಇಲ್ಲ. ಶೇಷ ಮೊದಲಾದ ಕ್ಷತ್ರಿಯರಿಗೆ ವಾಯುದೇವರೇ ಅಧಿಪತಿ. ಜಗದ್ಧಾರಕರಾದ ಶೇಷಾದಿಗಳನ್ನೂ ವಾಯುವೇ ಧಾರಣೆ ಮಾಡುವುದರಿಂದ ವಾಯುವನ್ನೇ ಧರ್ಮ ಎಂದು ಕರೆಯುತ್ತಾರೆ. ಆದ್ದರಿಂದ ಸ್ವತಃ ವಿಷ್ಣುವನ್ನು ಹೊಂದಲು ಅಶಕ್ತನಾದವನೂ

ಕೊಡ ವಿಷ್ಣು ಭಕ್ತ್ಯಾದ್ಯಭಿಮಾನಿಯಾದ ವಾಯುವಿನ ಅನುಗ್ರಹದಿಂದ ಸರ್ವಶಕ್ತನಾದ ವಿಷ್ಣುವನ್ನು ಹೊಂದಲು ಇಚ್ಛಿಸುತ್ತಾನೆ. ಹೇಗೆ ಯುವರಾಜನ ಸಹಾಯದಿಂದ ಮಹಾರಾಜನನ್ನು ಹೊಂದಲು ಜನರು ಬಯಸುತ್ತಾರೆಯೋ ಹಾಗೆ. ಧರ್ಮಾಭಿಮಾನಿಯಾದ ವಾಯುವೇ ಸತ್ಯಾಭಿಮಾನಿಯೂ ಹೌದು. ವಾಯುವೇ ಸತ್ಯ ಮತ್ತು ಧರ್ಮ ಇವೆರಡಕ್ಕೂ ಅಭಿಮಾನಿಯಾದ್ದರಿಂದ, ಧರ್ಮವನ್ನು ತಿಳಿದವನನ್ನು ಸತ್ಯವನ್ನು ತಿಳಿದವನೆಂದೂ, ಸತ್ಯವನ್ನು ತಿಳಿದವನನ್ನು ಧರ್ಮವನ್ನು ತಿಳಿದವನೆಂದೂ ಜ್ಞಾನಿಗಳು ಹೇಳುತ್ತಾರೆ' ಎಂದು ನಾರದೀಯ ಪುರಾಣದಲ್ಲಿ ಹೇಳಿದೆ.

**ಜ್ಞಾನವಿಲ್ಲದ ಕರ್ಮ ವ್ಯರ್ಥ :**

**ಉಪನಿಷತ್—ತದೇತದ್ ಬ್ರಹ್ಮ ಕ್ಷತ್ರಂ ವಿಟ್ ಶೂದ್ರಃ ತದಗ್ನಿನೈವ ದೇವೇಷು ಬ್ರಹ್ಮಾಭವತ್ । ಬ್ರಾಹ್ಮಣೋ ಮನುಷ್ಯೇಷು । ಕ್ಷತ್ರಿಯೇಣ ಕ್ಷತ್ರಿಯಃ । ವೈಶ್ಯೇನ ವೈಶ್ಯಃ । ಶೂದ್ರೇಣ ಶೂದ್ರಃ । ತಸ್ಮಾದಗ್ನಾವೇವ ದೇವೇಷು ಲೋಕಮಿಚ್ಛಂತೇ ಬ್ರಾಹ್ಮಣೇ ಮನುಷ್ಯೇಷು । ಏತಾಭ್ಯಾಂ ಹಿ ರೂಪಾಭ್ಯಾಂ ಬ್ರಹ್ಮಾಭವತ್ । ಅಥ ಯೋ ಹ ವಾ ಅಸ್ಮಾಲ್ಲೋಕಾತ್ ಸ್ವಂ ಲೋಕಮದೃಷ್ಟ್ವಾ ಪ್ರೈತಿ ಸ ಏನಮವಿದಿತೋ ನ ಭುನಕ್ತಿ । ಯಥಾ ವೇದೋ ವಾಽನನೂಕ್ತೋಽನ್ಯದ್ ವಾ ಕರ್ಮಾಕೃತಂ । ಯದಿ ಹ ವಾ ಅಪ್ಯನೇವಂವಿನ್ಮಹತ್ ಪುಣ್ಯಂ ಕರ್ಮ ಕರೋತಿ ತದ್ಧಾಸ್ಯಾಂತತಃ ಕ್ಷೀಯತ ಏವ । ಆತ್ಮಾನಮೇವ ಲೋಕಮುಪಾಸೀತ । ಸ ಯ ಆತ್ಮಾನಮೇವ ಲೋಕಮುಪಾಸ್ತೇ ನ ಹಾಸ್ಯ ಕರ್ಮ ಕ್ಷೀಯತೇ । ಅಸ್ಮಾದ್ಧ್ಯೇವಾಽತ್ಮನೋ ಯದ್ಯತ್ ಕಾಮಯತೇ ತತ್ತತ್ ಸೃಜತೇ ।**

**ಅನುವಾದ**—ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರರೆಂದು ಹಿಂದೆ ಹೇಳಿದ ವರ್ಣಗಳಲ್ಲಿ ಬ್ರಾಹ್ಮಣ ಜಾತಿಗೆ ಅಭಿಮಾನಿಯಾದ ಬ್ರಹ್ಮನು ದೇವತೆಗಳಲ್ಲಿ ಅಗ್ನಿಯಲ್ಲಿ ಅಂತರ್ಗತನಾದನು. ಮನುಷ್ಯರಾದವರಲ್ಲಿ ಬ್ರಾಹ್ಮಣರಲ್ಲಿ ಅಂತರ್ಗತನಾದನು. ಕ್ಷತ್ರಿಯ ಜಾತಿಗೆ ಅಭಿಮಾನಿಯಾದ ವಾಯುವು ದೇವತೆಗಳಲ್ಲಿ ಕ್ಷತ್ರಿಯರಾದ ಗರುಡಶೇಷಾದಿಗಳಲ್ಲಿಯೂ, ಮನುಷ್ಯರಲ್ಲಿ ಕ್ಷತ್ರಿಯರಾದ ರಾಜರಲ್ಲಿಯೂ ಅಂತರ್ಗತನಾದನು. ವೈಶ್ಯಜಾತಿಗೆ ಅಭಿಮಾನಿಯಾದ ನಾಸಿಕ್ಯ ವಾಯುವು ದೇವತೆಗಳಲ್ಲಿ ವೈಶ್ಯರಾದ ವಸು ಮೊದಲಾದವರಲ್ಲಿಯೂ, ಮನುಷ್ಯರಲ್ಲಿ ವೈಶ್ಯರಾದವರಲ್ಲಿಯೂ ಅಂತರ್ಗತನಾದನು. ಶೂದ್ರಜಾತ್ಯಭಿಮಾನಿಯಾದ ನಿರ್ಋತಿಯು ಅಶ್ವಿನೀ ಮೊದಲಾದ ಶೂದ್ರ ದೇವತೆಗಳಲ್ಲಿಯೂ, ಮನುಷ್ಯರಲ್ಲಿ ಶೂದ್ರರಾದವರಲ್ಲಿಯೂ ಅಂತರ್ಗತನಾದನು. ಬ್ರಹ್ಮನು ಅಗ್ನಿ ಬ್ರಾಹ್ಮಣ ರೂಪಗಳಿಂದಲೇ ಅಗ್ನಿ ಬ್ರಾಹ್ಮಣರಲ್ಲಿ ಪ್ರವೇಶ ಮಾಡಿದ ಕಾರಣದಿಂದ ದೇವತೆಗಳ ಮಧ್ಯದಲ್ಲಿ ಅಗ್ನಿ

ಯಲ್ಲಿಯೇ ಹೋಮ ಮಾಡಿ, ಮನುಷ್ಯರ ಮಧ್ಯದಲ್ಲಿ ಬ್ರಾಹ್ಮಣರನ್ನೇ ತೃಪ್ತಿಪಡಿಸಿ ಸ್ವರ್ಗಾದಿ ಲೋಕಗಳನ್ನು ಇಚ್ಛಿಸುತ್ತಾರೆ. ಕೇವಲ ಅಗ್ನಿ ಬ್ರಾಹ್ಮಣಾದಿ ಸಂತರ್ಪಣ ದಿಂದಲೇ ಸ್ವರ್ಗಾದಿಲೋಕ ಪ್ರಾಪ್ತಿಯಿಲ್ಲ. ಅಗ್ನ್ಯಾದಿ ಉಪಾಸನೆಯ ಜೊತೆಗೆ ಪರಮಾತ್ಮ ತತ್ತ್ವಜ್ಞಾನವೂ ಅವಶ್ಯಕವಾದದ್ದು. ಯಾರು ಅಗ್ನಿ-ವಿಪ್ರಾರ್ಚಕ ನಾದರೂ ತನಗೆ ಆಶ್ರಯನಾದ ಶ್ರೀಹರಿಯನ್ನು ತಿಳಿಯದೆ ಈ ದೇಹದಿಂದ ನಿರ್ಗಮಿ ಸುತ್ತಾನೆಯೋ ಅವನನ್ನು ಅವನು ಅಧ್ಯಯನ ಮಾಡದಿದ್ದ ವೇದವೂ, ಅನುಷ್ಠಾನ ಮಾಡದಿದ್ದ ಕರ್ಮವೂ ಹೇಗೆ ರಕ್ಷಿಸುವುದಿಲ್ಲವೋ ಹಾಗೆ, ಅವನಿಂದ ಅಜ್ಞಾತನಾದ ಶ್ರೀಹರಿಯು ಅವನನ್ನು ರಕ್ಷಿಸುವುದಿಲ್ಲ. ಶ್ರೀಹರಿಯ ತತ್ತ್ವಜ್ಞಾನವಿಲ್ಲದವನು ಅಶ್ವಮೇಧಾದಿ ಮಹಾ ಪುಣ್ಯಕರ್ಮಗಳನ್ನೇ ಮಾಡಿದರೂ ಅವನಿಗೆ ಅದರ ಫಲವು ಸಿಗುವುದಿಲ್ಲ. ಆದ್ದರಿಂದ ಆಪ್ತಕಾಮನಾದುದರಿಂದ ಆತ್ಮನೆಂದೂ, ಸರ್ವಾಶ್ರಯ ನೆಂದೂ ಶ್ರೀಹರಿಯನ್ನು ಉಪಾಸನೆ ಮಾಡಬೇಕು. ಅಂತಹ ಉಪಾಸಕನಿಗೆ ಜ್ಞಾನಾ ನಂತರ ಮಾಡುವ ಕರ್ಮದ ಫಲವು ನಾಶವನ್ನು ಹೊಂದುವುದಿಲ್ಲ. ಅಂತಹ ಜ್ಞಾನಿಯು ಯಾವ ಯಾವ ವಸ್ತುಗಳನ್ನು ಇಚ್ಛಿಸುತ್ತಾನೆಯೋ ಅವುಗಳನ್ನು ಅವನ ಕರ್ಮವೇ ಪ್ರಸನ್ನನಾದ ಶ್ರೀಹರಿಯ ಅನುಗ್ರಹದಿಂದ ಸಂಪಾದಿಸಿಕೊಡುತ್ತದೆ.

**ಭಾಷ್ಯ-ನೈವ ವ್ಯಭವದಿತಿ ಪರಿವಾರಬಹುತ್ವೇನ ಯದ್ ವಿಶಿಷ್ಟತ್ವಂ ತನ್ನಾಭವ-ದಿತ್ಯರ್ಥಃ ।**

**ಬೃಹತ್ತ್ವಾತ್ ಸರ್ವವರ್ಣಾನಾಂ ಬ್ರಾಹ್ಮಣಾಃ ಪರಿಕೀರ್ತಿತಾಃ ।**
**ಕ್ಷತತ್ರಾಣಾತ್ ಕ್ಷತ್ರಿಯಾಶ್ಚ ತ್ರಿಷೂನತ್ವಾದ್ ವಿಶಃ ಸ್ಮೃತಾಃ ।**
**ಊನವಾಚೀ ಹಿ ವಿಟ್‌ಶಬ್ದಃ ಶುಭೇ ದತ್ತೇ ತ್ರಿಭಿರ್ಯತಃ ।**
**ರಮತೇ ಸ ತತಃ ಶೂದ್ರಃ ಸ ಬ್ರಾಹ್ಮಣ್ಯಾಭಿಮಾನವಾನ್ ।**
**ಬ್ರಹ್ಮಾಗ್ನಿನಾ ಸಹೈವಾಸ್ತೇ ದೇವೇಷ್ವಥ ನರೇಷು ಚ ।**
**ಬ್ರಾಹ್ಮಣೇನ ಸಹೈವಾಸ್ತೇ ಬ್ರಹ್ಮಾ ಶುಭಚತುರ್ಮುಖಃ ।**
**ಕ್ಷತ್ರಜಾತ್ಯಭಿಮಾನೀ ತು ಪವನೋ ದೇವರಾಜಭಿಃ ।**
**ಸುಪರ್ಣ ಶೇಷ ರುದ್ರಾದ್ಯೈರ್ಮಾನುಷೇಷು ಚ ರಾಜಭಿಃ ।**
**ವೈಶ್ಯಜಾತ್ಯಭಿಮಾನೀ ಚ ನಾಸಿಕ್ಯೋ ವಾಯುರೂರ್ಜಿತಃ ।**
**ವಸ್ವಾದಿಭಿಃ ಸಹೈವಾಸ್ತೇ ದೇವೇಷ್ವಥ ನರೇಷು ಚ ।**
**ವಿಡ್ಭಿಃ ಶೂದ್ರಾಭಿಮಾನೀ ಚ ನಿರ್ಋತಿರ್ದೇವತಾಸು ಚ ।**
**ನಾಸತ್ಯಯೋಃ ಪೃಥಿವ್ಯಾಂ ಚ ಶೂದ್ರೇಷ್ವೇವ ತು ಮಾನುಷೇ ।**
**ಯಸ್ಮಾದಗ್ನೌ ವಿಶೇಷೇಣ ಬ್ರಹ್ಮಣಃ ಸನ್ನಿಧಿರ್ಭವೇತ್ ।**
**ಅತೋಽಗ್ನಾವೇವ ದೇವಾನಾಂ ಸರ್ವೇಷಾಂ ನಿಯಮಾದ್ಧವಿಃ ।**
**ಹುತ್ವಾ ಲೋಕಾನ್ ಪ್ರಾರ್ಥಯಂತಿ ತಥಾ ವಿಪ್ರೇ ಚ ಮಾನುಷೇ ।**

**ಅನುವಾದ**—ಉಪನಿಷತ್ತಿನಲ್ಲಿ 'ಸ ನೈವ ವ್ಯಭವತ್' ಎಂದಿದೆ. ಆದಕ್ಕೆ ನೈವ ವಿ ಅಭವತ್ ಎಂದರೆ, ಪರಿವಾರ ವಿಶಿಷ್ಟನಾಗಲಿಲ್ಲ ಎಂಬು ಅರ್ಥ. ಐದನೆಯ ಖಂಡದಲ್ಲಿ 'ನೈವ ವ್ಯಭವತ್' ಎಂಬುದಕ್ಕೆ ಪರಿವಾರವನ್ನೇ ಹೊಂದಿರಲಿಲ್ಲ ಎಂದು ಅರ್ಥ. ಆರನೆಯ ಖಂಡದಲ್ಲಿ ಅಲ್ಪ ಪರಿವಾರವಿದ್ದರೂ ಅಪೇಕ್ಷಿತವಾದ ಬಹುಪರಿವಾರವನ್ನು ಹೊಂದಿರಲಿಲ್ಲ ಎಂದು ಅರ್ಥ. ಏಳನೆಯ ಖಂಡದಲ್ಲಿ ಬಹುಪರಿವಾರವನ್ನು ಹೊಂದಿದ್ದರೂ ಅಪೇಕ್ಷಿತವಾದ ಬಹುತರ ಪರಿವಾರವನ್ನು ಹೊಂದಿರಲಿಲ್ಲ ಎಂದು ಅರ್ಥ. ಎಂಟನೆಯ ಖಂಡದಲ್ಲಿ ಬಹುತರಪರಿವಾರವನ್ನು ಹೊಂದಿದ್ದರೂ ಧಾರಕ ಮತ್ತು ಪೋಷಕವಾದ ಪರಿವಾರವನ್ನು ಹೊಂದಿರಲಿಲ್ಲ ಎಂದು ಅರ್ಥ.

ಎಲ್ಲ ವರ್ಣಗಳಲ್ಲಿಯೂ ಶ್ರೇಷ್ಠರಾದುದರಿಂದ ಬ್ರಾಹ್ಮಣರು ಬ್ರಹ್ಮ ಎಂದು ಕರೆಯಲ್ಪಡುತ್ತಾರೆ. ಕ್ಷತ ಎಂದರೆ ಶತ್ರುಗಳ ಅಪಾಯದಿಂದ, ತ್ರಾಣಾತ್ ಎಂದರೆ ಪ್ರಜೆಗಳನ್ನು ರಕ್ಷಿಸುವುದರಿಂದ ಕ್ಷತ್ರಿಯರಿಗೆ ಕ್ಷತ್ರಿಯರೆಂದು ಹೆಸರು. ಮೂರು ಜಾತಿಗಳಲ್ಲಿ ಕನಿಷ್ಠರಾದುದರಿಂದ ವೈಶ್ಯರಿಗೆ ವೈಶ್ಯರೆಂದು ಹೆಸರು. ಏಕೆಂದರೆ ವಿಟ್ ಶಬ್ದವು ಊನ, ಕಡಿಮೆ ಎಂಬ ಅರ್ಥವನ್ನು ಹೇಳುತ್ತದೆ. ಮೇಲಿನ ಮೂರು ವರ್ಣದವರು ಶುಭವನ್ನು ಅಂದರೆ, ಧನಾದಿಸಂಪತ್ತನ್ನು ಕೊಟ್ಟರೆ ಸುಖಿಗಳಾಗುವುದರಿಂದ ಶೂದ್ರರಿಗೆ ಶೂದ್ರರೆಂದು ಹೆಸರು. ಶು ಎಂದರೆ ಶುಭ. ಶೂ ಎಂದರೆ ಅತಿಶಯವಾದ ಶುಭ. ಅದನ್ನು ದ ಕೊಟ್ಟರೆ, ರ ಸಂತೋಷಪಡುವವನು ಶೂದ್ರ. ಬ್ರಾಹ್ಮಣಜಾತ್ಯಭಿಮಾನಿಯಾದ ಚತುರ್ಮುಖನು ದೇವತೆಗಳಲ್ಲಿ ಅಗ್ನ್ಯಂತರ್ಗತನಾಗಿಯೂ, ಮನುಷ್ಯರಲ್ಲಿ ಬ್ರಾಹ್ಮಣಾಂತರ್ಗತನಾಗಿಯೂ ಇದ್ದಾನೆ. ಕ್ಷತ್ರಿಯರಿಗೆ ಅಭಿಮಾನಿಯಾದ ಮುಖ್ಯಪ್ರಾಣನು, ದೇವತೆಗಳಲ್ಲಿ ಶ್ರೇಷ್ಠರೆನಿಸಿ ಕ್ಷತ್ರಿಯರಾದ ಗರುಡ ಶೇಷ ರುದ್ರಾದಿಗಳಲ್ಲಿಯೂ, ಮನುಷ್ಯರಲ್ಲಿ ರಾಜಾದಿಗಳಲ್ಲಿಯೂ ಅಂತರ್ಗತನಾಗಿದ್ದಾನೆ. ವೈಶ್ಯಜಾತಿಗೆ ಅಭಿಮಾನಿಯಾದ ಬಲಿಷ್ಠನಾದ ನಾಸಿಕ್ಯವಾಯುವು ದೇವತೆಗಳಲ್ಲಿ ವೈಶ್ಯರಾದ ವಸು ಮೊದಲಾದವರಲ್ಲಿಯೂ, ಮನುಷ್ಯರಲ್ಲಿ ವೈಶ್ಯರಾದವರಲ್ಲಿಯೂ ಅಂತರ್ಗತನಾಗಿದ್ದಾನೆ. ಶೂದ್ರಜಾತ್ಯಭಿಮಾನಿಯಾದ ನಿರ್ಋತಿಯು ದೇವತೆಗಳಲ್ಲಿ ಅಶ್ವಿನೀ ದೇವತೆಗಳಲ್ಲಿ ಮತ್ತು ಪೃಥಿವಿಯಲ್ಲಿಯೂ, ಮನುಷ್ಯರಲ್ಲಿ ಶೂದ್ರರಲ್ಲಿಯೂ ಅಂತರ್ಗತನಾಗಿರುತ್ತಾನೆ. ದೇವತೆಗಳಲ್ಲಿ ಅಗ್ನಿಯಲ್ಲಿಯೂ, ಮನುಷ್ಯರಲ್ಲಿ ಬ್ರಾಹ್ಮಣನಲ್ಲಿಯೂ ಚತುರ್ಮುಖ ಬ್ರಹ್ಮನ ವಿಶೇಷ ಸನ್ನಿಧಾನವಿರುವುದರಿಂದ ಜನರು ಅಗ್ನಿಯಲ್ಲಿ ಹೋಮ ಮಾಡಿ, ಬ್ರಾಹ್ಮಣರನ್ನು ಭೋಜನಾದಿಗಳಿಂದ ತೃಪ್ತಿಪಡಿಸಿ, ಆ ಮೂಲಕ ಎಲ್ಲ ದೇವತೆಗಳನ್ನೂ ಸಂತೋಷಪಡಿಸಿ ಒಳ್ಳೆಯ ಲೋಕಗಳನ್ನು ಹೊಂದಲು ಬಯಸುತ್ತಾರೆ.

**ಭಾಷ್ಯ—ಸರ್ವಜಾತ್ಯುತ್ತಮೋ ಬ್ರಹ್ಮಾ ಯತೋ ವಿಪ್ರಾಗ್ನಿಸಂಸ್ಥಿತಃ ।**
**ತಸ್ಮಾದ್ ವಿಪ್ರಾಂಸ್ತಥೈವಾಗ್ನಿಂ ತರ್ಪಯೇದ್ ಬ್ರಹ್ಮತುಷ್ಟಿಕೃತ್ ।**

ತುಷ್ಟೇ ಬ್ರಹ್ಮಣಿ ವಿಷ್ಣುಶ್ಚ ತುಷ್ಟೋ ಲೋಕಾನ್ ಪ್ರದಾಸ್ಯತಿ ।
ಅಗ್ನಿ ವಿಪ್ರಾರ್ಚಕೋಽಪ್ಯೇವಂ ಯೋ ನ ವೇದ ಹರಿಂ ಪರಮ್ ।
ಆಶ್ರಯಂ ಸರ್ವಜೀವಾನಾಂ ಹರಿಸ್ತಂ ನೈವ ಭೋಜಯೇತ್ ।
ಯಥಾಽನಧೀತೋ ವೇದಸ್ತು ಯಥಾ ಕರ್ಮಾಕೃತಂ ತಥಾ ।
ನ ಸಮ್ಯಕ್ ಫಲದೋ ವಿಷ್ಣುರಜ್ಞಾತೋ ಜಗದೀಶ್ವರಃ ।
ಯದ್ಯವೇತ್ತಾ ಮಹದಪಿ ಹಯಮೇಧಾದಿಕಂ ಹರೇಃ ।
ಕುರ್ಯಾತ್ ಕ್ಷಯಿಷ್ಣುಫಲವಾನ್ ಸ ಭವೇನ್ನಾತ್ರ ಸಂಶಯಃ ।
ಆಪ್ತಕಾಮತಯಾಽಽತ್ಮೇತಿ ಯೋ ವಿಷ್ಣುಃ ಸಮುದೀರಿತಃ ।
ಸರ್ವಾಶ್ರಯಮುಪಾಸೀತ ತಮೇವ ಪುರುಷಂ ಸುಧೀಃ ।
ವಿಷ್ಣುಃ ಸರ್ವಾಶ್ರಯ ಇತಿ ಸದೋಪಾಸ್ತೇ ಯ ಆತ್ಮವಾನ್ ।
ಕ್ಷೀಯಂತೇ ನಾಸ್ಯ ಕರ್ಮಾಣಿ ಶುಭಾನ್ಯೇವ ಕದಾಚನ ।
ಉಪಾಸನಾಬಲಾನ್ಮುಕ್ತೋ ಭೋಗಾನ್ ಕರ್ಮಫಲಾನ್ ಸದಾ ।
ಭುಂಕ್ತೇ ವಿಷ್ಣೋಃ ಸಮೀಪಸ್ಥಃ ಸರ್ವದೋಷವಿವರ್ಜಿತಃ ।

ಇತಿ ಬ್ರಹ್ಮಾಂಡೇ ।

ಏತಾಭ್ಯಾಂ ರೂಪಾಭ್ಯಾಂ ಸಹಿತಂ ಹಿ ಬ್ರಹ್ಮಾಭವತ್ । ಸ್ವಂ ಲೋಕಂ ಸ್ವಾಶ್ರಯಮ್ ।

**ಅನುವಾದ**—ಎಲ್ಲ ಜಾತಿಯವರಲ್ಲಿಯೂ ಶ್ರೇಷ್ಠನಾದ ಬ್ರಹ್ಮನು ಬ್ರಾಹ್ಮಣರಲ್ಲಿಯೂ, ಅಗ್ನಿಯಲ್ಲಿಯೂ ವಿಶೇಷವಾಗಿ ಸನ್ನಿಹಿತನಾಗಿರುವುದರಿಂದ ಬ್ರಹ್ಮನನ್ನು ಸಂತೋಷಪಡಿಸಲು ಬಯಸುವವನು ಬ್ರಾಹ್ಮಣರನ್ನೂ ಅಗ್ನಿಯನ್ನೂ ತೃಪ್ತಿಪಡಿಸಬೇಕು. ಬ್ರಹ್ಮನು ಪ್ರೀತನಾದರೆ ವಿಷ್ಣುವು ಸಂತುಷ್ಟನಾಗಿ ವೈಕುಂಠಾದಿ ಲೋಕಗಳನ್ನು ಕೊಡುತ್ತಾನೆ. ಅಗ್ನಿ ವಿಪ್ರಾರ್ಚಕನಾದವನೂ ಕೂಡ ಯಾರು ಹರಿಯನ್ನು ಸರ್ವೋತ್ತಮನೆಂದೂ, ಸರ್ವಜೀವರಿಗೂ ಆಶ್ರಯನೆಂದೂ ತಿಳಿಯುವುದಿಲ್ಲವೋ, ಅವನಿಗೆ ಹರಿಯು ಮೋಕ್ಷವನ್ನು ಕೊಡುವುದಿಲ್ಲ. ಅಧ್ಯಯನ ಮಾಡದಿದ್ದರೆ ವೇದವು ಹೇಗೆ ಫಲವನ್ನು ಕೊಡುವುದಿಲ್ಲವೋ, ಅನುಷ್ಠಾನ ಮಾಡದಿದ್ದರೆ ಕರ್ಮವು ಹೇಗೆ ಫಲವನ್ನು ಕೊಡುವುದಿಲ್ಲವೋ ಹಾಗೆ ವಿಷ್ಣುವನ್ನು ಜಗದೀಶ್ವರನೆಂದು ತಿಳಿಯದೆ ಇದ್ದರೆ ಅವನು ಮೋಕ್ಷರೂಪ ಫಲವನ್ನು ಕೊಡುವುದಿಲ್ಲ. ಹರಿಯ ಜ್ಞಾನವಿಲ್ಲದೆ ಶ್ರೇಷ್ಠವಾದ ಅಶ್ವಮೇಧಾದಿ ಯಾಗಗಳನ್ನು ಮಾಡಿದರೂ ನಶ್ವರವಾದ ಸ್ವರ್ಗ ಮೊದಲಾದ ಫಲ ಮಾತ್ರ ಸಿಗುವುದು. ಇದರಲ್ಲಿ ಸಂಶಯವಿಲ್ಲ. ಆಪ್ತಕಾಮನಾದುದರಿಂದ ಆತ್ಮನೆಂದು ಕರೆಯಲ್ಪಡುವ ವಿಷ್ಣುವು ಸರ್ವಾಶ್ರಯನೆಂದೂ, ಗುಣಪೂರ್ಣನೆಂದೂ ತಿಳಿದು ವಿವೇಕಿಯಾದವನು ಅವನನ್ನೇ ಉಪಾಸನೆ ಮಾಡಬೇಕು. ವಿಷ್ಣುವನ್ನು ಸರ್ವಾ

ಶ್ರಯನೆಂದು ತಿಳಿದು ಸರ್ವದಾ ಉಪಾಸನೆ ಮಾಡುವವನಿಗೆ ಜ್ಞಾನಾನಂತರದಲ್ಲಿ ಮಾಡಿದ ಶುಭಕರ್ಮಗಳ ಫಲವು ಯಾವಾಗಲೂ ನಾಶಹೊಂದುವುದೇ ಇಲ್ಲ. ಅಂತಹ ಉಪಾಸನೆಯ ಬಲದಿಂದ ಮುಕ್ತನಾಗಿ ವಿಷ್ಣುವಿನ ಸಮೀಪದಲ್ಲಿದ್ದು, ಸರ್ವದೋಷ ವರ್ಜಿತನಾಗಿ ಜ್ಞಾನೋತ್ತರ ಕರ್ಮದ ಫಲವಾದ ಭೋಗಗಳನ್ನು ಸದಾ ಅನುಭವಿಸು ತ್ತಿರುತ್ತಾನೆ' ಎಂದು ಬ್ರಹ್ಮಾಂಡ ಪುರಾಣದಲ್ಲಿ ಹೇಳಿದೆ.

'ಏತಾಭ್ಯಾಂ ಹಿ ರೂಪಾಭ್ಯಾಂ ಬ್ರಹ್ಮಾಭವತ್' ಎಂದರೆ ಬ್ರಹ್ಮನು ಬ್ರಾಹ್ಮಣ ಮತ್ತು ಅಗ್ನಿಗಳಿಂದ ಕೂಡಿಕೊಂಡನು, ಅವರಲ್ಲಿ ಅಂತರ್ಗತನಾದನು ಎಂದರ್ಥವೇ ಹೊರತು, ಐಕ್ಯವು ಅರ್ಥವಲ್ಲ. ಸ್ವಂ ಲೋಕಂ ಎಂದರೆ ತನ್ನ ಆಶ್ರಯವನ್ನು ಎಂದು ಅರ್ಥ.

### ಶ್ರೀಹರಿ ಎಲ್ಲ ಜೀವರಿಗೂ ಆಶ್ರಯ :

**ಉಪನಿಷತ್—ಅಥೋ ಅಯಂ ವಾ ಆತ್ಮಾ ಸರ್ವೇಷಾಂ ಭೂತಾನಾಂ ಲೋಕಃ । ಸ ಯಜ್ಜುಹೋತಿ ಯದ್ ಯಜತೇ ತೇನ ದೇವಾನಾಂ ಲೋಕಃ । ಅಥ ಯದನುಬ್ರೂತೇ ತೇನರ್ಷೀಣಾಮ್ । ಅಥ ಯತ್ ಪಿತೃಭ್ಯೋ ನಿಗೃಣಾತಿ ಯತ್ ಪ್ರಜಾಮಿಚ್ಛತೇ ತೇನ ಪಿತೃಣಾಮ್ । ಅಥ ಯನ್ಮನುಷ್ಯಾನ್ ವಾಸಯತೇ ಯದೇಭ್ಯೋಽಶನಂ ದದಾತಿ ತೇನ ಮನುಷ್ಯಾಣಾಮ್ । ಅಥ ಯತ್ ಪಶುಭ್ಯಸ್ತೃಣೋದಕಂ ವಿಂದತಿ ತೇನ ಪಶೂನಾಂ । ಯದಸ್ಯ ಗೃಹೇಷು ಶ್ವಾಪದಾ ವಯಾಂಸ್ಯಾ ಪಿಪೀಲಿ-ಕಾಭ್ಯ ಉಪಜೀವಂತಿ ತೇನ ತೇಷಾಂ ಲೋಕಃ । ಯಥಾ ಹ ವೈ ಸ್ವಾಯ ಲೋಕಾಯಾರಿಷ್ಟಿಮಿಚ್ಛೇದೇವಂ ಹೈವಂವಿದೇ ಸರ್ವಾಣಿ ಭೂತಾನ್ಯರಿಷ್ಟಿ ಮಿಚ್ಛಂತಿ । ತದ್ವಾ ಏತದ್ ವಿದಿತಂ ಮೀಮಾಂಸಿತಮ್ ।**

**ಅನುವಾದ**–ಗೃಹಸ್ಥಾಶ್ರಮಿಗಳಾದ ಸರ್ವಜೀವರಲ್ಲಿ ನಿಯಾಮಕನಾದ ಅಥವಾ ರಾಮಕೃಷ್ಣಾದಿ ಗೃಹಸ್ಥ ಅವತಾರರೂಪದಿಂದಿರುವ ಅಥವಾ ಮೂಲರೂಪಿಯಾದ ಪರ ಮಾತ್ಮನು ದೇವತೆಗಳಿಂದ ಆರಂಭಿಸಿ ಇರುವೆಗಳವರೆಗೆ ಎಲ್ಲ ಪ್ರಾಣಿಗಳಿಗೂ ಆಶ್ರಯ ನೆಂಬುದು ಪ್ರಸಿದ್ಧ. ಏಕೆಂದರೆ ದೇವತೆಗಳ ಮೇಲಿನ ದಯೆಯಿಂದ ದೇವತೆಗಳನ್ನು ಉದ್ದೇಶಿಸಿ ವೈಶ್ವದೇವಾದಿ ಹೋಮಗಳನ್ನೂ ಮತ್ತು ಯಜ್ಞಗಳನ್ನೂ ಮಾಡುತ್ತ ದೇವತೆಗಳಿಗೆ ಆಶ್ರಯನಾಗುತ್ತಾನೆ. ಋಷಿಸ್ಮರಣ ಪೂರ್ವಕವಾಗಿ ವೇದಾಧ್ಯಯನ ಮಾಡುವುದರಿಂದ ಋಷಿಗಳಿಗೆ ಆಶ್ರಯನಾಗುತ್ತಾನೆ. ಪಿತೃಗಳಿಗೆ ಪಿಂಡಪ್ರದಾನ ಮಾಡುವುದರಿಂದ ಮತ್ತು ಮಕ್ಕಳನ್ನು ಪಡೆಯುವುದರಿಂದ ಪಿತೃಗಳಿಗೆ ಆಶ್ರಯ ನಾಗುತ್ತಾನೆ. ಮನುಷ್ಯರಿಗೆ ಭೂಮಿ ಮನೆಗಳನ್ನು ಕೊಟ್ಟು ವಾಸಮಾಡಿಸುವುದರಿಂದ ಹಾಗೂ ಯಾಚಕರಿಗೆ ಅನ್ನವನ್ನು ಕೊಡುವುದರಿಂದ ಮನುಷ್ಯರಿಗೆ ಆಶ್ರಯನಾಗು

ತ್ತಾನೆ. ಪಶುಗಳಿಗೆ ಹುಲ್ಲು ನೀರು ಕೊಡುವುದರಿಂದ ಪಶುಗಳಿಗೆ ಆಶ್ರಯನಾಗುತ್ತಾನೆ. ಮನೆಯಲ್ಲಿರುವ ಬೆಕ್ಕುಗಳು, ಪಕ್ಷಿಗಳು ಹೆಚ್ಚೇನು ಇರುವೆಯವರೆಗೆ ಎಲ್ಲ ಪ್ರಾಣಿಗಳಿಗೂ ಬಲಿಪ್ರದಾನ ಮಾಡುವುದರಿಂದ ಅವರೆಲ್ಲರಿಗೂ ಆಶ್ರಯನಾಗುತ್ತಾನೆ. ಹೇಗೆ ಲೋಕದಲ್ಲಿ ತಮಗೆ ಆಶ್ರಯರಾದ ರಾಜರುಗಳಿಗೆ ವಿನಾಶವಾಗಬಾರದೆಂದು ಪ್ರಜೆಗಳು ಇಚ್ಛಿಸುತ್ತಾರೆಯೋ ಹಾಗೆಯೇ ತನ್ನ ಅಂತರ್ಯಾಮಿಯಾದ ಶ್ರೀಹರಿಯನ್ನು ಸರ್ವಾಶ್ರಯನೆಂದು ತಿಳಿದಿರುವ ಜ್ಞಾನಿಗೆ ವಿನಾಶವಾಗದಿರಲೆಂದು ದೇವತೆಗಳು ಮೊದಲಾಗಿ ಎಲ್ಲ ಚೇತನರೂ ಪ್ರಾರ್ಥಿಸುತ್ತಾರೆ. ವಿಷ್ಣುವಿನ ಸರ್ವಾಧಾರತ್ವವು ವೇದಗಳಲ್ಲಿ ಪ್ರತಿಪಾದಿಸಲ್ಪಟ್ಟಿದೆ. ಮತ್ತು ಋಷಿಗಳಿಂದ ವಿಚಾರ ಮಾಡಿ ನಿರ್ಣಯಿಸಲ್ಪಟ್ಟಿದೆ.

**ಭಾಷ್ಯ—ಯೋಽಯಂ ಸರ್ವೇಷು ಜೀವೇಷು ನಿಯಾಮಕತಯಾ ಸ್ಥಿತಃ ।**
**ಸ ವಿಷ್ಣುರಾಪ್ತಕಾಮತ್ವಾದಾತ್ಮೇತ್ಯೇವೋಚ್ಯತೇ ಬುಧೈಃ ।**
**ಸ ಲೋಕಃ ಸರ್ವಭೂತಾನಾಂ ಸರ್ವಜೀವೇಷು ಸಂಸ್ಥಿತಃ ।**
**ವೈಶ್ವದೇವಾದಿಕಾನ್ ಹೋಮಾನ್ ಯಜ್ಞಾಂಶ್ಚ ಕುರುತೇ ವಿಭುಃ ।**
**ಕಾರುಣ್ಯಾತ್ ಸರ್ವದೇವೇಷು ತೇನ ದೇವಾಶ್ರಯೋ ಹರಿಃ ।**
**ಋಷೀಣಾಮಾಶ್ರಯಶ್ಚಾಪಿ ಸ್ವಾಧ್ಯಾಯೇಷ್ವೃಷಿಸಂಸ್ಕೃತೇಃ ।**
**ಸ ಹಿ ಜೀವೇಷು ಸಂವಿಷ್ಟಃ ಪಿಂಡಂ ಪುತ್ರಜನಿಂ ತಥಾ ।**
**ಯತ್ ಕರೋತಿ ಪಿತೃಣಾಂ ಚ ಸಂಶ್ರಯಸ್ತತ ಏವ ಸಃ ।**
**ತೃಣೋದಕಾದಿದಾನೇನ ಪಶೂನಾಮನ್ನತೋ ನೃಣಾಮ್ ।**
**ಉಪಕಾರಾಚ್ಚ ಸರ್ವೇಷಾಂ ಪ್ರಾಣಿನಾಮಾಶ್ರಯೋ ಹರಿಃ ।**
**ಯಜ್ಞಾದೀನ್ ದೇವತಾದೀನಾಮನ್ನತ್ವೇನ ಪುರೈವ ಯತ್ ।**
**ಬ್ರಹ್ಮಾದ್ಯೈರರ್ಥಿತಃ ಪ್ರಾದಾತ್ ಕ್ಷೀರಾಬ್ಧೇಸ್ತಟ ಉತ್ತರೇ ।**
**ಅತಶ್ಚ ಸರ್ವಲೋಕಾನಾಮಾಶ್ರಯೋ ವಿಷ್ಣುರೇವ ಸಃ ।**
**ಏವಂ ಯೋ ವೇತ್ತಿ ವಿಷ್ಣೋಸ್ತು ಸರ್ವಾಧಾರತ್ವಮುತ್ತಮಮ್ ।**
**ಸರ್ವಾಣ್ಯಪಿ ಹಿ ಭೂತಾನಿ ತಸ್ಯೇಚ್ಛಂತ್ಯವಿನಾಶಿತಾಮ್ ।**
**ಸ್ವಾಶ್ರಯಸ್ಯ ಯಥಾ ನಿತ್ಯಮನಾಶಂ ಪ್ರಾರ್ಥಯಂತಿ ಹಿ ।**
**ರಾಜಾದೇರಪಿ ತಾನ್ಯೇವಮುತ್ತಮಾಶ್ರಯವೇದಿನಃ ।**
**ತದೇತದ್ ವಾಸುದೇವಸ್ಯ ಸರ್ವಾಧಾರತ್ವಮುತ್ತಮಮ್ ।**
**ವಿದಿತಂ ಸರ್ವವೇದೈಶ್ಚ ಮೀಮಾಂಸಾಭಿಶ್ಚ ನಿಶ್ಚಿತಮ್ ।**
**ಇತಿ ಭವಿಷ್ಯತ್‌ಪರ್ವಣಿ ।**

**ಅನುವಾದ**—ಸರ್ವಜೀವರಲ್ಲಿ ನಿಯಾಮಕನಾಗಿರುವ ವಿಷ್ಣುವು ಆಪ್ತಕಾಮ

ನಾದುದರಿಂದ ಆತ್ಮನೆನಿಸಿಕೊಳ್ಳುತ್ತಾನೆ. ಅವನು ದೇವತೆಗಳು ಮೊದಲಾದ ಎಲ್ಲರಿಗೂ ಆಶ್ರಯ. ಏಕೆಂದರೆ, ಎಲ್ಲಾ ಜೀವರಲ್ಲಿ ಅಂತರ್ಗತನಾದ, ವಿಭುವಾದ ಶ್ರೀಹರಿಯು ದೇವತೆಗಳ ಮೇಲಿನ ಕರುಣೆಯಿಂದ ವೈಶ್ವದೇವಾದಿ ಹೋಮಗಳನ್ನೂ, ಯಜ್ಞಗಳನ್ನೂ ಮಾಡಿ, ಆದರಿಂದ ದೇವತೆಗಳಿಗೆ ಆಶ್ರಯನಾಗಿದ್ದಾನೆ. ಅಧ್ಯಯನ ಕಾಲದಲ್ಲಿ ಆಯಾ ಮಂತ್ರದ್ರಷ್ಟೃ ಋಷಿಗಳ ಸ್ಮರಣೆ ಮಾಡುವುದರಿಂದ ಋಷಿಗಳಿಗೆ ತೃಪ್ತಿಯಾಗುವುದರಿಂದ ಋಷಿಗಳಿಗೆ ಆಶ್ರಯನಾಗಿದ್ದಾನೆ. ಶ್ರೀಹರಿಯು ಜೀವರಲ್ಲಿದ್ದು, ಪಿತೃಗಳಿಗೆ ಪಿಂಡ ಪ್ರದಾನವನ್ನು ಮಾಡುವುದರಿಂದ ಮತ್ತು ಮಕ್ಕಳನ್ನು ಪಡೆಯುವುದರಿಂದ ಪಿತೃಗಳಿಗೆ ಆಶ್ರಯನಾಗಿದ್ದಾನೆ. ಹುಲ್ಲು ನೀರು ಮೊದಲಾದುವನ್ನು ಕೊಡುವುದರಿಂದ ಪಶುಗಳಿಗೂ, ಅನ್ನವನ್ನು ಕೊಡುವುದರಿಂದ ಮನುಷ್ಯರಿಗೂ, ಉಪಕಾರವನ್ನು ಮಾಡುವುದರಿಂದ ಎಲ್ಲ ಪ್ರಾಣಿಗಳಿಗೂ ಆಶ್ರಯನಾಗಿದ್ದಾನೆ. ಹೀಗೆ ಯಜ್ಞಾದಿ ಕರ್ತೃಗಳಲ್ಲಿದ್ದು ಯಜ್ಞಾದಿಗಳನ್ನು ಮಾಡುವುದೇ ಅಲ್ಲದೆ, ಕ್ಷೀರಸಮುದ್ರದ ಉತ್ತರ ದಡದಲ್ಲಿ ಮೂಲರೂಪಿಯಾದ ಶ್ರೀಹರಿಯು ಬ್ರಹ್ಮಾದಿಗಳಿಂದ ಪ್ರಾರ್ಥಿಸಲ್ಪಟ್ಟವನಾಗಿ, ದೇವತೆಗಳೇ ಮೊದಲಾದವರಿಗೆ ಅನ್ನರೂಪವಾಗಿ ಯಜ್ಞದ ಆಹುತಿ ಮೊದಲಾದವುಗಳನ್ನು ಕೊಟ್ಟನು. ಆ ಕಾರಣದಿಂದ ವಿಷ್ಣುವೇ ಸರ್ವಲೋಕಗಳಿಗೂ ಆಶ್ರಯನು. ಹೀಗೆ ಯಾರು ಶ್ರೀಹರಿಯ ಉತ್ಕೃಷ್ಟವಾದ ಸರ್ವಾಧಾರತ್ವವನ್ನು ತಿಳಿಯುತ್ತಾರೆಯೋ ಆವರಿಗೆ ದೇವತಾದಿ ಸಮಸ್ತಜೀವರೂ ಅವಿನಾಶಿತ್ವವನ್ನು ಬಯಸುತ್ತಾರೆ. ತಮಗೆ ಆಶ್ರಯವನ್ನು ನೀಡಿದ ರಾಜನಿಗೆ ಪ್ರಜೆಗಳು ಹೇಗೆ ವಿನಾಶವಾಗದಿರಲೆಂದು ಪ್ರಾರ್ಥಿಸುತ್ತಾರೆಯೋ ಹಾಗೇ ವಾಸುದೇವನ ಉತ್ಕೃಷ್ಟವಾದ ಸರ್ವಾಧಾರತ್ವವನ್ನು ಮತ್ತು ಸರ್ವೋತ್ತಮತ್ವವನ್ನು ತಿಳಿದವನಿಗೆ ವಿನಾಶವಾಗದಿರಲೆಂದು ಪ್ರಾರ್ಥಿಸುತ್ತಾರೆ. ವಾಸುದೇವನ ಈ ಉತ್ತಮವಾದ ಸರ್ವಾಧಾರತ್ವವು ಸರ್ವವೇದಗಳಲ್ಲಿ ಪ್ರತಿಪಾದಿತವಾಗಿದೆ ಮತ್ತು ವಿಚಾರ ಮಾಡಿ ಋಷಿಗಳಿಂದ ನಿಶ್ಚಯಿಸಲ್ಪಟ್ಟಿದೆ ಎಂದು ಭವಿಷ್ಯತ್ ಪರ್ವದಲ್ಲಿ ಹೇಳಿದೆ.

## ಶ್ರೀಹರಿಯು ಬ್ರಹ್ಮಾದಿಗಳನ್ನೇಕೆ ಪೂಜಿಸುತ್ತಾನೆ ?

**ಭಾಷ್ಯ—ಕಿಂತು ಬ್ರಹ್ಮಾದಿಭಿರ್ದೇವೈಃ ಪುರಾ ದೃಷ್ಟ್ವಾ ನಿರಂಹಸಃ ।**
**ನಿರ್ಭಯಾನ್ ವಿಷ್ಣುನಾಮ್ನ್ಯೈವ ಯಥೇಷ್ಟಂ ಪದಮಾಗತಾನ್ ।**
**ಅಲಬ್ಧ್ವಾ ಚಾತ್ಮನಃ ಪೂಜಾಂ ಸಮ್ಯಗಾರಾಧಿತೋ ಹರಿಃ ।**
**ಮಯಾ ಚಾಸ್ಮಾದಪಿ ಶ್ರೈಷ್ಠ್ಯಂ ವಾಂಛತಾಽಹಂಕೃತಾತ್ಮನಾ ।**
**ತತಃ ಸಾಕ್ಷಾಜ್ಜಗನ್ನಾಥಃ ಪ್ರಸನ್ನೋ ಭಕ್ತವತ್ಸಲಃ ।**
**ಅಂಶಾಂಶೇನಾತ್ಮನೈವೈತಾನ್ ಪೂಜಯಾಮಾಸ ಕೇಶವಃ ।**
**ದೇವಾನ್ ಪಿತೃನ್ ದ್ವಿಜಾನ್ ಹವ್ಯಕವ್ಯಾದ್ಯೈಃ ಕರುಣಾಮಯಃ ।**

**ತತಃ ಪ್ರಭೃತಿ ಪೂಜ್ಯಂತೇ ತ್ರೈಲೋಕ್ಯೇ ಸಚರಾಚರೇ ।**

**ಇತಿ ಚ ಪಾದ್ಮೇ ।**

**ಅನುವಾದ**—'ಶ್ರೀಹರಿಯು ರಾಮಕೃಷ್ಣಾದಿ ರೂಪಗಳಿಂದ ದೇವತೆಗಳನ್ನು ಪೂಜಿಸಿದ್ದಾನೆ. ಆದರೆ ವಿಧಿಬದ್ಧನಾಗಿ ಪೂಜಿಸಿದುದಲ್ಲ. ಮತ್ತೇನೆಂದರೆ, ಕೃತ ಯುಗದಲ್ಲಿ ವಿಷ್ಣುವೆಂಬ ನಾಮದಿಂದ ವಿಷ್ಣುವಿಗೇ ಪೂಜೆಯನ್ನು ಮಾಡಿದುದರಿಂದ ದೇವತೆಗಳು ಪಾಪಗಳನ್ನು ಕಳೆದುಕೊಂಡು, ನರಕಾದಿಭಯವನ್ನು ತ್ಯಜಿಸಿ ಯಥೇಷ್ಟ ವಾಗಿ ಬ್ರಹ್ಮಾದಿ ಪದವಿಯನ್ನು ಹೊಂದಿರುವರು. ಆದರೂ ತಾವು ದೇವತೆಗಳಿಂದು ಸ್ವತಂತ್ರವಾಗಿ ಪೂಜೆಯನ್ನು ಹೊಂದದಿದ್ದರೆ ಮುಂದಿನ ದ್ವಾಪರಾದಿ ಯುಗಗಳು ಪ್ರವೃತ್ತವಾಗಲಾರವೆಂದು ಭಾವಿಸಿ, ಬ್ರಹ್ಮಾದಿ ದೇವತೆಗಳು ಅಸುರ ಜನರನ್ನು ಮೋಹಿಸುವುದಕ್ಕಾಗಿ ಶ್ರೀಹರಿಯ ಆಜ್ಞೆಯಿಂದಲೇ ಶ್ರೀಹರಿಯನ್ನು ಚೆನ್ನಾಗಿ ಪೂಜಿಸಿ ದರು. ಬ್ರಹ್ಮಾದಿಗಳು ಮಾತ್ರವಲ್ಲ. ದುಷ್ಟಜನರ ಮೋಹನಕ್ಕೋಸ್ಕರವಾಗಿ ಶ್ರೀಹರಿ ಗಿಂತಲೂ ಶ್ರೇಷ್ಠತ್ವವನ್ನು ಶ್ರೀಹರಿಯ ಆಜ್ಞೆಯಿಂದಲೇ ಬಯಸಿ, ಅಹಂಕಾರಾಭಿ ಮಾನಿಯಾದ ನಾನೂ ವಿಷ್ಣುವನ್ನು ಚೆನ್ನಾಗಿ ಆರಾಧಿಸಿದೆ. ಅದರಿಂದ ಪ್ರಸನ್ನನಾದ, ಜಗತ್ತಿಗೆ ಮುಖ್ಯ ಒಡೆಯನಾದ, ಭಕ್ತವತ್ಸಲನಾದ, ಕರುಣಾಮಯನಾದ ಶ್ರೀಹರಿಯು ತನ್ನ ಪುರುಷಾವತಾರದ ಅಂಶವಾದ ರಾಮ ಕೃಷ್ಣಾದಿ ರೂಪದಿಂದ ತಾನೇ ಹೋಮ ಸಾಧನ ದ್ರವ್ಯಗಳಿಂದ ದೇವತೆಗಳನ್ನೂ, ಪಿಂಡದಾನಾದಿಗಳಿಂದ ಪಿತೃಗಳನ್ನೂ, ಅನ್ನ ದಾನಾದಿಗಳಿಂದ ಬ್ರಾಹ್ಮಣರನ್ನೂ ಪೂಜಿಸಿದನು. ಅಲ್ಲಿಂದ ಮೊದಲು ಮಾಡಿ ಚರಾಚರಸಹಿತವಾದ ಮೂರುಲೋಕದಲ್ಲಿ ಬ್ರಹ್ಮರುದ್ರಾದಿ ದೇವತೆಗಳಿಗೆ ಪೂಜೆಯು ನಡೆಯುತ್ತದೆ' ಎಂದೂ ಪಾದ್ಮಪುರಾಣದಲ್ಲಿ ರುದ್ರದೇವರ ವಚನವಿದೆ.

**ಗೃಹಸ್ಥಾಶ್ರಮ ಧರ್ಮ :**

**ಉಪನಿಷತ್—ಆತ್ಮೈವೇದಮಗ್ರ ಆಸೀತ್ ಏಕ ಏವ । ಸೋಽಕಾಮಯತ ಜಾಯಾ ಮೇ ಸ್ಯಾತ್। ಅಥ ಪ್ರಜಾಯೇಯ। ಅಥ ವಿತ್ತಂ ಮೇ ಸ್ಯಾತ್। ಅಥ ಕರ್ಮ ಕುರ್ವೀಯೇತಿ। ಏತಾವಾನ್ ವೈ ಕಾಮಃ। ನೇಚ್ಛಂಶ್ಚನಾತೋ ಭೂಯೋ ವಿಂದೇತ್ । ತಸ್ಮಾದಪ್ಯೇತರ್ಹ್ಯೇಕಾಕೀ ಕಾಮಯತೇ ಜಾಯಾ ಮೇ ಸ್ಯಾದಥ ಪ್ರಜಾಯೇಯಾಥ ವಿತ್ತಂ ಮೇ ಸ್ಯಾದಥ ಕರ್ಮ ಕುರ್ವೀಯೇತಿ । ಸ ಯಾವದಪ್ಯೇತೇಷಾಮೇಕೈಕಂ ನ ಪ್ರಾಪ್ನೋತ್ಯ- ಕೃತ್ಸ್ನ ಏವ ತಾವನ್ಮನ್ಯತೇ । ತಸ್ಯೋ ಕೃತ್ಸ್ನತಾ । ಮನ ಏವಾ- ಸ್ಯಾತ್ಮಾ । ವಾಗ್ ಜಾಯಾ । ಪ್ರಾಣಃ ಪ್ರಜಾ । ಚಕ್ಷುರ್ಮಾನುಷಂ ವಿತ್ತಂ। ಚಕ್ಷುಷಾ ಹಿ ತದ್ ವಿಂದತೇ। ಶ್ರೋತ್ರಂ ದೈವಂ । ಶ್ರೋತ್ರೇಣ ಹಿ ತತ್ ಶೃಣೋತಿ । ಆತ್ಮೈವಾಸ್ಯ ಕರ್ಮ । ಆತ್ಮನಾ ಹಿ ಕರ್ಮ**

**ಕರೋತಿ । ಸ ಏಷ ಪಾಂಕ್ತೋ ಯಜ್ಞಃ । ಪಾಂಕ್ತಃ ಪಶುಃ । ಪಾಂಕ್ತಃ ಪುರುಷಃ । ಪಾಂಕ್ತಮಿದಂ ಸರ್ವಂ ಯದಿದಂ ಕಿಂ ಚ । ತದಿದಂ ಸರ್ವ-ಮಾಪ್ನೋತಿ ಯ ಏವಂ ವೇದ ।**

**॥ಇತಿ ಅವ್ಯಾಕೃತ ಬ್ರಾಹ್ಮಣಂ ॥**

**ಅನುವಾದ**—ಮೂಲರೂಪದಲ್ಲಿಯೂ ಶ್ರೀಹರಿ ಗೃಹಸ್ಥನಾಗಿದ್ದು ಯಜ್ಞಾದಿಗಳನ್ನು ಮಾಡಿದ್ದು ನಿಜ. ಏಕೆಂದರೆ, ಈ ಜಗತ್ತಿಗಿಂತ ಮೊದಲು ಪ್ರಲಯಕಾಲದಲ್ಲಿ ಪರಿಪೂರ್ಣನಾದ ನಾರಾಯಣನೊಬ್ಬನೇ ಇದ್ದನು. ಅವನು ಲಕ್ಷ್ಮಿಯೊಡನೆ ಕ್ರೀಡಿಸಲು ಇಚ್ಛಿಸಿದನು. ಕ್ರೀಡೆಯ ಅನಂತರ ಮಕ್ಕಳನ್ನು ಪಡೆಯುವೆನು ಎಂದು ಇಚ್ಛಿಸಿದನು. ಅದರಿಂದ ಬ್ರಹ್ಮಾದಿ ದೇವತೆಗಳು ಜನಿಸಿದರು. ಅನಂತರ ನನಗೆ ವಿತ್ತ ಉಂಟಾಗಲಿ ಎಂದೂ ಯಜ್ಞಾದಿ ಕರ್ಮಗಳನ್ನು ಮಾಡುವೆನೆಂದೂ ಇಚ್ಛಿಸಿದನು. ಅದರಂತೆ ಪಂಚ ಮಹಾಭೂತಗಳು, ಬ್ರಹ್ಮಾಂಡ,ಅದರೊಳಗಿರುವ ಲೋಕಗಳ ರೂಪವಾದ ವಿತ್ತವನ್ನು ಪಡೆದು ತನ್ನನ್ನೇ ಉದ್ದೇಶಿಸಿ ಯಜ್ಞಾದಿ ಕರ್ಮಗಳನ್ನು ಮಾಡಿದನು. ಎಲ್ಲರಿಂದಲೂ ಬಯಸಲ್ಪಡುವ ಸಂಪತ್ತು ಇಷ್ಟೇ. ಪತ್ನಿ, ಪುತ್ರ, ವಿತ್ತ ಮತ್ತು ಕರ್ಮ ಎಂದು. ಈ ನಾಲ್ಕಕ್ಕಿಂತ ಹೆಚ್ಚನ್ನು ಯಾರೂ ಇಚ್ಛಿಸುವುದಿಲ್ಲ. ಇಚ್ಛಿಸಿದರೂ ಹೊಂದಲು ಸಾಧ್ಯವಿಲ್ಲ. ಆದಕಾರಣ ಈಗಲೂ ಕೂಡ ಮದುವೆಯಾಗದೆ ಒಬ್ಬನೇ ಇರುವವನು ತನಗೆ ಹೆಂಡತಿಯು ದೊರೆಯಲೆಂದೂ, ಮಕ್ಕಳನ್ನು ಪಡೆಯುವೆನೆಂದೂ, ದ್ರವ್ಯವನ್ನು ಸಂಪಾದಿಸುವೆನೆಂದೂ, ಯಜ್ಞಾದಿ ಕರ್ಮವನ್ನು ಮಾಡುವೆನೆಂದೂ ಇಚ್ಛಿಸುತ್ತಾನೆ. ಅವನು ಎಲ್ಲಿಯವರೆಗೆ ಇವುಗಳಲ್ಲಿ ಒಂದೊಂದನ್ನು ಪಡೆಯುವುದಿಲ್ಲವೋ ಅಲ್ಲಿಯವರೆಗೆ ತನ್ನನ್ನು ಅಪೂರ್ಣನೆಂದು ತಿಳಿಯುತ್ತಾನೆ. ಹೆಂಡತಿ ಮೊದಲಾದುವನ್ನು ಪಡೆಯದಿದ್ದರೂ ಕೂಡಾ, ಹೀಗೆ ಚಿಂತನ ಮಾಡಿದರೆ ಪೂರ್ಣನೆನಿಸುತ್ತಾನೆ- 'ತನ್ನ ಸ್ವರೂಪ ಭೂತವಾದ ಮನಸ್ಸನ್ನು ತಾನೇ ಪತಿ ಎಂದೂ, ಸ್ವರೂಪಭೂತವಾದ ವಾಗಿಂದ್ರಿಯವನ್ನು ತನ್ನ ಪತ್ನಿಯೆಂದೂ, ಸ್ವರೂಪಭೂತ ಬಲವನ್ನು ಪುತ್ರನೆಂದೂ, ಸ್ವರೂಪಭೂತವಾದ ಕಣ್ಣನ್ನು ಮಾನುಷವಿತ್ತವೆಂದೂ ತಿಳಿಯಬೇಕು. ಏಕೆಂದರೆ ಕಣ್ಣಿನಿಂದಲೇ ಮಾನುಷವಿತ್ತವಾದ ಹಿರಣ್ಯಾದಿಗಳನ್ನು ಪಡೆಯುತ್ತಾನೆ. ಶ್ರೋತ್ರವನ್ನು ದೈವವಿತ್ತವೆಂದು ತಿಳಿಯಬೇಕು. ಏಕೆಂದರೆ ಶ್ರೋತ್ರದಿಂದ ದೈವವಿತ್ತರೂಪವಾದ ವಿದ್ಯೆಯನ್ನು ಶ್ರವಣ ಮಾಡುತ್ತಾನೆ. ಹೀಗೆ ತಿಳಿಯುವವನು ಇಂತಹ ಚಿಂತನವನ್ನೇ ಕರ್ಮವೆಂದು ತಿಳಿಯಬೇಕು. ಏಕೆಂದರೆ ಚಿಂತನದಿಂದಲೇ ಯಜ್ಞಾದಿ ಕರ್ಮವನ್ನು ಮಾಡುತ್ತಾನೆ. ಮನಸ್ಸು ಮೊದಲಾದವುಗಳನ್ನು ಪತ್ನೀ ಪುತ್ರಾದಿಗಳೆಂದು ಏಕೆ ಚಿಂತನೆ ಮಾಡಬೇಕೆಂದರೆ, ಪ್ರಸಿದ್ಧವಾದ ಯಜ್ಞವು ಕರ್ತನಾದ ತಾನು, ಪತ್ನೀ, ಪುತ್ರ, ದೈವವಿತ್ತ ಮತ್ತು ಮಾನುಷವಿತ್ತ ಈ ಐದರಿಂದಲೇ ನಡೆಸಲ್ಪಡುತ್ತದೆ.

ಯಜ್ಞ ಒಂದೇ ಅಲ್ಲ. ಯಜ್ಞಾಂಗವಾದ ಪಶು ಮತ್ತು ಋತ್ವಿಗಾದಿ ಪುರುಷರು ಕೂಡ ಮಾತೃ, ಪಿತೃ, ಅವರ ಕರ್ಮ, ಅನ್ನ ಮತ್ತು ಸ್ವಕರ್ಮ ಈ ಐದರಿಂದಲೇ ಉತ್ಪನ್ನ ರಾಗುವರು. ಯಜ್ಞಪಶು ಮತ್ತು ಪುರುಷರಷ್ಟೇ ಅಲ್ಲ. ಈ ಎಲ್ಲ ಪ್ರಾಣಿ ಸಮೂಹವೂ ಈ ಐದರಿಂದಲೇ ಉತ್ಪನ್ನವಾಗುವುವು. ಯಾರು ಬ್ರಹ್ಮಪದವಿಗೆ ಯೋಗ್ಯನಾಗಿದ್ದು ಮನಸ್ಸು ಮೊದಲಾದವುಗಳನ್ನು ಪತಿಪತ್ನೀಪುತ್ರಾದಿರೂಪದಿಂದ ತಿಳಿಯುತ್ತಾನೆಯೋ ಅವನು ಎಲ್ಲ ಜಗತ್ತಿಗೂ ಸ್ವಾಮಿಯಾಗುತ್ತಾನೆ. ಬ್ರಹ್ಮಪದವಿಗೆ ಯೋಗ್ಯನಾಗಿರದಿದ್ದರೆ ಸ್ವಯೋಗ್ಯ ಪದವಿಯನ್ನು ಪಡೆಯುತ್ತಾನೆ.

ಶ್ರೀಹರಿಯಂತೆ ಚತುರ್ಮುಖ ಬ್ರಹ್ಮನೂ ಗೃಹಸ್ಥನಾಗಿದ್ದು ಯಜ್ಞಾದಿಗಳನ್ನು ಮಾಡಿದ್ದಾನೆ. ಏಕೆಂದರೆ ಈ ಜಗತ್ತಿಗೆ ಸ್ವಾಮಿಯಾದ ಚತುರ್ಮುಖನು ಮೊದಲು ವಾಸು ದೇವನಿಂದ ಒಬ್ಬನೇ ಜನಿಸಿದನು. ಅವನು ಸರಸ್ವತಿಯೊಡನೆ ಕ್ರೀಡಿಸಲು ಬಯಸಿದ. ಮಕ್ಕಳನ್ನು ಪಡೆಯಬಯಸಿದ. ವಿತ್ತ ಸಿಗಲೆಂದೂ, ಯಜ್ಞಾದಿಕರ್ಮಗಳನ್ನು ಮಾಡುವೆ ನೆಂದೂ ಬಯಸಿದ. ಎಲ್ಲರೂ ಬಯಸುವುದು ಇಷ್ಟನ್ನೇ. ಹೆಚ್ಚಿಗೆ ಬಯಸಿದರೂ ಹೊಂದಲು ಸಾಧ್ಯವಿಲ್ಲ. ಆದ್ದರಿಂದ ಈಗಲೂ ಲೋಕದಲ್ಲಿ ಮದುವೆಯಾಗದೆ ಒಬ್ಬನೇ ಇರುವವನು ತನಗೆ ಹೆಂಡತಿ ಸಿಗಲಿ, ಮಕ್ಕಳಾಗಲಿ, ವಿತ್ತ ದೊರೆಯಲಿ, ಬಳಿಕ ಯಜ್ಞಾದಿಗಳನ್ನು ಮಾಡುವೆನೆಂದೇ ಬಯಸುತ್ತಾನೆ. ಚತುರ್ಮುಖನು ಇವುಗಳಲ್ಲಿ ಒಂದೊಂದನ್ನೂ ಎಲ್ಲಿಯವರೆಗೆ ಪಡೆಯಲಿಲ್ಲವೋ ಅಲ್ಲಿಯವರೆಗೂ ತನ್ನನ್ನು ಅಪೂರ್ಣನೆಂದೇ ಭಾವಿಸಿದನು. ಅವನು ಪೂರ್ಣನೆನಿಸಿದುದು ಹೀಗೆ- ಅವನು ಮೊದ ಲಿಗೆ ವಿಷ್ಣು ಪ್ರೀತ್ಯರ್ಥವಾಗಿ ಮಾನಸಯಜ್ಞವನ್ನು ಮಾಡುವೆನೆಂದು ಸಂಕಲ್ಪಿಸಿದನು. ಈ ಮಾನಸ ಯಜ್ಞದಲ್ಲಿ ಅವನು ತನ್ನ ವಾಗಿಂದ್ರಿಯವನ್ನು ಪತ್ನಿಯೆಂದೂ, ಬಲ ವನ್ನು ಪುತ್ರನೆಂದೂ ಚಕ್ಷುಸ್ಸನ್ನು ಮಾನುಷವಿತ್ತವೆಂದೂ, ಶ್ರೋತ್ರವನ್ನು ದೈವವಿತ್ತ ವೆಂದೂ, ತನ್ನ ದೇಹವೇ ಅಥವಾ ಈ ರೀತಿಯ ಚಿಂತನೆಯೇ ಕರ್ಮವೆಂದೂ ಭಾವಿಸಿ ದನು. ಹೀಗೆ ಮಾನಸವಾಗಿ ಭಗವದಾರಾಧನೆಯನ್ನು ಮಾಡಿದ ಮೇಲೆ ವಾಗಿಂದ್ರಿಯ ದಿಂದ ಸರಸ್ವತಿಯನ್ನು ಪಡೆದನು. ಬಲದಿಂದ ವಾಯುವನ್ನೂ, ಚಕ್ಷುಸ್ಸಿನಿಂದ ಮಾನುಷವಿತ್ತವೆಂದು ಕರೆಯಲ್ಪಡುವ ಹಿರಣ್ಮಯವಾದ ಲೋಕಗಳನ್ನೂ, ಶ್ರೋತ್ರ ದಿಂದ ದೈವವಿತ್ತವೆಂದು ಕರೆಯಲ್ಪಡುವ ಭಗವಂತನಿಂದ ಉಪದಿಷ್ಟವಾದ ಅಶೇಷ ವಿದ್ಯೆಗಳನ್ನೂ ಪಡೆದನು. ದೇಹದಿಂದಲೇ ಅಥವಾ ಚಿಂತನೆಯಿಂದಲೇ ಯಜ್ಞಾದಿ ಕರ್ಮಗಳನ್ನೂ ಸೃಷ್ಟಿ ಮಾಡಿದನು. ಲೋಕದಲ್ಲಿ ಯಜ್ಞವು ಪ್ರಾತಃಸವನ, ಮಾಧ್ಯಂದಿನ ಸವನ, ತೃತೀಯ ಸವನ ಮತ್ತು ಪೂರ್ವ, ಉತ್ತರ ಕರ್ಮ ಈ ಐದು ಅಂಗಗಳಿಂದ ಕೂಡಿದೆ. ಯಜ್ಞಾಂಗವಾದ ಪಶುವು ಮಧ್ಯಭಾಗ, ಶಿರಸ್ಸು, ಎರಡು ಪಾರ್ಶ್ವಗಳು ಮತ್ತು ಪುಚ್ಛ ಈ ಐದು ಅಂಗಗಳಿಂದ ಕೂಡಿದುದು. ಋತ್ವಿಗಾದಿ ಪುರುಷರು ನಾಲ್ಕು ದಿಕ್ಕುಗಳ ನಾಲ್ಕು ಭಾಗಗಳು ಮತ್ತು ಮಧ್ಯಭಾಗ ಈ ಐದರಿಂದ

ಕೂಡಿರುವರು. ಋತ್ವಿಗಾದಿಗಳು ಮಾತ್ರವಲ್ಲ ಪ್ರಾಣಿಸಮೂಹವೆಲ್ಲವೂ ಇದೇ ರೀತಿಯಲ್ಲಿ ಐದು ಭಾಗಗಳಿಂದ ಕೂಡಿವೆ. ವಾಗಾದಿ ಪಂಚಕವೂ, ಸವನತ್ರಯಾದಿ ಪಂಚಕವೂ ನಾರಾಯಣಾದಿ ಪಂಚಮೂರ್ತಿಗಳಿಂದ ಕೂಡಿದುದು ಎಂದು ಬ್ರಹ್ಮನು ಚಿಂತಿಸಿದನು. ಆದ್ದರಿಂದ ಈಗಲೂ ಕೂಡ ಯಾರು ವಾಗಾದಿಗಳನ್ನು ವಿಷ್ಣು ಪೂಜೋಪಯೋಗಿ ಪತ್ನೀಪುತ್ರಾದಿರೂಪದಿಂದಲೂ, ನಾರಾಯಣಾದಿ ಪಂಚಮೂರ್ತ್ಯಧಿಷ್ಠಾನರೂಪದಿಂದಲೂ ತಿಳಿಯುವನೋ, ಯಜ್ಞಾದಿಗಳಲ್ಲಿ ಸವನತ್ರಯಾದಿ ಪಂಚಕವನ್ನು ನಾರಾಯಣಾದಿ ಪಂಚಮೂರ್ತ್ಯಧಿಷ್ಠಾನರೂಪದಿಂದ ತಿಳಿಯುವನೋ ಅವನು ಪತ್ನೀಪುತ್ರಾದಿ ಪಂಚಕವನ್ನೂ ಕೊನೆಯಲ್ಲಿ ಮುಕ್ತಿಯನ್ನೂ ಪಡೆಯುತ್ತಾನೆ.

**ಶ್ರೀಹರಿಯ ಗೃಹಸ್ಥ ಧರ್ಮ :**

**ಭಾಷ್ಯ—ಏಕೋ ನಾರಾಯಣಃ ಪೂರ್ವಮಾಸೀಚ್ಛಾಯಾಂ ಸ ಐಚ್ಛತ ।**
**ವಿದ್ಯಮಾನಾಮಪಿ ಸದಾ ಭೋಗಾರ್ಥಂ ಪುರುಷೋತ್ತಮಃ ।**
**ನಿತ್ಯತ್ವೇಽಪ್ಯುಭಯೋರ್ದೇವೋಽವಿಯುಕ್ತಸ್ತು ತಯಾ ಯದಾ ।**
**ಏಕ ಇತ್ಯುಚ್ಯತೇ ದೇವ್ಯಾ ರಮಮಾಣಃ ಸುತಂ ವಿಭುಃ ।**
**ಐಚ್ಛದ್ ಬ್ರಹ್ಮಾ ತತೋ ಜಜ್ಞೇ ತತೋ ದೇವಾಶ್ಚ ಸರ್ವಶಃ ।**
**ಜಾತೇ ಪುತ್ರೇ ವಿತ್ತಮೈಚ್ಛದ್ ಭೂತಾನ್ಯಂಡಂ ತತೋಽಭವತ್ ।**
**ಅಂಡಸ್ಥಾಂಸ್ತ್ವಿಮೇ ಲೋಕಾಃ ಕುರ್ಯಾಂ ಕರ್ಮೇತಿ ಚೈಚ್ಛತ ।**
**ತತಸ್ತು ಕೃತವಾನ್ ಯಜ್ಞಂ ಸ್ವಸ್ಮೈ ಸ ಪುರುಷೋತ್ತಮಃ ।**
**ಆಹುರಾತ್ಮೇತಿ ತಂ ದೇವಂ ಪೂರ್ಣತ್ವಾತ್ ವಿಷ್ಣುಮವ್ಯಯಮ್ ।**
**ತಸ್ಮಾದದ್ಯಾಪಿ ಯಃ ಕಾಮೀ ಸ ಹ್ಯೇತಾವಂತಮಿಚ್ಛತಿ ।**

**ಅನುವಾದ**—ಪ್ರಳಯಕಾಲದಲ್ಲಿ ನಾರಾಯಣನೊಬ್ಬನೇ ಇದ್ದನು. ಆ ಪುರುಷೋತ್ತಮನು ಸದಾ ಸಮೀಪದಲ್ಲಿ ಇರುವವಳೇ ಆದ ಲಕ್ಷ್ಮಿಯನ್ನು ಸಂಭೋಗಕ್ಕಾಗಿ ಇಚ್ಛಿಸಿದನು. ಲಕ್ಷ್ಮೀ ನಾರಾಯಣರಿಬ್ಬರೂ ಅನಾದಿ ನಿತ್ಯರಾದರೂ ಯಾವಾಗ ಅವರು ಸಂಭೋಗ ಮಾಡದಿರುತ್ತಾರೋ ಆಗ ನಾರಾಯಣನು ಒಬ್ಬನೇ ಇರುವವನೆನಿಸುತ್ತಾನೆ. ಅವನು ದೇವಿಯ ಜೊತೆಯಲ್ಲಿ ಕ್ರೀಡಿಸಿ ಪುತ್ರನು ಜನಿಸಲಿ ಎಂದು ಇಚ್ಛಿಸಿದನು. ಆಗ ಬ್ರಹ್ಮನು ಜನಿಸಿದನು. ಅವನಿಂದ ಎಲ್ಲ ದೇವತೆಗಳೂ ಜನಿಸಿದರು. ಪುತ್ರಜನನವಾದಾಗ ದ್ರವ್ಯವನ್ನು ಇಚ್ಛಿಸಿದನು. ಅದರಿಂದ ಪೃಥಿವೀ ಮೊದಲಾದ ಪಂಚಭೂತಗಳೂ, ಬ್ರಹ್ಮಾಂಡವೂ, ಬ್ರಹ್ಮಾಂಡದೊಳಗೆ ಈ ಎಲ್ಲ ಲೋಕಗಳೂ ಉತ್ಪತ್ತಿ ಹೊಂದಿದವು. ಶ್ರೀಹರಿಯು ಕರ್ಮವನ್ನು ಮಾಡಬೇಕೆಂದೂ ಇಚ್ಛಿಸಿದನು. ಅನಂತರ ಪುರುಷೋತ್ತಮನಾದ ಅವನು ತನ್ನನ್ನೇ ಉದ್ದೇಶಿಸಿ

ಯಜ್ಞವನ್ನು ಮಾಡಿದನು. ನಾಶರಹಿತನಾದ ವಿಷ್ಣು ಪೂರ್ಣನಾದುದರಿಂದ ಅವನನ್ನು ಆತ್ಮನೆಂದು ಕರೆಯುತ್ತಾರೆ. ಶ್ರೀಹರಿಯು ಇಷ್ಟನ್ನೇ ಬಯಸಿದುದರಿಂದ ಈಗಲೂ ಕಾಮನೆ ಉಳ್ಳವನು ಪತ್ನೀಪುತ್ರಾದಿ ಚತುಷ್ಟಯವನ್ನೇ ಬಯಸುತ್ತಾನೆ.

**ಭಾಷ್ಯ—ದೈವಂ ವಿತ್ತಂ ಸುಖಾದ್ಯಂ ಹಿ ಮಿತ್ರಾದ್ಯಂ ಮಾನುಷಂ ತು ಯತ್ ।**
**ಇದಾನೀಮಪಿ ತಸ್ಮಾದ್ಧಿ ಕಾಮಯೇದೇವಮೇವ ತು ।**
**ಯಃ ಕಶ್ಚಿತ್ ಪುರುಷೋ ವಾಽಪಿ ತದ್ವೈಕಲ್ಯಾದಕೃತ್ಸ್ನವಾನ್ ।**
**ಏಕಾಕಿನೋಽಪ್ಯವೈಕಲ್ಯಂ ಯಥೈವ ಸ್ಯಾತ್ ತಥಾ ಶೃಣು ।**
**ಸ್ವಾತ್ಮನಸ್ತ್ವಪೃಥಗ್ ಯತ್ತದ್ ಜ್ಞಾನರೂಪಂ ಮನಃ ಪರಮ್ ।**
**ಮುಕ್ತಾವಪಿ ನ ಹೇಯಂ ಯತ್ ತತ್ ಸ್ವಾತ್ಮೇತ್ಯೇವ ಚಿಂತಯೇತ್।**
**ಜಾಯಾಂ ತು ತಾದೃಶೀಂ ವಾಚಂ ಬಲಂ ತಾದೃಕ್ ಸ್ವಮಾತ್ಮಜಂ ।**
**ಶ್ರೋತ್ರಂ ಚಕ್ಷುಶ್ಚ ತಾದೃಗ್ ಯದ್ ವಿತ್ತಂ ದೈವಂ ಚ ಮಾನುಷಂ।**
**ಏವಂಭೂತಂ ಚಿಂತನಂ ಯತ್ ತತ್ ಕರ್ಮೇತ್ಯೇವ ಚಿಂತಯೇತ್ ।**
**ಏತತ್ ಷಟ್ಕಂ ಚ ಹರಯೇ ಸರ್ವೇಶಾಯ ಸಮರ್ಪಯೇತ್ ।**

**ಅನುವಾದ**—ಜೀವರು ಬಯಸುವ ವಿತ್ತ, ಪರಮಾತ್ಮನು ಬಯಸುವಂಥ ಪಂಚಭೂತಗಳು ಮತ್ತು ಬ್ರಹ್ಮಾಂಡರೂಪವಾದುದಲ್ಲ. ಯಥಾರ್ಥಜ್ಞಾನ ಮತ್ತು ವೇದಾದಿ ಶಾಸ್ತ್ರಗಳು ದೈವವಿತ್ತವೆನಿಸುತ್ತವೆ. ಸು–ಸಮೀಚೀನವಾದ, ಖಂ–ಜ್ಞಾನ ಎಂಬ ವ್ಯುತ್ಪತ್ತಿಯಿಂದ ಸುಖ ಎಂದರೆ ಯಥಾರ್ಥ ಜ್ಞಾನ. ಅಥವಾ, ಸುಖಸ್ಯ– ಸುಖಕ್ಕೆ, ಆದ್ಯಂ–ಸಾಧನವಾದುದು ಎಂಬ ವ್ಯುತ್ಪತ್ತಿಯಿಂದ ಸುಖಾದ್ಯಂ ಎಂದರೆ ವೇದಾದಿ ಶಾಸ್ತ್ರಗಳು. ಸ್ನೇಹಿತರು, ಹಿರಣ್ಯ ಮೊದಲಾದವು ಮಾನುಷವಿತ್ತವೆನಿಸುತ್ತವೆ. ಆದ್ದರಿಂದ ಈಗಲೂ ಸಹ ಕಾಮನೆ ಉಳ್ಳ ಪ್ರತಿಯೊಬ್ಬ ಪುರುಷನೂ ಶ್ರೀಹರಿಯಂತೆ ಹೀಗೆಯೇ ಇಚ್ಛಿಸುತ್ತಾನೆ. ಇವುಗಳಲ್ಲಿ ಯಾವುದೊಂದನ್ನು ಪಡೆಯದಿದ್ದರೂ ಅಪೂರ್ಣನಾಗುತ್ತಾನೆ. ಏಕಾಕಿಯಾಗಿರುವವನೂ ಪೂರ್ಣತೆಯನ್ನು ಹೊಂದುವ ಉಪಾಯವನ್ನು ಕೇಳು. ತನ್ನ ಸ್ವರೂಪಭೂತವಾಗಿದ್ದು ಮುಕ್ತಿಯಲ್ಲಿಯೂ ತ್ಯಜಿಸಲಾಗದಿರುವ ಉತ್ತಮವಾದ ಚಿನ್ಮಯವಾದ ಮನಸ್ಸನ್ನು ತಾನೇ ಎಂದು ತಿಳಿಯಬೇಕು. ಜಡಮನಸ್ಸು ಅನಿತ್ಯವಾದುದು ಮತ್ತು ಜೀವನಿಗಿಂತ ಭಿನ್ನವಾದುದು. ಅದನ್ನು ಎಂದೂ ತಾನು ಎಂದು ಅಭೇದ ಚಿಂತನೆ ಮಾಡಬಾರದು. ತನ್ನ ಸ್ವರೂಪಭೂತವಾದ ವಾಗಿಂದ್ರಿಯವನ್ನು ತನ್ನ ಪತ್ನಿ ಎಂತಲೂ, ಸ್ವರೂಪಭೂತವಾದ ಬಲವನ್ನು ಪುತ್ರನೆಂತಲೂ, ಸ್ವರೂಪಭೂತವಾದ ಶ್ರೋತ್ರವನ್ನು ದೈವವಿತ್ತವೆಂತಲೂ, ಸ್ವರೂಪಭೂತವಾದ ಚಕ್ಷುಸ್ಸನ್ನು ಮಾನುಷವಿತ್ತವೆಂತಲೂ, ಇಂತಹ ಚಿಂತನೆಯನ್ನೇ ಕರ್ಮವೆಂತಲೂ ಚಿಂತಿಸಬೇಕು. ಮನಸ್ಸು, ವಾಕ್, ಬಲ, ಶ್ರೋತ್ರ, ಚಕ್ಷುಸ್ಸು ಮತ್ತು

**ಭಾಷ್ಯ**—ಏವಮಾತ್ಮಾ ಪ್ರಿಯಾ ಪುತ್ರೋ ವಿತ್ತಂ ದ್ವಿವಿಧಮಿತ್ಯಪಿ ।
ಪಂಚಭಿಃ ಕ್ರಿಯತೇ ಯಜ್ಞಃ ಪುರುಷಃ ಪಶುರೇವ ಚ ।
ಮಾತಾಪಿತೃಭ್ಯಾಮನ್ಯೇನ ತಯೋಃ ಪೂರ್ವೇಣ ಕರ್ಮಣಾ ।
ಜನ್ಯಸ್ಯ ಕರ್ಮಣಾ ಚೈವ ಸಾಧ್ಯಃ ಪಂಚಭಿರೇವ ತು ।
ಏವಂ ಹಿ ಪ್ರಾಣಿನೋಽನ್ಯೇಽಪಿ ಜಾಯಂತೇ ನಾತ್ರ ಸಂಶಯಃ ।
ಏತಾಮುಪಾಸನಾಂ ಕುರ್ಯಾದ್ ಯೋ ಬ್ರಾಹ್ಮಂ ಪದಮಾಪ್ಯ ಚ ।
ಸರ್ವಸ್ಯಾಸ್ಯ ಪತಿರ್ಭೂಯಾದ್ ವಿಷ್ಣೋರೇವ ಪ್ರಸಾದತಃ ।
ಬ್ರಾಹ್ಮೇ ಪದೇ ತ್ವಯೋಗ್ಯಾ ಯೇ ತೇ ದೇವಪದಮಾಪ್ನುಯುಃ ।
ತಸ್ಯಾಪ್ಯಯೋಗ್ಯಾ ಲೋಕಸ್ಯ ಭವೇಯುರಧಿಕಂ ಪ್ರಿಯಾಃ ।
ಕ್ರಮಾನ್ಮುಕ್ತಿಂ ವ್ರಜೇಯುಶ್ಚ ಕೇಶವಸ್ಯ ಪ್ರಸಾದತಃ ।

ಇತಿ ಮಾಹಾತ್ಮ್ಯೇ ।

ಅವಿಶೇಷೇಣೇತೋಽನ್ಯತ್ ಸ್ಯಾದಿತೀಚ್ಛನ್ನಪಿ ನ ವಿಂದೇತ್ । ತತೋಽನ್ಯಸ್ಯಾಭಾವಾತ್ ।

**ಅನುವಾದ**—ತಾನು, ಪತ್ನೀ, ಪುತ್ರ, ದೈವವಿತ್ತ, ಮಾನುಷವಿತ್ತ ಈ ಐದರಿಂದ ಯಜ್ಞವು ಮಾಡಲ್ಪಡುತ್ತದೆ. ತಾಯಿ, ತಂದೆ, ಅನ್ನ, ತಾಯಿತಂದೆಗಳ ಪೂರ್ವಕರ್ಮ, ತನ್ನ ಕರ್ಮ ಈ ಐದರಿಂದಲೇ ಪುರುಷನೂ ಪಶುವೂ ಹುಟ್ಟುತ್ತಾರೆ. ಹೀಗೆಯೇ ಈ ಐದರಿಂದಲೇ ಬೇರೆ ಪ್ರಾಣಿಗಳೂ ಹುಟ್ಟುತ್ತವೆ. ಇದರಲ್ಲಿ ಸಂಶಯವಿಲ್ಲ. ಬ್ರಹ್ಮಪದವಿಗೆ ಯೋಗ್ಯನಾದ ಯಾರು ಹೀಗೆ ಉಪಾಸನೆ ಮಾಡುತ್ತಾನೆಯೋ ಅವನು ವಿಷ್ಣುವಿನ ಅನುಗ್ರಹದಿಂದ ಬ್ರಹ್ಮಪದವಿಯನ್ನು ಹೊಂದಿ ಸರ್ವರಿಗೂ ಅಧಿಪತಿಯಾಗುತ್ತಾನೆ. ಬ್ರಹ್ಮ ಪದವಿಗೆ ಅಯೋಗ್ಯನಾಗಿದ್ದು ಈ ಉಪಾಸನೆಯನ್ನು ಮಾಡುವವನು ದೇವಪದವಿಯನ್ನು ಹೊಂದುವನು. ದೇವಪದವಿಗೂ ಅಯೋಗ್ಯರಾಗಿದ್ದು ಈ ಉಪಾಸನೆ ಮಾಡುವವರು ಲೋಕದಲ್ಲಿ ಅತ್ಯಂತ ಜನಪ್ರಿಯರಾಗುತ್ತಾರೆ. ಮತ್ತು ಕಾಲಕ್ರಮದಲ್ಲಿ ಕೇಶವನ ಅನುಗ್ರಹದಿಂದ ಮುಕ್ತಿಯನ್ನು ಪಡೆಯುತ್ತಾರೆ ಎಂದು ಮಾಹಾತ್ಮ್ಯ ಎಂಬ ಗ್ರಂಥದಲ್ಲಿ ಹೇಳಿದೆ.

ತನಗೆ ಇಂತಹ ವಸ್ತು ಸಿಗಲಿ ಎಂದು ವಿಶೇಷವಾಗಿ ನಿರ್ದೇಶಮಾಡದೆ ಹೆಂಡತಿ ಮೊದಲಾದ ವಸ್ತುಗಳಿಗಿಂತ ಬೇರೆ ಪದಾರ್ಥವು ಸಿಗಲಿ ಎಂದು ಇಚ್ಛಿಸಿದರೂ ಅಂತಹ ವಸ್ತುವು ಯಾವುದೂ ಇಲ್ಲವಾದ್ದರಿಂದ ಅದನ್ನೂ ಪಡೆಯಲಾರನು.

**ಭಾಷ್ಯ**—ಆತ್ಮಾ ಮನಶ್ಚಿಂತನಂ ಚ ಶೇಮುಷೀ ಬುದ್ಧಿರಿತ್ಯಪಿ ।
ಏಕಾರ್ಥ ವಾಚಕಾ ಧೀಶ್ಚ ಮನೀಷಾ ತಪ ಇತ್ಯಪಿ ।

ಇತಿ ಶಬ ತತೇ ೧ ।

**ಸರ್ವಾಶ್ರಯಂ ಚ ಪಿತರಂ ಸರ್ವೇಷಾಮಧಿಕಂ ಗುಣೈಃ ।**
**ಅವಿದಿತ್ವಾ ಮಹತ್ ಪುಣ್ಯಂ ಕೃತ್ವಾ ನ ಫಲಭಾಗ್ ಭವೇತ್ ।**
**ತಥಾ ಜ್ಞಾತ್ವಾ ಹರಿಂ ಯಸ್ತು ಕುರ್ಯಾತ್ ಕರ್ಮ ಸದೋದಿತಮ್ ।**
**ಅನಂತಫಲವಾನ್ ಸ ಸ್ಯಾತ್ ಪ್ರಾಪ್ನೋತಿ ಚ ಮನೋಗತಮ್ ।**
**ಇತಿ ಬೃಹಚ್ಛ್ರುತೌ ।**

**ಅನುವಾದ**—ಆತ್ಮಾ ಎಂಬ ಶಬ್ದಕ್ಕೆ ಚಿಂತನೆ ಎಂದು ಅರ್ಥಹೇಳಿದುದು ಯುಕ್ತವೆ. ಏಕೆಂದರೆ, ಆತ್ಮಾ ಮನಸ್ಸು ಚಿಂತನ ಶೇಮುಷೀ ಬುದ್ಧಿ ಧೀ ಮನೀಷಾ ತಪಸ್ಸು ಇವೆಲ್ಲಾ ಏಕಾರ್ಥವಾಚಕ ಶಬ್ದಗಳು ಎಂದು ಶಬ್ದತತ್ತ್ವದಲ್ಲಿ ಹೇಳಿದೆ.

ಸ ಏನಮವಿದಿತೋ ನ ಭುನಕ್ತಿ ಎಂದು ಜ್ಞಾನಕ್ಕೆ ಮೋಕ್ಷಸಾಧನತ್ವವು ಸ್ಪಷ್ಟವಾಗಿ ಉಪನಿಷತ್ತಿನಲ್ಲಿ ಹೇಳಿದೆ. ಪರಮಾತ್ಮನು ಸರ್ವಾಶ್ರಯನೆಂದೂ, ಸರ್ವರಿಗೂ ತಂದೆ ಎಂದೂ, ಸರ್ವಗುಣಪರಿಪೂರ್ಣನೆಂದೂ ತಿಳಿಯದೆ ಮಹತ್ತಾದ ಪುಣ್ಯವನ್ನಾಚರಿಸಿದರೂ ಅದರ ಫಲವನ್ನು ಪಡೆಯುವುದಿಲ್ಲ. ಪರಮಾತ್ಮನನ್ನು ಹಾಗೆ ತಿಳಿದು ವೇದೋದಿತವಾದ ಕರ್ಮವನ್ನು ಮಾಡುವವನು ಅನಂತಫಲವನ್ನು ಪಡೆದು ತನ್ನ ಮನೋಗತವನ್ನೆಲ್ಲಾ ಹೊಂದುತ್ತಾನೆ ಎಂದು ಬೃಹಚ್ಛ್ರುತಿಯಲ್ಲಿಯೂ ಹೇಳಿದೆ.

**ಭಾಷ್ಯ—ಪರಮಾತ್ಮೈವ ಗೃಹಸ್ಥಾಂತರ್ಯಾಮಿತಯಾ ಸರ್ವೇಷಾಂ ಲೋಕಃ ಆಶ್ರಯಃ ।**

**ಗೃಹಸ್ಥಾಂತರ್ಗತೋ ವಿಷ್ಣುರ್ಯಜ್ಞೈರ್ದೇವಾಶ್ರಯೋ ಭವೇತ್ ।**
**ಸ್ವಾಧ್ಯಾಯೇ ಋಷಿಸಂಸ್ಕೃತ್ಯಾ ಋಷೀಣಾಂ ಚ ಸದಾಽಶ್ರಯಃ ।**
**ಸ್ವಾಧ್ಯಾಯಾತ್ ಶ್ರಾದ್ಧತಶ್ಚೈವ ಪಿತೄಣಾಮನ್ನದಾನತಃ ।**
**ಮನುಷ್ಯಾದೇರತೋ ವೇತ್ತಿ ಯ ಏವಂ ಸತತಂ ಗೃಹೀ ।**
**ಸ್ವಸ್ಯಾಂತರ್ಯಾಮಿಣಂ ವಿಷ್ಣುಂ ಸುರಾದೀನ್ ಪೂಜಯೇತ್ ತಥಾ ।**
**ತಸ್ಯಾವಿನಾಶಮಿಚ್ಛಂತಿ ಸ್ವಾಶ್ರಯಸ್ಯ ಯಥಾ ಸುರಾಃ ।**
**ತದೇತತ್ ಸರ್ವಶಾಸ್ತ್ರೇಷು ಋಷಿಸಂಘೈರ್ವಿಚಾರಿತಮ್ ।**
**ಇತಿ ನಾರಾಯಣಶ್ರುತೌ ।**

**ನರಾಣಾಮಾಶ್ರಯಾ ದೇವಾ ನ ದೇವಾನಾಂ ನರಃ ಕ್ವಚಿತ್ ।**
**ನರಾಣಾಂ ಚ ಸುರಾಣಾಂ ಚ ಗತಿರೇಕೋ ಜನಾರ್ದನಃ । ಇತಿ ಚ ।**

**ಅನುವಾದ**—ಪರಮಾತ್ಮನೇ ಗೃಹಸ್ಥಾಂತರ್ಯಾಮಿಯಾಗಿ ಸರ್ವರಿಗೂ ಲೋಕ, ಅಂದರೆ ಆಶ್ರಯನಾದವನು. ಕೇವಲ ಗೃಹಸ್ಥನಲ್ಲ.

'ಗೃಹಸ್ಥಾಂತರ್ಗತನಾದ ವಿಷ್ಣುವು ಯಜ್ಞಗಳನ್ನು ಮಾಡುವುದರಿಂದ

ದೇವತೆಗಳಿಗೂ, ವೇದಾಧ್ಯಯನ ಕಾಲದಲ್ಲಿ ಋಷಿಗಳನ್ನು ಸ್ಮರಣೆ ಮಾಡಿ ವೇದಾಧ್ಯಯನ ಮಾಡುವುದರಿಂದ ಋಷಿಗಳಿಗೂ, ಶ್ರಾದ್ಧವನ್ನು ಮಾಡುವುದರಿಂದ ಪಿತೃಗಳಿಗೂ, ಅನ್ನ ತೃಣ ಉದಕಾದಿ ದಾನವನ್ನು ಮಾಡುವುದರಿಂದ ಮನುಷ್ಯ ಪ್ರಾಣಿಗಳಿಗೂ ಸರ್ವದಾ ಆಶ್ರಯನಾಗಿದ್ದಾನೆ. ಆದ್ದರಿಂದ ಯಾವ ಗೃಹಸ್ಥನು ತನಗೆ ಅಂತರ್ಯಾಮಿಯಾದ ವಿಷ್ಣುವನ್ನು ನಿರಂತರವಾಗಿ ಈ ರೀತಿ ತಿಳಿದು ದೇವತೆಗಳನ್ನು ಪೂಜಿಸುತ್ತಾನೆಯೋ ಅವನಿಗೆ ವಿನಾಶವು ಬರಬಾರದೆಂದು ದೇವತೆಗಳು ಇಚ್ಛಿಸುತ್ತಾರೆ. ತಮಗೆ ಆಶ್ರಯರಾದ ರಾಜರುಗಳಿಗೆ ವಿನಾಶವು ಬರಬಾರದೆಂದು ಪ್ರಜೆಗಳು ಹೇಗೆ ಇಚ್ಛಿಸುತ್ತಾರೆಯೋ ಹಾಗೆ. ಋಷಿಗಳೆಲ್ಲರೂ ಎಲ್ಲ ಶಾಸ್ತ್ರವನ್ನೂ ವಿಚಾರಮಾಡಿ ವಿಷ್ಣುವೇ ಸರ್ವಾಶ್ರಯನೆಂದು ನಿರ್ಣಯಿಸಿದ್ದಾರೆ' ಎಂದು ನಾರಾಯಣಶ್ರುತಿಯಲ್ಲಿ ಹೇಳಿದೆ.

'ಮನುಷ್ಯರಿಗೆ ಆಶ್ರಯರಾದವರು ದೇವತೆಗಳು. ದೇವತೆಗಳಿಗೆ ಮನುಷ್ಯರು ಎಂದೂ ಆಶ್ರಯರಾಗಲಾರರು. ದೇವತೆಗಳಿಗೂ ಮತ್ತು ಮನುಷ್ಯರಿಗೂ ಜನಾರ್ದನನೊಬ್ಬನೇ ಆಶ್ರಯ' ಎಂದೂ ಹೇಳಿದೆ.

**ಚತುರ್ಮುಖನ ಗೃಹಸ್ಥಧರ್ಮ :**

**ಭಾಷ್ಯ—ಆತ್ಮಾ ಬ್ರಹ್ಮಾ ।**

**ಆತ್ಮಾ ತು ಜಗತಾಂ ಬ್ರಹ್ಮಾ ತಸ್ಯಾತ್ಮಾ ಭಗವಾನ್ ಹರಿಃ ।**
**ಸ ಏವ ಜಾತಃ ಪ್ರಥಮಂ ವಾಸುದೇವಾತ್ ಚತುರ್ಮುಖಃ ।**
**ಸೋऽಕಾಮಯತ ಭಾರ್ಯಾ ಮೇ ಸ್ಯಾತ್ ಪುತ್ರಸ್ತದನಂತರಮ್ ।**
**ತತೋ ವಿತ್ತಂ ಮಮ ಸ್ಯಾಚ್ಚ ಕರ್ಮ ಕುರ್ಯಾಂ ತತೋ ಹರೇಃ ।**
**ಇತಿ ಸೋऽಪಿ ನ ತಾನ್ಯಾಪ ತತೋऽಪೂರ್ಣತ್ವಮಾತ್ಮನಃ ।**
**ಮತ್ವಾ ಪೂರ್ಣತ್ವಸಿದ್ಧ್ಯರ್ಥಂ ಭಾರ್ಯಾಂ ವಾಚಮಕಲ್ಪಯತ್ ।**
**ಪ್ರಾಣಂ ಪುತ್ರಂ ತಥಾ ವಿತ್ತಂ ಚಕ್ಷುರ್ಬಾಹ್ಯಮಥಾऽಂತರಮ್ ।**
**ಜ್ಞಾನಾಖ್ಯಂ ಶ್ರೋತ್ರಮೇವಾಸೌ ಕರ್ಮ ಸ್ವಾತ್ಮಾನಮೇವ ತು ।**
**ಏವಂ ಸ ಮಾನಸೇ ಯಜ್ಞೇ ತ್ವಯಜತ್ ಕೇಶವಂ ವಿಭುಮ್ ।**
**ತತೋऽಸ್ಯ ವಾಚಃ ಸಂಭೂತಾ ಭಾರ್ಯಾ ತಸ್ಯ ಸರಸ್ವತೀ ।**
**ಪುತ್ರಃ ಪ್ರಾಣಾದಭೂದ್ ವಾಯುಃ ದೃಶೋ ಲೋಕಾ ಹಿರಣ್ಮಯಾಃ ।**
**ತಸ್ಯಾಪರೋಕ್ಷತಾಂ ಜಾತೋ ಭಗವಾನ್ ಪುರುಷೋತ್ತಮಃ ।**
**ಸರ್ವವಿದ್ಯಾ ದದೌ ತಾಶ್ಚ ಶ್ರೋತ್ರೇಣ ಜಗೃಹೇ ವಿಭುಃ ।**
**ಆತ್ಮನಾ ಸರ್ವಕರ್ಮಾಣಿ ಚಕಾರ ಭಗವತ್ಪರಃ ।**

**ಪುರಾऽಸೀನ್ಮನ ಏವಾಸ್ಯ ತೇನೇದಂ ಪಂಚಕಂ ವಿಭುಃ ।**
**ಅವಾಪ ಕರ್ಮಪರ್ಯಂತಂ ದೇಹಾಂತಾತ್ ಪಂಚಕಾತ್ ಸ್ವಯಮ್ ।**

**ಅನುವಾದ**—ಚತುರ್ಮುಖ ಬ್ರಹ್ಮನ ಪರವಾಗಿಯೂ ಈ ಮಂತ್ರವನ್ನು ಗ್ರಹಿಸಬೇಕು. ಇಲ್ಲಿ ಆತ್ಮಾ ಎಂದರೆ ಚತುರ್ಮುಖ ಬ್ರಹ್ಮನೆಂದೂ ಅರ್ಥ ಇಟ್ಟುಕೊಳ್ಳಬೇಕು. ಏಕೆಂದರೆ 'ಜಗತ್ತಿಗೆ ಬ್ರಹ್ಮನು ಸ್ವಾಮಿ. ಅವನಿಗೆ ಭಗವಂತನಾದ ಶ್ರೀಹರಿಯು ಸ್ವಾಮಿ. ವಾಸುದೇವರೂಪಿಯಾದ ಶ್ರೀಹರಿಯಿಂದ ಬ್ರಹ್ಮನು ಮೊದಲು ಜನಿಸಿದನು. ಅವನು ತನಗೆ ಪತ್ನಿಯು ದೊರೆಯಲೆಂದೂ, ಅನಂತರ ಪುತ್ರನು ಜನಿಸಲೆಂದೂ, ವಿತ್ತವು ದೊರೆಯಲೆಂದೂ, ಅನಂತರ ಶ್ರೀಹರಿಪೂಜಾತ್ಮಕವಾದ ಯಜ್ಞಾದಿ ಕರ್ಮಗಳನ್ನು ಮಾಡುವೆನೆಂದೂ ಬಯಸಿದನು. ಹೀಗೆ ಬಯಸಿದರೂ ಅವುಗಳನ್ನು ಪಡೆಯದೆ ತನ್ನನ್ನು ಅಪೂರ್ಣನೆಂದು ಭಾವಿಸಿದನು. ಅನಂತರ ಪೂರ್ಣತ್ವವನ್ನು ಪಡೆಯುವುದಕ್ಕಾಗಿ ತನ್ನ ಸ್ವರೂಪಭೂತವಾದ ವಾಗಿಂದ್ರಿಯವನ್ನು ಪತ್ನಿಯೆಂದೂ, ಸ್ವರೂಪಭೂತವಾದ ಬಲವನ್ನು ಪುತ್ರನೆಂದೂ ಚಕ್ಷುರಿಂದ್ರಿಯವನ್ನು ಬಾಹ್ಯವಾದ ಮನುಷ್ಯವಿತ್ತವೆಂದೂ, ಶ್ರೋತ್ರೇಂದ್ರಿಯವನ್ನು ಆಂತರವಾದ ಜ್ಞಾನರೂಪವಾದ ದೈವವಿತ್ತವೆಂದೂ, ತನ್ನ ಚಿಂತನಶೀಲವಾದ ಮನಸ್ಸನ್ನು ಯಜ್ಞಾದಿ ಕರ್ಮವೆಂದೂ ಉಪಾಸನೆ ಮಾಡಿದನು. ಹೀಗೆ ವಾಗಾದಿ ಪಂಚಕದಿಂದ ಅವನು ಮಾನಸಯಜ್ಞದಲ್ಲಿ, ವಿಭುವಾದ ಕೇಶವನನ್ನು ಆರಾಧಿಸಿದನು. ಭಗವಂತನನ್ನು ಆರಾಧಿಸಿದುದರಿಂದ ಉಂಟಾದ ಅವನ ಅನುಗ್ರಹದಿಂದ ತನ್ನ ವಾಗಿಂದ್ರಿಯದಿಂದ ಪತ್ನಿಯಾದ ಸರಸ್ವತಿಯನ್ನೂ, ಬಲದಿಂದ ಪುತ್ರನಾದ ವಾಯುವನ್ನೂ, ಚಕ್ಷುಸ್ಸಿನಿಂದ ಹಿರಣ್ಮಯವಾದ ಲೋಕಗಳನ್ನೂ, ಶ್ರೋತ್ರದಿಂದ ಜ್ಞಾನವನ್ನೂ ಪಡೆದನು. ಅದು ಹೇಗೆಂದರೆ, ಅವನಿಗೆ ಭಗವಂತನಾದ ಪುರುಷೋತ್ತಮನು ಪ್ರತ್ಯಕ್ಷನಾಗಿ ಎಲ್ಲ ವಿದ್ಯೆಗಳನ್ನೂ ಉಪದೇಶಿಸಿದನು. ಅದೆಲ್ಲವನ್ನೂ ಬ್ರಹ್ಮನು ಕಿವಿಯಿಂದ ಕೇಳಿ ಪಡೆದನು. ಭಗವಂತನಲ್ಲಿ ಆಸಕ್ತನಾದ ಬ್ರಹ್ಮನು ತನ್ನ ಚಿಂತನಶೀಲ ಮನಸ್ಸಿನಿಂದ ಸರ್ವಕರ್ಮಗಳನ್ನೂ ಮಾಡಿದನು. ಬ್ರಹ್ಮನಿಗೆ ಮೊದಲು ಚಿಂತನಶೀಲವಾದ ಮನಸ್ಸು ಮಾತ್ರ ಇದ್ದಿತು. ಪತ್ನೀ ಪುತ್ರಾದಿಗಳಿರಲಿಲ್ಲ. ಆ ಚಿಂತನಶೀಲವಾದ ಮನಸ್ಸಿನಿಂದಲೇ ಎಂದರೆ, ಮಾನಸಯಜ್ಞದಿಂದಲೇ ವಾಕ್ ಪ್ರಾಣ ಚಕ್ಷುಸ್ಸು ಶ್ರೋತ್ರ ಮತ್ತು ದೇಹ ಎಂಬ ಪಂಚಕದಿಂದ ಪತ್ನೀ, ಪುತ್ರ, ಮಾನುಷವಿತ್ತ, ದೈವವಿತ್ತ ಮತ್ತು ಕರ್ಮ ಎಂಬ ಪಂಚಕವನ್ನೂ ಪಡೆದನು.

**ಭಾಷ್ಯ—ತಸ್ಮಾದದ್ಯಾಪಿ ಯೋ ವಿದ್ವಾನ್ ಉಪಾಸ್ತೇ ಪಂಚಕಂ ತಥಾ ।**
**ವಿಷ್ಣೂಪಕರಣತ್ವೇನ ಸ ಇದಂ ಸರ್ವಮಾಪ್ಸ್ಯತಿ ।**
**ಮುಕ್ತಿಶ್ಚಾಂತೇ ಭವತ್ಯಸ್ಯ ಪಂಚಾನಾಂ ದೇವತಾಂ ಹರಿಂ ।**

**ನಾರಾಯಣಂ ವಾಸುದೇವಂ ತಥಾ ಸಂಕರ್ಷಣಂ ವಿಭುಮ್ ।**
**ಪ್ರದ್ಯುಮ್ನಂ ಚಾನಿರುದ್ಧಂ ಚ ಸ್ಮರತೋ ನಿತ್ಯಮೇವ ತು ।**
**ಸವನತ್ರಯಂ ತಥಾ ಪೂರ್ವಮುತ್ತರಂ ಚೇತಿ ಪಂಚಕಮ್ ।**
**ಯಜ್ಞೇ ಮಧ್ಯಂ ಶಿರಃ ಪಕ್ಷೌ ಪುಚ್ಛಂ ಪಶುಷು ಪೂರುಷೇ ।**
**ಚತುರ್ದಿಶಂ ತಥಾ ಮಧ್ಯಮಿತಿ ಸರ್ವತ್ರ ಪಂಚಕಮ್ । ಇತಿ ಚ ।**

**॥ ಇತ್ಯವ್ಯಾಕೃತ ಬ್ರಾಹ್ಮಣಮ್ ॥**

**ಅನುವಾದ**—ಆದ್ದರಿಂದ ಈಗಲೂ ಸಹ ಯಾವ ಜ್ಞಾನಿಯು ವಾಗಾದಿ ಪಂಚಕವನ್ನು ಪತ್ನೀ ಪುತ್ರಾದಿ ರೂಪದಿಂದ ಚಿಂತಿಸಿ ಮಾನಸ ಯಜ್ಞದಿಂದ ಶ್ರೀಹರಿಯನ್ನು ಉಪಾಸನೆ ಮಾಡುತ್ತಾನೆಯೋ ಅವನು ಪತ್ನೀ ಪುತ್ರಾದಿ ಸಮಸ್ತವನ್ನೂ ಪಡೆಯುತ್ತಾನೆ. ಕೊನೆಯಲ್ಲಿ ಮುಕ್ತಿಯನ್ನು ಪಡೆಯುತ್ತಾನೆ. ಕೇವಲ ಮಾನಸ ಯಜ್ಞದಿಂದ ಮಾತ್ರವೇ ಅಲ್ಲ, ವಾಗಾದಿ ಪಂಚಕಗಳಿಗೆ ದೇವತೆಗಳಾದ ನಾರಾಯಣ ವಾಸುದೇವ ಸಂಕರ್ಷಣ ಪ್ರದ್ಯುಮ್ನ ಮತ್ತು ಅನಿರುದ್ಧರನ್ನು ಯಾವಾಗಲೂ ಸ್ಮರಿಸುವವನಿಗೂ ಮುಕ್ತಿಯಾಗುತ್ತದೆ. ಹಾಗೆಯೇ ಯಜ್ಞದಲ್ಲಿ ಮೂರು ಸವನಗಳು ಪೂರ್ವಕರ್ಮ ಮತ್ತು ಉತ್ತರಕರ್ಮಗಳೆಂದು ಐದು ಅಂಶಗಳಿವೆ. ಪಶುಗಳಲ್ಲಿ ಮಧ್ಯ ಭಾಗ, ಶಿರಸ್ಸು, ಎರಡು ಪಾರ್ಶ್ವಗಳು ಮತ್ತು ಪುಚ್ಛ ಎಂದು ಐದು ಭಾಗಗಳು. ಹಾಗೆಯೇ ಪುರುಷರಲ್ಲಿ ನಾಲ್ಕು ದಿಕ್ಕುಗಳು ನಾಲ್ಕು ಭಾಗ ಮತ್ತು ಮಧ್ಯಭಾಗ ಎಂದು ಐದು ಭಾಗಗಳು. ಎಲ್ಲ ಪ್ರಾಣಿಗಳಲ್ಲಿಯೂ ಹೀಗೆ ಐದು ಭಾಗಗಳಿವೆ. ಇವೆಲ್ಲ ಪಂಚಕಗಳಲ್ಲಿಯೂ ದೇವತೆಗಳಾದ ನಾರಾಯಣಾದಿ ಪಂಚಮೂರ್ತಿಗಳನ್ನು ಸ್ಮರಿಸುವವನಿಗೂ ಐಹಿಕಾಮುಷ್ಮಿಕ ಸರ್ವಫಲಗಳೂ ಕೊನೆಯಲ್ಲಿ ಮೋಕ್ಷವೂ ಉಂಟಾಗುತ್ತವೆ.

ಇಲ್ಲಿಗೆ ಅವ್ಯಾಕೃತ ಬ್ರಾಹ್ಮಣ ಮುಗಿಯಿತು.

**ಶ್ರೀ ಹರಿ ಸೃಷ್ಟಿಸಿದ ಏಳು ಬಗೆಯ ಅನ್ನ :**

**ಉಪನಿಷತ್**—**ಯತ್ ಸಪ್ತಾನ್ನಾನಿ ಮೇಧಯಾ ತಪಸಾ ಅಜನಯತ್ ಪಿತಾ ।**
**ಏಕಮಸ್ಯ ಸಾಧಾರಣಂ ।**
**ದ್ವೇ ದೇವಾನಭಾಜಯತ್ ।**
**ತ್ರೀಣ್ಯಾತ್ಮನೇಽಕುರುತ ।**
**ಪಶುಭ್ಯ ಏಕಂ ಪ್ರಾಯಚ್ಛತ್ ।**
**ತಸ್ಮಿನ್ ಸರ್ವಂ ಪ್ರತಿಷ್ಠಿತಂ ಯಚ್ಚ ಪ್ರಾಣಿತಿ ಯಚ್ಚ ನ ।**
**ಕಸ್ಮಾತ್ ತಾನಿ ನ ಕ್ಷೀಯಂತೇಽದ್ಯಮಾನಾನಿ ಸರ್ವದಾ ।**
**ಯೋ ವೈ ತಾಮಕ್ಷಿತಿಂ ವೇದ ।**

**ಸೋಽನ್ನಮತ್ತಿ ಪ್ರತೀಕೇನ ।**
**ಸ ದೇವಾನಪಿ ಗಚ್ಛತಿ । ಸ ಊರ್ಜಮುಪಜೀವತೀತಿ ಶ್ಲೋಕಾಃ ।**

ಭಗವಂತನಿಂದ ಸೃಷ್ಟವಾದ ಅನ್ನವನ್ನು ಗೃಹಸ್ಥನು ತನ್ನದೇ ಎಂದು ತಿಳಿಯಬಾರದು ಏಕೆಂದರೆ—

ಜಗಜ್ಜನಕನಾದ ವಿಷ್ಣುವು ತನ್ನ ಇಚ್ಛೆಯಿಂದಲೂ ಜೀವರ ಕರ್ಮದಿಂದಲೂ ಯಾವಾಗ ಸಪ್ತವಿಧವಾದ ಅನ್ನವನ್ನು ಸೃಷ್ಟಿ ಮಾಡಿದನೋ, ಆಗ

ಅವುಗಳಲ್ಲಿ ಒಂದು ವಿಧವಾದ ಅನ್ನವು ಈ ಜಗತ್ತಿಗೆ ಸಾಧಾರಣವೆನಿಸಿತು.

ವೈಶ್ವದೇವ ಮತ್ತು ಬಲಿಹರಣರೂಪವಾದ ಅನ್ನದ್ವಯಕ್ಕೆ ದೇವತೆಗಳನ್ನು ಭಾಗಿಗಳನ್ನಾಗಿ ಮಾಡಿದನು.

ಮನಸ್ಸು ವಾಕ್ ಮತ್ತು ಪ್ರಾಣರೂಪವಾದ ಮೂರು ವಿಧವಾದ ಅನ್ನವನ್ನು ತನಗಾಗಿ ಮಾಡಿದನು.

ಶೈಶವಾವಸ್ಥೆಯಲ್ಲಿರುವ ಮಾನವರಿಗೂ ಪಶುಗಳಿಗೂ ಪಯೋರೂಪವಾದ ಒಂದು ಅನ್ನವನ್ನು ಕೊಟ್ಟನು.

ಸರ್ವಪ್ರಾಣಿ ಪ್ರಪಂಚವೂ ಶೈಶವದಲ್ಲಿ ಕ್ಷೀರವನ್ನು ಉಪಜೀವಿಸಿಕೊಂಡಿದೆ. ಸರ್ವ ಜಗತ್ತು ಎಂದರೆ ಜಂಗಮಾತ್ಮಕವಾದದ್ದು ಮತ್ತು ಸ್ಥಾವರಾತ್ಮಕವಾದದ್ದು.

ಸುಖ ರೂಪನಾದ ಪರಮಾತ್ಮನು ಪುನಃ ಪುನಃ ಉತ್ಪತ್ತಿ ಮಾಡುವುದರಿಂದ ಈ ಅನ್ನಗಳು ಸರ್ವದಾ ಭಕ್ಷಿಸಲ್ಪಟ್ಟರೂ ಅವು ಬರಿದಾಗುವುದಿಲ್ಲ.

ಯಾರು ಈ ಸೃಷ್ಟವಾದ ಅನ್ನಗಳು ನಾಶಹೊಂದದಿರಲು ಕಾರಣನಾದ ಶ್ರೀಹರಿಯನ್ನು ತಿಳಿಯುತ್ತಾನೆಯೋ,

ಅವನು ತನಗೆ ಯೋಗ್ಯವಾದ ಎಲ್ಲಾ ಭೋಗಗಳನ್ನೂ ಅನಾಯಾಸವಾಗಿಯೇ ಅನುಭವಿಸುತ್ತಾನೆ.

ಜ್ಞಾನಿಯಾಗಿದ್ದರೆ ದೇವತ್ವವನ್ನು ಪಡೆಯುತ್ತಾನೆ. ದೇವತೆಗಳಿಂದ ಭೋಜ್ಯವಾದ ಅನ್ನವನ್ನು ಉಪಜೀವಿಸುತ್ತಾನೆ. ಇವು ಮುಂದೆ ವ್ಯಾಖ್ಯಾನ ಮಾಡಬೇಕಾದ ವಾಕ್ಯಗಳು.

**ಭಾಷ್ಯ—ಪಿತಾ ವಿಷ್ಣುಃ । ಯತ್ ಯದಾ । ತಪಸಾ ಪ್ರಾಣಿನಾಂ ಕರ್ಮಭಿಃ । ಮೇಧಯಾ ಸ್ವೇಚ್ಛಯಾ । 'ಸ ಹೀದಮನ್ನಂ ಧಿಯಾ ಧಿಯಾ ಜನಯತೇ ಕರ್ಮಭಿಃ' ಇತಿ ವಚನಾತ್ ।**

**ಅನುವಾದ**—ಪಿತಾ ಎಂದರೆ ಜಗಜ್ಜನಕನಾದ ವಿಷ್ಣು. ಯತ್ ಎಂದರೆ ಯಾವಾಗ. ತಪಸಾ ಎಂದರೆ ಪ್ರಾಣಿಗಳ ಕರ್ಮದಿಂದ. ಮೇಧಯಾ ಎಂದರೆ ತನ್ನ ಇಚ್ಛೆಯಿಂದ ಎಂದು ಅರ್ಥ. 'ಶ್ರೀಹರಿಯು ಈ ಅನ್ನವನ್ನು ತನ್ನ ಇಚ್ಛೆಯಿಂದಲೂ

ಪ್ರಾಣಿಗಳ ಕರ್ಮಗಳಿಂದಲೂ ಸೃಷ್ಟಿಸಿದನು' ಎಂದು ಇಲ್ಲಿಯೇ ವಚನವಿರುವುದರಿಂದ ಮೇಧಾ ಮತ್ತು ತಪಸ್ ಶಬ್ದಗಳಿಗೆ ಹೀಗೆಯೇ ಅರ್ಥಮಾಡಬೇಕು.

**ಉಪನಿಷತ್—'ಯತ್ ಸಪ್ತಾನ್ನಾನಿ ಮೇಧಯಾ ತಪಸಾ ಅಜನಯತ್ ಪಿತೇ'ತಿ ಮೇಧಯಾ ಹಿ ತಪಸಾಽಜನಯತ್ ಪಿತಾ । 'ಏಕಮಸ್ಯ ಸಾಧಾರಣಮಿ'ತೀದಮೇವಾಸ್ಯ ತತ್ ಸಾಧಾರಣಮನ್ನಂ ಯದಿದ-ಮದ್ಯತೇ । ಸ ಯ ಏತದುಪಾಸ್ತೇ ನ ಸ ಪಾಪ್ಮನೋ ವ್ಯಾವರ್ತತೇ । ಮಿಶ್ರಂ ಹ್ಯೇತತ್ ।**

'ಯತ್ ಸಪ್ತಾನ್ನಾನಿ ಮೇಧಯಾ ತಪಸಾ ಅಜನಯತ್ ಪಿತಾ' ಎಂದರೆ, ಸ್ವೇಚ್ಛೆಯಿಂದಲೂ ಮತ್ತು ಪ್ರಾಣಿಗಳ ಕರ್ಮಗಳಿಂದಲೂ ವಿಷ್ಣುವು ಸಪ್ತವಿಧವಾದ ಅನ್ನವನ್ನು ಸೃಷ್ಟಿಸಿದನೆಂಬುದು ಪ್ರಸಿದ್ಧ ಎಂದು ಅರ್ಥ.

'ಏಕಮಸ್ಯ ಸಾಧಾರಣಮ್'ಎಂದರೆ ಮನುಷ್ಯವರ್ಗಕ್ಕೆ ವಿಹಿತವಾದ ಸಾಧಾರಣ ಅನ್ನವು, ಸರ್ವಪ್ರಾಣಿಗಳು ಉಣ್ಣುವ ಈ ಅನ್ನವೇ ಆಗಿರುತ್ತದೆ ಎಂದರ್ಥ. ಯಾರು ಈ ಸಾಧಾರಣ ಅನ್ನವನ್ನು ತನ್ನದೇ ಎಂದು ತಿಳಿಯುತ್ತಾನೆಯೋ ಅವನು ಅಕ್ಷಯವಾದ ಪಾಪವನ್ನು ಹೊಂದುತ್ತಾನೆ. ಏಕೆಂದರೆ ಈ ಅನ್ನವು ದೇವ ಬ್ರಾಹ್ಮಣಾದಿ ಸಾಧಾರಣವಾದುದು. ಅದನ್ನು ತನ್ನದೇ ಎಂದು ತಿಳಿದರೆ ದೇವಸ್ವ ಬ್ರಹ್ಮಸ್ವಾದಿ ಅಪಹಾರ ಮಾಡಿದಂತಾಗುವುದು.

**ಉಪನಿಷತ್—'ದ್ವೇ ದೇವಾನಭಾಜಯದಿ'ತಿ ಹುತಂ ಚ ಪ್ರಹುತಂ ಚ । ತಸ್ಮಾದ್ ದೇವೇಭ್ಯೋ ಜುಹ್ವತಿ ಚ ಪ್ರಜುಹ್ವತಿ । ಅಥೋ ಆಹು-ರ್ದರ್ಶಪೂರ್ಣಮಾಸಾವಿತಿ । ತಸ್ಮಾನ್ನೇಷ್ಟಿಯಾಜುಕಃ ಸ್ಯಾತ್ ।**

'ದ್ವೇ ದೇವಾನ್ ಅಭಾಜಯತ್' ಎಂದರೆ, ಈ ಸಾಧಾರಣ ಅನ್ನವನ್ನೇ ವೈಶ್ವದೇವ ಮತ್ತು ಬಲಿಹರಣವೆಂದು ಎರಡು ರೂಪಗಳಿಂದ ದೇವತೆಗಳಿಗೆ ಭಾಗವಾಗಿ ಕೊಟ್ಟನು ಎಂದು ಅರ್ಥ. ವೈಶ್ವದೇವ ಮತ್ತು ಬಲಿಹರಣಗಳು ದೇವತೆಗಳ ಅನ್ನವಾದುದರಿಂದಲೇ ಈಗಲೂ ದೇವತೆಗಳನ್ನುದ್ದೇಶಿಸಿ ವೈಶ್ವದೇವ ಮತ್ತು ಬಲಿಹರಣಗಳನ್ನು ಮಾಡುತ್ತಾರೆ. ಇವೆರಡೇ ಅಲ್ಲದೆ ದರ್ಶಪೂರ್ಣಮಾಸಗಳೂ ದೇವತೆಗಳ ಅನ್ನವೆಂದು ಜ್ಞಾನಿಗಳು ಹೇಳುತ್ತಾರೆ. ಆದ್ದರಿಂದ ಯಜ್ಞವನ್ನು ಮಾಡುವವನು ಫಲೇಚ್ಛೆಯಿಂದ ಯಜ್ಞವನ್ನು ಮಾಡಬಾರದು. ಅವರ ಅನ್ನವನ್ನೇ ತನ್ನ ಫಲೋದ್ದೇಶದಿಂದ ಅವರಿಗೆ ಕೊಟ್ಟರೆ ಪರಸ್ವಾಪಹಾರ ದೋಷವು ಬರುತ್ತದೆ.

**ಉಪನಿಷತ್—'ಪಶುಭ್ಯ ಏಕಂ ಪ್ರಾಯಚ್ಛದಿ'ತಿ ತತ್ ಪಯಃ । ಪಯೋ**

**ಹ್ಯೇವಾಗ್ರೇ ಮನುಷ್ಯಾಶ್ಚ ಪಶವಶ್ಚೋಪಜೀವಂತಿ । ತಸ್ಮಾತ್ ಕುಮಾರಂ ಜಾತಂ ಘೃತಂ ವೈ ವಾಗ್ರೇ ಪ್ರತಿಲೇಹಯಂತಿ । ಸ್ತನಂ ವಾನುಧಾಪಯಂತಿ । ಅಥ ವತ್ಸಂ ಜಾತಮಾಹುರತೃಣಾದ ಇತಿ ।**

'ಪಶುಭ್ಯ ಏಕಂ ಪ್ರಾಯಚ್ಛತ್' ಎಂಬ ವಾಕ್ಯದಲ್ಲಿ ಹೇಳಲ್ಪಟ್ಟ ಅನ್ನವೆಂದರೆ ಕ್ಷೀರವೇ. ಏಕೆಂದರೆ ಶೈಶವದಲ್ಲಿ ಮನುಷ್ಯರೂ ಪಶುಗಳೂ ಕ್ಷೀರವನ್ನೇ ಉಂಡು ಬದುಕುತ್ತಾರೆ. ಕ್ಷೀರವು ಮನುಷ್ಯರಿಗೆ ಉಪಜೀವ್ಯವಾದುದರಿಂದಲೇ ಈಗಲೂ ಹುಟ್ಟಿದ ಕುಮಾರನಿಗೆ ಮೊದಲಿಗೆ ಕ್ಷೀರಜನ್ಯವಾದ ತುಪ್ಪ ಅಥವಾ ಬೆಣ್ಣೆಯನ್ನು ತಿನ್ನಿಸುತ್ತಾರೆ. ಅನಂತರ ಸ್ತನ್ಯಪಾನವನ್ನೂ ಮಾಡಿಸುತ್ತಾರೆ. ಇದು ಪ್ರಸಿದ್ಧವಾದುದು. ಶೈಶವದಲ್ಲಿ ಪಶುವು ಕ್ಷೀರೋಪಜೀವಿಯಾದುದರಿಂದಲೇ ಹುಟ್ಟಿದ ಕರುವಿಗೆ, 'ಹುಲ್ಲು ತಿನ್ನುವುದಿಲ್ಲ, ಹಾಲು ಕುಡಿಯುತ್ತದೆ' ಎನ್ನುತ್ತಾರೆ.

**ಉಪನಿಷತ್—'ತಸ್ಮಿನ್ ಸರ್ವಂ ಪ್ರತಿಷ್ಠಿತಂ ಯಚ್ಚ ಪ್ರಾಣಿತಿ ಯಚ್ಚ ನೇ'ತಿ ಪಯಸಿ ಹೀದಂ ಸರ್ವಂ ಪ್ರತಿಷ್ಠಿತಂ ಯಚ್ಚ ಪ್ರಾಣಿತಿ ಯಚ್ಚ ನ । ತದ್ಯದಿದಮಾಹುಃ ಸಂವತ್ಸರಂ ಪಯಸಾ ಜುಹ್ವದಪ ಪುನರ್ಮೃತ್ಯುಂ ಜಯತೀತಿ ನ ತಥಾ ವಿದ್ಯಾತ್ । ಯದಹರೇವ ಜುಹೋತಿ ತದಹಃ ಪುನರ್ಮೃತ್ಯುಮಪಜಯತಿ । ಏವಂ ವಿದ್ವಾನ್ ಸರ್ವಂ ಹಿ ದೇವೇಭ್ಯೋಽನ್ನಾದ್ಯಂ ಪ್ರಯಚ್ಛತಿ ।**

'ತಸ್ಮಿನ್ ಸರ್ವಂ ಪ್ರತಿಷ್ಠಿತಂ ಯಚ್ಚ ಪ್ರಾಣಿತಿ ಯಚ್ಚ ನ' ಎಂಬ ವಾಕ್ಯಕ್ಕೆ, ಸ್ಥಾವರ ಜಂಗಮಾತ್ಮಕವಾದುದೆಲ್ಲವೂ ತನ್ನ ಜೀವನಕ್ಕೆ ಕ್ಷೀರವನ್ನು ಆಶ್ರಯಿಸಿಕೊಂಡಿದೆ ಎಂದು ಅರ್ಥ. ಕ್ಷೀರವು ಜೀವನಕ್ಕೆ ಮಾತ್ರವಲ್ಲ ಪಾರಲೌಕಿಕ ಫಲಕ್ಕೂ ಕಾರಣ. ಒಂದು ಸಂವತ್ಸರ ಕಾಲ ಅಪರೋಕ್ಷ ಜ್ಞಾನಿಯಾದವನು ಕ್ಷೀರಹೋಮ ಮಾಡಿದರೆ ಸಂಸಾರವನ್ನು ಜಯಿಸಿ ಮುಕ್ತನಾಗುತ್ತಾನೆ. ಅಪರೋಕ್ಷ ಜ್ಞಾನಿಯಲ್ಲದವನು ಹಾಗೆಯೇ ಹೋಮ ಮಾಡಿದರೆ ಅಜ್ಞಾನವನ್ನು ಜಯಿಸುತ್ತಾನೆ. ಅಂದರೆ ಅಪರೋಕ್ಷ ಜ್ಞಾನಿಯಾಗುತ್ತಾನೆ. ಜ್ಞಾನಿಯಾದವನು ಒಂದು ಸಂವತ್ಸರ ಕಾಲ ಹೋಮ ಮಾಡಿದರೆ ಮಾತ್ರ ಮುಕ್ತನಾಗುತ್ತಾನೆಂದು ತಿಳಿಯಬಾರದು. ಏಕೆಂದರೆ ಶ್ರೀಹರಿಯ ಸಪ್ತಾನ್ನಸ್ರಷ್ಟೃತ್ವ ಮಹಿಮೆಯನ್ನು ತಿಳಿದ ಜ್ಞಾನಿಯು ಒಂದು ದಿನ ಪಯೋಹೋಮವನ್ನು ಮಾಡಿದರೂ ಸಂಸಾರವನ್ನು ಜಯಿಸಿ ಮುಕ್ತನಾಗುತ್ತಾನೆ. ಏಕೆಂದರೆ ಸಪ್ತಾನ್ನಸ್ರಷ್ಟೃತ್ವಜ್ಞಾನಿಯು ಒಂದು ಪಯೋಹೋಮದಿಂದ ದೇವತೆಗಳಿಗೆ ಎಲ್ಲಾ ಅನ್ನಗಳನ್ನೂ ಕೊಡುತ್ತಾನೆ. ಅಂದರೆ ಗೋಕ್ಷೀರವು ಎಲ್ಲ ಅನ್ನಗಳಲ್ಲಿ ಪ್ರಶಸ್ತವಾದುದರಿಂದ ಅದನ್ನು ಕೊಟ್ಟರೆ ಎಲ್ಲ ಅನ್ನಗಳನ್ನೂ ಕೊಟ್ಟಂತಾಗುತ್ತದೆ. ಅಥವಾ ಪಯೋಹೋಮಕ್ಕೆ ಅಂಗವಾಗಿ ಎಲ್ಲ ಅನ್ನವನ್ನೂ ದಾನ ಮಾಡಿರುತ್ತಾನೆ.

**ಉಪನಿಷತ್—'ಕಸ್ಮಾತ್ತಾನಿ ನ ಕ್ಷೀಯಂತೇಽದ್ಯಮಾನಾನಿ ಸರ್ವದೇ'ತಿ ಪುರುಷೋ ವಾ ಅಕ್ಷಿತಿಃ । ಸ ಹೀದಮನ್ನಂ ಪುನಃಪುನರ್ಜನಯತೇ ।**

'ಕಸ್ಮಾತ್ತಾನಿ ನ ಕ್ಷೀಯಂತೇಽದ್ಯಮಾನಾನಿ ಸರ್ವದಾ' ಎಂಬ ಪ್ರಶ್ನವಾಕ್ಯದಲ್ಲಿಯೇ ಅದಕ್ಕೆ ಉತ್ತರವೂ ಇದೆ. ಕಸ್ಮಾತ್ ಎಂದರೆ ಸುಖಸ್ವರೂಪನಾದ ವಿಷ್ಣುವಿನಿಂದ. ವಿಷ್ಣುವು ಅನ್ನವು ಅಕ್ಷಯವಾಗಲು ಕಾರಣ. ಅವನು ಈ ಸಪ್ತವಿಧವಾದ ಅನ್ನವನ್ನು ಪುನಃ ಪುನಃ ಉತ್ಪತ್ತಿ ಮಾಡುತ್ತಾನೆ. ಆದ್ದರಿಂದ ಸರ್ವದಾ ಪುನಃ ಪುನಃ ಭಕ್ಷಿಸಲ್ಪಟ್ಟರೂ ಬರಿದಾಗುವುದಿಲ್ಲ ಎಂದು ಅರ್ಥ.

**ಉಪನಿಷತ್—'ಯೋ ವೈ ತಾಮಕ್ಷಿತಿಂ ವೇದೇ'ತಿ ಪುರುಷೋ ವಾ ಅಕ್ಷಿತಿಃ ।ಸ ಹೀದಮನ್ನಂ ಧಿಯಾ ಧಿಯಾ ಜನಯತೇ ಕರ್ಮಭಿಃ । ಯದ್ಧೈತನ್ನ ಕುರ್ಯಾತ್ ಕ್ಷೀಯೇತ ಹ ।**

'ಯೋ ವೈ ತಾಮಕ್ಷಿತಿಂ ವೇದ' ಎಂಬಲ್ಲಿ ಅಕ್ಷಿತಿ ಎಂದರೆ ಪುರುಷನೆನಿಸುವ ವಿಷ್ಣುವು, ಅನ್ನವು ಅಕ್ಷಯವಾಗಲು ಕಾರಣ. ಏಕೆಂದರೆ, ಅವನು ಈ ಸಪ್ತ ವಿಧವಾದ ಅನ್ನವನ್ನು ಸ್ವೇಚ್ಛೆಯಿಂದಲೂ, ಪ್ರಾಣಿಗಳ ಕರ್ಮದಿಂದಲೂ ಪುನಃ ಪುನಃ ಉತ್ಪಾದಿಸುತ್ತಾನೆ. ಒಂದುವೇಳೆ ಅವನು ಹೀಗೆ ಅನ್ನವನ್ನು ಪುನಃ ಪುನಃ ಉತ್ಪಾದಿಸದಿದ್ದರೆ ಅನ್ನವು ನಿಶ್ಚಯವಾಗಿ ನಾಶಹೊಂದುತ್ತಿತ್ತು.

**ಉಪನಿಷತ್—'ಸೋಽನ್ನಮತ್ತಿ ಪ್ರತೀಕೇನೇ'ತಿ ಮುಖಂ ಪ್ರತೀಕಂ । ಮುಖೇನಾತ್ತ್ಯೇತತ್। 'ಸ ದೇವಾನಪಿ ಗಚ್ಛತಿ, ಸ ಊರ್ಜಮುಪಜೀವ-ತೀ'ತಿ ಪ್ರಶಂಸಾ ।**

'ಸೋಽನ್ನಮತ್ತಿ ಪ್ರತೀಕೇನ' ಎಂಬಲ್ಲಿ ಪ್ರತೀಕ ಎಂದರೆ ಮುಖ. ಮುಖದಿಂದ ಈ ಸಪ್ತ ವಿಧವಾದ ಅನ್ನವನ್ನು ಭಕ್ಷಿಸುತ್ತಾನೆ. ಅಂದರೆ ಅನಾಯಾಸವಾಗಿ ಯಥೇಷ್ಟ ಅನ್ನ ಭೋಗಿಸುತ್ತಾನೆಂದು ಅರ್ಥ. 'ಸ ದೇವಾನಪಿ ಗಚ್ಛತಿ, ಸ ಊರ್ಜಮುಪಜೀವತಿ' ಎಂಬ ಎರಡು ವಾಕ್ಯಗಳು, ಸಪ್ತಾನ್ನಜ್ಞಾನಿ ದೇವಪದಯೋಗ್ಯನಾಗಿದ್ದರೆ ದೇವತ್ವ ಪಡೆಯುತ್ತಾನೆ, ದೇವಾನ್ನವನ್ನು ಭೋಗಿಸುತ್ತಾನೆ. ಮನುಷ್ಯನಾಗಿದ್ದರೆ ದೇವತೆಗಳ ಬಳಿಗೆ ಹೋಗುತ್ತಾನೆ ಎಂದು ಸಪ್ತಾನ್ನೋಪಾಸಕನನ್ನು ಪ್ರಶಂಸೆ ಮಾಡುತ್ತವೆ.

**ಉಪನಿಷತ್—'ತ್ರೀಣ್ಯಾತ್ಮನೇಽಕುರುತೇ'ತಿ ಮನೋ ವಾಚಂ ಪ್ರಾಣಂ ತಾನ್ಯಾತ್ಮನೇಽಕುರುತ । ಅನ್ಯತ್ರಮನಾ ಅಭೂವಂ ನಾದರ್ಶಂ । ಅನ್ಯತ್ರ**

**ಶೃಣೋತಿ । ಕಾಮಃ ಸಂಕಲ್ಪೋ ವಿಚಿಕಿತ್ಸಾ ಶ್ರದ್ಧಾಽಶ್ರದ್ಧಾ ಧೃತಿರಧೃತಿಃ ಹ್ರೀರ್ಧೀರ್ಭೀರಿತ್ಯೇತತ್ ಸರ್ವಂ ಮನ ಏವ । ತಸ್ಮಾದಪಿ ಪೃಷ್ಠತ ಉಪಸ್ಪೃಷ್ಟೋ ಮನಸಾ ವಿಜಾನಾತಿ । ಯಃ ಕಶ್ಚ ಶಬ್ದೋ ವಾಗೇವ । ಸೈಷಾ ಹ್ಯಂತಮಾಯತ್ತಾ । ಏಷಾ ಹಿ ನಃ । ಪ್ರಾಣೋಽಪಾನೋ ವ್ಯಾನ ಉದಾನಃ ಸಮಾನೋಽನ ಇತ್ಯೇತತ್ ಸರ್ವಂ ಪ್ರಾಣ ಏವ । ಏತನ್ಮಯೋ ವಾ ಅಯಮಾತ್ಮಾ । ವಾಙ್ಮಯೋ ಮನೋಮಯಃ ಪ್ರಾಣಮಯಃ ।**

'ತ್ರೀಣಿ ಆತ್ಮನೇಽಕುರುತ' ಎಂದರೆ ಮನಸ್ಸು ವಾಕ್ ಮತ್ತು ಪ್ರಾಣಗಳನ್ನು ಅವು ತನ್ನ ವಿಷಯದಲ್ಲಿ ಪ್ರವೃತ್ತವಾದಾಗ ಅನ್ನದಂತೆ ತನಗೇ ತುಷ್ಟಿಕರವಾಗಲೆಂದು ಪರಮಾತ್ಮನು ಸೃಷ್ಟಿಸಿದನು ಎಂದು ಅರ್ಥ. ಚಕ್ಷುರಾದಿ ಬೇರೆ ಜ್ಞಾನಕರಣಗಳಿರುವಾಗ ಮನಸ್ಸನ್ನೇ ಆತ್ಮತುಷ್ಟ್ಯರ್ಥವಾಗಿ ಏಕೆ ಸೃಷ್ಟಿಸಿದನು ? ಎಂದರೆ, 'ವಸ್ತುವನ್ನು ನೋಡಿದೆಯಾ' ಎಂದು ಯಾರಾದರೂ ಕೇಳಿದರೆ, 'ಬೇರೆ ವಿಷಯದಲ್ಲಿ ಮನಸ್ಸನ್ನಿಟ್ಟಿದ್ದೆ. ಆದ್ದರಿಂದ ನೋಡಲಿಲ್ಲ' ಎಂದು ಉತ್ತರವನ್ನು ಹೇಳುತ್ತಾನೆ. 'ಈ ಮಾತನ್ನು ಕೇಳಿದೆಯಾ' ಎಂದು ಯಾರಾದರೂ ಕೇಳಿದರೆ, 'ಬೇರೆ ಕಡೆ ಮನಸ್ಸನ್ನು ಇಟ್ಟಿದ್ದೆ. ಆದ್ದರಿಂದ ಕೇಳಲಿಲ್ಲ' ಎಂದು ಉತ್ತರವನ್ನು ಕೊಡುತ್ತಾನೆ. ಹೀಗೆಯೇ ಮನಸ್ಸು ಬೇರೆ ಕಡೆ ಇದ್ದರೆ ಇತರ ಇಂದ್ರಿಯಗಳಿಂದ ಉಂಟಾಗಬಹುದಾದ ಜ್ಞಾನವೂ ಉಂಟಾಗುವುದಿಲ್ಲ. ಮನಸ್ಸು ವ್ಯಾಕುಲವಾಗಿದ್ದರೂ ಉಳಿದ ಇಂದ್ರಿಯಗಳಿಂದ ಜ್ಞಾನವು ಉತ್ಪತ್ತಿಯಾಗುವುದಿಲ್ಲ. ಅವ್ಯಾಕುಲವಾಗಿದ್ದಾಗ ಮಾತ್ರ ಚಕ್ಷುಸ್ಸಿನಿಂದ ನೋಡುತ್ತಾನೆ ಮತ್ತು ಶ್ರೋತ್ರದಿಂದ ಕೇಳುತ್ತಾನೆ. ಹೀಗೆ ಮನಸ್ಸೇ ಪ್ರಧಾನವಾದ್ದರಿಂದ ಮನಸ್ಸನ್ನೇ ಅನ್ನವೆಂದು ಪರಮಾತ್ಮನು ಸೃಷ್ಟಿಮಾಡಿದನು. ಪರಮಾತ್ಮನಿಗೆ ಅನ್ನವಾಗಿರುವ ಕಾಮ, ಸಂಕಲ್ಪ, ವಿಚಿಕಿತ್ಸಾ, ಶ್ರದ್ಧಾ ಅಶ್ರದ್ಧಾ, ಧೃತಿ ಅಧೃತಿ, ಹ್ರೀ, ಧೀ, ಭೀ, ಇವೆಲ್ಲವೂ ಮನಸ್ಸಿನದೇ ಪರಿಣಾಮ. ಆದ್ದರಿಂದ ಮನಸ್ಸನ್ನೇ ಅನ್ನವೆಂದು ಹೇಳಲಾಗಿದೆ. ಬಾಹ್ಯೇಂದ್ರಿಯಗಳು ಮನಸ್ಸಿಗೆ ಅಧೀನವಾದ್ದರಿಂದಲೇ ಮನಸ್ಸು ಅವ್ಯಾಕುಲವಾಗಿರುವಾಗ ಹಿಂದಿನಿಂದ ಒಬ್ಬನು ಸ್ಪರ್ಶಮಾಡಿದರೂ ತ್ವಗಿಂದ್ರಿಯದಿಂದ ತಿಳಿಯುತ್ತಾನೆ. ವಾಕ್ಕಿಗೆ ಭಗವದನ್ನತ್ವ ಹೇಗೆಂದರೆ–ಧ್ವನ್ಯಾತ್ಮಕವಾದ ಮತ್ತು ವರ್ಣಾತ್ಮಕವಾದ ಪ್ರತಿಯೊಂದು ಶಬ್ದವೂ ವಾಗಿಂದ್ರಿಯದಿಂದಲೇ ಉಚ್ಚರಿಸಲ್ಪಡುತ್ತದೆ. ಮತ್ತು ಆ ಎಲ್ಲ ಶಬ್ದಗಳೂ ವಿಷ್ಣುನಾಮಗಳಾಗಿದ್ದು ವಿಷ್ಣುಪ್ರೀತಿಕರವಾಗಿವೆ. ಆದ್ದರಿಂದ ಸರ್ವಶಬ್ದೋಚ್ಚಾರಣ ಮೂಲಕ ವಾಗಿಂದ್ರಿಯವು ಸರ್ವಾಂತಸ್ಥನಾದ ವಿಷ್ಣುವನ್ನು ವಿಷಯೀಕರಿಸಿ ಅವನಿಗೆ ಅನ್ನವಾಗಿದೆ. ಯಾರ ಮಾತುಗಳು ವಿಷ್ಣುವನ್ನು ಆಶ್ರಯಿಸಿವೆ? ಎಂದರೆ, ವೇದದ್ರಷ್ಟೃ ಋಷಿಗಳು ಹೇಳುತ್ತಾರೆ–'ನಮ್ಮ ಮಾತುಗಳು ವಿಷ್ಣುವನ್ನು ಆಶ್ರಯಿಸಿವೆ ಎಂಬುದು ಪ್ರಸಿದ್ಧವಾದ

ವಿಷಯ'. ಪ್ರಾಣಕ್ಕೆ ಭಗವದನ್ನತ್ವ ಹೇಗೆಂದರೆ, ವೇದದ್ರಷ್ಟೃ ಋಷಿಗಳಾದ ನಮಗೆ ಸದಾ ಹರಿವಿಷಯಕವೇ ಆಗಿರುವ ಪ್ರಾಣ ಅಪಾನ ವ್ಯಾನ ಉದಾನ ಮತ್ತು ಸಮಾನ ಎಲ್ಲವೂ ಪ್ರಾಣ ಪ್ರಭೇದಗಳೇ. ಸಾತ್ವಿಕನಾದ ಜೀವನು ವಾಕ್‌ಪ್ರಧಾನನಾದವನು, ಮನಃಪ್ರಧಾನನಾದವನು ಮತ್ತು ಪ್ರಾಣಪ್ರಧಾನನಾದವನು. ಅಂದರೆ, ವಾಕ್ ಮನಸ್ಸು ಮತ್ತು ಪ್ರಾಣಕ್ಕೆ ಅಭಿಮಾನಿಗಳಾದ ಉತ್ತಮ ದೇವತೆಗಳ ಸಾನ್ನಿಧ್ಯದಿಂದ ಉತ್ಕರ್ಷವನ್ನು ಪಡೆದಿದ್ದಾನೆ. ಸರಸ್ವತೀ ಬ್ರಹ್ಮ ವಾಯುಗಳು ಕ್ರಮವಾಗಿ ವಾಕ್ ಮನಸ್ಸು ಮತ್ತು ಪ್ರಾಣಗಳಿಗೆ ಅಭಿಮಾನಿಗಳಾದ ದೇವತಾತ್ರಯರು. ಆದ್ದರಿಂದ ಈ ಉತ್ತಮ ದೇವತೆಗಳಿಂದ ಅಭಿಮನ್ಯಮಾನವಾದುದರಿಂದ ವಾಗಾದಿಗಳು ಉತ್ತಮ. ಸರಸ್ವತ್ಯಾದಿಗಳು ಹೇಗೆ ವಾಗಾದಿಗಳಿಗೆ ಅಭಿಮಾನಿಗಳಾದರು ಎಂದರೆ, ಸರಸ್ವತ್ಯಾದಿಗಳು ಪರಮಾತ್ಮಮಯರು. ಅಂದರೆ ಪರಮಾತ್ಮನ ವಾಗಾದಿಗಳಿಂದ ಜನ್ಯರು. ಆದ್ದರಿಂದ ವಾಗಾದಿಗಳಿಗೆ ಅಭಿಮಾನಿಗಳು. 'ಪರಮಾತ್ಮನಿಗೆ ವಾಗಾದಿಗಳು ಇದ್ದರೆ ಸರಸ್ವತ್ಯಾದಿಗಳಿಗೆ ವಾಗಾದಿಜನ್ಯತ್ವವು ಕೂಡುತ್ತದೆ. ಆದರೆ ಪರಮಾತ್ಮನಿಗೆ ವಾಗಾದಿಗಳು ಇವೆ ಎಂದೇ ಹೇಗೆ ಸಿದ್ಧಿಸುತ್ತದೆ' ಎಂದರೆ ಈ ಹರಿಯು ವಾಗಾದೀಂದ್ರಿಯ ಸ್ವರೂಪನು.

**ಭಾಷ್ಯ—ಸಪ್ತಾನ್ನಾನಿ ಯದಾ ವಿಷ್ಣುಃ ಪರಮಃ ಪುರುಷೋ ವಿಭುಃ ।**
**ಸಸರ್ಜ ತೇಷಾಂ ಸ್ವಾರ್ಥಾನಿ ಚಕಾರ ತ್ರೀಣಿ ಕೇಶವಃ ।**
**ಮನೋ ವಾಚಂ ತಥಾ ಪ್ರಾಣಂ ತಸ್ಮಾತ್ ತ್ರೈಸ್ತುಷ್ಟಿಮೇತಿ ಸಃ ।**
**ತಸ್ಮಾತ್ ತದ್ಭಕ್ತಿಕಾಮಃ ಸ್ಯಾತ್ ಸಂಕಲ್ಪಂ ತತ್ಕೃತಿಂ ಪ್ರತಿ ।**
**ಕುರ್ಯಾತ್ ತದ್ವೇದನೇಚ್ಛಾಂ ಚ ಶ್ರದ್ಧಾಂ ತಸ್ಯ ಗುಣೋನ್ನತೌ ।**
**ಅಶ್ರದ್ಧಾಮನ್ಯಸಾಮ್ಯೇ ಚಾಪ್ಯನ್ಯೇಷಾಮುನ್ನತೌ ತತಃ ।**
**ಅನ್ಯೇಷಾಂ ತತ್ಸ್ವರೂಪತ್ವೇ ಪ್ರಾಕೃತತ್ವಾದಿಕೇಽಸ್ಯ ಚ ।**
**ಧೃತಿಂ ತನ್ನಿಂದಿವಾಗಾದೌ ಪ್ರಾಪ್ತೇ ತತ್ರೈವ ಚಾಧೃತಿಮ್ ।**
**ತನ್ಮತಸ್ಯ ವಿಸರ್ಗಾರ್ಥೇ ಹ್ರಿಯಂ ತದ್ಭಕ್ತಿ ವರ್ಜನೇ ।**
**ತದ್ವಿವೇಕೇ ಧಿಯಂ ಚೈವ ತದಜ್ಞಾನೇ ಭಿಯಂ ತಥಾ ।**

**ಅನುವಾದ**—ಪರಮಪುರುಷನಾದ ವಿಷ್ಣುವು ಸಪ್ತವಿಧವಾದ ಅನ್ನಗಳನ್ನು ಸೃಷ್ಟಿಮಾಡಿದಾಗ ಅವುಗಳಲ್ಲಿ ವಿಷ್ಣು ವಿಷಯಕವಾದ ಮನಸ್ಸು ವಾಕ್ ಮತ್ತು ಪ್ರಾಣ ಈ ಮೂರನ್ನು ತನ್ನ ಸಲುವಾಗಿ ಸೃಷ್ಟಿಸಿದನು. ಅವನಿಗೆ ಅವು ಅನ್ನರೂಪವಾಗಿರುವುದರಿಂದಲೇ ಅವುಗಳಿಂದ ಸಂತೋಷವನ್ನು ಹೊಂದುತ್ತಾನೆ. ವಿಷ್ಣುವಿಷಯಕವಾದ ಮನಸ್ಸೇ ಅವನ ಸಂತೋಷಕ್ಕೆ ಕಾರಣವಾದುದರಿಂದ ಮನಸ್ಸಿನ ಎಲ್ಲಾ ವೃತ್ತಿಗಳನ್ನು ವಿಷ್ಣು ವಿಷಯಕವನ್ನಾಗಿಯೇ ಮಾಡಬೇಕು. ಅವನ ಭಕ್ತಿಯ ವಿಷಯದಲ್ಲಿ ಕಾಮ

ವನ್ನೂ, ಅವನ ಪೂಜೆಯ ವಿಷಯದಲ್ಲಿ ಸಂಕಲ್ಪವನ್ನೂ ಮಾಡಬೇಕು. ಅವನ ಜ್ಞಾನವನ್ನು ಸಂಪಾದಿಸುವುದರಲ್ಲಿ ಇಚ್ಛೆಯನ್ನೂ, ಅವನ ಗುಣೋತ್ಕರ್ಷದಲ್ಲಿ ಶ್ರದ್ಧೆಯನ್ನೂ ಮಾಡಬೇಕು. ಅವನಿಗೆ ಅನ್ಯಸಾಮ್ಯ ವಿಷಯದಲ್ಲಿಯೂ ಅವನಿಗಿಂತ ಇನ್ನೊಬ್ಬನ ಗುಣೋತ್ಕರ್ಷದಲ್ಲಿಯೂ, ಅವನಿಗೆ ಅನ್ಯರಿಂದ ಅಭೇದ ವಿಷಯ ದಲ್ಲಿಯೂ ಮತ್ತು ಅವನಿಗೆ ಪ್ರಾಕೃತದೇಹಾದಿ ವಿಷಯದಲ್ಲಿಯೂ ಅಶ್ರದ್ಧೆಯನ್ನು ಮಾಡಬೇಕು. ಪರಮಾತ್ಮನನ್ನು ನಿಂದಿಸುವ ವಾಕ್ಯಗಳನ್ನು ನಿರಾಕರಣೆ ಮಾಡುವಲ್ಲಿ ಧೈರ್ಯವನ್ನೂ, ಪರಮಾತ್ಮನನ್ನು ನಿಂದಿಸುವ ವಿಷಯದಲ್ಲಿ ಅಧೈರ್ಯವನ್ನೂ, ಪರಮಾತ್ಮನ ಮತವನ್ನು ತ್ಯಜಿಸುವುದರಲ್ಲಿ ಮತ್ತು ಅವನಲ್ಲಿ ಭಕ್ತಿಯನ್ನು ತ್ಯಜಿಸುವುದರಲ್ಲಿ ನಾಚಿಕೆ ಯನ್ನೂ, ಪರಮಾತ್ಮನ ಸರ್ವಭಿನ್ನತ್ವ ವಿಷಯದಲ್ಲಿ ಬುದ್ಧಿಯನ್ನೂ, ಪರಮಾತ್ಮ ನನ್ನು ತಿಳಿಯದಿರುವ ವಿಷಯದಲ್ಲಿ ಭಯವನ್ನೂ ಮಾಡಬೇಕು.

**ಭಾಷ್ಯ—ವಾಚಂ ನಿತ್ಯಂ ತದ್ಗುಣೋಕ್ತೌ ಪ್ರಾಣಂ ತತ್ಕರ್ಮಣಿ ಸ್ಫುಟಮ್ ।**
**ತದನ್ಯಕರ್ಮಸಂತ್ಯಾಗೇ ಚಾಪಾನಂ ವ್ಯಾನಮಸ್ಯ ಚ ।**
**ವಿರೋಧಿನಾಂ ನಿರಾಸಿತ್ವೇಽಥೋದಾನಂ ಯೋಗಧಾರಣೇ ।**
**ಮನೋವಾಗಾದೀಂದ್ರಿಯಾಣಾಂ ಸಮಾನಂ ನಿಯಮೋಽತ್ರ ತು ।**
**ಅನ್ನಮುಕ್ತೇಷು ಸುಸ್ಥೈರ್ಯೇ ನರಃ ಕುರ್ಯಾತ್ ಸದೈವ ಹಿ ।**
**ಅನೇಕಗೋಚರೇಚ್ಛಾ ಸ್ಯಾತ್ ಕಾಮ ಏಕಾಶ್ರಯೇ ಸ್ಥಿತಃ ।**
**ಪ್ರಾಣಃ ಪ್ರವೃತ್ತಿಹೇತುಃ ಸ್ಯಾದಪಾನಸ್ತು ನಿವರ್ತನೇ ।**
**ಬಲಕರ್ಮಾ ತಥಾ ವ್ಯಾನ ಉದಾನೋ ಯೋಗಕರ್ಮಕೃತ್ ।**
**ದೇಹೇಂದ್ರಿಯಮನೋನೇತಾ ಸಮಾನೋಽನಃ ಸ್ಥಿತಿಪ್ರದಃ ।**
**ಮನೋವಾಕ್‌ಪ್ರಾಣಸಾನ್ನಿಧ್ಯಪ್ರಾಧಾನ್ಯಾಜ್ಜೀವ ಉನ್ನತಿಃ ।**

**ಅನುವಾದ**—ವಾಗಿಂದ್ರಿಯವನ್ನು ಸರ್ವದಾ ಹರಿಯ ಗುಣಗಳನ್ನು ಹೇಳುವ ವಿಷಯದಲ್ಲಿ ತೊಡಗಿಸಬೇಕು. ಶ್ರೀಹರಿಯ ಕರ್ಮವನ್ನು ಮಾಡುವ ವಿಷಯದಲ್ಲಿ ಪ್ರಾಣನನ್ನೂ, ಅನ್ಯಕರ್ಮವನ್ನು ಬಿಡುವ ವಿಷಯದಲ್ಲಿ ಅಪಾನನನ್ನೂ, ಶ್ರೀಹರಿಯ ವಿರೋಧಿಗಳನ್ನು ನಿರಾಕರಿಸುವ ವಿಷಯದಲ್ಲಿ ವ್ಯಾನನನ್ನೂ, ಶ್ರೀಹರಿ ವಿಷಯಕ ಯೋಗಾನುಷ್ಠಾನ ಮಾಡುವ ವಿಷಯದಲ್ಲಿ ಉದಾನನನ್ನೂ, ಮನಸ್ಸು ಮತ್ತು ವಾಗಾದಿ ಇಂದ್ರಿಯಗಳನ್ನು ಶ್ರೀಹರಿಯ ಕಡೆಗೆ ಪ್ರೇರಿಸುವ ವಿಷಯದಲ್ಲಿ ಸಮಾನ ನನ್ನೂ ನಿಯೋಜಿಸಬೇಕು, ಮನೋವಾಗಾದಿಗಳಿಗೆ ಮೇಲೆ ಹೇಳಿದ ವಿಷಯಗಳಲ್ಲಿ ಸದಾ ಸುಸ್ಥಿರತೆ ಬಂದ ಮೇಲೆಯೇ ಅವುಗಳನ್ನು ಜೀವನು ವಿಷ್ಣುವಿಗೆ ಅನ್ನವಾಗಿ ಮಾಡಿಕೊಳ್ಳಲು ಶಕ್ಯ. ಅನೇಕ ವಿಷಯವಾದ ಇಚ್ಛೆಗೆ ವಿಚಿಕಿತ್ಸಾ ಎಂದು ಹೆಸರು. ಏಕ ವಿಷಯವಾದ ಇಚ್ಛೆಗೆ ಕಾಮ ಎಂದು ಹೆಸರು. ಪ್ರಾಣನು ನಮಗೆ ಸರ್ವ

ಪ್ರವೃತ್ತಿಗೆ ಕಾರಣ. ಅಪಾನನು ನಿವೃತ್ತಿಗೆ ಕಾರಣ. ಬಲಕಾರ್ಯವನ್ನು ಮಾಡಿಸು ವವನು ವ್ಯಾನ. ಯೋಗಕರ್ಮಗಳನ್ನು ಮಾಡಿಸುವವನು ಉದಾನ. ದೇಹೇಂದ್ರಿಯ ಮನೋನಿಯಾಮಕನಾದ ಸಮಾನನು ಸ್ಥಿತಿಯನ್ನು ಕೊಡುವವನು. 'ಅಯಮಾತ್ಮಾ ಏತನ್ಮಯಃ'ಜೀವನು ಮನೋವಾಗಾದಿಮಯ. ಅಂದರೆ, ಮನೋ ವಾಕ್ ಪ್ರಾಣಾಭಿ ಮಾನಿಗಳ ಸಾನ್ನಿಧ್ಯವು ಹೆಚ್ಚಾದಂತೆ ಜೀವನಿಗೆ ಉತ್ಕರ್ಷವುಂಟಾಗುತ್ತದೆ.

**ಭಾಷ್ಯ—ಮನೋವಾಕ್‌ಪ್ರಾಣರೂಪೋಽಸೌ ಭಗವಾನ್ ಪುರುಷೋತ್ತಮಃ ।**
**ಮನೋವಾಕ್‌ಪ್ರಾಣತಸ್ತಸ್ಯ ಜಾತಾ ಅನ್ಯೇಽಭಿಮಾನಿನಃ ।**
**ಬ್ರಹ್ಮಾ ಸರಸ್ವತೀ ವಾಯುರ್ಮನಆದ್ಯಭಿಮಾನಿನಃ ।**
**ಸರ್ವಸ್ಯಾಂತಃಸ್ಥಿತಂ ವಿಷ್ಣುಮಾಯತ್ತಾ ವಾಗ್ ಹಿ ನಃ ಸದಾ ।**
**ಸರ್ವವಾಚಶ್ಚ ಘೋಷಾಶ್ಚ ವಿಷ್ಣೋರ್ನಾಮೇತಿ ಕೀರ್ತಿತಾಃ ।**
**ತಜ್ಜ್ಞಾನಾಂ ತತ್ಫಲಂ ಚ ಸ್ಯಾದಜ್ಞಾನಾಂ ತತ್ಫಲಂ ನ ತು ।**
**ಸರ್ವೇಂದ್ರಿಯಗತಂ ಜ್ಞಾನಂ ಮನಆಯತ್ತಮೀರಿತವನ್ ।**
**ಪೃಷ್ಠೇ ಸ್ಪೃಷ್ಟೋಽಪ್ಯನೇನಾಹಂ ಸ್ಪೃಷ್ಟ ಇತ್ಯೇವ ವೇತ್ತ್ಯತಃ ।**
**ಮನಸ್ಯವ್ಯಾಕುಲೇಽನ್ಯತ್ರ ನೈವ ವೇತ್ತಿ ಕಥಂಚನ ।**

**ಅನುವಾದ**—ಈ ಪರಮಾತ್ಮನು ಪುರುಷೋತ್ತಮನು,ಮನೋ ವಾಕ್ ಪ್ರಾಣ ರೂಪನು. ಆದ್ದರಿಂದ 'ಅಯಮಾತ್ಮಾ ಏತನ್ಮಯಃ' ಬ್ರಹ್ಮ ಸರಸ್ವತಿ ವಾಯುಗಳು ಭಗವಂತನ ಮನಸ್ಸು ವಾಕ್ ಪ್ರಾಣಗಳಿಂದ ಜನಿಸಿದರು. ಆದ್ದರಿಂದ 'ಅಯಮಾತ್ಮಾ ಏತನ್ಮಯಃ' ಈ ಬ್ರಹ್ಮ ಸರಸ್ವತಿ ವಾಯುಗಳು ಮನಸ್ಸು ಮುಂತಾದವುಗಳಿಗೆ ಅಭಿ ಮಾನಿಗಳು. ವೇದದ್ರಷ್ಟೃಗಳಾದ ನಮ್ಮ ವಾಗಿಂದ್ರಿಯವು ಸರ್ವಾಂತರ್ಯಾಮಿಯಾದ ವಿಷ್ಣುವನ್ನೇ ಸರ್ವದಾ ವಿಷಯೀಕರಿಸುತ್ತದೆ. ಏಕೆಂದರೆ ನಮ್ಮಿಂದ ಉಚ್ಚರಿಸಲ್ಪಡುವ ಸರ್ವವರ್ಣಗಳೂ ಮತ್ತು ಧ್ವನಿಗಳೂ ವಿಷ್ಣುವಿನ ನಾಮಗಳೇಂದೇ ಪ್ರಸಿದ್ಧವಾಗಿವೆ. ಎಲ್ಲಾ ಶಬ್ದಗಳೂ ವಿಷ್ಣುನಾಮವೆಂದು ತಿಳಿದವರಿಗೇ ವಿಷ್ಣುನಾಮೋಚ್ಚಾರಣ ಫಲವು ದೊರೆಯುತ್ತದೆ. ತಿಳಿಯದಿದ್ದವರಿಗೆ ದೊರೆಯುವುದಿಲ್ಲ. ಎಲ್ಲಾ ಬಾಹ್ಯೇಂದ್ರಿಯ ಗಳಿಂದ ಉಂಟಾಗುವ ಜ್ಞಾನವೂ ಮನೋಜನ್ಯವಾದ್ದರಿಂದ ಮನಸ್ಸನ್ನು ಅವಲಂಬಿ ಸಿದೆ. ಆದ್ದರಿಂದ ಮನಸ್ಸು ವ್ಯಾಕುಲವಲ್ಲದಿದ್ದರೆ ಮಾತ್ರ ತನ್ನ ಬೆನ್ನನ್ನು ಸ್ಪರ್ಶ ಮಾಡಿದರೂ 'ಇಂತಹವನು ನನ್ನನ್ನು ಸ್ಪರ್ಶ ಮಾಡಿದನು' ಎಂದು ತಿಳಿಯುತ್ತಾನೆ. ಮನಸ್ಸು ವ್ಯಾಕುಲವಾಗಿದ್ದಾಗ ಯಾವ ಜ್ಞಾನವೂ ಉಂಟಾಗುವುದಿಲ್ಲ.

**ಉಪನಿಷತ್—ತ್ರಯೋ ಲೋಕಾ ಏತ ಏವ । ವಾಗೇವಾಯಂ ಲೋಕಃ । ಮನೋಽಂತರಿಕ್ಷಲೋಕಃ । ಪ್ರಾಣೋಽಸೌ ಲೋಕಃ । ತ್ರಯೋ ವೇದಾ**

**ಏತ ಏವ । ವಾಗೇವರ್ಗ್ವೇದಃ । ಮನೋ ಯಜುರ್ವೇದಃ । ಪ್ರಾಣಃ ಸಾಮವೇದಃ । ದೇವಾಃ ಪಿತರೋ ಮನುಷ್ಯಾ ಏತ ಏವ । ವಾಗೇವ ದೇವಾಃ । ಮನಃ ಪಿತರಃ । ಪ್ರಾಣೋ ಮನುಷ್ಯಾಃ । ಪಿತಾ ಮಾತಾ ಪ್ರಜೈತ ಏವ । ಮನ ಏವ ಪಿತಾ । ವಾಙ್ ಮಾತಾ । ಪ್ರಾಣಃ ಪ್ರಜಾ । ವಿಜ್ಞಾತಂ ವಿಜಿಜ್ಞಾಸ್ಯಮವಿಜ್ಞಾತಮೇತ ಏವ । ಯತ್ಕಿಂಚ ವಿಜ್ಞಾತಂ ವಾಚಸ್ತದ್ರೂಪಂ । ವಾಗ್ಘಿ ವಿಜ್ಞಾತಾ । ವಾಗೇನಂ ತದ್ ಭೂತ್ವಾಽವತಿ। ಯತ್ಕಿಂಚ ವಿಜಿಜ್ಞಾಸ್ಯಂ ಮನಸಸ್ತದ್ ರೂಪಂ। ಮನೋ ಹಿ ವಿಜಿಜ್ಞಾಸ್ಯಂ । ಮನ ಏನಂ ತದ್ ಭೂತ್ವಾಽವತಿ । ಯತ್ ಕಿಂಚಾ-ವಿಜ್ಞಾತಂ ಪ್ರಾಣಸ್ಯ ತದ್ ರೂಪಂ । ಪ್ರಾಣೋ ಹ್ಯವಿಜ್ಞಾತಃ। ಪ್ರಾಣ ಏನಂ ತದ್ ಭೂತ್ವಾಽವತಿ ।**

ಉತ್ತಮ ದೇವತೆಗಳು ಅಭಿಮಾನಿಗಳಾದುದರಿಂದ ಅವರ ಸಾನ್ನಿಧ್ಯ ಹೆಚ್ಚಿದಂತೆ ಮನ ಆದಿಗಳು ಹೆಚ್ಚಾಗಿ ಹರಿಗೆ ತುಷ್ಟಿಕರವಾಗಿ ಅನ್ನವೆನಿಸುತ್ತವೆ. ಆ ಅಭಿಮಾನಿದೇವತೆಗಳ ಉತ್ತಮತ್ವಕ್ಕೆ ಕಾರಣವೇನೆಂದರೆ, ವಾಕ್ ಮನಸ್ಸು ಮತ್ತು ಪ್ರಾಣಕ್ಕೆ ಅಭಿಮಾನಿಗಳಾದ ಈ ಸರಸ್ವತೀ ಬ್ರಹ್ಮವಾಯುಗಳೇ ಮೂರು ಲೋಕಕ್ಕೂ ಅಭಿಮಾನಿಗಳು. ವಾಗಭಿಮಾನಿನಿಯಾದ ಸರಸ್ವತಿಯು ಭೂಲೋಕಕ್ಕೆ ಅಭಿಮಾನಿನಿ. ಮನೋಭಿಮಾನಿಯಾದ ಬ್ರಹ್ಮನು ಅಂತರಿಕ್ಷ ಲೋಕಕ್ಕೆ ಅಭಿಮಾನಿ. ಪ್ರಾಣಾಭಿಮಾನಿಯಾದ ವಾಯುವು ಸ್ವರ್ಗಲೋಕಕ್ಕೆ ಅಭಿಮಾನಿ. ವಾಕ್ ಮನಸ್ಸು ಪ್ರಾಣಾಭಿಮಾನಿಗಳೇ ಮೂರು ವೇದಗಳಿಗೂ ಅಭಿಮಾನಿಗಳು. ವಾಗಭಿಮಾನಿನಿಯಾದ ಸರಸ್ವತಿಯು ಋಗ್ವೇದಕ್ಕೆ ಅಭಿಮಾನಿನಿ. ಮನೋಭಿಮಾನಿಯಾದ ಬ್ರಹ್ಮನು ಯಜುರ್ವೇದಕ್ಕೆ ಅಭಿಮಾನಿ. ಪ್ರಾಣಾಭಿಮಾನಿಯಾದ ವಾಯುವು ಸಾಮವೇದಕ್ಕೆ ಅಭಿಮಾನಿ. ವಾಕ್ ಮನಃ ಪ್ರಾಣಾಭಿಮಾನಿಗಳೇ ದೇವ ಪಿತೃ ಮನುಷ್ಯರಿಗೆ ಅಭಿಮಾನಿಗಳು. ವಾಗಭಿಮಾನಿನಿಯಾದ ಸರಸ್ವತಿಯು ದೇವತೆಗಳಿಗೆ ಅಭಿಮಾನಿನಿ. ಮನೋಭಿಮಾನಿಯಾದ ಬ್ರಹ್ಮನು ಪಿತೃಗಳಿಗೆ ಅಭಿಮಾನಿ. ಪ್ರಾಣಾಭಿಮಾನಿಯಾದ ವಾಯುವು ಮನುಷ್ಯರಿಗೆ ಅಭಿಮಾನಿ. ವಾಗಾದ್ಯಭಿಮಾನಿಗಳೇ ಪಿತೃ, ಮಾತೃ ಮತ್ತು ಪ್ರಜೆಗಳಿಗೆ ಅಭಿಮಾನಿಗಳು. ಮನೋಭಿಮಾನಿಯೇ ಪಿತೃಗಳಿಗೆ ಅಭಿಮಾನಿ. ವಾಗಭಿಮಾನಿನಿಯಾದ ಸರಸ್ವತಿಯೇ ಮಾತೃಗಳಿಗೆ ಅಭಿಮಾನಿನಿ. ಪ್ರಾಣಾಭಿಮಾನಿಯಾದ ವಾಯುವೇ ಪ್ರಜೆಗಳಿಗೆ ಅಭಿಮಾನಿ. ವಾಗಾದ್ಯಭಿಮಾನಿಗಳೇ ವಿಜ್ಞಾತ, ವಿಜಿಜ್ಞಾಸ್ಯ ಮತ್ತು ಅವಿಜ್ಞಾತಕ್ಕೆ ಅಭಿಮಾನಿಗಳು. ವಿಜ್ಞಾತವಾದುದು ಎಂದರೆ ವಿಜ್ಞಾನಕ್ಕೆ ವಿಷಯವಾದುದು ವಾಗಭಿಮಾನಿನಿಯಾದ ಸರಸ್ವತಿಯ ಪ್ರತಿಮೆ. ಏಕೆಂದರೆ ವಾಗಭಿಮಾನಿನಿಯೇ ವಿಜ್ಞಾತಕ್ಕೆ ಅಭಿಮಾನಿನಿ. ಆ ವಾಗಭಿಮಾನಿನಿಯು ತನ್ನ ಮಹಿಮೆಯನ್ನು ತಿಳಿದವನನ್ನು ವಿಜ್ಞಾತಾಭಿಮಾನಿನಿಯಾಗಿ ರಕ್ಷಿಸುತ್ತಾಳೆ.

ಜಿಜ್ಞಾಸೆಗೆ-ವಿಚಾರಕ್ಕೆ ವಿಷಯವಾದುದು ಮನೋಽಭಿಮಾನಿಯಾದ ಬ್ರಹ್ಮನ ಪ್ರತಿಮೆ. ಏಕೆಂದರೆ ಮನೋಽಭಿಮಾನಿಯು ವಿಜಿಜ್ಞಾಸ್ಯವಾದುದಕ್ಕೆ ಅಭಿಮಾನಿ. ಮನೋಽಭಿಮಾನಿಯಾದ ಆ ಬ್ರಹ್ಮನು ತನ್ನ ಮಹಿಮೆಯನ್ನು ತಿಳಿದವನನ್ನು ವಿಜಿಜ್ಞಾಸ್ಯಾಭಿಮಾನಿಯಾಗಿ ರಕ್ಷಿಸುತ್ತಾನೆ. ವಿಜ್ಞಾನಕ್ಕೆ ವಿಷಯವಾಗದಿರುವುದು ಪ್ರಾಣನ ಪ್ರತಿಮೆ. ಏಕೆಂದರೆ ಪ್ರಾಣನು ವಿಜ್ಞಾನಕ್ಕೆ ವಿಷಯವಾಗದುದಕ್ಕೆ ಅಭಿಮಾನಿ. ಪ್ರಾಣನು ತನ್ನ ಮಹಿಮೆಯನ್ನು ತಿಳಿದವನನ್ನು ಅವಿಜ್ಞಾತಾಭಿಮಾನಿಯಾಗಿ ರಕ್ಷಿಸುತ್ತಾನೆ.

**ಭಾಷ್ಯ—ಲೋಕ ವೇದ ಸುರ ಜ್ಞಾತ ಪಿತ್ರಾದೇಶ್ಚಾಭಿಮಾನಿನಃ ।**

**ಅನುವಾದ**—ಮನಸ್ಸು ಮೊದಲಾದವುಗಳಿಗೆ ಲೋಕವೇದಾದಿಗಳಿಂದ ಅಭೇದವಿಲ್ಲ. ಆದ್ದರಿಂದ ತ್ರಯೋ ಲೋಕಾಃ ಇತ್ಯಾದಿ ವಾಕ್ಯಗಳಿಗೆ ಮನಸ್ಸು ಮೊದಲಾದವುಗಳಿಗೆ ಅಭಿಮಾನಿಗಳಾದ ಬ್ರಹ್ಮ, ಸರಸ್ವತಿ ಮತ್ತು ವಾಯುಗಳೇ ಲೋಕ, ವೇದ, ಸುರರು, ಪಿತೃಗಳು,ಮನುಷ್ಯರು, ವಿಜ್ಞಾತ, ವಿಜಿಜ್ಞಾಸ್ಯ, ಅವಿಜ್ಞಾತ, ಪಿತೃ, ಮಾತೃ, ಪ್ರಜಾ ಇವುಗಳಿಗೆ ಅಭಿಮಾನಿಗಳು ಎಂದು ಅರ್ಥ ಗ್ರಹಿಸಬೇಕು.

**ವಾಣೀ ಬ್ರಹ್ಮರಿಂದ ಪ್ರಾಣನ ಉತ್ಪತ್ತಿ :**

**ಉಪನಿಷತ್-ತಸ್ಯೈ ವಾಚಃ ಪೃಥಿವೀ ಶರೀರಂ।ಜ್ಯೋತೀ ರೂಪಮಯಮಗ್ನಿಃ। ತದ್ ಯಾವತ್ಯೇವ ವಾಕ್ ತಾವತೀ ಪೃಥಿವೀ ತಾವಾನಯಮಗ್ನಿಃ।**

ಸರಸ್ವತೀ ಬ್ರಹ್ಮವಾಯುಗಳಿಗೆ ಇನ್ನೂ ಬೇರೆ ಮಹಿಮೆಗಳಿವೆ. ಆ ಸರಸ್ವತಿಗೆ ಪೃಥಿವಿಯು ಶರೀರ. ಈ ಅಗ್ನಿರೂಪವಾದ ಜ್ಯೋತಿಯು ಪ್ರತಿಮೆ. ಅಂದರೆ ಪೃಥಿವೀ ಮತ್ತು ಅಗ್ನಿ ಎರಡಕ್ಕೂ ವಾಣಿಯು ಅಭಿಮಾನಿನಿ. ಪೃಥಿವೀ ಮತ್ತು ಅಗ್ನಿಗಳಿಗೆ ವಾಣಿಗಿಂತ ಹೆಚ್ಚು ವ್ಯಾಪ್ತಿ ಇದ್ದರೆ ಅವುಗಳು ವಾಣಿಯ ಶರೀರವಾಗುವುದು ಹೇಗೆ ಎಂದರೆ, ಪೃಥಿವೀ ಮತ್ತು ಅಗ್ನಿಗಳಿಗೆ ವಾಣಿಯು ಅಭಿಮಾನಿನಿಯಾದುದರಿಂದಲೇ ವಾಣಿಗೆ ಎಷ್ಟು ಪರಿಮಾಣವಿದೆಯೋ ಅಷ್ಟೇ ಪರಿಮಾಣ ಪೃಥಿವೀ ಮತ್ತು ಅಗ್ನಿಗಳಿಗೂ ಇದೆ. ಏಕೆಂದರೆ ಅಭಿಮಾನಿ ಇಲ್ಲದೆ ಅಭಿಮನ್ಯಮಾನವಿರಲಾರದು.

**ಉಪನಿಷತ್—ಅಥೈತಸ್ಯ ಮನಸೋ ದ್ಯೌಃ ಶರೀರಂ। ಜ್ಯೋತೀ ರೂಪಮಸಾವಾದಿತ್ಯಃ । ತದ್ ಯಾವದೇವ ಮನಸ್ತಾವತೀ ದ್ಯೌಃ ತಾವಾನಸಾವಾದಿತ್ಯಃ । ತೌ ಮಿಥುನಂ ಸಮೈತಾಂ । ತತಃ ಪ್ರಾಣೋಽಜಾಯತ । ಸ ಇಂದ್ರಃ । ಸ ಏಷೋ ಅಸಪತ್ನಃ । ದ್ವಿತೀಯೋ ವೈ ಸಪತ್ನಃ । ನಾಸ್ಯ ಸಪತ್ನೋ ಭವತಿ ಯ ಏವಂ ವೇದ ।**

ಈ ಮನೋಭಿಮಾನಿಯಾದ ಬ್ರಹ್ಮನಿಗೆ ದ್ಯುಲೋಕವು ಶರೀರ. ಆದಿತ್ಯರೂಪನಾದ ಜ್ಯೋತಿಯು ಪ್ರತಿಮೆ. ಅಂದರೆ ದ್ಯುಲೋಕ ಮತ್ತು ಆದಿತ್ಯ ಇವೆರಡಕ್ಕೂ ಬ್ರಹ್ಮನು ಅಭಿಮಾನಿ. ಆದ್ದರಿಂದಲೇ ಮನೋಭಿಮಾನಿಯಾದ ಬ್ರಹ್ಮನಿಗೆ ಎಷ್ಟು ಪರಿಮಾಣವಿದೆಯೋ ದ್ಯುಲೋಕ ಮತ್ತು ಆದಿತ್ಯರಿಗೂ ಅಷ್ಟೇ ಪರಿಮಾಣವಿದೆ. ವಾಕ್ ಮತ್ತು ಮನೋಭಿಮಾನಿಗಳಾದ ವಾಣಿ ಮತ್ತು ಬ್ರಹ್ಮರು ಜೊತೆಗೂಡಿದರು. ಅನಂತರ ಪ್ರಾಣನು ರೂಪಾಂತರದಿಂದ ಜನಿಸಿದನು. ಆ ಪ್ರಾಣನು ಪರಮೈಶ್ವರ್ಯವುಳ್ಳವನು. ಶತ್ರುರಹಿತನಾದವನು. ಕಲ್ಯಾದಿ ಶತ್ರುಗಳು ಇರುವಾಗ ಪ್ರಾಣನು ಹೇಗೆ ಶತ್ರುರಹಿತನಾಗುತ್ತಾನೆ? ಎಂದರೆ, ಸಮಬಲನಾದವನು ಶತ್ರುವಾಗುತ್ತಾನೆ ಎಂದು ಪ್ರಸಿದ್ಧವಷ್ಟೆ. ಕಲ್ಯಾದಿಗಳು ಅಸಮಬಲರಾದ್ದರಿಂದ ಪ್ರಾಣನು ಶತ್ರುಹೀನನಾಗಿದ್ದಾನೆ. ಪ್ರಾಣನು ಶತ್ರುರಹಿತನೆಂದು ಯಾರು ತಿಳಿಯುತ್ತಾನೆಯೋ ಅವನಿಗೆ ಶತ್ರುಗಳಿರುವುದಿಲ್ಲ.

**ವಾಣೀ ಬ್ರಹ್ಮ ಪ್ರಾಣರ ಉಪಾಸನೆ ಮೋಕ್ಷಸಾಧನ :**

**ಉಪನಿಷತ್—ಅಥೈತಸ್ಯ ಪ್ರಾಣಸ್ಯಾಽಪಃ ಶರೀರಂ । ಜ್ಯೋತೀ ರೂಪಂ ಅಸೌ ಚಂದ್ರಃ । ತದ್ ಯಾವಾನೇವ ಪ್ರಾಣಸ್ತಾವತ್ಯ ಆಪಃ ತಾವಾನಸೌ ಚಂದ್ರಃ । ತ ಏತೇ ಸರ್ವ ಏವ ಸಮಾಃ । ಸರ್ವೇಽನಂತಾಃ । ಸ ಯೋ ಹೈತಾನಂತವತ ಉಪಾಸ್ತೇಽಂತವಂತಂ ಸ ಲೋಕಂ ಜಯತಿ । ಅಥ ಯೋ ಹೈತಾನನಂತಾನುಪಾಸ್ತೇ ಅನಂತಂ ಸ ಲೋಕಂ ಜಯತಿ ।**

ಪ್ರಾಣಾಭಿಮಾನಿಯಾದ ವಾಯುವಿಗೆ ಜಲವು ಶರೀರ. ಚಂದ್ರರೂಪವಾದ ಜ್ಯೋತಿ ಪ್ರತಿಮೆ, ಅಂದರೆ ವಾಯುವು ಜಲ ಮತ್ತು ಚಂದ್ರ ಇವರಿಬ್ಬರಿಗೂ ಅಭಿಮಾನಿ. ಆದ್ದರಿಂದ ಪ್ರಾಣನ ಪರಿಮಾಣವೆಷ್ಟಿದೆಯೋ ಜಲ ಮತ್ತು ಚಂದ್ರರ ಪರಿಮಾಣವೂ ಅಷ್ಟೇ ಇದೆ. ಮನೋ ವಾಕ್ ಪ್ರಾಣಾಭಿಮಾನಿಗಳಾದ ಬ್ರಹ್ಮಾದಿಗಳು ಗುಣದಲ್ಲಿ ತರತಮ ಭಾವವನ್ನು ಹೊಂದಿದ್ದರೂ ವ್ಯಾಪ್ತಿಯಲ್ಲಿ ಸಮರಾದವರು. ಈ ಮೂವರು ರುದ್ರಾದಿಗಳ ದೃಷ್ಟಿಯಿಂದ ಅನಂತರು. ಯಾರು ಈ ಮೂವರನ್ನು ಜೀವರಂತೆ ಅಲ್ಪ ಗುಣವುಳ್ಳವರೆಂದು ಉಪಾಸನೆ ಮಾಡುತ್ತಾನೆಯೋ ಅವನು ನಶ್ವರವಾದ ಲೋಕಗಳನ್ನು ಪಡೆಯುತ್ತಾನೆ. ಮತ್ತು ಯಾರು ಈ ಮೂವರನ್ನು ಉಳಿದ ಜೀವರಿಗಿಂತ ಬಹುಗುಣವುಳ್ಳವರೆಂದು ಉಪಾಸನೆ ಮಾಡುತ್ತಾನೆಯೋ ಅವನು ನಾಶರಹಿತವಾದ ವಿಷ್ಣುಲೋಕವನ್ನು ಹೊಂದುತ್ತಾನೆ.

**ಭಾಷ್ಯ—ದ್ಯುಪೃಥಿವ್ಯಗ್ನಿಶಚೀಯರ್ಾಪಾಂ ಸೋಮಸ್ಯಾಪ್ಯಭಿಮಾನಿನಃ ।**
**ಸ ಇಂದ್ರಃ ಪರಮೈಶ್ವರ್ಯಾದಶತ್ರುಃ ಸಮವರ್ಜನಾತ್ ।**

**ವಾಯುರೇತೇ ಸಮಾ ವ್ಯಾಪ್ತೌ ಬ್ರಹ್ಮೇಶೌ ಗುಣತೋಽಧಿಕೌ ।**
**ಅನಂತಾಶ್ಚ ಗುಣಾ ಹ್ಯೇಷಾಮನ್ಯಜೀವವ್ಯಪೇಕ್ಷಯಾ ।**
**ತೇಭ್ಯೋಽಪ್ಯನಂತಾ ವಿಷ್ಣೋಸ್ತು ತೇಷಾಮೇವಮುಪಾಸಕಃ ।**
**ನಿತ್ಯಲೋಕೋಪಭೋಗೀ ಸ್ಯಾದನಿತ್ಯಸ್ಯಾನ್ಯಥಾ ಭವೇತ್ ।**

**ಅನುವಾದ**—ಮನೋಭಿಮಾನಿಯಾದ ಬ್ರಹ್ಮನು ದ್ಯುಲೋಕ ಮತ್ತು ಸೂರ್ಯನಿಗೂ ವಾಗಭಿಮಾನಿನಿಯಾದ ಸರಸ್ವತಿಯು ಪೃಥಿವೀ ಮತ್ತು ಅಗ್ನಿಗಳಿಗೂ, ಪ್ರಾಣಾಭಿಮಾನಿಯಾದ ವಾಯುವು ಜಲ ಮತ್ತು ಚಂದ್ರರಿಗೂ ಅಭಿಮಾನಿಗಳು. ಪರಮೈಶ್ವರ್ಯವುಳ್ಳವನಾದುದರಿಂದ ಮುಖ್ಯಪ್ರಾಣನಿಗೆ ಇಂದ್ರನೆಂದೂ, ಸಮಾನಬಲನಾದ ಶತ್ರುವಿನಿಂದ ರಹಿತನಾದುದರಿಂದ ಅಶತ್ರುವೆಂದೂ ಹೆಸರು. ಈ ಮೂವರೂ ಒಂದೇ ರೀತಿಯಾದ ಸಮಾನವಾದ ವ್ಯಾಪ್ತಿಯುಳ್ಳವರು. ಬ್ರಹ್ಮ ವಾಯುಗಳು ಮಾತ್ರ ಸರಸ್ವತಿಗಿಂತ ಗುಣದಲ್ಲಿ ಅಧಿಕರಾದವರು. ರುದ್ರಾದಿ ಜೀವರಿಗೆ ಹೋಲಿಸಿದರೆ ಈ ಮೂವರೂ ಗುಣದಲ್ಲಿ ಅವರಿಗಿಂತ ಬಹಳ ಅಧಿಕರಾದುದರಿಂದ ಅನಂತರೆನಿಸುತ್ತಾರೆ. ಆದರೆ ವಿಷ್ಣುವಿನ ಗುಣಗಳು ಮಾತ್ರ ಆ ಮೂವರಿಗಿಂತಲೂ ಅಧಿಕವಾಗಿ ಅನಂತವಾಗಿವೆ. ಆ ಮೂವರನ್ನು ರುದ್ರಾದಿಗಳಿಗಿಂತ ಅಧಿಕವಾಗಿ ಅನಂತಗುಣವುಳ್ಳವರೆಂದು ಉಪಾಸನೆ ಮಾಡುವವನು ವಿಷ್ಣುಲೋಕದಲ್ಲಿ ಶಾಶ್ವತವಾಗಿ ಆನಂದವನ್ನು ಅನುಭವಿಸುತ್ತಾನೆ. ಹೀಗೆ ಉಪಾಸನೆ ಮಾಡದೆ, ರುದ್ರಾದಿಗಳಿಗಿಂತ ಅಲ್ಪ ಗುಣವುಳ್ಳವರು ಎಂದು ಉಪಾಸನೆ ಮಾಡಿದರೆ ಅನಿತ್ಯಲೋಕ ಪ್ರಾಪ್ತಿಯಾಗುತ್ತದೆ.

**ಚಂದ್ರಾಂತರ್ಗತ ಪ್ರಾಣೋಪಾಸನೆ :**

**ಉಪನಿಷತ್—ಸ ಏಷ ಸಂವತ್ಸರಃ ಪ್ರಜಾಪತಿಃ ಷೋಡಶಕಲಃ । ತಸ್ಯ ರಾತ್ರಯ ಏವ ಪಂಚದಶ ಕಲಾಃ । ಧ್ರುವೈವಾಸ್ಯ ಷೋಡಶೀ ಕಲಾ ।**

ಈ ವಾಯುವು ಸಂ-ಸಮ್ಯಕ್ ಎಂದರೆ ಚೆನ್ನಾಗಿ, ವತ್ಸ-ವಿಷ್ಣುವಿನ ಮಗನಾಗಿ, ರ–ರಮತೇ ಸಂತೋಷಪಡುತ್ತಾನೆ ಎಂಬ ಕಾರಣದಿಂದ ಸಂವತ್ಸರನೆನಿಸಿದ್ದಾನೆ, ಪ್ರಜಾಪಾಲಕನಾಗಿದ್ದಾನೆ. ಷೋಡಶಕಲೆಗಳುಳ್ಳ ಚಂದ್ರನಲ್ಲಿದ್ದಾನೆ. ಚಂದ್ರಸ್ಥ ವಾಯುವಿನ ಪಂಚದಶ ಕಲೆಗಳಿಗೆ ರಾತ್ರಿ ಎಂದು ಹೆಸರು. ಹದಿನಾರನೆಯ ಕಲೆಗೆ ಧ್ರುವಾ ಎಂದು ಹೆಸರು.

**ಉಪನಿಷತ್—ಸ ರಾತ್ರಿಭಿರೇವಾಽಚ ಪೂರ್ಯತೇಽಪ ಚ ಕ್ಷೀಯತೇ। ಸೋಽಮಾವಾಸ್ಯಾಂ ರಾತ್ರಿಮೇತಯಾ ಷೋಡಶ್ಯಾ ಕಲಯಾ ಸರ್ವಮಿದಂ ಪ್ರಾಣಭೃದನುಪ್ರವಿಶ್ಯ ತತಃ ಪ್ರಾತರ್ಜಾಯತೇ । ತಸ್ಮಾದೇತಾಂ ರಾತ್ರಿಂ**

**ಪ್ರಾಣಭೃತಃ ಪ್ರಾಣಂ ನ ವಿಚ್ಛಿಂದ್ಯಾದಪಿ ಕೃಕಲಾಸಸ್ಯ । ಏತಸ್ಯಾ ಏವ ದೇವತಾಯಾ ಅಪಚಿತ್ಯೈ ।**

ಹದಿನೈದು ಕಲೆಗಳಿಗೆ ರಾತ್ರಿ ಎಂದು ಹೆಸರು ಹೇಗೆಂದರೆ, ಆ ಚಂದ್ರಸ್ಥನಾದ ವಾಯುವು ಶುಕ್ಲಪಕ್ಷದ ಹದಿನೈದು ರಾತ್ರಿಗಳಲ್ಲಿ ಹದಿನೈದು ಕಲೆಗಳಿಂದ ಪರಿಪೂರ್ಣ ನಾಗುತ್ತಾನೆ. ಕೃಷ್ಣಪಕ್ಷದ ಹದಿನೈದು ರಾತ್ರಿಗಳಲ್ಲಿ ಹದಿನೈದು ಕಲೆಗಳಿಂದ ಕ್ಷಯವನ್ನು ಹೊಂದುತ್ತಾನೆ. ಹೀಗೆ ಪ್ರತಿಯೊಂದು ರಾತ್ರಿಯಲ್ಲೂ ಕಲೆಗಳು ವೃದ್ಧಿಯನ್ನು ಅಥವಾ ಕ್ಷಯವನ್ನು ಹೊಂದುವುದರಿಂದ ಕಲೆಗಳಿಗೆ ರಾತ್ರಿ ಎಂದು ಹೆಸರು. ವಾಯುವು ಸ್ವತಃ ಕಲಾರಹಿತನಾದರೂ ತನಗೆ ಅಧಿಷ್ಠಾನನಾದ ಚಂದ್ರನಲ್ಲಿ ಷೋಡಶಕಲೆಗಳಿರುವುದರಿಂದ ತಾನೂ ಷೋಡಶಕಲನೆಂದು ಹೇಳಲ್ಪಡುತ್ತಾನೆ. ಪಂಚ ದಶಕಲಾಕ್ಷಯವನ್ನು ಹೊಂದಿದ ಬಳಿಕ ಅವನು ಅಮಾವಾಸ್ಯೆಯ ರಾತ್ರಿಯಲ್ಲಿ ಧ್ರುವಾ ಎನ್ನುವ ಹದಿನಾರನೆಯ ಕಲೆಯಿಂದ ಸಮಸ್ತವಾದ ಪ್ರಾಣಿ ಸಮೂಹವನ್ನು ಪ್ರವೇಶಿಸಿ ಮರುದಿನ ಬೆಳಿಗ್ಗೆ ಎಂದರೆ ಪ್ರತಿಪತ್ ತಿಥಿಯಲ್ಲಿ ದ್ವಿತೀಯ ಕಲಾಯುಕ್ತ ನಾಗುತ್ತಾನೆ. ಆದ್ದರಿಂದ ಅಮಾವಾಸ್ಯೆಯ ರಾತ್ರಿಯಲ್ಲಿ ಚಂದ್ರಸ್ಥನಾದ ವಾಯುವು ಸಕಲ ಪ್ರಾಣಿಗಳಲ್ಲಿಯೂ ಪ್ರವೇಶಿಸಿರುವುದರಿಂದ ಆ ರಾತ್ರಿ ಪ್ರಾಣಿವಧೆ ಮಹಾಪಾಪ ಕರ. ಅದನ್ನು ಮಾಡಬಾರದು. ಅಲ್ಪದೋಷಕರವಾದ ಒಂದು ಹೆಂಟೆಗೊದ್ದದ ವಧೆಯನ್ನೂ ಮಾಡಬಾರದು. ವಧೆ ಮಾಡದಿರುವುದು ವಾಯುದೇವತೆಯ ಪೂಜೆ ಯೆನಿಸುತ್ತದೆ.

**ಭಾಷ್ಯ—ವಾಯುಃ ಪ್ರಜಾಪತಿಃ ಸೋಽಸೌ ಚಂದ್ರಸಂಸ್ಥೋ ವಿಶೇಷತಃ ।**
**ರಾತ್ರೌ ರಾತ್ರೌ ಕ್ಷಯಾದಸ್ಯ ಪೂರಣಾದ್ ರಾತ್ರಿನಾಮಕಾಃ ।**
**ಕಲಾಃ ಪಂಚದಶ ಪ್ರೋಕ್ತಾ ಧ್ರುವೈವಾಸ್ಯ ತು ಷೋಡಶೀ ।**
**ಅಕಲೋಽಪಿ ಸ ಚಂದ್ರಸ್ಯ ಕಲಾಭಿಃ ಪ್ರೋಚ್ಯತೇ ತಥಾ ।**
**ಸೋಽಮಾವಾಸ್ಯಾಂ ಯತೋ ರಾತ್ರೌ ಪ್ರಾಣಭೃತ್ಸು ವ್ಯವಸ್ಥಿತಃ ।**
**ಕಲ್ಯಾವೇಶಾದಲ್ಪದೋಷಃ ಕೃಕಲಾಸವಧೋಽಪಿ ಸನ್ ।**
**ತಸ್ಯಾಂ ರಾತ್ರೌ ಮಹಾದೋಷೋ ದೇವತಾವೇಶತೋ ಭವೇತ್ ।**
**ವಾಯುಃ ಸಂವತ್ಸರಃ ಪ್ರೋಕ್ತೋ ವತ್ಸೋ ವಿಷ್ಣೋರಸೌ ಯತಃ ।**
**ಸಮ್ಯಗೇವ ರತಿಂ ಯಾತಿ...॥**

**ಅನುವಾದ**—ಮುಖ್ಯಪ್ರಾಣನೇ ಎಲ್ಲ ಜೀವಿಗಳನ್ನು ರಕ್ಷಿಸುವವನು. ಜಲ ಕ್ಕಿಂತಲೂ ಚಂದ್ರನಲ್ಲಿ ಮುಖ್ಯಪ್ರಾಣನ ಸನ್ನಿಧಾನವು ವಿಶೇಷವಾಗಿದೆ. ಕೃಷ್ಣಪಕ್ಷದ ಪ್ರತಿರಾತ್ರಿಯಲ್ಲೂ ಕಲೆಗಳು ಕ್ಷೀಣವಾಗುವುದರಿಂದಲೂ, ಶುಕ್ಲಪಕ್ಷದ ಪ್ರತಿರಾತ್ರಿ ಯಲ್ಲಿಯೂ ಕಲೆಗಳು ವೃದ್ಧಿಯಾಗುವುದರಿಂದಲೂ, ಹದಿನೈದು ಕಲೆಗಳಿಗೆ ರಾತ್ರಿ

ಎಂದು ಹೆಸರು. ಹದಿನಾರನೆಯ ಕಲೆಗೆ ಧ್ರುವಾ ಎಂದು ಹೆಸರು. ವಾಯುದೇವರಿಗೆ ಕಲೆಗಳಿಲ್ಲದಿದ್ದರೂ, ಅಧಿಷ್ಠಾನನಾದ ಚಂದ್ರನಲ್ಲಿ ಹದಿನಾರು ಕಲೆಗಳಿರುವುದರಿಂದ ವಾಯುವಿಗೆ ಹದಿನಾರು ಕಲೆಗಳಿವೆ ಎಂದು ಹೇಳಲ್ಪಡುತ್ತದೆ. ಆ ಮುಖ್ಯವಾಯುವು ಅಮಾವಾಸ್ಯೆಯ ರಾತ್ರಿಯಲ್ಲಿ ಪ್ರಾಣಿಗಳಲ್ಲಿ ವಿಶೇಷವಾಗಿ ಸನ್ನಿಹಿತನಾಗಿರುತ್ತಾನೆ. ಹೆಂಟೆಗೊದ್ದದಲ್ಲಿ ಕಲಿಯ ಆವೇಶವಿರುವುದರಿಂದ ಅದರ ವಧೆಯು ಅಲ್ಪದೋಷಕ್ಕೆ ಕಾರಣವಾದರೂ ಅಮಾವಾಸ್ಯೆಯ ರಾತ್ರಿಯಲ್ಲಿ ಮುಖ್ಯವಾಯುವೆಂಬ ಮಹಾದೇವತೆಯ ಆವೇಶವಿರುವುದರಿಂದ ಆಗ ಅದರ ವಧೆಯೂ ಮಹಾದೋಷಕ್ಕೇ ಕಾರಣವಾಗುತ್ತದೆ. ವಿಷ್ಣುವಿಗೆ ವತ್ಸನಾಗಿ ಉತ್ತಮ ಸುಖವನ್ನೂ ಹೊಂದಿರುವ ಕಾರಣ ವಾಯುವಿಗೆ ಸಂವತ್ಸರನೆಂದು ಹೆಸರು.

**ಉಪನಿಷತ್—ಯೋ ವೈ ಸಂವತ್ಸರಃ ಪ್ರಜಾಪತಿಃ ಷೋಡಶಕಲೋಽಯಮೇವ ಸ ಯೋಽಯಮೇವಂವಿತ್ ಪುರುಷಃ।ತಸ್ಯ ವಿತ್ತಮೇವ ಪಂಚದಶ ಕಲಾಃ। ಆತ್ಮೈವಾಸ್ಯ ಷೋಡಶೀ ಕಲಾ । ಸ ವಿತ್ತೇನೈವಾಽಚ ಪೂರ್ಯತೇಽಪ ಚ ಕ್ಷೀಯತೇ । ತದೇತನ್ನಾಭ್ಯಂ ಯದಯಮಾತ್ಮಾ । ಪ್ರಧಿರ್ವಿತ್ತಂ । ತಸ್ಮಾದ್ ಯದ್ಯಪಿ ಸರ್ವಜ್ಯಾನಿಂ ಜೀಯತ ಆತ್ಮನಾ ಚೇಜ್ಜೀವತಿ ಪ್ರಧಿನಾಽಗಾದಿತ್ಯೇವ ತದಾಹುಃ ।**

ಷೋಡಶಕಲೆಯುಳ್ಳ ಚಂದ್ರನಲ್ಲಿರುವ ಸಂವತ್ಸರನೂ ಪ್ರಜಾಪತಿಯೂ ಆದ ಮುಖ್ಯಪ್ರಾಣನೇ ಸಪ್ತಾನ್ನಸೃಷ್ಟಿಜ್ಞಾನಿಯಾದ ಪುರುಷನಲ್ಲಿಯೂ ಇದ್ದಾನೆ. ಜ್ಞಾನಿಯಲ್ಲಿ ಸ್ಥಿತನಾದ ಪ್ರಾಣನಿಗೆ ಜ್ಞಾನಿಯ ಹಿರಣ್ಯಾದಿ ವಿತ್ತವೇ ಪಂಚದಶ ಕಲೆಗಳು. ಜ್ಞಾನಿಯ ದೇಹವೇ ಹದಿನಾರನೆಯ ಕಲೆ. ಜ್ಞಾನಿಸ್ಥನಾದ ವಾಯುವು ವಿತ್ತದ ಆಗಮನದಿಂದ ವೃದ್ಧಿಯನ್ನೂ, ವಿತ್ತದ ನಾಶದಿಂದ ಕ್ಷಯವನ್ನೂ ಹೊಂದುತ್ತಾನೆ. ವಿತ್ತವು ಆಗಮಾಪಾಯಿಯಾದ್ದರಿಂದ ಅದು ಅಸ್ಥಿರವಾದ ಪಂಚದಶಕಲೆಗಳಂತೆ,ಮತ್ತು ದೇಹವು ಸ್ಥಿರವಾದ್ದರಿಂದ ಅದು ಧ್ರುವಕಲೆಯಂತೆ. ದೇಹವು ರಥಚಕ್ರನಾಭಿಸ್ಥಾನೀಯವಾದುದು. ವಿತ್ತವು ಅರ(ಅರೆಕಾಲು) ನೇಮಿ ಇತ್ಯಾದಿ ಸ್ಥಾನೀಯವಾದದ್ದು. ದೇಹ ಮತ್ತು ವಿತ್ತಗಳು ನಾಭಿ ಮತ್ತು ಅರನೇಮ್ಯಾದಿಸ್ಥಾನೀಯಗಳಾದುದರಿಂದ ಇನ್ನೊಬ್ಬರು ಅರನೇಮ್ಯಾದಿಸ್ಥಾನೀಯವಾದ ಸರ್ವಸ್ವವನ್ನು ಅಪಹಾರ ಮಾಡಿದರೂ, ನಾಭಿಸ್ಥಾನೀಯವಾದ ದೇಹದಿಂದ ಜೀವಿಸಿದ್ದರೆ, ಅರಸ್ಥಾನೀಯವಾದ ವಿತ್ತದಿಂದ ಮಾತ್ರವೇ ಹೀನನಾದನು ಎಂದೇ ಹೇಳುತ್ತಾರೆ.

**ಭಾಷ್ಯ—.........ಸ ಏವಂವಿದುಷಿ ಸ್ಥಿತಃ ।**

**ಅಧ್ರುವಾಸ್ತು ಕಲಾ ಯದ್ವತ್ ಸೌಮ್ಯಾಸ್ತಸ್ಯ ತಥಾ ಧನಮ್ ।**

**[illegible] ।**

**ನಾಭಿಸ್ಥಾನಂ ಶರೀರಂ ತು ಚಕ್ರಸ್ಯ ಪ್ರಧಿವದ್ ಧನಮ್ ।**
**ಸರ್ವಸ್ವವಿಜಯೇಽಪ್ಯಸ್ಮಾತ್ ಪ್ರಧಿಮಾತ್ರಂ ಹಿ ಗಚ್ಛತಿ ।**
**ಏವಂ ಮಹಾಗುಣಾನ್ ದೇವಾನೇವಂ ಯೋ ವೇದ ಪೂರುಷಃ ।**
**ನ ಚೈಭ್ಯೋಽತಿಪ್ರಿಯಃ ಕಶ್ಚಿತ್ ವಿಷ್ಣೋರಸ್ತಿ ಕದಾಚನ ।**

**ಅನುವಾದ**—ಚಂದ್ರಾಂತಃಸ್ಥಿತನಾದ ಪ್ರಾಣನೇ ಸಪ್ತಾನ್ನಸೃಷ್ಟಿ ಜ್ಞಾನಿಯಲ್ಲಿಯೂ ಸನ್ನಿಹಿತನಾಗಿದ್ದಾನೆ. ಚಂದ್ರನ ಕಲೆಗಳು ಅನಿತ್ಯವಾಗಿರುವಂತೆ ಜ್ಞಾನಿಯ ವಿತ್ತವೂ ಆಗಮಾಪಾಯಿ. ಹೀಗೆ ಅನಿತ್ಯವಾದುದರಿಂದ ಅದು ಚಂದ್ರನ ಪಂಚದಶ ಕಲಾ ಸ್ಥಾನೀಯವಾದುದು. ಜ್ಞಾನಿಯ ಶರೀರವು ಹದಿನಾರನೆಯ ಧ್ರುವಕಲಾ ಸ್ಥಾನೀಯವಾದುದು. ಶರೀರವು ರಥಚಕ್ರದ ನಾಭಿಯಂತೆ. ಧನವು ಅರೆಕಾಲುಗಳು ಮುಂತಾದವುಗಳಂತೆ. ಯಾರಾದರೂ ಸರ್ವಸ್ವವನ್ನು ಅಪಹಾರಮಾಡಿದರೂ ಅರೆ ಕಾಲುಗಳ ಸ್ಥಾನದಲ್ಲಿರುವ ಧನ ಮಾತ್ರ ಹೋಗುತ್ತದೆ. ಶರೀರವು ಹೋಗುವುದಿಲ್ಲ. ಯಾವ ಪುರುಷನು ಬ್ರಹ್ಮ ಸರಸ್ವತೀ ವಾಯುಗಳನ್ನು ಮಹಾಗುಣವುಳ್ಳವರೆಂದು ತಿಳಿಯುತ್ತಾನೆಯೋ ವಿಷ್ಣುವು ಅವನಿಗೆ ಪ್ರಿಯನಾಗುತ್ತಾನೆ. ವಿಷ್ಣುವಿಗೆ ಬ್ರಹ್ಮ ವಾಯು ಸರಸ್ವತಿಗಳಿಗಿಂತ ಹೆಚ್ಚು ಪ್ರಿಯರಾದವರು ಯಾವ ಕಾಲದಲ್ಲಿಯೂ ಯಾರೂ ಇಲ್ಲ.

**ಭಾಷ್ಯ—ಚತುರ್ಥಂ ಭೋಜ್ಯಮೇವಾನ್ನಂ ಸರ್ವಸಾಧಾರಣಂ ಸ್ಮೃತಮ್ ।**
**ಆತ್ಮನೋಽತಿಸಮೀಪತ್ವಂ ತಸ್ಯ ಯೋಽನ್ನಸ್ಯ ಮನ್ಯತೇ ।**
**ಅಕ್ಷಯಂ ಪಾಪಮಸ್ಯ ಸ್ಯಾದ್ ದೇವಬ್ರಹ್ಮಸ್ವಹಾರಿಣಃ ।**
**ತದೇವ ಮಂತ್ರಯುಕ್ತತ್ವಾದ್ ಬಲಿಹೋಮಾತ್ಮನಾ ದ್ವಯಮ್ ।**
**ದೇವಾನಾಂ ಪ್ರದದೌ ವಿಷ್ಣುಸ್ತಸ್ಮಾನ್ನೈವೇಚ್ಛಯಾ ಯಜೇತ್ ।**
**ಯದೀಚ್ಛಯಾ ಯಜೇತ್ ತೇಷಾಮುಪಹರ್ತಾ ಭವಿಷ್ಯತಿ ।**
**ದೇವಸ್ವಂ ತೇನ ಯೇನೈವ ಕಾಮ್ಯಾರ್ಥಂ ವಿನಿಯೋಜಿತಮ್ ।**
**ಪರಕೀಯೇನ ವಿತ್ತೇನ ತಸ್ಮಿನ್ ವಿನಿಮಯೇ ಯಥಾ ।**

**ಅನುವಾದ**—ನಾಲ್ಕನೆಯದಾದ ಭೋಜ್ಯವಾದ ಅನ್ನವು ದೇವಬ್ರಾಹ್ಮಣಾದಿ ಸರ್ವಸಾಧಾರಣವಾದುದು. ಆದ್ದರಿಂದ ಸರ್ವಸಾಧಾರಣವಾದ ಈ ಅನ್ನವನ್ನು ತನ್ನದೇ ಎಂದು ತಿಳಿಯುವವನಿಗೆ ದೇವಸ್ವ ಮತ್ತು ಬ್ರಹ್ಮಸ್ವವನ್ನು ಅಪಹಾರ ಮಾಡಿದ ಕಾರಣದಿಂದ ಅಕ್ಷಯವಾದ ಪಾಪವು ಬರುತ್ತದೆ. ಏಕೆಂದರೆ ಸಾಧಾರಣವಾದ ಅನ್ನವನ್ನೇ ಮಂತ್ರಗಳಿಂದ ಪವಿತ್ರಗೊಳಿಸಿ ವೈಶ್ವದೇವ ಬಲಿಹರಣರೂಪವಾಗಿ ವಿಷ್ಣುವು ದೇವತೆಗಳಿಗೆ ಕೊಟ್ಟಿರುವನು. ಆದ್ದರಿಂದ ಆತ್ಮಫಲೇಚ್ಛೆಯಿಂದ ಯಾಗವನ್ನು ಮಾಡಬಾರದು. ತನ್ನ ಫಲವನ್ನು ಉದ್ದೇಶಿಸಿ ಯಾಗ ಮಾಡಿದರೆ ತನ ಐಹಿಕಸ್ವಾರ್ಥ

ದೇವತೆಗಳ ಅನ್ನವನ್ನು ಉಪಯೋಗಿಸಿದ ಕಾರಣದಿಂದ ದೇವಸ್ವವನ್ನು ಅಪಹಾರ ಮಾಡಿದ ದೋಷವು ಬರುತ್ತದೆ. ಈ ವಿಷಯದಲ್ಲಿ ದೃಷ್ಟಾಂತ–ಇನ್ನೊಬ್ಬನ ಹಣವನ್ನು ತಾನು ತೆಗೆದುಕೊಂಡು ಆ ಹಣದಿಂದಲೇ ಅವನಿಂದ ವಸ್ತ್ರಾದಿಗಳನ್ನು ಕ್ರಯಕ್ಕೆ ತೆಗೆದುಕೊಂಡರೆ ಹೇಗೆ ಪರದ್ರವ್ಯಾಪಹಾರ ಮಾಡಿದ ದೋಷವು ಬರುತ್ತದೆಯೋ ಹಾಗೆಯೇ ಪ್ರಕೃತದಲ್ಲಿಯೂ ಕೂಡ.

**ಭಾಷ್ಯ—ಚತುಷ್ಪಾದ್ಭ್ಯೋ ದ್ವಿಪದ್ಭ್ಯಶ್ಚ ಪಶುಭ್ಯಃ ಪಯಆತ್ಮಕಂ ।**
**ಪ್ರಾಯಚ್ಛತ್ ಸಪ್ತಮಾನ್ನಂ ಸ ಗೋಕ್ಷೀರಂ ಮುಖ್ಯಮತ್ರ ಚ ।**
**ಆತ್ಮನೇ ಚೈವ ದೇವಾನಾಂ ತದ್ ಹೋಮಾರ್ಥಂ ಪ್ರಕಲ್ಪಿತಮ್ ।**
**ಸಂವತ್ಸರಂ ಗೋಪಯಸಾ ಯೇನ ಹೋಮೋ ಹರೇಃ ಕೃತಃ ।**
**ಭಗವತ್ತತ್ತ್ವವಿದುಷಾ ತಸ್ಯ ಮುಕ್ತಿರ್ನ ಸಂಶಯಃ ।**
**ಅದೃಷ್ಟಭಗವದ್ರೂಪಸ್ಯೈತದ್ ದರ್ಶನಕಾರಣಮ್ ।**
**ಭಗವದ್‌ದೃಷ್ಟಿಪೂತಸ್ತು ವಿನಾ ಹೋಮೇನ ಮುಚ್ಯತೇ ।**
**ಸಪ್ತಾನ್ನಸೃಷ್ಟಿತತ್ತ್ವಜ್ಞಸ್ತ್ವೇಕಹೋಮೇನ ಮುಚ್ಯತೇ ।**
**ವಿಶೇಷಜ್ಞೋ ಯತಃ ಸೋಽಯಂ ಭಗವತ್ತತ್ತ್ವವೇದನೇ ।**

**ಅನುವಾದ**—ವಿಷ್ಣುವು ಸಪ್ತಮಾನ್ನವಾದ ಕ್ಷೀರವನ್ನು ನಾಲ್ಕುಪಾದಗಳುಳ್ಳ ಪಶುಗಳಿಗೂ, ಎರಡು ಪಾದಗಳುಳ್ಳ ಮನುಷ್ಯರಿಗೂ ಅನ್ನವಾಗಿ ಕೊಟ್ಟನು. ಅದರಲ್ಲಿ ಮುಖ್ಯವಾದ ಗೋಕ್ಷೀರವನ್ನು ತನಗೂ ಮತ್ತು ದೇವತೆಗಳಿಗೂ ಹೋಮಾರ್ಥವಾಗಿ ಕಲ್ಪಿಸಿದನು. ಯಾವ ಅಪರೋಕ್ಷಜ್ಞಾನಿಯು ಒಂದು ಸಂವತ್ಸರಕಾಲ ಗೋಕ್ಷೀರದಿಂದ ಶ್ರೀಹರಿಗೆ ಹೋಮ ಮಾಡುತ್ತಾನೆಯೋ ಅವನಿಗೆ ಮುಕ್ತಿಯಲ್ಲಿ ಆನಂದಾಭಿವೃದ್ಧಿಯಾಗುವ ವಿಷಯದಲ್ಲಿ ಸಂಶಯವಿಲ್ಲ. ಭಗವದ್ದರ್ಶನವಿಲ್ಲದವನು ಹೀಗೆ ಸಂವತ್ಸರ ಪರ್ಯಂತ ಮಾಡುವ ಹೋಮವು ಭಗವಂತನ ಸಾಕ್ಷಾತ್ಕಾರಕ್ಕೆ ಕಾರಣವಾಗುತ್ತದೆ. ಸಂವತ್ಸರ ಹೋಮದಿಂದಲೇ ಮುಕ್ತಿ ಎಂದು ತಿಳಿಯಕೂಡದು. ಭಗವಂತನ ದರ್ಶನದಿಂದ ಪವಿತ್ರನಾದವನು ಹೋಮವಿಲ್ಲದೆಯೂ ಮುಕ್ತನಾಗುತ್ತಾನೆ. ಮತ್ತು ಸಪ್ತಾನ್ನಸೃಷ್ಟಿಯ ತತ್ತ್ವವನ್ನು ತಿಳಿದವನು ಒಂದು ದಿನದ ಹೋಮದಿಂದಲೂ ಮುಕ್ತನಾಗುತ್ತಾನೆ. ಏಕೆಂದರೆ, ಭಗವಂತನ ತತ್ತ್ವವನ್ನು ತಿಳಿಯುವ ವಿಷಯದಲ್ಲಿ ಅವನು ವಿಶೇಷ ಜ್ಞಾನಿಯಾಗಿದ್ದಾನೆ.

**ಭಾಷ್ಯ—ಕೋ ನಾಮ ಭಗವಾನ್ ವಿಷ್ಣುಃ ಪರಮಾನಂದರೂಪತಃ ।**
**ಪ್ರಾಣಿನಾಂ ಕರ್ಮಭಿಶ್ಚೈವ ಸ್ವೇಚ್ಛಯಾ ಚ ಪುನಃ ಪುನಃ ।**
**ಸಪ್ತಾನ್ನಂ ಸೃಜತೇ ಯಸ್ಮಾದನ್ನಾನಾಮಕ್ಷಯಸ್ತತಃ ।**
**ತಸ್ಮಾ ಗಕ್ಷಿತಿನಾಮಾಽಸೌ ಭಗವಾನ್ ಪುರುಷೋತ್ತಮಃ ।**

ಯ ಏವಮಕ್ಷಿತಿಂ ವೇದ ಭಗವಂತಂ ಸನಾತನಮ್ ।
ಅಪ್ರಯತ್ನೇನ ಭೋಗಾಃ ಸ್ಯುರ್ಯಥೇಷ್ಟಾಸ್ತಸ್ಯ ಸರ್ವದಾ ।
ಸಪ್ತಾನ್ನೋಪಾಸನಂ ಯಸ್ಮಾದ್ ದೇವಾನಾಂ ಯೋಗ್ಯಮುತ್ತಮಂ।
ತಸ್ಮಾದ್ ದೇವತ್ವಮಾಪ್ನೋತಿ ಯೋಗ್ಯೋ ದೇವಪದಸ್ಯ ಯಃ ।
ಊರ್ಜಂ ದೇವಾನ್ನಮುದ್ದಿಷ್ಟಂ ಊರ್ಜಿತಾಸ್ತು ಗುಣಾಸ್ತಥಾ ।
ತದಪ್ಯಾಪ್ನೋತಿ ನ ನರಾ ಯೋಗ್ಯಾ ಏತದುಪಾಸನೇ ।
ಜ್ಞಾನಮಾತ್ರೇಣ ದೇವಾನಾಂ ಸಾಮೀಪ್ಯಂ ಪ್ರಾಪ್ನುವಂತಿ ತೇ ।
ಇತಿ ನಾರಾಯಣೀಯೇ ॥

**ಅನುವಾದ**—ಅತ್ಯುತ್ಕೃಷ್ಟ ಆನಂದಸ್ವರೂಪನಾದುದರಿಂದ ವಿಷ್ಣುವಿಗೆ ಕ ಎಂದು ಹೆಸರು. ಅವನು ಪ್ರಾಣಿಗಳ ಕರ್ಮಗಳಿಂದಲೂ, ತನ್ನ ಇಚ್ಛೆಯಿಂದಲೂ ಪುನಃ ಪುನಃ ಸಪ್ತವಿಧವಾದ ಅನ್ನಗಳನ್ನು ಸೃಷ್ಟಿ ಮಾಡುವುದರಿಂದ ಅವು ಪೂರ್ತಿಯಾಗಿ ನಾಶವನ್ನು ಹೊಂದುವುದಿಲ್ಲ. ಅನ್ನವು ಅಕ್ಷಯವಾಗುವುದಕ್ಕೆ ಕಾರಣನಾದುದರಿಂದ ಭಗವಂತನಾದ ಪುರುಷೋತ್ತಮನಿಗೆ ಅಕ್ಷಿತಿ ಎಂದು ಹೆಸರು. ಭಗವಂತನು ಹೀಗೆ ಅಕ್ಷಿತಿ ನಾಮಕನು ಎಂದು ಯಾರು ತಿಳಿಯುತ್ತಾನೆಯೋ ಅವನಿಗೆ ಯಥೇಷ್ಟ ಭೋಗಗಳೆಲ್ಲವೂ ಯಾವಾಗಲೂ ಅನಾಯಾಸವಾಗಿಯೇ ದೊರೆಯುತ್ತವೆ. ಈ ಉತ್ತಮವಾದ ಸಪ್ತಾನ್ನೋಪಾಸನೆಯು ದೇವತೆಗಳಿಗೆ ಯೋಗ್ಯವಾದದ್ದು. ಆದ್ದರಿಂದ ದೇವಪದಕ್ಕೆ ಯೋಗ್ಯನಾದವನು ಈ ಉಪಾಸನೆಯಿಂದ ದೇವಪದವಿಯನ್ನೇ ಪಡೆಯುತ್ತಾನೆ. ದೇವತೆಗಳ ಅನ್ನಕ್ಕೆ ಊರ್ಜವೆಂದು ಹೆಸರು. ಆ ಅನ್ನದ ಗುಣಗಳು ಉತ್ಕೃಷ್ಟವಾಗಿರುತ್ತವೆ. ದೇವಪದಯೋಗ್ಯನಾದವನು ದೇವಪದವಿಯ ಜೊತೆಗೆ ಇಂತಹ ಅನ್ನವನ್ನೂ ಪಡೆಯುತ್ತಾನೆ. ಮನುಷ್ಯರಿಗೆ ಈ ಉಪಾಸನೆಯನ್ನು ಮಾಡಲು ಅಧಿಕಾರವಿಲ್ಲ. ಆದರೆ ಈ ಸಪ್ತಾನ್ನಗಳ ಜ್ಞಾನದಿಂದ ದೇವತೆಗಳ ಸಾಮೀಪ್ಯವನ್ನು ಹೊಂದುತ್ತಾರೆ ಎಂದು ನಾರಾಯಣೀಯ ಎಂಬ ಗ್ರಂಥದಲ್ಲಿ ಹೇಳಿದೆ.

**ವಿವರಣೆ**–ಸಪ್ತಾನ್ನಬ್ರಾಹ್ಮಣಕ್ಕೆ ವ್ಯಾಖ್ಯಾನ ಮಾಡುತ್ತಾ 'ನಾರಾಯಣೀಯಂ' ಎಂಬ ಒಂದೇ ಗ್ರಂಥದಿಂದ ವಚನಗಳನ್ನು ಆಚಾರ್ಯರು ಉದಾಹರಿಸುತ್ತಿದ್ದಾರೆ. ಈ ಪ್ರಮಾಣ ವಚನಗಳು ಮೊದಲನೆಯ ಖಂಡದಿಂದ ಹಿಡಿದು ಇಪ್ಪತ್ತೆರಡನೆಯ ಖಂಡವನ್ನೂ ಸೇರಿಸಿ ಎಲ್ಲದಕ್ಕೂ ವ್ಯಾಖ್ಯಾನರೂಪವಾಗಿವೆ.

**ಸಪ್ತಾನ್ನೋಪಾಸಕನಿಗೆ ಪುತ್ರನಿಂದ ಪ್ರಯೋಜನ :**

**ಉಪನಿಷತ್**—**ಅಥ ತ್ರಯೋ ವಾವ ಲೋಕಾ ಮನುಷ್ಯಲೋಕಃ ಪಿತೃಲೋಕೋ ದೇವಲೋಕ ಇತಿ । ಸೋಽಯಂ ಮನುಷ್ಯಲೋಕಃ ಪುತ್ರೇಣೈವ ಜಯ್ಯೋ ನಾನ್ಯೇನ ಕರ್ಮಣಾ । ಕರ್ಮಣಾ ಪಿತೃಲೋಕಃ ।**

**ವಿದ್ಯಯಾ ದೇವಲೋಕಃ । ದೇವಲೋಕೋ ವೈ ಲೋಕಾನಾಂ ಶ್ರೇಷ್ಠಃ । ತಸ್ಮಾದ್ ವಿದ್ಯಾಂ ಪ್ರಶಂಸಂತಿ ।**

ಮನುಷ್ಯಲೋಕ, ಪಿತೃಲೋಕ ಮತ್ತು ದೇವಲೋಕ ಎಂದು ಮೂರುಲೋಕಗಳು. ಮನುಷ್ಯಲೋಕಸುಖವನ್ನು ಔರಸಪುತ್ರನಿಂದ ಅಥವಾ ಶಿಷ್ಯನಿಂದಲೇ ಪಡೆಯಬೇಕು. ಬೇರೆ ಕರ್ಮದಿಂದ ಪಡೆಯಲು ಸಾಧ್ಯವಿಲ್ಲ. ಯದ್ಯಪಿ ತನ್ನ ಕರ್ಮದಿಂದಲೇ ಜನ್ಮಾಂತರವನ್ನು ಪಡೆದು ಮನುಷ್ಯಲೋಕಸುಖವನ್ನು ಹೊಂದಲು ಸಾಧ್ಯ. ಆದರೂ ಜನ್ಮಾಂತರವಿಲ್ಲದೆಯೇ ಪುತ್ರಾದಿಗಳು ಮಾಡಿದ ಸತ್ಕರ್ಮದ ಫಲವಾಗಿ ಮನುಷ್ಯಲೋಕದಲ್ಲಿ ಸುಖವನ್ನು ಹೊಂದಲು ಸಾಧ್ಯ. ಪಿತೃಲೋಕ ಎಂದರೆ ಸ್ವರ್ಗಾದಿಗಳು. ಅದನ್ನು ಜ್ಯೋತಿಷ್ಟೋಮಾದಿ ಕರ್ಮಗಳಿಂದ ಪಡೆಯಬೇಕು. ದೇವಲೋಕವನ್ನು ಅಂದರೆ ಜನೋಲೋಕಾದಿಗಳನ್ನು ಮತ್ತು ಮೋಕ್ಷವನ್ನು ತತ್ವಜ್ಞಾನದಿಂದಲೇ ಪಡೆಯಬೇಕು. ಏಕೆಂದರೆ, ಈ ದೇವಲೋಕವೇ ಅತ್ಯಂತವಾದ ಶ್ರೇಷ್ಠವಾದ ಲೋಕ. ಆದ್ದರಿಂದ ಪ್ರಾಜ್ಞರು ದೇವಲೋಕಪ್ರಾಪ್ತಿಗೆ ಸಾಧನವಾದ ವಿದ್ಯೆಯನ್ನೇ ಪ್ರಶಂಸಿಸುತ್ತಾರೆ.

**ಉಪನಿಷತ್—ಅಥಾತಃ ಸಂಪ್ರತ್ತಿಃ । ಯದಾ ಪ್ರೈಷ್ಯನ್ ಮನ್ಯತೇಽಥ ಪುತ್ರಮಾಹ 'ತ್ವಂ ಬ್ರಹ್ಮ ತ್ವಂ ಯಜ್ಞಸ್ತ್ವಂ ಲೋಕ' ಇತಿ । ಸ ಪುತ್ರಃ ಪ್ರತ್ಯಾಹ 'ಅಹಂ ಬ್ರಹ್ಮಾಹಂ ಯಜ್ಞೋಽಹಂ ಲೋಕ' ಇತಿ । ಯದ್ವೈ ಕಿಂಚಾನೂಕ್ತಂ ತಸ್ಯ ಸರ್ವಸ್ಯ ಬ್ರಹ್ಮೇತ್ಯೇಕತಾ । ಯೇ ವೈ ಕೇ ಚ ಯಜ್ಞಾಸ್ತೇಷಾಂ ಸರ್ವೇಷಾಂ ಯಜ್ಞ ಇತ್ಯೇಕತಾ । ಯೇ ವೈ ಕೇ ಚ ಲೋಕಾಸ್ತೇಷಾಂ ಸರ್ವೇಷಾಂ ಲೋಕ ಇತ್ಯೇಕತಾ । ಏತಾವದ್ವಾ ಇದಂ ಸರ್ವಂ । ಏತನ್ಮಾ ಸರ್ವಂ ಸನ್ನಯಮಿತೋಽಭುನಜದಿತಿ । ತಸ್ಮಾತ್ ಪುತ್ರಮನುಶಿಷ್ಟಂ ಲೋಕ್ಯಮಾಹುಃ । ತಸ್ಮಾದೇನಮನುಶಾಸತಿ ।**

**ಸ ಯದೈವಂವಿದಸ್ಮಾತ್ ಲೋಕಾತ್ ಪ್ರೈತ್ಯಥೈಭಿರೇವ ಪ್ರಾಣೈಃ ಸಹ ಪುತ್ರಮಾವಿಶತಿ । ಸ ಯದ್ಯನೇನ ಕಿಂಚಿದಕ್ಷ್ಣಯಾ ಕೃತಂ ಭವತಿ ತಸ್ಮಾದೇನಂ ಸರ್ವಸ್ಮಾತ್ ಪುತ್ರೋ ಮುಂಚತಿ । ತಸ್ಮಾತ್ ಪುತ್ರೋ ನಾಮ । ಸ ಪುತ್ರೇಣೈವಾಸ್ಮಿನ್ ಲೋಕೇ ಪ್ರತಿತಿಷ್ಠತೀತಿ ।ಅಥೈನಮೇತೇ ದೇವಾಃ ಪ್ರಾಣಾ ಅಮೃತಾ ಆವಿಶಂತಿ ।**

ಈಗ ಮನುಷ್ಯಲೋಕಜಯಕ್ಕೆ ಕಾರಣವಾಗಬಲ್ಲ ಮಗನಿಗೆ ತಂದೆ ಮಾಡಬೇಕಾದ ಉಪದೇಶ ಪ್ರಕಾರವನ್ನು ಹೇಳುತ್ತೇವೆ. ತಂದೆಯು ಅರಿಷ್ಟದರ್ಶನದಿಂದ

ತಾನು ಮರಣ ಹೊಂದುವೆನೆಂದು ಯಾವಾಗ ಭಾವಿಸುತ್ತಾನೆಯೋ ಆಗ 'ನೀನು ಬ್ರಹ್ಮ, ನೀನು ಯಜ್ಞ, ನೀನು ಲೋಕ' ಎಂದು ಪುತ್ರನನ್ನು-ಕುರಿತು ಹೇಳಬೇಕು. ಆಗ ಪುತ್ರನು 'ನಾನು ಬ್ರಹ್ಮ, ನಾನು ಯಜ್ಞ, ನಾನು ಲೋಕ' ಎಂದು ಪ್ರತಿಯಾಗಿ ಹೇಳಬೇಕು. ವೇದಾದಿ ಅಧ್ಯಯನವನ್ನು ಮಾಡಿರುವುದು ಏನು ಪ್ರಸಿದ್ಧವಾಗಿದೆಯೋ ಅದನ್ನು ಬ್ರಹ್ಮಶಬ್ದದಿಂದ ತೆಗೆದುಕೊಳ್ಳಬೇಕು. ಪ್ರಸಿದ್ಧವಾದ ದ್ರವ್ಯಯಜ್ಞ, ತಪೋಯಜ್ಞಾದಿಗಳನ್ನು ಯಜ್ಞಶಬ್ದದಿಂದ ಇಟ್ಟುಕೊಳ್ಳಬೇಕು. ಪ್ರಸಿದ್ಧವಾದ ಮೋಕ್ಷಾದಿಲೋಕಗಳನ್ನು ಲೋಕಶಬ್ದದಿಂದ ಇಟ್ಟುಕೊಳ್ಳಬೇಕು. ಆದ್ದರಿಂದ 'ನೀನು ವೇದಾದಿ ಅಧ್ಯಯನವನ್ನು ಮಾಡು. ಅನಂತರ ವೇದೋಕ್ತರೀತಿಯಿಂದ ಯಜ್ಞವನ್ನು ಮಾಡಿ ಲೋಕಸಂಪಾದಕನಾಗು' ಎಂದು ತಂದೆಯ ಉಪದೇಶ. ಮಗನು 'ನಾನು ವೇದಾಧ್ಯಯನವನ್ನು ಮಾಡುತ್ತೇನೆ, ಯಜ್ಞವನ್ನು ಮಾಡುತ್ತೇನೆ ಮತ್ತು ಲೋಕಗಳನ್ನು ಸಂಪಾದಿಸುತ್ತೇನೆ' ಎಂದು ಉತ್ತರವನ್ನು ಕೊಡಬೇಕು. ಇದನ್ನು ಬಿಟ್ಟು ಉಪದೇಶಮಾಡಬೇಕಾದುದು ಬೇರೆ ಏನೂ ಇಲ್ಲ. ಉಪದೇಶಿಸಬೇಕಾದುದೆಲ್ಲ ಇಷ್ಟೇ- 'ವೇದಗಳನ್ನು ಅಧ್ಯಯನ ಮಾಡಿ ತದುಕ್ತ ಕರ್ಮಗಳನ್ನು ಆಚರಿಸಿ ಮೋಕ್ಷಾದಿ ಲೋಕಗಳನ್ನು ಸಂಪಾದಿಸು' ಎಂದು. ಸಪ್ತಾನ್ನಜ್ಞಾನಿಯಾಗಿದ್ದು ದೇವಾಂಶಸಂಭೂತನಾದ ತಂದೆಯು ಮರಣವನ್ನು ಹೊಂದಿ ಪ್ರಯಾಣ ಮಾಡುವಾಗ ಸನ್ಮಾರ್ಗಿಯಾದ ಪುತ್ರನಲ್ಲಿ ಒಂದು ಅಂಶದಿಂದ ಇದ್ದು ಈ ಸುಶಿಕ್ಷಿತನಾದ ಪುತ್ರನು ಮಾಡಿದ ವೇದಾಧ್ಯಯನಾದಿಫಲವನ್ನು ಅನುಭವಿಸುತ್ತಾನೆ. ಆದ್ದರಿಂದ ಸುಶಿಕ್ಷಿತನಾದ ಪುತ್ರನು ಲೋಕಸಾಧನನೆಂದು ಜ್ಞಾನಿಗಳು ಹೇಳುತ್ತಾರೆ. ಲೋಕಸಾಧನನಾದುದರಿಂದಲೇ ಮಗನಿಗೆ ತಂದೆಯು ಉಪದೇಶ ಮಾಡುತ್ತಾನೆ ಎಂದು ಅಭಿಪ್ರಾಯ.

ಮೃತನಾದವನು ಪುತ್ರನಲ್ಲಿರುವುದು ಸಾಧ್ಯವಿಲ್ಲ ಎಂದು ತಿಳಿಯಬಾರದು. ಸಪ್ತಾನ್ನವಿದ್ಯೋಪಾಸಕನಾದ ದೇವತೆಯು ಮನುಷ್ಯತ್ವವನ್ನು ಪಡೆದು ಈ ಲೋಕದಿಂದ ಮರಣ ಹೊಂದುವಾಗ ಅವನ ವಾಕ್, ಮನಃ ಪ್ರಾಣಾಭಿಮಾನಿಗಳಾದ ಸರಸ್ವತ್ಯಾದಿಗಳ ಜೊತೆಯಲ್ಲಿ ತನ್ನ ಸಾಮರ್ಥ್ಯದಿಂದ ಪುತ್ರನನ್ನು ಪ್ರವೇಶಿಸುತ್ತಾನೆ. ಸಪ್ತಾನ್ನಜ್ಞಾನಿಯಾದ ತಂದೆಯು ಒಂದು ಪಾಪಕರ್ಮವನ್ನು ಮಾಡಿದರೆ ಪುತ್ರನು ಅವನ ಪಾಪದ ಫಲವನ್ನು ಪರಿಹರಿಸುತ್ತಾನೆ. ಪುತ್ ಅಂದರೆ ಪಾಪಕರ್ಮದ ದೆಸೆಯಿಂದ, ತ್ರ ಅಂದರೆ ಕಾಪಾಡುವ ಕಾರಣದಿಂದಲೇ ಮಗನಿಗೆ ಪುತ್ರ ಎಂದು ಹೆಸರು. ಹೀಗೆ ಸಪ್ತಾನ್ನಜ್ಞಾನಿಯು ಪುತ್ರನಲ್ಲಿದ್ದೇ ಈ ಭೂಲೋಕದಲ್ಲಿ ಪ್ರತಿಷ್ಠೆಯನ್ನು ಪಡೆಯುತ್ತಾನೆ. ಇಷ್ಟು ಮಾತ್ರವೇ ಅಲ್ಲದೆ, ಮೋಕ್ಷಾನಂತರದಲ್ಲಿಯೂ ವಾಙ್ ಮನಃ ಪ್ರಾಣಾಭಿಮಾನಿಗಳಾದ ಸರಸ್ವತ್ಯಾದಿ ಮುಕ್ತದೇವತೆಗಳೂ ಅವನ ಸ್ವರೂಪಭೂತ ವಾಗಾದಿಗಳಿಗೆ ನಿಯಾಮಕರಾಗಿ ಅವನಲ್ಲಿ ಪ್ರವೇಶಿಸುತ್ತಾರೆ. ಇಲ್ಲಿ

ಮುಕ್ತಜೀವರಲ್ಲಿ ಹೇಳಿದ ಪ್ರಾಣಪ್ರವೇಶವು ರೂಪಾಂತರದಿಂದ ಬ್ರಹ್ಮದೇವರ ಪ್ರವೇಶವೆಂದೇ ತಿಳಿಯಬೇಕು.

**ಭಾಷ್ಯ—ಬ್ರಹ್ಮೇತಿ ವೇದಃ । ಸ್ವಾಧ್ಯಾಯಾದಿಕರ್ತೃತ್ವಾತ್ ಪುತ್ರಃ 'ತ್ವಂ ಬ್ರಹ್ಮೇ'ತ್ಯಾದ್ಯುಚ್ಯತೇ । ಆತ್ಮಾ ಭವತಿ ವ್ಯಾಪಕೋ ಭವತಿ ।**

**ಪುನಃ ಪುನಃ ಕರ್ಮಕೃತಿರ್ಮಾನುಷ್ಯಜಯ ಉಚ್ಯತೇ ।**
**ಜನ್ಮಾಂತರಂ ವಿನಾ ನೈವ ಕರ್ಮಣಾ ತತ್ತು ಯುಜ್ಯತೇ ।**
**ಪುತ್ರೇಣ ವಿದ್ಯಯಾ ನಿತ್ಯಮೇಕೈಕೇನಾಪಿ ಯುಜ್ಯತೇ ।**
**ಉಭಾಭ್ಯಾಂ ಕಿಮು ವಕ್ತವ್ಯಮುಷ್ಟಭಾಗಫಲಂ ಸುತಾತ್ ।**
**ವಿದ್ಯಯಾ ತ್ವರ್ಧಮಾಪ್ನೋತಿ ಸರ್ವಂ ಸಪ್ರಾಜ್ಞವಿಲ್ಲಭೇತ್ ।**
**ಪುತ್ರಮಾವಿಶ್ಯ ಸಾಮರ್ಥ್ಯಾನ್ಮುಚ್ಯತೇ ಛಿದ್ರಕರ್ಮಣಃ ।**
**ಅಕ್ಷ್ಣಂ ಪುದಿತಿ ಚ ಛಿದ್ರಂ ಪುತ್ರಸ್ತತ್ತ್ರಾಣಕೋ ಭವೇತ್ ।**

**ಅನುವಾದ**—'ತ್ವಂ ಬ್ರಹ್ಮ' ಎಂಬಲ್ಲಿ ಬ್ರಹ್ಮ ಎಂದರೆ ವೇದ. ಮಗನು ವೇದಾಧ್ಯಯನಾದಿಗಳನ್ನು ಮಾಡುವುದರಿಂದ 'ತ್ವಂ ಬ್ರಹ್ಮ' ಇತ್ಯಾದಿಯಾಗಿ ಹೇಳಲ್ಪಡುತ್ತಾನೆ.

'ಸ ಯ ಏವಂ ವಿತ್ ಸರ್ವೇಷಾಂ ಭೂತಾನಾಂ ಆತ್ಮಾ ಭವತಿ'ಎಂಬಲ್ಲಿ ಆತ್ಮಾ ಭವತಿ ಎಂದರೆ ವ್ಯಾಪಕನಾಗುತ್ತಾನೆ ಎಂದು ಅರ್ಥ.

ಪುನಃ ಪುನಃ ಕರ್ಮಗಳನ್ನು ಮಾಡುವುದೇ ಮನುಷ್ಯಲೋಕ ಜಯ ಎಂದು ಕರೆಯಲ್ಪಡುತ್ತದೆ. ತನ್ನ ಈ ಜನ್ಮದ ಕರ್ಮದಿಂದಲೇ ಕರ್ಮಾನುಷ್ಠಾನಯೋಗ್ಯ ಜನ್ಮಾಂತರ ಪಡೆದು ಕರ್ಮ ಮಾಡಬಹುದಾದರೂ, ಜನ್ಮಾಂತರವಿಲ್ಲದೆ ಪುನಃ ಪುನಃ ಕರ್ಮವನ್ನು ಮಾಡುವುದು ಸ್ವಕರ್ಮದಿಂದ ಕೂಡುವುದಿಲ್ಲ. ಆದರೆ ಜನ್ಮಾಂತರವಿಲ್ಲದೆಯೇ ಪುತ್ರನಿಂದ ಅಥವಾ ಶಿಷ್ಯನಿಂದ ಒಬ್ಬೊಬ್ಬನಿಂದಲೇ ನಿತ್ಯದಲ್ಲಿಯೂ ಪುನಃ ಪುನಃ ಕರ್ಮ ಮಾಡುವುದು ಕೂಡುತ್ತದೆ. ಇಬ್ಬರೂ ಸೇರಿದರೆ ಅದು ಕೂಡುತ್ತದೆಂದು ಪುನಃ ಹೇಳಬೇಕೆ? ಪುತ್ರ ಅಥವಾ ಶಿಷ್ಯನು ತನ್ನಿಂದ ಭಿನ್ನನಾದುದರಿಂದ ಅವನು ಮಾಡಿದ ಕರ್ಮದಿಂದ ತಂದೆ ಅಥವಾ ಗುರುವು ಹೇಗೆ ಪುನಃ ಪುನಃ ಕರ್ಮಮಾಡಿದಂತಾಗುತ್ತದೆ? ಎಂದರೆ,ಸಾಮಾನ್ಯವಾಗಿ ಪುತ್ರನ ಕರ್ಮದಿಂದ ಎಂಟನೆಯ ಒಂದು ಭಾಗದಷ್ಟು ಫಲವೂ, ಶಿಷ್ಯನ ಕರ್ಮದಿಂದ ಅರ್ಧಭಾಗದಷ್ಟು ಫಲವೂ ಲಭಿಸುತ್ತದೆ. ಆದರೆ ಸಪ್ರಾಜ್ಞಜ್ಞಾನಿಯಾದ ತಂದೆಯಾಗಲೀ, ಗುರುವಾಗಲೀ ಪುತ್ರ ಅಥವಾ ಶಿಷ್ಯನು ಮಾಡಿದ ಕರ್ಮದ ಪೂರ್ಣಫಲಕ್ಕೇ ಭಾಗಿಯಾಗುತ್ತಾನೆ. ತಂದೆಯು ಒಂದು ಅಂಶದಿಂದ ಮಗನಲ್ಲಿ ಪ್ರವೇಶಿಸಿ ಪಾಪಕರ್ಮದಿಂದ ಬಿಡುಗಡೆಯನ್ನು ಹೊಂದುತ್ತಾನೆ. 'ಅಕ್ಷ್ಣ ಪುತ್

ಛಿದ್ರ ಈ ಮೂರು ಪಾಪಕರ್ಮವಾಚಕವಾದ ಪರ್ಯಾಯಪದಗಳು. ಮಗನು ತಂದೆಯನ್ನು ಪಾಪಕರ್ಮದಿಂದ ರಕ್ಷಿಸುವುದರಿಂದ ಪುತ್ರನೆನಿಸುತ್ತಾನೆ.

**ವಾಣೀ ಬ್ರಹ್ಮರು ಮುಕ್ತನಿಯಾಮಕರು :**

**ಉಪನಿಷತ್—ಪೃಥಿವ್ಯೈ ಚೈನಮಗ್ನೇಶ್ಚ ದೈವೀ ವಾಗಾವಿಶತಿ। ಸಾ ವೈ ದೈವೀ ವಾಗ್ ಯಯಾ ಯದ್ಯದೇವ ವದತಿ ತತ್ತದ್ ಭವತಿ । ದಿವಶ್ಚೈನಮಾದಿತ್ಯಾಚ್ಚ ದೈವಂ ಮನ ಆವಿಶತಿ । ತದ್ ವೈ ದೈವಂ ಮನೋ ಯೇನಾನಂದ್ಯೇವ ಭವತಿ । ಅಥೋ ನ ಶೋಚತಿ। ಅದ್ಭ್ಯಶ್ಚೈನಂ ಚಂದ್ರಮಸಶ್ಚ ದೈವಃ ಪ್ರಾಣ ಆವಿಶತಿ । ಸ ವೈ ದೈವಃ ಪ್ರಾಣೋ ಯಃ ಸಂಚರಂಶ್ಚಾಸಂಚರಂಶ್ಚ ನ ವ್ಯಥತೇ । ಅಥೋ ನ ರಿಷ್ಯತಿ ।**

ಮುಕ್ತಳಾದ ದೈವೀ ಸರಸ್ವತಿಯು ಪೃಥಿವಿ ಮತ್ತು ಅಗ್ನಿಯ ಅಭಿಮಾನವನ್ನು ಬಿಟ್ಟು, ಮುಕ್ತನ ಸ್ವರೂಪಭೂತವಾದ ವಾಗಿಂದ್ರಿಯವನ್ನು ಪ್ರವೇಶಿಸುತ್ತಾಳೆ. ಯಾರಿಂದ ಆವಿಷ್ಟನೂ ಮತ್ತು ಪ್ರೇರಿತನೂ ಆದ ಮುಕ್ತ ದೇವತೆಯು ಯಾವ ಯಾವುದನ್ನು ಹೇಳುತ್ತಾನೆಯೋ ಅವೆಲ್ಲವೂ ಸತ್ಯವೇ ಆಗುತ್ತದೆಯೋ ಅಂತಹ ಸರಸ್ವತಿಯೇ ದೈವೀ ವಾಕ್ ಎಂದು ಕರೆಯಲ್ಪಡುತ್ತಾಳೆ. ಮನೋಭಿಮಾನಿಯಾದ ಮುಕ್ತ ದೈವಬ್ರಹ್ಮನು ಸ್ವರ್ಗಲೋಕ ಮತ್ತು ಸೂರ್ಯನ ಅಭಿಮಾನವನ್ನು ಬಿಟ್ಟು ಮುಕ್ತನ ಸ್ವರೂಪಭೂತವಾದ ಮನಸ್ಸನ್ನು ಪ್ರವೇಶಿಸುತ್ತಾನೆ. ಯಾರಿಂದ ಆವಿಷ್ಟನೂ ಮತ್ತು ಪ್ರೇರಿತನೂ ಆದ ಮುಕ್ತನು ಆನಂದವನ್ನೇ ಅನುಭವಿಸುತ್ತಾನೆಯೋ, ದುಃಖವನ್ನು ಅನುಭವಿಸುವುದಿಲ್ಲವೋ ಅಂತಹ ಬ್ರಹ್ಮನು ದೈವಂ ಮನಃ ಎಂದು ಕರೆಯಲ್ಪಡುತ್ತಾನೆ. ಪ್ರಾಣನು ಬ್ರಹ್ಮಪದವಿಯನ್ನು ಹೊಂದಿಯೆ ಮುಕ್ತನಾಗುವುದರಿಂದ ಪ್ರಾಣಾಭಿಮಾನಿಯಾದ ಮುಕ್ತ ದೈವಪ್ರಾಣನು, ಅಂದರೆ ಬ್ರಹ್ಮನೇ ಇನ್ನೊಂದು ರೂಪದಿಂದ, ಮುಕ್ತಿಯಲ್ಲಿ ಜಲ ಮತ್ತು ಚಂದ್ರನ ಅಭಿಮಾನವನ್ನು ಬಿಟ್ಟು ಮುಕ್ತರ ಸ್ವರೂಪಭೂತವಾದ ಪ್ರಾಣವನ್ನು ಪ್ರವೇಶಿಸುತ್ತಾನೆ. ಯಾರಿಂದ ಆವಿಷ್ಟನೂ ಪ್ರೇರಿತನೂ ಆದ ಮುಕ್ತನು ಸಂಚರಿಸುತ್ತಿದ್ದಾಗಲೂ ಸಂಚರಿಸದಿರುವಾಗಲೂ ವ್ಯಥ್ಯೆಪಡುವುದಿಲ್ಲವೋ ಮತ್ತು ಮರಣ ಹೊಂದುವುದಿಲ್ಲವೋ ಅಂತಹ ಮುಖ್ಯಪ್ರಾಣನು ದೈವಪ್ರಾಣನೆಂದು ಕರೆಯಲ್ಪಡುತ್ತಾನೆ. ಮನುಷ್ಯರಿಗೆ ಸಂಚರಿಸುತ್ತಿದ್ದರೆ ವ್ಯಥೆಯಾಗುತ್ತದೆ. ಅಶ್ವಗಳಿಗೆ ಸಂಚರಿಸದಿದ್ದರೆ ವ್ಯಥ್ಯೆಯಾಗುತ್ತದೆ. ಮುಕ್ತಜೀವನು ಸಂಚರಿಸಿದರೂ ಸಂಚರಿಸದಿದ್ದರೂ ವ್ಯಥೆಪಡುವುದಿಲ್ಲ ಮತ್ತು ಮರಣ ಹೊಂದುವುದಿಲ್ಲ. ಇದು ಮುಖ್ಯಪ್ರಾಣನ ಮಹಿಮೆ.

**ವಿವರಣೆ**—ಮುಕ್ತರಾದ ಪೃಥಿವ್ಯಭಿಮಾನಿದೇವತೆ ಮತ್ತು ಅಗ್ನಿದೇವತೆಯಲ್ಲಿ ವಿಶೇಷವಾಗಿ ಸನ್ನಿಹಿತಳಾಗಿರುವುದರಿಂದ ಮತ್ತು ಸಪ್ತಾನ್ನೋಪಾಸಕ ಮುಕ್ತದೇವತೆ

ಗಳಲ್ಲಿ ವಿಶೇಷವಾಗಿ ಸನ್ನಿಹಿತಳಾಗಿರುವುದರಿಂದ ಸರಸ್ವತಿಯು ದೈವೀ ಸರಸ್ವತಿ ಎನಿಸುತ್ತಾಳೆ. ಹೀಗೆಯೇ 'ದೈವಮನಸ್' 'ದೈವಪ್ರಾಣ'ಗಳೆಂದೂ ತಿಳಿಯಬೇಕು.

**ಉಪನಿಷತ್**—**ಸ ಯ ಏವಂವಿತ್ ಸರ್ವೇಷಾಂ ಭೂತಾನಾಮಾತ್ಮಾ ಭವತಿ ಯಥೈಷಾ ದೇವತಾ । ಏವಂ ಸ ಯಥೈತಾಂ ದೇವತಾಂ ಸರ್ವಾಣಿ ಭೂತಾನ್ಯವಂತ್ಯೇವಂ ಹೈವಂವಿದಂ ಸರ್ವಾಣಿ ಭೂತಾನ್ಯವಂತಿ । ಯದು ಕಿಂಚೇಮಾಃ ಪ್ರಜಾಃ ಶೋಚಂತ್ಯಮೈವಾಸಾಂ ತದ್ ಭವತಿ । ಪುಣ್ಯಮೇವಾಮುಂ ಗಚ್ಛತಿ । ನ ಹ ವೈ ದೇವಾನ್ ಪಾಪಂ ಗಚ್ಛತಿ ।**

ಸಪ್ರಾಣ್ನ ವಿದ್ಯೆಯನ್ನು ತಿಳಿದವನು ಮರಣಾನಂತರ ಕೇವಲ ತನ್ನ ಪುತ್ರನಲ್ಲಿ ಅಥವಾ ಶಿಷ್ಯನಲ್ಲಿ ಸನ್ನಿಹಿತನಾಗಿರುವುದಲ್ಲ. ಹೇಗೆ ಮುಖ್ಯಪ್ರಾಣನು ಎಲ್ಲ ಪ್ರಾಣಿಗಳಲ್ಲಿಯೂ ವ್ಯಾಪ್ತನಾಗಿರುತ್ತಾನೆಯೋ ಹಾಗೆಯೇ ಸಪ್ರಾಣ್ನ ವಿದ್ಯೆಯನ್ನು ತಿಳಿದವನೂ ಎಲ್ಲಾ ಪ್ರಾಣಿಗಳಲ್ಲಿ ವ್ಯಾಪ್ತನಾಗಿರುತ್ತಾನೆ. ಮುಖ್ಯಪ್ರಾಣನ ಸ್ವರೂಪದ ಜ್ಞಾನವು ಅತ್ಯಂತ ಗೋಪ್ಯವಾದುದರಿಂದ ಅಯೋಗ್ಯರಿಗೆ ಮುಖ್ಯಪ್ರಾಣನನ್ನು ಉಪದೇಶ ಮಾಡದೆ ಹೇಗೆ ಎಲ್ಲಾ ಜೀವರೂ ರಕ್ಷಿಸುತ್ತಾರೆಯೋ ಹಾಗೆಯೇ ಸಪ್ರಾಣ್ನವಿದ್ಯಾಭಿಜ್ಞನಾದ ಮುಕ್ತನನ್ನೂ ಎಲ್ಲಾ ಜೀವರು ರಕ್ಷಿಸುತ್ತಾರೆ. ಜೀವರು ಯಾವ ದುಃಖವನ್ನು ಅನುಭವಿಸುತ್ತಾರೆಯೋ ಅದನ್ನು ತಮ್ಮ ದೇಹ ನಿಯಾಮಕರಾದ ದೈತ್ಯರ ಜೊತೆಯಲ್ಲಿ ಜೀವರೇ ಅನುಭವಿಸುತ್ತಾರೆ ಹೊರತು, ಅವರಲ್ಲಿ ಸನ್ನಿಹಿತರಾದ ಸಪ್ರಾಣ್ನೋಪಾಸಕರಾದ ದೇವತೆಗಳಿಗೆ ದುಃಖ ಉಂಟಾಗುವುದಿಲ್ಲ. ಏಕೆಂದರೆ ಅವರಿಗೆ ಜೀವರು ಮಾಡಿದ ಪುಣ್ಯವೇ ಸೇರುತ್ತದೆ ಹೊರತು ಪಾಪವು ಸೇರುವುದಿಲ್ಲ. ನಿಯಾಮಕರಾಗಿ ಪ್ರಜೆಗಳ ದೇಹದಲ್ಲಿರುವ ದೇವತೆಗಳಿಗೆ ಎಂದೂ ಪಾಪವು ಸೇರುವುದಿಲ್ಲ ಎಂಬುದು ಪ್ರಮಾಣ ಸಿದ್ಧವಾದ ವಿಷಯ.

**ಭಾಷ್ಯ**—**ಪೃಥಿವ್ಯಾದಿಸ್ಥಿತಾ ದೇವಾಃ ಸರಸ್ವತ್ಯಾದಿಕಾಸ್ತ್ರಯಃ ।**
**ಅಧಿಕಾವೇಶತೋ ದೇವೇಷ್ವತೋ ದೇವಾ ಇತಿ ಸ್ಮೃತಾಃ ।**
**ಯದಾವೇಶಾತ್ ಸರ್ವಮುಕ್ತಂ ಸತ್ಯಂ ದೈವೀ ತು ವಾಗ್ ಹಿ ಸಾ ।**
**ಯದಾವೇಶಾನ್ನ ದುಃಖೀ ಸ್ಯಾದಾನಂದೀ ದೈವತಂ ಮನಃ ।**
**ಯದಾವೇಶಾತ್ ಸರ್ವಕಾರ್ಯೇಷ್ವಮ್ಲಾನಃ ಪ್ರಾಣ ಏವ ಸಃ ।**
**ಸರ್ವಸಾಮರ್ಥ್ಯಯುಕ್ತಃ ಸ್ಯಾನ್ನ ಮ್ರಿಯೇತ ಕದಾಚನ ।**
**ಏವಂ ಸಪ್ರಾಣ್ನವಿನ್ಮುಕ್ತಸ್ತ್ರಿಭಿರಾವಿಷ್ಟ ಏವ ತು ।**
**ಸರ್ವೇಷು ವ್ಯಾಪ್ತಿಮನ್ವೇತಿ ನ ದುಃಖೀ ಪ್ರಾಣಿಷು ಸ್ಥಿತೇಃ ।**

**ಅನುವಾದ**—ಸಂಸಾರದಶೆಯಲ್ಲಿ ಪೃಥಿವ್ಯಾದಿಗಳಿಗೆ ಅಭಿಮಾನಿಗಳಾದ

ಸರಸ್ವತೀ ಬ್ರಹ್ಮ ಮತ್ತು ವಾಯು ಈ ಮೂರು ದೇವತೆಗಳು ಸಪ್ತಾನ್ನವಿದ್ಯಾಭಿಜ್ಞರಾದ ಮುಕ್ತದೇವತೆಗಳಲ್ಲಿ ಮತ್ತು ಮುಕ್ತ ಪೃಥಿವ್ಯಾದಿ ದೇವತೆಗಳಲ್ಲಿ ವಿಶೇಷವಾಗಿ ಸನ್ನಿಹಿತರಾಗಿರುವುದರಿಂದ ದೈವ ಅಂದರೆ ದೇವ ಸಂಬಂಧಿಗಳು ಎಂದು ಕರೆಸಿಕೊಳ್ಳುತ್ತಾರೆ. ಸರಸ್ವತಿಯ ವಿಶೇಷಾವೇಶದಿಂದಲೇ ಮುಕ್ತನು ಹೇಳಿದುದೆಲ್ಲವೂ ಸತ್ಯವೇ ಆಗುತ್ತದೆ. ಆದ್ದರಿಂದ ಸರಸ್ವತಿಗೆ 'ದೈವೀ ವಾಕ್' ಎಂದು ಹೆಸರು. ಬ್ರಹ್ಮನ ಆವೇಶದಿಂದ ಮುಕ್ತನು ದುಃಖವನ್ನು ಅನುಭವಿಸದೆ ಆನಂದವನ್ನೇ ಅನುಭವಿಸುತ್ತಾನೆ. ಆದ್ದರಿಂದ ಬ್ರಹ್ಮನಿಗೆ 'ದೈವಂ ಮನಃ' ಎಂದು ಹೆಸರು. ಮುಕ್ತಪ್ರಕರಣದಲ್ಲಿ ವಾಯುವೆಂದರೆ ಬ್ರಹ್ಮನೇ. ಬ್ರಹ್ಮನದೇ ಇನ್ನೊಂದು ರೂಪದ ಆವೇಶದಿಂದ ಮುಕ್ತನು ಯಾವ ಕಾರ್ಯ ಮಾಡಿದರೂ ಆಯಾಸಪಡುವುದಿಲ್ಲ. ಆದ್ದರಿಂದ ಆ ಬ್ರಹ್ಮನ ರೂಪವೇ ದೈವ ಮುಖ್ಯಪ್ರಾಣ. ಅವನ ಆವೇಶದಿಂದ ಮುಕ್ತನು ಸರ್ವಸಾಮರ್ಥ್ಯಯುಕ್ತನೂ ಮತ್ತು ಯಾವ ಕಾಲದಲ್ಲಿಯೂ ಮರಣವಿಲ್ಲದವನೂ ಆಗುತ್ತಾನೆ. ಹೀಗೆ ಈ ಮೂರು ದೇವತೆಗಳಿಂದ ಆವಿಷ್ಟನಾದ ಸಪ್ತಾನ್ನಜ್ಞಾನಿಯು ಸಂಸಾರದ ಸರ್ವಜೀವರಲ್ಲಿಯೂ ವ್ಯಾಪ್ತನಾಗಿರುತ್ತಾನೆ. ಸರ್ವಜೀವರಲ್ಲಿ ವ್ಯಾಪ್ತನಾಗಿದ್ದರೂ ಅವನು ದುಃಖವನ್ನು ಅನುಭವಿಸುವುದಿಲ್ಲ.

**ಭಾಷ್ಯ—ಸಪ್ತಾನ್ನೋಪಾಸನಾಯೋಗ್ಯಾ ದೇವಾ ಏಕಾಂತತೋ ಹಿ ಯತ್ ।**
**ದೇವಾಂಶ್ಚ ಪಾಪಂ ನಾಪ್ನೋತಿ ತಸ್ಮಾತ್ ಪಾಪಂ ನ ತಸ್ಯ ತು ।**
**ದೇವಾ ಮನುಷ್ಯತಾಮಂಶೈರಾಪ್ತಾ ಯೇ ಪುತ್ರತಃ ಫಲಮ್ ।**
**ಸ್ಯಾತ್ ತೇಷಾಮೇವ ಚಾಽಮುಕ್ತೇರ್ಮುಕ್ತಾನಾಂ ನ ತು ಕಿಂಚನ ।**
**ಮುಕ್ತಾನಾಂ ದೈವವಾಗಾದೇರಾವೇಶಃ ಸಂಪ್ರಕೀರ್ತಿತಃ ।**
**ಪ್ರಾಣಜ್ಞಾನಂ ಯಥಾಽವಂತಿ ರಹಸ್ಯಮಿತಿ ಸರ್ವದಾ ।**
**ಏವಂ ಮುಕ್ತಸ್ವರೂಪಂ ಚಾಪ್ಯವಂತ್ಯೇವ ರಹಸ್ಯತಃ ।**

**ಅನುವಾದ**—ಸಪ್ತಾನ್ನಜ್ಞಾನಿಗೆ ಜೀವರಲ್ಲಿರುವಾಗ ದುಃಖವಿಲ್ಲ. ಏಕೆಂದರೆ ಸಪ್ತಾನ್ನವಿದ್ಯೋಪಾಸನೆಗೆ ಯೋಗ್ಯರಾದವರು ದೇವತೆಗಳೇ. ಪ್ರಾಣಿಗಳಲ್ಲಿ ನಿಯಾಮಕರಾದ ದೇವತೆಗಳಿಗೆ ಎಂದೂ ಪ್ರಾಣಿಗಳು ಮಾಡುವ ಪಾಪವು ಬರುವುದೇ ಇಲ್ಲ. ಆದ್ದರಿಂದ ಸಪ್ತಾನ್ನೋಪಾಸಕನಿಗೆ ಪಾಪ ಉಂಟಾಗುವುದಿಲ್ಲ.

ದೇವತೆಗಳೇ ಸಪ್ತಾನ್ನೋಪಾಸಕರಾದರೆ ದೇವತೆಗಳಿಗೆ ಮರಣ ಉಂಟಾದಾಗ ಅವರ ಮಕ್ಕಳೇ ಇರುವುದಿಲ್ಲ. ವ್ಯುತ್ಕ್ರಮದಿಂದ ಲಯ ಉಂಟಾಗುವುದರಿಂದ ದೇವತೆಗಳ ಮಕ್ಕಳ ಮರಣವಾದ ಮೇಲೆಯೆ ದೇವತೆಗಳ ಮರಣವಾಗುತ್ತದೆ. ಆದ್ದರಿಂದ ಸಪ್ತಾನ್ನವಿದ್ಯೋಪಾಸಕರಿಗೆ ಮರಣದ ನಂತರ ಪುತ್ರರಿಂದ ಹೇಗೆ ಫಲ ಉಂಟಾಗುತ್ತದೆ? ಎಂದರೆ, ದೇವತೆಗಳು ತಮ್ಮ ಅಂಶಗಳಿಂದ ಮನುಷ್ಯರಾಗಿ ಅವತಾರ ಮಾಡಿ

ದಾಗ ಅವರಿಗೆ ಮರಣಾನಂತರ ಮುಕ್ತಿಯನ್ನು ಹೊಂದುವವರೆಗೆ ಪುತ್ರರಿಂದ ಫಲ ಉಂಟಾಗುತ್ತದೆ. ಮುಕ್ತರಾದ ಮೇಲೆ ಪುತ್ರರಿಂದ ಯಾವ ಫಲವೂ ಲಭಿಸುವುದಿಲ್ಲ. ಆದರೆ ದೈವಪಾಗಾದಿಗಳ ವಿಶೇಷಾಪೇಕ್ಷೆ ಸಪ್ತಾನ್ನವಿದ್ಯೋಪಾಸಕರಿಗೆ ಮುಕ್ತಿಯ ನಂತರ ಲಭಿಸುವ ಫಲ. ಮುಖ್ಯಪ್ರಾಣನ ಸ್ವರೂಪಜ್ಞಾನವು ಗೋಪ್ಯವಾಗಿರುವುದರಿಂದ ಹೇಗೆ ಅದನ್ನು ಅಯೋಗ್ಯರಿಗೆ ಉಪದೇಶಿಸುವುದಿಲ್ಲವೋ ಹಾಗೆಯೇ ಸಪ್ತಾನ್ನವಿದ್ಯೋಪಾಸಕರಾದ ಮುಕ್ತ ಮತ್ತು ಅಮುಕ್ತ ದೇವತೆಗಳ ಸ್ವರೂಪವು ಗೋಪ್ಯವಾಗಿರುವುದರಿಂದ ಅದನ್ನು ಅಯೋಗ್ಯರಿಗೆ ಉಪದೇಶಿಸುವುದಿಲ್ಲ.

**ಇಂದ್ರಿಯಾಭಿಮಾನಿಗಳ ಸ್ಪರ್ಧೆಯಲ್ಲಿ ಪ್ರಾಣನಿಗೆ ಜಯ :**

**ಉಪನಿಷತ್—ಅಥಾತೋ ವ್ರತಮೀಮಾಂಸಾ । ಪ್ರಜಾಪತಿರ್ಹ ಕರ್ಮಾಣಿ ಸಸೃಜೇ । ತಾನಿ ಸೃಷ್ಟಾನ್ಯನ್ಯೋನ್ಯೇನಾಸ್ಪರ್ಧಂತ । ವದಿಷ್ಯಾಮ್ಯೇವಾಹಮಿತಿ ವಾಗ್ ದಧ್ರೇ । ದ್ರಕ್ಷ್ಯಾಮ್ಯಹಮಿತಿ ಚಕ್ಷುಃ । ಶ್ರೋಷ್ಯಾಮ್ಯಹಮಿತಿ ಶ್ರೋತ್ರಂ । ಏವಮನ್ಯಾನಿ ಕರ್ಮಾಣಿ ಯಥಾ ಕರ್ಮ । ತಾನಿ ಮೃತ್ಯುಃ ಶ್ರಮೋ ಭೂತ್ವೋಪಯೇಮೇ । ತಾನ್ಯಾಪ್ನೋತ್ । ತಾನ್ಯಾಪ್ತ್ವಾ ಮೃತ್ಯುರವಾರುಂಧತ । ತಸ್ಮಾತ್ ಶ್ರಾಮ್ಯತ್ಯೇವ ವಾಕ್ । ಶ್ರಾಮ್ಯತಿ ಚಕ್ಷುಃ । ಶ್ರಾಮ್ಯತಿ ಶ್ರೋತ್ರಂ । ಅಥೇಮಮೇವ ನಾಽಪ್ನೋತ್ ಯೋಽಯಂ ಮಧ್ಯಮಃ ಪ್ರಾಣಃ।**

ಈಗ ಸಪ್ತಾನ್ನವಿದ್ಯೋಪಾಸನೆಯ ಪೂರ್ಣಫಲ ಪಡೆಯುವುದಕ್ಕಾಗಿ ಮಾಡಬೇಕಾಗಿರುವ ಪ್ರಾಣೋಚ್ಛ್ವಾಸ ವ್ರತವು ನಿರೂಪಿಸಲ್ಪಡುತ್ತದೆ. ಪ್ರಜಾಪತಿಯಾದ ವಾಸುದೇವನು ಅಧ್ಯಾತ್ಮದಲ್ಲಿ ವಚನಾದಿ ಕ್ರಿಯಾಸಾಧನರಾದ ವಾಗಾದೀಂದ್ರಿಯಾಭಿಮಾನಿಗಳೂ, ಅಧಿದೈವದಲ್ಲಿ ಜ್ವಲನಾದಿ ಕ್ರಿಯೆಗಳನ್ನು ಮಾಡುವವರೂ ಆದ ಅಗ್ನ್ಯಾದಿ ದೇವತೆಗಳನ್ನು ಸೃಷ್ಟಿಸಿದನು. ಈ ದೇವತೆಗಳು 'ನಾನೇ ಶ್ರೇಷ್ಠ, ನಾನೇ ಶ್ರೇಷ್ಠ' ಎಂದು ಪರಸ್ಪರವಾಗಿ ವಿವಾದ ಮಾಡಿದರು. ಅವರು ಮುಖ್ಯಪ್ರಾಣನ ಶ್ರೇಷ್ಠತ್ವವನ್ನು ತಿಳಿದಿದ್ದರೂ ಸಹ ಅವನ ಶ್ರೇಷ್ಠತ್ವವನ್ನು ಲೋಕಕ್ಕೆ ತೋರಿಸುವುದಕ್ಕಾಗಿ ವಿವಾದವನ್ನು ಮಾಡಿದರು. ಆಗ ಶ್ರೀಹರಿಯು, 'ನಿಮ್ಮಲ್ಲಿ ಯಾರು ನಿಮ್ಮ ನಿಮ್ಮ ವ್ಯಾಪಾರವನ್ನು ದಣಿವಿಲ್ಲದೆ ನಿರಂತರವಾಗಿ ಮಾಡುತ್ತೀರೋ ಅವರು ಶ್ರೇಷ್ಠರು' ಎಂದು ಹೇಳಿದನು. ಅನಂತರ ಅವರು ತಮ್ಮ ತಮ್ಮ ವ್ಯಾಪಾರಗಳನ್ನು ಮಾಡಿ ದಣಿದು ಹೋದರು. ಮೊದಲಿಗೆ 'ನಾನು ಜೀವನಿಂದ ವಚನಕ್ರಿಯೆಯನ್ನು ದಣಿಯದೆ ಮಾಡಿಸುತ್ತೇನೆ' ಎಂದು ವಾಗಭಿಮಾನಿಯಾದ ವಾಕ್ ನಾಮಕನಾದ ಅಗ್ನಿಯು ನಿರ್ಧರಿಸಿದನು. ಚಕ್ಷುರಭಿಮಾನಿಯಾದ ಸೂರ್ಯನೂ ಸಹ

'ನಾನು ಜೀವನಿಂದ ಅಶ್ರಾಂತನಾಗಿ ನೋಡಿಸುತ್ತೇನೆ' ಎಂದು ನಿರ್ಧರಿಸಿದನು. ಶ್ರೋತ್ರಾಭಿಮಾನಿಯಾದ ಚಂದ್ರನೂ ಸಹ 'ಜೀವನಿಂದ ನಾನು ಅಶ್ರಾಂತನಾಗಿ ಕೇಳಿಸುತ್ತೇನೆ' ಎಂದು ನಿರ್ಧರಿಸಿದನು. ಹೀಗೆಯೇ ಬೇರೆ ಬೇರೆ ಕ್ರಿಯಾಸಾಧನಗಳಾದ ಮನಸ್ಸು ಮೊದಲಾದವುಗಳ ಅಭಿಮಾನಿ ಶೇಷಾದಿ ದೇವತೆಗಳು ತಮ್ಮ ತಮ್ಮ ವ್ಯಾಪಾರಗಳನ್ನು ದಣಿವಿಲ್ಲದೆ ಜೀವನಿಂದ ಮಾಡಿಸುತ್ತೇವೆ ಎಂದು ನಿರ್ಧರಿಸಿದರು. ಮತ್ತು ಅಶ್ರಾಂತರಾಗಿಯೇ ತಮ್ಮ ತಮ್ಮ ವ್ಯಾಪಾರಗಳನ್ನು ನಿರಂತರವಾಗಿ ಮಾಡಲು ತೊಡಗಿದರು. ಅನಂತರ ಪ್ರಜಾಪತಿಯಾದ ಚತುರ್ಮುಖನು ಶ್ರಮಕಾರಕನಾಗಿ ಆ ದೇವತೆಗಳನ್ನು ಪ್ರವೇಶಿಸಿದನು. ಆಗ ಶ್ರಮದಿಂದ ಭಗವತ್ಪೂಜೆಯ ಲೋಪ ಉಂಟಾದ ಕಾರಣದಿಂದ ಮೃತ್ಯುವು ಎಂದರೆ ಪಾಪಾಭಿಮಾನಿಯು ಆ ದೇವತೆಗಳಲ್ಲಿ ಸೇರಿಕೊಂಡನು. ಮತ್ತು ಭಗವದ್ಭಜನರೂಪವಾದ ಕ್ರಿಯೆಗಳಿಗೆ ಅಡ್ಡಿಯನ್ನು ಮಾಡಿದನು. ಮೃತ್ಯುವಿನಿಂದ ಹೀಗೆ ವಿಘ್ನಕ್ಕೆ ಒಳಗಾದುದರಿಂದಲೇ ಈಗಲೂ ವಾಗಿಂದ್ರಿಯವು ಆಯಾಸಗೊಳ್ಳುತ್ತದೆ, ಚಕ್ಷುಸ್ಸು ಶ್ರೋತ್ರ ಮನಸ್ಸುಗಳೂ ಆಯಾಸಗೊಳ್ಳುತ್ತವೆ. ಹೀಗೆ ವಾಗಾದಿ ದೇವತೆಗಳು ಆಯಾಸಗೊಂಡು ತಮ್ಮ ತಮ್ಮ ಕರ್ಮಗಳನ್ನು ಮಾಡಲು ಅಶಕ್ತರಾದರು. ಆದರೆ ಬ್ರಹ್ಮನು ಶ್ರಮಜನಕನಾಗಿ ಈ ಮುಖ್ಯಪ್ರಾಣನನ್ನು ಹೊಂದಲಿಲ್ಲ. ಏಕೆಂದರೆ, ಇಬ್ಬರಿಗೂ ಸಮಾನವಾದ ಶಕ್ತಿ ಇದೆ. ಆದ್ದರಿಂದ ಶ್ರಮವಿಲ್ಲದೆ ಸದಾ ಭಗವತ್ಕರ್ಮವನ್ನು ಮಾಡುವ ಕಾರಣದಿಂದ ಮೃತ್ಯುವು ಕೂಡ ಈ ಮುಖ್ಯಪ್ರಾಣನನ್ನು ಹೊಂದಲಿಲ್ಲ.

**ಉಪನಿಷತ್—ತಾನಿ ಜ್ಞಾತುಂ ದಧ್ರಿರೇ । ಅಯಂ ವೈ ನಃ ಶ್ರೇಷ್ಠೋ ಯಃ ಸಂಚರಂಶ್ಚಾಸಂಚರಂಶ್ಚ ನ ವ್ಯಥತೇ । ಅಥೋ ನ ರಿಷ್ಯತಿ । ಹಂತಾಸ್ಯೈವ ಸರ್ವೇ ರೂಪಮಸಾಮೇತಿ । ತ ಏತಸ್ಯೈವ ಸರ್ವೇ ರೂಪಮಭವನ್ । ತಸ್ಮಾದೇತ ಏತೇನಾಽಽಖ್ಯಾಯಂತೇ ಪ್ರಾಣ ಇತಿ । ತೇನ ಹ ವಾವ ತತ್ಕುಲಮಾಚಕ್ಷತೇ ಯಸ್ಮಿನ್ ಕುಲೇ ಭವತಿ ಯ ಏವಂ ವೇದ । ಯ ಉ ಹೈವಂವಿದಾ ಸ್ಪರ್ಧತೇಽನುಶುಷ್ಯ ಹೈವಾಂತತೋ ಮ್ರಿಯತ ಇತ್ಯಧ್ಯಾತ್ಮಮ್ ।**

ಆಗ ಪಾಪಾಭಿಮಾನಿಯಿಂದ ವಿಘ್ನಪಡಿಸಲ್ಪಟ್ಟ ಅಗ್ನ್ಯಾದಿ ದೇವತೆಗಳು ಪಾಪಾಭಿಮಾನಿಯಿಂದ ವಿಘ್ನಕ್ಕೆ ಒಳಗಾಗದಿರುವ ಮುಖ್ಯಪ್ರಾಣನ ಸ್ವರೂಪವನ್ನು ತಿಳಿಯಲು ನಿರ್ಧರಿಸಿದರು. ಮತ್ತು ತಮ್ಮಲ್ಲೆಲ್ಲಾ ಮುಖ್ಯಪ್ರಾಣನೇ ಶ್ರೇಷ್ಠನಾದವನೆಂದು ನಿಶ್ಚಯಿಸಿದರು. ಏಕೆಂದರೆ ಈ ಮುಖ್ಯಪ್ರಾಣನು ಸಂಚರಿಸಿದರೂ ಸಂಚರಿಸದಿದ್ದರೂ ಆಯಾಸಗೊಳ್ಳುವುದಿಲ್ಲ. ಮತ್ತು ಎಂದೂ ಮರಣ ಹೊಂದುವುದಿಲ್ಲ. ನಾವೆಲ್ಲರೂ ಆ ಮುಖ್ಯಪ್ರಾಣನ ಪ್ರತಿಮೆಗಳೂ ಮತ್ತು ಭೃತ್ಯರೂ ಆಗೋಣ

ಎಂದು ಸಂತೋಷದಿಂದ ನಿರ್ಧರಿಸಿದರು. ಮತ್ತು ಆ ಮುಖ್ಯಪ್ರಾಣನಿಂದ ಆವಿಷ್ಟರಾಗಿ ಅವನ ಭೃತ್ಯರೂ ಆದರು. ಹೀಗೆ ದೇವತೆಗಳೆಲ್ಲರೂ ಪ್ರಾಣನ ಪ್ರತಿಮೆಗಳಾದ್ದರಿಂದಲೇ ಎಲ್ಲಾ ದೇವತೆಗಳೂ ಪ್ರಾಣ ಎಂದೇ ಕರೆಯಲ್ಪಡುತ್ತಾರೆ. ಈಗಲೂ ಕೂಡ ಯಾವ ಕುಲದಲ್ಲಿ ಯಾವನು ಶ್ರೇಷ್ಠನಾಗಿರುತ್ತಾನೆಯೋ ಆ ಕುಲವನ್ನು ಅವನ ಹೆಸರಿನಿಂದಲೇ ಕರೆಯುತ್ತಾರೆ. ಮುಖ್ಯಪ್ರಾಣನ ಇಂತಹ ಶ್ರೇಷ್ಠತ್ವವನ್ನು ತಿಳಿದವನು ಯಾವ ಕುಲದಲ್ಲಿ ಹುಟ್ಟುವನೋ ಆ ಕುಲವು ಅವನ ಹೆಸರಿನಿಂದಲೇ ಕರೆಯಲ್ಪಡುವುದು. ಪ್ರಾಣನ ಶ್ರೇಷ್ಠತ್ವವನ್ನು ತಿಳಿದವನ ಜೊತೆಯಲ್ಲಿ ವಿವಾದ ಮಾಡುವವನು ಬಹುಕಾಲ ಕಷ್ಟವನ್ನು ಅನುಭವಿಸಿ ಕೊನೆಗೆ ಮರಣವನ್ನು ಹೊಂದುತ್ತಾನೆ. ಹೀಗೆ ದೇಹದಲ್ಲಿ ನಿಯಾಮಕರಾದ ದೇವತೆಗಳು ಮುಖ್ಯಪ್ರಾಣನ ಶ್ರೇಷ್ಠತ್ವವನ್ನು ನಿರ್ಣಯಿಸಿದುದರ ನಿರೂಪಣೆ ಮುಗಿಯಿತು.

**ಬಾಹ್ಯದಲ್ಲಿ ದೇವತೆಗಳ ಸ್ಪರ್ಧೆ, ಪ್ರಾಣನಿಗೆ ಜಯ :**

**ಉಪನಿಷತ್—ಅಥಾಧಿದೈವತಂ । ಜ್ವಲಿಷ್ಯಾಮ್ಯೇವಾಹಮಿತ್ಯಗ್ನಿರ್ದಧ್ರೇ । ತಪಸ್ಯಾಮ್ಯಹಮಿತ್ಯಾದಿತ್ಯಃ । ಭಾಸ್ಯಾಮ್ಯಹಮಿತಿ ಚಂದ್ರಮಾಃ । ಏವಮನ್ಯಾ ದೇವತಾ ಯಥಾದೈವತಂ । ಸ ಯಥೈಷಾಂ ಪ್ರಾಣಾನಾಂ ಮಧ್ಯಮಃ ಪ್ರಾಣ ಏವಮೇತಾಸಾಂ ದೇವತಾನಾಂ ವಾಯುಃ । ನ್ಲೋಚಂತಿ ಹ್ಯನ್ಯಾ ದೇವತಾಃ । ನ ವಾಯುಃ । ಸೈಷಾ ನಾಸ್ತಮಿತಾ ದೇವತಾ ಯದ್ ವಾಯುಃ ।**

ಇನ್ನು ಮುಂದೆ ಅಧಿದೈವದಲ್ಲಿ ಪ್ರಾಣನ ಶ್ರೇಷ್ಠತ್ವ ನಿರ್ಣಯವಾದುದನ್ನು ನಿರೂಪಿಸುತ್ತೇವೆ. 'ನಾನು ಅವಿಶ್ರಾಂತವಾಗಿ ಉರಿಯುತ್ತೇನೆ' ಎಂದು ಅಗ್ನಿಯು ನಿರ್ಧರಿಸಿದನು. 'ನಾನೇ ಅವಿಶ್ರಾಂತವಾಗಿ ಸುಡುತ್ತೇನೆ' ಎಂದು ಸೂರ್ಯನು ನಿರ್ಧರಿಸಿದನು. 'ನಾನೇ ಅವಿಶ್ರಾಂತವಾಗಿ ಬೆಳಗುತ್ತೇನೆ' ಎಂದು ಚಂದ್ರನು ನಿರ್ಧರಿಸಿದನು. ಹೀಗೆಯೇ ಉಳಿದ ದೇವತೆಗಳೂ ತಮಗೆ ಯೋಗ್ಯವಾದ ಕರ್ಮಗಳನ್ನು ಮಾಡಲು ನಿರ್ಧರಿಸಿದರು. ಎಂದರೆ 'ನಾನೇ ಮಳೆಯನ್ನು ಸುರಿಸುವೆನು' ಎಂದು ಇಂದ್ರನು ನಿರ್ಧರಿಸಿದನು. 'ನಾನೇ ಪಂಚರಾತ್ರಪ್ರವರ್ತಕನು' ಎಂದು ಶೇಷನು ನಿರ್ಧರಿಸಿದನು. 'ಪಂಚರಾತ್ರದಲ್ಲಿ ಹೇಳಿದ ಕ್ರಿಯಾತಾತ್ಪರ್ಯ ನನ್ನದೇ' ಎಂದು ರುದ್ರನು ತಿಳಿದನು. 'ನಾನೇ ವೇದಪ್ರವರ್ತಕನು' ಎಂದು ಗರುಡನು ತಿಳಿದನು. ಆಗ ಈ ವಾಗಾದ್ಯಭಿಮಾನಿದೇವತೆಗಳು ಶ್ರಮಕಾರಕನಾದ ಬ್ರಹ್ಮನಿಂದ ಆವಿಷ್ಟರಾಗಿ, ಮೃತ್ಯುವಿನಿಂದ ವಿಘ್ನಕ್ಕೆ ಒಳಗಾದರು. ವಾಗಾದಿಗಳ ನಡುವೆ ಮುಖ್ಯಪ್ರಾಣನು ಹೇಗೋ ಹಾಗೇ ಅಗ್ನ್ಯಾದಿಗಳ ನಡುವೆ ಮುಖ್ಯವಾಯು, ಶ್ರಮಕಾರಕ

ನಾದ ಬ್ರಹ್ಮನಿಂದ ಆವಿಷ್ಟನಾಗದೆ, ಪಾಪಾಭಿಮಾನಿಯಿಂದ ವಿಘ್ನಗೊಳಿಸಲ್ಪಡದೆ ಶ್ರೇಷ್ಠನೆನಿಸಿದನು. ಬೇರೆ ದೇವತೆಗಳು ಪಾಪಾಭಿಮಾನಿಗೆ ವಶರಾದ ಕಾರಣದಿಂದ ಅಶಕ್ತರಾಗುತ್ತಾರೆ. ವಾಯುವು ಅಶಕ್ತನಾಗುವುದಿಲ್ಲ. ಏಕೆಂದರೆ, ಇವನು ಮರಣ ಹೊಂದುವುದಿಲ್ಲ. ಇವನ ಶರೀರ ಅನಿತ್ಯವಾದರೂ ಜ್ಞಾನವು ನಿತ್ಯವಾದುದು. ಪ್ರಲಯ ಕಾಲದಲ್ಲಿಯೂ ವಾಯುದೇವರು ಪ್ರತಿಭಾತ ಪರಾವರರು. ಈ ವಿವಕ್ಷೆ ಯಿಂದ ನಿತ್ಯರು.

**ಉಪನಿಷತ್—ಅಥೈಷ ಶ್ಲೋಕೋ ಭವತಿ । 'ಯತಶ್ಚೋದೇತಿ ಸೂರ್ಯೋಽಸ್ತಂ ಯತ್ರ ಚ ಗಚ್ಛತೀ'ತಿ। ಪ್ರಾಣಾದ್ವಾ ಏಷ ಉದೇತಿ। ಪ್ರಾಣೇಽಸ್ತಮೇತಿ। 'ತಂ ದೇವಾಶ್ಚಕ್ರಿರೇ ಧರ್ಮಂ ಸ ಏವಾದ್ಯ ಸ ಉ ಶ್ವಃ' ಇತಿ । ಯದ್ವಾ ಏತೇಽಮುಂ ಹ್ಯಧ್ರಿಯಂತ ತದೇವಾಪ್ಯದ್ಯ ಕುರ್ವಂತಿ । ತಸ್ಮಾದೇಕ-ಮೇವ ವ್ರತಂ ಚರೇತ್ ಪ್ರಾಣ್ಯಾಚ್ಚೈವಾಪಾನ್ಯಾಚ್ಚ ನೇನ್ಮಾ ಪಾಪ್ಮಾ ಮೃತ್ಯುರಾಪ್ನುವದಿತಿ । ಯದ್ಯುಚ್ಚರೇತ್ ಸಮಾಪಿಪಯಿಷೇತ್ । ತೇನೋ ಏತಸ್ಯೈ ದೇವತಾಯೈ ಸಾಯುಜ್ಯಂ ಸಲೋಕತಾಂ ಜಯತಿ ।**

**॥ ಇತಿ ಸಪ್ತಾನ್ನಬ್ರಾಹ್ಮಣಂ ॥**

ವಾಗಾದಿ ದೇವತೆಗಳು ಪ್ರಾಣಾಧೀನರು ಎಂಬ ವಿಷಯದಲ್ಲಿ ಈ ಮಂತ್ರ ಸಮ್ಮತಿ ಇದೆ–'ಯತಶ್ಚೋದೇತಿ ಸೂರ್ಯೋಽಸ್ತಂ ಯತ್ರ ಚ ಗಚ್ಛತಿ' ಎಂದರೆ, ಸೂರ್ಯ ಮೊದಲಾದ ದೇವತೆಗಳು ಪ್ರಾಣನಿಂದಲೇ ಉದಯಿಸುತ್ತಾರೆ. ಪ್ರಾಣ ನಲ್ಲಿಯೇ ಲಯವನ್ನು ಹೊಂದುತ್ತಾರೆ. 'ತಂ ದೇವಾಶ್ಚಕ್ರಿರೇ ಧರ್ಮಂ ಸ ಏವಾದ್ಯ ಸ ಉ ಶ್ವಃ' ಎಂದರೆ, ದೇವತೆಗಳು ಪ್ರಾಣನನ್ನು ಉದ್ದೇಶಿಸಿ ಹಂಸೋಪಾಸನಾರೂಪ ವಾದ ಧರ್ಮವನ್ನು ಆಚರಿಸಿದರು. ಅದೇ ಧರ್ಮವೇ ಈಗಲೂ ನಡೆಯುತ್ತಿದೆ, ಮುಂದೆಯೂ ನಡೆಯುತ್ತದೆ. ಅಥವಾ 'ತಂ ದೇವಾಶ್ಚಕ್ರಿರೇ' ಎಂದರೆ, ಈ ದೇವತೆ ಗಳು ಪ್ರಾಣನ ಶ್ರೇಷ್ಠತ್ವವನ್ನು ನಿರ್ಣಯಮಾಡುವ ಸಮಯದಲ್ಲಿ ಯಾವ ಧರ್ಮ ಸಾಧನವಾದ ವ್ರತವನ್ನು ಆಚರಿಸಿದರೋ ಆ ವ್ರತವನ್ನೇ ಇಂದೂ ಆಚರಿಸುತ್ತಿದ್ದಾರೆ ಮತ್ತು ಮುಂದೆಯೂ ಆಚರಿಸುತ್ತಾರೆ. ಹೀಗೆ ಪ್ರಾಣನು ಸರ್ವಜೀವೋತ್ತಮ ನಾದುದರಿಂದ ತನಗೆ ಮೃತ್ಯುವು ಬಾರದಿರಲಿ ಎಂದು ಬಯಸುವ ಉಪಾಸಕನು ಶ್ವಾಸೋಚ್ಛ್ವಾಸರೂಪವಾದ ಹಂಸೋಪಾಸನಾರೂಪವಾದ ಪ್ರಾಣ ಮಾತ್ರ ವಿಷಯಕವಾದ ವ್ರತವನ್ನೇ ಆಚರಿಸಬೇಕು. ಪ್ರಾಣವ್ರತವನ್ನು ಆರಂಭಿಸಿದರೆ ಅದನ್ನು ಮಧ್ಯದಲ್ಲಿ ಬಿಡದೆ ಸಮಾಪ್ತಿಗೊಳಿಸಲೇಬೇಕು. ಅಥವಾ ಹರಿವಾಯುಭೃತ್ಯ ರೆಂದು ದೇವಾಂತರ ವ್ರತವನ್ನು ಆರಂಭಿಸಿದರೂ ಮಧ್ಯದಲ್ಲಿ ಬಿಡದೆ ಸಮಾಪ್ತಿ

ಗೊಳಿಸಲೇಬೇಕು. ಉಪಾಸಕನು ಈ ವ್ರತವನ್ನು ಅನುಷ್ಠಾನ ಮಾಡುವುದರಿಂದ ವಾಯುವಿನ ಅನುಗ್ರಹದಿಂದ ಶ್ರೀಹರಿಯ ಸಾಯುಜ್ಯವನ್ನು ಹೊಂದುತ್ತಾನೆ. ಸಾಯುಜ್ಯಕ್ಕೆ ಯೋಗ್ಯನಲ್ಲದವನು ಸಾಲೋಕ್ಯವನ್ನು ಪಡೆಯುತ್ತಾನೆ.

**ಭಾಷ್ಯ—ಉತ್ತಮಃ ಸರ್ವದೇವೇಷು ಪ್ರಾಣ ಏವ ಹರೇರನು ।**
**ಚತುರ್ಮುಖಸ್ಯ ಪ್ರಾಣಸ್ಯ ನ ವಿಶೇಷೋಽಸ್ತಿ ಕಶ್ಚನ ।**
**ತಸ್ಮಾದ್ ವಿಷ್ಣೋರ್ವ್ರತಸ್ಯಾನು ನಿತ್ಯಂ ಪ್ರಾಣವ್ರತಂ ಚರೇತ್ ।**
**ಹಂಸೋಪಾಸ್ತಿಃ ಶ್ವಾಸರೂಪೇ ತಯೋರ್ವ್ರತಮುದೀರಿತಮ್ ।**
**ಹಂಸರೂಪೌ ಹಿ ತೌ ದೇವೌ ಶ್ವಾಸೋಚ್ಛ್ವಾಸ ಪ್ರವರ್ತಕೌ ।**
**ತಸ್ಮಾತ್ ಪ್ರಾಣ್ಯಾದಪಾನ್ಯಾಚ್ಚ ತದ್ರೂಪಂ ಸಂಸ್ಮರನ್ ಸದಾ ।**
**ನಾನ್ಯಸ್ಯೋಪಾಸನಂ ಕುರ್ಯಾತ್ ತದ್ಭೃತ್ಯತ್ವಂ ವಿನಾ ಕ್ವಚಿತ್।**

**ಅನುವಾದ**—'ತಸ್ಮಾದೇಕಮೇವ ವ್ರತಂ ಚರೇತ್' ಎಂಬಲ್ಲಿ ಪ್ರಾಣನಿಗೆ ಸರ್ವೋತ್ತಮತ್ವವನ್ನು ಹೇಳಿದುದು ಶ್ರೀಹರಿಯ ಅನಂತರ ಎಲ್ಲಾ ದೇವತೆಗಳಲ್ಲಿ ಮುಖ್ಯಪ್ರಾಣನೇ ಶ್ರೇಷ್ಠನು ಎಂಬ ಅಭಿಪ್ರಾಯದಿಂದ. ಚತುರ್ಮುಖ ಬ್ರಹ್ಮನಿಗೂ ಮತ್ತು ಮುಖ್ಯಪ್ರಾಣನಿಗೂ ತರತಮಭಾವವಿಲ್ಲ. ಆದ್ದರಿಂದ ವಿಷ್ಣುವ್ರತವನ್ನು ಆಚರಿಸಿದಮೇಲೆ ನಿತ್ಯವೂ ಪ್ರಾಣವ್ರತವನ್ನು ಆಚರಿಸಬೇಕು. ಶ್ವಾಸರೂಪವಾದ ಜಪದಲ್ಲಿ ಅಥವಾ ಅಧಿಷ್ಠಾನದಲ್ಲಿ ಹಂಸೋಪಾಸನೆ ಮಾಡುವುದೇ ವಿಷ್ಣುಪ್ರಾಣರ ವ್ರತವೆನಿಸುತ್ತದೆ. ಏಕೆಂದರೆ, ವಿಷ್ಣು ಮತ್ತು ಪ್ರಾಣರಿಬ್ಬರೂ ಹಂಸರೂಪ ಉಳ್ಳವರಾಗಿ ಶ್ವಾಸ ಮತ್ತು ಉಚ್ಛ್ವಾಸಗಳಿಗೆ ಪ್ರವರ್ತಕರಾಗಿದ್ದಾರೆ. ಆದ್ದರಿಂದ ವಿಷ್ಣುಪ್ರಾಣರ ರೂಪವನ್ನು ಸದಾ ಸ್ಮರಣೆ ಮಾಡಿಕೊಂಡೇ ಶ್ವಾಸೋಚ್ಛ್ವಾಸಗಳನ್ನು ಮಾಡಬೇಕು. ಶ್ರೀಹರಿವಾಯುಗಳಿಗೆ ಭೃತ್ಯರು ಎಂಬ ಅನುಸಂಧಾನವಿಲ್ಲದೆ ಬೇರೆ ಯಾವ ದೇವತೆಯನ್ನೂ ಉಪಾಸನೆ ಮಾಡಬಾರದು.

**ಭಾಷ್ಯ—ಇಂದ್ರಿಯಾಣಿ ಸಸರ್ಜಾಽದೌ ವಾಸುದೇವಃ ಪ್ರಜಾಪತಿಃ ।**
**ಅಧ್ಯಾತ್ಮಮಿಂದ್ರಿಯಾಣ್ಯಾಹುರಧಿದೈವಂ ತು ದೇವತಾಃ ।**
**ಅಧ್ಯಾತ್ಮಮಗ್ನಿರ್ವಾಗ್‌ನಾಮಾ ಚಕ್ಷುರಾದಿತ್ಯ ಉಚ್ಯತೇ ।**
**ಶ್ರೋತ್ರಂ ತು ಚಂದ್ರಮಾ ನಾಮ ಮನಃ ಸ್ಥೂಲಂ ತು ವಾಸವಃ ।**
**ಯೇನ ಯಜ್ಞಾದಿಕಂ ಕುರ್ಯಾತ್ ಶೇಷರುದ್ರವಿಪಾಸ್ತಥಾ ।**
**ಮನಃ ಸೂಕ್ಷ್ಮಂ ಜ್ಞಾನಯೋಗ್ಯಂ ಶೇಷೋ ವ್ಯಾಖ್ಯಾನಗೋಚರಂ ।**
**ರುದ್ರಸ್ತು ಮನನಾಖ್ಯಂ ಚ ಗರುಡೋ ಧ್ಯಾನಗೋಚರಮ್ ।**
**ವಾಯುಃ ಪ್ರಾಣ ಇತಿ ಪ್ರೋಕ್ತೋ ಯೇನ ಸರ್ವಂ ನಿಯಮ್ಯತೇ ।**
**ತ ಏತೇ ಭಗವತ್ಸೃಷ್ಟಾ ವ್ಯಾದಿರೇಽಧ್ಯಾತ್ಮ ಸಂಸ್ಥಿತಾಃ ।**

**ಅನುವಾದ**—ಪ್ರಜಾಪತಿಯಾದ ವಾಸುದೇವನು ಮೊದಲು ವಾಗಾದಿ ಇಂದ್ರಿಯಾಭಿಮಾನಿಗಳನ್ನೂ ಅಗ್ನ್ಯಾದಿ ದೇವತೆಗಳನ್ನೂ ಸೃಷ್ಟಿಸಿದನು. ದೇಹಗಳ ಹೊರಗಿದ್ದು ಕಾರ್ಯಪ್ರವರ್ತಕರಾದ ಅಗ್ನಿ ಮೊದಲಾದ ದೇವತೆಗಳೇ ದೇಹಗಳೊಳಗೆ ಇಂದ್ರಿಯಾಭಿಮಾನಿಗಳು ಎಂದು ಕರೆಯಲ್ಪಡುತ್ತಾರೆ. ಹೊರಗೆ ಅಗ್ನಿಯೆಂದು ಕರೆಯಲ್ಪಡುವ ದೇವತೆಯೇ ದೇಹದಲ್ಲಿ ವಾಗಿಂದ್ರಿಯಕ್ಕೆ ಅಭಿಮಾನಿಯಾಗಿ ವಾಕ್ ಎಂದು ಕರೆಯಲ್ಪಡುತ್ತಾನೆ. ಹಾಗೆಯೇ ಹೊರಗೆ ಸೂರ್ಯನೆನಿಸುವವನೇ ದೇಹದಲ್ಲಿ ಚಕ್ಷುರಭಿಮಾನಿಯಾಗಿ ಚಕ್ಷುಸ್ ಎಂದು ಕರೆಯಲ್ಪಡುತ್ತಾನೆ. ಹಾಗೆಯೇ ಚಂದ್ರನು ಶ್ರೋತ್ರಾಭಿಮಾನಿಯಾಗಿ ಶ್ರೋತ್ರ ಎಂದು ಕರೆಯಲ್ಪಡುತ್ತಾನೆ. ಇಂದ್ರನು ಸ್ಥೂಲ ಮನಸ್ಸಿಗೆ ಅಭಿಮಾನಿಯಾಗಿ ಸ್ಥೂಲ ಮನಸ್ಸು ಎಂದು ಕರೆಯಲ್ಪಡುತ್ತಾನೆ. ಯಜ್ಞಾದಿಗಳನ್ನು ಮಾಡಲು ಸಾಧನವಾದುದು ಸ್ಥೂಲಮನಸ್ಸು. ಶೇಷ ರುದ್ರ ಮತ್ತು ಗರುಡರು ಸೂಕ್ಷ್ಮ ಮನಸ್ಸು ಎಂದು ಕರೆಯಲ್ಪಡುತ್ತಾರೆ. ಜ್ಞಾನಕಾರ್ಯ ಸಾಧನವಾದ ಮನಸ್ಸಿಗೆ ಸೂಕ್ಷ್ಮ ಮನಸ್ಸು ಎಂದು ಹೆಸರು. ಅವರಲ್ಲಿ ಶೇಷನು ವ್ಯಾಖ್ಯಾನ ಮಾಡುವ ಮನಸ್ಸಿನ ಅಂಶಕ್ಕೆ ಅಭಿಮಾನಿ. ಗರುಡನು ಧ್ಯಾನ ಮಾಡುವ ಮನಸ್ಸಿನ ಅಂಶಕ್ಕೆ ಅಭಿಮಾನಿ. ಹೊರಗೆ ವಾಯು ಎಂದು ಕರೆಯಲ್ಪಡುವವನು ದೇಹದಲ್ಲಿ ಪ್ರಾಣಾಭಿಮಾನಿಯಾಗಿದ್ದು ಪ್ರಾಣ ಎಂದು ಕರೆಯಲ್ಪಡುತ್ತಾನೆ. ಅವನು ದೇಹದಲ್ಲೂ ಹೊರಗೂ ಇರುವ ಈ ಎಲ್ಲಾ ದೇವತೆಗಳಿಗೂ ನಿಯಾಮಕ. ಭಗವಂತ ನಿಂದ ಸೃಷ್ಟರಾದ ಈ ದೇವತೆಗಳು ದೇಹದೊಳಗೆ ನಾನೇ ಶ್ರೇಷ್ಠ ನಾನೇ ಶ್ರೇಷ್ಠ ಎಂದು ವಿವಾದ ಮಾಡಿದರು.

**ಭಾಷ್ಯ—ಅಧಿದೈವೇ ಜ್ವಲತ್ಕರ್ಮಾ ವಹ್ನಿಃ ಸೂರ್ಯಸ್ತು ತಾಪಕಃ ।**
**ಸೋಮಃ ಕಾಂತೌ ವೃಷ್ಟಿಕರ್ಮಾ ವಾಸವಃ ಶೇಷ ಏವ ತು ।**
**ಪಂಚರಾತ್ರಪ್ರವೃತ್ತೀಶೋ ರುದ್ರಃ ತತ್ಸ್ಥಕ್ರಿಯಾಪರಃ ।**
**ಸರ್ವಪ್ರವರ್ತಕೋ ವಾಯುರ್ಜ್ಞಾನಮೋಕ್ಷಪ್ರದಸ್ತಥಾ ।**
**ವೇದಪ್ರವೃತ್ತಿಕೃದ್ ವೀಂದ್ರಸ್ತೇಽಧಿದೈವೇ ಚ ಪಸ್ಪೃಧುಃ ।**
**ಅಹಂ ಶ್ರೇಯಾನಹಂ ಶ್ರೇಯಾನಿತಿ ತಾನಬ್ರವೀದ್ಧರಿಃ ।**
**ಸ್ವಕರ್ಮ ಯಸ್ತ್ವವಿಶ್ರಾಂತಂ ಕುರ್ಯಾತ್ ಶ್ರೇಯಾನ್ ಸ ವಃ ಸ್ಮೃತಃ।**
**ಇತಿ ಶ್ರುತ್ವಾ ತತಶ್ಚಕ್ರುಃ ಕರ್ಮ ಸ್ವಂ ಸ್ವಮನಾರತಮ್ ।**

**ಅನುವಾದ**—ಅಧಿ ದೈವದಲ್ಲಿ ಅಂದರೆ ದೇಹದ ಹೊರಗೆ ಜ್ವಲಿಸುವವನು ಅಗ್ನಿ. ಸೂರ್ಯನು ತಾಪಕ ಎಂದರೆ ಸುಡುವವನು. ಚಂದ್ರನು ಕಾಂತಿಯನ್ನು ಕೊಡುವವನು. ಇಂದ್ರನು ಮಳೆಯನ್ನು ಸುರಿಸುವವನು. ಶೇಷನು ಪಂಚರಾತ್ರಕ್ಕೆ ಪ್ರವರ್ತಕ. ರುದ್ರನು ಪಂಚರಾತ್ರೋಕ್ತಕ್ರಿಯೆಗಳಿಗೆ ಪ್ರವರ್ತಕ. ವಾಯುವು

ಸರ್ವಪ್ರವರ್ತಕ ಮತ್ತು ಜ್ಞಾನ ಮೋಕ್ಷಪ್ರದ. ಗರುಡನು ವೇದಗಳಿಗೆ ಪ್ರವರ್ತಕ. ಈ ಎಲ್ಲಾ ದೇವತೆಗಳೂ ಅಧಿದೈವದಲ್ಲಿಯೂ ನಾನೇ ಶ್ರೇಷ್ಠ, ನಾನೇ ಶ್ರೇಷ್ಠ ಎಂದು ಸ್ಪರ್ಧಿಸಿದರು. ಆಗ ಅವರನ್ನು ಕುರಿತು ಶ್ರೀಹರಿಯು 'ನಿಮ್ಮಲ್ಲಿ ಯಾರು ತನ್ನ ಕರ್ಮವನ್ನು ಶ್ರಮವಿಲ್ಲದೆ ಅವಿರತವಾಗಿ ಮಾಡುತ್ತಾನೆಯೋ ಅವನು ಶ್ರೇಷ್ಠ' ಎಂದು ಹೇಳಿದನು. ಅದನ್ನು ಕೇಳಿದ ದೇವತೆಗಳು ತಮ್ಮ ತಮ್ಮ ಕರ್ಮಗಳನ್ನು ಶ್ರಮವಿಲ್ಲದೆ ಅವಿರತವಾಗಿ ಮಾಡಲು ತೊಡಗಿದರು.

**ಭಾಷ್ಯ—ತಾನೇತಾನ್ ಶ್ರಮರೂಪೇಣ ಪ್ರಾಪ ಬ್ರಹ್ಮಾ ಪ್ರಜಾಪತಿಃ ।**
**ಶ್ರಾಂತಾಃ ಸ್ವಂ ಭಗವತ್ಕರ್ಮ ನ ಶೇಕುಃ ಸರ್ವದೇವತಾಃ ।**
**ವಾಯುಂ ತು ಸಮಶಕ್ತಿತ್ವಾತ್ ನಾಽಪ ಬ್ರಹ್ಮಾ ಪ್ರಜಾಪತಿಃ ।**
**ತೇನಾಸೌ ಭಗವತ್ಕರ್ಮ ಸರ್ವಂ ಚ ಕೃತವಾನ್ ಸದಾ ।**
**ಶ್ರಮಾತ್ ಪಾಪಾತ್ಮಕೋ ಮೃತ್ಯುಃ ಭಗವತ್ಕರ್ಮವರ್ಜನಾತ್ ।**
**ಅನ್ಯಾನ್ ದೇವಾನವಾಪಾಽಶು ನೈವ ವಾಯುಂ ಕದಾಚನ ।**
**ತೇ ವಾಯುಂ ಜ್ಞಾತುಮೈಚ್ಛಂತ ಶ್ರೇಷ್ಠೋಽಯಮಿತಿ ನಿಶ್ಚಿತಾಃ ।**
**ತಂ ಜ್ಞಾತ್ವಾ ತೇನ ಚಾವಿಷ್ಟಾಃ ತದ್ಭೃತ್ಯತ್ವಮುಪಾಗತಾಃ ।**
**ತಸ್ಮಾತ್ ಪ್ರಾಣಾಶ್ಚ ಮರುತ ಇತ್ಯೇಷಾಂ ನಾಮ ಸಂಸ್ಥಿತಮ್ ।**

**ಅನುವಾದ**—ಆಗ ಬ್ರಹ್ಮನು ಶ್ರಮಕಾರಕನಾಗಿ ಈ ದೇವತೆಗಳನ್ನು ಪ್ರವೇಶಿಸಿದನು. ಆಗ ಈ ಎಲ್ಲಾ ದೇವತೆಗಳೂ ಆಯಾಸಗೊಂಡು ಅಧ್ಯಾತ್ಮವಾಗಿಯೂ ಅಧಿದೈವವಾಗಿಯೂ ಭಗವತ್ಪೂಜಾರೂಪವಾದ ತಮ್ಮ ತಮ್ಮ ಕರ್ಮಗಳನ್ನು ಮಾಡಲು ಅಸಮರ್ಥರಾದರು. ವಾಯುವಿಗೆ ಬ್ರಹ್ಮನಿಗೆ ಸಮಾನವಾದ ಶಕ್ತಿಯಿರುವುದರಿಂದ ಬ್ರಹ್ಮನು ವಾಯುವನ್ನು ಶ್ರಮಕಾರಕನಾಗಿ ಪ್ರವೇಶಿಸಲಿಲ್ಲ. ವಾಯುವಿಗೆ ಶ್ರಮವನ್ನುಂಟು ಮಾಡಲಿಲ್ಲ. ಆದ್ದರಿಂದ ವಾಯುವು ಭಗವತ್ಪೂಜಾತ್ಮಕವಾದ ತನ್ನ ಎಲ್ಲಾ ಕರ್ಮಗಳನ್ನೂ ಯಾವಾಗಲೂ ಮಾಡುತ್ತಾನೆ. ಶ್ರಮದಿಂದ ಭಗವತ್ಪೂಜಾರೂಪವಾದ ತಮ್ಮ ಕರ್ಮವನ್ನು ತ್ಯಜಿಸಿದುದರಿಂದ ಪಾಪಾಭಿಮಾನಿ ಮೃತ್ಯುವು ಉಳಿದ ಎಲ್ಲಾ ದೇವತೆಗಳನ್ನೂ ಪ್ರವೇಶಿಸಿದನು. ವಾಯುವನ್ನು ಮಾತ್ರ ಎಂದೂ ಪ್ರವೇಶಿಸಲೇ ಇಲ್ಲ. ಆದರಿಂದ ದೇವತೆಗಳು ವಾಯುವನ್ನು ಶ್ರೇಷ್ಠನೆಂದು ತಿಳಿದು, ಅವನ ಸ್ವರೂಪವನ್ನು ತಿಳಿಯಲು ಇಷ್ಟಪಟ್ಟರು. ಬಳಿಕ ಅವನನ್ನು ಯಥಾಯೋಗ್ಯವಾಗಿ ತಿಳಿದು ಅವನಿಂದ ಆವಿಷ್ಟರಾಗಿ ಅವನ ಭೃತ್ಯರಾದರು. ವಾಯುದೇವರು ಪ್ರವೇಶ ಮಾಡಿದುದರಿಂದಲೇ ಎಲ್ಲಾ ದೇವತೆಗಳಿಗೂ ಅಧ್ಯಾತ್ಮವಾಗಿ ಪ್ರಾಣಗಳು ಎಂದೂ ಅಧಿದೈವವಾಗಿ ಮರುತ್ತುಗಳು ಎಂದೂ ಹೆಸರಿದೆ.

**ಭಾಷ್ಯ—ವಾಯೋರ್ದೇವಾ ಹಿ ಜಾಯಂತೇ ಲಯಮೇಷ್ಯಂತಿ ತತ್ರ ಚ ।**

**ತಸ್ಮಾನ್ನಿತ್ಯಂ ತದ್ವ್ರತಾಶ್ಚ ತದ್ವ್ರತೋಽತೋ ಭವೇತ್ಸದಾ ।
ಅನ್ಯದೇವ ವ್ರತಾರಂಭಂ ಯದಿ ಕುರ್ಯಾತ್ ಸಮಾಪಯೇತ್ ।
ತೇನಾಸೌ ವಾಯುನಾ ಸಾಕಂ ಭಗವಂತಮುಪೇಷ್ಯತಿ ।
ಇತಿ ನಾರಾಯಣಶ್ರುತೌ ।**

**'ಆನಂದ್ಯೇವ ಭವತಿ''ನ ಶೋಚತಿ' ಇತ್ಯತೋ ಮುಕ್ತ ಇತ್ಯವಗಮ್ಯತೇ ।**

**॥ ಇತಿ ಸಪ್ತಾನ್ನಬ್ರಾಹ್ಮಣಂ ॥**

**ಅನುವಾದ**—ದೇವತೆಗಳೆಲ್ಲರೂ ವಾಯುವಿನಿಂದಲೇ ಜನಿಸುತ್ತಾರೆ. ಅವನ ಲ್ಲಿಯೇ ಲಯವನ್ನು ಹೊಂದುತ್ತಾರೆ. ಆದ್ದರಿಂದಲೇ ಯಾವಾಗಲೂ ಅವನ ಹಂಸ ಮಂತ್ರ ಜಪರೂಪ ವ್ರತವನ್ನೇ ಆಚರಿಸುತ್ತಾರೆ. ಆದ್ದರಿಂದ ಉಪಾಸಕನು ಯಾವಾಗಲೂ ಆ ವ್ರತವನ್ನು ಮಾಡಬೇಕು. ಶ್ರೀಹರಿವಾಯುಗಳ ಭೃತ್ಯರೆಂಬ ಭಾವನೆಯಿಂದ ಬೇರೆ ಬೇರೆ ದೇವತೆಗಳನ್ನುದ್ದೇಶಿಸಿ ವ್ರತವನ್ನು ಆರಂಭ ಮಾಡಿದರೂ ಅದನ್ನು ನಡುವೆ ಬಿಡದೆ ಸಮಾಪ್ತಿಗೊಳಿಸಬೇಕು. ಹೀಗೆ ಸಮಾಪ್ತಿ ಮಾಡಿದ ಕಾರಣದಿಂದ ಉಪಾಸಕನು ವಾಯುದೇವರ ಜೊತೆಯಲ್ಲಿ ಶ್ರೀಹರಿಯನ್ನು ಹೊಂದುವನು ಎಂದು ನಾರಾಯಣಶ್ರುತಿಯಲ್ಲಿ ಹೇಳಿದೆ.

'ಅಥೈನಮೇತೇ ದೇವಾಃ ಪ್ರಾಣಾ ಅಮೃತಾ ಆವಿಶಂತಿ' ಎಂದು ಪ್ರಾರಂಭವಾಗುವ ಪ್ರಕರಣದಲ್ಲಿ 'ಆನಂದ್ಯೇವ ಭವತಿ' 'ಅಥೋ ನ ಶೋಚತಿ' ಎಂದು ಆನಂದ ಮತ್ತು ದುಃಖಾಭಾವವನ್ನು ಹೇಳಿರುವುದರಿಂದ, ಇವು ಮುಕ್ತರ ಅಸಾಧಾರಣಧರ್ಮಗಳಾದುದರಿಂದ ಈ ಪ್ರಕರಣವು ಮುಕ್ತಪರ ಎಂದು ತಿಳಿಯುತ್ತದೆ,

॥ ಇಲ್ಲಿಗೆ ಸಪ್ತಾನ್ನಬ್ರಾಹ್ಮಣ ಮುಗಿಯಿತು ॥

**ಭಾರತೀ ರುದ್ರ ಪ್ರಾಣರಿಂದ ಪ್ರಪಂಚ ಸೃಷ್ಟಿ :**

**ಉಪನಿಷತ್**—**ತ್ರಯಂ ವಾ ಇದಂ ನಾಮ ರೂಪಂ ಕರ್ಮ । ತೇಷಾಂ ನಾಮ್ನಾಂ ವಾಗಿತಿ । ಏತದ್ ಏಷಾಮುಕ್ಥಂ । ಅತೋ ಹಿ ಸರ್ವಾಣಿ ನಾಮಾನ್ಯು-ತ್ತಿಷ್ಠಂತಿ । ಏತದೇಷಾಂ ಸಾಮ । ಏತದ್ಧಿ ಸರ್ವೈರ್ನಾಮಭಿಃ ಸಮಂ । ಏತದೇಷಾಂ ಬ್ರಹ್ಮ । ಏತದ್ಧಿ ಸರ್ವಾಣಿ ನಾಮಾನಿ ಬಿಭರ್ತಿ ।**

ಈ ಜಗತ್ತು ನಾಮ ರೂಪ ಮತ್ತು ಕರ್ಮ ಎಂದು ಮೂರು ವಿಧವಾದುದು ಎಂಬುದು ಪ್ರಸಿದ್ಧ. ನಾಮ ರೂಪ ಕರ್ಮಗಳಲ್ಲಿ ನಾಮಗಳಿಗೆ 'ವಾಕ್' ಎಂದರೆ ಭಾರತಿಯು ದೇವತೆ. ನಾಮಗಳಿಗೆ ಭಾರತಿಯು ಸೃಷ್ಟಿಕರ್ತಳು. ಇವಳಿಂದಲೇ ಎಲ್ಲಾ ನಾಮಗಳೂ ಉತ್ಪತ್ತಿಯನ್ನು ಹೊಂದುತ್ತವೆ. ಇವಳೇ ಈ ನಾಮಗಳಿಗೆ

ಸಾಮ ಎನಿಸುತ್ತಾಳೆ. ಏಕೆಂದರೆ ಇವಳು ಎಲ್ಲಾ ನಾಮಗಳ ಜೊತೆಯಲ್ಲಿಯೇ ರೂಪಗಳನ್ನೂ ಕರ್ಮಗಳನ್ನೂ ತಿಳಿಯುತ್ತಾಳೆ– ಸರ್ವೈವ ಮಾತಿ ಇತಿ ಸಮಂ. ಇವಳೆ ಈ ನಾಮಗಳಿಗೆ ಬ್ರಹ್ಮ ಎಂದೂ ಎನಿಸುತ್ತಾಳೆ. ಏಕೆಂದರೆ ಇವಳೆ ಎಲ್ಲಾ ನಾಮ ಗಳನ್ನೂ ಧರಿಸಿದ್ದಾಳೆ.

**ಉಪನಿಷತ್—ಅಥ ರೂಪಾಣಾಂ ಚಕ್ಷುರಿತಿ।ಏತದ್ ಏಷಾಮುಕ್ಥಂ। ಅತೋ ಹಿ ಸರ್ವಾಣಿ ರೂಪಾಣ್ಯುತ್ತಿಷ್ಠಂತಿ । ಏತದೇಷಾಂ ಸಾಮ । ಏತದ್ಧಿ ಸರ್ವೈ ರೂಪೈಃ ಸಮಂ । ಏತದೇಷಾಂ ಬ್ರಹ್ಮ । ಏತದ್ಧಿ ಸರ್ವಾಣಿ ರೂಪಾಣಿ ಬಿಭರ್ತಿ ।**

ರೂಪಗಳಿಗೆ 'ಚಕ್ಷುಸ್' ಎಂದರೆ ರುದ್ರನು ದೇವತೆ. ಇವನೇ ಈ ರೂಪಗಳಿಗೆ ಸೃಷ್ಟಿಕರ್ತ. ಎಲ್ಲಾ ರೂಪಗಳೂ ಇವನಿಂದಲೆ ಉತ್ಪತ್ತಿ ಹೊಂದುತ್ತವೆ. ಇವನೆ ಎಲ್ಲಾ ರೂಪಗಳಿಗೂ ಸಾಮ. ಏಕೆಂದರೆ, ಇವನೆ ಎಲ್ಲಾ ರೂಪಗಳ ಜೊತೆಯಲ್ಲಿ ನಾಮಗಳನ್ನೂ ಕರ್ಮಗಳನ್ನೂ ತಿಳಿಯುತ್ತಾನೆ. ಇವನೆ ಎಲ್ಲಾ ರೂಪಗಳಿಗೂ ಬ್ರಹ್ಮ. ಏಕೆಂದರೆ ಎಲ್ಲಾ ರೂಪಗಳನ್ನೂ ಧರಿಸಿದ್ದಾನೆ.

**ಉಪನಿಷತ್—ಅಥ ಕರ್ಮಣಾಮಾತ್ಮೇತಿ । ಏತದ್ ಏಷಾಮುಕ್ಥಂ । ಅತೋ ಹಿ ಸರ್ವಾಣಿ ಕರ್ಮಾಣ್ಯುತ್ತಿಷ್ಠಂತಿ । ಏತದೇಷಾಂ ಸಾಮ । ಏತದ್ಧಿ ಸರ್ವೈಃ ಕರ್ಮಭಿಃ ಸಮಂ । ಏತದೇಷಾಂ ಬ್ರಹ್ಮ । ಏತದ್ಧಿ ಸರ್ವಾಣಿ ಕರ್ಮಾಣಿ ಬಿಭರ್ತಿ ।**

**ತದೇತತ್ ತ್ರಯಂ ಸದೇಕಂ । ಅಯಮಾತ್ಮಾ । ಆತ್ಮೈಕಃ ಸನ್ನೇತತ್ ತ್ರಯಂ । ತದೇತದಮೃತಂ ಸತ್ಯೇನ ಚ್ಛನ್ನಂ। ಪ್ರಾಣೋ ವಾ ಅಮೃತಂ। ನಾಮರೂಪೇ ಸತ್ಯಂ । ತಾಭ್ಯಾಮಯಂ ಪ್ರಾಣಶ್ಛನ್ನಃ ।**

**॥ ಇತಿ ತ್ರಯ ಬ್ರಾಹ್ಮಣಮ್ ॥**

**॥ ಇತಿ ಶ್ರೀ ಬೃಹದಾರಣ್ಯಕೇ ಪ್ರಥಮಾಧ್ಯಾಯಃ ॥**

ಕರ್ಮಗಳಿಗೆ 'ಆತ್ಮ' ಎಂದರೆ ಪ್ರಾಣನು ದೇವತೆ. ಇವನೇ ಕರ್ಮಗಳಿಗೆ ಸೃಷ್ಟಿಕರ್ತ. ಏಕೆಂದರೆ ಎಲ್ಲಾ ಕರ್ಮಗಳೂ ಇವನಿಂದಲೇ ಉತ್ಪತ್ತಿಯನ್ನು ಹೊಂದುತ್ತವೆ. ಇವನೇ ಎಲ್ಲಾ ಕರ್ಮಗಳಿಗೂ ಸಾಮ. ಏಕೆಂದರೆ ಇವನೇ ಎಲ್ಲಾ ಕರ್ಮಗಳ ಜೊತೆಯಲ್ಲಿ ನಾಮ ಗಳನ್ನೂ ರೂಪಗಳನ್ನೂ ತಿಳಿಯುತ್ತಾನೆ. ಇವನೇ ಎಲ್ಲಾ ಕರ್ಮಗಳಿಗೂ ಬ್ರಹ್ಮ. ಏಕೆಂದರೆ ಇವನೇ ಎಲ್ಲ ಕರ್ಮಗಳನ್ನೂ ಧರಿಸಿದ್ದಾನೆ.

ಈ ವಾಕ್ ಚಕ್ಷುಸ್ ಆತ್ಮಗಳು ಮೂರಾಗಿದ್ದರೂ, ಅವರಲ್ಲಿ ಇಬ್ಬರು ಒಬ್ಬನ

ಅಧೀನರಾಗಿದ್ದರಿಂದ ಒಂದೇ ಎಂದೂ ಹೇಳಲ್ಪಡುತ್ತದೆ. ಆ ಒಬ್ಬನು ಯಾರು ? ಅಂದರೆ, ಪ್ರಾಣನೇ. ಈ ಪ್ರಾಣನು ಶ್ರೇಷ್ಠನಾಗಿದ್ದು ಉಳಿದಿಬ್ಬರು ಅವನಿಗೆ ಅಧೀನರಾದುದರಿಂದ ಮೂವರು ಎಂದು ಕರೆಯಲ್ಪಡುತ್ತಾನೆ. ಪ್ರಾಣನಿಗೆ ಏಕೆ ಶ್ರೇಷ್ಠತ್ವ ? ಎಂದರೆ, ಈ ಅಮೃತವು ಸತ್ಯದಿಂದ ಆಚ್ಛಾದಿಸಲ್ಪಟ್ಟಿದೆ. ಎಂದರೆ ಪ್ರಾಣನೇ ಅಮೃತನೆನಿಸುತ್ತಾನೆ. ಮತ್ತು ನಾಮರೂಪಾಭಿಮಾನಿಗಳಾದ ವಾಕ್, ಚಕ್ಷುಸ್ ಎಂದು ಕರೆಯಲ್ಪಡುವ ಭಾರತಿ ಮತ್ತು ರುದ್ರರು ಸತ್ಯ ಎಂದು ಕರೆಯಲ್ಪಡುತ್ತಾರೆ. ಅವರಿಬ್ಬರಿಗೂ ನಿಯಾಮಕನಾಗಿ ಅವರಲ್ಲಿ ಅನುಪ್ರವೇಶ ಮಾಡಿದುದರಿಂದ ನಾಮರೂಪದೇವತೆಗಳಾದ ಭಾರತೀ ಮತ್ತು ರುದ್ರರಿಂದ ಈ ಪ್ರಾಣನು ಆಚ್ಛಾದಿತನಾಗಿದ್ದಾನೆ.

**ವಿವರಣೆ**—'ಆತ್ಮೈಕಃ ಸನ್' ಎಂಬಲ್ಲಿ 'ಆತ್ಮವೇಕಃ ಸನ್' ಎಂದು ಶ್ರೀರಾಘವೇಂದ್ರಸ್ವಾಮಿಗಳ ಪಾಠವಿದ್ದಂತೆ ತೋರುತ್ತದೆ. ಆತ್ಮಾ ಉ ಏಕಃ ಎಂದು ಪದಚ್ಛೇದ. ಏಕಶಬ್ದ ಪ್ರಯುಕ್ತ ಅಭೇದ ಭ್ರಾಂತಿಯ ಪರಿಹಾರಕ್ಕಾಗಿ ಆತ್ಮಾ—ಪ್ರಾಣನು, ಉ ಏಕಃ ಸನ್—ಉಪರಿತನನಾಗಿ, ಶ್ರೇಷ್ಠನಾಗಿದ್ದು ಎಂದು ಯೋಜನೆ. ಆತ್ಮೈಕಃ ಸನ್ ಎಂದು ಶ್ರೀರಘೂತ್ತಮ ಸ್ವಾಮಿಗಳ ಪಾಠ. ಆತ್ಮಾ ಏಕಃ ಸನ್ ಎಂದು ಪದಚ್ಛೇದ. ಆತ್ಮಾ—ಪ್ರಾಣನು, ಏಕಃ ಸನ್—ಮುಖ್ಯನಾಗಿದ್ದು ಎಂದು ಯೋಜನೆ.

**ಭಾಷ್ಯ—ಸಹೈವ ಯಾತಿ ಜಾನಾತೀತಿ ಸಯಮ್ । ಆತ್ಮಾ ಪ್ರಾಣಃ । ನಾಮರೂಪಯೋರಪಿ ಪ್ರಾಣಾಧೀನತ್ವಾದೇಕಮಿತ್ಯುಚ್ಯತೇ ।**

**ಪ್ರಾಣೋ ವಾಯುರಿತಿ ಪ್ರೋಕ್ತಸ್ತತ್ಪತ್ನೀ ನಾಮ ಭಾರತೀ ।**
**ರೂಪಂ ತು ತತ್ಸುತೋ ರುದ್ರೋ ವಶೇ ಪ್ರಾಣಸ್ಯ ತದ್ ದ್ವಯಮ್।**
**ಅಮೃತೋ ವಾಯುರುದ್ದಿಷ್ಟೋ ನಿತ್ಯಜ್ಞಾನಾತ್ಮಕತ್ವತಃ ।**
**ಸತ್ಯಂ ಯಥಾರ್ಥ ವಕ್ತೃತ್ವಾದ್ ಭಾರತೀ ರುದ್ರ ಏವ ಚ । ಇತಿ ಚ।**
**ರುದ್ರೇ ವೇದೇಷು ಚ ಪ್ರಾಣಃ ಪ್ರವಿಷ್ಟಶ್ಛಾದಿತಃ ಸದಾ ।**
**ಸತ್ಯ ಇತ್ಯುಚ್ಯತೇ ನಿತ್ಯಂ ಸ್ವರೂಪೇಣಾಮೃತಂ ಸ್ಮೃತಃ । ಇತಿ ಚ ।**

**॥ ಇತಿ ತ್ರಯ ಬ್ರಾಹ್ಮಣಂ ॥**

**ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯ ವಿರಚಿತೇ ಬೃಹದಾರಣ್ಯಕೋಪನಿಷದ್ಭಾಷ್ಯೇ ಪ್ರಥಮಾಧ್ಯಾಯಃ ॥**

**ಅನುವಾದ**—ಒಂದು ವಿಷಯವನ್ನು ಇನ್ನೊಂದರ ಜೊತೆಯಲ್ಲಿಯೇ ತಿಳಿಯು

ವುದರಿಂದ 'ಸಮ' ಎಂದು ವಾಗಾದಿಗಳು ಕರೆಯಲ್ಪಡುತ್ತಾರೆ. 'ಆತ್ಮೇತ್ಯೇತತ್' ಎಂಬಲ್ಲಿ ಆತ್ಮಾ ಎಂದರೆ ಪ್ರಾಣ. ನಾಮರೂಪಾಭಿಮಾನಿ ದೇವತೆಗಳೂ ಪ್ರಾಣನ ಅಧೀನರಾದುದರಿಂದ ಈ ಮೂರೂ ಒಬ್ಬನೇ ಎಂದು ಹೇಳಲ್ಪಡುತ್ತದೆ.

'ಮುಖ್ಯಪ್ರಾಣನಿಗೆ ವಾಯು ಎಂದು ಹೆಸರು. ಅವನ ಪತ್ನಿಯಾದ ಭಾರತಿಯು ವಾಕ್ ಎನಿಸಿದ್ದಾಳೆ. ಅವನ ಸುತನಾದ ರುದ್ರನು ಚಕ್ಷುಸ್ ಎನಿಸಿದ್ದಾನೆ. ಇವರಿಬ್ಬರೂ ಪ್ರಾಣನಿಗೆ ಅಧೀನರು. ನಿತ್ಯಜ್ಞಾನವುಳ್ಳವನಾದ್ದರಿಂದ ವಾಯುವಿಗೆ ಅಮೃತ ಎಂದು ಹೆಸರು. ಯಥಾರ್ಥವನ್ನೇ ನುಡಿಯುವುದರಿಂದ ಭಾರತೀ ಮತ್ತು ರುದ್ರರು ಸತ್ಯ ಎನಿಸುತ್ತಾರೆ' ಎಂದೂ ಹೇಳಲ್ಪಟ್ಟಿದೆ. ರುದ್ರನಲ್ಲಿಯೂ ಮತ್ತು ವೇದಾಭಿಮಾನಿಯಾದ ಭಾರತಿಯಲ್ಲಿಯೂ ಪ್ರಾಣನು ಪ್ರವಿಷ್ಟನಾಗಿ ಅವರಿಂದ ಆಚ್ಛಾದಿತನೆನಿಸುತ್ತಾನೆ. ಆವಿರ್ಭೂತವಾದ ತನ್ನ ಸ್ವರೂಪಜ್ಞಾನಕ್ಕೆ ಎಂದೂ ತಿರೋಧಾನವಿಲ್ಲದ ಪ್ರಯುಕ್ತ ಪ್ರಾಣನಿಗೆ ಅಮೃತ ಎಂದು ಹೆಸರು ಎಂದೂ ಹೇಳಿದೆ.

## ಎರಡನೆಯ ಅಧ್ಯಾಯ

**ಬಹಿರುಪಾಸನೆ-ಅಂತರುಪಾಸನೆ :**

**ಉಪನಿಷತ್—ದೃಪ್ತಬಾಲಾಕಿರ್ಹಾನೂಚಾನೋ ಗಾರ್ಗ್ಯ ಆಸ । ಸ ಹೋವಾಚ ಅಜಾತಶತ್ರುಂ ಕಾಶ್ಯಂ 'ಬ್ರಹ್ಮ ತೇ ಬ್ರವಾಣೀ'ತಿ । ಸ ಹೋವಾಚ ಅಜಾತಶತ್ರುಃ- 'ಸಹಸ್ರಮೇತಸ್ಯಾಂ ವಾಚಿ ದದ್ಮಃ । ಜನಕೋ ಜನಕ ಇತಿ ವೈ ಜನಾ ಧಾವಂತೀ'ತಿ ।**

ಬಾಹ್ಯದಲ್ಲಿ ಬ್ರಹ್ಮೋಪಾಸನೆಯು ಸಾಕ್ಷಾತ್ ಮೋಕ್ಷ ಸಾಧಕವಲ್ಲ. ಸ್ವಹೃದಯಸ್ಥ ಬ್ರಹ್ಮನ ಉಪಾಸನೆಯೇ ಸಾಕ್ಷಾತ್ ಮೋಕ್ಷಸಾಧಕ ಎಂದು ಹೇಳಲು ಈ ಆಖ್ಯಾಯಿಕೆ—

ಗರ್ಗಗೋತ್ರದಲ್ಲಿ ಹುಟ್ಟಿದ ಬಾಲಾಕಿಯು ವೇದಾಧ್ಯಯನ ಸಂಪನ್ನನಾಗಿದ್ದು, ಆ ಕಾರಣದಿಂದಲೇ ಅಹಂಕಾರಿಯಾಗಿದ್ದನು. ಅವನು ಕಾಶಿಯಲ್ಲಿ ಅಜಾತಶತ್ರು ಎಂಬ ರಾಜನನ್ನು ಸಮೀಪಿಸಿ 'ನಿನಗೆ ಬ್ರಹ್ಮನನ್ನು ಉಪದೇಶ ಮಾಡುತ್ತೇನೆ' ಎಂದು ಹೇಳಿದನು. ಆಗ ಅಜಾತಶತ್ರುವು, 'ನೀನು ಬ್ರಹ್ಮೋಪದೇಶ ಮಾಡಲು ಸಮರ್ಥನಿದ್ದರೆ ನಿನಗೆ ಸಹಸ್ರಗೋವುಗಳನ್ನು ಕೊಡುತ್ತೇನೆ' ಎಂದು ಅಪಹಾಸ ಮಾಡಿದನು. 'ನೀನು ಬ್ರಹ್ಮಜ್ಞಾನಿಯಾಗಿದ್ದರೆ ಬ್ರಹ್ಮಜಿಜ್ಞಾಸುಗಳೆಲ್ಲರೂ ಸಮೀಪದಲ್ಲಿರುವ ಬ್ರಾಹ್ಮಣನಾದ ನಿನ್ನನ್ನು ಬಿಟ್ಟು ಕ್ಷತ್ರಿಯನಾದ ಜನಕರಾಜನ ಹತ್ತಿರ ಏಕೆ ಓಡುತ್ತಾರೆ? ಜನಕ, ಜನಕ ಎಂದು ಎಲ್ಲಾ ಜನರೂ ಅವನ ಬಳಿಗೆ ಓಡುತ್ತಾರೆಂಬುದಾ

ಪ್ರಸಿದ್ಧವಷ್ಟೆ ? ನೀನು ದರ್ಪದಿಂದ ನನ್ನನ್ನು ಕುರಿತು ಹೀಗೆ ಮಾತನಾಡುತ್ತಿರುವಿ. ನಿಜವಾಗಿ ನೀನು ಬ್ರಹ್ಮಜ್ಞಾನಿಯಲ್ಲ' ಎಂದು ಹೇಳಿದನು.

**ಉಪನಿಷತ್—ಸ ಹೋವಾಚ ಗಾರ್ಗ್ಯೋ 'ಯ ಏವಾಸಾವಾದಿತ್ಯೇ ಪುರುಷ ಏತಮೇವಾಹಂ ಬ್ರಹ್ಮೋಪಾಸ' ಇತಿ । ಸ ಹೋವಾಚಾಜಾತಶತ್ರುಃ 'ಮಾ ಮೈತಸ್ಮಿನ್ ಸಂವದಿಷ್ಠಾಃ । ಅತಿಷ್ಠಾಃ ಸರ್ವೇಷಾಂ ಭೂತಾನಾಂ ಮೂರ್ಧಾ ರಾಜೇತಿ ವಾ ಅಹಮೇತಮುಪಾಸ' ಇತಿ ।**

**ಸ ಯ ಏತಮೇವಮುಪಾಸ್ತೇ ಅತಿಷ್ಠಾಃ ಸರ್ವೇಷಾಂ ಭೂತಾನಾಂ ಮೂರ್ಧಾ ರಾಜಾ ಭವತಿ ।**

ಹೀಗೆ ಅಪಹಾಸದಿಂದ ಲಜ್ಜೆಗೊಂಡ ಗಾರ್ಗ್ಯನು 'ನಾನು ಆದಿತ್ಯನಲ್ಲಿರುವ ವಿಷ್ಣುವನ್ನೇ ಬ್ರಹ್ಮನೆಂದು ಉಪಾಸನೆ ಮಾಡುತ್ತೇನೆ' ಎಂದು ಹೇಳಿದನು. ಹೆಚ್ಚು ತಿಳಿದಿರುವವರ ಎದುರು ಅಲ್ಪಜ್ಞರು ಸಂವಾದ ಮಾಡಬಾರದು. ಆದ್ದರಿಂದಲೂ, ಈ ವಿಷಯದಲ್ಲಿ ನನಗೆ ಸರಿಯಾದ ಜ್ಞಾನವಿದ್ದು ಸಂಶಯವಿಲ್ಲದಿರುವುದರಿಂದಲೂ ನನ್ನ ಜೊತೆಯಲ್ಲಿ ಸಂವಾದ ಮಾಡಬೇಡ. ನಾನು ಆದಿತ್ಯನಲ್ಲಿರುವ ವಿಷ್ಣುವು ಬ್ರಹ್ಮನೆಂದು ತಿಳಿದಿದ್ದೇನೆ. ಈ ಆದಿತ್ಯಾಂತರ್ಗತನಾದ ವಿಷ್ಣುವನ್ನು ಜಗದ್ಧರ್ಮ ರಹಿತನಾಗಿ ಜಗತ್ತನ್ನು ಮೀರಿರುವುದರಿಂದ 'ಅತಿಷ್ಠಾ' ಎಂದೂ, ಎಲ್ಲಾ ಜೀವರಿಗಿಂತಲೂ ಉತ್ತಮನಾದುದರಿಂದ 'ಮೂರ್ಧಾ' ಎಂದೂ, ಪ್ರಕಾಶರೂಪನಾದುದರಿಂದ 'ರಾಜಾ' ಎಂದೂ ಉಪಾಸನೆ ಮಾಡುತ್ತೇನೆ' ಎಂದು ಅಜಾತಶತ್ರುವು ಹೇಳಿದನು.

ಯಾರು ಆದಿತ್ಯಾಂತರ್ಗತನಾದ ವಿಷ್ಣುವನ್ನು ಅತಿಷ್ಠಾತ್ವಾದಿ ಗುಣಗಳಿಂದ ಕೂಡಿದವನೆಂದು ಉಪಾಸನೆ ಮಾಡುತ್ತಾನೆಯೋ ಅವನು ತನ್ನ ಯೋಗ್ಯತಾನುಸಾರ ಜಗತ್ತನ್ನು ಮೀರಿ ಜಗದ್ಧರ್ಮರಹಿತನಾಗಿಯೂ, ಎಲ್ಲರಿಗೂ ಉತ್ತಮನಾಗಿಯೂ ಮತ್ತು ಪ್ರಕಾಶರೂಪನಾಗಿಯೂ ಆಗುತ್ತಾನೆ.

**ಭಾಷ್ಯ—ಅತೀತ್ಯ ಜಗದ್ ಧರ್ಮವರ್ಜಿತತ್ವೇನ ಸ್ಥಿತತ್ವಾದತಿಷ್ಠಾಃ । ಉತ್ತ-ಮತ್ವಾನ್ಮೂರ್ಧಾ ।**

**ಅನುವಾದ**—ಜಗತ್ತನ್ನು ಮೀರಿ ಜಗದ್ಧರ್ಮವರ್ಜಿತನಾಗಿರುವುದರಿಂದ ವಿಷ್ಣುವಿಗೆ ಅತಿಷ್ಠಾ ಎಂದು ಹೆಸರು. ಸರ್ವಾವಯವಗಳಲ್ಲಿ ಶಿರಸ್ಸು ಪ್ರಧಾನವಾದಂತೆ ವಿಷ್ಣುವು ಸರ್ವೋತ್ತಮನಾದುದರಿಂದ ಮೂರ್ಧಾ ಎನಿಸುತ್ತಾನೆ.

**ಉಪನಿಷತ್—ಸ ಹೋವಾಚ ಗಾರ್ಗ್ಯೋ 'ಯ ಏವಾಸೌ ಚಂದ್ರೇ ಪುರುಷ ಏತಮೇವಾಹಂ ಬ್ರಹ್ಮೋಪಾಸ' ಇತಿ । ಸ ಹೋವಾಚಾಜಾತಶತ್ರುಃ**

**'ಮಾ ಮೈತಸ್ಮಿನ್ ಸಂವದಿಷ್ಠಾಃ । ಬೃಹತ್ಪಾಂಡರವಾಸಾಃ ಸೋಮೋ ರಾಜೇತಿ ವಾ ಅಹಮೇನಮುಪಾಸ' ಇತಿ ।**

**ಸ ಯ ಏತಮೇವಮುಪಾಸ್ತೇಽಹರಹಃ ಸುತೋ ಪ್ರಸುತೋ ಭವತಿ। ನಾಸ್ಯಾನ್ನಂ ಕ್ಷೀಯತೇ ।**

'ಚಂದ್ರನಲ್ಲಿ ಅಂತರ್ಗತನಾದ ವಿಷ್ಣುವನ್ನು ನಾನು ಬ್ರಹ್ಮ ಎಂದು ಉಪಾಸನೆ ಮಾಡುತ್ತೇನೆ' ಎಂದು ಆ ಗಾರ್ಗ್ಯನು ಹೇಳಿದನು. ಆ ಅಜಾತಶತ್ರುವು 'ಈ ವಿಷಯ ದಲ್ಲಿ ನನ್ನ ಜೊತೆ ಸಂವಾದ ಮಾಡಬೇಡ. ನಾನು ಅವನನ್ನೂ ಶುಕ್ಲಾಂಬರಧರ ನೆಂದೂ, ಸೋಮಾಂತರ್ಗತನಾದುದರಿಂದ ಸೋಮನೆಂದೂ, ಪ್ರಕಾಶರೂಪನಾದುವ ರಿಂದ ರಾಜನೆಂದೂ ಉಪಾಸನೆ ಮಾಡುತ್ತೇನೆ' ಎಂದು ಹೇಳಿದನು.

ಯಾರು ಹೀಗೆ ಉಪಾಸನೆ ಮಾಡುತ್ತಾನೆಯೋ ಅವನ ಮನೆಯಲ್ಲಿ ಪ್ರತಿನಿತ್ಯವೂ ಸೋಮಯಾಗವು ನಡೆಯುತ್ತದೆ. ಭೋಗ್ಯವಸ್ತುಗಳೂ ವ್ರವೂ ಕ್ಷಯವನ್ನು ಹೊಂದು ವುದಿಲ್ಲ, ಸಮೃದ್ಧಿಯನ್ನೇ ಹೊಂದುತ್ತವೆ.

**ಉಪನಿಷತ್—ಸ ಹೋವಾಚ ಗಾರ್ಗ್ಯೋ 'ಯ ಏವಾಯಂ ವಿದ್ಯುತಿ ಪುರುಷ ಏತಮೇವಾಹಂ ಬ್ರಹ್ಮೋಪಾಸ' ಇತಿ । ಸ ಹೋವಾಚಾಜಾತಶತ್ರುಃ 'ಮಾ ಮೈತಸ್ಮಿನ್ ಸಂವದಿಷ್ಠಾಃ। ತೇಜಸ್ವೀತಿ ವಾ ಅಹಮೇನಮುಪಾಸ' ಇತಿ ।**

**ಸ ಯ ಏತಮೇವಮುಪಾಸ್ತೇ ತೇಜಸ್ವೀ ಹ ಭವತಿ । ತೇಜಸ್ವಿನೀ ಹಾಸ್ಯ ಪ್ರಜಾ ಭವತಿ ।**

ಆ ಗಾರ್ಗ್ಯನು 'ವಿದ್ಯುತ್ತಿನಲ್ಲಿರುವ ವಿಷ್ಣುವನ್ನು ಬ್ರಹ್ಮನೆಂದು ಉಪಾಸನೆ ಮಾಡುತ್ತೇನೆ' ಎಂದು ಹೇಳಿದನು. ಆ ಅಜಾತಶತ್ರುವು 'ಈ ವಿಷಯದಲ್ಲಿ ನನ್ನ ಜೊತೆ ಸಂವಾದ ಮಾಡಬೇಡ. ವಿದ್ಯುತ್ತಿನಲ್ಲಿರುವ ವಿಷ್ಣುವು ಮಹಾತೇಜಸ್ಸುಳ್ಳವ ನೆಂದು ನಾನು ಉಪಾಸನೆ ಮಾಡುತ್ತಿದ್ದೇನೆ' ಎಂದು ಹೇಳಿದನು.

ಯಾರು ಹೀಗೆ ಉಪಾಸನೆ ಮಾಡುತ್ತಾನೆಯೋ ಅವನು ತೇಜಸ್ವಿಯಾಗುತ್ತಾನೆ. ಅವನ ಮಕ್ಕಳೂ ತೇಜಸ್ವಿಗಳಾಗುತ್ತಾರೆ.

**ಉಪನಿಷತ್—ಸ ಹೋವಾಚ ಗಾರ್ಗ್ಯೋ 'ಯ ಏವಾಯಮಾಕಾಶೇ ಪುರುಷ ಏತಮೇವಾಹಂ ಬ್ರಹ್ಮೋಪಾಸ' ಇತಿ । ಸ ಹೋವಾಚಾಜಾತಶತ್ರುಃ 'ಮಾ ಮೈತಸ್ಮಿನ್ ಸಂವದಿಷ್ಠಾಃ । ಪೂರ್ಣಮಪ್ರವರ್ತೀತಿ ವಾ ಅಹ ಮೇತಮುಪಾಸ' ಇತಿ ।**

**ಸ ಯ ಏತಮೇವಮುಪಾಸ್ತೇ ಪೂರ್ಯತೇ ಪ್ರಜಯಾ ಪಶುಭಿಃ । ನಾಸ್ಯಾಸ್ಮಾಲ್ಲೋಕಾತ್ ಪ್ರಜೋದ್ವರ್ತತೇ ।**

ಆ ಗಾರ್ಗ್ಯನು 'ಆಕಾಶದಲ್ಲಿರುವ ವಿಷ್ಣುವನ್ನು ನಾನು ಬ್ರಹ್ಮನೆಂದು ಉಪಾಸನೆ ಮಾಡುತ್ತೇನೆ' ಎಂದು ಹೇಳಿದನು, ಆ ಅಜಾತಶತ್ರುವು 'ಈ ವಿಷಯದಲ್ಲಿ ನನ್ನ ಜೊತೆ ಸಂವಾದ ಮಾಡಬೇಡ. ಆಕಾಶಸ್ಥನಾದ ವಿಷ್ಣುವು ಗುಣಪರಿಪೂರ್ಣನೆಂದೂ ಇನ್ನೊಬ್ಬ ಪ್ರವರ್ತಕನಿಲ್ಲದವನೆಂದೂ, ನಾಶರಹಿತನೆಂದೂ ನಾನು ಉಪಾಸನೆ ಮಾಡುತ್ತಿದ್ದೇನೆ' ಎಂದು ಹೇಳಿದನು.

ಯಾರು ಹೀಗೆ ಉಪಾಸನೆ ಮಾಡುತ್ತಾನೆಯೋ ಅವನು ಈ ಲೋಕದಲ್ಲಿ ಸಂತತಿಯಿಂದಲೂ ಪಶುಗಳಿಂದಲೂ ಸಮೃದ್ಧನಾಗುತ್ತಾನೆ. ಅವನ ಸಂತತಿಯು ನಾಶ ಹೊಂದುವುದಿಲ್ಲ.

**ಉಪನಿಷತ್—ಸ ಹೋವಾಚ ಗಾರ್ಗ್ಯೋ 'ಯ ಏವಾಯಂ ವಾಯೌ ಪುರುಷ ಏತಮೇವಾಹಂ ಬ್ರಹ್ಮೋಪಾಸ' ಇತಿ । ಸ ಹೋವಾಚಾಜಾತಶತ್ರುಃ 'ಮಾ ಮೈತಸ್ಮಿನ್ ಸಂವದಿಷ್ಠಾಃ । ಇಂದ್ರೋ ವೈಕುಂಠೋಽಪರಾಜಿತಾ ಸೇನೇತಿ ವಾ ಅಹಮೇತಮುಪಾಸ' ಇತಿ ।**

**ಸ ಯ ಏತಮೇವಮುಪಾಸ್ತೇ ಜಿಷ್ಣುರ್ಹಾಪರಾಜಿಷ್ಣುರ್ಭವತ್ಯನ್ಯತಸ್ತ್ಯಜಾಯಿೞ ।**

ಆ ಗಾರ್ಗ್ಯನು 'ವಾಯ್ವಂತರ್ಗತನಾದ ವಿಷ್ಣುವನ್ನೇ ನಾನು ಬ್ರಹ್ಮನೆಂದು ಉಪಾಸನೆ ಮಾಡುತ್ತೇನೆ' ಎಂದು ಹೇಳಿದನು. ಆ ಅಜಾತಶತ್ರುವು 'ಈ ವಿಷಯದಲ್ಲಿ ನನ್ನ ಜೊತೆಯಲ್ಲಿ ಸಂವಾದ ಮಾಡಬೇಡ. ವಾಯ್ವಂತರ್ಗತನಾದ ವಿಷ್ಣುವು ಪರಮೈಶ್ವರ್ಯಯುಕ್ತನೆಂದೂ, ಪರಾಭವರಹಿತನೆಂದೂ, ಶತ್ರುಗಳಿಗೆ ಸೋಲದ ಬಹುರೂಪವುಳ್ಳವನಾದ್ದರಿಂದ ಸ್ವಯಂ ಅಪರಾಜಿತಸೇನಾರೂಪನೆಂದೂ ನಾನು ಉಪಾಸನೆ ಮಾಡುತ್ತೇನೆ' ಎಂದು ಹೇಳಿದನು.

ಯಾರು ಹೀಗೆ ಉಪಾಸನೆ ಮಾಡುತ್ತಾನೆಯೋ ಅವನು ಉತ್ತಮನೂ, ಪರಾಭವರಹಿತ ಸ್ವಭಾವವುಳ್ಳವನೂ, ಇನ್ನೊಬ್ಬರನ್ನು ಜಯಿಸುವವನೂ ಆಗುತ್ತಾನೆ.

**ಭಾಷ್ಯ—ಸ್ವಯಮೇವಾಪರಾಜಿತಬಹುರೂಪತ್ವಾದಪರಾಜಿತಾ ಸೇನಾ ಭಗವಾನ್ । ಜಿಷ್ಣುರುತ್ತಮಃ । ಅನ್ಯೇಷಾಂ ಜೇತಾ ಅನ್ಯತಸ್ತ್ಯಜಾಯಿೞ ।**

**ಅನುವಾದ**—ತಾನೇ ಪರಾಜಯವಿಲ್ಲದ ಬಹುರೂಪವುಳ್ಳವನಾದ್ದರಿಂದ ಭಗವಂತನು 'ಅಪರಾಜಿತಾ ಸೇನಾ' ಎಂದು ಕರೆಯಲ್ಪಡುತ್ತಾನೆ. ಜಿಷ್ಣು ಎಂದರೆ

ಉತ್ತಮ ಎಂದರ್ಥ. 'ಅನ್ಯತಸ್ತ್ಯಜಾಯೀ' ಎಂದರೆ ಇನ್ನೊಬ್ಬರನ್ನು ಜಯಿಸುವವನು ಎಂದು ಅರ್ಥ.

**ಉಪನಿಷತ್—ಸ ಹೋವಾಚ ಗಾರ್ಗ್ಯೋ 'ಯ ಏವಾಯಮಗ್ನೌ ಪುರುಷ ಏತಮೇವಾಹಂ ಬ್ರಹ್ಮೋಪಾಸ' ಇತಿ । ಸ ಹೋವಾಚಾಜಾತಶತ್ರುಃ 'ಮಾ ಮೈತಸ್ಮಿನ್ ಸಂವದಿಷ್ಠಾಃ । ವಿಷಾಸಹಿರಿತಿ ವಾ ಅಹಮೇತ ಮುಪಾಸ' ಇತಿ ।**

**ಸ ಯ ಏತಮೇವಮುಪಾಸ್ತೇ ವಿಷಾಸಹಿರ್ಹ ಭವತಿ । ವಿಷಾಸಹಿರ್ಹಾಸ್ಯ ಪ್ರಜಾ ಭವತಿ ।**

ಆ ಗಾರ್ಗ್ಯನು 'ಅಗ್ನಿಸ್ಥನಾದ ವಿಷ್ಣುವನ್ನೇ ನಾನು ಬ್ರಹ್ಮನೆಂದು ಉಪಾಸನೆ ಮಾಡುತ್ತೇನೆ' ಎಂದು ಹೇಳಿದನು. ಆ ಅಜಾತಶತ್ರುವು 'ಈ ವಿಷಯದಲ್ಲಿ ನನ್ನ ಜೊತೆಯಲ್ಲಿ ಸಂವಾದ ಮಾಡಬೇಡ. ನಾನು ಅಗ್ನಿಸ್ಥನಾದ ವಿಷ್ಣುವು ಪರಾಕ್ರಮದಲ್ಲಿ ಶತ್ರುಗಳಿಗೆ ಸಹಿಸಲು ಅಸಾಧ್ಯನಾದವನೆಂದು ಉಪಾಸನೆ ಮಾಡುತ್ತೇನೆ' ಎಂದು ಹೇಳಿದನು.

ಯಾರು ಹೀಗೆ ಉಪಾಸನೆ ಮಾಡುತ್ತಾನೆಯೋ ಅವನು ಪರಾಕ್ರಮದಲ್ಲಿ ಶತ್ರುಗಳಿಗೆ ಸಹಿಸಲು ಅಸಾಧ್ಯನಾಗುತ್ತಾನೆ. ಅವನ ಸಂತತಿಯೂ ಪರಾಕ್ರಮದಲ್ಲಿ ಶತ್ರುಗಳಿಗೆ ಸಹಿಸಲು ಅಸಾಧ್ಯವಾಗುತ್ತದೆ.

**ಭಾಷ್ಯ—ವಿಷಾಸಹಿರಸಹ್ಯಃ ।**

**ಅನುವಾದ**—ವಿಷಾಸಹಿ ಎಂದರೆ ಪರಾಕ್ರಮದಲ್ಲಿ ಶತ್ರುಗಳಿಗೆ ಸಹಿಸಲು ಅಸಾಧ್ಯನಾದವನು ಎಂದು ಅರ್ಥ.

**ಉಪನಿಷತ್—ಸ ಹೋವಾಚ ಗಾರ್ಗ್ಯೋ 'ಯ ಏವಾಯಮಪ್ಸು ಪುರುಷ ಏತಮೇವಾಹಂ ಬ್ರಹ್ಮೋಪಾಸ' ಇತಿ । ಸ ಹೋವಾಚಾಜಾತಶತ್ರುಃ 'ಮಾ ಮೈತಸ್ಮಿನ್ ಸಂವದಿಷ್ಠಾಃ । ಪ್ರತಿರೂಪ ಇತಿ ವಾ ಅಹಮೇತ-ಮುಪಾಸ' ಇತಿ ।**

**ಸ ಯ ಏತಮೇವಮುಪಾಸ್ತೇ ಪ್ರತಿರೂಪಂ ಹೈವೈನಮುಪಗಚ್ಛತಿ । ನಾಪ್ರತಿರೂಪಂ । ಅಥೋ ಪ್ರತಿರೂಪೋಽಸ್ಮಾಜ್ಜಾಯತೇ ।**

ಆ ಗಾರ್ಗ್ಯನು 'ಜಲಾಂತರ್ಗತನಾದ ವಿಷ್ಣುವನ್ನು ನಾನು ಬ್ರಹ್ಮನೆಂದು ಉಪಾಸನೆ ಮಾಡುತ್ತೇನೆ' ಎಂದು ಹೇಳಿದನು. ಆ ಅಜಾತಶತ್ರುವು 'ಈ ವಿಷಯದಲ್ಲಿ ನನ್ನ

ಜೊತೆಯಲ್ಲಿ ಸಂವಾದ ಮಾಡಬೇಡ. ನಾನು ಜಲಾಂತರ್ಗತನಾದ ವಿಷ್ಣುವು ಅನುಕೂಲನೆಂದು ಉಪಾಸನೆ ಮಾಡುತ್ತೇನೆ ಎಂದು ಹೇಳಿದನು.

ಯಾರು ಹೀಗೆ ಉಪಾಸನೆ ಮಾಡುತ್ತಾನೆಯೋ ಅವನಿಗೆ ಪ್ರತಿಕೂಲವಾದುದು ಎಲ್ಲವೂ ಅನುಕೂಲವಾಗಿಯೇ ಬರುತ್ತದೆ. ಯಾವುದೂ ಪ್ರತಿಕೂಲವಾಗಿರುವುದಿಲ್ಲ. ಮತ್ತು ಅವನಿಗೆ ಅನುಕೂಲನಾದ ಪುತ್ರನೇ ಜನಿಸುತ್ತಾನೆ.

**ಉಪನಿಷತ್—ಸ ಹೋವಾಚ ಗಾರ್ಗ್ಯೋ 'ಯ ಏವಾಯಮಾದರ್ಶೇ ಪುರುಷ ಏತಮೇವಾಹಂ ಬ್ರಹ್ಮೋಪಾಸ' ಇತಿ । ಸ ಹೋವಾಚಾಜಾತಶತ್ರುಃ 'ಮಾ ಮೈತಸ್ಮಿನ್ ಸಂವದಿಷ್ಠಾಃ । ರೋಚಿಷ್ಣುರಿತಿ ವಾ ಅಹಮೇತಮುಪಾಸ' ಇತಿ।**

**ಸ ಯ ಏತಮೇವಮುಪಾಸ್ತೇ ರೋಚಿಷ್ಣುರ್ಹ ಭವತಿ। ರೋಚಿಷ್ಣುರ್ಹಾಸ್ಯ ಪ್ರಜಾ ಭವತಿ । ಅಥೋ ಯೈಃ ಸನ್ನಿಗಚ್ಛತಿ ಸರ್ವಾಂಸ್ತಾನತಿ ರೋಚತೇ ।**

ಆ ಗಾರ್ಗ್ಯನು 'ನಾನು ಕನ್ನಡಿಯಲ್ಲಿ ಅಂತರ್ಗತನಾದ ಪುರುಷನೇ ಬ್ರಹ್ಮನೆಂದು ಉಪಾಸನೆ ಮಾಡುತ್ತೇನೆ' ಎಂದು ಹೇಳಿದನು. ಆ ಅಜಾತಶತ್ರುವು 'ಈ ವಿಷಯದಲ್ಲಿ ನನ್ನ ಜೊತೆಯಲ್ಲಿ ಸಂವಾದ ಮಾಡಬೇಡ. ನಾನು ಕನ್ನಡಿಯಲ್ಲಿ ಅಂತರ್ಗತನಾದ ವಿಷ್ಣುವು ಅತ್ಯಂತ ಪ್ರಕಾಶ ಸ್ವಭಾವದವನು ಎಂದು ಉಪಾಸನೆ ಮಾಡುತ್ತೇನೆ'ಎಂದು ಹೇಳಿದನು.

ಯಾರು ಹೀಗೆ ಉಪಾಸನೆ ಮಾಡುತ್ತಾನೆಯೋ ಅವನು ಪ್ರಕಾಶಸ್ವಭಾವನಾಗುತ್ತಾನೆ. ಅವನ ಸಂತತಿಯವರೂ ಪ್ರಕಾಶಸ್ವಭಾವದವರಾಗುತ್ತಾರೆ. ಮತ್ತು ಯಾವ ವಿದ್ವಾಂಸರ ಜೊತೆಯಲ್ಲಿ ಸೇರುತ್ತಾನೆಯೋ ಅವರೆಲ್ಲರಿಗಿಂತ ಹೆಚ್ಚು ಮೆರೆಯುತ್ತಾನೆ.

**ಉಪನಿಷತ್—ಸ ಹೋವಾಚ ಗಾರ್ಗ್ಯೋ 'ಯ ಏವಾಯಂ ಯಂತಂ ಪಶ್ಚಾಚ್ಛಬ್ದೋಽನೂದೇತ್ಯೇತಮೇವಾಹಂ ಬ್ರಹ್ಮೋಪಾಸ' ಇತಿ । ಸ ಹೋವಾಚಾಜಾತಶತ್ರುಃ 'ಮಾ ಮೈತಸ್ಮಿನ್ ಸಂವದಿಷ್ಠಾಃ । ಅಸುರಿತಿ ವಾ ಅಹಮೇತಮುಪಾಸ ಇತಿ ।**

**ಸ ಯ ಏತಮೇವಮುಪಾಸ್ತೇ ಸರ್ವಂ ಹೈವಾಸ್ಮಿನ್ ಲೋಕ ಆಯುರೇತಿ । ನೈನಂ ಪುರಾ ಕಾಲಾತ್ ಪ್ರಾಣೋ ಜಹಾತಿ ।**

ಆ ಗಾರ್ಗ್ಯನು 'ನಡೆಯುವ ಪುರುಷನ ಹಿಂದೆ ಉಂಟಾಗುವ ಶಬ್ದದಲ್ಲಿರುವ ವಿಷ್ಣುವನ್ನು ಬ್ರಹ್ಮನೆಂದು ಉಪಾಸನೆ ಮಾಡುತ್ತೇನೆ' ಎಂದು ಹೇಳಿದನು. ಆ ಅಜಾತ

ಶತ್ರುವು 'ಈ ವಿಷಯದಲ್ಲಿ ನನ್ನ ಜೊತೆಯಲ್ಲಿ ಸಂವಾದ ಮಾಡಬೇಡ. ಆ ವಿಷ್ಣು ವನ್ನು ಆಯುಷ್ಯ ಪ್ರದನೆಂದು ನಾನು ಉಪಾಸನೆ ಮಾಡುತ್ತೇನೆ' ಎಂದು ಹೇಳಿದನು.

ಯಾರು ಹೀಗೆ ಉಪಾಸನೆ ಮಾಡುತ್ತಾನೆಯೋ ಅವನು ಪೂರ್ಣಾಯುಷ್ಯವನ್ನು ಹೊಂದುತ್ತಾನೆ. ಅವನಿಗೆ ಅಪಮೃತ್ಯು ಬರುವುದೇ ಇಲ್ಲ.

**ಉಪನಿಷತ್—ಸ ಹೋವಾಚ ಗಾರ್ಗ್ಯೋ 'ಯ ಏವಾಯಂ ದಿಕ್ಷು ಪುರುಷ ಏತಮೇವಾಹಂ ಬ್ರಹ್ಮೋಪಾಸ' ಇತಿ । ಸ ಹೋವಾಚಾಜಾತಶತ್ರುಃ 'ಮಾ ಮೈತಸ್ಮಿನ್ ಸಂವದಿಷ್ಠಾಃ । ದ್ವಿತೀಯೋಽನಪಗ ಇತಿ ವಾ ಅಹ-ಮೇತಮುಪಾಸ' ಇತಿ ।**

**ಸ ಯ ಏತಮೇವಮುಪಾಸ್ತೇ ದ್ವಿತೀಯವಾನ್ ಭವತಿ । ನಾಸ್ಮಾದ್ ಗಣಶ್ಛಿದ್ಯತೇ ।**

ಆ ಗಾರ್ಗ್ಯನು 'ದಿಕ್ಕುಗಳಲ್ಲಿ ಅಂತರ್ಗತನಾದ ವಿಷ್ಣುವನ್ನು ನಾನು ಬ್ರಹ್ಮನೆಂದು ಉಪಾಸನೆ ಮಾಡುತ್ತೇನೆ' ಎಂದು ಹೇಳಿದನು. ಆ ಅಜಾತಶತ್ರುವು 'ಈ ವಿಷಯದಲ್ಲಿ ನನ್ನ ಜೊತೆಯಲ್ಲಿ ಸಂವಾದ ಮಾಡಬೇಡ. ನಾನು ಅವನನ್ನು ಶಾಶ್ವತವಾಗಿ ಬ್ರಹ್ಮಾದಿ ಪರಿವಾರ ಉಳ್ಳವನೆಂದು ಉಪಾಸನೆ ಮಾಡುತ್ತೇನೆ' ಎಂದು ಹೇಳಿದನು.

ಯಾರು ಹೀಗೆ ಉಪಾಸನೆ ಮಾಡುತ್ತಾನೆಯೋ ಅವನು ಪರಿವಾರ ಉಳ್ಳವನಾಗುತ್ತಾನೆ. ಅವನ ಪರಿವಾರವು ಅವನನ್ನು ಬಿಟ್ಟು ಹೋಗುವುದಿಲ್ಲ.

**ಉಪನಿಷತ್—ಸ ಹೋವಾಚ ಗಾರ್ಗ್ಯೋ 'ಯ ಏವಾಯಂ ಛಾಯಾಮಯಃ ಪುರುಷ ಏತಮೇವಾಹಂ ಬ್ರಹ್ಮೋಪಾಸ' ಇತಿ । ಸ ಹೋವಾಚಾಜಾತ ಶತ್ರುಃ 'ಮಾ ಮೈತಸ್ಮಿನ್ ಸಂವದಿಷ್ಠಾಃ । ಮೃತ್ಯುರಿತಿ ವಾ ಅಹಮೇತ-ಮುಪಾಸ' ಇತಿ ।**

**ಸ ಯ ಏತಮೇವಮುಪಾಸ್ತೇ ಸರ್ವಂ ಹೈವಾಸ್ಮಿನ್ ಲೋಕ ಆಯು-ರೇತಿ । ನೈನಂ ಪುರಾ ಕಾಲಾನ್ಮೃತ್ಯುರಾಗಚ್ಛತಿ ।**

ಆ ಗಾರ್ಗ್ಯನು 'ನಾನು ಛಾಯಾಂತರ್ಗತನಾದ ವಿಷ್ಣುವನ್ನು ಬ್ರಹ್ಮನೆಂದು ಉಪಾಸನೆ ಮಾಡುತ್ತೇನೆ' ಎಂದು ಹೇಳಿದನು. ಆ ಅಜಾತಶತ್ರುವು 'ಈ ವಿಷಯ ದಲ್ಲಿ ನನ್ನ ಜೊತೆಯಲ್ಲಿ ಸಂವಾದ ಮಾಡಬೇಡ. ನಾನು ಅವನನ್ನು ಮಾರಕನೆಂದು ಉಪಾಸನೆ ಮಾಡುತ್ತೇನೆ' ಎಂದು ಹೇಳಿದನು.

ಯಾರು ಹೀಗೆ ಉಪಾಸನೆ ಮಾಡುತ್ತಾನೆಯೋ ಅವನು ಈ ಲೋಕದಲ್ಲಿ ಪೂರ್ಣಾಯುಸ್ಸನ್ನು ಪಡೆಯುತ್ತಾನೆ. ಅವನಿಗೆ ಅಪಮೃತ್ಯು ಬರುವುದೇ ಇಲ್ಲ.

**ಉಪನಿಷತ್—ಸ ಹೋವಾಚ ಗಾರ್ಗ್ಯಃ 'ಯ ಏವಾಯಮಾತ್ಮನಿ ಪುರುಷ ಏತಮೇವಾಹಂ ಬ್ರಹ್ಮೋಪಾಸ' ಇತಿ । ಸ ಹೋವಾಚಾಜಾತಶತ್ರುಃ 'ಮಾ ಮೈತಸ್ಮಿನ್ ಸಂವದಿಷ್ಠಾಃ । ಆತ್ಮನ್ವೀತಿ ವಾ ಅಹಮೇತಮುಪಾಸ' ಇತಿ ।**

**ಸ ಯ ಏತಮೇವಮುಪಾಸ್ತೇ ಆತ್ಮನ್ವೀಹ ಭವತಿ । ಆತ್ಮನ್ವಿನೀ ಹಾಸ್ಯ ಪ್ರಜಾ ಭವತಿ । ಸ ಹ ತೂಷ್ಣೀಮಾಸ ಗಾರ್ಗ್ಯಃ ।**

ಆ ಗಾರ್ಗ್ಯನು 'ನಾನು ಹಿರಣ್ಯಗರ್ಭನಲ್ಲಿ ಅಂತರ್ಗತನಾದ ವಿಷ್ಣುವನ್ನು ಬ್ರಹ್ಮನೆಂದು ಉಪಾಸನೆ ಮಾಡುತ್ತೇನೆ' ಎಂದು ಹೇಳಿದನು. ಆ ಅಜಾತಶತ್ರುವು 'ಈ ವಿಷಯದಲ್ಲಿ ನನ್ನ ಜೊತೆಯಲ್ಲಿ ಸಂವಾದ ಮಾಡಬೇಡ. ನಾನು ಅವನನ್ನು ಚಿತ್ತಾಭಿಮಾನಿಯಾದ ಬ್ರಹ್ಮನಿಂದ ನೇವ್ಯನೆಂದು ಉಪಾಸನೆ ಮಾಡುತ್ತೇನೆ' ಎಂದು ಹೇಳಿದನು.

ಯಾರು ಅವನನ್ನು ಹೀಗೆ ಉಪಾಸನೆ ಮಾಡುತ್ತಾನೆಯೋ ಅವನು ಪ್ರಶಸ್ತವಾದ ಚಿತ್ತವುಳ್ಳವನಾಗುತ್ತಾನೆ. ಅವನ ಮಕ್ಕಳೂ ಪ್ರಶಸ್ತವಾದ ಚಿತ್ತವುಳ್ಳವರಾಗುತ್ತಾರೆ. ಹೀಗೆ ತಾನು ಅಭ್ಯಾಸ ಮಾಡಿದ ವಿದ್ಯೆಯನ್ನು ಹೇಳಿ ಮುಂದೆ ಏನೂ ಹೇಳಲು ಶಕ್ತಿ ಇಲ್ಲದೆ ಗಾರ್ಗ್ಯನು ಸುಮ್ಮನಾದನು.

**ಭಾಷ್ಯ—ಆತ್ಮನಿ ಹಿರಣ್ಯಗರ್ಭೇ । ಆತ್ಮನ್ವೀ ಚಿತ್ತವಾನ್ । ಚಿತ್ತಾಭಿಮಾನಿತ್ವಾತ್ ತಸ್ಯ ।**

**ಅನುವಾದ**—'ಯ ಏವಾಯಮಾತ್ಮನಿ ಪುರುಷಃ' ಎಂಬಲ್ಲಿ ಆತ್ಮನಿ ಎಂದರೆ ಬ್ರಹ್ಮನಲ್ಲಿ ಎಂದು ಅರ್ಥ. ಆತ್ಮನ್ವೀ ಎಂದರೆ ಒಳ್ಳೆಯ ಚಿತ್ತವುಳ್ಳವನು ಎಂದು ಅರ್ಥ. ಬ್ರಹ್ಮನು ಚಿತ್ತಾಭಿಮಾನಿಯಾದುದರಿಂದ, ಅಭಿಮಾನಿಯನ್ನು ಹೀಗೆ ಉಪಾಸನಾ ಮಾಡುವವನು ಅಭಿಮನ್ಯಮಾನವಾದ ಒಳ್ಳೆಯ ಚಿತ್ತಉಳ್ಳವನಾಗುತ್ತಾನೆ ಎಂದು ಅಭಿಪ್ರಾಯ.

**ಉಪನಿಷತ್—ಸ ಹೋವಾಚಾಜಾತಶತ್ರುಃ 'ಏತಾವನ್ನೂ' ಇತಿ । 'ಏತಾವದ್ಧೀ'ತಿ । 'ನೈತಾವತಾ ವಿದಿತಂ ಭವತೀ'ತಿ । ಸ ಹೋವಾಚ 'ಗಾರ್ಗ್ಯ ಉಪತ್ವಾಯಾನೀ'ತಿ ।**

ಆಗ ಆ ಅಜಾತಶತ್ರುವು ಸುಮ್ಮನೆ ಕುಳಿತ ಗಾರ್ಗ್ಯನನ್ನು ಕುರಿತು 'ನೀನು ತಿಳಿದಿರುವುದು ಇಷ್ಟೇ ತಾನೆ?' ಎಂದು ಪ್ರಶ್ನೆ ಮಾಡಿದನು. ಗಾರ್ಗ್ಯನು 'ನಿಶ್ಚಯವಾಗಿಯೂ ನಾನು ತಿಳಿದಿರುವುದು ಇಷ್ಟೇ' ಎಂದು ಹೇಳಿದನು. ಆಗ ಅಜಾತಶತ್ರುವು 'ಇಷ್ಟರಿಂದಲೇ ಪರಬ್ರಹ್ಮನನ್ನು ತಿಳಿದಂತಾಗುವುದಿಲ್ಲ' ಎಂದು ಹೇಳಿದನು

ಅದಕ್ಕೆ ಗಾರ್ಗ್ಯನು 'ಹೃದಯದಲ್ಲಿರುವ ಪರಮಾತ್ಮನ ಉಪಾಸನಾ ಪ್ರಕಾರವನ್ನು ತಿಳಿದುಕೊಳ್ಳಲು ನಿನ್ನ ಶಿಷ್ಯನಾಗುತ್ತೇನೆ' ಎಂದು ಹೇಳಿದನು.

**ವಿವರಣೆ**—ಆದಿತ್ಯಾದಿ ದೇವತೆಗಳಲ್ಲಿ ಭಗವದುಪಾಸನೆಯನ್ನು ಮಾಡಿದರೆ ಆಯಾ ದೇವತೆಗಳ ಸಾಮೀಪ್ಯವು ಮಾತ್ರ ಉಂಟಾಗುತ್ತದೆ. ಮೋಕ್ಷವು ದೊರೆಯುವುದಿಲ್ಲ. ಆದ್ದರಿಂದ ಮೋಕ್ಷವನ್ನು ಪಡೆಯಲು ತನ್ನ ಹೃದಯದಲ್ಲಿರುವ ಶ್ರೀಹರಿಯ ಉಪಾಸನೆಯನ್ನು ಮಾಡಲೇಬೇಕು ಎಂಬುದು ಅಜಾತಶತ್ರುವಿನ ಮಾತಿನ ಅಭಿಪ್ರಾಯ. 'ಜೀವ ಮುಖ್ಯಪ್ರಾಣ ಲಿಂಗಾನ್ನೇತಿ ಚೇನ್ನ ಉಪಾಸಾತ್ರೈವಿಧ್ಯಾದಿ-ಪಾಶ್ರಿತತ್ವಾತ್' ಎಂಬ ಬ್ರಹ್ಮಸೂತ್ರ(1–1–31)ದ 'ಉಪಾಸಾತ್ರೈವಿಧ್ಯಾದ್' ಎಂಬ ಅಂಶಕ್ಕೆ ಭಾಷ್ಯದಲ್ಲಿ ಆಚಾರ್ಯರು 'ಕೆಲವರು ಸರ್ವಗತೋಪಾಸನೆಯನ್ನೂ, ಕೆಲವರು ಹೃದಯಸ್ಥನ ಉಪಾಸನೆಯನ್ನೂ ಮಾಡುತ್ತಾರೆ. ಕೆಲವರು ಹೃದಯದಿಂದ ಹೊರಗಿರುವ ಪರಮಾತ್ಮನ ಉಪಾಸನೆಯನ್ನು ಮಾತ್ರ ಮಾಡುತ್ತಾರೆ' ಎಂದು ಹೇಳಿದ್ದಾರೆ. ಆದರೂ ಅದಕ್ಕೆ 'ಹೊರಗೆ ಉಪಾಸನೆ ಮಾಡುವವರೂ ಸ್ವಲ್ಪವಾದರೂ ಹೃದಯಗತನ ಉಪಾಸನೆಯನ್ನು ಮಾಡಿಯೇ ಮೋಕ್ಷವನ್ನು ಪಡೆಯುತ್ತಾರೆ' ಎಂದು ಅಭಿಪ್ರಾಯ.

**ಭಾಷ್ಯ—ಸ್ವಹೃದಿ ಸ್ಥಿತಂ ಸ್ವನಿಯಾಮಕಂ ಭಗವದ್ರೂಪಮುಪಾಸ್ಯೈವ ಮೋಕ್ಷೋ ಭವತಿ । ದೇವತಾಸು ಭಗವಂತಮುಪಾಸ್ಯ ತತ್ತದ್ದೇವತಾ-ಸಮೀಪಂ ಪ್ರಾಪ್ಯ ಪುನಃ ಸ್ವಹೃದಿಸ್ಥಮುಪಾಸ್ಯೈವ ಮೋಕ್ಷೋ ಭವತೀ-ತ್ಯತೋ 'ನೈತಾವತಾ ವಿದಿತಂ ಭವತಿ' ಇತ್ಯುಕ್ತಮ್ ।**

**ಅನುವಾದ**—ತನ್ನ ಹೃದಯದಲ್ಲಿರುವ ತನಗೆ ನಿಯಾಮಕನಾದ ಭಗವಂತನ ರೂಪವನ್ನು ಉಪಾಸನೆ ಮಾಡಿದರೇ ಮೋಕ್ಷ ಉಂಟಾಗುತ್ತದೆ. ದೇವತೆಗಳಲ್ಲಿ ಅಂತರ್ಯಾಮಿಯಾದ ಭಗವಂತನ ರೂಪವನ್ನು ಉಪಾಸನೆ ಮಾಡಿದರೆ ಆಯಾ ದೇವತೆಗಳ ಸಾಮೀಪ್ಯವನ್ನು ಹೊಂದಿ ಪುನಃ ತನ್ನ ಹೃದಯದಲ್ಲಿರುವ ಪರಮಾತ್ಮನನ್ನು ಉಪಾಸನೆ ಮಾಡಿದರೆ ಮಾತ್ರ ಮೋಕ್ಷ ಉಂಟಾಗುತ್ತದೆ. ಆದ್ದರಿಂದ 'ಇಷ್ಟರಿಂದಲೇ ತಿಳಿದಂತಾಗುವುದಿಲ್ಲ' ಎಂದು ಅಜಾತಶತ್ರು ಹೇಳಿದನು.

**ಉಪನಿಷತ್—ಸ ಹೋವಾಚಾಜಾತಶತ್ರುಃ 'ಪ್ರತಿಲೋಮಂ ವೈ ತದ್ ಯದ್ ಬ್ರಾಹ್ಮಣಃ ಕ್ಷತ್ರಿಯಮುಪೇಯಾದ್ ಬ್ರಹ್ಮ ಮೇ ವಕ್ಷ್ಯತೀತಿ । ವ್ಯೇವ ತ್ವಾ ಜ್ಞಾಪಯಿಷ್ಯಾಮೀ'ತಿ ।**

**ತಂ ಪಾಣಾವಾದಾಯೋತ್ತಸ್ಥೌ । ತೌ ಹ ಪುರುಷಂ ಸುಪ್ತಮಾ-ಜಗ್ಮತುಃ । ತಮೇತೈರ್ನಾಮಭಿರಾಮಂತ್ರಯಾಂಚಕ್ರೇ । ಬೃಹನ್**

**ಪಾಂಡರವಾಸಃ ಸೋಮ ರಾಜನ್ನಿತಿ । ಸ ನೋತ್ತಸ್ಥೌ । ತಂ ಪಾಣಿನಾ ಪೇಷಂ ಬೋಧಯಾಂಚಕಾರ । ಸ ಹೋತ್ತಸ್ಥೌ ।**

'ಕ್ಷತ್ರಿಯನು ತನಗೆ ಬ್ರಹ್ಮಸ್ವರೂಪವನ್ನು ಉಪದೇಶ ಮಾಡುತ್ತಾನೆಂದು ಬ್ರಾಹ್ಮಣನು ಅವನಿಗೆ ಶಿಷ್ಯನಾಗುವುದು ವಿಪರೀತವಾದುದು. ಆದ್ದರಿಂದ ನಿನಗೆ ಬ್ರಹ್ಮಸ್ವರೂಪವನ್ನು ವಿಜ್ಞಾಪನೆ ಮಾಡುತ್ತೇನೆ ಹೊರತು ಗುರುವಿನಂತೆ ಉಪದೇಶ ಮಾಡುವುದಿಲ್ಲ' ಎಂದು ಅಜಾತಶತ್ರುವು ಹೇಳಿದನು.

'ನ ಸ್ಥಾನತೋಽಪಿ ಪರಸ್ಯೋಭಯಲಿಂಗಂ ಸರ್ವತ್ರ ಹಿ' (ಬ್ರಹ್ಮಸೂತ್ರ 3-2-11)ಎಂಬಲ್ಲಿ ಹೇಳಿರುವಂತೆ ಪರಮಾತ್ಮನ ಎಲ್ಲ ರೂಪಗಳೂ ಸಮಾನಶಕ್ತ್ಯಾದಿ ಗಳನ್ನು ಹೊಂದಿರುವಾಗ ಹೃದ್ಗತನಾದ ಅವನ ಉಪಾಸನೆ ಮೋಕ್ಷಕ್ಕೆ ಕಾರಣ, ದೇವತಾಂತರ್ಗತನಾದ ಅವನ ಉಪಾಸನೆ ಮೋಕ್ಷಕ್ಕೆ ಕಾರಣವಲ್ಲ ಎಂಬುದು ಹೇಗೆ ? ಎಂಬ ಪ್ರಶ್ನೆಗೆ ಉತ್ತರವಾಗಿ ಉಪಾಸಕನಲ್ಲಿ ದೇವತಾಂತಸ್ಥನಾದ ಶ್ರೀಹರಿಗಿಂತಲೂ ಹೃದ್ಗತನಾದ ಶ್ರೀಹರಿಯ ಸಂಬಂಧವೇ ಗಾಢವಾದುದು ಎಂದು ತಿಳಿಸಲು ಬಯಸಿ ಅಜಾತಶತ್ರುವು ಅವನನ್ನು ಕೈಯಲ್ಲಿ ಹಿಡಿದುಕೊಂಡು ಎದ್ದನು. ಅವರಿಬ್ಬರೂ ಒಂದು ಸ್ಥಳದಲ್ಲಿ ಸುಪ್ತನಾಗಿದ್ದ ಒಬ್ಬ ಪುರುಷನ ಸಮೀಪಕ್ಕೆ ಬಂದರು. ಆ ಸುಪ್ತ ಪುರುಷಾಂತರ್ಗತನಾದ ಶ್ರೀಹರಿಯನ್ನು 'ಶುಕ್ಲಾಂಬರಧರನೇ, ಚಂದ್ರಾಂತರ್ಗತನೆ, ಪ್ರಕಾಶಮಾನನೆ' ಎಂದು ಮುಂತಾದ ಹೆಸರುಗಳಿಂದ ಸಂಬೋಧಿಸಿದನು. ಏಕೆಂದರೆ, ಚಂದ್ರಾಂತರ್ಗತ ಪುರುಷಾಂತರ್ಗತ ರೂಪಗಳಿಗೆ ಭೇದವಿಲ್ಲ. ಆದರೂ ಪುರುಷಾಂತ ರ್ಗತನಾದ ಶ್ರೀಹರಿಯು ಜೀವನನ್ನು ಎಬ್ಬಿಸಲಿಲ್ಲ. ಶರೀರವನ್ನು ಕೈಯಿಂದ ಅಲು ಗಾಡಿಸಿದಾಗ ಮಾತ್ರ ಬೇಗನೆ ಎಬ್ಬಿಸಿದನು. ಹೃದಯದಲ್ಲಿರುವ ಶ್ರೀಹರಿಯನ್ನು ಹೇಳುವ ಅಸಾಧಾರಣ ನಾಮಗಳಿಗಿಂತಲೂ ಕೈಯಿಂದ ಅಲುಗಾಡಿಸುವುದಕ್ಕೇ ಶರೀರ ದಲ್ಲಿ ವಿಶೇಷ ಸಂಬಂಧವಿರುವುದರಿಂದ ಶರೀರವನ್ನು ಕೈಯಿಂದ ಅಲುಗಾಡಿಸುವುದೇ ಶೀಘ್ರವಾಗಿ ಎಚ್ಚರಗೊಳಿಸುವ ಉಪಾಯವೆಂದು ಅವನನ್ನು ಕೈಯಿಂದ ಅಲುಗಾಡಿಸಿ ದನು. ಆಗ ಶ್ರೀಹರಿಯು ಆ ಜೀವನನ್ನು ಶೀಘ್ರವಾಗಿ ಎಬ್ಬಿಸಿದನು. ಹೀಗೆ ಶರೀರ ವನ್ನು ಕೈಯಿಂದ ಅಲುಗಾಡಿಸಿದಾಗ ಮಾತ್ರ ಜೀವನನ್ನು ಶ್ರೀಹರಿಯು ಎಬ್ಬಿಸಿದುದ ರಿಂದ ಶರೀರದಲ್ಲಿಯೆ ಹರಿಯ ವಿಶೇಷ ಸಂಬಂಧವಿದೆ ಎಂದು ತಿಳಿಯುತ್ತದೆ.

**ಭಾಷ್ಯ—ಸ್ವಹೃದಿಸ್ಥ ಭಗವದ್ರೂಪಸ್ಯ ಸ್ವಸ್ಮಿನ್ ವಿಶೇಷಸಂಬಂಧಜ್ಞಾಪನಾರ್ಥಂ 'ಬೃಹನ್ ಪಾಂಡರವಾಸ' ಇತ್ಯಾದ್ಯಾಮಂತ್ರಣಮ್ । ತೇಭ್ಯೋ ನಾಮಭ್ಯೋಽಪ್ಯಸ್ಯ ಶರೀರೇ ವಿಶೇಷಸಂಬಂಧ ಇತ್ಯತಃ ಪಾಣಿಪೇಷಣೇನ ಜೀವಮುತ್ಥಾಪಯಾಮಾಸ ಭಗವಾನ್ । ಯೇಷಾಂ ಬಹಿರುಪಾಸನೇನ**

**ಅನುವಾದ**—ದೇವತಾಂತರ್ಗತವಾದ ಭಗವದ್ರೂಪಗಳಿಗಿಂತ ತನ್ನ ಹೃದಯದಲ್ಲಿರುವ ಭಗವದ್ರೂಪಕ್ಕೇ ತನ್ನಲ್ಲಿ ವಿಶೇಷ ಸಂಬಂಧವಿದೆಯೆಂದು ತಿಳಿಸಲೆಂದೇ ಶುಕ್ಲಾಂಬರಧರ ಇತ್ಯಾದಿ ನಾಮಗಳಿಂದ ಆಮಂತ್ರಣ ಮಾಡಿದುದು. ಈ ನಾಮಗಳಿಂದ ಕರೆದರೂ ಶೀಘ್ರವಾಗಿ ಎಚ್ಚರಿಕೆಯಾಗುವುದಿಲ್ಲ. ಆದ್ದರಿಂದ ಈ ನಾಮಗಳಿಗಿಂತಲೂ ಹೆಚ್ಚಾಗಿ ಶರೀರದಲ್ಲಿಯೇ ಶ್ರೀಹರಿಯ ವಿಶೇಷ ಸಂಬಂಧವಿದೆಯೆಂದು ತಿಳಿಸಲು ಶರೀರವನ್ನು ಕೈಯಿಂದ ಅಲುಗಾಡಿಸಿದಾಗ ಶ್ರೀಹರಿಯು ಜೀವನನ್ನು ಎಬ್ಬಿಸಿದನು. ಶರೀರದ ಹೊರಗೆ ಮಾತ್ರ ಉಪಾಸನೆ ಮಾಡಿ ಮೋಕ್ಷವನ್ನು ಪಡೆಯುವವರೂ ಸ್ವಲ್ಪವಾದರೂ ಹೃದಯಗತನಾದ ಶ್ರೀಹರಿಯ ಉಪಾಸನೆಯನ್ನು ಮಾಡಲೇಬೇಕು.

**ಅವಸ್ಥಾತ್ರಯ ನಿಯಾಮಕನ ಉಪಾಸನೆ :**

**ಉಪನಿಷತ್—ಸ ಹೋವಾಚಾಜಾತಶತ್ರುಃ 'ಯತ್ರೈಷ ಏತತ್ ಸುಪ್ತೋಽಭೂದ್ ಯ ಏಷ ವಿಜ್ಞಾನಮಯಃ ಪುರುಷಃ ಕ್ವೈಷ ತದಾಽಭೂತ್ ಕುತ ಏತದಾಗಾದಿ'ತಿ । ತದು ಹ ನ ಮೇನೇ ಗಾರ್ಗ್ಯಃ ।**

ಹೃದ್ಗತನಾದ ಶ್ರೀಹರಿಯ ಉಪಾಸನೆ ಮಾಡಲೇಬೇಕು ಎಂದು ತಿಳಿಸಲು ಅಜಾತಶತ್ರುವು ಗಾರ್ಗ್ಯನನ್ನು 'ಈ ಜೀವನು ಈ ಶರೀರದಲ್ಲಿ ಯಾರಲ್ಲಿ ಸುಪ್ತನಾದನೋ ಅಂತಹ ಸುಪ್ತಾಧಾರನಾದ ಸಮ್ಯಕ್‌ಜ್ಞಾನಸ್ವರೂಪನಾದ ಶ್ರೀಹರಿಯು ಸುಪ್ತಿಕಾಲದಲ್ಲಿ ಶರೀರದ ಯಾವ ಭಾಗದಲ್ಲಿದ್ದನು? ಪ್ರಬೋಧಸಮಯದಲ್ಲಿ ಎಲ್ಲಿಂದ ಬಂದನು?' ಎಂದು ಕೇಳಿದನು. ಆದರೆ ಅದನ್ನು ಗಾರ್ಗ್ಯನು ತಿಳಿದೇ ಇರಲಿಲ್ಲ.

**ಉಪನಿಷತ್—ಸ ಹೋವಾಚಾಜಾತಶತ್ರುಃ 'ಯತ್ರೈಷ ಏತತ್ ಸುಪ್ತೋಽಭೂದ್ ಯ ಏಷ ವಿಜ್ಞಾನಮಯಃ ಪುರುಷಸ್ತದೇಷಾಂ ಪ್ರಾಣಾನಾಂ ವಿಜ್ಞಾನೇನ ವಿಜ್ಞಾನಮಾದಾಯ ಯ ಏಷೋಽಂತರ್ಹೃದಯ ಆಕಾಶಸ್ತಸ್ಮಿನ್ ಶೇತೇ । ತಾನಿ ಯದಾ ಗೃಹ್ಣಾತ್ಯಥ ಹೈತತ್ ಪುರುಷಃ ಸ್ವಪಿತಿ ನಾಮ । ತದ್ ಗೃಹೀತ ಏವ ಪ್ರಾಣೋ ಭವತಿ । ಗೃಹೀತಾ ವಾಕ್ । ಗೃಹೀತಂ ಚಕ್ಷುಃ । ಗೃಹೀತಂ ಶ್ರೋತ್ರಂ । ಗೃಹೀತಂ ಮನಃ ।**

ಅಜಾತಶತ್ರುವು ಹೇಳಿದನು 'ಶ್ರೀಹರಿಯು ಸುಪ್ತಿಕಾಲದಲ್ಲಿ ಇಂದ್ರಿಯಗಳ ಜ್ಞಾನೋತ್ಪಾದನ ಶಕ್ತಿಯನ್ನು ತನ್ನ ಸ್ವೇಚ್ಛೆಯಿಂದ ಸೆಳೆದುಕೊಂಡು ಹೃದಯದ ಒಳಗಿರುವ ಆಕಾಶದಲ್ಲಿ ಮಲಗುತ್ತಾನೆ. ವಿಜ್ಞಾನಮಯ ಪುರುಷನಾದ ಶ್ರೀಹರಿಯು

ಜೀವನು ಸುಪ್ತನಾಗುತ್ತಾನೆ ಎಂದು ಪ್ರಸಿದ್ಧ. ಏಕೆಂದರೆ ಆಗ ಶ್ರೀಹರೀಚ್ಛೆಯಿಂದ ಘ್ರಾಣೇಂದ್ರಿಯವು ನಿರ್ವ್ಯಾಪಾರವಾಗುತ್ತದೆ. ವಾಗಿಂದ್ರಿಯವು ನಿರ್ವ್ಯಾಪಾರ ವಾಗುತ್ತದೆ. ಚಕ್ಷುರಿಂದ್ರಿಯವು ನಿರ್ವ್ಯಾಪಾರವಾಗುತ್ತದೆ. ಶ್ರೋತ್ರೇಂದ್ರಿಯವು ನಿರ್ವ್ಯಾಪಾರವಾಗುತ್ತದೆ. ಮನಸ್ಸೂ ನಿರ್ವ್ಯಾಪಾರವಾಗುತ್ತದೆ.

**ಭಾಷ್ಯ—ಸ್ವಹೃದಿಸ್ಥೇನ ಭಗವದ್ರೂಪೇಣ ವಿಶೇಷಸಂಬಂಧ ದರ್ಶನಾರ್ಥಮೇವ 'ಯತ್ರೈಷ ಏತತ್ ಸುಪ್ತೋಽಭೂತ್' ಇತ್ಯಾದಿ ಪ್ರಶ್ನಪ್ರತಿವಚನಂ ಸಮಸ್ತಮ್ ।**

**ಯತ್ರ ಯಸ್ಮಿನ್ ಪರಮೇಶ್ವರೇ ವಿಜ್ಞಾನಮಯೇ ಏಷ ಜೀವಃ ಸುಪ್ತೋಽಭೂತ್ । ಯತ್ರೇತ್ಯಧಿಕರಣಭೂತ ಏವ 'ಯ ಏಷ ವಿಜ್ಞಾನ ಮಯಃ' ಇತಿ ಪರಾಮೃಶ್ಯತೇ । 'ಅನ್ಯೋಽಂತರ ಆತ್ಮಾ ವಿಜ್ಞಾನ ಮಯಃ' 'ವಿಜ್ಞಾನಂ ಬ್ರಹ್ಮ ಚೇದ್ ವೇದ' ಇತ್ಯಾದಿ ಶ್ರುತೇಃ । ತಾನಿ ಯದಾ ಪರಮಾತ್ಮಾ ಗೃಹ್ಣಾತಿ ತದೈತತ್ ಪುರುಷೋ ಜೀವಃ ಸ್ವಪಿತಿ ನಾಮ ।**

**ಅನುವಾದ**—ತನ್ನ ಹೃದಯದಲ್ಲಿರುವ ಪ್ರಾಜ್ಞರೂಪಿ ಶ್ರೀಹರಿಯಿಂದಲೇ ತನ್ನ ಶರೀರದಲ್ಲಿ ವಿಶೇಷ ಸಂಬಂಧ ಎಂದು ಸ್ಪಷ್ಟವಾಗಿ ತಿಳಿಸುವುದಕ್ಕಾಗಿಯೇ 'ಯತ್ರೈಷ ಏತತ್ ಸಪ್ತೋಽಭೂತ್' ಎಂದು ಮೊದಲಾದ ಎಲ್ಲ ಪ್ರಶ್ನೆ ಮತ್ತು ಉತ್ತರಗಳೂ ಇವೆ. ಶರೀರವನ್ನು ಕೈಯಿಂದ ಅಲುಗಾಡಿಸಿದಾಗ ಬೇಗನೆ ಜೀವನಿಗೆ ಎಚ್ಚರವಾಗುವು ದೆಂದು ಹೇಳಿದ್ದರಿಂದಲೇ ಹೃದಯಾಂತರ್ಗತನಿಗೆ ಶರೀರದಲ್ಲಿ ವಿಶೇಷ ಸಂಬಂಧ ಸಿದ್ಧ ವಾಗಿದೆ. ಆದರೂ 'ಸುಪ್ತಿಕಾಲದಲ್ಲಿ ಹೃದಯದಲ್ಲಿ ಭಗವಂತನಿದ್ದಾನೆ. ಅಲ್ಲಿಂದಲೇ ಎಚ್ಚರದಲ್ಲಿ ಆತ ಹಿಂತಿರುಗಿ ಬರುತ್ತಾನೆ' ಎಂದು ಈಗ ಹೇಳುವುದರಿಂದ ಈ ವಿಶೇಷ ಸಂಬಂಧ ಹೆಚ್ಚು ಸ್ಪಷ್ಟವಾಗುತ್ತದೆ.

'ಯತ್ರೈಷ ಏತತ್ ಸುಪ್ತೋಽಭೂತ್' ಎಂಬಲ್ಲಿ ಯತ್ರ ಎಂದರೆ 'ಯಾವ ವಿಜ್ಞಾನಮಯನಾದ ಪರಮಾತ್ಮನಲ್ಲಿ' ಅಂದರೆ ಹೃದಯಗತನಾದ ಪ್ರಾಜ್ಞರೂಪಿ ಶ್ರೀಹರಿಯ ವಶನಾಗಿ, ಅವನನ್ನು ಆಲಿಂಗಿಸಿಕೊಂಡು ಈ ಜೀವನು ಸುಷುಪ್ತಿಯನ್ನು ಹೊಂದುತ್ತಾನೆಯೋ ಎಂದು ಅರ್ಥ. ಯತ್ರ ಎಂಬ ಶಬ್ದದಿಂದ ಸುಪ್ತಜೀವನಿಗೆ ಆಧಾರನಾದ ಯಾವ ಶ್ರೀಹರಿಯನ್ನು ಹೇಳಿದ್ದಾರೆಯೋ ಅವನನ್ನೇ 'ಏಷ ವಿಜ್ಞಾನ ಮಯಃ' ಎಂದು ವಿಜ್ಞಾನಮಯ ಶಬ್ದದಿಂದ ಇಟ್ಟುಕೊಳ್ಳಬೇಕು. ವಿಜ್ಞಾನಮಯ ಶಬ್ದವು ಶ್ರೀಹರಿಯನ್ನು ಹೇಳುತ್ತದೆ ಎಂಬ ವಿಷಯದಲ್ಲಿ 'ಮನೋಮಯಕೋಶಾಂತ ರ್ಗತ ಸಂಕರ್ಷಣನೊಳಗೆ ಅವನ ಇನ್ನೊಂದು ರೂಪವಾದ, ವಿಜ್ಞಾನಮಯಕೋಶ ದಲ್ಲಿದ್ದು ವಿಜ್ಞಾನಮಯ ಎಂದು ಕರೆಯಲ್ಪಡುವ ಪರಮಾತ್ಮನ ವಾಸುದೇವರೂಪ

ಏದೆ' 'ವಿಜ್ಞಾನವನ್ನು ಅಂದರೆ ವಿಜ್ಞಾನಮಯನನ್ನು ಪರಬ್ರಹ್ಮ ಎಂದು ತಿಳಿದರೆ' ಇತ್ಯಾದಿ ತೈತ್ತಿರೀಯೋಪನಿಷತ್ ವಚನಗಳು ಪ್ರಮಾಣವಾಗಿವೆ. ಎಲ್ಲ ಇಂದ್ರಿಯಗಳನ್ನು ವಿಜ್ಞಾನಮಯನಾದ ಪರಮಾತ್ಮನು ಸ್ತಬ್ಧಗೊಳಿಸಿದಾಗ ಜೀವನು ಸುಪ್ತನಾಗುತ್ತಾನೆ.

**ಉಪನಿಷತ್—ಸ ಯತ್ರೈತತ್ ಸ್ವಪ್ನಯಾ ಚರತಿ,ತೇ ಹಾಸ್ಯ ಲೋಕಾಃ,ತತ್ ಉತೇವ ಮಹಾರಾಜೋ ಭವತಿ । ಉತೇವ ಮಹಾಬ್ರಾಹ್ಮಣಃ। ಉತೇ-ವೋಚ್ಚಾವಚಂ ನಿಗಚ್ಛತಿ । ಸ ಯಥಾ ಮಹಾರಾಜೋ ಜಾನಪದಾನ್ ಗೃಹೀತ್ವಾ ಸ್ವೇ ಜನಪದೇ ಯಥಾಕಾಮಂ ಪರಿವರ್ತೇತೈವಮೇವೈಷ ಏತತ್ ಪ್ರಾಣಾನ್ ಗೃಹೀತ್ವಾ ಸ್ವೇ ಶರೀರೇ ಯಥಾಕಾಮಂ ಪರಿವರ್ತತೇ ।**

ಹೃದಯಸ್ಥನಾದ ಶ್ರೀಹರಿಯು ಸ್ವಪ್ನಾವಸ್ಥಾಪ್ರೇರಕನಾದುದರಿಂದಲೂ ಶರೀರದಲ್ಲಿ ಅವನ ವಿಶೇಷ ಸಂಬಂಧ ಇದೆ. ಜೀವರ ಶರೀರನಾಡಿಗಳು ಶ್ರೀಹರಿಯ ಆವಾಸಸ್ಥಾನಗಳು. ಆದ್ದರಿಂದ ಶ್ರೀಹರಿಯು ಶರೀರದಲ್ಲಿ ಸ್ವಪ್ನನಾಡಿಯಲ್ಲಿ ಸಂಚರಿಸುತ್ತ, ಜೀವನನ್ನೂ ಅದರಲ್ಲಿ ಸಂಚರಿಸುವಂತೆ ಮಾಡುತ್ತಾನೆ. ಆಗ ಜೀವನು ಕನಸಿನಲ್ಲಿ ತನ್ನನ್ನು ಮಹಾರಾಜನಂತೆ ನೋಡುತ್ತಾನೆ. ಅಥವಾ ಮಹಾಬ್ರಾಹ್ಮಣನಂತೆ ನೋಡುತ್ತಾನೆ. ಹೆಚ್ಚೇನು ಉತ್ಕೃಷ್ಟವಾದ ಆನೆಯಂತೆಯೂ, ನೀಚವಾದ ನಾಯಿ ಬೆಕ್ಕುಗಳಂತೆಯೂ ತನ್ನನ್ನು ನೋಡುತ್ತಾನೆ. ಆದರೆ ಹೇಗೆ ಮಹಾರಾಜನು ತನ್ನ ದೇಶದಲ್ಲಿದ್ದ ಪ್ರಜೆಗಳನ್ನು ತನ್ನೊಡನೆ ಕರೆದುಕೊಂಡು ತನ್ನ ರಾಜ್ಯದಲ್ಲಿ ತನ್ನ ಇಚ್ಛೆಯಂತೆ ಸಂಚರಿಸುತ್ತಾನೆಯೋ ಹಾಗೆ ಶ್ರೀಹರಿಯು ಬಾಹ್ಯೇಂದ್ರಿಯಗಳನ್ನು ತೆಗೆದುಕೊಂಡು ತನಗೆ ಅಧೀನನಾದ ಈ ಜೀವನ ಶರೀರದಲ್ಲಿ ತನ್ನ ಇಚ್ಛೆಯಂತೆ ಸಂಚರಿಸುತ್ತಾನೆ.

**ಭಾಷ್ಯ—ಸ ಯತ್ರ ಪರಮಾತ್ಮಾ ಸ್ವಪ್ನಯಾ ನಾಡ್ಯಾ ಚರತಿ ತದಾ ಜೀವ ಉಚ್ಚಾವಚಂ ನಿಗಚ್ಛತೀವ । ಸರ್ವದಾ ಮಹಾರಾಜವತ್ ಪ್ರಾಣಾನ್ ಗೃಹೀತ್ವಾ ಪರಮಾತ್ಮಾ ಪರಿವರ್ತತೇ । ಜೀವಸ್ತು ಕದಾಚಿದೇವ ಸ್ವಪ್ನೇ ರಾಜವದಾತ್ಮಾನಂ ಪಶ್ಯತಿ ಕದಾಚಿತ್ ಬ್ರಾಹ್ಮಣವತ್ ಶ್ವಮಾರ್ಜಾರಾದಿವದ್ ವಾ ।**

**ಅನುವಾದ**—'ಸ ಯತ್ರೈತತ್ ಸ್ವಪ್ನಯಾ ಚರತಿ' ಎಂದರೆ ಪರಮಾತ್ಮನು ಸ್ವಪ್ನನಾಡಿಯಲ್ಲಿ ನಂಚರಿಸುವಾಗ ಎಂದರ್ಥ. 'ಉಚ್ಚಾವಚಂ ನಿಗಚ್ಛತಿ' ಎಂದರೆ

ನಾಯಿ ಬೆಕ್ಕುಗಳಂತೆಯೂ ನೋಡುತ್ತಾನೆ' ಎಂದರ್ಥ. ಪರಮಾತ್ಮನು ಯಾವಾಗಲೂ ರಾಜಾಧಿರಾಜನಂತೆ ಬಾಹ್ಯ ಇಂದ್ರಿಯಗಳನ್ನು ತೆಗೆದುಕೊಂಡು ಸಂಚರಿಸುತ್ತಾನೆ. ಜೀವನಾದರೋ ಕೆಲವು ವೇಳೆ ಮಾತ್ರ ತನ್ನನ್ನು ರಾಜನಂತೆ ಕಾಣುತ್ತಾನೆ. ಕೆಲವು ವೇಳೆ ಬ್ರಾಹ್ಮಣನಂತೆ ಕಾಣುತ್ತಾನೆ ಅಥವಾ ನಾಯಿ ಬೆಕ್ಕು ಮುಂತಾದವುಗಳಂತೆಯೂ ಕಾಣುತ್ತಾನೆ.

**ಉಪನಿಷತ್—ಅಥ ಯದಾ ಸುಷುಪ್ತೋ ಭವತಿ ತದಾ ನ ಕಸ್ಯಚನ ವೇದ । ಹಿತಾ ನಾಮ ನಾಡ್ಯೋ ದ್ವಾಸಪ್ತತಿಃ ಸಹಸ್ರಾಣಿ ಹೃದಯಾತ್ ಪುರೀತ-ತಮಭಿಪ್ರತಿಷ್ಠಂತೇ । ತಾಭಿಃ ಪ್ರತ್ಯವಸೃಪ್ಯ ಪುರೀತತಿ ಶೇತೇ । ಸ ಯಥಾ ಕುಮಾರೋ ವಾ ಮಹಾರಾಜೋ ವಾ ಮಹಾಬ್ರಾಹ್ಮಣೋ ವಾಽತಿಘ್ನೀಮಾನಂದಸ್ಯ ಗತ್ವಾ ಶಯೀತೈವಮೇವೈಷ ಏತಚ್ಛೇತೇ ।**

ಸ್ವಪ್ನಕ್ಕಿಂತ ಸುಷುಪ್ತಿಯಲ್ಲಿ ವಿಶೇಷವಿದೆ. ಜೀವನು ಯಾವಾಗ ಯಾವ ಬಾಹ್ಯ ವಸ್ತುಗಳನ್ನೂ ತಿಳಿಯುವುದಿಲ್ಲವೋ ಆಗ ಸುಷುಪ್ತಿಯಲ್ಲಿರುತ್ತಾನೆ. 'ಹಿತಾ' ಎಂದು ಪ್ರಸಿದ್ಧವಾದ ಎಪ್ಪತ್ತೆರಡು ಸಹಸ್ರ ನಾಡಿಗಳು ಹೃದಯವನ್ನು ಆರಂಭಿಸಿ ಪುರೀತತ್ ಎಂಬ ನಾಡಿಯ ಅಂದರೆ ಶಿರಸ್ಸಿನ ತುದಿಯವರೆಗೂ ವ್ಯಾಪ್ತವಾದ ಸುಷುಮ್ನಾ ನಾಡಿಯ ಸುತ್ತಲೂ ಆಶ್ರಯಿಸಿಕೊಂಡಿವೆ. ಜೀವನು ಆ ನಾಡಿಗಳಲ್ಲಿ ಸಂಚರಿಸಿ ಸುಷುಮ್ನಾನಾಡಿಯಲ್ಲಿರುವ ಶ್ರೀಹರಿಯಲ್ಲಿ ಸುಪ್ತನಾಗುತ್ತಾನೆ. ಆಗ ಜೀವನು ಹೇಗಿರುತ್ತಾನೆ ಎಂದರೆ ರುದ್ರನಾಗಲೀ, ವಾಯುವಾಗಲೀ, ಬ್ರಹ್ಮನಾಗಲೀ ಹೇಗೆ ಆನಂದರೂಪನಾದ ಶ್ರೀಹರಿಯ ಸಮೀಪಕ್ಕೆ ಹೋಗಿ ಸುಖವಾಗಿರುತ್ತಾರೋ ಹಾಗೆಯೇ ಜೀವನು ಸುಷುಮ್ನಾನಾಮಕನಾದ ಶ್ರೀಹರಿಯಲ್ಲಿ ಸುಖವಾಗಿರುತ್ತಾನೆ.

**ಭಾಷ್ಯ—ಆನಂದಸ್ಯ ಪರಮಾತ್ಮನಃ । ಅತಿಘ್ನೀಂ ಸಮೀಪಮ್ । ಕುಮಾರೋ ರುದ್ರಃ । ಮಹಾರಾಜೋ ವಾಯುಃ । ಮಹಾಬ್ರಾಹ್ಮಣೋ ಬ್ರಹ್ಮಾ । ನ ಹಿ ಜೀವೋ ವಿಜ್ಞಾನಪೂರ್ವಕಂ ಪ್ರಾಣಾನಾಂ ವಿಜ್ಞಾನಮಾದತ್ತೇ । ನ ಚ ಸರ್ವಪ್ರಾಣಲೋಕದೇವಭೂತಾನಾಂ ಸ್ರಷ್ಟಾ ।**

**ಅನುವಾದ**—ಆನಂದಸ್ಯ ಎಂದರೆ ಆನಂದರೂಪನಾದ ಪರಮಾತ್ಮನ. ಅತಿಘ್ನೀಂ ಸಮೀಪದಲ್ಲಿ. ಕುಮಾರ ಎಂದರೆ ರುದ್ರ. ಮಹಾರಾಜನೆಂದರೆ ವಾಯು. ಮಹಾಬ್ರಾಹ್ಮಣನೆಂದರೆ ಬ್ರಹ್ಮ. 'ಯತ್ರೈಷ ಏತತ್ ಸುಪ್ತೋಽಭೂತ್' ಎಂದು ಹೇಳಿದುದು ಪರಮಾತ್ಮನನ್ನೇ. ಏಕೆಂದರೆ ಜೀವನು ತನ್ನ ಬುದ್ಧಿಪೂರ್ವಕವಾಗಿ ಇಂದ್ರಿಯಗಳಿಗೆ ಜ್ಞಾನಜನನ ಶಕ್ತಿಯು ಇಲ್ಲದಂತೆ ಮಾಡಿಕೊಳ್ಳುವುದಿಲ್ಲ. ಅಲ್ಲದೆ 'ಅಸ್ಮಾ

ಇಂದ್ರಿಯಗಳ, ಲೋಕಗಳ, ಬ್ರಹ್ಮಾದಿ ದೇವತೆಗಳ ಮತ್ತು ಪ್ರಾಣಿಗಳ ಸೃಷ್ಟಿಯನ್ನು ಮಾಡುವವನೂ ಅಲ್ಲ. ಆದ್ದರಿಂದ ಸಮಗ್ರವಾದ ಈ ಪ್ರಕರಣವು ಪರಮಾತ್ಮಪರವೆಂದು ತಿಳಿಯುತ್ತದೆ.

**ಉಪನಿಷತ್**—**ಸ ಯಥೋರ್ಣನಾಭಿಸ್ತಂತುನೋಚ್ಚರೇದ್, ಯಥಾಗ್ನೇಃ ಕ್ಷುದ್ರಾ ವಿಷ್ಫುಲಿಂಗಾ ವ್ಯುಚ್ಚರಂತಿ, ಏವಮೇವಾಸ್ಮಾದಾತ್ಮನಃ ಸರ್ವೇ ಪ್ರಾಣಾಃ, ಸರ್ವೇ ಲೋಕಾಃ, ಸರ್ವೇ ದೇವಾಃ, ಸರ್ವಾಣಿ ಭೂತಾನಿ ವ್ಯುಚ್ಚರಂತಿ । ತಸ್ಯೋಪನಿಷತ್ ' ಸತ್ಯಸ್ಯ ಸತ್ಯಮಿ'ತಿ । ಪ್ರಾಣಾ ವೈ ಸತ್ಯಮ್ । ತೇಷಾಮೇಷ ಸತ್ಯಮ್ ।**

**॥ ಇತಿ ಅಜಾತಶತ್ರು ಬ್ರಾಹ್ಮಣಮ್ ॥**

ಜೇಡರಹುಳುವು ತಿಂದ ಆಹಾರವು ಅದರಿಂದ ತಂತುರೂಪವಾಗಿ ಹೇಗೆ ಹೊರಗೆ ಬರುತ್ತದೋ, ಹೇಗೆ ಸಣ್ಣ ಕಿಡಿಗಳು ಅಗ್ನಿಯಿಂದ ಹೊರಬರುತ್ತವೋ ಹಾಗೆ ಎಲ್ಲಾ ಇಂದ್ರಿಯಾಭಿಮಾನಿಗಳೂ, ಎಲ್ಲಾ ಭೂಮ್ಯಾದಿಲೋಕಗಳ ಪ್ರಜೆಗಳೂ, ಎಲ್ಲಾ ಚತುರ್ಮುಖಾದಿ ದೇವತೆಗಳೂ ಮತ್ತು ಎಲ್ಲಾ ಪ್ರಾಣಿಗಳೂ ಈ ವಿಜ್ಞಾನಮಯನಾದ ಹೃದಯಾಂತರ್ಗತ ಶ್ರೀಹರಿಯಿಂದಲೇ ಉತ್ಪನ್ನವಾಗುತ್ತವೆ, ರಕ್ಷಿತವಾಗುತ್ತವೆ, ಲಯ ಮುಂತಾದುವನ್ನು ಹೊಂದುತ್ತವೆ. 'ಸತ್ಯಸ್ಯ ಸತ್ಯಂ' ಎಂಬುದು ಹೃದಯಸ್ಥ ಪರಮಾತ್ಮನ ರಹಸ್ಯವಾದ ನಾಮ. ಏಕೆಂದರೆ ಹಿಂದೆ ಹೇಳಿದ ಇಂದ್ರಿಯ, ಲೋಕ, ದೇವ, ಪ್ರಾಣಿಗಳು ಸತ್ಯ. ಅವುಗಳಿಗೆ ಇವನು ಜನ್ಮ ಸ್ಥಿತಿ ಪ್ರಲಯ ಮತ್ತು ಮೋಕ್ಷಗಳನ್ನು ಹೊಂದಿಸುವವನು. ಆದ್ದರಿಂದ ಅವನು 'ಸತ್ಯಸ್ಯ ಸತ್ಯ'.

**ಭಾಷ್ಯ**—**ಆದಿತ್ಯಚಂದ್ರವಿದ್ಯುತ್ಸು ಭೂತೇಷ್ವಾದರ್ಶ ಏವ ಚ ।**
**ಗಚ್ಛತ್ಪಾಶ್ಚಾತ್ಯಶಬ್ದೇ ಚ ದಿಕ್ಷು ಚ್ಛಾಯಾಗತಂ ತಥಾ ।**
**ಹಿರಣ್ಯಗರ್ಭಸಂಸ್ಥಂ ಚ ಸದೋಪಾಸ್ಯ ಹರಿಂ ಪರಮ್ ।**
**ತದ್ದೇವಸಾರ್ಷ್ಟಿತಾಮೇತ್ಯ ಹೃದ್ಯುಪಾಸ್ಯ ಹರಿಂ ಪುನಃ ।**
**ಮುಕ್ತಿಮೇತ್ಯಥ ಯೋ ಬಾಹ್ಯಾನ್ಮುಕ್ತಿಮೇಷ್ಯತಿ ಸೋಽಪಿ ತು ।**
**ಹೃದಿ ಕಿಂಚಿದುಪಾಸ್ಯೈವ ವಿಷ್ಣುಂ ಮುಕ್ತಿಮನುವ್ರಜೇತ್ ।**
**ಯಾನಿ ಸೂರ್ಯಾದಿನಾಮಾನಿ ವಿಷ್ಣೋಸ್ತಾನಿ ನ ಸಂಶಯಃ ।**
**ತದುಕ್ತಾನ್ಯೇವ ಸೂರ್ಯಾದೇರಾಕೃಷ್ಯೈವೋಪಚಾರತಃ ।**
**ವಿಶೇಷೇಣ ತು ಸಂಬಂಧೋ ಯತಃ ಸ್ವಹೃದಿ ಸಂಸ್ಥಿತೇ ।**

**ಅನುವಾದ**—ಆದಿತ್ಯ ಚಂದ್ರ ಮಿಂಚು ಆಕಾಶ ವಾಯು ಅಗ್ನಿ ಜಲ ಕನ್ನಡಿ ನಡೆಯುವವನ ಹಿಂದೆ ಉಂಟಾಗುವ ಶಬ್ದ ದಿಕ್ಕು ಛಾಯೆ ಚತುರ್ಮುಖ ಇವರಲ್ಲಿ ಅಂತರ್ಗತನಾದ ಶ್ರೀಹರಿಯನ್ನು ಉಪಾಸನೆ ಮಾಡಿ ಆಯಾ ದೇವತೆಗಳ ಸಾಮೀಪ್ಯವನ್ನು ಹೊಂದಿದವನು ಪುನಃ ಹೃದ್ಗತನಾದ ಶ್ರೀಹರಿಯ ಉಪಾಸನೆಯನ್ನು ಮಾಡಿಯೇ ಮೋಕ್ಷವನ್ನು ಹೊಂದುತ್ತಾನೆ. ಯಾರು ಬಹಿರುಪಾಸನೆಯಿಂದ ಮುಕ್ತಿಯನ್ನು ಹೊಂದುತ್ತಾರೆಯೋ ಅವರೂ ಹೃದ್ಗತನಾದ ಶ್ರೀಹರಿಯನ್ನು ಸ್ವಲ್ಪವಾದರೂ ಉಪಾಸನೆ ಮಾಡಿಯೇ ಮುಕ್ತಿಯನ್ನು ಪಡೆಯುತ್ತಾರೆ. ಸೂರ್ಯಾದಿ ನಾಮಗಳೆಲ್ಲವೂ ವಿಷ್ಣುವಿನ ನಾಮಗಳೇ. ಇದರಲ್ಲಿ ಸಂಶಯವಿಲ್ಲ. ಮುಖ್ಯವಾಗಿ ವಿಷ್ಣುವಾಚಕವೇ ಆದ ನಾಮಗಳನ್ನು ಅವನಿಂದ ಸೆಳೆದು ಗೌಣವಾಗಿ ಸೂರ್ಯಾದಿಗಳಲ್ಲಿ ಪ್ರಯೋಗಿಸುತ್ತಾರೆ. ಜೀವನಿಗೆ ತನ್ನ ಹೃದ್ಗತನಾದ ಶ್ರೀಹರಿಯಿಂದಲೇ ವಿಶೇಷ ಸಂಬಂಧವಿರುವುದರಿಂದ ಸುಪ್ತಾಂತರ್ಗತನಾದ ಶ್ರೀಹರಿಯನ್ನು ಸೋಮ ಮೊದಲಾದ ಶಬ್ದಗಳಿಂದ ಆಹ್ವಾನ ಮಾಡಿದರೂ ಅವನು ಜೀವನನ್ನು ಎಬ್ಬಿಸಲಿಲ್ಲ.

**ಭಾಷ್ಯ—ಜೀವಂ ಚ ಚಾರಯೇತ್ ತತ್ರ ಯದಾ ವಿಷ್ಣುಃ ಸನಾತನಃ ।**
**ಸ್ವಪ್ನಂ ಪಶ್ಯತಿ ಜೀವೋಽಯಂ ಯದಾ ವಿಜ್ಞಾನರೂಪಿಣಮ್ ।**
**ಸುಷುಮ್ನಾಸಂಸ್ಥಿತಂ ವಿಷ್ಣುಮೇತಿ ತತ್ ಸುಪ್ತಿಮೇಷ್ಯತಿ ।**
**ಸಮ್ಯಗ್ ಜ್ಞಾನಮಯಾದ್ವಿಷ್ಣೋರುತ್ಥಾನಂ ಚಾಪ್ಯಯಂ ವ್ರಜೇತ್ ।**
**ಪ್ರಾಣಾನಾಂ ಚೈವ ಲೋಕಾನಾಂ ದೇವಾನಾಂ ಪ್ರಾಣಿನಾಮಪಿ ।**
**ಸತ್ಯಸತ್ಯೋ ಹರಿಃ ಸ್ರಷ್ಟಾ ಪಾತಾಽಪಿ ಲಯಕೃತ್ತಥಾ ।**
**ನಿಯಂತಾ ಮೋಕ್ಷದಶ್ಚೈವ ವಿಷ್ಣುರೇವ ಸನಾತನಃ ।**
**ಇತಿ ನಾರಾಯಣಶ್ರುತೌ ॥**

**ಅನುವಾದ**—ತೈಜಸರೂಪನಾದ ಶ್ರೀಹರಿಯು ಯಾವಾಗ ಸ್ವಪ್ನನಾಡಿಯಲ್ಲಿ ತಾನು ಸಂಚರಿಸಿ ಜೀವನನ್ನೂ ಸಂಚಾರ ಮಾಡಿಸುತ್ತಾನೆಯೋ ಆಗ ಜೀವನು ಸ್ವಪ್ನವನ್ನು ನೋಡುತ್ತಾನೆ. ಯಾವಾಗ ಜೀವನು ಸುಷುಮ್ನಾನಾಡಿ ಸ್ಥಿತನಾದ ಪ್ರಾಜ್ಞರೂಪನಾದ ಶ್ರೀಹರಿಯನ್ನು ಹೊಂದುತ್ತಾನೆಯೋ ಆಗ ಜೀವನು ಸುಪ್ತಿಯನ್ನು ಹೊಂದುತ್ತಾನೆ. ಯಥಾರ್ಥ ಜ್ಞಾನಸ್ವರೂಪನಾದ ಶ್ರೀಹರಿಯಿಂದಲೇ ಉತ್ಪತ್ತಿಯನ್ನೂ, ಲಯವನ್ನೂ ಹೊಂದುತ್ತಾನೆ. ಸನಾತನನಾದ ವಿಷ್ಣುವು ಎಲ್ಲಾ ಇಂದ್ರಿಯಾಭಿಮಾನಿಗಳಿಗೂ ಲೋಕದ ಪ್ರಜೆಗಳಿಗೂ ದೇವತೆಗಳಿಗೂ ಮತ್ತು ಎಲ್ಲ ಪ್ರಾಣಿಗಳಿಗೂ ಸೃಷ್ಟಿಪಾಲನ ಸಂಹಾರ ನಿಯಮನಗಳನ್ನು ಮಾಡುವವನು ಮತ್ತು ಮುಕ್ತಿಯನ್ನು ಕೊಡುವವನು. ಆದ್ದರಿಂದ ಶ್ರೀಹರಿಯು ಸತ್ಯಸತ್ಯನೆನಿಸುತ್ತಾನೆ ಎಂದು ನಾರಾಯಣಶ್ರುತಿಯಲ್ಲಿ ಹೇಳಿದೆ.

**ಗೂಟಕ್ಕೆ ಕಟ್ಟಿದ ಕರು–ಮುಖ್ಯಪ್ರಾಣ :**

**ಉಪನಿಷತ್**—**ಯೋ ಹ ವೈ ಶಿಶುಂ ಸಾಧಾನಂ ಸಪ್ರತ್ಯಾಧಾನಂ ಸಸ್ಥೂಣಂ ಸದಾಮಂ ವೇದ ಸಪ್ತ ಹ ದ್ವಿಷತೋ ಭ್ರಾತೃವ್ಯಾನವರುಣದ್ಧಿ । ಅಯಂ ವಾವ ಶಿಶುರ್ಯೋಽಯಂ ಮಧ್ಯಮಃ ಪ್ರಾಣಃ। ತಸ್ಯೇದಮೇವಾಧಾನಂ। ಇದಂ ಪ್ರತ್ಯಾಧಾನಂ । ಪ್ರಾಣಃ ಸ್ಥೂಣಾ । ಅನ್ನಂ ದಾಮ ।**

ಕೊಟ್ಟಿಗೆ, ಕೊಟ್ಟಿಗೆ ಇರುವ ಪ್ರದೇಶ, ಗೂಟ, ಹಗ್ಗಗಳೊಂದಿಗೆ ಒಂದು ಕರುವನ್ನು ಯಾರು ಉಪಾಸನೆ ಮಾಡುತ್ತಾನೆಯೋ ಅವನು ತನ್ನನ್ನು ವಿಷಯಾಕರ್ಷಣೆಯಲ್ಲಿ ಸಿಲುಕಿಸುತ್ತಾ ಶತ್ರುಗಳಂತಿರುವ ಮನೋಬುದ್ಧಿಪಂಚಜ್ಞಾನೇಂದ್ರಿಯಗಳು ಈ ಏಳನ್ನೂ, ಅವುಗಳಿಗೆ ಅಭಿಮಾನಿಗಳಾದ ಅಸುರರನ್ನೂ ವಶೀಕರಿಸಿಕೊಳ್ಳುತ್ತಾನೆ. ಸರ್ವಜೀವರಲ್ಲಿರುವ ಮುಖ್ಯಪ್ರಾಣನೇ ಆ ಕರು. ಜೀವನ ಸೂಕ್ಷ್ಮದೇಹವೇ ಕೊಟ್ಟಿಗೆ. ಸ್ಥೂಲಶರೀರವೇ ಕೊಟ್ಟಿಗೆ ಇರುವ ಪ್ರದೇಶ. ಪ್ರಾಣನಾಮಕನಾದ ಶ್ರೀಹರಿಯು ಗೂಟ. ಅನ್ನ ಎಂದರೆ, ಲಕ್ಷ್ಮೀದೇವಿಯೆ ಹಗ್ಗ.

**ಭಾಷ್ಯ**—**ಆಧಾನಮವಸ್ಥಾನಂ ಸೂಕ್ಷ್ಮಶರೀರಮ್ । ಪ್ರತ್ಯಾಧಾನಂ ವಿತಾನಂ ಸ್ಥೂಲಶರೀರಮ್ । ಪ್ರಾಣೋ ನಾರಾಯಣಃ ಸ್ಥೂಣಾ ।**

**ವಾಯುರ್ಗೋವತ್ಸರೂಪೇಣ ಸರ್ವಪ್ರಾಣಿಷು ಸಂಸ್ಥಿತಃ ।**
**ಸೂಕ್ಷ್ಮ ದೇಹೋ ಗೃಹಂ ತಸ್ಯ ವಿತಾನಂ ಸ್ಥೂಲ ಉಚ್ಯತೇ ।**
**ಅನ್ನಂ ದಾಮಾತ್ಮಕಂ ತಸ್ಯ ಸ್ಥೂಣಾ ತು ಭಗವಾನ್ ಹರಿಃ ।**
**ಧ್ಯಾಯತ್ಯೇವಂ ಹಿ ಯೋ ವಾಯುಂ ಶ್ರೋತ್ರಾದೀನ್ ಮನಸಾ ಸಹ**
**ಬುದ್ಧಿಂ ಚ ಸಪ್ತಶತ್ರೂನ್ ಸ ವಿಷಯೇಷ್ವಭಿಧಾವತಃ ।**
**ಅಸುರಾನ್ ಸನ್ನಿರುದ್ಧ್ಯೈವ ವೇತ್ತಿ ನಾರಾಯಣಂ ಪರಮ್ ।**

**ಅನುವಾದ**—ಆಧಾನ ಎಂದರೆ ಮುಖ್ಯಪ್ರಾಣನೆಂಬ ಕರುವಿಗೆ ಕೊಟ್ಟಿಗೆ ಎನಿಸುವ ಜೀವನ ಸೂಕ್ಷ್ಮವಾದ ಲಿಂಗಶರೀರ. ಪ್ರತ್ಯಾಧಾನ ಎಂದರೆ ಕೊಟ್ಟಿಗೆ ಇರುವ ಪ್ರದೇಶ ಅಂದರೆ ಸ್ಥೂಲಶರೀರ. ಪ್ರಾಣ ಎಂದರೆ ನಾರಾಯಣ. ಅವನೆ ಗೂಟ.

ವಾಯುವು ದನದ ಕರುವಿನ ರೂಪದಿಂದ ಎಲ್ಲಾ ಪ್ರಾಣಿಗಳಲ್ಲೂ ಇದ್ದಾನೆ. ಜೀವನ ಸೂಕ್ಷ್ಮದೇಹವು ಅವನ ಕೊಟ್ಟಿಗೆ. ಸ್ಥೂಲದೇಹವು ಆ ಕೊಟ್ಟಿಗೆ ಇರುವ ಪ್ರದೇಶ. ಅನ್ನ ಎಂದರೆ ಲಕ್ಷ್ಮೀದೇವಿ ಅವನನ್ನು ಕಟ್ಟುವ ಹಗ್ಗ. ಭಗವಂತನಾದ ಶ್ರೀಹರಿಯು ಗೂಟ. ಯಾರು ವಾಯುವನ್ನು ಹೀಗೆ ಉಪಾಸನೆ ಮಾಡುತ್ತಾನೆಯೋ

ಶ್ರೋತ್ರಾದಿ ಪಂಚಜ್ಞಾನೇಂದ್ರಿಯಗಳು ಈ ಏಳನ್ನೂ, ತದಭಿಮಾನಿಗಳಾದ ಅಸುರರನ್ನೂ ವಶಪಡಿಸಿಕೊಂಡು ಸರ್ವೋತ್ತಮನಾದ ನಾರಾಯಣನನ್ನು ತಿಳಿಯುತ್ತಾನೆ.

**ಬಲಗಣ್ಣಿನಲ್ಲಿ ಮುಖ್ಯಪ್ರಾಣ :**

**ಉಪನಿಷತ್—ತಮೇತಾಃ ಸಪ್ತಾಕ್ಷಿತಯ ಉಪತಿಷ್ಠಂತೇ । ತದ್ ಯಾ ಇಮಾ ಅಕ್ಷನ್ ಲೋಹಿನ್ಯೋ ರಾಜಯಸ್ತಾಭಿರೇನಂ ರುದ್ರೋಽನ್ವಾಯತ್ತಃ । ಅಥ ಯಾ ಅಕ್ಷನ್ನಾಪಸ್ತಾಭಿಃ ಪರ್ಜನ್ಯಃ । ಯಾ ಕನೀನಿಕಾ ತಯಾಽಽದಿತ್ಯಃ । ಯತ್ ಕೃಷ್ಣಂ ತೇನಾಗ್ನಿಃ । ಯಚ್ಛುಕ್ಲಂ ತೇನೇಂದ್ರಃ । ಅಧರಯೈನಂ ವರ್ತನ್ಯಾ ಪೃಥಿವ್ಯನ್ವಾಯತ್ತಾ । ದ್ಯೌರುತ್ತರಯಾ ನಾಸ್ಯಾನ್ನಂ ಕ್ಷೀಯತೇ ಯ ಏವಂ ವೇದ ।**

ಜೀವರ ಬಲಗಣ್ಣಿನಲ್ಲಿರುವ ವಾಯುವನ್ನು ಕುಂದದ ಜ್ಞಾನವುಳ್ಳ ಮನಸ್ಸಿನವರಾದ ರುದ್ರಾದಿ ಸಪ್ತದೇವತೆಗಳು ಉಪಾಸನೆ ಮಾಡುತ್ತಾರೆ. ಹೇಗೆಂದರೆ ಆ ಸಪ್ತದೇವತೆಗಳಲ್ಲಿ ರುದ್ರನು ಕಣ್ಣಿನಲ್ಲಿರುವ ಕೆಂಪುರೇಖೆಗಳಲ್ಲಿದ್ದು ಅಕ್ಷಿಸ್ಥವಾಯುವಿನ ಉಪಾಸನೆಯನ್ನು ಮಾಡುತ್ತಾನೆ. ಮತ್ತು ಪರ್ಜನ್ಯನು ಕಣ್ಣಿನಲ್ಲಿರುವ ನೀರಲ್ಲಿದ್ದು ವಾಯುವನ್ನು ಉಪಾಸನೆ ಮಾಡುತ್ತಾನೆ. ಕಣ್ಣಿನಲ್ಲಿರುವ ಕಣ್ಣಾಲಿಗಳಲ್ಲಿದ್ದು ಸೂರ್ಯನು ವಾಯುವನ್ನು ಉಪಾಸನೆ ಮಾಡುತ್ತಾನೆ. ಕಣ್ಣಿನಲ್ಲಿರುವ ಕಪ್ಪುಭಾಗದಲ್ಲಿದ್ದು ಅಗ್ನಿಯು ಉಪಾಸನೆ ಮಾಡುತ್ತಾನೆ. ಶ್ವೇತಭಾಗದಲ್ಲಿದ್ದು ಇಂದ್ರನು ಉಪಾಸನೆ ಮಾಡುತ್ತಾನೆ. ಕಣ್ಣೀರು ಹರಿಯುವ ಕೆಳಗಿನ ಮಾರ್ಗದಲ್ಲಿದ್ದು ಭೂಮಿದೇವಿಯು ಉಪಾಸನೆ ಮಾಡುತ್ತಾಳೆ. ಕಣ್ಣೀರು ಹರಿಯುವ ಮೇಲಿನ ಮಾರ್ಗದಲ್ಲಿದ್ದು ದ್ಯುಲೋಕಾಭಿಮಾನಿನಿಯಾದ ಪಾರ್ವತಿಯು ಉಪಾಸನೆ ಮಾಡುತ್ತಾಳೆ. ಯಾರು ಹೀಗೆ ರುದ್ರಾದಿಗಳಿಂದ ಉಪಾಸ್ಯನಾದ ವಾಯುವನ್ನು ವಿಷ್ಣುವಿನೊಡನೆ ಉಪಾಸನೆ ಮಾಡುವನೋ ಅವನು ಮುಕ್ತನಾಗಿ ಅಕ್ಷಯವಾದ ಆನಂದವನ್ನು ಅನುಭವಿಸುತ್ತಾನೆ.

**ಭಾಷ್ಯ—ದಕ್ಷಿಣಾಕ್ಷಿಸ್ಥಿತಂ ವಾಯುಂ ಸಪ್ತದೇವಾ ಉಪಾಸತೇ ।**
**ಅಕ್ಷೀಣ ಜ್ಞಾನ ಮಹಸಃ ಸದಾಶಿವ ಪುರಃಸರಾಃ ।**
**ಉಪಾಸ್ಯಮಾನಂ ತೈರ್ದೇವೈಃ ಮೋಕ್ಷಾರ್ಥಂ ವಾಯುಮೀಶ್ವರಮ್ ।**
**ಸ್ಥಾಣಯಾ ವಿಷ್ಣುನಾ ಸಾರ್ಧಂ ಯೋ ವಿದ್ಯಾತ್ ಸೋಽನ್ನಮಶ್ನುತೇ।**
**ಅಕ್ಷೀಣಮೇವ ಮುಕ್ತಃ ಸನ್ ಸರ್ವದುಃಖವಿವರ್ಜಿತಃ ।**

**ಅನುವಾದ**—ಬಲಗಣ್ಣಿನಲ್ಲಿರುವ ವಾಯುವನ್ನು ಕುಂದದ ಜ್ಞಾನಪ್ರಕಾಶವುಳ್ಳ ರುದ್ರಾದಿ ಸಪ್ತದೇವತೆಗಳು ಉಪಾಸನೆ ಮಾಡುತ್ತಾರೆ. ಮೋಕ್ಷದ ಸಲುವಾಗಿ ಆ

ದೇವತೆಗಳು ಉಪಾಸನೆ ಮಾಡುವ ವಿಷ್ಣುಸಹಿತನಾದ ವಾಯುವನ್ನು ಯಾರು ಉಪಾಸನೆ ಮಾಡುವನೋ ಅವನು ಮುಕ್ತನಾಗಿ ಸರ್ವದುಃಖರಹಿತನಾಗಿ ಅಕ್ಷಯವಾದ ಆನಂದವನ್ನು ಅನುಭವಿಸುತ್ತಾನೆ.

**ಉಪನಿಷತ್—ತದೇಷ ಶ್ಲೋಕೋ ಭವತಿ—**

**ಅರ್ವಾಗ್ಬಿಲಶ್ಚಮಸ ಊರ್ಧ್ವ ಬುಧ್ನಃ**
**ತಸ್ಮಿನ್ ಯಶೋ ನಿಹಿತಂ ವಿಶ್ವರೂಪವ್ ।**
**ತಸ್ಯಾऽಸತ ಋಷಯಃ ಸಪ್ತ ತೀರೇ**
**ವಾಗಷ್ಟಮೀ ಬ್ರಹ್ಮಣಾ ಸಂವಿದಾನಾ। ಇತಿ ।**

**'ಅರ್ವಾಗ್ ಬಿಲಶ್ಚಮಸ ಊರ್ಧ್ವಬುಧ್ನ' ಇತಿ । ಇದಂ ತಚ್ಛಿರಃ । ಏಷ ಹ್ಯರ್ವಾಗ್ ಬಿಲಶ್ಚಮಸ ಊರ್ಧ್ವ ಬುಧ್ನಃ । 'ತಸ್ಮಿನ್ ಯಶೋ ನಿಹಿತಂ ವಿಶ್ವರೂಪಮಿ'ತಿ । ಪ್ರಾಣಾ ವೈ ಯಶೋ ವಿಶ್ವರೂಪಂ । ಪ್ರಾಣಾನೇತದಾಹ । 'ತಸ್ಯಾऽಸತ ಋಷಯಃ ಸಪ್ತತೀರ'ಇತಿ । ಪ್ರಾಣಾ ವಾ ಋಷಯಃ । ಪ್ರಾಣಾನೇತದಾಹ । 'ವಾಗಷ್ಟಮೀ ಬ್ರಹ್ಮಣಾ ಸಂವಿದಾನೇ'ತಿ । ವಾಗ್ಘ್ಯಷ್ಟಮೀ ಬ್ರಹ್ಮಣಾ ಸಂವಿತ್ತಾ ॥**

ರುದ್ರಾದಿಗಳು ಅಕ್ಷಿಸ್ಥನಾದ ವಾಯುವನ್ನು ಉಪಾಸನೆ ಮಾಡುತ್ತಾರೆ ಎನ್ನುವ ವಿಷಯದಲ್ಲಿ ಮಂತ್ರಸಮ್ಮತಿ ಹೀಗಿದೆ—

'ಇದು ತುದಿಕೆಳಗಾಗಿ ಬಡುಮೇಲಾಗಿರುವ ಪಾತ್ರೆ. ಇದರಲ್ಲಿ ಜ್ಞಾನಸುಖಾತ್ಮಕರೂ ಪೂರ್ಣರೂ ಆದ ಮೂವರಿದ್ದಾರೆ. ಅವರನ್ನು ಏಳುಮಂದಿ ಋಷಿಗಳು ಆರಾಧಿಸುತ್ತಾರೆ. ಎಂಟನೆಯವಳು ಭಾರತೀದೇವಿ. ಅವಳನ್ನು ವಾಯು ಚೆನ್ನಾಗಿ ತಿಳಿಯುತ್ತಾನೆ'.

ಇಲ್ಲಿ 'ತುದಿಕೆಳಗಾಗಿ ಬುಡಮೇಲಾಗಿರುವ ಪಾತ್ರೆ' ಎಂದರೆ ಮಾನವನ ಶಿರಸ್ಸು. ಇದು ಕೆಳಗೆ ಬಾಯಿಯನ್ನು ಮೇಲೆ ಹೊಟ್ಟೆಯನ್ನು ಹೊಂದಿದೆ. 'ಅದರಲ್ಲಿ ಜ್ಞಾನಸುಖಾತ್ಮಕರೂ ಪೂರ್ಣರೂ ಆದ ಮೂವರೆ'ಂದರೆ ಶಿರಸ್ಸಿನ ಬಲಗಣ್ಣಿನಲ್ಲಿ ಲೋಕನಾಯಕರಾದ ವಿಷ್ಣು ರಮಾ ವಾಯುಗಳಿದ್ದಾರೆ ಎಂದರ್ಥ. ಲೋಕನಾಯಕರಾದ ಈ ವಿಷ್ಣು ರಮಾ ವಾಯುಗಳು ಜ್ಞಾನಸುಖಾತ್ಮಕರು ಮತ್ತು ಪೂರ್ಣರು. ವಿಷ್ಣುವು ಮುಖ್ಯವಾಗಿಯೆ ಪೂರ್ಣನು. ಲಕ್ಷ್ಮೀ ಸ್ತ್ರೀಯರಲ್ಲೆಲ್ಲಾ ಪೂರ್ಣಳು. ಮತ್ತು ವಾಯು ಜೀವರಲ್ಲೆಲ್ಲಾ ಪೂರ್ಣನು. 'ಈ ಮೂವರನ್ನು ಆರಾಧಿಸುವ ಸಪ್ತಋಷಿಗಳು' ಎಂದರೆ ಕಣ್ಣಿನ ಬಿಳಿ ಕೆಂಪುರೇಖೆ ಮುಂತಾದ ಭಾಗಗಳಲ್ಲಿ ಅಭಿಮಾನಿಗಳಾಗಿದ್ದು ಮೂವರನ್ನೂ ಆರಾಧಿಸುವ ಲೋಕನಾಯಕರಾದ ಗೌತಮಾದಿ ಏಳುಮಂದಿ ಋಷಿಗಳು. ಏಕೆಂದರೆ ಈ ಋಷಿಗಳು ಲೋಕನಾಯಕರು.

ಎಂಟನೆಯವಳು ಭಾರತೀದೇವಿ. ಅವಳನ್ನು ವಾಯು ಚೆನ್ನಾಗಿ ತಿಳಿಯುತ್ತಾನೆ. ಎಂದರೆ ವಾಯುವಿನ ಆರಾಧಕರಲ್ಲಿ ಭಾರತಿ ಎಂಟನೆಯವಳು, ಅವಳನ್ನು ವಾಯು ಚೆನ್ನಾಗಿ ತಿಳಿಯಬಲ್ಲ ಎಂದರ್ಥ.

**ಭಾಷ್ಯ—ವಿಶ್ವರೂಪಂ ಯಶಶ್ಚೇತಿ ನಾಮ್ನಾ ವಿಷ್ಣೂ ರಮಾ ತಥಾ ।**
**ವಾಯುಶ್ಚ ಸಂಸ್ಥಿತಾ ನಿತ್ಯಂ ಸರ್ವೇಷಾಂ ದಕ್ಷಿಣಾಕ್ಷಿಗಾಃ ।**
**ಪೂರ್ಣತ್ವಾದ್ ವಿಶ್ವತಾ ವಿಷ್ಣೋ ರಮಾಯಾಃ ಸ್ತ್ರೀಷು ಪೂರ್ಣತಃ ।**
**ವಾಯೋರ್ಜೀವೇಷು ಪೂರ್ಣತ್ವಾದ್ ಯಶೋ ಜ್ಞಾನಸುಖಾತ್ಮಕಾಃ**
**ಪ್ರಾಣಾಶ್ಚೈತೇ ಪ್ರಣೇತೃತ್ವಾದ್ ಋಷಯೋ ರುದ್ರಪೂರ್ವಕಾಃ ।**

**ಅನುವಾದ**—ಮಂತ್ರದಲ್ಲಿ ವಿಶ್ವರೂಪ ಮತ್ತು ಯಶಃ ಎಂಬ ಶಬ್ದಗಳಿಂದ ವಿಷ್ಣು ಲಕ್ಷ್ಮೀ ಮತ್ತು ವಾಯುಗಳು ಉಕ್ತರಾಗಿದ್ದಾರೆ. ಇವರು ಯಾವಾಗಲೂ ಎಲ್ಲಾ ಪ್ರಾಣಿಗಳ ಬಲಗಣ್ಣಿನಲ್ಲಿರುತ್ತಾರೆ. ಸರ್ವಗುಣಪೂರ್ಣನಾದುದರಿಂದ ವಿಷ್ಣುವಿಗೂ, ಸ್ತ್ರೀಯರಲ್ಲಿ ಅಂದರೆ ಪರತಂತ್ರಚೇತನರಲ್ಲಿ ಪೂರ್ಣಳಾದುದರಿಂದ ಲಕ್ಷ್ಮಿಗೂ ಜೀವರಲ್ಲಿ ಪೂರ್ಣನಾದುದರಿಂದ ವಾಯುವಿಗೂ ಪೂರ್ಣರೆಂದು ವ್ಯವಹಾರ. ಜ್ಞಾನ ಸುಖರೂಪರಾದುದರಿಂದ ಇವರಿಗೆ ಯಶಃ ಎಂದೂ, ಸರ್ವಜೀವಪ್ರೇರಕರಾದುದರಿಂದ ಪ್ರಾಣರು ಎಂದೂ ಮಂತ್ರವು ಹೇಳಿದೆ. ಸಪ್ತಋಷಿಗಳು ಎಂದು ಹೇಳಲ್ಪಟ್ಟವರು ರುದ್ರಾದಿಗಳೇ. ಇವರು ಜೀವರಿಗೆ ಪ್ರೇರಕರಾದುವರಿಂದ ಪ್ರಾಣರು ಎಂದೂ ಎನಿಸುತ್ತಾರೆ. ಮಂತ್ರದಲ್ಲಿ ಋಷಿಗಳನ್ನು ಪ್ರಾಣರು ಎಂದು ಕರೆದಿರುವುದರಿಂದ ಪ್ರಸಿದ್ಧರಾದ ಋಷಿಗಳನ್ನು ತೆಗೆದುಕೊಳ್ಳದೆ ಜಗತ್ತಿಗೆ ಪ್ರೇರಕರಾದ ರುದ್ರಾದಿಗಳನ್ನೇ ತೆಗೆದುಕೊಳ್ಳಬೇಕು.

**ಉಪನಿಷತ್—ಇಮಾವೇವ ಗೌತಮ ಭರದ್ವಾಜೌ । ಅಯಮೇವ ಗೌತಮಃ । ಅಯಂ ಭರದ್ವಾಜಃ । ಇಮಾವೇವ ವಿಶ್ವಾಮಿತ್ರ ಜಮದಗ್ನೀ । ಅಯಮೇವ ಹಿ ವಿಶ್ವಾಮಿತ್ರಃ । ಅಯಂ ಜಮದಗ್ನಿಃ । ಇಮಾವೇವ ವಸಿಷ್ಠ ಕಶ್ಯಪೌ । ಅಯಮೇವ ವಸಿಷ್ಠಃ । ಅಯಂ ಕಶ್ಯಪಃ । ವಾಗೇವಾತ್ರಿಃ । ವಾಚಾ ಹ್ಯನ್ನಮದ್ಯತೇ । ಅತ್ತಿರ್ಹ ವೈ ನಾಮೈತದ್ ಯದತ್ರಿರಿತಿ । ಸರ್ವಸ್ಯೈತಸ್ಯಾತ್ತಾ ಭವತಿ, ಸರ್ವಮಸ್ಯಾನ್ನಂ ಭವತಿ, ಯ ಏವಂ ವೇದ ।**

**॥ಇತಿ ಶಿಶು ಬ್ರಾಹ್ಮಣಮ್ ॥**

ಹಿಂದಿನ ಮಂತ್ರದಲ್ಲಿ ಋಷಿಶಬ್ದದಿಂದ ರುದ್ರಾದಿಗಳನ್ನೇ ತೆಗೆದುಕೊಳ್ಳಬೇಕೆಂಬ ಅಭಿಪ್ರಾಯದಿಂದ ಋಷಿಗಳನ್ನು ಹೇಳತಕ್ಕ, ಗೌತಮ ಮೊದಲಾದ ಶಬ್ದಗಳು

ಗೌತಮಾದಿ ಋಷಿಗಳೆಂದರೆ ಪ್ರಸಿದ್ಧರಾದ ಋಷಿಗಳಲ್ಲ. ರುದ್ರನೇ ಹೆಚ್ಚು ಜ್ಞಾನವಿದ್ದದರಿಂದ ಗೌತಮನೆಂದೂ, ಪರ್ಜನ್ಯನೇ ಮಳೆ ಸುರಿಸಿ ಅನ್ನವನ್ನು ಕೊಡುವುದರಿಂದ ಭರದ್ವಾಜನೆಂದೂ, ಸೂರ್ಯನೇ ತನ್ನ ಪ್ರಕಾಶದಿಂದ ಜಗತ್ತಿಗೆ ಬೆಳಕನ್ನು ಕೊಡುವುದರಿಂದ ವಿಶ್ವಾಮಿತ್ರನೆಂದೂ, ಅಗ್ನಿಯೇ ಉತ್ಪನ್ನವಾದುದನ್ನು ಮಿತವಾಗಿ ತಿನ್ನುವುದರಿಂದ ಜಮದಗ್ನಿಯೆಂದೂ, ಇಂದ್ರನೇ ವಾಸಮಾಡುವವರಲ್ಲಿ ಶ್ರೇಷ್ಠನಾದುದರಿಂದ ವಸಿಷ್ಠನೆಂದೂ, ಧರಾದೇವಿಯೇ ಮಲಗಿಕೊಂಡಲ್ಲಿಯೇ ಕುಡಿಯುವುದರಿಂದ ಕಶ್ಯಪಳೆಂದೂ, ವಾಗಾಭಿಮಾನಿನಿಯಾದ ಉಮಾದೇವಿಯೇ ಅತ್ರಿ ಎಂದೂ ಕರೆಯಲ್ಪಡುತ್ತಾರೆ. ಸ್ವರ್ಗಲೋಕದಲ್ಲಿದ್ದವರು ಹೋಮಮಾಡಿದ ಅನ್ನವನ್ನು ತಿನ್ನುವುದರಿಂದ ಅವಳಿಗೆ ಅತ್ರಿ ಎಂದು ಹೆಸರು. ಅತ್ರಿ ಶಬ್ದಕ್ಕೂ, ಅತ್ತಿ ಎಂಬ ಶಬ್ದಕ್ಕೂ ತಿನ್ನುವವಳು ಎಂದು ಒಂದೇ ಅರ್ಥ. ಹೀಗೆ ತಿಳಿಯುವ ಉಪಾಸಕನಿಗೆ ತನ್ನ ಯೋಗ್ಯತಾನುಸಾರವಾಗಿ ಭೋಜನ ಶಕ್ತಿಯುಂಟಾಗುತ್ತದೆ. ತನ್ನ ಯೋಗ್ಯತಾನುಸಾರವಾಗಿ ಎಲ್ಲವೂ ಅವನಿಗೆ ಭೋಗ್ಯವೇ ಆಗುತ್ತದೆ.

**ಭಾಷ್ಯ—ಗೌತಮೋ ನಾಮ ರುದ್ರಸ್ತು ಸರ್ವಜ್ಞತ್ವಾತ್ ಪ್ರಕೀರ್ತಿತಃ ।**
**ಭರದ್ವಾಜಸ್ತು ಪರ್ಜನ್ಯೋ ವಾಜಮನ್ನಂ ಭರೇದ್ ಯತಃ।**
**ವೃಷ್ಟ್ಯೈವ ವಿಶ್ವಾಮಿತ್ರಾಖ್ಯ ಆದಿತ್ಯೋ ಯತ್ ಪ್ರಕಾಶನಾತ್ ।**
**ವಿಶ್ವಂ ವಿಜ್ಞಾಪಯನ್ನಿತ್ಯಮಗ್ನಿಸ್ತು ಜಮದಗ್ನಿಕಃ ।**
**ಜಾತಂ ಮಿತಂ ಚಾತ್ತಿ ಯಸ್ಮಾದ್ ವಸಿಷ್ಠಾಖ್ಯಸ್ತು ವಾಸವಃ ।**
**ವಸತಾಮುತ್ತಮೋ ಯಸ್ಮಾತ್ ಪೃಥ್ವೀ ಕಶ್ಯಪನಾಮಿಕಾ ।**
**ಮೇಘವೃಷ್ಟಂ ಪಿಬೇದ್ ಯತ್ ಕಂ ಶಯಾನೈವ ಹಿ ಸಾ ಸದಾ ।**
**ದ್ಯೌರತ್ರಿರಿತಿ ಸಂಪ್ರೋಕ್ತಾ ತತ್ಸ್ಥೈರ್ಹಿ ಹುತಮದ್ಯತೇ ।**

**ಅನುವಾದ**—ರುದ್ರನು ಸರ್ವಜ್ಞನಾದುದರಿಂದ ಗೌತಮನೆನಿಸುತ್ತಾನೆ. ಗೌ ಎಂದರೆ ಜ್ಞಾನ. ಅತಿಶಯಾರ್ಥದಲ್ಲಿ ತಮಪ್ ಪ್ರತ್ಯಯ. ಅತಿಶಯಿತ ಜ್ಞಾನವುಳ್ಳವನು ಎಂದು ಒಟ್ಟು ಅರ್ಥ. ವಾಜಂ ಎಂದರೆ ಅನ್ನವನ್ನು ಭರೇತ್, ಮಳೆಯಿಂದ ಪೋಷಿಸುವುದರಿಂದ ಪರ್ಜನ್ಯನಿಗೆ ಭರದ್ವಾಜನೆಂದು ಹೆಸರು. ವಿಶ್ವ ಎಂದರೆ ಸಮಸ್ತವನ್ನೂ, ಮಿತ್ರ ಎಂದರೆ ತನ್ನ ಪ್ರಕಾಶದಿಂದ ತಿಳಿಸಿಕೊಡುವುದರಿಂದ ಆದಿತ್ಯನಿಗೆ ವಿಶ್ವಾಮಿತ್ರನೆಂದು ಹೆಸರು. ಜ ಎಂದರೆ ಜಾತವಾದುದನ್ನು, ಮದ್ ಎಂದರೆ ಮಿತವಾಗಿ, ಅಗ್ನಿ ತಿನ್ನುತ್ತಾನಾದ್ದರಿಂದ ಅಗ್ನಿಗೆ ಜಮದಗ್ನಿ ಎಂದು ಹೆಸರು. ವಾಸಿಸುವವರಲ್ಲಿ ಶ್ರೇಷ್ಠನಾದುದರಿಂದ ಇಂದ್ರನಿಗೆ ವಸಿಷ್ಠ ಎಂದು ಹೆಸರು. ಕಂ ಮಳೆ ನೀರನ್ನು, ಶ್ಯಾ ಮಲಗಿಕೊಂಡೇ, ಪ ಕುಡಿಯುತ್ತಾಳಾದ್ದರಿಂದ ಧರಾದೇವಿಗೆ ಕಶ್ಯಪ ಎಂದು ಹೆಸರು. ಸ್ವರ್ಗಲೋಕದಲ್ಲಿದ್ದವರು ಹೋಮಮಾಡಿದುದದನ್ನು ಅತ್ತಿ ಎಂದರೆ ತಿನ್ನುವುದರಿಂದ ಪಾರ್ವತಿಗೆ ಅತ್ರಿ ಎಂದು ಹೆಸರು.

**ಭಾಷ್ಯ—ಶ್ರೋತ್ರದೃಙ್‌ನಾಸಿಕಾವಾಕ್ಷು ದಕ್ಷಿಣಾಕ್ಷಿಷು ಸಂಸ್ಥಿತಾಃ ।**
**ದ್ವಿತೀಯೇನ ತು ರೂಪೇಣ ದೇವಾ ಏತೇ ಶಿವಾದಯಃ ।**
**ಏವಮೇಷಾಂ ತು ನಾಮಾನಿ ವೇತ್ತಿ ಯಃ ಸರ್ವಭುಗ್ ಭವೇತ್ ।**
**ಸರಸ್ವತ್ಯಷ್ಟಮೀ ಚೈವ ವಾಚಿ ಸಂಸ್ಥಾ ವಿಶೇಷತಃ ।**
**ಉಪಾಸ್ತೇ ವಾಯುಮೇವೈಕಂ ಸಸ್ಥೂಣಂ ಬ್ರಹ್ಮವೇದಿತಾ ।**
**ಬ್ರಹ್ಮನಾಮಾ ಸದಾ ವಾಯುರೇನಾಂ ವೇತ್ತಿ ವಿಶೇಷತಃ ।**
**ಇತಿ ತಾಂ ವೇದ ಯೋ ವಿದ್ವಾನ್ ಸರ್ವಾತ್ತಾ ಸ ಭವಿಷ್ಯತಿ ।**
**ಇತಿ ನಾರಾಯಣೀಯೇ ।**

**ಅನುವಾದ**—ರುದ್ರಾದಿಗಳು ದೇಹದಲ್ಲಿ ಮನಸ್ಸು ಮೊದಲಾದವುಗಳಲ್ಲಿ ಇದ್ದಾರೆಂದು ಹೇಳಿರುವುದರಿಂದ ದಕ್ಷಿಣಾಕ್ಷಿಯಲ್ಲಿದ್ದಾರೆಂಬುದು ಹೇಗೆ ಕೂಡುತ್ತದೆ? ಎಂದರೆ-ಶ್ರೋತ್ರ ಚಕ್ಷುಸ್ಸು ನಾಸಿಕಾ ವಾಕ್ ಮನಸ್ಸು ಮೊದಲಾದವುಗಳಲ್ಲಿ ನಿಯಾಮಕರಾಗಿರುವ ರುದ್ರಾದಿ ದೇವತೆಗಳೇ ಇನ್ನೊಂದು ರೂಪದಿಂದ ದಕ್ಷಿಣಾಕ್ಷಿಗಳಲ್ಲಿದ್ದಾರೆ. ಹೀಗೆ ರುದ್ರಾದಿಗಳಿಗೆ ಗೌತಮಾದಿ ನಾಮಗಳಿವೆ ಎಂದು ತಿಳಿದ ಉಪಾಸಕನಿಗೆ ಸರ್ವಭೋಗವು ದೊರೆಯುತ್ತದೆ. ಉಪನಿಷತ್ತಿನಲ್ಲಿ ವಾಗಷ್ಟಮೀ ಎಂಬ ಅಂಶಕ್ಕೆ ವಾಗಭಿಮಾನಿನಿಯಾದ ಭಾರತಿಯು ರಮಾ ನಾರಾಯಣ ಸಹಿತನಾದ ವಾಯು ಒಬ್ಬನನ್ನೇ ಉಪಾಸನೆ ಮಾಡುತ್ತಾಳೆ. ರುದ್ರಾದಿಗಳನ್ನು ಉಪಾಸನೆ ಮಾಡುವುದಿಲ್ಲ ಎಂದರ್ಥ. ವಾಯುವಿಗೆ ಬ್ರಹ್ಮ ಎಂದು ಹೆಸರಿದೆ. ಅವನು ಈ ಭಾರತಿಯನ್ನು ವಿಶೇಷವಾಗಿ ತಿಳಿದಿದ್ದಾನೆ. ಹೀಗೆ ಯಾರು ತಿಳಿಯುತ್ತಾನೆಯೋ ಅವನು ತನಗೆ ಯೋಗ್ಯವಾದ ಎಲ್ಲವನ್ನೂ ಭೋಗಿಸುವ ಶಕ್ತಿ ಪಡೆಯುತ್ತಾನೆ ಎಂದು ನಾರಾಯಣೀಯ ಎಂಬ ಗ್ರಂಥದಲ್ಲಿ ಹೇಳಿದೆ.

॥ ಇಲ್ಲಿಗೆ ಶಿಶುಬ್ರಾಹ್ಮಣ ಮುಗಿಯಿತು ॥

**ಮೂರ್ತಾ ಮೂರ್ತ ವಿಲಕ್ಷಣ ಶ್ರೀಹರಿ :**

**ಉಪನಿಷತ್—ದ್ವೇ ವಾವ ಬ್ರಹ್ಮಣೋ ರೂಪೇ ಮೂರ್ತಂ ಚೈವಾಮೂರ್ತಂ ಚ । ಮರ್ತ್ಯಂ ಚಾಮೃತಂ ಚ । ಸ್ಥಿತಂ ಚ ಯಚ್ಚ । ಸಚ್ಚ ತ್ಯಂ ಚ ।**

ಶ್ರೀಹರಿ ಮೂರ್ತಾಮೂರ್ತ ವಿಲಕ್ಷಣ. ಏಕೆಂದರೆ ಮೂರ್ತ ಮತ್ತು ಅಮೂರ್ತಗಳು ಶ್ರೀಹರಿಯ ಎರಡು ರೂಪಗಳೆ ಅಂದರೆ ಪ್ರತಿಮೆಗಳೇ ಹೊರತು ಶ್ರೀಹರಿಯ ಸ್ವರೂಪವಲ್ಲ. ಇದು ಪ್ರಸಿದ್ಧವಾದುದು. ಮೂರ್ತವು ಮರ್ತ್ಯ ಸ್ಥಿತ ಮತ್ತು ಸತ್. ಅಮೂರ್ತವು ಅಮೃತ, ಯತ್ ಮತ್ತು ತ್ಯತ್.

**ಭಾಷ್ಯ—ವಿಶರಣಾವಸಾದನಯುಕ್ತಂ ಸತ್ । ತತಂ ಸರ್ವಜ್ಞಂ ಚ ತ್ಯಮ್ ।**

**ಅನುವಾದ**—ಸತ್ ಎಂದರೆ ವಿರಲಣ,ಎಲ್ಲೆಡೆ ವ್ಯಾಪ್ತವಾಗದಿರುವುದು ಮತ್ತು ಅವಸಾದನ, ಪ್ರಲಯಾದಿಗಳಲ್ಲಿ ಜ್ಞಾನಕ್ಕೆ ನಾಶ ಇವುಗಳನ್ನು ಹೊಂದಿದವರು. ತ್ಯಂ ಎಂದರೆ ತ್, ತತ, ವ್ಯಾಪ್ತರು ಮತ್ತು ಯ ಜ್ಞಾನರೂಪರೆಂದರ್ಥ.

**ಉಪನಿಷತ್—ತದೇತನ್ಮೂರ್ತಂ ಯದನ್ಯದ್ ವಾಯೋಶ್ಚಾಂತರಿಕ್ಷಾಚ್ಚ । ಏತನ್ಮರ್ತ್ಯಂ । ಏತತ್ ಸ್ಥಿತಮ್ । ಏತತ್ ಸತ್ । ತಸ್ಯೈತಸ್ಯ ಮೂರ್ತಸ್ಯೈತಸ್ಯ ಮರ್ತ್ಯಸ್ಯೈತಸ್ಯ ಸ್ಥಿತಸ್ಯೈತಸ್ಯ ಸತ ಏಷ ರಸೋ ಯ ಏಷ ತಪತಿ । ಸತೋ ಹ್ಯೇಷ ರಸಃ ।**

ವಾಯುವಿಗಿಂತಲೂ ಅಂತರಿಕ್ಷನಾಮಕಳಾದ ಲಕ್ಷ್ಮಿಗಿಂತಲೂ ಅನ್ಯರಾದ ರುದ್ರಾದಿಗಳು'ಮೂರ' ಪಾಪದಿಂದ 'ತ'ಆಪ್ತ ಹೊಂದಲ್ಪಟ್ಟ ಕಾರಣದಿಂದ ಮೂರ್ತರೆನಿಸುತ್ತಾರೆ. ಇವರು ಹುಟ್ಟುವಾಗ ಶರೀರಾಭಿಮಾನ ಹೊಂದಿ ಕೊನೆಯಲ್ಲಿ ಅದರ ತ್ಯಾಗರೂಪವಾದ ಮರಣ ಹೊಂದುವುದರಿಂದ ಮರ್ತ್ಯರು. ವಿಷ್ಣುವಿಗಿಂತ ಭಿನ್ನರಾದವರಿಗೂ ಅಧೀನರಾಗಿರುವುದರಿಂದ ಸ್ಥಿತರು. ಸರ್ವತ್ರ ವ್ಯಾಪ್ತರಾಗದಿರುವುದರಿಂದಲೂ, ಪ್ರಳಯದಲ್ಲಿ ಜ್ಞಾನಲೋಪ ಹೊಂದುವುದರಿಂದಲೂ ಸತ್ ಎನಿಸುತ್ತಾರೆ. ಆದಿತ್ಯ ಮಂಡಲದಲ್ಲಿ ಪ್ರಕಾಶಿಸುವ ಚತುರ್ಮುಖನು, ಮೂರ್ತರೆಂದೂ ಮರ್ತ್ಯರೆಂದೂ ಸ್ಥಿತರೆಂದೂ ಸತ್ ಎಂದೂ ಕರೆಸಿಕೊಳ್ಳುವ ಈ ರುದ್ರಾದಿಗಳಿಗಿಂತ ಶ್ರೇಷ್ಠ. ಸತ್ತ್ವ, ಸ್ಥಿತತ್ವ ಮತ್ತು ಮರ್ತ್ಯತ್ವ ವಿಶೇಷಣಗಳಿಂದ ಯುಕ್ತವಾದ ಪ್ರಪಂಚದಲ್ಲೆಲ್ಲ ಸೂರ್ಯಮಂಡಲಾಂತರ್ಗತನಾದ ಈ ವಿರಿಂಚನೇ ಶ್ರೇಷ್ಠ ಎಂಬುದು ಪ್ರಸಿದ್ಧ.

**ಭಾಷ್ಯ—ಪ್ರಲಯೇಽಪಿ ಭಗವದಂತರೇವ ರತಾ ಅಕ್ಷಿತಾಽವಸ್ಥಿತೇತಿ ಶ್ರೀರಂತರಿಕ್ಷಮ್ । 'ಯ ಏಷ ತಪತಿ' ಇತ್ಯಾದಿತ್ಯಸ್ಥೋ ಹಿರಣ್ಯಗರ್ಭ ಉಚ್ಯತೇ।**

**ಅನುವಾದ**—ಪ್ರಲಯದಲ್ಲಿಯೂ ಕೂಡ ನಾಶದೊಂದದೆ ಭಗವಂತನ ಒಳಗೇ ಸುಖವನ್ನು ಅನುಭವಿಸುತ್ತಾ ಇರುವ ಕಾರಣ ಲಕ್ಷ್ಮಿಗೆ ಅಂತರಿಕ್ಷ ಎಂದು ಹೆಸರು. 'ಯ ಏಷ ತಪತಿ' ಎಂದು ಉಪನಿಷತ್ತಿನಲ್ಲಿ ಆದಿತ್ಯಸ್ಥನಾದ ಹಿರಣ್ಯಗರ್ಭನು ಉಕ್ತನಾಗಿದ್ದಾನೆ.

**ಉಪನಿಷತ್—ಅಥಾಮೂರ್ತಂ । ವಾಯುಶ್ಚಾಂತರಿಕ್ಷಂ ಚೈತದಮೃತಂ । ಏತದ್ ಯತ್ । ಏತತ್ ತ್ಯಂ । ತಸ್ಯೈತಸ್ಯಾಮೂರ್ತಸ್ಯೈತಸ್ಯಾಮೃತಸ್ಯೈತಸ್ಯ ಯತ ಏತಸ್ಯ ತ್ಯಸ್ಯೈಷ ರಸೋ ಯ ಏಷ ಏತಸ್ಮಿನ್ ಮಂಡಲೇ ಪುರುಷಃ । ತಸ್ಯ ಹ್ಯೇಷ ರಸಃ । ಇತ್ಯಧಿದೈವತಮ್ ।**

ಮೂರ್ತದ ಬಗ್ಗೆ ಹೇಳಿದ ಮೇಲೆ ಈಗ ಅಮೂರ್ತದ ಬಗ್ಗೆ ವಿವರಣೆ. ವಾಯು ಮತ್ತು ಲಕ್ಷ್ಮಿ ರೂಪಸ್ಪರ್ಶರಹಿತರಾದುದರಿಂದ ಅಮೂರ್ತರೆನಿಸುತ್ತಾರೆ. ಇವರಲ್ಲಿ ಲಕ್ಷ್ಮಿಯು ನಿತ್ಯಮುಕ್ತಳಾದುದರಿಂದ ಅಮೃತಳು. ವಾಯುವು ದೇಹಾಭಿಮಾನರಹಿತನಾದುದರಿಂದ ಅಮೃತ. ಇಬ್ಬರೂ ಹರಿಯಿಂದ ಮಾತ್ರ ನಿಯಮ್ಯರಾದುದರಿಂದ ಯತ್ ಎನಿಸುತ್ತಾರೆ. ವ್ಯಾಪ್ತರಾದುದರಿಂದಲೂ ಸರ್ವಜ್ಞರಾದುದರಿಂದಲೂ ತ್ಯ ಎನಿಸುತ್ತಾರೆ. ಈ ಸೂರ್ಯಮಂಡಲದಲ್ಲಿರುವ ಪೂರ್ಣಷಡ್ಗುಣನಾದ ಹರಿ 'ಅಮೂರ್ತ', 'ಅಮೃತ', 'ಯತ್' 'ತ್ಯ' ಎನಿಸಿರುವ ಲಕ್ಷ್ಮೀ ಮತ್ತು ವಾಯುಗಳಿಗಿಂತ ಶ್ರೇಷ್ಠ. ಲಕ್ಷ್ಮೀ ವಾಯುಗಳಿಗಿಂತ ಶ್ರೀಹರಿಯು ಶ್ರೇಷ್ಠನು ಎಂಬುದು ಪ್ರಸಿದ್ಧವೇ. ಹೀಗೆ ಇದು ಆಧಿದೈವತವಾದ ಮೂರ್ತಾಮೂರ್ತಗಳ ನಿರೂಪಣೆ.

**ಭಾಷ್ಯ—'ಮಂಡಲೇ ಪುರುಷಃ' ಇತಿ ಭಗವಾನ್ ವಿಷ್ಣುಃ ।**

**ಅನುವಾದ**—ಮಂಡಲೇ ಪುರುಷಃ ಎಂದು ಉಪನಿಷತ್ತಿನಲ್ಲಿ ಉಕ್ತನಾದವನು ಭಗವಂತನಾದ ವಿಷ್ಣು.

**ಉಪನಿಷತ್—ಅಥಾಧ್ಯಾತ್ಮಂ। ಇದಮೇವ ಮೂರ್ತಂ ಯದನ್ಯತ್ ಪ್ರಾಣಾಚ್ಚ ಯಶ್ಚಾಯಮಂತರಾತ್ಮನ್ನಾಕಾಶಃ। ಏತನ್ಮರ್ತ್ಯಂ। ಏತತ್ ಸ್ಥಿತಂ। ಏತತ್ ಸತ್ । ತಸ್ಯೈತಸ್ಯ ಮೂರ್ತಸ್ಯೈತಸ್ಯ ಮರ್ತ್ಯಸ್ಯೈತಸ್ಯ ಸ್ಥಿತಸ್ಯೈತಸ್ಯ ಸತ ಏಷ ರಸೋ ಯಚ್ಚಕ್ಷುಃ । ಸತೋ ಹ್ಯೇಷ ರಸಃ ।**

ಆಧಿದೈವತನಿರೂಪಣೆಯ ನಂತರ ಈಗ ಅಧ್ಯಾತ್ಮನಿರೂಪಣೆ. ಶರೀರದಲ್ಲಿರುವ ಪ್ರಾಣಕ್ಕಿಂತಲೂ, ಆತ್ಮನ ಒಳಗಿರುವ ಆಕಾಶಾಭಿಮಾನಿ ಶ್ರೀತತ್ತ್ವಕ್ಕಿಂತಲೂ ಅನ್ಯವಾದುದೇ ಶರೀರದಲ್ಲಿ ಮೂರ್ತ. ಇದೇ ಮರ್ತ್ಯ. ಇದೇ ಸ್ಥಿತ. ಇದೇ ಸತ್. ಚಕ್ಷುಸ್ಸಿನಲ್ಲಿರುವ ವಿರಿಂಚನು ಮೂರ್ತ, ಮರ್ತ್ಯ, ಸ್ಥಿತ ಮತ್ತು ಸತ್ ಎನಿಸಿರುವ ಪ್ರಪಂಚದಲ್ಲೆಲ್ಲ ಶ್ರೇಷ್ಠನೆನಿಸಿರುವನು. ಇದು ಪ್ರಸಿದ್ಧ.

**ಉಪನಿಷತ್—ಅಥಾಮೂರ್ತಂ। ಪ್ರಾಣಶ್ಚ ಯಶ್ಚಾಯಮಂತರಾತ್ಮನ್ನಾಕಾಶಃ। ಏತದಮೃತಂ। ಏತದ್ ಯತ್ । ಏತತ್ ತ್ಯಂ । ತಸ್ಯೈತಸ್ಯಾಮೂರ್ತಸ್ಯೈತಸ್ಯಾಮೃತಸ್ಯೈತಸ್ಯ ಯತ ಏತಸ್ಯ ತ್ಯಸ್ಯೈಷ ರಸೋ ಯೋಽಯಂ ದಕ್ಷಿಣೇಽಕ್ಷನ್ ಪುರುಷಃ । ತಸ್ಯ ಹ್ಯೇಷ ರಸಃ ।**

ಇನ್ನು ಮುಂದೆ ಅಮೂರ್ತದ ನಿರೂಪಣೆ. ಶರೀರದಲ್ಲಿರುವ ಪ್ರಾಣನೂ, ಆತ್ಮನ ಒಳಗಿರುವ ಆಕಾಶಕ್ಕೆ ಅಭಿಮಾನಿಯಾದ ಲಕ್ಷ್ಮಿಯೂ ಅಮೂರ್ತರು. ಇವರೇ 'ಅಮೃತ', 'ಯತ್', 'ತ್ಯ' ಎಂದೆನಿಸಿರುವರು. ಬಲಗಣ್ಣಿನಲ್ಲಿರುವ ಪರಮಾತ್ಮರೂಪ

ನಾದ ಶ್ರೀಹರಿಯು 'ಅಮೂರ್ತ', 'ಅಮೃತ', 'ಯತ್' ಮತ್ತು 'ತ್ಯ' ಎನಿಸಿರುವ ಈ ಪ್ರಾಣ ಲಕ್ಷ್ಮಿಯರಿಗಿಂತ ಶ್ರೇಷ್ಠ. ಇದು ಪ್ರಸಿದ್ಧ.

**ಭಾಷ್ಯ—ಏವಮೇವ ಚಕ್ಷುಃ, ದಕ್ಷಿಣೇಽಕ್ಷನ್ ಪುರುಷಶ್ಚ ।**

**ಅನುವಾದ**—ಹೀಗೆಯೇ ಚಕ್ಷುಸ್ ಎಂದರೆ ಬ್ರಹ್ಮನೆಂದೂ, ಬಲಗಣ್ಣಿನಲ್ಲಿರುವ ಪುರುಷನೆಂದರೆ ವಿಷ್ಣುವೆಂದೂ ತಿಳಿಯಬೇಕು.

**ಭಗವಂತನ ರೂಪ ವೈವಿಧ್ಯ :**

**ಉಪನಿಷತ್—ತಸ್ಯ ಹೈತಸ್ಯ ಪುರುಷಸ್ಯ ರೂಪಂ ಯಥಾ ಮಹಾರಜನಂ ವಾಸಃ । ಯಥಾ ಪಾಂಡ್ವಾವಿಕಂ । ಯಥೇಂದ್ರಗೋಪಃ । ಯಥಾಽಗ್ನ್ಯರ್ಚಿಃ । ಯಥಾ ಪುಂಡರೀಕಂ । ಯಥಾ ಸಕೃದ್ವಿದ್ಯುತ್ತಂ । ಸಕೃದ್ವಿದ್ಯುತ್ತೇವ ಹ ವಾ ಅಸ್ಯ ಶ್ರೀರ್ಭವತಿ ಯ ಏವಂ ವೇದ । ಅಥಾತ ಆದೇಶೋ ನೇತಿ ನೇತಿ । ನ ಹ್ಯೇತಸ್ಮಾದಿತಿ ನೇತ್ಯನ್ಯತ್ ಪರಮಸ್ತಿ । ಅಥ ನಾಮಧೇಯಂ ಸತ್ಯಸ್ಯ ಸತ್ಯಮಿತಿ । ಪ್ರಾಣಾ ವೈ ಸತ್ಯಂ । ತೇಷಾಮೇಷ ಸತ್ಯಮ್ ।**

**ಇತಿ ಮೂರ್ತಾಮೂರ್ತ ಬ್ರಾಹ್ಮಣಮ್ ।**

ಈ ಶ್ರೀಹರಿಯ ರೂಪವು ಕೆಂಪು ಬಣ್ಣದ ವಸ್ತ್ರದಂತೆ, ಬಿಳಿಯ ಉಣ್ಣೆರಾಶಿನಂತೆ, ಇಂದ್ರಗೋಪ ಎಂಬ ಹುಳುವಿನಂತೆ, ಅಗ್ನಿಯ ಜ್ವಾಲೆಯಂತೆ, ಬಿಳಿಯ ತಾವರೆಯಂತೆ ಮತ್ತು ಒಮ್ಮೆಲೇ ಮಿಂಚಿದ ಮಿಂಚುಗಳ ಸಮೂಹದಂತೆ ಅನೇಕ ವಿಧವಾಗಿದೆ. ಯಾರು ಶ್ರೀಹರಿಯ ರೂಪವನ್ನು ಹೀಗೆ ತಿಳಿಯುತ್ತಾನೆಯೋ ಅವನ ಸಂಪತ್ತು, ಕೀರ್ತಿ ಮೊದಲಾದವು ಒಮ್ಮೆಲೆ ಮಿಂಚಿದ ಮಿಂಚುಗಳ ಸಮೂಹದಂತೆ ಪ್ರಕಾಶಿಸುತ್ತವೆ. ಇದು ನಿಶ್ಚಯ. ಹೀಗೆ ಮೂರ್ತಾಮೂರ್ತಸ್ವರೂಪವನ್ನು ಹೇಳಿದ ನಂತರ, ಶ್ರೀಹರಿಯು ಅಮೂರ್ತಕ್ಕಿಂತಲೂ ಶ್ರೇಷ್ಠನಾದುದರಿಂದ, ಅವನ ಬಗ್ಗೆ ಉಪದೇಶವನ್ನು ನೀಡುತ್ತೇವೆ— ಮೂರ್ತದಂತೆಯೂ ಅಲ್ಲ, ಅಮೂರ್ತದಂತೆಯೂ ಅಲ್ಲ ಎಂದು. ಹೀಗೆ ಮೂರ್ತಾಮೂರ್ತವಿಲಕ್ಷಣವಾದ ವಸ್ತುವು ಶ್ರೀಹರಿಗಿಂತ ಭಿನ್ನವಾದುದು ಯಾವುದೂ ಇಲ್ಲ. ಇವನಿಗಿಂತ ಉತ್ತಮವಾದ ವಸ್ತುವು ಇನ್ನೊಂದು ಇಲ್ಲ. ಇನ್ನು ಈ ಶ್ರೀಹರಿಯ ನಾಮಧೇಯ. ಇವನಿಗೆ ಸತ್ಯಸ್ಯ ಸತ್ಯಂ ಎಂದು ಹೆಸರಿದೆ. ಮೂರ್ತಾಮೂರ್ತಗಳು ಸತ್ಯ. ಶ್ರೀಹರಿಯು ಅವುಗಳಿಗೆ ಸತ್ಯತ್ವ ಪ್ರದ. ಆದ್ದರಿಂದ ಅವನಿಗೆ ಸತ್ಯಸ್ಯ ಸತ್ಯಂ ಎಂದು ಹೆಸರು.

**ನೇತಿ ನೇತಿ ಶ್ರುತಿಯ ಅರ್ಥ :**

**ಭಾಷ್ಯ—ತಸ್ಯೈವಾಮೂರ್ತರಸಸ್ಯ ಭಗವತೋ ನೇತಿ ನೇತೀತ್ಯಾದೇಶಃ । ಅತಃ**

**ತಸ್ಮಾದಮೂರ್ತಸಾರತ್ವಾದಿತ್ಯರ್ಥಃ । ಅಥೇತ್ಯಾನಂತರ್ಯಾರ್ಥೇ । ಇತಿ ನ ಇತಿ ನೇತಿ ಮೂರ್ತಾಮೂರ್ತ ವಿಲಕ್ಷಣ ಇತ್ಯರ್ಥಃ । ಉಭಯ ಸಾದೃಶ್ಯ ನಿಷೇಧಾರ್ಥಂ ದ್ವಿವಾರವಮ್ । ಇತಿ ನೇತಿ ನಿಷಿಧ್ಯಮಾನಮಸ್ಯೇತಸ್ಮಾ-ದನ್ಯತ್ ಪರಂ ನಾಸ್ತಿ । ಏಷ ಏವ ಪರಃ । ಮೂರ್ತಾಮೂರ್ತಂ ತ್ವ-ಪರಮೇನ್ಯೈತದಪೇಕ್ಷಯಾ । ಮೂರ್ತಾಮೂರ್ತಮೇವಾಧ್ಯಾತ್ಮಂ ಪ್ರಾಣಾ ಇತ್ಯುಚ್ಯಂತೇ । ಬ್ರಹ್ಮಣೋ ವಾಯೋಶ್ಚಾಮೂರ್ತತ್ವಾತ್ ।**

**ಅನುವಾದ**—'ಮೂರ್ತದಂತೆಯೂ ಅಲ್ಲ, ಅಮೂರ್ತದಂತೆಯೂ ಅಲ್ಲ' ಎಂದು ಉಪನಿಷತ್ತಿನಲ್ಲಿರುವ ಉಪದೇಶವು ಅಮೂರ್ತಕ್ಕಿಂತಲೂ ಶ್ರೇಷ್ಠನಾದ ಆ ಭಗವಾನ್ ಶ್ರೀಹರಿಯೊಬ್ಬನನ್ನೇ ಕುರಿತಾಗಿದೆ ಹೊರತು ಬ್ರಹ್ಮವಿಷ್ಣುಗಳಿಬ್ಬ ರನ್ನಲ್ಲ. ಅಥಾತಃ ಎಂಬಲ್ಲಿನ ಅತಃ ಶಬ್ದಕ್ಕೆ, ಅಮೂರ್ತಕ್ಕಿಂತಲೂ ಶ್ರೇಷ್ಠನಾದ ಕಾರಣದಿಂದ ಎಂದು ಅರ್ಥ. ಅಮೂರ್ತಕ್ಕಿಂತಲೂ ಶ್ರೇಷ್ಠನು ಶ್ರೀಹರಿಯೇ ಹೊರತು ಬ್ರಹ್ಮನಲ್ಲ. ಆದ್ದರಿಂದ ಇದು ಅವನ ಉಪದೇಶವಲ್ಲ. ಇದು ಅಮೂರ್ತ ಕ್ಕಿಂತ ಶ್ರೇಷ್ಠನಾದ ಭಗವಂತನ ಉಪದೇಶವಾದರೆ ಈ ಪ್ರಕರಣವು ಇನ್ನೂ ಮುಗಿ ಯದೇ ಇರುವುದರಿಂದ, ಇನ್ನೊಂದು ಪ್ರಕರಣದಲ್ಲಿ ಆರಂಭದಲ್ಲಿ ಕಂಡುಬರುವ ಅಥ ಶಬ್ದವು ಇಲ್ಲಿ ಹೇಗೆ ಯುಕ್ತ ಎಂದರೆ, ಇಲ್ಲಿ ಅಥ ಶಬ್ದವು ಆನಂತರ್ಯವನ್ನು ಹೇಳು ತ್ತದೆ. ಪ್ರಕರಣಾಂತರದ ಆರಂಭವನ್ನಲ್ಲ. ಮೂರ್ತಾಮೂರ್ತಸ್ವರೂಪವನ್ನು ನಿರೂಪಣೆ ಮಾಡಿದ ನಂತರ ಎಂದು ಅರ್ಥ. ಅಥ ಶಬ್ದಕ್ಕೆ ಆನಂತರ್ಯ, ಆರಂಭ ಮೊದಲಾದ ಅನೇಕ ಅರ್ಥಗಳು ಇರುವುದರಿಂದ ಇದು ಯುಕ್ತವಾಗುತ್ತದೆ. ನೇತಿನೇತಿ ಎಂಬಲ್ಲಿ ಇತಿ ಎಂಬುದು ಹೀಗೆ ಉಪದೇಶ ಎಂದು ಉಪದೇಶದ ಪ್ರಕಾರವನ್ನು ಹೇಳು ವುದಾದರೆ ಒಂದು ಇತಿ ಶಬ್ದವು ಸಾಕು. ಇನ್ನೊಂದು ವ್ಯರ್ಥ. ಆದ್ದರಿಂದ ನ ಇತಿ ನ ಇತಿ ಎಂದು ಯೋಜನೆ ಮಾಡದೇ ಇತಿ ನ ಇತಿ ನ ಎಂದು ಯೋಜನೆ ಮಾಡ ಬೇಕು. 'ಭಗವಂತನು ಮೂರ್ತವೂ ಅಲ್ಲ,ಅಮೂರ್ತವೂ ಅಲ್ಲ' ಎಂದು ಅರ್ಥ. ಮೂರ್ತ ಅಮೂರ್ತಗಳೆರಡರ ಸಾದೃಶ್ಯಗಳನ್ನು ನಿಷೇಧಿಸುವುದೇ 'ನೇತಿ' 'ನೇತಿ' ಎಂಬ ದ್ವಿರುಕ್ತಿಯ ಪ್ರಯೋಜನ. ಮೂರ್ತವು ಅಮೂರ್ತಕ್ಕಿಂತಲೂ, ಅಮೂರ್ತವು ಮೂರ್ತಕ್ಕಿಂತಲೂ ವಿಲಕ್ಷಣವಾಗಿದ್ದು 'ಇತಿ ನ' ಎಂದು ನಿಷೇಧಿಸ ಲ್ಪಡುವ ವಸ್ತುಗಳು ಸ್ವಯಂ ಮೂರ್ತ ಅಮೂರ್ತಗಳೇ ಇದ್ದರೂ ಹಾಗೆ ನಿಷೇಧಿಸ ಲ್ಪಡುವ ವಸ್ತು ಯಾವುದೂ ಶ್ರೀಹರಿಯನ್ನು ಬಿಟ್ಟು ಶ್ರೀಹರಿಗಿಂತ ಉತ್ತಮವಾದುದು ಇಲ್ಲ. ಹಾಗೆಯೇ ಮೂರ್ತಾಮೂರ್ತಗಳು ಶ್ರೀಹರಿಗಿಂತ ವಿಲಕ್ಷಣವಾಗಿರುವುದರಿಂದ 'ಇತಿ ನ' ಎಂದು ನಿಷೇಧಿಸಲ್ಪಡುವ ವಸ್ತುಗಳು ಮೂರ್ತಾಮೂರ್ತಗಳೇ ಆಗಿದ್ದರೂ ಅವು ವಿಷ್ಣುವಿಗಿಂತ ಉತ್ತಮವಾಗಿಲ್ಲ. ಅಸ್ವತಂತ್ರವಾದ ಮೂರ್ತಾಮೂರ್ತಗಳಿ ಗಿಂತ ಶ್ರೀಹರಿ ವಿಲಕ್ಷಣನೆಂದರೆ ಶ್ರೀಹರಿ ಸ್ವತಂತ್ರನಾಗುವುದರಿಂದ, ಶ್ರೀಹರಿಯೇ

ಉತ್ತಮವೆಂದು ಹೇಳಿದಂತಾಗುತ್ತದೆ. ಮೂರ್ತಾಮೂರ್ತಗಳು ಸ್ವತಂತ್ರನಾದ ಶ್ರೀಹರಿಗಿಂತ ವಿಲಕ್ಷಣಗಳೆಂದರೆ ಅವು ಅಸ್ವತಂತ್ರವೆಂದಾಗುವುದರಿಂದ ಉತ್ತಮವಲ್ಲವೆಂದೇ ಹೇಳಿದಂತಾಗುತ್ತದೆ. ಶ್ರೀಹರಿಯ ಸತ್ಯಸ್ಯ ಸತ್ಯ ಎಂಬ ನಾಮವನ್ನು 'ಮೂರ್ತಾಮೂರ್ತಂ ಸತ್ಯಂ ತಯೋರೇಷ ಸತ್ಯಃ' ಎಂದು ವ್ಯಾಖ್ಯಾನ ಮಾಡಬೇಕಾಗಿದ್ದಿತು. ಅದನ್ನು ಬಿಟ್ಟು 'ಪ್ರಾಣಾ ವೈ ಸತ್ಯಂ' ಎಂದು ಉಪನಿಷತ್ತು ಏಕೆ ಅಸಂಗತವಾಗಿ ವ್ಯಾಖ್ಯಾನ ಮಾಡಿದೆ ಎಂಬ ಶಂಕೆ ಯುಕ್ತವಲ್ಲ. ದೇಹದಲ್ಲಿರುವ ಮೂರ್ತಾಮೂರ್ತಗಳಿಗೇ ಪ್ರಾಣಗಳು ಎಂದು ಹೆಸರು. ಆದ್ದರಿಂದ ಪ್ರಾಣಾ ವೈ ಸತ್ಯಂ ಎಂದು ವ್ಯಾಖ್ಯಾನ ಮಾಡಿರುವುದರಲ್ಲಿ ಯಾವ ಅಸಂಗತಿಯೂ ಇಲ್ಲ. 'ಹೀಗೆ ವ್ಯಾಖ್ಯಾನ ಮಾಡಿದುದರಿಂದ ಶ್ರೀಹರಿಯು ಮೂರ್ತಾಮೂರ್ತ ಸತ್ಯತ್ವಪ್ರದ ಎಂಬ ಅರ್ಥವು ಲಭಿಸಲಿಲ್ಲ. ಬ್ರಹ್ಮನು ಮೂರ್ತಸಾರನಾದುದರಿಂದ ಮೂರ್ತಾಮೂರ್ತಾತ್ಮಕನಲ್ಲ' ಎಂಬ ಶಂಕೆಯೂ ಸರಿಯಲ್ಲ. ವಾಯುವು ಹೇಗೆ ಅಮೂರ್ತನೋ ಹಾಗೆಯೇ ವಾಯುವಿಗೆ ಸಮಾನನಾದುದರಿಂದ ಬ್ರಹ್ಮನೂ ಅಮೂರ್ತನು. ಆದ್ದರಿಂದ ಬ್ರಹ್ಮನು ಮೂರ್ತಸಾರನಾದರೂ ಅಮೂರ್ತನೇ ಆದುದರಿಂದ ಅವನಿಗೆ ಸತ್ಯತ್ವವನ್ನು ಕೊಡುವವನು ಶ್ರೀಹರಿ ಎಂಬ ಮಹಿಮೆ ಸಿದ್ಧವಾಗುತ್ತದೆ.

**ಭಾಷ್ಯ—ಮೂರ್ತಾಮೂರ್ತಮಿದಂ ರೂಪಂ ಬ್ರಹ್ಮಣಃ ಪ್ರತಿಮಾತ್ಮಕಮ್ ।**
**ನೈವ ಸ್ವರೂಪಮೇತತ್ ಸ್ಯಾತ್ ತದ್ಧಿ ಸರ್ವಪರಂ ಸದಾ ।**
**ಶ್ರಿಯೋ ವಾಯೋರ್ವಿರಿಂಚಾಚ್ಚ ಯೇಽನ್ಯೇ ಮೂರ್ತಾ ಹಿ ತೇ ಸ್ಮೃತಾಃ ।**
**ಮೂರಂ ಪಾಪಂ ಹಿ ತೇನಾಽಪ್ತಂ ಮೂರ್ತಮಿತ್ಯಭಿಧೀಯತೇ ।**
**ವಿಶೀರ್ಣಂ ಚಾವಸನ್ನಂ ಚ ತದೇವಾತಃ ಸಮುಚ್ಯತೇ ।**
**ಪರಾಧೀನಗತಿತ್ವಾಚ್ಚ ಸ್ಥಿತಮಿತ್ಯಭಿಧೀಯತೇ ।**
**ತಸ್ಯ ಸಾರೋ ವಿರಿಂಚಸ್ತು ತದ್ವಿರುದ್ಧ ಸ್ವಭಾವಕಃ ।**
**ಮೂರ್ತಾದ್ ವಿರುದ್ಧರೂಪತ್ವಾತ್ ಶ್ರೀರ್ವಾಯುಶ್ಚಾಪ್ಯಮೂರ್ತಕೌ**
**ಸರ್ವಜ್ಞೌ ಚ ತತೌ ಚೈವ ನಿಯತೌ ಹರಿಣೈವ ತೌ ।**
**ತಯೋಃ ಸಾರಸ್ತು ಭಗವಾನ್ ಹರಿರ್ನಾರಾಯಣಃ ಪರಃ ।**

**ಅನುವಾದ**—'ಮೂರ್ತಾಮೂರ್ತಕವಾದ ಈ ಜಗತ್ತು ಶ್ರೀಹರಿಯ ರೂಪವೆಂದರೆ ಸ್ವರೂಪವಲ್ಲ, ಪ್ರತಿಮಾರೂಪವಾದುದು ಎಂದರ್ಥ. ಏಕೆಂದರೆ ಅವನು ಯಾವಾಗಲೂ ಸರ್ವೋತ್ತಮ. ಲಕ್ಷ್ಮೀ, ವಾಯು ಮತ್ತು ವಿರಿಂಚರನ್ನು ಬಿಟ್ಟು ಉಳಿದವರು ಎಲ್ಲರೂ ಮೂರ್ತರೆನಿಸುತ್ತಾರೆ. ಮೂರ ಎಂದರೆ ಪಾಪ. ಅದು ಅವರಿಂದ ಆಪ್ತ ಎಂದರೆ ಪ್ರಾಪ್ತ. ಆದುದರಿಂದ ಅವರು ಮೂರ್ತರೆನಿಸುತ್ತಾರೆ.

ಮೂರ್ತರಾದವರು ಅವ್ಯಾಪಕರೂ, ಪ್ರಳಯದಲ್ಲಿ ನಾಶಹೊಂದುವವರೂ ಆದುದ ರಿಂದ ಸತ್ ಎಂದು ಕರೆಯಲ್ಪಡುತ್ತಾರೆ. ವಿಷ್ಣುವ್ಯತಿರಿಕ್ತರಾದವರ ಅಧೀನರಾಗಿರು ವುದರಿಂದ ಸ್ಥಿತ ಎಂದೂ ಕರೆಯಲ್ಪಡುತ್ತಾರೆ. ಮೂರ್ತಕ್ಕಿಂತ ವಿಲಕ್ಷಣವಾದ ಸ್ವಭಾವವುಳ್ಳ ವಿರಿಂಚನು ಮೂರ್ತಕ್ಕಿಂತ ಶ್ರೇಷ್ಠನಾಗಿದ್ದು ಮೂರ್ತಸಾರನೆನಿಸು ತ್ತಾನೆ. ಮೂರ್ತಕ್ಕಿಂತ ವಿಲಕ್ಷಣವಾದ ಸ್ವರೂಪ ಹೊಂದಿರುವುದರಿಂದ ಲಕ್ಷ್ಮೀ ಮತ್ತು ವಾಯು ಇವರು ಅಮೂರ್ತರೆನಿಸುತ್ತಾರೆ. ಅವರು ಸರ್ವಜ್ಞರೂ ವ್ಯಾಪ್ತರೂ ಆಗಿರುವುದರಿಂದ 'ತ್ಯ' ಎನಿಸುತ್ತಾರೆ. ಮತ್ತು ಶ್ರೀಹರಿಗೆ ಮಾತ್ರ ವಶ ರಾಗಿದ್ದು, ಬೇರೆ ಯಾರಿಗೂ ವಶರಲ್ಲದಿರುವುದರಿಂದ 'ಯತ್' ಎನಿಸುತ್ತಾರೆ. ಅಧಿ ದೈವದಲ್ಲಿಯೂ, ಅಧ್ಯಾತ್ಮದಲ್ಲಿಯೂ ಸರ್ವೋತ್ತಮನಾದ ನಾರಾಯಣನೇ ಅವರಿಗಿಂತ ಶ್ರೇಷ್ಠನಾಗಿದ್ದು ಅಮೂರ್ತಸಾರನೆನಿಸುತ್ತಾನೆ.

**ಭಾಷ್ಯ—ಆದಿತ್ಯ ಮಂಡಲೇ ಚೈವ ಚಕ್ಷುಷ್ಯಪಿ ಚ ಸುಸ್ಥಿತಃ ।**
**ತತ್ರೈವ ಸಂಸ್ಥಿತೋ ಬ್ರಹ್ಮಾ ಮೂರ್ತಸಾರೋಽಪಿ ತಸ್ಯ ಚ ।**
**ವಿಷ್ಣುರೇವ ಪರಃ ಸಾರಃ ತಸ್ಯ ರೂಪಾಣ್ಯನೇಕಧಾ ।**
**ಮಹಾರಜನ ವಾಸೋವತ್ ಪಾಂಡ್ವಾವಿಕವದೇವ ಚ ।**
**ವಿದ್ಯುತ್ಪದ್ಮೇಂದ್ರಗೋಪಾದಿವಹ್ನಿವತ್ ಸುಖಭಾಸ್ವರಃ ।**
**ನೈವಾಸೌ ಮೂರ್ತವದ್ ವಿಷ್ಣುರ್ನ ಚ ಮೂರ್ತರಸೋಪಮಃ ।**
**ನ ಚಾಮೂರ್ತೋಪಮೋ ದೇವಃ ಸ ಏವ ಪರಮಃ ಸದಾ ।**
**ತಸ್ಮಾನ್ಯದಪರಂ ಸರ್ವಂ ಸತ್ಯಸತ್ಯಃ ಸ ಏಕರಾಟ್ ।**
**ಮೂರ್ತಾಮೂರ್ತಾತ್ಮಕಾಃ ಪ್ರಾಣಾಸ್ತೇಷಾಂ ಸತ್ಯಃ ಸ ಏವ ಹಿ ।**
**ಇತಿ ನಾರಾಯಣಶ್ರುತೌ ।**

**ಪ್ರಥಮನಿಷೇಧೇನೈವ ಮೂರ್ತರಸಸಾದೃಶ್ಯಮಪಿ ನಿಷಿದ್ಧಮ್ ।**

**ಅನುವಾದ**—ಆದಿತ್ಯಮಂಡಲದಲ್ಲಿಯೂ, ದಕ್ಷಿಣಾಕ್ಷಿಯಲ್ಲಿಯೂ ಶ್ರೀಹರಿಯು ಇದ್ದಾನೆ. ಮೂರ್ತಗಳಿಗಿಂತ ಶ್ರೇಷ್ಠನಾದ ಬ್ರಹ್ಮನೂ ಅಲ್ಲಿಯೇ ಇದ್ದಾನೆ. ವಿಷ್ಣುವು ಅವನಿಗೂ ಶ್ರೇಷ್ಠನಾಗಿದ್ದಾನೆ. ವಿಷ್ಣುವಿನ ರೂಪಗಳು ಕೆಂಪು ವಸ್ತ್ರದಂತೆ, ಬಿಳಿಯ ಉಣ್ಣೆ ಬಟ್ಟೆಯಂತೆ, ಮಿಂಚಿನಂತೆ, ಪದ್ಮದಂತೆ, ಇಂದ್ರಗೋಪದಂತೆ, ಬೆಂಕಿ ಯಂತೆ ಎಂದು ಮುಂತಾಗಿ ಅನೇಕ ವಿಧವಾಗಿದ್ದು ಎಲ್ಲವು ಆನಂದ ಮತ್ತು ಜ್ಞಾನ ರೂಪವಾಗಿವೆ. ವಿಷ್ಣುವು ಮೂರ್ತರಂತೆಯೂ ಅಲ್ಲ, ಮೂರ್ತರಿಗಿಂತ ಶ್ರೇಷ್ಠನಾದ ಬ್ರಹ್ಮನಂತೆಯೂ ಅಲ್ಲ, ಅಮೂರ್ತರಂತೆಯೂ ಅಲ್ಲ. ಅವರೆಲ್ಲರೂ ಅಸ್ವತಂತ್ರರು. ಸ್ವತಂತ್ರನಾದ ವಿಷ್ಣುವೇ ಯಾವಾಗಲೂ ಸರ್ವೋತ್ತಮ. ಉಳಿದವರೆಲ್ಲರೂ ಅವನಿ ಗಿಂತ ಕಡಿಮೆಯವರು. ಏಕಾಧಿಪತಿಯಾದ ಅವನೇ ಸತ್ಯಸತ್ಯ. ಏಕೆಂದರೆ

ಮೂರ್ತಾಮೂರ್ತರೂಪವಾದ ಪ್ರಾಣಿಗಳೇ ಸತ್ಯ. ಅವುಗಳಿಗೆ 'ಇವನು ಸತ್ಯತ್ವಪ್ರದ' ಎಂದು ನಾರಾಯಣಶ್ರುತಿಯಲ್ಲಿ ಹೇಳಿದೆ.

ಪ್ರೀವರಿಯಲ್ಲಿ ಮೂರ್ತ, ಮೂರ್ತಕ್ಕಿಂತ ಶ್ರೇಷ್ಠ ಮತ್ತು ಅಮೂರ್ತ ಇವು ಮೂವರ ಸಾದೃಶ್ಯವನ್ನು ನಿಷೇಧ ಮಾಡಬೇಕಾಗಿದ್ದರೂ ಶ್ರುತಿಯಲ್ಲಿ ಮೂರು ಸಲ ನೇತಿ ಎಂದು ಇಲ್ಲ ಏಕೆಂದರೆ, ಮೂರ್ತವನ್ನು ಹೇಳುವ ಇತಿ ಎಂಬ ಶಬ್ದದಿಂದಲೇ ಮೂರ್ತಕ್ಕಿಂತ ಶ್ರೇಷ್ಠವನ್ನೂ ಸಹ ಹೇಳುವುದು ವಿವಕ್ಷಿತವಾದುದರಿಂದ ಮೊದಲನೆಯ ನೇತಿ ಎಂಬ ನಿಷೇಧದಿಂದಲೇ ಮೂರ್ತಕ್ಕಿಂತ ಶ್ರೇಷ್ಠದ ಸಾದೃಶ್ಯವೂ ಇಲ್ಲವೆಂದಾಗುತ್ತದೆ. ಇನ್ನೊಂದು ಸಲ ನೇತಿ ಎಂದು ಹೇಳಬೇಕಾದ ಅವಶ್ಯಕತೆ ಇಲ್ಲ.

**ಮೈತ್ರೇಯಿಯ ಅಧ್ಯಾತ್ಮ ನಿಷ್ಠೆ :**

ಉಪನಿಷತ್—**ಮೈತ್ರೇಯೀತಿ ಹೋವಾಚ ಯಾಜ್ಞವಲ್ಕ್ಯಃ । ಉದ್ಯಾಸನ್ ವಾ ಅರೇ ಅಹಮಸ್ಮಾತ್ ಸ್ಥಾನಾದಸ್ಮಿ ।ಹಂತ ತೇಽನಯಾ ಕಾತ್ಯಾಯನ್ಯಾಽಂತಂ ಕರವಾಣೀತಿ ।**

ಯಾಜ್ಞವಲ್ಕ್ಯರಿಗೆ ಇಬ್ಬರು ಪತ್ನಿಯರು ಮೈತ್ರೇಯೀ ಮತ್ತು ಕಾತ್ಯಾಯನೀ ಎಂದು. ಅವರಲ್ಲಿ ಮೈತ್ರೇಯಿಯನ್ನು ಕುರಿತು 'ಮೈತ್ರೇಯಿ, ನಾನು ಗೃಹಸ್ಥಾಶ್ರಮವನ್ನು ಬಿಟ್ಟು ಸಂನ್ಯಾಸವನ್ನು ತೆಗೆದುಕೊಳ್ಳುವವನಿದ್ದೇನೆ. ನಿನಗೂ ಕಾತ್ಯಾಯನಿಗೂ ಆಸ್ತಿಯನ್ನು ವಿಭಾಗ ಮಾಡುತ್ತೇನೆ. ಇದು ಸಂತೋಷದ ವಿಷಯ'ಎಂದು ಹೇಳಿದರು.

ಉಪನಿಷತ್—**ಸಾ ಹೋವಾಚ ಮೈತ್ರೇಯೀ । ಯನ್ನು ಮ ಇಯಂ ಭಗೋಃ ಸರ್ವಾ ಪೃಥಿವೀ ವಿತ್ತೇನ ಪೂರ್ಣಾ ಸ್ಯಾತ್ ಕಥಂ ತೇನಾಮೃತಾ ಸ್ಯಾಮಿತಿ । ನೇತಿ ಹೋವಾಚ ಯಾಜ್ಞವಲ್ಕ್ಯಃ । ಯಥೈವೋಪಕರಣವತಾಂ ಜೀವಿತಂ ತಥೈವ ತೇ ಜೀವಿತಂ ಸ್ಯಾತ್।ಅಮೃತತ್ವಸ್ಯ ನಾಽಶಾಽಸ್ತಿ ವಿತ್ತೇನೇತಿ ।**

ಮೈತ್ರೇಯಿಯು ಆಶ್ಚರ್ಯದಿಂದ ಹೇಳಿದಳು. 'ಪೂಜ್ಯರೇ ಈ ಪೃಥಿವಿಯು ಸರ್ವಐಶ್ವರ್ಯದಿಂದ ಪೂರ್ಣವಾಗಿ ನನ್ನ ವಶವಾದರೂ ಅದರಿಂದ ನಾನು ಮೋಕ್ಷವನ್ನು ಪಡೆಯಲಾದೀತೆ?' ಎಂದು. ಯಾಜ್ಞವಲ್ಕ್ಯರು 'ಇಲ್ಲ' ಎಂದರು. 'ಲೋಕದಲ್ಲಿ ಸಂಪತ್ತು ಮನೆ ಉದ್ಯಾನ ಮಂಚ ಹಾಸಿಗೆ ಮೊದಲಾದ ಭೋಗಸಾಧನ ಉಳ್ಳವರಿಗೆ ಹೇಗೆ ಸುಖಜೀವನ ಲಭಿಸುವುದೋ ಹಾಗೆಯೇ ನಿನಗೂ ಸುಖಜೀವನ ಮಾತ್ರ ಲಭಿಸೀತು ಹೊರತು ಈ ಐಶ್ವರ್ಯದಿಂದ ಎಂದಿಗೂ ಮೋಕ್ಷವನ್ನು ಪಡೆಯುವ ಆಸೆಯೇ ಸಲ್ಲದು' ಎಂದು ಹೇಳಿದರು.

**ಉಪನಿಷತ್—ಸಾ ಹೋವಾಚ ಮೈತ್ರೇಯಿ। 'ಯೇನಾಹಂ ನಾಮೃತಾ ಸ್ಯಾಂ ಕಿಮಹಂ ತೇನ ಕುರ್ಯಾಂ ? । ಯದೇವ ಭಗವಾನ್ ವೇದ ತದೇವ ಮೇ ಬ್ರೂಹಿ' ಇತಿ ।**

ಆಗ ಆ ಮೈತ್ರೇಯಿಯು 'ಯಾವುದರಿಂದ ನಾನು ಮೋಕ್ಷವನ್ನು ಪಡೆಯಲು ಸಾಧ್ಯವಿಲ್ಲವೋ ಅದರಿಂದ ನಾನು ಏನು ಮಾಡಲಿ ? ಆದ್ದರಿಂದ ಪೂಜ್ಯರು ಯಾವುದನ್ನು ಮೋಕ್ಷಸಾಧನವೆಂದು ತಿಳಿದಿದ್ದೀರೋ ಅದನ್ನೇ ನನಗೆ ಹೇಳಿರಿ' ಎಂದು ಹೇಳಿದಳು.

**ಉಪನಿಷತ್—ಸ ಹೋವಾಚ ಯಾಜ್ಞವಲ್ಕ್ಯಃ । 'ಪ್ರಿಯಾ ಬತಾರೇ ನಃ ಸತೀ ಪ್ರಿಯಂ ಭಾಷಸೇ । ಏಹಿ, ಆಸ್ವ । ವ್ಯಾಖ್ಯಾಸ್ಯಾಮಿ ತೇ। ವ್ಯಾಚಕ್ಷಾಣಸ್ಯ ತು ಮೇ ನಿದಿಧ್ಯಾಸಸ್ವ' ಇತಿ । 'ಬ್ರವೀತು ಭಗವಾನ್' ಇತಿ ।**

ಯಾಜ್ಞವಲ್ಕ್ಯರು ಹೇಳಿದರು 'ನೀನು ಪತಿವ್ರತೆ. ನನಗೆ ಪ್ರೀತಿ ಪಾತ್ರಳು. ನನಗೆ ಸಂತೋಷವಾಗುವ ರೀತಿಯಲ್ಲಿ ಮಾತನಾಡುತ್ತಿದ್ದೀಯೆ. ಬಾ ಕುಳಿತುಕೋ, ನಿನಗೆ ಉಪದೇಶ ಮಾಡುತ್ತೇನೆ. ನನ್ನ ಉಪದೇಶವನ್ನು ಸಾವಧಾನದಿಂದ ಕೇಳು' ಎಂದು. 'ಪೂಜ್ಯರು ಹೇಳಬೇಕು' ಎಂದಳು ಮೈತ್ರೇಯಿ.

**ಪರಮಾತ್ಮಸನ್ನಿಧಾನದಿಂದಲೇ ಎಲ್ಲವೂ ಪ್ರಿಯ, ಅವನ ಸಾಕ್ಷಾತ್ಕಾರವೇ ತಾರಕ:**

**ಉಪನಿಷತ್—ಸ ಹೋವಾಚ । ನವಾ ಅರೇ ಪತ್ಯುಃ ಕಾಮಾಯ ಪತಿಃ ಪ್ರಿಯೋ ಭವತಿ । ಆತ್ಮನಸ್ತು ಕಾಮಾಯ ಪತಿಃ ಪ್ರಿಯೋ ಭವತಿ । ನ ವಾ ಅರೇ ಜಾಯಾಯೈ ಕಾಮಾಯ ಜಾಯಾ ಪ್ರಿಯಾ ಭವತಿ । ಆತ್ಮನಸ್ತು ಕಾಮಾಯ ಜಾಯಾ ಪ್ರಿಯಾ ಭವತಿ । ನ ವಾ ಅರೇ ಪುತ್ರಾಣಾಂ ಕಾಮಾಯ ಪುತ್ರಾಃ ಪ್ರಿಯಾ ಭವಂತಿ । ಆತ್ಮನಸ್ತು ಕಾಮಾಯ ಪುತ್ರಾಃ ಪ್ರಿಯಾ ಭವಂತಿ । ನ ವಾ ಅರೇ ವಿತ್ತಸ್ಯ ಕಾಮಾಯ ವಿತ್ತಂ ಪ್ರಿಯಂ ಭವತಿ । ಆತ್ಮನಸ್ತು ಕಾಮಾಯ ವಿತ್ತಂ ಪ್ರಿಯಂ ಭವತಿ ।ನ ವಾ ಅರೇ ಬ್ರಹ್ಮಣಃ ಕಾಮಾಯ ಬ್ರಹ್ಮ ಪ್ರಿಯಂ ಭವತಿ । ಆತ್ಮನಸ್ತು ಕಾಮಾಯ ಬ್ರಹ್ಮ ಪ್ರಿಯಂ ಭವತಿ । ನ ವಾ ಅರೇ ಕ್ಷತ್ರಸ್ಯ ಕಾಮಾಯ ಕ್ಷತ್ರಂ ಪ್ರಿಯಂ ಭವತಿ । ಆತ್ಮನಸ್ತು ಕಾಮಾಯ ಕ್ಷತ್ರಂ ಪ್ರಿಯಂ ಭವತಿ । ನ ವಾ ಅರೇ ಲೋಕಾನಾಂ ಕಾಮಾಯ ಲೋಕಾಃ ಪ್ರಿಯಾ ಭವಂತಿ । ಆತ್ಮನಸ್ತು ಕಾಮಾಯ ಲೋಕಾಃ ಪ್ರಿಯಾ ಭವಂತಿ । ನ ವಾ ಅರೇ ದೇವಾನಾಂ ಕಾಮಾಯ ದೇವಾಃ ಪ್ರಿಯಾ ಭವಂತಿ । ಆತ್ಮನಸ್ತು ಕಾಮಾಯ ದೇವಾಃ ಪ್ರಿಯಾ ಭವಂತಿ ।**

**ನ ವಾ ಅರೇ ಭೂತಾನಾಂ ಕಾಮಾಯ ಭೂತಾನಿ ಪ್ರಿಯಾಣಿ ಭವಂತಿ । ಆತ್ಮನಸ್ತು ಕಾಮಾಯ ಭೂತಾನಿ ಪ್ರಿಯಾಣಿ ಭವಂತಿ । ನ ವಾ ಅರೇ ಸರ್ವಸ್ಯ ಕಾಮಾಯ ಸರ್ವಂ ಪ್ರಿಯಂ ಭವತಿ । ಆತ್ಮನಸ್ತು ಕಾಮಾಯ ಸರ್ವಂ ಪ್ರಿಯಂ ಭವತಿ । ಆತ್ಮಾ ವಾ ಅರೇ ದ್ರಷ್ಟವ್ಯಃ ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತವ್ಯಃ । ಮೈತ್ರೇಯಿ, ಆತ್ಮನೋ ವಾ ಅರೇ ದರ್ಶನೇನ ಶ್ರವಣೇನ ಮತ್ಯಾ ವಿಜ್ಞಾನೇನೇದಂ ಸರ್ವಂ ವಿದಿತಮ್ ।**

ಮೈತ್ರೇಯಿ, ನಾನು ಇವಳಿಗೆ ಪ್ರಿಯನಾಗಬೇಕು ಎಂಬ ಪತಿಯ ಇಚ್ಛೆಯಿಂದ ಪತಿಯು ಪತ್ನಿಗೆ ಪ್ರಿಯನಾಗುವುದಿಲ್ಲ. ಶ್ರೀಹರಿಯ ಇಚ್ಛೆಯಿಂದ ಪತಿಯು ಪತ್ನಿಗೆ ಪ್ರಿಯನಾಗುತ್ತಾನೆ. ಪತ್ನಿಯ ಇಚ್ಛೆಯಿಂದ ಪತ್ನಿಯು ಪ್ರಿಯಳಾಗುವುದಿಲ್ಲ. ಶ್ರೀಹರಿಯ ಇಚ್ಛೆಯಿಂದ ಪತ್ನಿಯು ಪ್ರಿಯಳಾಗುತ್ತಾಳೆ. ಮಕ್ಕಳ ಇಚ್ಛೆಯಿಂದ ಮಕ್ಕಳು ಪ್ರಿಯರಾಗುವುದಿಲ್ಲ. ಶ್ರೀಹರಿಯ ಇಚ್ಛೆಯಿಂದ ಮಕ್ಕಳು ಪ್ರಿಯರಾಗುತ್ತಾರೆ. ಸಂಪತ್ತಿನ ಅಭಿಮಾನಿಯಾದ ಕುಬೇರನ ಇಚ್ಛೆಯಿಂದ ಸಂಪತ್ತು ಪ್ರಿಯವಾಗುವುದಿಲ್ಲ. ಶ್ರೀಹರಿಯ ಇಚ್ಛೆಯಿಂದ ಸಂಪತ್ತು ಪ್ರಿಯವಾಗುತ್ತದೆ. ಬ್ರಾಹ್ಮಣ ಜಾತಿಯ ಅಭಿಮಾನಿಯಾದ ವಿರಿಂಚನ ಇಚ್ಛೆಯಿಂದ ಬ್ರಾಹ್ಮಣ ಜಾತಿ ಪ್ರಿಯವಾಗುವುದಿಲ್ಲ. ಶ್ರೀಹರಿಯ ಇಚ್ಛೆಯಿಂದ ಬ್ರಾಹ್ಮಣ ಜಾತಿ ಪ್ರಿಯವಾಗುತ್ತದೆ. ಕ್ಷತ್ರಿಯ ಜಾತಿಯ ಅಭಿಮಾನಿಯಾದ ವಾಯುದೇವನ ಇಚ್ಛೆಯಿಂದ ಕ್ಷತ್ರಿಯ ಜಾತಿ ಪ್ರಿಯವಾಗುವುದಿಲ್ಲ. ಶ್ರೀಹರಿಯ ಇಚ್ಛೆಯಿಂದ ಕ್ಷತ್ರಿಯ ಜಾತಿ ಪ್ರಿಯವಾಗುತ್ತದೆ. ಲೋಕಾಭಿಮಾನಿದೇವತೆಗಳ ಇಚ್ಛೆಯಿಂದ ಲೋಕಗಳು ಪ್ರಿಯವಾಗುವುದಿಲ್ಲ. ಶ್ರೀಹರಿಯ ಇಚ್ಛೆಯಿಂದ ಲೋಕಗಳು ಪ್ರಿಯವಾಗುತ್ತವೆ. ದೇವತೆಗಳ ಇಚ್ಛೆಯಿಂದ ದೇವತೆಗಳು ಪ್ರಿಯರಾಗುವುದಿಲ್ಲ. ಶ್ರೀಹರಿಯ ಇಚ್ಛೆಯಿಂದ ದೇವತೆಗಳು ಪ್ರಿಯರಾಗುತ್ತಾರೆ. ಪಂಚಭೂತಾಭಿಮಾನಿ ದೇವತೆಗಳ ಇಚ್ಛೆಯಿಂದ ಪಂಚಮಹಾಭೂತಗಳು ಪ್ರಿಯವಾಗುವುದಿಲ್ಲ. ಶ್ರೀಹರಿಯ ಇಚ್ಛೆಯಿಂದ ಪಂಚಮಹಾಭೂತಗಳು ಪ್ರಿಯವಾಗುತ್ತವೆ. ಸರ್ವವಸ್ತುಗಳಭಿಮಾನಿಯಾದ ಲಕ್ಷ್ಮಿಯ ಇಚ್ಛೆಯಿಂದ ಸರ್ವವಸ್ತುಗಳು ಪ್ರಿಯವಾಗುವುದಿಲ್ಲ. ಶ್ರೀಹರಿಯ ಇಚ್ಛೆಯಿಂದ ಸರ್ವವಸ್ತುಗಳು ಪ್ರಿಯವಾಗುತ್ತವೆ. ಹೀಗೆ ಯಾರ ಇಚ್ಛೆಯಿಂದ ಪತಿ ಮೊದಲಾದವರು ಪ್ರಿಯರಾಗುತ್ತಾರೆಯೋ ಅಂತಹ ಶ್ರೀಹರಿಯನ್ನೇ ಮೋಕ್ಷಾರ್ಥಿಯು ದರ್ಶನ ಮಾಡಬೇಕು. ಅವನ ದರ್ಶನಕ್ಕೆ ಶ್ರವಣ ಮನನ ನಿದಿಧ್ಯಾಸನ ಈ ಮೂರು ಉಪಾಯಗಳು. ಶ್ರವಣ ಎಂದರೆ ಶ್ರುತಿ ವಾಕ್ಯಗಳ ಅರ್ಥಜ್ಞಾನ. ಮನನ ಎಂದರೆ ಶ್ರುತಿಯ ಅರ್ಥಗಳನ್ನು ಯುಕ್ತಿಗಳಿಂದ ದೃಢಪಡಿಸಿಕೊಳ್ಳುವುದು. ನಿದಿಧ್ಯಾಸನವೆಂದರೆ ಧ್ಯಾನ. ದರ್ಶನಕ್ಕೆ ಧ್ಯಾನವೇ ಸಾಕ್ಷಾತ್ ಸಾಧನ. ಶ್ರವಣ ಮನನಗಳು ಧ್ಯಾನಕ್ಕೆ ಪ್ರತಿಬಂಧಕವಾದ

ಅಜ್ಞಾನ ಮತ್ತು ಸಂಶಯಗಳನ್ನು ನಿವಾರಣೆ ಮಾಡುವುದರಿಂದ ಧ್ಯಾನಕ್ಕೆ ಅಂಗಗಳು. ಕರ್ಮದೇವತಾದಿ ಜ್ಞಾನವೂ ಫಲಸಾಧನವೇ ಆಗಿದ್ದರೂ, ಆತ್ಮನ ಶ್ರವಣ ಮನನ ವಿಜ್ಞಾನ ಮತ್ತು ನಿದಿಧ್ಯಾಸನಗಳಿಂದ ಕರ್ಮದೇವತಾದಿರೂಪವಾದ ಸರ್ವಜಗತ್ತು ವಿದಿತವಾದಂತೆಯೇ ಆಗುತ್ತದೆ. ಅಂದರೆ ಕರ್ಮದೇವತಾದಿಗಳ ಜ್ಞಾನದಿಂದ ಉಂಟಾಗುವ ಎಲ್ಲ ಫಲವೂ ಲಭಿಸುತ್ತದೆ. ಪ್ರತ್ಯೇಕವಾಗಿ ಕರ್ಮದೇವತಾದಿಗಳ ಶ್ರವಣಾದಿಗಳನ್ನು ಮಾಡುವ ಅವಶ್ಯಕತೆ ಇಲ್ಲ.

**ಭಾಷ್ಯ—ಆತ್ಮಾ ನಾರಾಯಣಃ । ತಸ್ಯೈವ ಹಿ ಕಾಮೇನ ಪತ್ಯಾದಿಃ ಪ್ರಿಯೋ ಭವತಿ । ನ ಹಿ ಪತ್ಯಾದೀನಾಂ ಜಾಯಾದೀನಾಮಹಂ ಪ್ರಿಯಃ ಸ್ಯಾಮಿತಿ ಕಾಮನಾ ಮಾತ್ರೇಣ ಪ್ರಿಯತ್ವಂ ಭವತಿ । ಭಗವದಿಚ್ಛಯೈವ ಹಿ ತದ್ ಭವತಿ ।ಅನ್ಯಥಾ ಜಾಯಾರ್ಥೇ ಪತ್ಯರ್ಥ ಇತ್ಯೇವ ಸ್ಯಾತ್ । ಪ್ರಾಧಾನ್ಯಾದಿದಂ ಸರ್ವಂ ವಿದಿತಮ್ । ಸರ್ವಕಾರಣತ್ವಾಚ್ಚ ಸರ್ವಪ್ರಾಧಾನ್ಯಂ ಭಗವತಃ । ಪ್ರಾಧಾನ್ಯಾಪ್ರಾಧಾನ್ಯಯೋರಪಿ ಸ ಏವ ಹಿ ಹೇತುಃ ।**

**ಅನುವಾದ**—'ಆತ್ಮನಸ್ತು ಕಾಮಾಯ' ಎಂಬಲ್ಲಿ ಆತ್ಮಾ ಎಂದರೆ ನಾರಾಯಣ. ಅವನ ಇಚ್ಛೆಯಿಂದಲೇ ಪತಿ ಮೊದಲಾದವರು ಪತ್ನಿ ಮೊದಲಾದವರಿಗೆ ಪ್ರಿಯರಾಗುತ್ತಾರೆ. ಏಕೆಂದರೆ ಪತ್ನಿ ಮೊದಲಾದವರಿಗೆ ನಾನು ಪ್ರಿಯನಾಗುತ್ತೇನೆಂಬ ಪತ್ಯಾದಿಗಳ ಇಚ್ಛೆಯಿಂದ ಪತ್ಯಾದಿಗಳು ಪ್ರಿಯರಾಗುವುದಿಲ್ಲ. ಅಮೋಘವಾದ ಭಗವದಿಚ್ಛೆಯಿಂದಲೇ ಅವರಿಗೆ ಪ್ರಿಯತ್ವವು ಉಂಟಾಗುತ್ತದೆ. ಈ ವಾಕ್ಯಕ್ಕೆ 'ಪತಿಯ ಪ್ರಯೋಜನಕ್ಕಾಗಿ ಪತಿಯು ಪತ್ನಿಗೆ ಪ್ರಿಯನಾಗುವುದಿಲ್ಲ. ಪತ್ನಿಯ ಪ್ರಯೋಜನಕ್ಕಾಗಿ ಪತಿಯು ಪತ್ನಿಗೆ ಪ್ರಿಯನಾಗುತ್ತಾನೆ' ಎಂಬ ಅಭಿಪ್ರಾಯವಿರುತ್ತಿದ್ದರೆ 'ಆತ್ಮನಸ್ತು ಕಾಮಾಯ' ಎಂಬಲ್ಲಿ 'ಜಾಯಾರ್ಥೇ' ಎಂದೂ, 'ಪತ್ಯುಃ ಕಾಮಾಯ' ಎಂಬಲ್ಲಿ 'ಪತ್ಯರ್ಥೇ' ಎಂದೂ ಇರಬೇಕಾಗಿದ್ದಿತು. ಶ್ರೀಹರಿಯು ಎಲ್ಲಕ್ಕಿಂತ ಪ್ರಧಾನನಾದುದರಿಂದ ಅವನನ್ನು ತಿಳಿದರೆ ಈ ಜಗತ್ತೆಲ್ಲವೂ ತಿಳಿದಂತೆ ಆಗುತ್ತದೆ ಹೊರತು ಜಗತ್ತು ಪ್ರತ್ಯೇಕವಾಗಿ ಇಲ್ಲವೆಂದಲ್ಲ. ಶ್ರೀಹರಿಯು ಎಲ್ಲಕ್ಕೂ ಕಾರಣನಾದ್ದರಿಂದ ಎಲ್ಲಕ್ಕಿಂತ ಅವನೇ ಪ್ರಧಾನ. ಬ್ರಹ್ಮಾದಿಗಳು ರುದ್ರಾದಿಗಳಿಗಿಂತ ಪ್ರಧಾನರು, ರುದ್ರಾದಿಗಳು ಅಪ್ರಧಾನರು ಎಂಬುದಕ್ಕೂ ಸಹ ಶ್ರೀಹರಿಯೇ ಕಾರಣನಾದುದರಿಂದ ಅವನೇ ಸರ್ವರಿಗಿಂತಲೂ ಪ್ರಧಾನನಾದವನು.

**ಉಪನಿಷತ್—ಬ್ರಹ್ಮ ತಂ ಪರಾದಾದ್ ಯೋಽನ್ಯತ್ರಾತ್ಮನೋ ಬ್ರಹ್ಮ ವೇದ । ಕ್ಷತ್ರಂ ತಂ ಪರಾದಾದ್ ಯೋಽನ್ಯತ್ರಾಽತ್ಮನಃ ಕ್ಷತ್ರಂ ವೇದ । ಲೋಕಾಸ್ತಂ ಪರಾದುಃ ಯೋಽನ್ಯತ್ರಾಽತ್ಮನೋ ಲೋಕಾನ್ ವೇದ ।**

**ದೇವಾಸ್ತಂ ಪರಾದುರ್ಯೋऽನ್ಯತ್ರಾತ್ಮನೋ ದೇವಾನ್ ವೇದ । ಭೂತಾನಿ ತಂ ಪರಾದುರ್ಯೋऽನ್ಯತ್ರಾತ್ಮನೋ ಭೂತಾನಿ ವೇದ । ಸರ್ವಂ ತಂ ಪರಾದಾದ್ ಯೋऽನ್ಯತ್ರಾತ್ಮನಃ ಸರ್ವಂ ವೇದ । ಇದಂ ಬ್ರಹ್ಮ ಇದಂ ಕ್ಷತ್ರಮಿಮೇ ಲೋಕಾ ಇಮೇ ದೇವಾ ಇಮಾನಿ ಭೂತಾನಿ ಇದಂ ಸರ್ವಂ ಯದಯಮಾತ್ಮಾ ।**

ಬ್ರಾಹ್ಮಣಜಾತ್ಯಭಿಮಾನಿಯಾದ ಚತುರ್ಮುಖನನ್ನು ಭಗವಂತನ ಅಧೀನನೆಂದು ಯಾರು ತಿಳಿಯುವುದಿಲ್ಲವೋ, ಅವನನ್ನಾಶ್ರಯಿಸದೇ ಬೇರೆಯವರನ್ನೇ ಆಶ್ರಯಿಸಿದವನೆಂದು ತಿಳಿಯುತ್ತಾನೆಯೋ ಅವನನ್ನು ಚತುರ್ಮುಖನು ಲೋಕಾಲೋಕಪರ್ವತದ ಆಚೆ ಇರುವ ಅಂಧಂತಮಸ್ಸಿನಲ್ಲಿ ಹಾಕುತ್ತಾನೆ. ಕ್ಷತ್ರಿಯಜಾತ್ಯಭಿಮಾನಿಯಾದ ವಾಯುವು ಭಗವದಧೀನನೆಂದು ಯಾರು ತಿಳಿಯುವುದಿಲ್ಲವೋ ಅವನನ್ನು ವಾಯುವು ಅಂಧಂತಮಸ್ಸಿನಲ್ಲಿ ಹಾಕುತ್ತಾನೆ. ಲೋಕಾಭಿಮಾನಿಗಳು, ದೇವತೆಗಳು, ಪಂಚಭೂತಾಭಿಮಾನಿಗಳು, ಸರ್ವಾಭಿಮಾನಿನಿಯಾದ ಲಕ್ಷ್ಮಿ ಇವರನ್ನು ಅನ್ಯಾಧೀನರೆಂದು ಯಾರು ತಿಳಿಯುತ್ತಾನೆಯೋ, ಭಗವದಧೀನರೆಂದು ತಿಳಿಯುವುದಿಲ್ಲವೋ ಅವನನ್ನು ಆ ಲೋಕಾಭಿಮಾನಿ ದೇವತೆಗಳು ಮೊದಲಾದವರು ಅಂಧಂತಮಸ್ಸಿನಲ್ಲಿ ಹಾಕುತ್ತಾರೆ. ಈ ಚತುರ್ಮುಖ, ವಾಯು, ಲೋಕಾಭಿಮಾನಿಗಳು, ದೇವತೆಗಳು, ಪಂಚಭೂತಾಭಿಮಾನಿಗಳು, ಸರ್ವ ವಸ್ತ್ವಭಿಮಾನಿನಿಯಾದ ಲಕ್ಷ್ಮೀದೇವಿ ಎಲ್ಲರೂ ಯಾರನ್ನು ಆಶ್ರಯಿಸಿರುವರೋ ಅವನೇ ನಾರಾಯಣ.

**ಭಾಷ್ಯ—'ಅನ್ಯತ್ರಾತ್ಮನೋ ಬ್ರಹ್ಮ ವೇದ' ಭಗವದಧೀನತ್ವೇನ ನ ವೇದ । ತದನಾಶ್ರಿತತ್ವೇನ ಸ್ಥಾನಾಂತರೇ ಚ ವೇದ । ಪರಾದಾತ್ ಪರತೋ ಲೋಕಾಲೋಕಸ್ಯಾಂಧೇ ತಮಸಿ। ಇದಂ ಬ್ರಹ್ಮಾದಿಕಮ್ । 'ಯದಯಮಾತ್ಮಾ' ಯತ್ರಾಯಮಾತ್ಮಾ । ಅನ್ಯತ್ರ ಪರಿಜ್ಞಾನೇ ದೋಷೋಕ್ತೇಃ ತತ್ರ ಪರಿಜ್ಞಾನಂ ಹ್ಯುಕ್ತಂ ಭವತಿ । ಅನ್ಯಥಾ ಅನ್ಯದಾತ್ಮನೋ ಬ್ರಹ್ಮ ವೇದೇತಿ ಸ್ಯಾತ್ । ಯದಿತ್ಯವ್ಯಯತ್ವಾತ್ ಯತ್ರೇತ್ಯಪಿ ಭವತಿ । ಯಥಾ ಯಸ್ಮಾದಿತ್ಯರ್ಥೇ । 'ಸಪ್ತಸು ಪ್ರಥಮಾ' ಇತಿ ಚ ಸೂತ್ರಮ್ ।**

**ಅನುವಾದ**—'ಅನ್ಯತ್ರಾತ್ಮನೋ ಬ್ರಹ್ಮ ವೇದ' ಎಂದರೆ ಚತುರ್ಮುಖನು ಶ್ರೀಹರಿಯ ಅಧೀನನೆಂದು ಯಾರು ತಿಳಿಯುವುದಿಲ್ಲವೋ ಶ್ರೀಹರಿಯನ್ನು ಆಶ್ರಯಿಸದೆ ಅನ್ಯರ ಆಶ್ರಯದಲ್ಲಿದ್ದಾನೆಂದು ತಿಳಿಯುತ್ತಾನೆಯೋ ಎಂದರ್ಥ. 'ಪರಾದಾತ್' ಎಂದರೆ ಲೋಕಾಲೋಕಪರ್ವತದ ಆಚೆ ಅಂಧಂತಮಸ್ಸಿನಲ್ಲಿ ಹಾಕುತ್ತಾನೆ ಎಂದು ಅರ್ಥ. 'ಇದಂ ಸರ್ವಂ ಯದಯಮಾತ್ಮಾ' ಎಂಬಲ್ಲಿ. ಇದಂ ಎಂದರೆ

ಬ್ರಹ್ಮಾದಿ ರೂಪವಾದ ಜಗತ್ತು ಎಂದು ಅರ್ಥ. ಯದಯಮಾತ್ಮಾ ಎಂದರೆ, ಯತ್ ಯತ್ರ ಬ್ರಹ್ಮಾದಿಗಳು ಯಾರಲ್ಲಿ ಆಶ್ರಯಿಸಿರುವರೋ ಅವನು ಆತ್ಮಾ ನಾರಾಯಣ ಎಂದು ಅರ್ಥ. ಇಲ್ಲಿ ಬ್ರಹ್ಮಾದಿಗಳಿಗೂ ಪರಮಾತ್ಮನಿಗೂ ಅಭೇದವನ್ನು ಹೇಳುತ್ತದೆಂಬ ವ್ಯಾಖ್ಯಾನ ಸರಿಯಲ್ಲ. ಏಕೆಂದರೆ ಬ್ರಹ್ಮಾದಿಗಳು ಪರಮಾತ್ಮನನ್ನು ಬಿಟ್ಟು ಬೇರೆಯವರಲ್ಲಿ ಆಶ್ರಯಿಸಿದ್ದಾರೆಂದು ತಿಳಿದರೆ ಅನರ್ಥವಿದೆ ಎಂದು ಹೇಳಿರುವುದರಿಂದ ಪರಮಾತ್ಮನನ್ನು ಆಶ್ರಯಿಸಿದ್ದಾರೆಂದು ತಿಳಿಯಬೇಕೆಂದು ಹೇಳಿದಂತಾಗುತ್ತದೆ. ಅಭೇದವನ್ನು ಹೇಳುವ ಅಭಿಪ್ರಾಯವಿದ್ದರೆ, ಅನ್ಯತ್ರಾತ್ಮನೋ ಬ್ರಹ್ಮ ವೇದ, ಯಾರು ಬ್ರಹ್ಮಾದಿಗಳನ್ನು ಬೇರೆಯವರಲ್ಲಿ ಆಶ್ರಯಿಸಿದವರೆಂದು ತಿಳಿಯುವನೋ ಎನ್ನದೆ, ಅನ್ಯದಾತ್ಮನೋ ಬ್ರಹ್ಮವೇದ, ಆತ್ಮನಿಗಿಂತ ಭಿನ್ನರು ಎಂದು ತಿಳಿಯುತ್ತಾನೆಯೋ ಎಂದೇ ಹೇಳಬೇಕಾಗಿದ್ದಿತು. ಹಾಗಾದರೆ ಭೇದವನ್ನು ಹೇಳುವ ನಿಮ್ಮ ಪಕ್ಷದಲ್ಲಿಯೂ 'ಇದಂ ಸರ್ವಂ ಯತ್ರಾಯಮಾತ್ಮಾ' ಎಂದು ಇರ ಬೇಕಾಗಿದ್ದಿತು. ಯದಯಮಾತ್ಮಾ ಎಂಬುದು ಅಭೇದವನ್ನೇ ಹೇಳುತ್ತದೆ ಎಂಬ ಶಂಕೆ ಸರಿಯಲ್ಲ. ಯತ್ ಶಬ್ದವು ಅವ್ಯಯವಾಗಿರುವುದರಿಂದ, ಅವ್ಯಯಗಳಿಗೆ ಅನೇಕ ಅರ್ಥಗಳಿರುವುದರಿಂದ, ಯತ್ರ ಎಲ್ಲಿ ಎಂಬ ಅರ್ಥವೂ, ಯಸ್ಮಾತ್ ಯಾವ ಕಾರಣದಿಂದ ಎಂಬ ಅರ್ಥದಂತೆ ಯುಕ್ತವೇ ಆಗಿದೆ. ಅಲ್ಲದೆ 'ಸಪ್ತಸು ಪ್ರಥಮಾ' ಎಂಬ ವ್ಯಾಕರಣ ಸೂತ್ರದಿಂದ ಪ್ರಥಮಾವಿಭಕ್ತಿಗೆ ಸಪ್ತಮೀವಿಭಕ್ತಿಯ ಅರ್ಥವೂ ಇರುವುದರಿಂದ ಯತ್ ಶಬ್ದಕ್ಕೆ ಯತ್ರ ಎಂದು ಅರ್ಥವಾಗುತ್ತದೆ. ಆದರೆ ಅನ್ಯತ್ರ ಎಂದರೆ ಅನ್ಯ ಎಂದು ಅರ್ಥ ಹೇಳುವುದು ಯುಕ್ತವಾಗುವುದೇ ಇಲ್ಲ.

**ಶ್ರೀಹರಿಯೆ ಸೃಷ್ಟಿಕರ್ತ– ಮೂರು ಉದಾಹರಣೆಗಳು :**

**ಉಪನಿಷತ್—ಸ ಯಥಾ ದುಂದುಭೇರ್ಹನ್ಯಮಾನಸ್ಯ ನ ಬಾಹ್ಯಾನ್ ಶಬ್ದಾನ್ ಶಕ್ನುಯಾದ್ ಗ್ರಹಣಾಯ । ದುಂದುಭೇಸ್ತು ಗ್ರಹಣೇನ ದುಂದುಭ್ಯಾ-ಘಾತಸ್ಯ ವಾ ಶಬ್ದೋ ಗೃಹೀತಃ ।**

ಭೇರಿಯನ್ನು ಮೊಳಗಿಸುತ್ತಿರುವಾಗ ಕೇಳಿಬರುವ ಶಬ್ದಗಳನ್ನು ಮದ್ದಳೆ ಮೊದಲಾದ ಬೇರೆ ವಾದ್ಯಗಳಿಂದ ಹುಟ್ಟಿದವೆಂದು ತಿಳಿಯಲು ಯಾರೂ ಶಕ್ತರಾಗುವುದಿಲ್ಲ. ಏಕೆಂದರೆ ಭೇರಿಯನ್ನೂ ಅದರ ಬಡಿತವನ್ನೂ ಪೂರ್ವಭಾವಿಯಾಗಿ ತಿಳಿದಿರುವುದರಿಂದ, ಆ ಶಬ್ದಗಳು ಭೇರಿಯಿಂದಲೇ ಹುಟ್ಟಿದವುಗಳೆಂದೂ, ಭೇರಿಯ ಅಧೀನವೆಂದೂ ತಿಳಿಯಲ್ಪಡುತ್ತವೆ. ಹಾಗೆಯೇ ಶ್ರೀಹರಿಯನ್ನೂ ಅವನ ಇಚ್ಛೆಯನ್ನೂ ಪೂರ್ವಭಾವಿಯಾಗಿ ತಿಳಿದವನು ಈ ಜಗತ್ತು ಚತುರ್ಮುಖಾದಿಗಳಿಂದ ಹುಟ್ಟಿದುದೆಂದಾಗಲೀ, ಅವರ ಅಧೀನವೆಂದಾಗಲೀ ತಿಳಿಯುವುದಿಲ್ಲ. ಶ್ರೀಹರಿಯ ಇಚ್ಛೆಯಿಂದಲೇ ಹುಟ್ಟಿದುದು, ಶ್ರೀಹರಿಗೇ ಅಧೀನವಾದುದು ಎಂದೇ ತಿಳಿಯುತ್ತಾನೆ.

ಇಲ್ಲಿ ಶ್ರೀಹರಿಯು ಭೇರಿಯ ಸ್ಥಾನದಲ್ಲಿಯೂ, ಅವನ ಇಚ್ಛೆಯು ಬಡಿತದ ಸ್ಥಾನದಲ್ಲಿಯೂ ಇದೆ. ಭೇರಿ ಎಂದರೆ ಭೇರಿಯ ಅಭಿಮಾನಿದೇವತೆ ಎಂದೂ ಅರ್ಥ. ಭೇರಿಯನ್ನು ಪೊಳಗಿಸಿದಾಗ ಅದರ ಅಭಿಮಾನಿ ದೇವತೆಯನ್ನು ತಿಳಿದವನು ಅದರಿಂದುಂಟಾದ ಶಬ್ದಗಳನ್ನು ಆ ದೇವತೆಯ ಅಧೀನವೆಂದು ಹೇಗೆ ತಿಳಿಯುತ್ತಾನೆಯೋ ಹಾಗೆ ಎಂದರ್ಥ.

**ಉಪನಿಷತ್—ಸ ಯಥಾ ಶಂಖಸ್ಯ ಧ್ಮಾಯಮಾನಸ್ಯ ನ ಬಾಹ್ಯಾನ್ ಶಬ್ದಾನ್ ಶಕ್ನುಯಾದ್ ಗ್ರಹಣಾಯ । ಶಂಖಸ್ಯ ತು ಗ್ರಹಣೇನ ಶಂಖಧ್ಮಸ್ಯ ವಾ ಶಬ್ದೋ ಗೃಹೀತಃ ।**

ಶಂಖವನ್ನು ಊದುತ್ತಿರುವಾಗ ಉಂಟಾದ ಶಬ್ದಗಳನ್ನು ಬೇರೆಯವುಗಳಿಂದ ಉಂಟಾದವು ಎಂದೂ, ಬೇರೆಯವುಗಳಿಗೆ ಅಧೀನವೆಂದೂ ಹೇಗೆ ಯಾರೂ ತಿಳಿಯಲಾರರೋ, ಶಂಖವನ್ನೂ ಶಂಖದ ಊದುವಿಕೆಯನ್ನೂ ಪೂರ್ವಭಾವಿಯಾಗಿ ತಿಳಿದಿರುವುದರಿಂದ ಶಂಖದಿಂದ ಉಂಟಾದವು ಶಂಖದ ಅಧೀನವಾದವು ಎಂದೇ ಹೇಗೆ ತಿಳಿಯುವರೋ ಹಾಗೆ.

**ಉಪನಿಷತ್—ಸ ಯಥಾ ವೀಣಾಯೈ ವಾದ್ಯಮಾನಾಯೈ ನ ಬಾಹ್ಯಾನ್ ಶಬ್ದಾನ್ ಶಕ್ನುಯಾದ್ ಗ್ರಹಣಾಯ । ವೀಣಾಯೈ ತು ಗ್ರಹಣೇನ ವೀಣಾವಾದಸ್ಯ ವಾ ಶಬ್ದೋ ಗೃಹೀತಃ ।**

ವೀಣೆಯನ್ನು ನುಡಿಸುವಾಗ ಉಂಟಾದ ಶಬ್ದಗಳನ್ನು ಬೇರೆಯವುಗಳಿಂದ ಉಂಟಾದವು ಎಂದೂ, ಬೇರೆಯವುಗಳ ಅಧೀನವೆಂದೂ ಹೇಗೆ ಯಾರೂ ತಿಳಿಯುವುದಿಲ್ಲವೋ, ವೀಣೆಯನ್ನೂ ಅದರ ನುಡಿಸುವಿಕೆಯನ್ನೂ ಪೂರ್ವಭಾವಿಯಾಗಿ ತಿಳಿದಿರುವುದರಿಂದ ವೀಣೆಯಿಂದ ಉಂಟಾದವು, ವೀಣೆಯ ಅಧೀನವಾದವು ಎಂದೇ ಹೇಗೆ ತಿಳಿಯುವರೋ ಹಾಗೆ.

**ಭಾಷ್ಯ—ದುಂದುಭ್ಯಾದಿ ದೃಷ್ಟಾಂತೋಽಪಿ ತದಧೀನತ್ವಂ ತತ್ಕಾರಣತ್ವಂ ಚ ಜ್ಞಾಪಯತಿ । ನ ಹಿ ದುಂದುಭ್ಯಾದಿರೇವ ತಚ್ಛಬ್ದಃ । ನ ಚ ತದುಪಾದಾನಮ್ । ಸ್ಥಾನಾಂತರೇ ತದುಪಲಂಭಾತ್ । ನ ಹ್ಯುಪಾದಾನಾದ್ ಉಪಾದೇಯಂ ಸ್ಥಾನಾಂತರೇ ಭವತಿ । ಶಬ್ದೋ ಹಿ ಸ್ಥಾನಾಂತರಂ ಗತ್ವಾ ಪ್ರತಿಶ್ರುತಿತ್ವಮುಪೈತಿ। ಭಗವದಿಚ್ಛಾಯಾ ದೃಷ್ಟಾಂತೋ ದುಂದುಭ್ಯಾಘಾತಾದಿಃ । ನ ಹಿ ದುಂದುಭಿಂ ಪಶ್ಯನ್ ಪುರುಷೋ ದುಂದುಭ್ಯಾಘಾತೇ ಮುರಜಶಬ್ದೋಽಯಮಿತಿ ಗೃಹ್ಣಾತಿ । ಏವಂ ಭಗವಂತಂ**

**ಜಾನನ್ ನಾನ್ಯಾಧೀನಂ ಜಗದಿತಿ ಗೃಹ್ಣಾತಿ । ಕಿಂತು ಭಗವದಿಚ್ಛಾಧೀನಮಿತಿ ।**

**ಅನುವಾದ**—ಭೇರಿ, ಶಂಖ ಮತ್ತು ವೀಣೆಗಳ ದೃಷ್ಟಾಂತವೂ ಜಗತ್ತು ಶ್ರೀಹರಿಯ ಅಧೀನವೆಂದೂ, ಶ್ರೀಹರಿಯಿಂದ ಉತ್ಪನ್ನವಾದುದೆಂದೂ ತಿಳಿಸಿಕೊಡುತ್ತದೆ. ಇದು ಅಭೇದ ವಿಷಯದಲ್ಲಿ ದೃಷ್ಟಾಂತವಲ್ಲ. ಏಕೆಂದರೆ ಭೇರಿ ಮುಂತಾದವುಗಳಿಗೂ ಅವುಗಳಿಂದುಂಟಾಗುವ ಶಬ್ದಗಳಿಗೂ ಅಭೇದವಿಲ್ಲ. ಭೇರಿಯ ಶಬ್ದವು ಭೇರಿಯಿಂದ ಉತ್ಪನ್ನವಾದುದರಿಂದಲೇ ಅವುಗಳಿಗೆ ಅಭೇದವೆಂದರೆ, ಭೇರಿಯು ಶಬ್ದಕ್ಕೆ ನಿಮಿತ್ತಕಾರಣವೋ ಉಪಾದಾನ ಕಾರಣವೋ ? ನಿಮಿತ್ತ ಕಾರಣಕ್ಕೂ ಕಾರ್ಯಕ್ಕೂ ಅಭೇದವಿಲ್ಲ. ಶಬ್ದಕ್ಕೆ ಭೇರಿ ಮೊದಲಾದವು ಉಪಾದಾನ ಕಾರಣವಲ್ಲ. ಏಕೆಂದರೆ ಭೇರಿಯನ್ನು ಬಿಟ್ಟು ಬೇರೆ ದೂರದ ಸ್ಥಾನದಲ್ಲಿಯೂ ಆ ಶಬ್ದವು ಕೇಳಿ ಬರುತ್ತದೆ, ಉಪಾದೇಯವು ಉಪಾದಾನವನ್ನು ಬಿಟ್ಟು ಬೇರೆ ಸ್ಥಳದಲ್ಲಿ ಇರುವುದಿಲ್ಲವಷ್ಟೆ. ಭೇರಿ ಮೊದಲಾದ ಪ್ರದೇಶದಲ್ಲಿ ಹುಟ್ಟಿದ ಶಬ್ದವು ತನಗೆ ಸಮೀಪದಲ್ಲಿ ಮತ್ತೊಂದು ಶಬ್ದವನ್ನು ಹುಟ್ಟಿಸುತ್ತದೆ. ಆ ಶಬ್ದವೂ ಮತ್ತೊಂದು ಶಬ್ದವನ್ನು ಹುಟ್ಟಿಸುತ್ತದೆ. ಹೀಗೆ ಶ್ರೋತ್ರವಿನ ಕಿವಿಯವರೆಗೂ ಶಬ್ದಗಳು ಹುಟ್ಟುವುದರಿಂದ ಅಲ್ಲಿ ಹುಟ್ಟಿದ ಶಬ್ದವು ಶ್ರೋತ್ರವಿಗೆ ಕೇಳಿಸುತ್ತದೆ. ಆದ್ದರಿಂದ ಭೇರಿ ಮೊದಲಾದವುಗಳು ಅವುಗಳಿಂದುಂಟಾದ ಶಬ್ದಕ್ಕೆ ಉಪಾದಾನ ಕಾರಣವಲ್ಲ. ಶ್ರೀಹರಿಯು ಜಗತ್ತಿಗೆ ಕಾರಣ ಎಂಬ ವಿಷಯದಲ್ಲಿ ಭೇರಿಯ ದೃಷ್ಟಾಂತವೇ ಸಾಕು. ಆದರೆ ಶ್ರೀಹರಿಯ ಇಚ್ಛೆಯು ಜಗತ್ತಿಗೆ ಕಾರಣ ಎಂಬ ವಿಷಯದಲ್ಲಿ ಭೇರಿ ತಾಡನ ಮುಂತಾದವು ದೃಷ್ಟಾಂತ. ಭೇರಿಯನ್ನು ನೋಡುತ್ತಿರುವ ಪುರುಷನು ಭೇರಿತಾಡನವನ್ನೂ ನೋಡುತ್ತಿರುವಾಗ, ಆ ಶಬ್ದವನ್ನು ಮದ್ದಳೆಯ ಧ್ವನಿಯಿಂದು ತಿಳಿಯುವುದಿಲ್ಲವಷ್ಟೆ. ಹಾಗೆಯೇ ಶ್ರೀಹರಿಯನ್ನೂ, ಶ್ರೀಹರಿಯ ಇಚ್ಛೆಯನ್ನೂ ತಿಳಿದವನು ಜಗತ್ತನ್ನು ಬ್ರಹ್ಮಾದಿಗಳಿಂದ ಹುಟ್ಟಿದುದೆಂದೂ, ಅವರ ವಶವೆಂದೂ ತಿಳಿಯುವುದಿಲ್ಲ. ಶ್ರೀಹರಿ ಮತ್ತು ಶ್ರೀಹರಿಯ ಇಚ್ಛೆಯಿಂದ ಹುಟ್ಟಿದುದೆಂದೇ ತಿಳಿಯುತ್ತಾನೆ. ಶ್ರೀಹರಿಯ ಮತ್ತು ಅವನ ಇಚ್ಛೆಯ ಅಧೀನವೆಂದೇ ತಿಳಿಯುತ್ತಾನೆ.

**ಶ್ರೀ ಹಯಗ್ರೀವನ ಮುಖದಿಂದಲೇ ಸಕಲ ಶಾಸ್ತ್ರಗಳ ಆವಿರ್ಭಾವ :**

**ಉಪನಿಷತ್**—**ಸ ಯಥಾಽರ್ದ್ರೈಧಾಗ್ನೇರಭ್ಯಾಹಿತಾತ್ ಪೃಥಗ್ ಧೂಮಾ ವಿನಿಶ್ಚರಂತಿ, ಏವಂ ವಾ ಅರೇ ಅಸ್ಯ ಮಹತೋ ಭೂತಸ್ಯ ನಿಃಶ್ವಸಿತಮೇತದ್ ಯದೃಗ್ವೇದೋ ಯಜುರ್ವೇದಃ ಸಾಮವೇದೋಽಥರ್ವಾಂಗಿರಸ ಇತಿಹಾಸಃ ಪುರಾಣಂ ವಿದ್ಯಾ ಉಪನಿಷದಃ ಶ್ಲೋಕಾಃ ಸೂತ್ರಾಣ್ಯನುವ್ಯಾಖ್ಯಾನಾನಿ ವ್ಯಾಖ್ಯಾನಾನ್ಯಸ್ಯೈವೈತಾನಿ ನಿಃಶ್ವಸಿತಾನಿ।**

ಹೇಗೆ ಹಸಿಕಟ್ಟಿಗೆಯ ಬೆಂಕಿಯಿಂದ ನಾನಾ ಬಗೆಯಾಗಿ ಹೊಗೆ ಕಿಡಿಗಳು ಹೊರಹೊಮ್ಮುತ್ತವೆಯೋ ಹಾಗೆಯೇ, ಸರ್ವೋತ್ತಮನೂ ಶಾಶ್ವತನೂ ಆದ ಹಯಗ್ರೀವರೂಪಿಯಾದ ಶ್ರೀಹರಿಯಿಂದ ಋಗ್ವೇದ ಯಜುರ್ವೇದ ಸಾಮವೇದ ಅಥರ್ವವೇದವೆಂಬ ನಾಲ್ಕು ಅವಾಂತರ ವೇದಗಳು, ಮಹಾಭಾರತ, ಮೂಲ ರಾಮಾಯಣ, ಸಂಹಿತಾ ವ್ಯತಿರಿಕ್ತವಾದ ಪಂಚರಾತ್ರ, ಪುರಾಣ, ಮೂಲವೇದ, ಉಪನಿಷತ್ತು, ಪಂಚರಾತ್ರ ಸಂಹಿತಾ, ಬ್ರಹ್ಮಸೂತ್ರ, ವೇದವ್ಯಾಖ್ಯಾನಗಳು ಇವೆಲ್ಲವೂ ಅವಿಸ್ಸೃಷ್ಟಿಯಲ್ಲಿ ಹೊರಹೊಮ್ಮುತ್ತವೆ. ಹಾಗೆಯೇ ಮಹತ್ತತ್ವ ಮೊದಲಾದವುಗಳೆಲ್ಲವೂ ಶ್ರೀಹರಿಯಿಂದ ಅನಾಯಾಸವಾಗಿ ಸೃಷ್ಟಿಸಲ್ಪಡುತ್ತವೆ.

**ಶ್ರೀಹರಿಯೇ ಸರ್ವಾಶ್ರಯ—ಉದಾಹರಣೆಗಳು :**

**ಉಪನಿಷತ್—ಸ ಯಥಾ ಸರ್ವಾಸಾಮಪಾಂ ಸಮುದ್ರ ಏಕಾಯನ ಏವಂ । ಸರ್ವೇಷಾಂ ಸ್ಪರ್ಶಾನಾಂ ತ್ವಗೇಕಾಯನಮೇವಂ । ಸರ್ವೇಷಾಂ ರಸಾನಾಂ ಜಿಹ್ವೈಕಾಯನಮೇವಂ। ಸರ್ವೇಷಾಂ ಗಂಧಾನಾಂ ನಾಸಿಕೈಕಾಯನಮೇವಮ್ । ಸರ್ವೇಷಾಂ ರೂಪಾಣಾಂ ಚಕ್ಷುರೇಕಾಯನಮೇವಮ್ । ಸರ್ವೇಷಾಂ ಶಬ್ದಾನಾಂ ಶ್ರೋತ್ರಮೇಕಾಯನಮೇವಂ । ಸರ್ವೇಷಾಂ ಸಂಕಲ್ಪಾನಾಂ ಮನ ಏಕಾಯನಮೇವಮ್ । ಸರ್ವಾಸಾಂ ವಿದ್ಯಾನಾಂ ಹೃದಯಮೇಕಾಯನಮೇವಮ್ । ಸರ್ವೇಷಾಂ ಕರ್ಮಣಾಂ ಹಸ್ತಾವೇಕಾಯನಮೇವಮ್ । ಸರ್ವೇಷಾಮಾನಂದಾನಾಮುಪಸ್ಥ ಏಕಾಯನಮೇವಮ್।ಸರ್ವೇಷಾಂ ವಿಸರ್ಗಾಣಾಂ ಪಾಯುರೇಕಾಯನಮೇವಂ । ಸರ್ವೇಷಾಮಧ್ವನಾಂ ಪಾದಾವೇಕಾಯನಮೇವಮ್ । ಸರ್ವೇಷಾಂ ವೇದಾನಾಂ ವಾಗೇಕಾಯನಮೇವಮ್ ।**

ಹೇಗೆ ಎಲ್ಲಾ ನೀರಿಗೂ ಸಮುದ್ರತಳ ಅಥವಾ ಸಮುದ್ರಾಭಿಮಾನಿಯಾದ ವರುಣನೇ ಮುಖ್ಯಾಶ್ರಯನೋ ಹಾಗೆಯೇ ಸಮಸ್ತ ಜಗತ್ತಿಗೂ ಭಗವಂತನೇ ಮುಖ್ಯಾಶ್ರಯ. ಹೇಗೆ ಎಲ್ಲಾ ಸ್ಪರ್ಶಜ್ಞಾನಕ್ಕೂ ತ್ವಗಿಂದ್ರಿಯ ಕಾರಣವೋ, ಹೇಗೆ ಎಲ್ಲಾ ರಸಜ್ಞಾನಕ್ಕೂ ರಸನೇಂದ್ರಿಯ ಕಾರಣವೋ, ಹೇಗೆ ಎಲ್ಲಾ ಗಂಧಜ್ಞಾನಕ್ಕೂ ಘ್ರಾಣೇಂದ್ರಿಯ ಕಾರಣವೋ, ಹೇಗೆ ಎಲ್ಲಾ ರೂಪಜ್ಞಾನಕ್ಕೂ ಚಕ್ಷುಸ್ ಕಾರಣವೋ, ಹೇಗೆ ಎಲ್ಲಾ ಶಬ್ದಜ್ಞಾನಕ್ಕೂ ಶ್ರೋತ್ರೇಂದ್ರಿಯ ಕಾರಣವೋ ಹಾಗೆಯೇ ಎಲ್ಲಾ ಜಗತ್ತಿನ ಜ್ಞಾನಕ್ಕೂ ಶ್ರೀಹರಿಯೇ ಮುಖ್ಯಕಾರಣ. ಹೇಗೆ ಎಲ್ಲಾ ಸಂಕಲ್ಪಗಳಿಗೂ ಮನಸ್ಸೇ ಮುಖ್ಯವಾದ ಆಶ್ರಯವೋ, ಹೇಗೆ ಎಲ್ಲಾ ವಿದ್ಯಗಳಿಗೂ ಚಿತ್ತವೇ ಮುಖ್ಯಾಶ್ರಯವೋ, ಹೇಗೆ ಎಲ್ಲಾ ಕರ್ಮಗಳಿಗೂ ಹಸ್ತಗಳೇ ಮುಖ್ಯಾಶ್ರಯವೋ, ಹೇಗೆ ಎಲ್ಲಾ ಆನಂದಗಳಿಗೂ ಉಪಸ್ಥವೇ ಮುಖ್ಯಾಶ್ರಯವೋ,

ಹೇಗೆ ಎಲ್ಲಾ ವಿಸರ್ಜನೆಗಳಿಗೂ ಪಾಯುವೇ ಮುಖ್ಯವಾದ ಆಶ್ರಯವೋ, ಹೇಗೆ ಎಲ್ಲಾ ಗಮನ ಕ್ರಿಯೆಗಳಿಗೂ ಪಾದಗಳೇ ಮುಖ್ಯವಾದ ಆಶ್ರಯವೋ, ಹೇಗೆ ಎಲ್ಲಾ ವೇದಗಳಿಗೂ ವಾಗಿಂದ್ರಿಯವೇ ಮುಖ್ಯವಾದ ಆಶ್ರಯವೋ ಹಾಗೆ ಶ್ರೀಹರಿಯು ಎಲ್ಲಾ ಜಗತ್ತಿಗೂ ಮುಖ್ಯವಾದ ಆಶ್ರಯ.

**ಭಾಷ್ಯ**—**ಏತದೇವ ದರ್ಶಯತಿ 'ಸ ಯಥಾಽರ್ದ್ರೈಧಾಗ್ನೇಃ' 'ಸ ಯಥಾ ಸರ್ವಾಸಾಮಪಾಮ್' ಇತ್ಯಾದಿನಾ । ನ ಹ್ಯಗ್ನಿರೇವ ಧೂಮಃ । ನ ಚಾಽಪ ಏವ ಸಮುದ್ರಃ । ನ ಹ್ಯಪಾಮಾಪ ಏವಾಶ್ರಯಃ । ಕಿಂತು ವರುಣೋಽಪಾಂ ಖಾತೋ ವಾ । ಸ ಏವ ಚ ಸಮುದ್ರ ಇತ್ಯುಚ್ಯತೇ ।**

**ಅನುವಾದ**—ಪ್ರಪಂಚವು ಶ್ರೀಹರಿಯಿಂದ ಉತ್ಪನ್ನವಾಗಿದ್ದು ಶ್ರೀಹರಿಗೇ ಅಧೀನ ಎಂಬುದನ್ನೇ 'ಸ ಯಥಾಽರ್ದ್ರೈಧಾಗ್ನೇಃ' 'ಸ ಯಥಾ ಸರ್ವಾಸಾಮಪಾಂ' ಇತ್ಯಾದಿ ದೃಷ್ಟಾಂತಗಳಿಂದ ತೋರಿಸುತ್ತಾರೆ, ಹೊರತು ಅಭೇದವನ್ನಲ್ಲ. ಏಕೆಂದರೆ ಅಗ್ನಿಯೇ ಧೂಮವಲ್ಲ. ಜಲವೇ ಸಮುದ್ರವಲ್ಲ. ಸಮುದ್ರವೂ ಜಲವೇ ಆದರೆ ಜಲಕ್ಕೆ ಜಲವೇ ಆಶ್ರಯವೆಂದಾಗುತ್ತದೆ. ಇದು ಯುಕ್ತವಲ್ಲ. ಆದರೆ ವರುಣ ನಾಗಲೀ, ಸಮುದ್ರ ತಳವಾಗಲೀ, ನೀರಿಗೆ ಆಶ್ರಯ. ಇಲ್ಲಿ ವರುಣನನ್ನೇ ಅಥವಾ ಸಮುದ್ರತಳವನ್ನೇ ಸಮುದ್ರ ಎಂದು ಕರೆಯುವುದು.

**ಮೋಕ್ಷದಲ್ಲಿಯೂ ಶ್ರೀಹರಿಯು ಸರ್ವಜೀವಾಶ್ರಯ :**

**ಉಪನಿಷತ್**—**ಸ ಯಥಾ ಸೈಂಧವಖಿಲ್ಯ ಉದಕೇ ಪ್ರಾಸ್ತ ಉದಕಮೇವಾನು ವಿಲೀಯೇತ । ನ ಹಾಸ್ಯೋದ್ಗ್ರಹಣಾಯೈವ ಸ್ಯಾತ್ । ಯತೋ ಯತ ಸ್ತ್ವಾದದೀತ ಲವಣಮೇವ । ಏವಂ ವಾ ಅರ ಇದಂ ಮಹದ್ ಭೂತ-ಮನಂತಮಪಾರಂ ವಿಜ್ಞಾನಘನ ಏವೈತೇಭ್ಯೋ ಭೂತೇಭ್ಯಃ ಸಮು-ತ್ಥಾಯ ತಾನ್ಯೇವಾನು ವಿನಶ್ಯತಿ। ನ ಪ್ರೇತ್ಯ ಸಂಜ್ಞಾಽಸ್ತೀತ್ಯರೇ ಬ್ರವೀ-ಮೀತಿ ಹೋವಾಚ ಯಾಜ್ಞವಲ್ಕ್ಯಃ ।**

ಸಮುದ್ರದ ನೀರಿನಲ್ಲಿ ಹಾಕಿದ ಒಂದು ಉಪ್ಪಿನ ಹರಳು ನೀರಿನಲ್ಲಿ ಕರಗಿದಾಗ ಕಣ್ಣಿಗೆ ಕಾಣಿಸುವುದಿಲ್ಲ. ಅದನ್ನು ಪ್ರತ್ಯೇಕವಾಗಿ ಎತ್ತಿಕೊಳ್ಳಲು ಯಾರೂ ಸಮರ್ಥ ನಾಗುವುದಿಲ್ಲ. ಇದು ಪ್ರಸಿದ್ಧ. ಯಾವ ಭಾಗದಿಂದ ನೀರನ್ನು ತೆಗೆದು ಕುಡಿದರೂ ಅದು ಉಪ್ಪಾಗಿಯೇ ಇರುತ್ತದೆ, ಹೊರತು ಉಪ್ಪಿನ ಹರಳು ಕೈಗೆ ಸಿಗುವುದಿಲ್ಲ. ಕರಗಿದ ಉಪ್ಪಿನ ಹರಳಿಗೂ, ಸಮುದ್ರಜಲಕ್ಕೂ ಸಮುದ್ರತಳ ಮತ್ತು ವರುಣರೇ ಮುಖ್ಯವಾಗಿ ಆಶ್ರಯರು. ಇಲ್ಲಿ ಶ್ರೀಹರಿಯು ಸಮುದ್ರತಳದ ಮತ್ತು ವರುಣನ

ಸ್ಥಾನದಲ್ಲಿದ್ದಾನೆ. ಹಿಂದೆ ಮುಕ್ತರಾದವರು ಸಮುದ್ರಜಲದ ಸ್ಥಾನದಲ್ಲಿದ್ದಾರೆ. ಹೊಸದಾಗಿ ಮುಕ್ತನಾದವನು ಉಪ್ಪಿನ ಹರಳಿನ ಸ್ಥಾನದಲ್ಲಿದ್ದಾನೆ. ಹಾಗೆಯೇ ಮೈತ್ರೇಯಿ, ಜ್ಞಾನಸ್ವರೂಪನಾದ ಈ ಜೀವನು ಜಲಾದಿ ಪಂಚಭೂತ ಪರಿಣಾಮ ರೂಪವಾದ ದೇಹವನ್ನು ಹೊಂದಿ ದೇಹೋಪಾದಾನವಾದ ಪಂಚಭೂತಗಳು ಲಯ ಹೊಂದುವಾಗ ದೇಹವಿಯೋಗ ರೂಪವಾದ ಮೋಕ್ಷವನ್ನು ಪಡೆಯುತ್ತಾನೆ. ಅನಂತರ ಅಂತಪಾರಗಳಿಲ್ಲದ, ಶ್ರೇಷ್ಠನಾದ, ಶಾಶ್ವತನಾದ, ಪೂರ್ವಮುಕ್ತರಿಗೆ ಆಶ್ರಯನಾದ ಈ ಶ್ರೀಹರಿಯನ್ನು ಹೊಂದುತ್ತಾನೆ. ಮುಕ್ತಿ ದೊರೆತ ಬಳಿಕ ಏನೂ ಜ್ಞಾನ ಉಂಟಾಗುವುದಿಲ್ಲ ಎಂದು ನಾನು ಹೇಳುತ್ತೇನೆ ಎಂದು ಯಾಜ್ಞವಲ್ಕ್ಯರು ಹೇಳಿದರು.

**ಭಾಷ್ಯ—ಏವಮೇವ ಸೈಂಧವಖಿಲ್ಯಸ್ಯ ವಿಲೀನಸ್ಯ ಸಮಸ್ತಾಂಭಸಶ್ಚ ವರುಣೋಽಪಾಂ ಖಾತೋ ವಾ ಸಮುದ್ರಾಖ್ಯ ಆಶ್ರಯಃ । ವರುಣವದಪಾಂ ಖಾತವದ್ ವಾಽನಂತೋಽಪಾರೋ ಭಗವಾನ್ । ಜೀವ ಏವ ವಿಜ್ಞಾನಘನಾಖ್ಯೋ ಭೂತಸಂಬಂಧಾಜ್ಜಾತಃ ಸನ್ ತಲ್ಲಯಮನು ಭಗವಂತಮಾಪ್ನೋತಿ । ಸಮುದ್ರೇ ಪ್ರಾಸ್ತ ಸೈಂಧವಖಿಲ್ಯವತ್ । ಸಮುದ್ರಜಲಸ್ಥಾನೀಯಾ ಮುಕ್ತಾ ಬಹವ ಏಕಸ್ವಭಾವಾಃ । ಬಹವೋ ಹಿ ಜಲಪರಮಾಣವಃ । ಸಾಮುದ್ರಂ ಜಲಮೇಕಾಶ್ರಯಮ್ ।**

**ಅನುವಾದ**—ಹೇಗೆಯೇ ಕರಗಿದ ಉಪ್ಪಿನ ಹರಳಿಗೂ ಎಲ್ಲ ನೀರಿಗೂ ವರುಣನು ಅಥವಾ ಸಮುದ್ರತಳವು ಮುಖ್ಯವಾಗಿ ಆಶ್ರಯ. ವರುಣನಂತೆ ಸಮುದ್ರತಳದಂತೆ ಪರಮಾತ್ಮನು ಅಂತ ಪಾರಗಳಿಲ್ಲದವನು. ವಿಜ್ಞಾನಘನ ಎನಿಸಿರುವ ಜೀವನೇ ಪಂಚಭೂತಗಳಿಂದಾದ ದೇಹದಿಂದ ಉತ್ಪತ್ತಿಯನ್ನು ಹೊಂದಿ, ದೇಹಲಯ ಹೊಂದಿದನೇ ಭಗವಂತನನ್ನು ಹೊಂದುತ್ತಾನೆ, ಸಮುದ್ರದಲ್ಲಿ ಹಾಕಿದ ಉಪ್ಪಿನಹರಳು ಸಮುದ್ರವನ್ನು ಸೇರುವಂತೆ. ಹಿಂದೆ ಮುಕ್ತರಾದ ಜೀವರು ಬಹಳ ಮಂದಿ ಮತ್ತು ಪರಸ್ಪರ ಒಂದೇ ಸ್ವಭಾವದವರು. ಆದ್ದರಿಂದ ಅವರು ಸಮುದ್ರಜಲದ ಸ್ಥಾನದಲ್ಲಿರುವರು. ಸಮುದ್ರದ ನೀರಿನ ಕಣಗಳೂ ಬಹಳ ಇವೆಯಷ್ಟೆ. ಹಾಗಾದರೆ ಸಮುದ್ರಜಲ ಎಂಬ ಏಕವಚನ ಪ್ರಯೋಗ ಹೇಗೆ ಕೂಡುತ್ತದೆ ಎಂದರೆ ಸಮುದ್ರದ ಎಲ್ಲ ಜಲಕಣಗಳಿಗೆ ಒಬ್ಬನೇ ವರುಣನು ಆಶ್ರಯನಾಗಿದ್ದಾನೆ. ಸಮುದ್ರದ ಜಲಕ್ಕೆಲ್ಲಾ ಆಶ್ರಯ ಒಂದೇ ಆಗಿರುವುದರಿಂದ ಸಮುದ್ರಜಲ ಎಂಬ ಏಕವಚನವು ಕೂಡುತ್ತದೆ.

**ಮುಕ್ತರು ಅಮುಕ್ತರಿಗೆ ಕಾಣಿಸಿಕೊಳ್ಳರು :**

**ಉಪನಿಷತ್—ಸಾ ಹೋವಾಚ ಮೈತ್ರೇಯಿ 'ಅತ್ರೈವ ಮಾ ಭಗವಾನ-**

**ಮೂನುಹತ್ ನ ಪ್ರೇತ್ಯ ಸಂಜ್ಞಾಽಸ್ತೀ'ತಿ । ಸ ಹೋವಾಚ 'ನ ವಾ ಅರೇಽಹಂ ಮೋಹಂ ಬ್ರವೀಮಿ। ಅಲಂ ವಾ ಅರ ಇದಂ ವಿಜ್ಞಾನಾಯ।'**

ಮೈತ್ರೇಯಿಯು ಹೇಳಿದಳು 'ಮುಕ್ತಿ ದೊರೆತಾಗ ಜ್ಞಾನವೇ ಇಲ್ಲವೆಂದು ಹೇಳಿ ಪೂಜ್ಯರು, ಅವಶ್ಯಕವಾಗಿ ತಿಳಿದುಕೊಳ್ಳಬೇಕಾದ ವಿಷಯದಲ್ಲಿಯೇ ನನಗೆ ಅಜ್ಞಾನ ವನ್ನುಂಟು ಮಾಡಿದಿರಿ. ಆದ್ದರಿಂದ ಸರಿಯಾಗಿ ಮುಕ್ತನ ಸ್ವರೂಪವನ್ನು ತಿಳಿಸ ಬೇಕು' ಎಂದು. ಯಾಜ್ಞವಲ್ಕ್ಯರು 'ನಾನು ಅಜ್ಞಾನ ಉಂಟುಮಾಡುವ ಮಾತನ್ನು ಹೇಳುತ್ತಿಲ್ಲ. ಮುಕ್ತಸಮೂಹವು ಪರಮಾತ್ಮ ಸ್ವರೂಪ ಮುಂತಾದುವನ್ನು ವಿಶೇಷ ವಾಗಿ ತಿಳಿದುಕೊಳ್ಳಲು ಸಮರ್ಥವಾಗಿಯೇ ಇದೆ. ಅಮುಕ್ತರಿಗೆ ಮುಕ್ತಸ್ವರೂಪದ ಪ್ರತ್ಯಕ್ಷಜ್ಞಾನ ಏನೂ ಉಂಟಾಗುವುದಿಲ್ಲ ಎಂದೇ ನನ್ನ ಮಾತಿನ ಅಭಿಪ್ರಾಯ' ಎಂದು ಹೇಳಿದರು.

**ಅದ್ವೈತಮೋಕ್ಷವು ಪುರುಷಾರ್ಥವಾಗಲಾರದು :**

**ಉಪನಿಷತ್—ಯತ್ರ ಹಿ ದ್ವೈತಮಿವ ಭವತಿ ತದಿತರ ಇತರಂ ಜಿಘ್ರತಿ । ತದಿತರ ಇತರಂ ಪಶ್ಯತಿ । ತದಿತರ ಇತರಂ ಶೃಣೋತಿ । ತದಿತರ ಇತರ-ಮಭಿವದತಿ । ತದಿತರ ಇತರಂ ಮನುತೇ । ತದಿತರ ಇತರಂ ವಿಜಾನಾತಿ । ಯತ್ರ ವಾ ಅಸ್ಯ ಸರ್ವಮಾತ್ಮೈವಾಭೂತ್ ತತ್ ಕೇನ ಕಂ ಜಿಘ್ರೇತ್। ತತ್ ಕೇನ ಕಂ ಪಶ್ಯೇತ್ । ತತ್ ಕೇನ ಕಂ ಶೃಣುಯಾತ್ । ತತ್ ಕೇನ ಕಮಭಿವದೇತ್ । ತತ್ ಕೇನ ಕಂ ಮನ್ವೀತ । ತತ್ ಕೇನ ಕಂ ವಿಜಾನೀಯಾತ್। ಯೇನೇದಂ ಸರ್ವಂ ವಿಜಾನಾತಿ ತಂ ಕೇನ ವಿಜಾನೀ-ಯಾತ್ । ವಿಜ್ಞಾತಾರಮರೇ ಕೇನ ವಿಜಾನೀಯಾದಿ'ತಿ ।**

**ಇತಿ ಮೈತ್ರೇಯಿಬ್ರಾಹ್ಮಣಮ್ ।**

ಮುಕ್ತಿಯಲ್ಲಿ ಆತ್ಮನೊಬ್ಬನೇ ಉಳಿದು ಎರಡನೇ ವಸ್ತುವೇ ಇಲ್ಲದಿರುವುದರಿಂದ ಮುಕ್ತನಿಗೆ ಜ್ಞಾನವೇ ಇಲ್ಲ ಎಂಬ ಮತದಲ್ಲಿ ಅತಿಪ್ರಸಂಗವಿದೆ. ಹೇಗೆಂದರೆ, ಯಾವಾಗ ಪರತಂತ್ರವಾದ ಭಿನ್ನವಸ್ತು ಇರುತ್ತದೆಯೋ ಆಗ ಜೀವನು ತನ್ನಿಂದ ಬೇರೆಯಾಗಿರುವ ಗಂಧವನ್ನು ಆಘ್ರಾಣಿಸುತ್ತಾನೆ, ರೂಪವನ್ನು ನೋಡುತ್ತಾನೆ, ಶಬ್ದ ವನ್ನು ಕೇಳುತ್ತಾನೆ, ಮಾತನ್ನು ಆಡುತ್ತಾನೆ, ವಸ್ತುವನ್ನು ಸಾಮಾನ್ಯವಾಗಿಯೂ ವಿಶೇಷವಾಗಿಯೂ ತಿಳಿಯುತ್ತಾನೆ. ಜೀವನಿಗೆ ಮುಕ್ತಿಯಲ್ಲಿ ಇಂದ್ರಿಯ ಮತ್ತು ವಿಷಯಗಳೆಲ್ಲವೂ ಆತ್ಮಸ್ವರೂಪವೇ ಆದರೆ, ಆತ್ಮಾತಿರಿಕ್ತವಾದ ಯಾವ ವಸ್ತುವೂ ಇಲ್ಲದಿದ್ದರೆ, ಯಾವ ಇಂದ್ರಿಯದಿಂದ ಏನನ್ನು ಆಘ್ರಾಣಿಸುತ್ತಾನೆ? ಯಾವ ಇಂದ್ರಿಯ ದಿಂದ ಏನನ್ನು ನೋಡುತ್ತಾನೆ? ಯಾವ ಇಂದ್ರಿಯದಿಂದ ಏನನ್ನು ಕೇಳುತ್ತಾನೆ?

ಯಾವ ಇಂದ್ರಿಯದಿಂದ ಏನು ಮಾತನಾಡುತ್ತಾನೆ? ಯಾವ ಇಂದ್ರಿಯದಿಂದ ಏನನ್ನು ತಿಳಿಯುತ್ತಾನೆ? ಯಾವ ಇಂದ್ರಿಯದಿಂದ ಏನನ್ನು ವಿಶೇಷವಾಗಿ ತಿಳಿಯು ತ್ತಾನೆ? ಯಾವ ಪರಮಾತ್ಮನಿಂದ ಜೀವನು ಇವೆಲ್ಲವನ್ನೂ ತಿಳಿಯುತ್ತಾನೆಯೋ, ಆ ಪರಮಾತ್ಮನನ್ನಾದರೂ ಯಾವ ಇಂದ್ರಿಯದಿಂದ ತಿಳಿಯುತ್ತಾನೆ? ಎಲ್ಲವನ್ನೂ ತಿಳಿ ಯುವ ತನ್ನನ್ನು ಯಾವ ಇಂದ್ರಿಯದಿಂದ ತಿಳಿಯುತ್ತಾನೆ? ಇನ್ನೊಬ್ಬ ಮುಕ್ತ ನನ್ನಾದರೂ ಯಾವುದರಿಂದ ತಿಳಿಯುತ್ತಾನೆ? ಆತ್ಮನೊಬ್ಬನೇ ಉಳಿಯುವುದು ಮೋಕ್ಷ ಎಂದು ಹೇಳುವ ಮತದಲ್ಲಿ ಮೋಕ್ಷದಲ್ಲಿ ಜೀವನಿಗೆ ಗಂಧಾದಿ ವಿಷಯ ವಸ್ತು ಭೋಗವಾಗಲೀ, ತನ್ನ ಹಾಗೂ ಮುಕ್ತನಾದ ಬೇರೆ ಜೀವನ ಜ್ಞಾನವಾಗಲೀ, ಪರಮಾತ್ಮನ ದರ್ಶನವಾಗಲಿ ಇರುವುದಿಲ್ಲ. ಹೀಗೆ ಯಾವ ಜ್ಞಾನವೂ ಇಲ್ಲದಿರುವು ದರಿಂದ ಮೋಕ್ಷವು ಪುರುಷಾರ್ಥವೇ ಆಗಲಾರದು.

**ಭಾಷ್ಯ—ಮುಕ್ತಾನಾಂ ಸಂಜ್ಞಾಽಸ್ತ್ಯನ್ಯೈರ್ನ ಜ್ಞಾಯತೇ ಶಾಸ್ತ್ರಂ ವಿನಾ । 'ಸಂಜ್ಞಾನಾಸ್ತಿ' ಇತ್ಯುಕ್ತ್ವಾ 'ಅಲಂ ವಾ ಅರ ಇದಂ ವಿಜ್ಞಾನಾಯ' ಇತ್ಯುಕ್ತೇರ್ನ ವಿಜಾನಾತೀತ್ಯುಕ್ತೇ ಪ್ರತಿಜ್ಞಾವಿರೋಧಃ । ನ ಚ ಸರ್ವಾಜ್ಞಾನಂ ಪುರುಷಾರ್ಥಃ । 'ಮಗ್ನಸ್ಯ ಹಿ ಪರೇಽಜ್ಞಾನೇ ಕಿಂ ನ ದುಃಖತರಂ ಭವೇತ್' ಇತಿ ಚ ।**

**ಅನುವಾದ**—ನ ಪ್ರೇತ್ಯ ಸಂಜ್ಞಾಸ್ತಿ ಎಂದರೆ ಮುಕ್ತನ ಹೆಸರಾಗಲೀ ಸ್ವರೂಪ ವಾಗಲೀ ಶಾಸ್ತ್ರವನ್ನು ಬಿಟ್ಟು ಬೇರೆ ಯಾವ ರೀತಿಯಿಂದಲೂ ಅಮುಕ್ತರಿಗೆ ತಿಳಿ ಯಲು ಶಕ್ಯವಿಲ್ಲ ಎಂದರ್ಥ. ಮುಕ್ತನಿಗೆ ಯಾವ ಜ್ಞಾನವೂ ಇಲ್ಲ ಎಂದು ಅರ್ಥ ಮಾಡಿದರೆ ಅದರಿಂದ, ಮುಂದೆ 'ಅಲಂ ವಾ ಅರ ಇದಂ ವಿಜ್ಞಾನಾಯ' 'ಈ ಮುಕ್ತ ಸಮೂಹವು ವಿಶೇಷವಾಗಿ ತಿಳಿದುಕೊಳ್ಳಲು ಸಮರ್ಥವಾಗಿದೆ' ಎಂಬುದಕ್ಕೆ ವಿರೋಧ ಬರುತ್ತದೆ. ಸರ್ವಪದಾರ್ಥಗಳ ಅಜ್ಞಾನವು ಪುರುಷಾರ್ಥವೂ ಅಲ್ಲ. 'ಗಾಢವಾದ ಅಜ್ಞಾನದಲ್ಲಿ ಮುಳುಗಿದವನಿಗೆ ಆ ಅಜ್ಞಾನವು ಅತ್ಯಂತ ದುಃಖದಾಯಕವಲ್ಲವೆ?' ಎಂದೂ ಮೋಕ್ಷಧರ್ಮವಚನವಿದೆ.

**ಭಾಷ್ಯ—ನಾನಾತ್ವೇನಾಭಿಸಂಬುದ್ಧಾಸ್ತದಾ ತತ್ಕಾಲಭಾವಿನಾ ।**
**ಸಂಯೋಗಃ ಪ್ರಕೃತೇರ್ನೈಷಾಂ ಮುಕ್ತಾನಾಂ ತತ್ತ್ವದರ್ಶನಾತ್ ।**
**ಪ್ರವರ್ತತಿ ಪುನಃ ಸರ್ಗೇ ತೇಷಾಂ ಸಾ ನ ಪ್ರವರ್ತತೇ ।**
**ಆನಂದೇನ ವಿನಾ ಚೈವ ಭೋಗೇನ ವಿಷಯೇಣ ಚ ।**
**ಸರ್ವೇ ತೇ ಬ್ರಹ್ಮಣಸ್ತುಲ್ಯಾ ಆಧಿಪತ್ಯಂ ನ ಚೈವ ಹಿ ।**
**ಇತಿ ವಾಯುಪ್ರೋಕ್ತೇ ।**

**ಇವಶಬ್ದಸ್ತು ಅಸ್ವಾತಂತ್ರ್ಯಾರ್ಥೇ । ನ ಹಿ ತದಧೀನಂ ಪೃಥಗಿತ್ಯೇ-ವೋಚ್ಯತೇ । ತಸ್ಮಾದಮುಕ್ತೈರ್ನ ಜ್ಞಾಯತ ಇತಿ ಸಂಜ್ಞಾ ನಾಸ್ತೀ-ತ್ಯುಕ್ತಮ್ ।**

**ಅನುವಾದ**—'ಮೋಕ್ಷಕಾಲದಲ್ಲಿಯೂ ಭೇದವಿದೆ. ಮುಕ್ತರು ಈ ಭೇದದಿಂದ ಕೂಡಿದ್ದು ಅನೇಕ ವಿಷಯಗಳ ಜ್ಞಾನವನ್ನು ಪಡೆಯುತ್ತಾರೆ. ತತ್ತ್ವಜ್ಞಾನಿಗಳಾದುದರಿಂದ ಪ್ರಕೃತಿಯ ಸಂಯೋಗವು ಅವರನ್ನು ಸೃಷ್ಟಿಕಾಲದಲ್ಲಿ ಪುನಃ ಜನ್ಮತಳೆಯುವಂತೆ ಮಾಡುವುದಿಲ್ಲ. ಅಮುಕ್ತರನ್ನು ಮಾತ್ರ ಹಾಗೆ ಮಾಡುತ್ತದೆ. ಆನಂದನಾಮ್ಯ ಒಂದನ್ನು ಬಿಟ್ಟು ಭೋಗವನ್ನು ಅನುಭವಿಸುವ ವಿಷಯದಲ್ಲಿಯೂ, ವಿಷಯಪದಾರ್ಥಗಳ ಜ್ಞಾನದ ವಿಷಯದಲ್ಲಿಯೂ ಮುಕ್ತರು ಪರಮಾತ್ಮನಿಗೆ ಸಮಾನರು. ಜಗತ್ತಿನ ಒಡೆತನ ಎಂದೂ ಅವರಿಗಿಲ್ಲ ಎಂದು ವಾಯುಪ್ರೋಕ್ತದಲ್ಲಿ ಹೇಳಿದೆ.

ಯತ್ರ ಹಿ ದ್ವೈತಮಿವ ಎಂಬಲ್ಲಿರುವ ಇವಶಬ್ದವು ಭಿನ್ನವಾದ ವಸ್ತುವಿಗೆ ಅಸ್ವಾತಂತ್ರ್ಯವನ್ನು ಹೇಳುತ್ತದೆ ಹೊರತು ಭೇದಮಿಥ್ಯಾತ್ವವನ್ನು ಹೇಳುವುದಿಲ್ಲ. ಯಾವುದು ಯಾವುದರ ಅಧೀನವೋ ಅದನ್ನು ಅದಕ್ಕಿಂತ 'ಭಿನ್ನ' ಎಂದು ಇವಶಬ್ದವನ್ನು ಸೇರಿಸದೆ ಹೇಳುವುದಿಲ್ಲ. ಇವಶಬ್ದವನ್ನು ಸೇರಿಸಿಯೇ ಹೇಳುತ್ತಾರೆ. ಇದು ಅನುಭವ ಸಿದ್ಧ. ಆದ್ದರಿಂದ ಮೋಕ್ಷದಲ್ಲಿ ಜ್ಞಾನವೇ ಇಲ್ಲವೆಂದು ವ್ಯಾಖ್ಯಾನಿಸಿದರೆ ಅನೇಕ ಅನುಪಪತ್ತಿಗಳು ಬರುವುದರಿಂದ 'ಸಂಜ್ಞಾ ನಾಸ್ತಿ' ಎಂದರೆ ಮುಕ್ತರ ಹೆಸರೂ ಸ್ವರೂಪವೂ ಅಮುಕ್ತರಿಂದ ತಿಳಿಯಲ್ಪಡುವುದಿಲ್ಲ ಎಂದಿಷ್ಟೇ ಅರ್ಥ.

**ಹಯಗ್ರೀವ ಸಂಹಿತೆಯಲ್ಲಿ ಮೈತ್ರೇಯಿ ಬ್ರಾಹ್ಮಣದ ಸಾರ :**

**ಭಾಷ್ಯ—ಪತಿರ್ಜಾಯಾಪ್ರಿಯೋ ನೈವ ಸ್ವೇಚ್ಛಯಾ ತು ಭವಿಷ್ಯತಿ ।**
**ವಿಷ್ಣೋರಿಚ್ಛಾಬಲೇನೈವ ಸ್ವಯಂ ಚ ಸ್ವಪ್ರಿಯೋ ಭವೇತ್ ।**
**ವಿಷ್ಣೋರಿಚ್ಛಾವಶೇನೈವ ಹಂತಿ ಹ್ಯಾತ್ಮನಮಾತ್ಮನಾ ।**
**ಸ್ವಾತ್ಮಾನಮಪ್ರಿಯಂ ಕೃತ್ವಾ ನಿರಯೇ ಪಾತಯತ್ಯಪಿ ।**
**ಪ್ರಾಧಾನ್ಯೇನ ಹರೇರ್ಜ್ಞಾನಾತ್ ಸರ್ವಂ ವಿದಿತವದ್ ಭವೇತ್ ।**

**ಅನುವಾದ**—ಪತಿಯು ತನ್ನ ಇಚ್ಛೆಯಿಂದಲೇ ಹೆಂಡತಿಗೆ ಪ್ರಿಯನಾಗುವುದಿಲ್ಲ. ವಿಷ್ಣುವಿನ ಇಚ್ಛೆಯಿಂದಲೇ ಪ್ರಿಯನಾಗುತ್ತಾನೆ. ತನಗೆ ತಾನು ಪ್ರಿಯನಾಗುವುದೂ ವಿಷ್ಣುವಿನ ಇಚ್ಛೆಯಿಂದಲೇ. ಸ್ವೇಚ್ಛೆಯಿಂದಲ್ಲ. ಏಕೆಂದರೆ ತನಗೆ ತನ್ನನ್ನೇ ಅಪ್ರಿಯನನ್ನಾಗಿ ಮಾಡಿಕೊಂಡು, ವಿಷ್ಣುವಿನ ಇಚ್ಛೆಯಿಂದಲೇ ಬುದ್ಧಿಪೂರ್ವಕವಾಗಿ ಆತ್ಮಹತ್ಯವನ್ನು ಮಾಡಿಕೊಳ್ಳುತ್ತಾನೆ. ಮತ್ತು ಬುದ್ಧಿಪೂರ್ವಕವಾಗಿ ದುಷ್ಕರ್ಮಗಳನ್ನು ಮಾಡಿ ನರಕದಲ್ಲಿ ತನ್ನನ್ನೇ ಕೆಡವಿಕೊಳ್ಳುತ್ತಾನೆ. ಶ್ರೀಹರಿಗೆ ಎಲ್ಲಕ್ಕಿಂತ ಪ್ರಾಧಾನ್ಯವಿರುವುದರಿಂದ ಶ್ರೀಹರಿಯನ್ನು ತಿಳಿದರೆ ಎಲ್ಲವನ್ನೂ ತಿಳಿದ ಫಲವು ಉಂಟಾಗುತ್ತದೆ.

**ಭಾಷ್ಯ—ಬ್ರಹ್ಮಜಾತ್ಯಾತ್ಮಕಂ ವೇತ್ತಿ ನೈವ ವಿಷ್ಣುವಶಂ ಹಿ ಯಃ ।**
**ಬ್ರಹ್ಮಾಣಂ ತಂ ತತೋ ಬ್ರಹ್ಮಾ ಪಾತಯೇತ್ ತಮಸಿ ಧ್ರುವಮ್ ।**
**ಏವಂ ಕ್ಷತ್ರಾತ್ಮಕೋ ವಾಯುರ್ವಿತ್ತರೂಪಶ್ಚ ವಿತ್ತಪಃ ।**
**ಪಂಚ ಭೂತಾನಿ ವಿಶ್ವೇ ಚ ದೇವಾ ಲೋಕಾಭಿಮಾನಿನಃ ।**
**ಸರ್ವಾಭಿಮಾನಿನೀ ದೇವೀ ಮೂಲಪ್ರಕೃತಿರೇವ ಚ ।**
**ಸರ್ವಂ ವಿಷ್ಣೌ ಸ್ಥಿತಂ ವಿಷ್ಣೋರ್ಜಾತಂ ವಿಷ್ಣೋರ್ವಶೇ ಸದಾ ।**

**ಅನುವಾದ**—ಬ್ರಹ್ಮ ತಂ ಪರಾದಾತ್ ಎಂದರೆ ಯಾರು ಬ್ರಾಹ್ಮಣಜಾತಿಗೆ ಅಭಿಮಾನಿಯಾದ ಮತ್ತು ಬ್ರಾಹ್ಮಣಜಾತ್ಯಾಕ್ರಾಂತನಾದ ಬ್ರಹ್ಮನನ್ನು ವಿಷ್ಣುವಿನ ವಶನೆಂದು ತಿಳಿಯುವುದಿಲ್ಲವೋ ಅವನನ್ನು ಬ್ರಹ್ಮನು ನಿಶ್ಚಯವಾಗಿ ಅಂಧಂತಮಸ್ಸಿನಲ್ಲಿ ಕೆಡವುತ್ತಾನೆ. ಹೀಗೆಯೇ ಕ್ಷತ್ರಂ ತಂ ಪರಾದಾತ್ ಎಂದು ಮುಂತಾದುದಕ್ಕೆ ಕ್ಷತ್ರಿಯಜಾತ್ಯಭಿಮಾನಿಯಾದ ವಾಯು, ವಿತ್ತಾಭಿಮಾನಿಯಾದ ಕುಬೇರ, ಪಂಚಭೂತಾಭಿಮಾನಿ ದೇವತೆಗಳು, ವಿಶ್ವೇದೇವತೆಗಳು, ಲೋಕಾಭಿಮಾನಿ ದೇವತೆಗಳು, ಸರ್ವಕ್ಕೂ ಅಭಿಮಾನಿಯಾದ ಲಕ್ಷ್ಮೀದೇವಿ ಇವರೆಲ್ಲರೂ, ತಮ್ಮನ್ನು ಯಾರು ವಿಷ್ಣುವಿನ ಅಧೀನವೆಂದು ತಿಳಿಯುವುದಿಲ್ಲವೋ ಅವನನ್ನು ಅಂಧಂತಮಸ್ಸಿನಲ್ಲಿ ಕೆಡವುತ್ತಾರೆ. ಇವರೆಲ್ಲರೂ ವಿಷ್ಣುವನ್ನೇ ಆಶ್ರಯಿಸಿಕೊಂಡಿರುವವರು. ವಿಷ್ಣುವಿನಿಂದಲೇ ಜನಿಸಿದವರು ಮತ್ತು ಸದಾ ವಿಷ್ಣುವಿನ ವಶದಲ್ಲಿಯೇ ಇರುವವರು ಎಂದರ್ಥ.

**ಭಾಷ್ಯ—ಶಂಖಶಬ್ದೋ ಯಥಾ ಶಂಖದೇವತಾವಶಗಃ ಸ್ಥಿತಃ ।**
**ತಸ್ಮಾದ್ ವೇದಾಃ ಸಮುತ್ಪನ್ನಾ ವಿದ್ಯಾಖ್ಯಾ ಮೂಲಿಕಾ ಶ್ರುತಿಃ ।**
**ಸರ್ವೋಪನಿಷದಶ್ಚೈವ ಪಂಚರಾತ್ರಾಖ್ಯಸಂಹಿತಾಃ ।**
**ಬ್ರಹ್ಮಸೂತ್ರಾಣಿ ವೇದಾನಾಂ ವ್ಯಾಖ್ಯಾಸ್ತಾಸಾಂ ಚ ವಿಸ್ತರಃ ।**
**ಸರ್ವಮೇತಜ್ಜಗಚ್ಚೈವ ನಿಃಸೃತಂ ತುರಗಾನನಾತ್ ।**
**ವರುಣಸ್ಯ ವಶೇ ಯದ್ವದಾಪ ಏವಂ ವಶೇ ಹರೇಃ ।**
**ಸರ್ವೇ ಬದ್ಧಾಶ್ಚ ಮುಕ್ತಾಶ್ಚ ತಾರತಮ್ಯಾತ್ಮನಾ ಸ್ಥಿತಾಃ ।**

**ಅನುವಾದ**—ಶಂಖದಿಂದುಂಟಾದ ಶಬ್ದವು ಹೇಗೆ ಶಂಖಾಭಿಮಾನಿದೇವತೆಯ ಅಧೀನವೋ ಹಾಗೆ ವಿಷ್ಣುವಿನಿಂದುಂಟಾದ ಈ ಸಮಸ್ತ ಜಗತ್ತು ವಿಷ್ಣುವಿನ ಅಧೀನ. ಆ ಹಯಗ್ರೀವರೂಪಿಯಾದ ಶ್ರೀಹರಿಯಿಂದಲೇ ಋಗಾದಿ ವೇದಗಳೂ, ವಿದ್ಯೆ ಎನಿಸಿದ ಮೂಲವೇದವೂ, ಎಲ್ಲ ಉಪನಿಷತ್ತುಗಳೂ, ಪಂಚರಾತ್ರ ಸಂಹಿತೆಗಳೂ, ಬ್ರಹ್ಮಸೂತ್ರಗಳೂ, ವೇದವ್ಯಾಖ್ಯಾನಗಳೂ, ಅವುಗಳ ವ್ಯಾಖ್ಯಾನಗಳೂ, ಅರ್ಥರೂಪವಾದ ಈ ಜಗತ್ತೂ ಇವೆಲ್ಲವೂ ಹೊರಬಂದಿವೆ. ಹೇಗೆ ಜಲವು ವರುಣನ ಅಧೀನವೋ

ಹಾಗೆ ತಾರತಮ್ಯದಿಂದಿರುವ ಬದ್ಧರು ಮತ್ತು ಮುಕ್ತರೆಲ್ಲರೂ ಶ್ರೀಹರಿಯ ವಶದಲ್ಲಿದ್ದಾರೆ.

**ಭಾಷ್ಯ—ಯದಿ ಮುಕ್ತಸ್ಯ ವಿಜ್ಞಾನಂ ಗಂಧಾದಿವಿಷಯೇ ನ ಚೇತ್ ।**
**ತಥೈವ ಭಗವದ್ರೂಪೇ ಸ್ವರೂಪೇ ಚ ಪರಸ್ಪರಮ್ ।**
**ಏವಮಜ್ಞಾನರೂಪಾಂ ತಾಂ ಮುಕ್ತಿಂ ಕೋ ನಾಮ ವಾಂಛತಿ ।**
**ತಸ್ಮಾದ್ ವಿಷ್ಣೋರ್ವಶೇ ಸರ್ವೇ ಯಥೇಷ್ಟಮುಪಭೋಗಿನಃ ।**
**ಮುಕ್ತಾಃ ಸದಾ ತಾರತಮ್ಯಾತ್ ತಿಷ್ಠಂತ್ಯಾ ಬ್ರಹ್ಮಣೋಽಖಿಲಾಃ ।**
**ಇತಿ ಹಯಗ್ರೀವ ಸಂಹಿತಾಯಾಮ್ ।**

**ಅನುವಾದ**—ಮುಕ್ತನಿಗೆ ಗಂಧಾದಿ ವಿಷಯಗಳಲ್ಲಿಯೂ, ಭಗವಂತನ ಸ್ವರೂಪ ವಿಷಯದಲ್ಲಿಯೂ, ತನ್ನ ಸ್ವರೂಪ ವಿಷಯದಲ್ಲಿಯೂ, ಇನ್ನೊಬ್ಬ ಮುಕ್ತನ ವಿಷಯದಲ್ಲಿಯೂ ಜ್ಞಾನವೇ ಇಲ್ಲವೆಂದಾದರೆ ಇಂತಹ ಅಜ್ಞಾನರೂಪವಾದ ಮುಕ್ತಿಯನ್ನು ಯಾರು ತಾನೇ ಬಯಸುತ್ತಾರೆ? ಮೋಕ್ಷವು ಎಲ್ಲರಿಂದಲೂ ಬಯಸಲ್ಪಡುತ್ತದೆ. ಆದರಿಂದ ಬ್ರಹ್ಮದೇವರ ವರೆಗಿನ ಮುಕ್ತರೆಲ್ಲರೂ ತಾರತಮ್ಯದಿಂದ ಇದ್ದು, ವಿಷ್ಣು ವಶರಾಗಿ ಯಥೇಷ್ಟ ಭೋಗಗಳನ್ನು ಅನುಭವಿಸುತ್ತಲೇ ಇರುತ್ತಾರೆ ಎಂದು ಹಯಗ್ರೀವ ಸಂಹಿತೆಯಲ್ಲಿ ಹೇಳಿದೆ.

**ಭಾಷ್ಯ—ಸರ್ಗೇ ಸರ್ಗೇ ತು ಯೋ ನೈವ ಶಬ್ದತೋಽಪ್ಯನ್ಯಥಾ ಭವೇತ್ ।**
**ಶ್ರುತ್ಯಾಖ್ಯಃ ಸ ತು ವಿಜ್ಞೇಯ ಇತಿಹಾಸಾದಿರರ್ಥತಃ ।**
**ಭಗವದ್‌ದೃಷ್ಟಮೇವಾನ್ಯೈರ್ಬ್ರಹ್ಮಾದ್ಯೈರ್ದೃಶ್ಯತೇ ಯದಿ ।**
**ಋಷಿಭೇದಸ್ತು ತತ್ರ ಸ್ಯಾದ್ ವೇದೋ ನಾವಿಷ್ಣುನಿರ್ಗತಃ ।**
**ವೇದ ಇತ್ಯೇವ ವಿಷ್ಣೂಕ್ತಸ್ತಪಸಾ ದೃಶ್ಯತೇ ಪರೈಃ । ಇತಿ ಚ ।**
**ಇತಿ ಮೈತ್ರೇಯಿ ಬ್ರಾಹ್ಮಣಂ ॥**

**ಅನುವಾದ**—ವೇದಗಳು ಮತ್ತು ಇತಿಹಾಸಗಳು ವಿಷ್ಣುವಿನಿಂದಲೇ ಹುಟ್ಟಿದುವೆಂದರೆ ವೇದಗಳು ಅಪೌರುಷೇಯ, ಇತಿಹಾಸಗಳು ಪೌರುಷೇಯ ಎಂಬುದು ಹೇಗೆ ಕೂಡುತ್ತದೆ ಎಂದರೆ, ಪ್ರತಿಸೃಷ್ಟಿಯಲ್ಲಿಯೂ ಯಾವುದು ಶಬ್ದದಲ್ಲಿಯೂ ಅರ್ಥದಲ್ಲಿಯೂ ವ್ಯತ್ಯಾಸ ಹೊಂದುವುದಿಲ್ಲವೋ ಅದು ಅಪೌರುಷೇಯವಾದ ವೇದ. ಅರ್ಥದಲ್ಲಿ ಮಾತ್ರ ವ್ಯತ್ಯಾಸವಾಗದೆ ಶಬ್ದದಲ್ಲಿ ವ್ಯತ್ಯಾಸವಾಗುವ ಮಹಾಭಾರತಾದಿಗಳು ಪೌರುಷೇಯವೆನಿಸುತ್ತವೆ. ಎಲ್ಲಾ ವೇದಗಳೂ ಭಗವಂತನಿಂದಲೇ ನಿರ್ಗತವಾದರೆ ಬ್ರಹ್ಮಾದಿಗಳು ಋಷಿಗಳು ಎಂಬ ಮಾತು ಹೇಗೆ ಕೂಡುತ್ತದೆ ಎಂದರೆ, ಭಗವಂತನು ಕಂಡ ವೇದಗಳನ್ನೇ ಬ್ರಹ್ಮಾದಿಗಳು ಕಂಡುಕೊಂಡಾಗ ಅವರೂ ಋಷಿಗಳೆನಿಸುತ್ತಾರೆ. ಒಂದು ವೇದ ಕೇವಲ ಬ್ರಹ್ಮದೇವರಿಂದಲೇ ದೃಷ್ಟವಾದರೆ

ಬ್ರಹ್ಮದೇವರು ಮಾತ್ರ ಅದಕ್ಕೆ ಋಷಿ ಎನಿಸುತ್ತಾರೆಯೇ ಎಂಬ ಶಂಕೆಗೆ ಅವಕಾಶವಿಲ್ಲ. ಏಕೆಂದರೆ ವೇದವೆಲ್ಲವೂ ವಿಷ್ಣುವಿನಿಂದಲೇ ಹೊರಟಿರುತ್ತದೆ. ಆತನಿಂದ ಹೊರಡದಿದ್ದ ವೇದವೇ ಇಲ್ಲ. ಭಗವಂತನೂ ಬ್ರಹ್ಮಾದಿಗಳೂ ಒಂದೇ ವೇದವನ್ನು ಕಂಡುಕೊಂಡರೆ ಅವರಲ್ಲಿ ವಿಶೇಷವೇನು ಎಂದರೆ, ಬ್ರಹ್ಮಾದಿಗಳು ತಪಸ್ಸು ಮಾಡಿಯೇ ಇದು ವೇದ ಎಂದು ಕಂಡುಕೊಳ್ಳುತ್ತಾರೆ. ವಿಷ್ಣುವಿನಂತೆ ತಪಸ್ಸು ಮಾಡದೆ ಅಲ್ಲ ಎಂದೂ ಹೇಳಿದೆ.

## ಪೃಥಿವ್ಯಾದ್ಯಭಿಮಾನಿ ಶರೀರಾಭಿಮಾನಿಗಳಲ್ಲಿ ಒಬ್ಬನೇ ಹಯಗ್ರೀವ :

**ಉಪನಿಷತ್—ಇಯಂ ಪೃಥಿವೀ ಸರ್ವೇಷಾಂ ಭೂತಾನಾಂ ಮಧು । ಅಸ್ಯೈ ಪೃಥಿವ್ಯೈ ಸರ್ವಾಣಿ ಭೂತಾನಿ ಮಧು । ಯಶ್ಚಾಯಮಸ್ಯಾಂ ಪೃಥಿವ್ಯಾಂ ತೇಜೋಮಯೋಽಮೃತಮಯಃ ಪುರುಷೋ ಯಶ್ಚಾಯ-ಮಧ್ಯಾತ್ಮಂ ಶಾರೀರಸ್ತೇಜೋಮಯೋಽಮೃತಮಯಃ ಪುರುಷೋಽ-ಯಮೇವ ಸ ಯೋಽಯಮಾತ್ಮಾ । ಇದಮಮೃತಂ । ಇದಂ ಬ್ರಹ್ಮ । ಇದಂ ಸರ್ವಂ ।**

ಈ ಪೃಥಿವಿಯ ಅಭಿಮಾನಿದೇವತೆಯಾದ ಧರಾದೇವಿಯು ಎಲ್ಲಾ ಜೀವಿಗಳಿಗೂ ಮಧು ಅಂದರೆ ಆಶ್ರಯ ನೀಡುತ್ತ ಜೇನಿನಂತೆ ಸುಖವನ್ನು ಕೊಡುವವಳು. ಎಲ್ಲಾ ಜೀವಿಗಳೂ ಈ ಪೃಥಿವೀದೇವತೆಗೆ ಮಧು ಅಂದರೆ ಸೇವೆಯನ್ನು ಮಾಡುವುದರಿಂದ ಸುಖವನ್ನು ಕೊಡುವವರು. ಈ ಪೃಥಿವೀ ದೇವತೆಯಲ್ಲಿ ಅನಂತ ತೇಜಸ್ಸುಳ್ಳ ನಿತ್ಯನಾದ ಯಾವ ಭಗವಂತನಿರುವನೋ ಅವನೂ, ಶರೀರದಲ್ಲಿ ಶರೀರಾಭಿಮಾನಿಗೂ ಅಂತರ್ಯಾಮಿಯಾಗಿ ಅನಂತ ತೇಜಸ್ಸುಳ್ಳ ನಿತ್ಯನಾದ ಯಾವ ಭಗವಂತನಿರುವನೋ ಅವನೂ ಒಬ್ಬನೇ. ಅವರಿಬ್ಬರಿಗೂ ಒಂದು ಅಣುವಿನಷ್ಟೂ ವೈಲಕ್ಷಣ್ಯವಿಲ್ಲ. ಮೂಲರೂಪಿಯಾದ ಸರ್ವಗತನಾದ ಶ್ರೀಹರಿಯೂ, ಈ ಧರಾದೇವಿ ಮತ್ತು ಶರೀರಾಭಿಮಾನಿಗಳಲ್ಲಿರುವ ಹಯಗ್ರೀವನೂ ಒಬ್ಬನೇ. ಇವನು ನಿತ್ಯ, ಗುಣಪೂರ್ಣ ಮತ್ತು ಸರ್ವಗತ.

**ವಿವರಣೆ**—ಹೃದಯದಲ್ಲಿರುವ ಶ್ರೀಹರಿಯ ಉಪಾಸನೆಯೇ ಮುಕ್ತಿಹೇತು. ಬಾಹ್ಯರೂಪೋಪಾಸನೆಯು ಮುಕ್ತಿಹೇತುವಲ್ಲ ಎಂದು ಮೊದಲನೆಯ ಬ್ರಾಹ್ಮಣದಲ್ಲಿ ಹೇಳಿದೆ. ಹೃದ್ಗತನ ಉಪಾಸನೆಯು ಜಿತೇಂದ್ರಿಯನಾದವನಿಗೆ ಮಾತ್ರ ಸಾಧ್ಯ ಎಂಬ ಅಭಿಪ್ರಾಯದಿಂದ ಇಂದ್ರಿಯ ಜಯಕ್ಕೆ ಸಾಧನವಾದ ಉಪಾಸನೆಯನ್ನು ಎರಡನೆಯ ಬ್ರಾಹ್ಮಣದಲ್ಲಿ ಹೇಳಿದೆ. ಮೂರ್ತ, ಅಮೂರ್ತ ಮೂರ್ತಸಾರಗಳಿಂದ ವಿಲಕ್ಷಣನೆಂದು ಶ್ರೀಹರಿಯನ್ನು ತಿಳಿದವನಿಗೆ ಮಾತ್ರ ಈ ಉಪಾಸನೆಗಳು ಫಲಪ್ರದವೆಂಬ ಅಭಿಪ್ರಾಯದಿಂದ ಆ ಶ್ರೀಹರಿಗೆ ಮೂರ್ತಾದಿ ವೈಲಕ್ಷಣ್ಯವನ್ನು ತೃತೀಯಬ್ರಾಹ್ಮಣ

ದಲ್ಲಿ ಹೇಳಿದೆ. ನಾಲ್ಕನೆಯ ಬ್ರಾಹ್ಮಣದಲ್ಲಿ ಶ್ರೀಹರಿಗೆ ಅಮೂರ್ತಸಾರತ್ವವನ್ನು ಉಪಪಾದನೆ ಮಾಡಿ ಅವನಲ್ಲಿ ಉತ್ತಮವಾದ ಭಕ್ತಿಯನ್ನು ಮಾಡಬೇಕೆಂದು ಹೇಳಿದೆ. ಹೃದಯದಲ್ಲಿರುವ ಶ್ರೀಹರಿಯ ಉಪಾಸನೆ ಮಾತ್ರ ಮುಕ್ತಿಹೇತು ಬಾಹ್ಯರೂಪೋಪಾಸನೆ ಮುಕ್ತಿಹೇತುವಲ್ಲ ಎಂದು ಮೊದಲನೆಯ ಬ್ರಾಹ್ಮಣದಲ್ಲಿ ಹೇಳಿದ್ದರೂ ಪರಮಾತ್ಮನ ಅಂತರ ಬಾಹ್ಯ ರೂಪಗಳಲ್ಲಿ ಭೇದವಿಲ್ಲ ಎಂದು ಈ ಬ್ರಾಹ್ಮಣದಲ್ಲಿ ಪ್ರತಿಪಾದಿಸಲಾಗಿದೆ. ಮತ್ತು ಹಿಂದೆ ಹೇಳಿದ ಹಯಗ್ರೀವ ರೂಪದ ಬೇರೆ ಮಹಿಮೆಗಳನ್ನೂ ವರ್ಣಿಸಲಾಗಿದೆ.

**ಉಪನಿಷತ್—ಇಮಾ ಆಪಃ ಸರ್ವೇಷಾಂ ಭೂತಾನಾಂ ಮಧು । ಆಸಾಮಪಾಂ ಸರ್ವಾಣಿ ಭೂತಾನಿ ಮಧು । ಯಶ್ಚಾಯಮಾಸ್ವಪ್ಸು ತೇಜೋ-ಮಯೋಽಮೃತಮಯಃ ಪುರುಷೋ ಯಶ್ಚಾಯಮಧ್ಯಾತ್ಮಂ ರೈತ-ಸಸ್ತೇಜೋಮಯೋಽಮೃತಮಯಃ ಪುರುಷೋಽಯಮೇವ ಸ ಯೋಽಯಮಾತ್ಮಾ । ಇದಂ ಅಮೃತಂ। ಇದಂ ಬ್ರಹ್ಮ । ಇದಂ ಸರ್ವಂ।**

ಈ ಜಲಾಭಿಮಾನಿದೇವತೆಯು ಎಲ್ಲಾ ಜೀವಿಗಳಿಗೂ ಮಧು ಅಂದರೆ, ಆಶ್ರಯ ನೀಡುತ್ತಾ ಜೇನಿನಂತೆ ಸುಖವನ್ನು ಕೊಡುವವನು. ಎಲ್ಲಾ ಜೀವಿಗಳೂ ಈ ಜಲಾಭಿಮಾನಿದೇವತೆಗೆ ಮಧು ಅಂದರೆ, ಸೇವೆಯನ್ನು ಮಾಡುವುದರಿಂದ ಸುಖವನ್ನು ಕೊಡುವವರು. ಈ ಜಲಾಭಿಮಾನಿದೇವತೆಯಲ್ಲಿ ಅನಂತ ತೇಜಸ್ಸುಳ್ಳ ನಿತ್ಯನಾದ ಯಾವ ಭಗವಂತನಿರುವನೋ ಅವನೂ, ಶರೀರದಲ್ಲಿ ರೇತಸ್ಸಿನ ಅಭಿಮಾನಿಗೂ ಅಂತರ್ಯಾಮಿಯಾಗಿ, ಅನಂತ ತೇಜಸ್ಸುಳ್ಳ ನಿತ್ಯನಾದ ಯಾವ ಭಗವಂತನಿರುವನೋ ಅವನೂ ಒಬ್ಬನೇ. ಅವರಿಬ್ಬರಿಗೂ ಒಂದು ಅಣುವಿನಷ್ಟೂ ವೈಲಕ್ಷಣ್ಯವಿಲ್ಲ. ಮೂಲರೂಪಿಯಾದ ಸರ್ವಗತನಾದ ಶ್ರೀಹರಿಯೂ ಈ ಜಲಾಭಿಮಾನಿ ಮತ್ತು ರೇತೋಭಿಮಾನಿಗಳಲ್ಲಿರುವ ಶ್ರೀಹಯಗ್ರೀವನೇ. ಇವನು ನಿತ್ಯ, ಗುಣಪೂರ್ಣ ಮತ್ತು ಸರ್ವಗತ.

**ಉಪನಿಷತ್—ಅಯಮಗ್ನಿಃ ಸರ್ವೇಷಾಂ ಭೂತಾನಾಂ ಮಧು । ಅಸ್ಯಾಗ್ನೇಃ ಸರ್ವಾಣಿ ಭೂತಾನಿ ಮಧು । ಯಶ್ಚಾಯಮಸ್ಮಿನ್ನಗ್ನೌ ತೇಜೋ-ಮಯೋಽಮೃತಮಯಃ ಪುರುಷೋ ಯಶ್ಚಾಯಮಧ್ಯಾತ್ಮಂ ವಾಙ್ಮಯಸ್ತೇಜೋಮಯೋಽಮೃತಮಯಃ ಪುರುಷೋಽಯಮೇವ ಸ ಯೋಽಯಮಾತ್ಮಾ। ಇದಂ ಅಮೃತಂ । ಇದಂ ಬ್ರಹ್ಮ । ಇದಂ ಸರ್ವಂ।**

ಈ ಅಗ್ನಿದೇವತೆಯು ಎಲ್ಲಾ ಜೀವಗಳಿಗೂ ಮಧು ಅಂದರೆ, ಆಶ್ರಯ ನೀಡುತ್ತಾ ಜೇನಿನಂತೆ ಸುಖವನ್ನು ಕೊಡುವವನು. ಎಲ್ಲಾ ಜೀವಿಗಳೂ ಈ ಅಗ್ನಿ

ದೇವತೆಗೆ ಮಧು ಅಂದರೆ, ಸೇವೆಯನ್ನು ಮಾಡುವುದರಿಂದ ಸುಖವನ್ನು ಕೊಡು ವವರು. ಈ ಅಗ್ನಿದೇವತೆಯಲ್ಲಿ ಅನಂತತೇಜಸ್ಸುಳ್ಳ ನಿತ್ಯನಾದ ಯಾವ ಭಗವಂತ ನಿರುವನೋ ಅವನೂ, ಶರೀರದಲ್ಲಿ ವಾಗಭಿಮಾನಿಗೂ ಅಂತರ್ಯಾಮಿಯಾಗಿ, ಅನಂತ ತೇಜಸ್ಸುಳ್ಳ ನಿತ್ಯನಾದ ಯಾವ ಭಗವಂತನಿರುವನೋ ಅವನೂ ಒಬ್ಬನೇ. ಅವರಿಬ್ಬ ರಿಗೂ ಒಂದು ಅಣುವಿನಷ್ಟೂ ವೈಲಕ್ಷಣ್ಯವಿಲ್ಲ. ಮೂಲರೂಪಿಯಾದ ಸರ್ವಗತನಾದ ಶ್ರೀಹರಿಯು ಈ ಅಗ್ನಿ ಮತ್ತು ವಾಗಭಿಮಾನಿಗಳಲ್ಲಿರುವ ಶ್ರೀಹಯಗ್ರೀವನೇ. ಇವನು ನಿತ್ಯ, ಗುಣಪೂರ್ಣ ಮತ್ತು ಸರ್ವಗತ.

**ಉಪನಿಷತ್—ಅಯಂ ವಾಯುಃ ಸರ್ವೇಷಾಂ ಭೂತಾನಾಂ ಮಧು । ಅಸ್ಯ ವಾಯೋಃ ಸರ್ವಾಣಿ ಭೂತಾನಿ ಮಧು । ಯಶ್ಚಾಯಮಸ್ಮಿನ್ ವಾಯೌ ತೇಜೋಮಯೋಽಮೃತಮಯಃ ಪುರುಷೋ ಯಶ್ಚಾಯಮಧ್ಯಾತ್ಮಂ ಪ್ರಾಣಸ್ತೇಜೋಮಯೋಽಮೃತಮಯಃ ಪುರುಷೋಽಯಮೇವ ಸ ಯೋಽಯಮಾತ್ಮಾ। ಇದಂ ಅಮೃತಂ। ಇದಂ ಬ್ರಹ್ಮಂ । ಇದಂ ಸರ್ವಂ।**

ಈ ಪ್ರವಹವಾಯುವು ಎಲ್ಲಾ ಜೀವಿಗಳಿಗೂ ಮಧು ಅಂದರೆ, ಆಶ್ರಯ ನೀಡುತ್ತಾ ಜೇನಿನಂತೆ ಸುಖವನ್ನು ಕೊಡುವವನು. ಎಲ್ಲಾ ಜೀವಿಗಳೂ ಈ ಪ್ರವಹ ವಾಯುವಿಗೆ ಮಧು ಅಂದರೆ, ಸೇವೆಯನ್ನು ಮಾಡುವುದರಿಂದ ಸುಖವನ್ನು ಕೊಡು ವವರು. ಈ ಪ್ರವಹವಾಯುವಿನಲ್ಲಿ ಅನಂತ ತೇಜಸ್ಸುಳ್ಳ ನಿತ್ಯನಾದ ಯಾವ ಭಗವಂತನಿರುವನೋ ಅವನೂ, ಶರೀರದಲ್ಲಿ ತ್ವಗಭಿಮಾನಿ ಪ್ರಾಣನಿಗೆ ಅಂತರ್ಯಾಮಿ ಯಾಗಿ, ಅನಂತ ತೇಜಸ್ಸುಳ್ಳ ನಿತ್ಯನಾದ ಯಾವ ಭಗವಂತನಿರುವನೋ ಅವನೂ ಒಬ್ಬನೇ. ಅವರಿಬ್ಬರಿಗೂ ಒಂದು ಅಣುವಿನಷ್ಟೂ ವೈಲಕ್ಷಣ್ಯವಿಲ್ಲ. ಮೂಲರೂಪಿ ಯಾದ ಸರ್ವಗತನಾದ ಶ್ರೀಹರಿಯು ಈ ಪ್ರವಹ ಮತ್ತು ತ್ವಗಭಿಮಾನಿಗಳಲ್ಲಿರುವ ಶ್ರೀಹಯಗ್ರೀವನೇ. ಇವನು ನಿತ್ಯ, ಗುಣಪೂರ್ಣ ಮತ್ತು ಸರ್ವಗತ.

**ಉಪನಿಷತ್—ಅಯಮಾದಿತ್ಯಃ ಸರ್ವೇಷಾಂ ಭೂತಾನಾಂ ಮಧು । ಅಸ್ಯಾ-ದಿತ್ಯಸ್ಯ ಸರ್ವಾಣಿ ಭೂತಾನಿ ಮಧು । ಯಶ್ಚಾಯಮಸ್ಮಿನ್ನಾದಿತ್ಯೇ ತೇಜೋಮಯೋಽಮೃತಮಯಃ ಪುರುಷೋ ಯಶ್ಚಾಯಮಧ್ಯಾತ್ಮಂ ಚಾಕ್ಷುಷಸ್ತೇಜೋಮಯೋಽಮೃತಮಯಃ ಪುರುಷೋಽಯಮೇವ ಸ ಯೋಽಯಮಾತ್ಮಾ । ಇದಂ ಅಮೃತಂ। ಇದಂ ಬ್ರಹ್ಮ । ಇದಂ ಸರ್ವಂ।**

ಈ ಆದಿತ್ಯನು ಎಲ್ಲಾ ಜೀವಿಗಳಿಗೂ ಮಧು ಅಂದರೆ, ಆಶ್ರಯ ನೀಡುತ್ತಾ ಜೇನಿನಂತೆ ಸುಖವನ್ನು ಕೊಡುವವನು. ಎಲ್ಲಾ ಜೀವಿಗಳೂ ಈ ಆದಿತ್ಯನಿಗೆ ಮಧು ಅಂದರೆ, ಸೇವೆಯನ್ನು ಮಾಡುವುದರಿಂದ ಸುಖವನ್ನು ಕೊಡುವವರು.

ಈ ಆದಿತ್ಯನಲ್ಲಿ ಅನಂತ ತೇಜಸ್ಸುಳ್ಳ ನಿತ್ಯನಾದ ಯಾವ ಭಗವಂತನಿರುವನೋ ಅವನೂ, ಶರೀರದಲ್ಲಿ ಚಕ್ಷುರಭಿಮಾನಿ ಆದಿತ್ಯನಿಗೂ ಅಂತರ್ಯಾಮಿಯಾಗಿ, ಅನಂತ ತೇಜಸ್ಸುಳ್ಳ ನಿತ್ಯನಾದ ಯಾವ ಭಗವಂತನಿರುವನೋ ಅವನೂ ಒಬ್ಬನೇ. ಅವರಿಬ್ಬರಿಗೂ ಒಂದು ಅಣುವಿನಷ್ಟೂ ವೈಲಕ್ಷಣ್ಯವಿಲ್ಲ. ಮೂಲರೂಪಿಯಾದ ಸರ್ವಗತನಾದ ಶ್ರೀಹರಿಯು ಈ ಆದಿತ್ಯ ಮತ್ತು ಚಕ್ಷುರಭಿಮಾನಿಗಳಲ್ಲಿರುವ ಶ್ರೀಹಯಗ್ರೀವನೇ. ಇವನು ನಿತ್ಯ, ಗುಣಪೂರ್ಣ ಮತ್ತು ಸರ್ವಗತ.

**ಉಪನಿಷತ್—ಇಮಾಃ ದಿಶಃ ಸರ್ವೇಷಾಂ ಭೂತಾನಾಂ ಮಧು । ಆಸಾಂ ದಿಶಾಂ ಸರ್ವಾಣಿ ಭೂತಾನಿ ಮಧು।ಯಶ್ಚಾಯಮಾಸು ದಿಕ್ಷು ತೇಜೋ-ಮಯೋಽಮೃತಮಯಃ ಪುರುಷೋ ಯಶ್ಚಾಯಮಧ್ಯಾತ್ಮಂ ಶ್ರೌತ್ರಃ ಪ್ರಾತಿಶ್ರುತ್ಕಸ್ತೇಜೋಮಯೋಽಮೃತಮಯಃ ಪುರುಷೋಽಯಮೇವ ಸ ಯೋಽಯಮಾತ್ಮಾ। ಇದಂ ಅಮೃತಂ। ಇದಂ ಬ್ರಹ್ಮ।ಇದಂ ಸರ್ವಂ।**

ಈ ದಿಗಭಿಮಾನಿದೇವತೆಯು ಎಲ್ಲಾ ಜೀವಿಗಳಿಗೂ ಮಧು ಅಂದರೆ, ಆಶ್ರಯ ನೀಡುತ್ತಾ ಜೇನಿನಂತೆ ಸುಖವನ್ನು ಕೊಡುವವನು. ಎಲ್ಲಾ ಜೀವಿಗಳೂ ಈ ದಿಗಭಿಮಾನಿಗೆ ಮಧು ಅಂದರೆ, ಸೇವೆ ಮಾಡುವುದರಿಂದ ಸುಖವನ್ನು ಕೊಡುವವರು. ಈ ದಿಗಭಿಮಾನಿಯಲ್ಲಿ ಅನಂತ ತೇಜಸ್ಸುಳ್ಳ ನಿತ್ಯನಾದ ಯಾವ ಭಗವಂತನಿರುವನೋ ಅವನೂ, ಶರೀರದಲ್ಲಿ ಶ್ರೋತ್ರಾಭಿಮಾನಿದೇವತೆಗೂ ಅಂತರ್ಯಾಮಿಯಾಗಿ ಅನಂತ ತೇಜಸ್ಸುಳ್ಳ ನಿತ್ಯನಾದ ಯಾವ ಭಗವಂತನಿರುವನೋ ಅವನೂ ಒಬ್ಬನೇ. ಅವರಿಬ್ಬರಿಗೂ ಒಂದು ಅಣುವಿನಷ್ಟೂ ವೈಲಕ್ಷಣ್ಯವಿಲ್ಲ. ಮೂಲರೂಪಿಯಾದ ಸರ್ವಗತನಾದ ಶ್ರೀಹರಿಯು ಈ ದಿಗಭಿಮಾನಿ ಶ್ರೋತ್ರಾಭಿಮಾನಿಗಳಲ್ಲಿರುವ ಶ್ರೀಹಯಗ್ರೀವನೇ. ಇವನು ನಿತ್ಯ, ಗುಣಪೂರ್ಣ ಮತ್ತು ಸರ್ವಗತ.

**ಉಪನಿಷತ್—ಅಯಂ ಚಂದ್ರಃ ಸರ್ವೇಷಾಂ ಭೂತಾನಾಂ ಮಧು । ಅಸ್ಯ ಚಂದ್ರಸ್ಯ ಸರ್ವಾಣಿ ಭೂತಾನಿ ಮಧು । ಯಶ್ಚಾಯಮಸ್ಮಿನ್ ಚಂದ್ರೇ ತೇಜೋಮಯೋಽಮೃತಮಯಃ ಪುರುಷೋ ಯಶ್ಚಾಯಮಧ್ಯಾತ್ಮಂ ಮಾನಸಸ್ತೇಜೋಮಯೋಽಮೃತಮಯಃ ಪುರುಷೋಽಯಮೇವ ಸ ಯೋಽಯಮಾತ್ಮಾ । ಇದಂ ಅಮೃತಂ। ಇದಂ ಬ್ರಹ್ಮ । ಇದಂ ಸರ್ವಂ।**

ಈ ಚಂದ್ರನು ಎಲ್ಲಾ ಜೀವಿಗಳಿಗೂ ಮಧು ಅಂದರೆ, ಆಶ್ರಯ ನೀಡುತ್ತಾ ಜೇನಿನಂತೆ ಸುಖವನ್ನು ಕೊಡುವವನು. ಎಲ್ಲಾ ಜೀವಿಗಳೂ ಈ ಚಂದ್ರನಿಗೆ ಮಧು ಎಂದರೆ ಸೇವೆಯನ್ನು ಮಾಡುವುದರಿಂದ ಸುಖವನ್ನು ಕೊಡುವವರು. ಈ ಚಂದ್ರನಲ್ಲಿ ಅನಂತ ತೇಜಸ್ಸುಳ್ಳ ನಿತ್ಯನಾದ ಯಾವ ಭಗವಂತನಿರುವನೋ ಅವನೂ, ಶರೀರ

ವಲ್ಲಿ ಮನೋಭಿಮಾನಿ ಚಂದ್ರನಿಗೂ ಅಂತರ್ಯಾಮಿಯಾಗಿ ಅನಂತ ತೇಜಸ್ಸುಳ್ಳ ನಿತ್ಯನಾದ ಯಾವ ಭಗವಂತನಿರುವನೋ ಅವನೂ ಒಬ್ಬನೇ. ಅವರಿಬ್ಬರಿಗೂ ಒಂದು ಅಣುವಿನಷ್ಟೂ ವೈಲಕ್ಷಣ್ಯವಿಲ್ಲ. ಮೂಲರೂಪಿಯಾದ ಸರ್ವಗತನಾದ ಶ್ರೀಹರಿಯು ಈ ಚಂದ್ರ ಮತ್ತು ಮನೋಭಿಮಾನಿಗಳಲ್ಲಿರುವ ಶ್ರೀಹಯಗ್ರೀವನೇ. ಇವನು ನಿತ್ಯ, ಗುಣಪೂರ್ಣ ಮತ್ತು ಸರ್ವಗತ.

**ಉಪನಿಷತ್—ಇಯಂ ವಿದ್ಯುತ್ ಸರ್ವೇಷಾಂ ಭೂತಾನಾಂ ಮಧು । ಅಸ್ಯಾ ವಿದ್ಯುತಃ ಸರ್ವಾಣಿ ಭೂತಾನಿ ಮಧು । ಯಶ್ಚಾಯಮಸ್ಯಾಂ ವಿದ್ಯುತಿ ತೇಜೋಮಯೋಽಮೃತಮಯಃ ಪುರುಷೋ ಯಶ್ಚಾಯಮಧ್ಯಾತ್ಮಂ ತೈಜಸಸ್ತೇಜೋಮಯೋಽಮೃತಮಯಃ ಪುರುಷೋಽಯಮೇವ ಸ ಯೋಽಯಮಾತ್ಮಾ । ಇದಂ ಅಮೃತಂ। ಇದಂ ಬ್ರಹ್ಮ । ಇದಂ ಸರ್ವಂ।**

ಈ ವಿದ್ಯುತ್ತಿನ ಅಭಿಮಾನಿಯು ಎಲ್ಲಾ ಜೀವಿಗಳಿಗೂ ಮಧು ಅಂದರೆ,ಆಶ್ರಯ ನೀಡುತ್ತಾ ಜೇನಿನಂತೆ ಸುಖವನ್ನು ಕೊಡುವವನು. ಎಲ್ಲಾ ಜೀವಿಗಳೂ ಈ ವಿದ್ಯುದಭಿಮಾನಿದೇವತೆಗೆ ಮಧು ಎಂದರೆ, ಸೇವೆಯನ್ನು ಮಾಡುವುದರಿಂದ ಸುಖವನ್ನು ಕೊಡುವವರು. ಈ ವಿದ್ಯುದಭಿಮಾನಿಯಲ್ಲಿ ಅನಂತ ತೇಜಸ್ಸುಳ್ಳ ನಿತ್ಯನಾದ ಯಾವ ಭಗವಂತನಿರುವನೋ ಅವನೂ, ಶರೀರದಲ್ಲಿ ತೇಜಸ್ಸಿನ ಅಭಿಮಾನಿಗೂ ಅಂತರ್ಯಾಮಿಯಾಗಿ ಅನಂತ ತೇಜಸ್ಸುಳ್ಳ ನಿತ್ಯನಾದ ಯಾವ ಭಗವಂತನಿರುವನೋ ಅವನೂ ಒಬ್ಬನೇ. ಅವರಿಬ್ಬರಿಗೂ ಒಂದು ಅಣುವಿನಷ್ಟೂ ವೈಲಕ್ಷಣ್ಯವಿಲ್ಲ. ಮೂಲರೂಪಿಯಾದ ಸರ್ವಗತನಾದ ಶ್ರೀಹರಿಯು ಈ ವಿದ್ಯುದಭಿಮಾನಿ ಮತ್ತು ಶರೀರತೇಜೋಭಿಮಾನಿಗಳಲ್ಲಿರುವ ಶ್ರೀಹಯಗ್ರೀವನೇ. ಇವನು ನಿತ್ಯ, ಗುಣಪೂರ್ಣ ಮತ್ತು ಸರ್ವಗತ.

**ಉಪನಿಷತ್—ಅಯಂ ಸ್ತನಯಿತ್ನುಃ ಸರ್ವೇಷಾಂ ಭೂತಾನಾಂ ಮಧು । ಅಸ್ಯ ಸ್ತನಯಿತ್ನೋಃ ಸರ್ವಾಣಿ ಭೂತಾನಿ ಮಧು । ಯಶ್ಚಾಯಮಸ್ಮಿನ್ ಸ್ತನಯಿತ್ನೌ ತೇಜೋಮಯೋಽಮೃತಮಯಃ ಪುರುಷೋ ಯಶ್ಚಾಯ-ಮಧ್ಯಾತ್ಮಂ ಶಾಬ್ದಃ ಸೌವರಸ್ತೇಜೋಮಯೋಽಮೃತಮಯಃ ಪುರು-ಷೋಽಯಮೇವ ಸ ಯೋಽಯಮಾತ್ಮಾ । ಇದಂ ಅಮೃತಂ । ಇದಂ ಬ್ರಹ್ಮ । ಇದಂ ಸರ್ವಂ ।**

ಈ ಗುಡುಗಿನಲ್ಲಿರುವ ಮುಖ್ಯವಾಯು ಎಲ್ಲಾ ಜೀವಿಗಳಿಗೂ ಮಧು ಅಂದರೆ, ಆಶ್ರಯ ನೀಡುತ್ತಾ ಜೇನಿನಂತೆ ಸುಖವನ್ನು ಕೊಡುವವನು. ಎಲ್ಲಾ ಜೀವಿಗಳೂ ಈ ಮುಖ್ಯವಾಯುವಿಗೆ ಮಧು ಎಂದರೆ ಸೇವೆಯನ್ನು ಮಾಡುವುದರಿಂದ ಸುಖವನ್ನು

ಕೊಡುವವರು. ಈ ಮುಖ್ಯವಾಯುವಿನಲ್ಲಿ ಅನಂತ ತೇಜಸ್ಸುಳ್ಳ ನಿತ್ಯನಾದ ಯಾವ ಭಗವಂತನಿರುವನೋ ಅವನೂ, ಶರೀರದಲ್ಲಿ ಎಲ್ಲ ಶಬ್ದಗಳಿಗೂ, ಸ್ವರಗಳಿಗೂ ಅಭಿಮಾನಿಯಾದ ಮುಖ್ಯವಾಯುವಿಗೂ ಅಂತರ್ಯಾಮಿಯಾಗಿ ಅನಂತ ತೇಜಸ್ಸುಳ್ಳ ನಿತ್ಯನಾದ ಯಾವ ಭಗವಂತನಿರುವನೋ ಅವನೂ ಒಬ್ಬನೇ. ಅವರಿಬ್ಬರಿಗೂ ಒಂದು ಅಣುವಿನಷ್ಟೂ ವೈಲಕ್ಷಣ್ಯವಿಲ್ಲ. ಮೂಲರೂಪಿಯಾದ ಸರ್ವಗತನಾದ ಶ್ರೀಹರಿಯು ಈ ಮೇಘ ಶಬ್ದಾಭಿಮಾನಿ ಮತ್ತು ಶರೀರಶಬ್ದಸ್ವರಾಭಿಮಾನಿಗಳಲ್ಲಿರುವ ಶ್ರೀಹಯಗ್ರೀವನೇ. ಇವನು ನಿತ್ಯ, ಗುಣಪೂರ್ಣ ಮತ್ತು ಸರ್ವಗತ.

**ಉಪನಿಷತ್—ಅಯಮಾಕಾಶಃ ಸರ್ವೇಷಾಂ ಭೂತಾನಾಂ ಮಧು । ಅಸ್ಯಾಕಾಶಸ್ಯ ಸರ್ವಾಣಿ ಭೂತಾನಿ ಮಧು । ಯಶ್ಚಾಯಮಸ್ಮಿನ್ನಾಕಾಶೇ ತೇಜೋಮಯೋಽಮೃತಮಯಃ ಪುರುಷೋ ಯಶ್ಚಾಯಮಧ್ಯಾತ್ಮಂ ಹೃದ್ಯಾಕಾಶಸ್ತೇಜೋಮಯೋಽಮೃತಮಯಃ ಪುರುಷೋಽಯಮೇವ ಸ ಯೋಽಯಮಾತ್ಮಾ । ಇದಂ ಅಮೃತಂ । ಇದಂ ಬ್ರಹ್ಮ । ಇದಂ ಸರ್ವಂ ।**

ಈ ಆಕಾಶಾಭಿಮಾನಿಯು ಎಲ್ಲಾ ಜೀವಿಗಳಿಗೂ ಮಧು ಅಂದರೆ, ಆಶ್ರಯ ನೀಡುತ್ತಾ ಜೇನಿನಂತೆ ಸುಖವನ್ನು ಕೊಡುವವನು. ಎಲ್ಲಾ ಜೀವಿಗಳೂ ಈ ಆಕಾಶಾಭಿಮಾನಿಗೆ ಮಧು ಎಂದರೆ ಸೇವೆಯನ್ನು ಮಾಡುವುದರಿಂದ ಸುಖವನ್ನು ಕೊಡುವವರು. ಈ ಆಕಾಶಾಭಿಮಾನಿಯಲ್ಲಿ ಅನಂತ ತೇಜಸ್ಸುಳ್ಳ ನಿತ್ಯನಾದ ಯಾವ ಭಗವಂತನಿರುವನೋ ಅವನೂ, ಶರೀರದಲ್ಲಿ ಹೃದಯಾಕಾಶಾಭಿಮಾನಿಗೂ ಅಂತರ್ಯಾಮಿಯಾಗಿ ಅನಂತ ತೇಜಸ್ಸುಳ್ಳ ನಿತ್ಯನಾದ ಯಾವ ಭಗವಂತನಿರುವನೋ ಅವನೂ ಒಬ್ಬನೇ. ಅವರಿಬ್ಬರಿಗೂ ಒಂದು ಅಣುವಿನಷ್ಟೂ ವೈಲಕ್ಷಣ್ಯವಿಲ್ಲ. ಮೂಲರೂಪಿಯಾದ ಸರ್ವಗತನಾದ ಶ್ರೀಹರಿಯು ಈ ಬಾಹ್ಯಾಕಾಶಹೃದಯಾಕಾಶಾಭಿಮಾನಿಗಳಲ್ಲಿರುವ ಶ್ರೀಹಯಗ್ರೀವನೇ. ಇವನು ನಿತ್ಯ, ಗುಣಪೂರ್ಣ ಮತ್ತು ಸರ್ವಗತ.

**ಉಪನಿಷತ್—ಅಯಂ ಧರ್ಮಃ ಸರ್ವೇಷಾಂ ಭೂತಾನಾಂ ಮಧು । ಅಸ್ಯ ಧರ್ಮಸ್ಯ ಸರ್ವಾಣಿ ಭೂತಾನಿ ಮಧು । ಯಶ್ಚಾಯಮಸ್ಮಿನ್ ಧರ್ಮೇ ತೇಜೋಮಯೋಽಮೃತಮಯಃ ಪುರುಷೋ ಯಶ್ಚಾಯಮಧ್ಯಾತ್ಮಂ ಧಾರ್ಮಸ್ತೇಜೋಮಯೋಽಮೃತಮಯಃ ಪುರುಷೋಽಯಮೇವ ಸ ಯೋಽಯಮಾತ್ಮಾ । ಇದಂ ಅಮೃತಂ। ಇದಂ ಬ್ರಹ್ಮ । ಇದಂ ಸರ್ವಂ।**

ಈ ಧರ್ಮಾಭಿಮಾನಿ ಯಮನು ಎಲ್ಲಾ ಜೀವಿಗಳಿಗೂ ಮಧು ಅಂದರೆ, ಆಶ್ರಯ

ನೀಡುತ್ತಾ ಜೇನಿನಂತೆ ಸುಖವನ್ನು ಕೊಡುವವನು. ಎಲ್ಲಾ ಜೀವಿಗಳೂ ಈ ಧರ್ಮಾಭಿಮಾನಿಯಮನಿಗೆ ಮಧು ಎಂದರೆ, ಸೇವೆಯನ್ನು ಮಾಡುವುದರಿಂದ ಸುಖವನ್ನು ಕೊಡುವವರು. ಈ ಧರ್ಮಾಭಿಮಾನಿ ಯಮನಲ್ಲಿ ಅನಂತ ತೇಜಸ್ಸುಳ್ಳ ನಿತ್ಯನಾದ ಯಾವ ಭಗವಂತನಿರುವನೋ ಅವನೂ, ಶರೀರದಲ್ಲಿ ಧರ್ಮಾಭಿಮಾನಿಗೂ ಅಂತರ್ಯಾಮಿಯಾಗಿ ಅನಂತ ತೇಜಸ್ಸುಳ್ಳ ನಿತ್ಯನಾದ ಯಾವ ಭಗವಂತನಿರುವನೋ ಅವನೂ ಒಬ್ಬನೇ. ಅವರಿಬ್ಬರಿಗೂ ಒಂದು ಅಣುವಿನಷ್ಟು ವೈಲಕ್ಷಣ್ಯವಿಲ್ಲ. ಮೂಲರೂಪಿಯಾದ ಸರ್ವಗತನಾದ ಶ್ರೀಹರಿಯು ಈ ಧರ್ಮಾಭಿಮಾನಿ ಮತ್ತು ಶರೀರಾಭಿಮಾನಿಗಳಲ್ಲಿರುವ ಶ್ರೀಹಯಗ್ರೀವನೇ. ಇವನು ನಿತ್ಯ, ಗುಣಪೂರ್ಣ ಮತ್ತು ಸರ್ವಗತ.

**ಉಪನಿಷತ್—ಇದಂ ಸತ್ಯಂ ಸರ್ವೇಷಾಂ ಭೂತಾನಾಂ ಮಧು । ಅಸ್ಯ ಸತ್ಯಸ್ಯ ಸರ್ವಾಣಿ ಭೂತಾನಿ ಮಧು । ಯಶ್ಚಾಯಮಸ್ಮಿನ್ ಸತ್ಯೇ ತೇಜೋ-ಮಯೋಽಮೃತಮಯಃ ಪುರುಷೋ ಯಶ್ಚಾಯಮಧ್ಯಾತ್ಮಂ ಸಾತ್ಯ-ಸ್ತೇಜೋಮಯೋಽಮೃತಮಯಃ ಪುರುಷೋಽಯಮೇವ ಸ ಯೋಽ-ಯಮಾತ್ಮಾ । ಇದಂ ಅಮೃತಂ । ಇದಂ ಬ್ರಹ್ಮ । ಇದಂ ಸರ್ವಂ ।**

ಈ ಸತ್ಯಾಭಿಮಾನಿಯಾದ ವಾಯು ಎಲ್ಲಾ ಜೀವಿಗಳಿಗೂ ಮಧು ಅಂದರೆ, ಆಶ್ರಯ ನೀಡುತ್ತಾ ಜೇನಿನಂತೆ ಸುಖವನ್ನು ಕೊಡುವವನು. ಎಲ್ಲಾ ಜೀವಿಗಳೂ ಈ ಸತ್ಯಾಭಿಮಾನಿಯಾದ ವಾಯುವಿಗೆ ಮಧು ಎಂದರೆ, ಸೇವೆಯನ್ನು ಮಾಡುವುದರಿಂದ ಸುಖವನ್ನು ಕೊಡುವವರು. ಈ ಸತ್ಯಾಭಿಮಾನಿ ವಾಯುವಿನಲ್ಲಿ ಅನಂತ ತೇಜಸ್ಸುಳ್ಳ ನಿತ್ಯನಾದ ಯಾವ ಭಗವಂತನಿರುವನೋ ಅವನೂ, ಶರೀರದಲ್ಲಿ ಸತ್ಯಾಭಿಮಾನಿಯಾದ ವಾಯುವಿಗೂ ಅಂತರ್ಯಾಮಿಯಾಗಿ ಅನಂತ ತೇಜಸ್ಸುಳ್ಳ ನಿತ್ಯನಾದ ಯಾವ ಭಗವಂತನಿರುವನೋ ಅವನೂ ಒಬ್ಬನೇ. ಅವರಿಬ್ಬರಿಗೂ ಒಂದು ಅಣುವಿನಷ್ಟು ವೈಲಕ್ಷಣ್ಯವಿಲ್ಲ. ಮೂಲರೂಪಿಯಾದ ಸರ್ವಗತನಾದ ಶ್ರೀಹರಿಯು ಈ ಸತ್ಯಾಭಿಮಾನಿ ಮತ್ತು ಶರೀರಾಭಿಮಾನಿಗಳಲ್ಲಿರುವ ಶ್ರೀಹಯಗ್ರೀವನೇ. ಇವನು ನಿತ್ಯ, ಗುಣಪೂರ್ಣ ಮತ್ತು ಸರ್ವಗತ.

**ಉಪನಿಷತ್—ಇದಂ ಮಾನುಷಂ ಸರ್ವೇಷಾಂ ಭೂತಾನಾಂ ಮಧು । ಅಸ್ಯ ಮಾನುಷಸ್ಯ ಸರ್ವಾಣಿ ಭೂತಾನಿ ಮಧು । ಯಶ್ಚಾಯಮಸ್ಮಿನ್ ಮಾನುಷೇ ತೇಜೋಮಯೋಽಮೃತಮಯಃ ಪುರುಷೋ ಯಶ್ಚಾಯ-ಮಧ್ಯಾತ್ಮಂ ಮಾನುಷಸ್ತೇಜೋಮಯೋಽಮೃತಮಯಃ ಪುರುಷೋಽ-ಯಮೇವ ಸ ಯೋಽಯಮಾತ್ಮಾ । ಇದಂ ಅಮೃತಂ । ಇದಂ ಬ್ರಹ್ಮ । ಇದಂ ಸರ್ವಂ ।**

ಈ ಮನುಷ್ಯಾಭಿಮಾನಿ ಸ್ವಾಯಂಭುವ ಮನು ಎಲ್ಲಾ ಜೀವಿಗಳಿಗೂ ಮಧು ಅಂದರೆ, ಆಶ್ರಯ ನೀಡುತ್ತಾ ಜೇನಿನಂತೆ ಸುಖವನ್ನು ಕೊಡುವವನು. ಎಲ್ಲಾ ಜೀವಿಗಳೂ ಈ ಮನುಷ್ಯಾಭಿಮಾನಿಯಾದ ಮನುವಿಗೆ ಮಧು ಎಂದರೆ, ಸೇವೆಯನ್ನು ಮಾಡುವುದರಿಂದ ಸುಖವನ್ನು ಕೊಡುವವರು. ಈ ಮನುಷ್ಯಾಭಿಮಾನಿ ಸ್ವಾಯಂಭುವ ಮನುವಿನಲ್ಲಿ ಅನಂತ ತೇಜಸ್ಸುಳ್ಳ ನಿತ್ಯನಾದ ಯಾವ ಭಗವಂತನಿರುವನೋ ಅವನೂ, ಶರೀರಲ್ಲಿ ಮನುಷ್ಯಾಭಿಮಾನಿಯಾದ ಸ್ವಾಯಂಭುವಮನುವಿಗೂ ಅಂತರ್ಯಾಮಿಯಾಗಿ ಅನಂತ ತೇಜಸ್ಸುಳ್ಳ ನಿತ್ಯನಾದ ಯಾವ ಭಗವಂತನಿರುವನೋ ಅವನೂ ಒಬ್ಬನೇ. ಅವರಿಬ್ಬರಿಗೂ ಒಂದು ಅಣುವಿನಷ್ಟೂ ವೈಲಕ್ಷಣ್ಯವಿಲ್ಲ. ಮೂಲರೂಪಿಯಾದ. ಸರ್ವಗತನಾದ ಶ್ರೀಹರಿಯು ಈ ಮಾನುಷ್ಯಾಭಿಮಾನಿ ಮತ್ತು ಶರೀರಾಭಿಮಾನಿಗಳಲ್ಲಿರುವ ಶ್ರೀಹಯಗ್ರೀವನೇ. ಇವನು ನಿತ್ಯ, ಗುಣಪೂರ್ಣ ಮತ್ತು ಸರ್ವಗತ.

**ಉಪನಿಷತ್—ಅಯಮಾತ್ಮಾ ಸರ್ವೇಷಾಂ ಭೂತಾನಾಂ ಮಧು । ಅಸ್ಯಾತ್ಮನಃ ಸರ್ವಾಣಿ ಭೂತಾನಿ ಮಧು । ಯಶ್ಚಾಯಮಸ್ಮಿನ್ನಾತ್ಮನಿ ತೇಜೋಮಯೋಽಮೃತಮಯಃ ಪುರುಷೋ ಯಶ್ಚಾಯಮಧ್ಯಾತ್ಮಮಾತ್ಮಾ ತೇಜೋಮಯೋಽಮೃತಮಯಃ ಪುರುಷೋಽಯಮೇವ ಸ ಯೋಽಯಮಾತ್ಮಾ । ಇದಂ ಅಮೃತಂ । ಇದಂ ಬ್ರಹ್ಮ । ಇದಂ ಸರ್ವಂ ।**

ಈ ಚತುರ್ಮುಖನು ಎಲ್ಲಾ ಜೀವಿಗಳಿಗೂ ಮಧು ಅಂದರೆ, ಆಶ್ರಯ ನೀಡುತ್ತಾ ಜೇನಿನಂತೆ ಸುಖವನ್ನು ಕೊಡುವವನು. ಎಲ್ಲಾ ಜೀವಿಗಳೂ ಈ ಚತುರ್ಮುಖನಿಗೆ ಮಧು ಎಂದರೆ, ಸೇವೆಯನ್ನು ಮಾಡುವುದರಿಂದ ಸುಖವನ್ನು ಕೊಡುವವರು. ಈ ಚತುರ್ಮುಖನಲ್ಲಿ ಅನಂತ ತೇಜಸ್ಸುಳ್ಳ ನಿತ್ಯನಾದ ಯಾವ ಭಗವಂತನಿರುವನೋ ಅವನೂ, ಶರೀರದಲ್ಲಿ ಚತುರ್ಮುಖಾಂತರ್ಯಾಮಿಯಾಗಿ ಅನಂತ ತೇಜಸ್ಸುಳ್ಳ ನಿತ್ಯನಾದ ಯಾವ ಭಗವಂತನಿರುವನೋ ಅವನೂ ಒಬ್ಬನೇ. ಅವರಿಬ್ಬರಿಗೂ ಒಂದು ಅಣುವಿನಷ್ಟೂ ವೈಲಕ್ಷಣ್ಯವಿಲ್ಲ. ಮೂಲರೂಪಿಯಾದ ಸರ್ವಗತನಾದ ಶ್ರೀಹರಿಯು ಈ ಚತುರ್ಮುಖ ಮತ್ತು ಶರೀರಾಭಿಮಾನಿಗಳಲ್ಲಿರುವ ಶ್ರೀಹಯಗ್ರೀವನೇ. ಇವನು ನಿತ್ಯ, ಗುಣಪೂರ್ಣ ಮತ್ತು ಸರ್ವಗತ.

**ಉಪನಿಷತ್—ಸ ವಾ ಅಯಮಾತ್ಮಾ ಸರ್ವೇಷಾಂ ಭೂತಾನಾಮಧಿಪತಿಃ ಸರ್ವೇಷಾಂ ಭೂತಾನಾಂ ರಾಜಾ । ತದ್ ಯಥಾ ರಥನಾಭೌ ಚ ರಥನೇಮೌ ಚಾರಾಃ ಸರ್ವೇ ಸಮರ್ಪಿತಾಃ, ಏವಮೇವಾಸ್ಮಿನ್ನಾತ್ಮನಿ ಸರ್ವಾಣಿ ಭೂತಾನಿ ಸರ್ವ ಏತ ಆತ್ಮಾನಃ ಸಮರ್ಪಿತಾಃ ।**

ಈ ಚತುರ್ಮುಖಾಂತರ್ಗತನಾದ ಶ್ರೀಹರಿಯು ಎಲ್ಲಾ ಜೀವರಿಗೂ ಬ್ರಹ್ಮರಿಗೂ

ಅಧಿಪತಿ, ಅಂದರೆ ಮುಖ್ಯಪಾಲಕ ಮತ್ತು ಸ್ವಾಮಿ. ಇದು ಹೇಗೆ ಎಂದರೆ, ಹೇಗೆ ರಥಚಕ್ರದ ಅಚ್ಚಿನಲ್ಲಿಯೂ ಗಾಲಿಯಲ್ಲಿಯೂ ಎಲ್ಲಾ ಅರಗಳೂ ಆಶ್ರಿತವಾಗಿವೆಯೋ ಹಾಗೆಯೇ ಈ ಶ್ರೀಹರಿಯಲ್ಲಿ ಎಲ್ಲಾ ಜೀವರೂ ಬ್ರಹ್ಮರೂ ಅಧ್ಯಾತ್ಮದಲ್ಲಿಯೂ ಅಧಿದೈವದಲ್ಲಿಯೂ ಆಶ್ರಿತರಾಗಿದ್ದಾರೆ.

**ಮಧುವಿದ್ಯೆ ಮತ್ತು ನಾರಾಯಣ ಕವಚಗಳೆರಡೂ ದಧೀಚಿಯ ಉಪದೇಶ :**

**ಉಪನಿಷತ್—ಇದಂ ವೈ ತನ್ಮಧು ದಧ್ಯಙ್ ಆಥರ್ವಣೋಽಶ್ವಿಭ್ಯಾಮುವಾಚ ।**
**ತದೇತದೃಷಿಃ ಪಶ್ಯನ್ನವೋಚತ್ ।**
**ತದ್ ವಾಂ ನರಾ ಸನಯೇ ದಂಸ ಉಗ್ರಂ**
**ಆವಿಷ್ಕೃಣೋಮಿ ತನ್ಯತುರ್ನವೃಷ್ಟಿಂ ।**
**ದಧ್ಯಙ್ ಹ ಯನ್ಮಧ್ವಾಥರ್ವಣೋ ವಾಂ**
**ಅಶ್ವಸ್ಯ ಶೀರ್ಷ್ಣಾ ಪ್ರಯದೀಮುವಾಚ ॥ ಇತಿ ।**

ಈ ಮಧುವಿದ್ಯೆ ಬಹುಶ್ರೇಷ್ಠ. ಅದನ್ನು ಆಥರ್ವಣಗೋತ್ರದ ದಧೀಚಿ ಮುನಿಯು ಅಶ್ವಿನೀದೇವತೆಗಳಿಗೆ ಹೇಳಿದನು. ಇದು ಪ್ರಸಿದ್ಧ. ಈ ವಿಷಯವನ್ನು ಮಂತ್ರದ್ರಷ್ಟ್ರುವಾದ ಋಷಿಯೂ ಹೀಗೆಹೇಳಿದ್ದಾನೆ– "ಅಶ್ವಿನೀದೇವತೆಗಳೇ, ದಧೀಚಿ ಋಷಿಯ ಶಿರಸ್ಸಿನ ಛೇದನ ಮತ್ತು ಅವನಿಗೆ ಅಶ್ವಶಿರಸ್ಸಿನ ಸಂಧಾನರೂಪವಾದ ನಿಮ್ಮ ಉಗ್ರ ಕರ್ಮವನ್ನೂ ಆಥರ್ವಗೋತ್ರದ ಆ ದಧೀಚಿಯು ಅಶ್ವಶಿರಸ್ಸಿನಿಂದಲೇ ನಿಮ್ಮಿಬ್ಬರಿಗೆ ಮಧು ವಿದ್ಯೆಯನ್ನು ಹೇಳಿದನೆಂಬುದನ್ನೂ ಸಜ್ಜನರಿಗೆ ಮೋಕ್ಷಾದಿ ಪುರುಷಾರ್ಥ ಲಾಭಕ್ಕಾಗಿ ನಾನು ಪ್ರಕಟಪಡಿಸುತ್ತೇನೆ, ಮೇಘಗರ್ಜನೆಯು ಮಳೆಯನ್ನು ಪ್ರಕಟಿಸುವಂತೆ".

**ಉಪನಿಷತ್—ಇದಂ ವೈ ತನ್ಮಧು ದಧ್ಯಙ್ ಆಥರ್ವಣೋಽಶ್ವಿಭ್ಯಾಮುವಾಚ ।**
**ತದೇತದೃಷಿಃ ಪಶ್ಯನ್ನವೋಚತ್ ।**
**ಆಥರ್ವಣಾಯಾಽಶ್ವಿನಾ ದಧೀಚೇಽ–**
**ಶ್ವ್ಯಂ ಶಿರಃ ಪ್ರತ್ಯೈರಯತಂ ।**
**ಸ ವಾಂ ಮಧು ಪ್ರಾವೋಚದೃತಾಯಂ–**
**ತ್ವಾಷ್ಟ್ರಂ ಯದ್ ದಸ್ರಾವಪಿ ಕಕ್ಷ್ಯಂ ವಾಂ ॥ ಇತಿ ।**

ಈ ಮಧುವಿದ್ಯೆ ಬಹುಶ್ರೇಷ್ಠ. ಅದನ್ನು ಆಥರ್ವಣಗೋತ್ರದ ದಧೀಚಿಯು ಅಶ್ವಿನೀದೇವತೆಗಳಿಗೆ ಹೇಳಿದನು. ಇದನ್ನು ಮಂತ್ರದ್ರಷ್ಟ್ರುಋಷಿಯು ಹೀಗೆ ಹೇಳಿದನು. "ಅಶ್ವಿನೀದೇವತೆಗಳೇ ನೀವಿಬ್ಬರೂ, ಆಥರ್ವಗೋತ್ರದ ದಧೀಚಿ ಋಷಿಗೆ ಅಶ್ವಶಿರಸ್ಸನ್ನು ಸೇರಿಸಿದಿರಿ. ಆ ದಧೀಚಿಯು ನಿಮ್ಮಿಬ್ಬರಿಗೆ ಹಿಂದೆ ಮಾತ

ಕೊಟ್ಟಂತೆ ಮಧುವಿದ್ಯೆಯನ್ನೂ ತ್ವಷ್ಟೃವಿನ ಪುತ್ರನಾದ ವಿಶ್ವರೂಪನು ಇಂದ್ರನಿಗೆ ಹಿಂದೆ ಹೇಳಿದ್ದ ನಾರಾಯಣಕವಚವನ್ನೂ ಉಪದೇಶಿಸಿದನು.

**ಉಪನಿಷತ್—ಇದಂ ವೈ ತನ್ಮಧು ದಧ್ಯಙ್ ಆಥರ್ವಣೋಽಶ್ವಿಭ್ಯಾಮುವಾಚ ।**
**ತದೇತದೃಷಿಃ ಪಶ್ಯನ್ನವೋಚತ್ ।**

**ಪುರಶ್ಚಕ್ರೇ ದ್ವಿಪದಃ ಪುರಶ್ಚಕ್ರೇ ಚತುಷ್ಪದಃ ।**
**ಪುರಃ ಸ ಪಕ್ಷೀ ಭೂತ್ವಾ ಪುರಃ ಪುರುಷ ಆವಿಶತ್ ॥ ಇತಿ ॥**

**ಸ ವಾ ಅಯಂ ಪುರುಷಃ ಸರ್ವಾಸು ಪೂರ್ಷು ಪುರಿ ಶಯಃ । ನೈನೇನ ಕಿಂಚನಾನಾವೃತಂ । ನೈನೇನ ಕಿಂಚನಾಸಂವೃತಂ ।**

ಈ ಮಧುವಿದ್ಯೆಯನ್ನು ಆಥರ್ವಣಗೋತ್ರದ ದಧೀಚಿ ಮುನಿಯು ಅಶ್ವಿನೀ ದೇವತೆಗಳಿಗೆ ಹೇಳಿದನು. ಮಂತ್ರದ್ರಷ್ಟೃವಾದ ಋಷಿಯು ಈ ವಿದ್ಯೆಯಲ್ಲಿ ಬರುವ ಭಗವಂತನ ಸರ್ವಶರೀರಸ್ಥಿತತ್ವವನ್ನು ಹೀಗೆ ಹೇಳಿದನು– ಪುರುಷನಾಮಕ ಶ್ರೀಹರಿಯು ಎರಡು ಕಾಲುಗಳುಳ್ಳ ಪುರುಷಶರೀರಗಳನ್ನೂ ನಿರ್ಮಿಸಿದನು. ನಾಲ್ಕು ಕಾಲುಗಳುಳ್ಳ ಪ್ರಾಣಿ ಶರೀರಗಳನ್ನೂ ನಿರ್ಮಿಸಿದನು. ಪಕ್ಷಿಯಾಗಿ ಎರಡು ಪಾದ ಗಳುಳ್ಳ ಮತ್ತು ನಾಲ್ಕುಪಾದಗಳುಳ್ಳ ಆ ಶರೀರಗಳನ್ನು ಪ್ರವೇಶಿಸಿದನು. ಶ್ರೀಹರಿಯೇ ಪುರುಷನೆನಿಸುತ್ತಾನೆ. ಏಕೆಂದರೆ ಎಲ್ಲಾ ಪುರಗಳಲ್ಲಿ ಅಂದರೆ ದೇಹಗಳಲ್ಲಿ ಮತ್ತು ಪುರಿ ಅಂದರೆ ಹೃದಯದಲ್ಲಿ ಇರುತ್ತಾನೆ. ಈ ಭಗವಂತನಿಂದ ಒಳಗೆ ವ್ಯಾಪ್ತವಾಗದ ವಸ್ತು ಯಾವುದೂ ಇಲ್ಲ. ಹೊರಗೆ ಆವೃತವಾಗದಿದ್ದುದೂ ಯಾವುದೂ ಇಲ್ಲ.

**ಸರ್ವಜೀವರೂ ಶ್ರೀಹರಿಯ ಪ್ರತಿಬಿಂಬರು :**

**ಉಪನಿಷತ್—ಇದಂ ವೈ ತನ್ಮಧು ದಧ್ಯಙ್ ಆಥರ್ವಣೋಽಶ್ವಿಭ್ಯಾಮುವಾಚ ।**
**ತದೇತದ್ ಋಷಿಃ ಪಶ್ಯನ್ನವೋಚತ್ ।**

**ರೂಪಂ ರೂಪಂ ಪ್ರತಿರೂಪೋ ಬಭೂವ ।**
**ತದಸ್ಯ ರೂಪಂ ಪ್ರತಿಚಕ್ಷಣಾಯ ।**
**ಇಂದ್ರೋ ಮಾಯಾಭಿಃ ಪುರುರೂಪ ಈಯತೇ ॥**
**ಯುಕ್ತಾ ಹ್ಯಸ್ಯ ಹರಯಃ ಶತಾ ದಶ ॥ಇತಿ ॥**

**ಅಯಂ ವೈ ಹರಯಃ ಅಯಂ ವೈ ದಶ ಸಹಸ್ರಾಣಿ ಬಹೂನಿ ಚಾನಂತಾನಿ ಚ । ತದೇತದ್ ಬ್ರಹ್ಮಾಪೂರ್ವಮನಪರಮನಂತರಮಬಾಹ್ಯಂ । ಅಯಮಾತ್ಮಾ ಬ್ರಹ್ಮ ಸರ್ವಾನುಭೂರಿತ್ಯನುಶಾಸನಮ್ ।**

**॥ ಇತಿ ಮಧುಬ್ರಾಹ್ಮಣಂ ॥**

**ಅನುವಾದ**–ಒಬ್ಬನೇ ಪರಮಾತ್ಮನು ಸರ್ವಜೀವಸ್ಥಿತನೆಂಬುವನ್ನುದಧೀಚಿಯು ಅಶ್ವಿನೀ ದೇವತೆಗಳಿಗೆ ಹೇಳಿದನು. ಮಂತ್ರದ್ರಷ್ಟೃವಾದ ಋಷಿಯು ಇದನ್ನು ಹೀಗೆ ಹೇಳಿದ್ದಾನೆ. 'ಜೀವನು ಶ್ರೀಹರಿಯ ಆಯಾ ಬಿಂಬರೂಪಗಳಿಗೆ ಪ್ರತಿಬಿಂಬನಾಗಿರುವನು. ಆ ಬಿಂಬರೂಪವು ಜೀವನ ಮುಕ್ತಿಗೋಸ್ಕರ ಸಾಕ್ಷಾತ್ಕಾರ ಗೋಚರವಾಗುತ್ತದೆ. ಪರಮೇಶ್ವರನು ತನ್ನ ಸಾಮರ್ಥ್ಯದಿಂದಲೇ ಹೀಗೆ ಅನಂತ ಜೀವರ ಬಿಂಬರೂಪನಾಗಿರುವನೆಂದು ತಿಳಿಯಲ್ಪಡುತ್ತಾನೆ. ಅವನ ಶ್ರೀಹರಿನಾಮಕ ರೂಪಗಳು ಹತ್ತು ನೂರು ಮುಂತಾಗಿ ವ್ಯೂಹರೂಪಗಳಿಂದ ಇವೆ. ಶ್ರೀಹರಿನಾಮಕರೂಪಗಳುಳ್ಳವನು ಹಯಗ್ರೀವರೂಪಿ ಪರಮಾತ್ಮನೆ. ಅಂದರೆ ಮತ್ಸ್ಯಾದಿ ದಶರೂಪಗಳುಳ್ಳವನೂ ಅವನೇ. ನಾರಾಯಣಾದಿ ಶತರೂಪಿಯೂ ಅವನೇ. ವಿಶ್ವಾದಿ ಸಹಸ್ರರೂಪಿಯೂ ಅವನೇ. ಪರಾದಿ ಬಹುರೂಪಿಯೂ ಅವನೇ. ಅಜಿತಾದ್ಯನಂತರೂಪಿಯೂ ಅವನೇ. ಅವನು ಗುಣಪೂರ್ಣ, ಅನಾದಿ, ಅನಂತ, ಎಲ್ಲಕ್ಕಿಂತ ಒಳಗಿರುವವನು, ಎಲ್ಲಕ್ಕಿಂತ ಹೊರಗೂ ಇರುವವನು ಮತ್ತು ಸರ್ವಜ್ಞ ಎಂದು ವೇದದ ಉಪದೇಶವಿದೆ.

**ಭಾಷ್ಯ—ಭಗವತೋ ರೂಪಂ ರೂಪಂ ಪ್ರತಿ ಜೀವಾಖ್ಯಃ ಪ್ರತಿಬಿಂಬೋ ಬಭೂವ । ಬಭೂವೇತಿ 'ಸದೇವ ಸೋಮ್ಯೇದಮಗ್ರ ಆಸೀತ್' ಇತಿವದ್ ಅನಾದಿತ್ವಾರ್ಥೇ ।**

**ಅನುವಾದ**—ಪರಬ್ರಹ್ಮನು ರೂಪಂ ರೂಪಂ ಪ್ರತಿ ಎಂದರೆ ಪ್ರತಿದೇಹದಲ್ಲಿಯೂ, ರೂಪೋ ಬಭೂವ ರೂಪಾಂತರವನ್ನು ಹೊಂದಿ ಜೀವನಾದನು ಎಂಬ ವ್ಯಾಖ್ಯಾನ ಸರಿಯಲ್ಲ ಏಕೆಂದರೆ 'ಶೃಣ್ವೇವೀರಂ' ಎಂಬ ಓಂದಿನ ಮಂತ್ರದಲ್ಲಿ ತ್ರಿವಿಧ ಜೀವರು ಪ್ರಸ್ತುತರಾಗಿರುವುದರಿಂದ, ಜೀವನೇ ಶ್ರೀಹರಿಯ ಪ್ರತಿರೂಪಕ್ಕೂ ಪ್ರತಿಬಿಂಬನಾಗಿರುವನು, ಅಂದರೆ ಅಧೀನನೂ ಸದೃಶನೂ ಆಗಿರುವನು ಎಂದು ವ್ಯಾಖ್ಯಾನಿಸಬೇಕು. ಬಭೂವ ಎಂದು ಭೂತಕಾಲದ ಕ್ರಿಯಾಪದವನ್ನು ಹೇಳಿರುವುದರಿಂದ, ಹಿಂದೆ ಜೀವನು ಪರಮಾತ್ಮನಿಗೆ ಪ್ರತಿಬಿಂಬನಾಗಿದ್ದನು ಈಗ ಪ್ರತಿಬಿಂಬನಾಗಿಲ್ಲ ಎಂದು ತಿಳಿಯಬಾರದು. 'ಸದೇವ ಸೋಮ್ಯೇದಮಗ್ರ ಆಸೀತ್' ಎಂಬಲ್ಲಿ ಪರಮಾತ್ಮನು ಈ ಜಗತ್ತಿನ ಸೃಷ್ಟಿಗಿಂತ ಮೊದಲು ಇದ್ದನು ಎಂದು ಭೂತಕಾಲದ ಪ್ರಯೋಗವಿದ್ದರೂ ಭೂತಕಾಲವಿವಕ್ಷೆಯಿಲ್ಲದೆ ಪರಮಾತ್ಮನು ಸದಾ ಇದ್ದಾನೆ, ಅನಾದಿ ಎಂದು ಹೇಗೆ ಅರ್ಥವೋ ಹಾಗೆಯೇ ಇಲ್ಲಿಯೂ ಜೀವನು ಅನಾದಿಕಾಲದಿಂದ ಭಗವಂತನ ಪ್ರತಿಬಿಂಬನಾಗಿದ್ದಾನೆ ಎಂದು ಅರ್ಥ.

**ಭಾಷ್ಯ—ಸುಖದಾ ಸರ್ವಭೂತಾನಾಂ ಪೃಥ್ವೀ ಮಧುವದುಚ್ಯತೇ ।**
**ಪೃಥಿವ್ಯಾಶ್ಚೈವ ಭೂತಾನಿ ತಥಾ ಸರ್ವಾಶ್ಚ ದೇವತಾಃ ।**

**ಪೃಥಿವ್ಯಾದಿಷು ದೇವೇಷು ಶರೀರಾದಿಷು ಚ ಸ್ಥಿತಃ ।**
**ಏಕ ಏವ ಪರೋ ವಿಷ್ಣುಃ ಹಯಶೀರ್ಷಸ್ವರೂಪಧೃತ್ ।**
**ಅನಂತತೇಜಾ ನಿತ್ಯಶ್ಚ ಸ ಏವ ಬ್ರಹ್ಮ ಸರ್ವಗಂ ।**
**ತದೇವ ಗುಣಪೂರ್ಣತ್ವಾದ್ ಬ್ರಹ್ಮ ಸರ್ವಮನೂನತಃ ।**
**ಆತ್ಮನಾಮಾ ಪರೋ ವಿಷ್ಣುಃ ಸರ್ವಗೋ ಯಃ ಪ್ರಕೀರ್ತಿತಃ ।**
**ಸ ಏವ ಹಯಶೀರ್ಷಾಖ್ಯಸ್ತ್ವಧಿದೈವಾದಿಷು ಸ್ಥಿತಃ ।**

**ಅನುವಾದ**—ಎಲ್ಲಾ ಜೀವಿಗಳಿಗೂ ಆಶ್ರಯಳಾಗಿ ಸುಖವನ್ನು ಕೊಡುವುದರಿಂದ ಧರಾದೇವಿಯು ಮಧುವಿನಂತೆ ಎನಿಸುತ್ತಾಳೆ. ಎಲ್ಲಾ ಜೀವಿಗಳೂ ಧರಾದೇವಿಗೆ ಸೇವೆ ಮಾಡಿ ಸುಖವನ್ನು ಕೊಡುವುದರಿಂದ ಅವೂ ಮಧುವಿನಂತೆ ಎನಿಸುತ್ತವೆ. ಹಾಗೆಯೇ ಜಲಾದ್ಯಭಿಮಾನಿದೇವತೆಗಳು ಎಲ್ಲಾ ಜೀವಿಗಳಿಗೂ, ಎಲ್ಲಾ ಜೀವಿಗಳು ಆ ದೇವತೆಗಳಿಗೂ ಮಧುವಿನಂತೆ ಇರುತ್ತಾರೆ. ಪೃಥಿವ್ಯಾದಿ ದೇವತೆಗಳಲ್ಲಿರುವವನೂ, ಶರೀರಾದಿಗಳಲ್ಲಿರುವವನೂ ಹಯಗ್ರೀವರೂಪಿಯಾದ ಸರ್ವೋತ್ತಮನಾದ ವಿಷ್ಣು ಒಬ್ಬನೇ. ಅವನು ಅನಂತ ತೇಜಸ್ಸುಳ್ಳವನು, ನಿತ್ಯನಾದವನು. ಸರ್ವತ್ರ ವ್ಯಾಪ್ತನಾದ ಬ್ರಹ್ಮನೂ ಅವನೇ. ಅವನೇ ಗುಣಪೂರ್ಣನಾದುದರಿಂದ ಬ್ರಹ್ಮನೆನಿಸುತ್ತಾನೆ. ಸರ್ವವ್ಯಾಪ್ತನಾದುದರಿಂದ ಸರ್ವ ಎನಿಸುತ್ತಾನೆ. ಪೃಥಿವ್ಯಾದಿ ದೇವತೆಗಳಲ್ಲಿಯೂ, ಶರೀರಾದ್ಯಭಿಮಾನಿಗಳಲ್ಲಿಯೂ ಯಾವ ಶ್ರೀ ಹಯಗ್ರೀವರೂಪನಾದ ವಿಷ್ಣು ಇರುವನೋ ಅವನೇ ಸರ್ವವ್ಯಾಪ್ತನಾದ್ದರಿಂದ ಆತ್ಮನೆನಿಸಿದ್ದಾನೆ.

**ಭಾಷ್ಯ**—**ಅರಾಣಾಮಾಶ್ರಯೌ ಯದ್ವದ್ ಬಹಿರಂತಃ ಪ್ರತಿಷ್ಠಿತೌ ।**
**ನಾಭಿನೇಮೀ ತಥಾ ವಿಷ್ಣುರ್ಜೀವಾನಾಮಾಶ್ರಯಃ ಸ್ಥಿತಃ ।**
**ಸ ಏವ ದಶಧಾ ಪ್ರೋಕ್ತೋ ವಿಷ್ಣುರ್ಮತ್ಸ್ಯಾದಿರೂಪಕಃ ।**
**ಶತಂ ನಾರಾಯಣಾದ್ಯಾತ್ಮಾ ವಿಶ್ವಾದ್ಯಾತ್ಮಾ ಸಹಸ್ರಕಃ ।**
**ಪರಾದಿರೂಪೋ ಬಹುಧಾ ಸೋಽನಂತಾತ್ಮಾಽಜಿತಾದಿಕಃ ।**
**ಭೂತಾಖ್ಯಸರ್ವಜೀವಾನಾಂ ವಿರಿಂಚಾನಾಂ ಚ ಸರ್ವಶಃ ।**
**ಆತ್ಮನಾಮ್ನಾಂ ಸ ಏವೈಕೋ ರಾಜಾಽಧಿಪತಿರೇವ ಚ ।**
**ಸ್ವಾಮಿತ್ವಾದ್ ರಾಜಶಬ್ದೋಽಯಮಾಧಿಕ್ಯಾತ್ ಪಾಲನಾತ್ ತಥಾ ।**
**ಅಧಿಪಶ್ಚೇತಿ ಸ ಪ್ರೋಕ್ತಃ ಪುರುಷಃ ಪೂರುಷು ಸ್ಥಿತೇಃ ।**
**ಪುರಾಖ್ಯೇಷ್ವೇವ ದೇಹೇಷು ಹೃತ್ಪುರ್ಯಪಿ ವಸತ್ಯಸೌ ।**

**ಅನುವಾದ**—ರಥಚಕ್ರದ ಒಳಹೊರಗೆ ನಾಭಿ ಮತ್ತು ನೇಮಿಗಳು ಇದ್ದು ಅರಗಳಿಗೆ ಆಶ್ರಯವಾದಂತೆ ವಿಷ್ಣುವು ಜೀವರಿಗೂ ಚತುರ್ಮುಖ ಬ್ರಹ್ಮರುಗಳಿಗೂ ಆಧಾರನಾಗಿದ್ದಾನೆ. ಆ ವಿಷ್ಣುವೇ ಮತ್ಸ್ಯಾದಿ ರೂಪಿಯಾಗಿ ಹತ್ತು ರೂಪಗಳುಳ್ಳವನು.

ನಾರಾಯಣಾದಿ ರೂಪಿಯಾಗಿ ಶತರೂಪ ಉಳ್ಳವನು. ವಿಶ್ವಾದಿ ರೂಪಿಯಾಗಿ ಸಹಸ್ರರೂಪಿ, ಪರಾದಿರೂಪನಾಗಿ ಬಹುರೂಪಿ ಮತ್ತು ಅಜಿತಾದಿ ರೂಪನಾಗಿ ಅನಂತರೂಪಿಯಾಗಿರುವನು. ಭೂತ ಎಂದು ಕರೆಯಲ್ಪಡುವ ಎಲ್ಲಾ ಜೀವರಿಗೂ, ಆತ್ಮ ಎಂದು ಕರೆಯಲ್ಪಡುವ ಎಲ್ಲಾ ಬ್ರಹ್ಮರಿಗೂ ಅವನೊಬ್ಬನೇ ರಾಜ ಮತ್ತು ಅಧಿಪತಿ. ಸ್ವಾಮಿಯಾದುದರಿಂದ ಅವನು ರಾಜನೆನಿಸುತ್ತಾನೆ. ಸರ್ವೋತ್ತಮನಾದುದರಿಂದಲೂ ಮತ್ತು ಎಲ್ಲರನ್ನು ರಕ್ಷಿಸುವುದರಿಂದಲೂ ಅವನು ಅಧಿಪತಿ ಎನಿಸುತ್ತಾನೆ. ಶ್ರೀಹರಿಯೇ ಪುರಗಳಲ್ಲಿದ್ದ ಪ್ರಯುಕ್ತ ಪುರುಷ ಎನಿಸುತ್ತಾನೆ. ಅಂದರೆ ಪುರ ಎಂದು ಕರೆಯಲ್ಪಡುವ ದೇಹಗಳಲ್ಲಿಯೂ ಹೃದಯಗಳಲ್ಲಿಯೂ ವಾಸ ಮಾಡುವುದರಿಂದ ಶ್ರೀಹರಿಗೆ ಪುರುಷ ಎಂದು ಹೆಸರು.

**ಭಾಷ್ಯ—ನಾನೇನ ಕಿಂಚಿದವ್ಯಾಪ್ತಂ ನಾನೇನಾಚ್ಛಾದಿತಂ ನ ಚ ।**
**ನೈವಾಸ್ಮಾತ್ ಪೂರ್ವಕಂ ಕಿಂಚಿತ್ ನೈವಾಸ್ಮಾದಪರಂ ತಥಾ ।**
**ಸರ್ವಸ್ಮಾದ್ ಬಾಹ್ಯತಶ್ಚಾಸೌ ಸರ್ವಸ್ಮಾದಂತರಸ್ತಥಾ ।**
**ವ್ಯಾಪ್ತೇರಾತ್ಮೇತಿ ಸ ಪ್ರೋಕ್ತೋ ಬ್ರಹ್ಮೇತಿ ಗುಣಪೂರ್ತಿತಃ ।**
**ಸ ಸರ್ವಸ್ಯಾಪರೋಕ್ಷಜ್ಞ ಇತಿ ವೇದಾನುಶಾಸನಮ್ ।**

**ಅನುವಾದ**—ಹತ್ತೊಂಭತ್ತನೇ ಖಂಡದಲ್ಲಿರುವ 'ತದೇತದ್ ಬ್ರಹ್ಮಾಪೂರ್ವಮನಪರಂ' ಇತ್ಯಾದಿ ವಾಕ್ಯಕ್ಕೆ ಹೀಗೆ ಅರ್ಥ–

ಈ ಶ್ರೀಹರಿಯಿಂದ ಒಳಗೆ ವ್ಯಾಪ್ತವಾಗದಿದ್ದುದು ಯಾವುದೂ ಇಲ್ಲ. ಇವನಿಂದ ಹೊರಗೆ ಅಚ್ಛಾದಿತವಾಗದಿದ್ದುದು ಯಾವುದೂ ಇಲ್ಲ. ಇವನಿಗಿಂತ ಮೊದಲಿನ ವಸ್ತು ಯಾವುದೂ ಇಲ್ಲ. ಇವನ ನಂತರ ಇರುವ ವಸ್ತುವು ಯಾವುದೂ ಇಲ್ಲ. ಇವನು ಎಲ್ಲಾ ವಸ್ತುಗಳ ಹೊರಗೂ ಮತ್ತು ಒಳಗೂ ಇದ್ದಾನೆ. ಸರ್ವವ್ಯಾಪ್ತನಾದುದರಿಂದ ಅವನಿಗೆ ಆತ್ಮಾ ಎಂದು ಹೆಸರು. ಗುಣಪೂರ್ಣನಾದುದರಿಂದ ಬ್ರಹ್ಮ ಎಂದು ಹೆಸರು. ಅವನು ಎಲ್ಲವನ್ನೂ ಅಪರೋಕ್ಷವಾಗಿ ತಿಳಿದುಕೊಂಡಿದ್ದಾನೆ. ಹೀಗೆ ವೇದಗಳ ಉಪದೇಶವಿದೆ.

**ಭಾಷ್ಯ—ವಿರಿಂಚಸ್ತ್ವಾತ್ಮಶಬ್ದೋಕ್ತೋ ಮಾನುಷಂ ಮನುರುಚ್ಯತೇ ।**
**ಸತ್ಯಂ ಚ ಸ್ತನಯಿತ್ನುಶ್ಚ ವಾಯೋ ರೂಪಾಂತರೇ ಸ್ಮೃತೇ।**
**ಏತ ಏವ ಸ್ವರೇ ಸತ್ಯೇ ಜೀವೇ ಚಾಧ್ಯಾತ್ಮ ಸಂಸ್ಥಿತಾಃ ।**
**ತೇಷಾಂ ನಿಯಾಮಕೋ ವಿಷ್ಣುಸ್ತತ್ರ ತತ್ರೈವ ಸಂಸ್ಥಿತಃ ।**
**ಜೀವೇ ಸ್ಥಿತಸ್ತ್ವಾತ್ಮನಾಮಾ ಸೌವರಃ ಸ್ವರಗಃ ಸ್ಮೃತಃ ।**
**ಸತ್ಯಗಃ ಸತ್ಯನಾಮಾಽಸೌ ಧರ್ಮಗೋ ಧಾರ್ಮ ಏವ ಚ ।**

**ಅನುವಾದ**—ಅಯಮಾತ್ಮಾ ಎಂಬಲ್ಲಿರುವ ಆತ್ಮಶಬ್ದವು ವಿರಿಂಚನನ್ನು ಹೇಳುತ್ತದೆ. ಇದಂ ಮಾನುಷಂ ಎಂಬಲ್ಲಿರುವ ಮಾನುಷ ಶಬ್ದವು ಸ್ವಾಯಂಭುವ ಮನುವನ್ನು ಹೇಳುತ್ತದೆ. ಇದಂ ಸತ್ಯಂ ಎಂಬಲ್ಲಿರುವ ಸತ್ಯ ಶಬ್ದವೂ, ಅಯಂ ಸ್ತನಯಿತ್ನುಃ ಎಂಬಲ್ಲಿರುವ ಸ್ತನಯಿತ್ನು ಶಬ್ದವೂ ವಾಯುದೇವರ ಬೇರೆ ಬೇರೆ ರೂಪಗಳನ್ನು ಹೇಳುತ್ತವೆ. ಯಶ್ಚಾಯಮಧ್ಯಾತ್ಮಂ ಶಾಬ್ದಃ ಸೌವರಃ ಯಶ್ಚಾಯ ಮಧ್ಯಾತ್ಮಂ ಸಾತ್ಯಃ, ಯಶ್ಚಾಯಮಧ್ಯಾತ್ಮಮಾತ್ಮಾ ಎಂಬಲ್ಲಿರುವ ಸೌವರ ಸಾತ್ಯ ಮತ್ತು ಆತ್ಮಶಬ್ದಗಳಲ್ಲಿ ಅಂತರ್ಗತವಾದ ಸ್ವರ ಸತ್ಯ ಮತ್ತು ಆತ್ಮಶಬ್ದದಿಂದ ವಾಯು ದೇವರ ಈ ಎರಡೂ ರೂಪಗಳೂ ಮತ್ತು ವಿರಿಂಚನೂ ಹೇಳಲ್ಪಡುತ್ತಾರೆ. ಶರೀರ ದಲ್ಲಿ ಇವರೇ ಸ್ವರ ಸತ್ಯ ಮತ್ತು ಜೀವರಲ್ಲಿ ಅಭಿಮಾನಿಗಳಾಗಿರುವರು. ಅವೇ ಹೆಸರುಗಳಿಂದ ಇವರಿಗೆ ನಿಯಾಮಕನಾದ ವಿಷ್ಣುವೂ ಅಲ್ಲಲ್ಲಿಯೇ ಇದ್ದಾನೆ. ಅಂದರೆ ಜೀವಸ್ಥಾನನಾದ ವಿರಿಂಚನಲ್ಲಿರುವ ವಿಷ್ಣುವಿಗೆ ಆತ್ಮಾ ಎಂದು ಹೆಸರು. ಸ್ವರದಲ್ಲಿರುವ ವಾಯುವಿನಲ್ಲಿರುವ ವಿಷ್ಣುವಿಗೆ ಸೌವರ ಎಂದು ಹೆಸರು. ಸತ್ಯದಲ್ಲಿರುವ ವಾಯು ದೇವರಲ್ಲಿರುವ ವಿಷ್ಣುವಿಗೆ ಸಾತ್ಯ ಎಂದು ಹೆಸರು. ಧರ್ಮನಾಮಕ ಯಮನಲ್ಲಿರುವ ವಿಷ್ಣುವಿಗೆ ಧಾರ್ಮ ಎಂದು ಹೆಸರು.

ಭಾಷ್ಯ—**ಮನೋಃ ಸ್ವಾಯಂಭುವಸ್ಯಾಖ್ಯಾ ಮಾನುಷೇತ್ಯೇವ ದೇಹಿಷು ।**
**ಬಹಿಶ್ಚ ತದ್ಗತೋ ವಿಷ್ಣುರ್ಮಾನುಷೇತ್ಯೇವ ಕೀರ್ತ್ಯತೇ ।**
**ಪ್ರಾತಿಶ್ರುತ್ಕ ಇತಿ ಶ್ರೋತ್ರೇ ತೈಜಸೋ ವಿದ್ಯುತಿ ಸ್ಥಿತಃ ।**
**ಇತಿ ನಾನಾವಿಧೈರ್ನಾಮಸಮೂಹೈರ್ವಿಷ್ಣುರಿಜ್ಯತೇ ।**
**ದಧ್ಯಙ್ ಆಥರ್ವಣೋಽಶ್ವಿಭ್ಯಾಮೇತಾಂ ವಿದ್ಯಾಮುದಾತ್ ಪುರಾ ।**
**ಹಯಗ್ರೀವಬ್ರಹ್ಮವಿದ್ಯೇತ್ಯೇಷಾ ಬ್ರಹ್ಮಾದಿಭಿರ್ಧೃತಾ । ಇತಿ ಚ ।**

**ಅನುವಾದ**—ದೇಹಿಗಳ ಶರೀರದೊಳಗೆ ಮತ್ತು ಹೊರಗೆ ಅಧಿದೈವದಲ್ಲಿಯೂ ಇರುವ ಸ್ವಾಯಂಭುವ ಮನುವಿಗೆ ಮಾನುಷ ಎಂದು ಹೆಸರು. ಅವನಲ್ಲಿರುವ ವಿಷ್ಣುವೂ ಮಾನುಷ ಎಂದೇ ಕರೆಯಲ್ಪಡುತ್ತಾನೆ. ಶ್ರೋತ್ರದಲ್ಲಿದ್ದು ಕೇಳುವುದ ರಿಂದ ವಿಷ್ಣುವಿಗೆ ಪ್ರಾತಿಶ್ರುತ್ಕ ಎಂದು ಹೆಸರು. ದೇಹದಲ್ಲಿರುವ ತೇಜೋಭಿಮಾನಿ ಯಲ್ಲಿರುವುದರಿಂದ ವಿಷ್ಣುವಿಗೆ ತೈಜಸ ಎಂದು ಹೆಸರು. ಹೀಗೆಯೇ ಶಾರೀರ, ರೈತಸ, ವಾಙ್ಮಯ, ಪ್ರಾಣ, ಚಾಕ್ಷುಷ, ಮಾನಸ ಮೊದಲಾದ ನಾನಾ ಶಬ್ದಸಮೂಹ ಗಳಿಂದ ವಿಷ್ಣುವೇ ಪೂಜಿಸಲ್ಪಡುತ್ತಾನೆ. ಆಥರ್ವಣಗೋತ್ರೋತ್ಪನ್ನನಾದ ದಧೀಚಿ ಋಷಿಯು ಹಿಂದೆ ಅಶ್ವಿನೀದೇವತೆಗಳಿಗೆ ಈ ಮಧು ವಿದ್ಯೆಯನ್ನು ಉಪದೇಶಿಸಿದನು. ಹಯಗ್ರೀವ ಬ್ರಹ್ಮವಿದ್ಯೆ ಎಂದು ಕರೆಯಲ್ಪಡುವ ಈ ವಿದ್ಯೆಯು ಬ್ರಹ್ಮಾದಿಗಳಿಂದ ಧರಿಸಲ್ಪಟ್ಟಿದೆ ಎಂದೂ ಹಯಗ್ರೀವ ಸಂಹಿತೆಯಲ್ಲಿ ಹೇಳಲ್ಪಟ್ಟಿದೆ.

**ಭಾಷ್ಯ—ಪ್ರತ್ಯೈರಯುತಂ ಪ್ರತಿಸಮಧತ್ತಮ್ । ಋತಾಯನ್ ಸತ್ಯಂ ಕುರ್ವನ್ । ಕಕ್ಷ್ಯಂ ನಾರಾಯಣಕವಚಂ । ತ್ವಾಷ್ಟ್ರಂ ತ್ವಷ್ಟುಃ ಪುತ್ರೇಣ ವಿಶ್ವರೂಪೇಣೇಂದ್ರಾಯೋಕ್ತಂ । ಸನಯೇ ಲಾಭಾಯ । ದಂಸಃ ಕರ್ಮ । ಸ್ತನಯಿತ್ನುರ್ವೃಷ್ಟಿಮಿವ ।**

**ಅನುವಾದ**—ಪ್ರತ್ಯೈರಯುತಂ ಎಂದರೆ ಕೂಡಿಸಿದಿರಿ, ಋತಾಯನ್ ಎಂದರೆ ಸತ್ಯವನ್ನಾಗಿ ಮಾಡುತ್ತಾ, ಕಕ್ಷ್ಯ ಎಂದರೆ ನಾರಾಯಣಕವಚ, ತ್ವಾಷ್ಟ್ರ ಎಂದರೆ ತ್ವಷ್ಟ್ರವಿನ ಮಗನಾದ ವಿಶ್ವರೂಪನಿಂದ ಇಂದ್ರನಿಗೆ ಹೇಳಲ್ಪಟ್ಟದ್ದು, ಸನಯೇ ಎಂದರೆ ಮೋಕ್ಷಾದಿ ಪುರುಷಾರ್ಥ ಪ್ರಾಪ್ತಿಗಾಗಿ, ದಂಸ ಎಂದರೆ ಕರ್ಮ, ತನ್ಯತುರ್ನ ವೃಷ್ಟಿಂ ಎಂದರೆ ಮೋಡ ಮಳೆಗರೆಯುವಂತೆ ಎಂದು ಅರ್ಥ.

**ಭಾಷ್ಯ—ತಸ್ಯಾಂ ವಿದ್ಯಾಯಾಂ ಪರಸ್ಮೋಕ್ತಾಯಾಂ ತವ ಶಿರಶ್ಛೇತ್ಸ್ಯಾಮೀತೀಂದ್ರೇಣ ದಧೀಚಂ ಪ್ರತ್ಯುಕ್ತೇ ಸೋಽಶ್ವಿಭ್ಯಾಮಾವಾಂ ಬ್ರೂಹೀತ್ಯುಕ್ತ ಇಂದ್ರೇಣೋಕ್ತಮಾಹ । ತದಾಽಶ್ವಿಭ್ಯಾಂ ಪಾವ ಇತ್ಯುಕ್ತ್ವಾ ತಚ್ಛಿರಃ ಛಿತ್ವಾಽನ್ಯತ್ರ ನಿಧಾಯಾಶ್ವಶಿರಃ ಸಂಧಿತಮ್।ತೇನ ವಿದ್ಯಾಯಾಮುಕ್ತಾಯಾಂ ತಸ್ಮಿನ್ನಿಂದ್ರೇಣ ಚ್ಛಿನ್ನೇ ಪೂರ್ವಶಿರಃ ಸಂಧಿತಮ್ ।**

**ಪೂರ್ವಂ ಜಾನನ್ನಪೀಂದ್ರಃ ಪಶ್ಚಾದ್ ವಿಶ್ವರೂಪಾತ್ ಶುಶ್ರಾವೇತಿ ಪುನರ್ನವತ್ವಾಯೇತಿ ನ 'ವಿಶ್ವರೂಪಸ್ತ್ವಾಷ್ಟ್ರೋಽಶ್ವಿಭ್ಯಾಂ' ಇತ್ಯನೇನ ವಿರೋಧಃ । ಇತಿ ಮಧುಬ್ರಾಹ್ಮಣಮ್ ॥**

**ಅನುವಾದ**—ಈ ಮಧುವಿದ್ಯೆಯನ್ನು ಇನ್ನೊಬ್ಬರಿಗೆ ಹೇಳಿದರೆ ನಿನ್ನ ತಲೆಯನ್ನು ಕತ್ತರಿಸುತ್ತೇನೆ ಎಂದು ಇಂದ್ರನು ದಧೀಚಿ ಋಷಿಗೆ ಹೇಳಿದನು. ಅನಂತರ ಅಶ್ವಿನೀದೇವತೆಗಳು ದಧೀಚಿಯ ಸಮೀಪಕ್ಕೆ ಬಂದು ನಮಗೆ ಈ ವಿದ್ಯೆಯನ್ನು ಉಪದೇಶಿಸು ಎಂದು ಕೇಳಿದರು. ಆಗ ದಧೀಚಿಯು ಇಂದ್ರನು ಹೀಗೆ ಹೇಳಿದ್ದಾನೆ ಎಂದು ಹೇಳಿದರು. ಅದಕ್ಕೆ ಅಶ್ವಿನೀ ದೇವತೆಗಳು ನಿನ್ನನ್ನು ನಾವು ರಕ್ಷಿಸುತ್ತೇವೆ ಎಂದು ಹೇಳಿ ಅವನ ತಲೆಯನ್ನು ಕತ್ತರಿಸಿ ಬೇರೆ ಕಡೆಯಲ್ಲಿಟ್ಟು ಕುದುರೆಯ ತಲೆಯನ್ನು ಜೋಡಿಸಿದರು. ದಧೀಚಿಯು ಅಶ್ವಶಿರಸ್ಸಿನಿಂದಲೇ ಅವರಿಗೆ ಮಧುವಿದ್ಯೆಯನ್ನು ಉಪದೇಶ ಮಾಡಿದಾಗ ಇಂದ್ರನು ದಧೀಚಿಯ ಅಶ್ವಶಿರಸ್ಸನ್ನು ಛೇದಿಸಿದನು. ಆಗ ಅಶ್ವಿನೀದೇವತೆಗಳು ದಧೀಚಿಗೆ ಅವನ ಮೊದಲಿನ ತಲೆಯನ್ನು ಜೋಡಿಸಿದರು.

ಈ ಕಥೆಯಿಂದ ದಧೀಚಿಯು ಅಶ್ವಿನೀದೇವತೆಗಳಿಗೆ ಈ ವಿದ್ಯೆಯನ್ನು ಉಪದೇಶ ಮಾಡುವುದಕ್ಕೆ ಮೊದಲೇ ಇಂದ್ರನು ಈ ವಿದ್ಯೆಯನ್ನು ತಿಳಿದಿದ್ದನು ಎಂದು ತಿಳಿದು ಬರುತ್ತದೆ. ಇಲ್ಲದಿದ್ದರೆ ಈ ವಿದ್ಯೆಯನ್ನು ಇನ್ನೊಬ್ಬರಿಗೆ ಹೇಳಿದರೆ ನಿನ್ನ

ತಲೆಯನ್ನು ಕತ್ತರಿಸುತ್ತೇನೆ ಎಂದು ಆವನು ಹೇಳಲು ಸಾಧ್ಯವಿಲ್ಲ. ಆದರೆ ಮುಂದಿನ ಬ್ರಾಹ್ಮಣದಲ್ಲಿ ಅಶ್ವಿನೀದೇವತೆಗಳಿಂದ ವಿಶ್ವರೂಪನು ಈ ವಿದ್ಯೆಯನ್ನು ಸಂಪಾದಿಸಿದನು ಎಂದು ಇದೆ. ವಿಶ್ವರೂಪನು ಇಂದ್ರನಿಗೆ ಈ ವಿದ್ಯೆಯನ್ನು ಉಪದೇಶಿಸಿದ ಗುರು. ಏಕೆಂದರೆ 'ಏತಾಂ ವಿದ್ಯಾಮಧಿಗತೋ ವಿಶ್ವರೂಪಾತ್ ಶತಕ್ರತುಃ' ಎಂದು ಭಾಗವತದಲ್ಲಿ (6–8–43) ಹೇಳಿದೆ. ಆದ್ದರಿಂದ ಅಶ್ವಿನೀದೇವತೆಗಳಿಗಿಂತಲೂ ಮೊದಲು ಈ ವಿದ್ಯೆಯನ್ನು ತಿಳಿದ ಇಂದ್ರನು, ಅಶ್ವಿನೀದೇವತೆಗಳ ಶಿಷ್ಯನಾದ ವಿಶ್ವರೂಪನಿಂದ ಈ ವಿದ್ಯೆಯನ್ನು ಪಡೆದನೆಂದರೆ ವಿರೋಧವುಂಟಾಗುತ್ತದೆ. ಇದಕ್ಕೆ ಪರಿಹಾರ, 'ಇಂದ್ರನು ಮೊದಲು ಈ ವಿದ್ಯೆಯನ್ನು ತಿಳಿದಿದ್ದರೂ, ವೃತ್ರನನ್ನು ಕೊಲ್ಲಲು ವಿದ್ಯೆಗೆ ಪುನಃ ಹೊಸತನ ತರುವುದಕ್ಕೋಸ್ಕರ, ಅನಂತರವೂ ವಿಶ್ವರೂಪನಿಂದ ಇದನ್ನು ಕೇಳಿ ತಿಳಿದನು' ಎಂದು.

**ಮಧುವಿದ್ಯೆಯ ಋಷಿಪರಂಪರೆ :**

**ಉಪನಿಷತ್—ಅಥ ವಂಶಃ । ಪೌತಿಮಾಷ್ಯೋ ಗೌಪವನಾತ್ । ಗೌಪವನಃ ಪೌತಿಮಾಷ್ಯಾತ್ । ಪೌತಿಮಾಷ್ಯೋ ಗೌಪವನಾತ್ । ಗೌಪವನಃ ಕೌಶಿಕಾತ್ । ಕೌಶಿಕಃ ಕೌಂಡಿನ್ಯಾತ್ । ಕೌಂಡಿನ್ಯಃ ಶಾಂಡಿಲ್ಯಾತ್ । ಶಾಂಡಿಲ್ಯಃ ಕೌಶಿಕಾಚ್ಚ ಗೌತಮಾಚ್ಚ । ಗೌತಮ ಆಗ್ನಿವೇಶ್ಯಾತ್ । ಆಗ್ನಿವೇಶ್ಯಃ ಶಾಂಡಿಲ್ಯಾಚ್ಚ ಅನಭಿಮ್ಲಾತಾಚ್ಚ । ಅನಭಿಮ್ಲಾತ ಆನಭಿಮ್ಲಾತಾತ್। ಆನಭಿಮ್ಲಾತೋ ಗೌತಮಾತ್ । ಗೌತಮಃ ಸೈತವ ಪ್ರಾಚೀನಯೋಗ್ಯಾಭ್ಯಾಂ । ಸೈತವಪ್ರಾಚೀನಯೋಗ್ಯೌ ಪಾರಾಶರ್ಯಾತ್ । ಪಾರಾಶರ್ಯೋ ಭಾರದ್ವಾಜಾತ್ । ಭಾರದ್ವಾಜೋ ಭಾರದ್ವಾಜಾಚ್ಚ ಗೌತಮಾಚ್ಚ । ಗೌತಮೋ ಭಾರದ್ವಾಜಾತ್ । ಭಾರದ್ವಾಜಃ ಪಾರಾಶರ್ಯಾತ್ । ಪಾರಶರ್ಯೋ ಬೈಜವಾಪಾಯನಾತ್ । ಬೈಜವಾಪಾಯನಃ ಕೌಶಿಕಾಯನೇಃ । ಕೌಶಿಕಾಯನಿಃ ಘೃತ ಕೌಶಿಕಾತ್ । ಘೃತಕೌಶಿಕಃ ಪಾರಾಶರ್ಯಾಯಣಾತ್ । ಪಾರಾಶರ್ಯಾಯಣಃ ಪಾರಾಶರ್ಯಾತ್ । ಪಾರಶರ್ಯೋ ಜಾತುಕರ್ಣ್ಯಾತ್ । ಜಾತುಕರ್ಣ್ಯ ಆಸುರಾಯಣಾಚ್ಚ ಯಾಸ್ಕಾಚ್ಚ । ಆಸುರಾಯಣಃ ತ್ರೈವಣೇಃ । ತ್ರೈವಣಿಃ ಔಪಜಂಧನೇಃ । ಔಪಜಂಧನಿಃ ಆಸುರೇಃ । ಆಸುರಿಃ ಭಾರದ್ವಾಜಾತ್ । ಭಾರದ್ವಾಜ ಆತ್ರೇಯಾತ್ । ಆತ್ರೇಯೋ ಮಾಂಟೇಃ । ಮಾಂಟಿಃ ಗೌತಮಾತ್ । ಗೌತಮೋ ವಾತ್ಸ್ಯಾತ್ । ವಾತ್ಸ್ಯಃ ಶಾಂಡಿಲ್ಯಾತ್ । ಶಾಂಡಿಲ್ಯಃ ಕೈಶೋರ್ಯಾತ್। ಕಾಪ್ಯಾತ್ । ಕೈಶೋರ್ಯಃ ಕಾಪ್ಯಃ ಕುಮಾರಹಾರಿತಾತ್ । ಕುಮಾರಹಾರಿತೋ ಗಾಲವಾತ್ । ಗಾಲವೋ ವಿದರ್ಭೀ ಕೌಂಡಿನ್ಯಾತ್ ।**

**ವಿದರ್ಭೀ ಕೌಂಡಿನ್ಯೋ ವತ್ಸನಪಾದೋ ಬಾಭ್ರವಾತ್ । ವತ್ಸನಪಾದ್ ಬಾಭ್ರವಃ ಪಥಃ ಸೌಭರಾತ್। ಪಂಥಾಃ ಸೌಭರಃ ಅಯಾಸ್ಯಾದ್ ಆಂಗಿ-ರಸಾತ್ । ಅಯಾಸ್ಯ ಆಂಗಿರಸ ಆಭೂತೇಸ್ತ್ವಾಷ್ಟ್ರಾತ್ । ಆಭೂತಿಃ ತ್ವಾಷ್ಟ್ರೋ ವಿಶ್ವರೂಪಾತ್ ತ್ವಾಷ್ಟ್ರಾತ್ । ವಿಶ್ವರೂಪಃ ತ್ವಾಷ್ಟ್ರಃ ಅಶ್ವಿ-ಭ್ಯಾಮ್ । ಅಶ್ವಿನೌ ದಧೀಚ ಆಥರ್ವಣಾತ್ । ದಧ್ಯಙ್ ಆಥರ್ವಣಃ ಅಥರ್ವಣೋ ದೈವಾತ್ । ಅಥರ್ವಾ ದೈವೋ ಮೃತ್ಯೋಃ ಪ್ರಾಧ್ವಂಸ-ನಾತ್ । ಮೃತ್ಯುಃ ಪ್ರಾಧ್ವಂಸನಃ ಪ್ರಧ್ವಂಸನಾತ್ । ಪ್ರಧ್ವಂಸನ ಏಕರ್ಷೇಃ । ಏಕರ್ಷಿರ್ವಿಪ್ರಚಿತ್ತೇಃ । ವಿಪ್ರಚಿತ್ತಿಃ ವ್ಯಷ್ಟೇಃ । ವ್ಯಷ್ಟಿಃ ಸನಾರೋಃ । ಸನಾರುಃ ಸನಾತನಾತ್ । ಸನಾತನಃ ಸನಕಾತ್ । ಸನಕಃ ಪರಮೇಷ್ಠಿನಃ । ಪರಮೇಷ್ಠೀ ಬ್ರಹ್ಮಣಃ । ಬ್ರಹ್ಮ ಸ್ವಯಂಭು । ಬ್ರಹ್ಮಣೇ ನಮಃ । ಇತಿ ವಂಶಬ್ರಾಹ್ಮಣಮ್ ॥**

**ಇತಿ ಶ್ರೀ ಬೃಹದಾರಣ್ಯಕೇ ದ್ವಿತೀಯೋಽಧ್ಯಾಯಃ ॥**

**ಅನುವಾದ**—ಬ್ರಹ್ಮವಿದ್ಯೆಯು ವಿದ್ಯಾಪ್ರವರ್ತಕರಾದ ಋಷಿಗಳ ಸ್ಮರಣೆ ಪೂರ್ವಕವಾಗಿ ಅನುಷ್ಠಾನ ಮಾಡಿದರೆ ಮಾತ್ರ ಫಲವನ್ನು ಕೊಡುತ್ತದೆ. ಆದ್ದರಿಂದ ಈ ಮಧು ವಿದ್ಯೆಯ ಋಷಿಗಳಾದ ಗುರುಶಿಷ್ಯರ ಪರಂಪರೆಯು ನಿರೂಪಿಸಲ್ಪಡುತ್ತದೆ. ಪೌತಿಮಾಷ್ಯರು ಗೌಪವನರಿಂದ ಕಲಿತರು. ಗೌಪವನರು ಇನ್ನೊಬ್ಬ ಪೌತಿಮಾಷ್ಯರಿಂದ ಕಲಿತರು. ಆ ಪೌತಿಮಾಷ್ಯರು ಇನ್ನೊಬ್ಬ ಗೌಪವನರಿಂದ, ಆ ಗೌಪವನರು ಕೌಶಿಕರಿಂದ. ಕೌಶಿಕರು ಕೌಂಡಿನ್ಯರಿಂದ. ಕೌಂಡಿನ್ಯರು ಶಾಂಡಿಲ್ಯರಿಂದ. ಶಾಂಡಿಲ್ಯರು ಕೌಶಿಕರಿಂದ ಮತ್ತು ಗೌತಮರಿಂದ. ಗೌತಮರು ಆಗ್ನಿವೇಶ್ಯರಿಂದ. ಆಗ್ನಿವೇಶ್ಯರು ಇನ್ನೊಬ್ಬ ಶಾಂಡಿಲ್ಯರಿಂದ ಮತ್ತು ಅನಭಿಮ್ಲಾತರಿಂದ. ಅನಭಿಮ್ಲಾತರು ಆನಭಿಮ್ಲಾತರಿಂದ. ಆನಭಿಮ್ಲಾತರು ಇನ್ನೊಬ್ಬ ಗೌತಮರಿಂದ. ಆ ಗೌತಮರು ಸೈತವರಿಂದ ಮತ್ತು ಪ್ರಾಚೀನಯೋಗ್ಯರಿಂದ. ಸೈತವರು ಮತ್ತು ಪ್ರಾಚೀನಯೋಗ್ಯರು ಒಬ್ಬ ಪಾರಾಶರ್ಯರಿಂದ. ಆ ಪಾರಶರ್ಯರು ಭಾರದ್ವಾಜರಿಂದ. ಭಾರದ್ವಾಜರು ಇನ್ನೊಬ್ಬ ಪಾರಾಶರ್ಯರಿಂದ. ಆ ಪಾರಾಶರ್ಯರು ಬೈಜವಾಪಾಯನರಿಂದ. ಬೈಜವಾಪಾಯನರು ಕೌಶಿಕಾಯನಿಗಳಿಂದ. ಕೌಶಿಕಾಯನಿಗಳು ಘೃತಕೌಶಿಕರಿಂದ. ಘೃತಕೌಶಿಕರು ಪಾರಾಶರ್ಯಾಯಣರಿಂದ. ಪಾರಾಶರ್ಯಾಯಣರು ಇನ್ನೊಬ್ಬ ಪಾರಾಶರ್ಯರಿಂದ. ಆ ಪಾರಾಶರ್ಯರು ಜಾತುಕರ್ಣ್ಯರಿಂದ. ಜಾತುಕರ್ಣ್ಯರು ಆಸುರಾಯಣರಿಂದ ಮತ್ತು ಯಾಸ್ಕರಿಂದ. ಆಸುರಾಯಣರು ತ್ರೈವರ್ಣಿಗಳಿಂದ. ತ್ರೈವರ್ಣಿಗಳು ಔಪಬಂಧನಿಗಳಿಂದ. ಔಪಬಂಧನಿಗಳು ಆಸುರಿಗಳಿಂದ. ಆಸುರಿಗಳು ಭಾರದ್ವಾಜರಿಂದ. ಭಾರದ್ವಾಜರು ಆತ್ರೇಯರಿಂದ. ಆತ್ರೇಯರು ಮಾಂಡಿಗಳಿಂದ. ಮಾಂಡಿಗಳು ಬೇರೆ ಗೌತಮರಿಂದ. ಆ ಗೌತಮರು ವಾತ್ಸ್ಯರಿಂದ. ವಾತ್ಸ್ಯರು

ಇನ್ನೊಬ್ಬ ಶಾಂಡಿಲ್ಯರಿಂದ. ಆ ಶಾಂಡಿಲ್ಯರು ಕೈಶೋರ್ಯಕಾಪ್ಯರಿಂದ. ಕೈಶೋರ್ಯ ಕಾಪ್ಯರು ಕುಮಾರಹಾರಿತರಿಂದ. ಕುಮಾರಹಾರಿತರು ಗಾಲವರಿಂದ. ಗಾಲವರು ವಿದರ್ಭೀ ಕೌಂಡಿನ್ಯರಿಂದ. ವಿದರ್ಭೀ ಕೌಂಡಿನ್ಯರು ವತ್ಸನಪಾದ್ ಬಾಭ್ರವರಿಂದ. ವತ್ಸನಪಾದ್ ಬಾಭ್ರವರು ಪಂಥಾ ಸೌಭರರಿಂದ. ಪಂಥಾ ಸೌಭರರು ಅಯಾಸ್ಯ ಆಂಗಿರಸರಿಂದ. ಅಯಾಸ್ಯ ಅಂಗಿರಸರು ಆಭೂತಿ ತ್ವಾಷ್ಟ್ರರಿಂದ. ಆಭೂತಿ ತ್ವಾಷ್ಟ್ರರು ತ್ವಷ್ಟೃಪುತ್ರರಾದ ವಿಶ್ವರೂಪರಿಂದ. ವಿಶ್ವರೂಪರು ಅಶ್ವಿನೀದೇವತೆಗಳಿಂದ. ಅಶ್ವಿನೀದೇವತೆಗಳು ಆಥರ್ವಣ ದಧೀಚಿಗಳಿಂದ. ಆಥರ್ವಣ ದಧೀಚಿಗಳು ದೈವ ಆಥರ್ವಣರಿಂದ. ದೈವ ಆಥರ್ವಣರು ಮೃತ್ಯು ಪ್ರಾಧ್ವಂಸನರಿಂದ. ಮೃತ್ಯು ಪ್ರಾಧ್ವಂಸನರು ಪ್ರಧ್ವಂಸನರಿಂದ. ಪ್ರಧ್ವಂಸನರು ಏಕರ್ಷಿಗಳಿಂದ. ಏಕರ್ಷಿಗಳು ವಿಪ್ರಚಿತ್ತಿಗಳಿಂದ. ವಿಪ್ರಚಿತ್ತಿಗಳು ವ್ಯಷ್ಟಿಗಳಿಂದ. ವ್ಯಷ್ಟಿಗಳು ಸನಾರುಗಳಿಂದ. ಸನಾರುಗಳು ಸನಾತನರಿಂದ. ಸನಾತನರು ಸನಕರಿಂದ. ಸನಕರು ಚತುರ್ಮುಖ ಬ್ರಹ್ಮನಿಂದ. ಚತುರ್ಮುಖ ಬ್ರಹ್ಮನು ಹಯಗ್ರೀವರೂಪಿ ಪರಮಾತ್ಮನಿಂದ ಕಲಿತನು. ಹಯಗ್ರೀವನು ಸ್ವತಃ ಸರ್ವಜ್ಞನು. ಅಂತಹ ಹಯಗ್ರೀವರೂಪಿ ಬ್ರಹ್ಮನಿಗೆ ನಮಸ್ಕಾರ.

ಇಲ್ಲಿಗೆ ಬೃಹದಾರಣ್ಯಕೋಪನಿಷತ್ತಿನಲ್ಲಿ ಎರಡನೆ ಅಧ್ಯಾಯ ಮುಗಿಯಿತು.

**ಭಾಷ್ಯ—ಪಾರಾಶರ್ಯೋ ಜಾತುಕರ್ಣ್ಯಃ ಪರಾಶರಸುತಾವುಭೌ ।**
**ವಿಪ್ರಾಯಾಮೇವ ಭಾರ್ಯಾಯಾಂ ತೃತೀಯಃ ಕೃಷ್ಣ ಏವ ಚ ।**
**ಇತಿ ಬ್ರಹ್ಮಾಂಡೇ ॥**
**ಪರಸ್ಯ ಬ್ರಹ್ಮಣೋ ವಿಷ್ಣೋರ್ಹಯಶೀರ್ಷಾದಧೀತವಾನ್ ।**
**ಬ್ರಹ್ಮವಿದ್ಯಾಮಿಮಾಂ ಬ್ರಹ್ಮಾ ತತಃ ಸನಕ ಏವ ಚ ।**
**ಇತಿ ಗಾರುಡೇ ॥**

**ಇತಿ ಶ್ರೀಮದಾನಂದತೀರ್ಥ ಭಗವತ್ಪಾದವಿರಚಿತೇ**
**ಶ್ರೀಮದ್ಬೃಹದಾರಣ್ಯಕೋಪನಿಷದ್ಭಾಷ್ಯೇ ದ್ವಿತೀಯೋಽಧ್ಯಾಯಃ॥**

**ಅನುವಾದ**–ಪಾರಾಶರ್ಯೋ ಜಾತುಕರ್ಣ್ಯಾತ್ ಎಂಬಲ್ಲಿ ಪಾರಾಶರ್ಯರು ಎಂದರೆ ವೇದವ್ಯಾಸರು ಜಾತುಕರ್ಣ್ಯರಿಂದ ಕಲಿತರು ಎಂದು ತಿಳಿಯಬಾರದು. ಪಾರಾಶರ್ಯರು ಎಂದರೆ ಇಲ್ಲಿ ವೇದವ್ಯಾಸರಲ್ಲ. 'ಪರಾಶರರಿಗೆ ವಿಪ್ರಳಾದ ಭಾರ್ಯೆಯಲ್ಲಿ ಪಾರಾಶರ್ಯ, ಜಾತುಕರ್ಣ್ಯ ಎಂದು ಇಬ್ಬರು ಮಕ್ಕಳು ಹುಟ್ಟಿದ್ದರು. ಬಳಿಕ ವೇದವ್ಯಾಸರು ಮೂರನೆಯವರು, ಸತ್ಯವತಿಯಲ್ಲಿ ಅವತರಿಸಿದರು' ಎಂದು ಬ್ರಹ್ಮಾಂಡಪುರಾಣದಲ್ಲಿ ಹೇಳಿದೆ.

'ಪರಮೇಷ್ಠೀ ಬ್ರಹ್ಮಣಃ' ಎಂಬಲ್ಲಿ ಪರಮೇಷ್ಠಿಯು ಎಂದರೆ ವಿರಾಟ್ ಪುರುಷನು ಬ್ರಹ್ಮದೇವರಿಂದ ಕಲಿತನು ಎಂದು ಅರ್ಥವಲ್ಲ. ಗರುಡಪುರಾಣದಲ್ಲಿ ಹೀಗೆ ಹೇಳಿದೆ, 'ಪರಬ್ರಹ್ಮನಾದ ಹಯಗ್ರೀವರೂಪಿಯಾದ ವಿಷ್ಣುವಿನಿಂದ ಬ್ರಹ್ಮನು ಈ ಬ್ರಹ್ಮವಿದ್ಯೆಯನ್ನು ಕಲಿತನು. ಬ್ರಹ್ಮನಿಂದ ಸನಕನು ಕಲಿತನು'.

ಬೃಹದಾರಣ್ಯಕಭಾಷ್ಯದಲ್ಲಿ ದ್ವಿತೀಯಾಧ್ಯಾಯ ಮುಗಿಯಿತು.

## || ತೃತೀಯಾಧ್ಯಾಯ ||

**ಜನಕರಾಜನ ಸಭೆಗೆ ಯಾಜ್ಞವಲ್ಕ್ಯರ ಆಗಮನ :**

**ಉಪನಿಷತ್—ಜನಕೋ ಹ ವೈದೇಹೋ ಬಹುದಕ್ಷಿಣೇನ ಯಜ್ಞೇನ ಈಜೇ । ತತ್ರ ಹ ಕುರುಪಾಂಚಾಲಾನಾಂ ಬ್ರಾಹ್ಮಣಾ ಅಭಿ ಸಮೇತಾ ಬಭೂವುಃ। ತಸ್ಯ ಹ ಜನಕಸ್ಯ ವೈದೇಹಸ್ಯ ವಿಜಿಜ್ಞಾಸಾ ಬಭೂವ, ಕಃ ಸ್ವಿತ್ ಏಷಾಂ ಬ್ರಾಹ್ಮಣಾನಾಂ ಅನೂಚಾನತಮ ಇತಿ । ಸ ಹ ಗವಾಂ ಸಹಸ್ರಮವರುರೋಧ । ದಶ ದಶ ಪಾದಾ ಏಕೈಕಸ್ಯಾಃ ಶೃಂಗಯೋ-ರಾಬದ್ಧಾ ಬಭೂವುಃ ।**

ಹಿಂದೆ ವಿದೇಹಕುಲದಲ್ಲಿ ಹುಟ್ಟಿದ ಜನಕನೆಂಬ ರಾಜನು ಬಹಳ ದಕ್ಷಿಣೆ ಯಿಂದ ಕೂಡಿದ ಅಶ್ವಮೇಧಾದಿ ಯಾಗವನ್ನು ಮಾಡಿದನು. ಆ ಯಾಗಕ್ಕೆ ಕುರು ಮತ್ತು ಪಾಂಚಾಲ ದೇಶಗಳ ಪ್ರಸಿದ್ಧ ವಿದ್ವಾಂಸರಾದ ಬ್ರಾಹ್ಮಣರು ಬಂದು ನೆರೆದಿದ್ದರು. ಈ ಬ್ರಾಹ್ಮಣರಲ್ಲಿ ಅತ್ಯುತ್ತಮ ಬ್ರಹ್ಮಜ್ಞಾನಿ ಯಾರು? ಎಂದು ತಿಳಿಯುವ ಇಚ್ಛೆ ಜನಕನಿಗೆ ಉಂಟಾಯಿತು. ಅದಕ್ಕಾಗಿ ಅವನು ಸಾವಿರ ಹಸು ಗಳನ್ನು ಯಾಗಶಾಲೆಯ ಬಳಿ ಕಟ್ಟಿಸಿದನು. ಪ್ರತಿಯೊಂದು ಹಸುವಿನ ಕೊಂಬು ಗಳಿಗೂ ಹತ್ತು ಹತ್ತು ತೊಲ ಚಿನ್ನವನ್ನು ಹೊದಿಸಲಾಗಿತ್ತು.

**ಉಪನಿಷತ್—ತಾನ್ ಹೋವಾಚ 'ಬ್ರಾಹ್ಮಣಾ ಭಗವಂತೋ ಯೋ ವೋ ಬ್ರಹ್ಮಿಷ್ಠಃ ಸ ಏತಾ ಗಾ ಉದಜತಾಮಿ'ತಿ । ತೇ ಹ ಬ್ರಾಹ್ಮಣಾ ನ ದಧೃಷುಃ । ಅಥ ಹ ಯಾಜ್ಞವಲ್ಕ್ಯಃ ಸ್ವಮೇವ ಬ್ರಹ್ಮಚಾರಿಣ-ಮುವಾಚ- 'ಏತಾಃ ಸೋಮ್ಯ ಉದಜ ಸಾಮಶ್ರವಾ' ಇತಿ । ತಾ ಹೋದಾಚಕಾರ । ತೇ ಹ ಬ್ರಾಹ್ಮಣಾಶ್ಚುಕ್ರುಧುಃ । 'ಕಥಂ ನೋ ಬ್ರಹ್ಮಿಷ್ಠೋ ಬ್ರುವೀತ' ಇತಿ ।**

ಬಳಿಕ ಜನಕನು ಆ ಬ್ರಾಹ್ಮಣರಿಗೆ ಹೇಳಿದನು. 'ಪೂಜ್ಯ ಬ್ರಾಹ್ಮಣರೇ, ನಿಮ್ಮಲ್ಲಿ ಅತ್ಯುತ್ತಮ ಬ್ರಹ್ಮಜ್ಞಾನಿಯಾದವನು ಈ ಹಸುಗಳನ್ನು ತನ್ನ ಮನೆಗೆ ಒಯ್ಯಲಿ'. ಆ ಬ್ರಾಹ್ಮಣರಾರೂ ತಾವು ಉತ್ತಮ ಬ್ರಹ್ಮಜ್ಞಾನಿಗಳೆಂದು ಹೇಳಿ

ಕೊಳ್ಳಲು ಧೈರ್ಯತೋರಲಿಲ್ಲ. ಅನಂತರ ಯಾಜ್ಞವಲ್ಕ್ಯನು ತನ್ನ ಶಿಷ್ಯನೊಬ್ಬನಿಗೆ 'ಸೋಮಪಾನಾರ್ಹನಾದ ಸಾಮಶ್ರವನೇ, ಈ ಹಸುಗಳನ್ನು ನಮ್ಮ ಮನೆಗೆ ತೆಗೆದು ಕೊಂಡು ಹೋಗು' ಎಂದು ಹೇಳಿದನು. ಅವನು ಅವುಗಳನ್ನು ತೆಗೆದುಕೊಂಡು ಹೋದನು. 'ಈತನು ನಮ್ಮೆಲ್ಲರ ನಡುವೆ ತಾನೇ ಅತ್ಯುತ್ತಮ ಬ್ರಹ್ಮಜ್ಞಾನಿ ಎಂದು ಹೇಗೆ ಹೇಳಿಕೊಳ್ಳುತ್ತಾನೆ ?' ಎಂದು ಆ ಬ್ರಾಹ್ಮಣರೆಲ್ಲರೂ ಕೋಪಗೊಂಡರು.

**ಉಪನಿಷತ್—ಅಥ ಹ ಜನಕಸ್ಯ ವೈದೇಹಸ್ಯ ಹೋತಾ ಅಶ್ವಲೋ ಬಭೂವ । ಸ ಹ ಏನಂ ಪಪ್ರಚ್ಛ । 'ತ್ವಂ ನು ಖಲು ನೋ ಯಾಜ್ಞವಲ್ಕ್ಯ ಬ್ರಹ್ಮಿಷ್ಠೋಽಸಿ' ಇತಿ । ಸ ಹೋವಾಚ 'ನಮೋ ವಯಂ ಬ್ರಹ್ಮಿಷ್ಠಾಯ ಕುರ್ಮಃ ಗೋಕಾಮಾ ಏವ ವಯಂ ಸ್ಮಃ' ಇತಿ । ತಂ ಹ ತತ ಏವ ಪ್ರಷ್ಟುಂ ದಧ್ರೇ ಹೋತಾ ಅಶ್ವಲಃ ।**

ಜನಕರಾಜನಿಗೆ ಆಗ ಅಶ್ವಲನೆಂಬ ಬ್ರಾಹ್ಮಣನು ಋತ್ವಿಜನಾಗಿದ್ದನು. ಅವನು ಯಾಜ್ಞವಲ್ಕ್ಯರನ್ನು 'ಯಾಜ್ಞವಲ್ಕ್ಯರೇ, ನಮ್ಮ ಮಧ್ಯೆ ನೀವೇ ಅತ್ಯುತ್ತಮ ಬ್ರಹ್ಮಜ್ಞಾನಿಗಳಾಗಿರುವಿರೇ?' ಎಂದು ಕೇಳಿದನು. ಅವರು ಹೇಳಿದರು 'ಅತ್ಯುತ್ತಮ ಬ್ರಹ್ಮಜ್ಞಾನಿಗೆ ನಾನು ನಮಸ್ಕರಿಸುತ್ತೇನೆ. ನಾನು ಕೇವಲ ಹಸುಗಳ ಮೇಲೆ ಆಸೆವುಳ್ಳವನು'. ಹೀಗೆ ಅತ್ಯುತ್ತಮ ಬ್ರಹ್ಮಜ್ಞಾನಿಗೆ ಮೀಸಲಾದ ಗೋಸಂಪತ್ತನ್ನು ಯಾಜ್ಞವಲ್ಕ್ಯರು ತೆಗೆದುಕೊಳ್ಳುತ್ತಿರುವುದರಿಂದ ಹೋತೃ ಅಶ್ವಲನು ಅವರನ್ನು ಪ್ರಶ್ನಿಸಲು ನಿರ್ಧಾರ ಮಾಡಿದನು.

**ಮೃತ್ಯುವನ್ನು ಗೆಲ್ಲುವ ಉಪಾಯ :**

**ಉಪನಿಷತ್—ಯಾಜ್ಞವಲ್ಕ್ಯೇತಿ ಹೋವಾಚ । 'ಯದಿದಂ ಸರ್ವಂ ಮೃತ್ಯುನಾ ಆಪ್ತಂ, ಸರ್ವಂ ಮೃತ್ಯುನಾ ಅಭಿಪನ್ನಂ, ಕೇನ ಯಜಮಾನೋ ಮೃತ್ಯೋರಾಪ್ತಿಮತಿಮುಚ್ಯತ' ಇತಿ । ಹೋತ್ರಾ ಋತ್ವಿಜಾ ಅಗ್ನಿನಾ ವಾಚಾ । ವಾಗ್ ವೈ ಯಜ್ಞಸ್ಯ ಹೋತಾ । ತದ್ ಯೇಯಂ ವಾಕ್ ಸೋಽಯಮಗ್ನಿಃ, ಸ ಹೋತಾ, ಸ ಮುಕ್ತಿಃ, ಸಾ ಅತಿಮುಕ್ತಿಃ ।**

ಅಶ್ವಲನು ಕೇಳಿದನು 'ಯಾಜ್ಞವಲ್ಕ್ಯರೇ, ಈ ಎಲ್ಲ ಪ್ರಾಣಿ ಜಗತ್ತನ್ನು ಯಾವ ಮೃತ್ಯುವು ವ್ಯಾಪಿಸಿದೆಯೋ, ಯಾವ ಮೃತ್ಯುವು ಎಲ್ಲವನ್ನೂ ನುಂಗಿದೆಯೋ ಆ ಮೃತ್ಯುವಿನ ಆಕ್ರಮಣವನ್ನು ಯಜಮಾನನು ಯಾವ ಉಪಾಯದಿಂದ ತಪ್ಪಿಸಿಕೊಂಡು ಮುಕ್ತಿಯನ್ನು ಪಡೆಯುತ್ತಾನೆ?' ಯಾಜ್ಞವಲ್ಕ್ಯರು ಉತ್ತರಿಸಿದರು. 'ಹೋತೃ ಎಂಬ ಋತ್ವಿಜ, ಅಗ್ನಿ ಮತ್ತು ವಾಕ್ ಇವರಲ್ಲಿದ್ದು ಇವರಿಂದ ಆಯಾ ಕರ್ಮಗಳನ್ನು ಮಾಡಿಸುತ್ತ ಹೋತೃ, ಅಗ್ನಿ, ವಾಕ್ ಎಂದು ಕರೆಸಿಕೊಳ್ಳುವ ವಾಸು

ದೇವನ ಉಪಾಸನೆಯಿಂದಲೇ ಯಜಮಾನನು ಮುಕ್ತಿಯನ್ನು ಪಡೆಯುತ್ತಾನೆ. ವಾಕ್‌ನಲ್ಲಿರುವ ವಾಕ್ ಎಂದು ಹೆಸರುಳ್ಳ ವಾಸುದೇವನೇ ಹೋತೃವಿನಲ್ಲಿ ಹೋತೃ ನಾಮಕನಾಗಿದ್ದಾನೆ. ವಾಕ್‌ನಲ್ಲಿ ಇರುವ ಆ ವಾಸುದೇವನೇ ಅಗ್ನಿಯಲ್ಲಿಯೂ ಅಗ್ನಿ ನಾಮಕನಾಗಿದ್ದಾನೆ. ಅವನೇ ಹೋತೃವಿನಲ್ಲಿ ಹೋತೃನಾಮಕನಾಗಿದ್ದಾನೆ. ಅವನೇ ಎಲ್ಲರಿಗೂ ಮುಕ್ತಿಪ್ರದನು. ದೇವತೆಗಳಿಗೆ ಅಧಿಕಸುಖವುಳ್ಳ ಅತಿಶಯವಾದ ಮುಕ್ತಿಯನ್ನು ಕೊಡುವವನೂ ಅವನೆ.

**ಕಾಲದ ಪರಿಣಾಮವನ್ನು ತಡೆಯುವ ಉಪಾಯ :**

**ಉಪನಿಷತ್—ಯಾಜ್ಞವಲ್ಕ್ಯೇತಿ ಹೋವಾಚ । 'ಯದಿದಂ ಸರ್ವಮಹೋ-ರಾತ್ರಾಭ್ಯಾಮಾಪ್ತಂ, ಸರ್ವಮಹೋರಾತ್ರಾಭ್ಯಾಮಭಿಪನ್ನಂ, ಕೇನ ಯಜಮಾನೋಽಹೋರಾತ್ರಯೋರಾಪ್ತಿಮತಿ ಮುಚ್ಯತ' ಇತಿ ।'ಅಧ್ವ-ರ್ಯುಣಾ ಋತ್ವಿಜಾ ಚಕ್ಷುಷಾ ಆದಿತ್ಯೇನ । ಚಕ್ಷುರ್ವೈಯಜ್ಞ-ಸ್ಯಾಧ್ವರ್ಯುಃ । ತದ್ ಯದಿದಂ ಚಕ್ಷುಃ ಸೋಽಸಾವಾದಿತ್ಯಃ, ಸೋ ಧ್ವರ್ಯುಃ, ಸ ಮುಕ್ತಿಃ, ಸಾ ಅತಿಮುಕ್ತಿಃ ।**

ಆಶ್ವಲನು ಕೇಳಿದನು. 'ಯಾಜ್ಞವಲ್ಕ್ಯರೇ ಈ ಎಲ್ಲ ಪ್ರಾಣಿ ಪ್ರಪಂಚವನ್ನು ಹಗಲು ರಾತ್ರಿಗಳಿಂದ ಉಂಟಾಗುವ ಆಲಸ್ಯ ಮುಪ್ಪು ಮೊದಲಾದ ಯಾವ ವಿಕಾರಗಳು ಆವರಿಸಿವೆಯೋ, ಎಲ್ಲವನ್ನೂ ಯಾವ ವಿಕಾರಗಳು ನುಂಗುವುವೋ ಆ ವಿಕಾರಗಳ ಆಕ್ರಮಣವನ್ನು ಯಜಮಾನನು ಯಾವ ಉಪಾಯದಿಂದ ತಪ್ಪಿಸಿಕೊಂಡು ಮುಕ್ತಿಯನ್ನು ಪಡೆಯುತ್ತಾನೆ?' ಯಾಜ್ಞವಲ್ಕ್ಯರು ಉತ್ತರಿಸಿದರು–'ಅಧ್ವರ್ಯುವೆಂಬ ಋತ್ವಿಜ ಚಕ್ಷುಷ್ ಮತ್ತು ಆದಿತ್ಯ ಇವರಲ್ಲಿದ್ದು, ಇವರಿಂದ ಆಯಾ ಕರ್ಮಗಳನ್ನು ಮಾಡಿಸುವ, ಆಯಾ ಹೆಸರಿನಿಂದ ಕರೆಸಿಕೊಳ್ಳುವ ಸಂಕರ್ಷಣನ ಉಪಾಸನೆಯಿಂದ ಯಜಮಾನನು ಮುಕ್ತಿಪಡೆಯುತ್ತಾನೆ. ಚಕ್ಷುಷ್‌ನಲ್ಲಿ ಅಂತರ್ಯಾಮಿಯಾಗಿರುವ ಚಕ್ಷುಷ್ ಎಂಬ ಹೆಸರುಳ್ಳ ಸಂಕರ್ಷಣನೇ ಅಧ್ವರ್ಯುವಿನಲ್ಲಿ ಅಧ್ವರ್ಯು ನಾಮಕನಾಗಿದ್ದಾನೆ. ಚಕ್ಷುಷ್‌ನಲ್ಲಿ ಇರುವ ಆ ಸಂಕರ್ಷಣನೇ ಆದಿತ್ಯನಲ್ಲಿಯೂ ಆದಿತ್ಯ ಎಂಬ ಹೆಸರಿನಿಂದ ಇದ್ದಾನೆ. ಅವನೇ ಅಧ್ವರ್ಯುವಿನಲ್ಲಿ ಅಧ್ವರ್ಯು ಎಂಬ ಹೆಸರಿನಿಂದ ಇದ್ದಾನೆ. ಅವನೇ ಎಲ್ಲರಿಗೆ ಮುಕ್ತಿಪ್ರದ. ದೇವತೆಗಳಿಗೆ ಅತಿಶಯವಾದ ಮುಕ್ತಿಯನ್ನು ಕೊಡುವವನೂ ಅವನೇ.

**ಉಪನಿಷತ್—ಯಾಜ್ಞವಲ್ಕ್ಯೇತಿ ಹೋವಾಚ । 'ಯದಿದಂ ಸರ್ವಂ ಪೂರ್ವ-ಪಕ್ಷಾಪರಪಕ್ಷಾಭ್ಯಾಮಾಪ್ತಂ, ಸರ್ವಂ ಪೂರ್ವಪಕ್ಷಾಪರಕ್ಷಾಭ್ಯಾಮಭಿ-ಪನ್ನಂ, ಕೇನ ಯಜಮಾನಃ ಪೂರ್ವಪಕ್ಷಾಪರಪಕ್ಷಯೋರಾಪ್ತಿಮತಿ**

**ಮುಚ್ಯತ' ಇತಿ । ಉದ್ಗಾತ್ರಾ ಋತ್ವಿಜಾ ವಾಯುನಾ ಪ್ರಾಣೇನ । ಪ್ರಾಣೋ ವೈ ಯಜ್ಞಸ್ಯ ಉದ್ಗಾತಾ । ತದ್ ಯೋಽಯಂ ಪ್ರಾಣಃ ಸ ವಾಯುಃ, ಸ ಉದ್ಗಾತಾ, ಸ ಮುಕ್ತಿಃ, ಸಾಽತಿಮುಕ್ತಿಃ ।**

ಅಶ್ವಲನು ಕೇಳಿದನು, 'ಯಾಜ್ಞವಲ್ಕ್ಯರೇ ಈ ಎಲ್ಲ ಪ್ರಾಣಿ ಸಮೂಹವನ್ನು ಶುಕ್ಲಪಕ್ಷ ಮತ್ತು ಕೃಷ್ಣಪಕ್ಷಗಳಿಂದ ಉಂಟಾಗುವ ವೃದ್ಧಿಹ್ರಾಸ ಮುಪ್ಪು ಮೊದಲಾದ ಯಾವ ವಿಕಾರವು ವ್ಯಾಪಿಸಿದೆಯೋ, ಎಲ್ಲವನ್ನೂ ಯಾವ ವಿಕಾರವು ನುಂಗಿದೆಯೋ ಆ ವಿಕಾರದ ಆಕ್ರಮಣವನ್ನು ಯಜಮಾನನು ಯಾವ ಉಪಾಯದಿಂದ ತಪ್ಪಿಸಿಕೊಂಡು ಮುಕ್ತಿಯನ್ನು ಪಡೆಯುತ್ತಾನೆ?' ಯಾಜ್ಞವಲ್ಕ್ಯರು ಉತ್ತರಿಸಿದರು 'ಉದ್ಗಾತೃ ಎಂಬ ಋತ್ವಿಜ ವಾಯು ಮತ್ತು ಪ್ರಾಣ ಇವರಲ್ಲಿದ್ದು ಆಯಾ ಕರ್ಮಗಳನ್ನು ಮಾಡಿಸುವ ಆಯಾ ಹೆಸರಿನ ಪ್ರದ್ಯುಮ್ನನ ಉಪಾಸನೆಯಿಂದ ಯಜಮಾನನು ಮುಕ್ತಿ ಪಡೆಯುತ್ತಾನೆ. ಪ್ರಾಣನಲ್ಲಿ ಅಂತರ್ಯಾಮಿಯಾಗಿರುವ ಪ್ರಾಣ ಎಂಬ ಹೆಸರುಳ್ಳ ಪ್ರದ್ಯುಮ್ನನೇ ಉದ್ಗಾತೃವಿನಲ್ಲಿ ಉದ್ಗಾತೃನಾಮಕನಾಗಿದ್ದಾನೆ. ಪ್ರಾಣನಲ್ಲಿ ಇರುವ ಆ ಪ್ರದ್ಯುಮ್ನನೇ ವಾಯುವಿನಲ್ಲಿಯೂ ವಾಯುನಾಮಕನಾಗಿ ಇದ್ದಾನೆ. ಅವನೇ ಉದ್ಗಾತೃವಿನಲ್ಲಿ ಉದ್ಗಾತೃನಾಮಕನಾಗಿದ್ದಾನೆ. ಅವನೇ ಎಲ್ಲರಿಗೂ ಮುಕ್ತಿಪ್ರದ. ದೇವತೆಗಳಿಗೆ ಅತಿಶಯವಾದ ಮುಕ್ತಿಯನ್ನು ಕೊಡುವವನೂ ಅವನೇ.

**ಮುಕ್ತಿಲೋಕಕ್ಕೇರುವ ಉಪಾಯ :**

**ಉಪನಿಷತ್—ಯಾಜ್ಞವಲ್ಕ್ಯೇತಿ ಹೋವಾಚ । 'ಯದಿದಮಂತರಿಕ್ಷಮನಾರಂಭಣಂ ಇವ ಕೇನಾಕ್ರಮೇಣ ಯಜಮಾನಃ ಸ್ವರ್ಗಂ ಲೋಕಮಾಕ್ರಮತ' ಇತಿ । ಬ್ರಹ್ಮಣಾ ಋತ್ವಿಜಾ ಮನಸಾ ಚಂದ್ರೇಣ । ಮನೋ ವೈ ಯಜ್ಞಸ್ಯ ಬ್ರಹ್ಮಾ । ತದ್ ಯದಿದಂ ಮನಃ ಸೋಽಸೌ ಚಂದ್ರಃ, ಸ ಬ್ರಹ್ಮಾ, ಸ ಮುಕ್ತಿಃ, ಸಾಽತಿಮುಕ್ತಿಃ ಇತ್ಯತಿ ಮೋಕ್ಷಾಃ ।**

ಅಶ್ವಲನು ಕೇಳಿದನು, 'ಯಾಜ್ಞವಲ್ಕ್ಯರೇ ಈ ಅಂತರಿಕ್ಷವು ಆಧಾರರಹಿತವಾಗಿದಂತೆ ಕಾಣುವುದರಿಂದ ಯಜಮಾನನು ಯಾವುದರ ಆಧಾರದಿಂದ ಮುಕ್ತಿಲೋಕವನ್ನು ಏರುತ್ತಾನೆ? ಯಾಜ್ಞವಲ್ಕ್ಯರು ಉತ್ತರಿಸಿದರು–'ಬ್ರಹ್ಮನೆಂಬ ಋತ್ವಿಜ ಮನಸ್ಸು ಮತ್ತು ಚಂದ್ರ ಇವರಲ್ಲಿದ್ದು ಆಯಾ ಕರ್ಮಗಳನ್ನು ಮಾಡಿಸುವ ಅನಿರುದ್ಧನ ಉಪಾಸನೆಯಿಂದ ಯಜಮಾನನು ಮುಕ್ತಿಲೋಕವನ್ನು ಏರುತ್ತಾನೆ. ಮನಸ್ಸಿನಲ್ಲಿರುವ ಮನಸ್ ಎಂಬ ಹೆಸರಿನ ಅನಿರುದ್ಧನೇ ಯಜ್ಞದ ಬ್ರಹ್ಮನೆಂಬ ಋತ್ವಿಜನಲ್ಲಿ ಬ್ರಹ್ಮನಾಮಕನಾಗಿದ್ದಾನೆ. ಮನಸ್‌ನಲ್ಲಿ ಇರುವ ಆ ಅನಿರುದ್ಧನೇ ಚಂದ್ರನಲ್ಲಿ ಚಂದ್ರನಾಮಕನಾಗಿದ್ದಾನೆ. ಅವನೇ ಬ್ರಹ್ಮನಲ್ಲಿ ಬ್ರಹ್ಮನಾಮಕನಾಗಿದ್ದಾನೆ. ಅವನೇ

ಎಲ್ಲರಿಗೂ ಮುಕ್ತಿಪ್ರದ. ದೇವತೆಗಳಿಗೆ ಅತಿಶಯವಾದ ಮುಕ್ತಿಯನ್ನು ಕೊಡುವವನೂ ಅವನೇ. ಇವು ಹೀಗೆ ಅತಿಶಯ ಮೋಕ್ಷಸಾಧಕಗಳಾದ ಉಪಾಸನೆಗಳು.

**ಭಾಷ್ಯ**—ಹೋತರ್ಯಗ್ನೌ ವಾಚಿ ಚೈವ ಯೋ ವಿಷ್ಣುಂ ಮುಕ್ತಿದಂ ಸ್ಮರೇತ್ ।
ನಿತ್ಯಂ ಸ ಮುಚ್ಯತೇಽಧ್ವರ್ಯುರ್ಸೂರ್ಯಚಕ್ಷುಷ್ಷು ಯಃ ಸ್ಮರೇತ್ ।
ಅಧಿಕಃ ಪ್ರಕಾಶ ಏವಾಸ್ಯ ಮುಕ್ತಾವನ್ಯೇಭ್ಯ ಇಷ್ಯತೇ ।
ಮುಕ್ತೇಭ್ಯೋಽಪಿ ತಥೋದ್ಗಾತೃವಾಯುಪ್ರಾಣೇಷು ಯಃ ಸ್ಮರೇತ್ ।
ಪೂರ್ಣಚಂದ್ರಂ ಸದಾ ಪಶ್ಯೇದಧಿಕಾಹ್ಲಾದಸಂಯುತಃ ।
ಮನೋಬ್ರಹ್ಮನಿಶೇಶೇಷು ಯೋ ವಿಷ್ಣುಂ ಸರ್ವದಾ ಸ್ಮರೇತ್ ।
ಅಪ್ರಯತ್ನೇನ ಲೋಕಂ ಸ ವಿಷ್ಣೋರ್ಯಾತಿ ನ ಸಂಶಯಃ ।

**ಅನುವಾದ**—ಹೋತೃ, ಅಗ್ನಿ ಮತ್ತು ವಾಕ್ ಇವರಲ್ಲಿಯೂ, ಅಧ್ವರ್ಯು ಸೂರ್ಯ ಚಕ್ಷುಷ್ ಇವರಲ್ಲಿಯೂ ಇರುವ ವಿಷ್ಣುವನ್ನು ಮುಕ್ತಿಪ್ರದನೆಂದು ಯಾವಾಗಲೂ ಸ್ಮರಿಸುವವರು ಮುಕ್ತಿಯನ್ನು ಹೊಂದುವರು. ಮತ್ತು ಹೀಗೆ ಸ್ಮರಣೆಯನ್ನು ಮಾಡದ ಇತರ ಮುಕ್ತರಿಗಿಂತ ಈ ಮುಕ್ತರು ಮುಕ್ತಿಯಲ್ಲಿ ಹೆಚ್ಚು ಪ್ರಕಾಶವನ್ನು ಪಡೆಯುತ್ತಾರೆ. ಯಾರು ಉದ್ಗಾತೃ ವಾಯು ಮತ್ತು ಪ್ರಾಣ ಇವರಲ್ಲಿರುವ ವಿಷ್ಣುವನ್ನು ಮುಕ್ತಿಪ್ರದನೆಂದು ಉಪಾಸನೆ ಮಾಡುವರೋ ಅವರು ಮುಕ್ತಿಹೊಂದಿ ಸುಖಪೂರ್ಣನಾದ ವಿಷ್ಣುವನ್ನು ನೋಡುತ್ತಾ ಅಧಿಕ ಆನಂದವನ್ನು ಅನುಭವಿಸುತ್ತಾರೆ. ಯಾರು ಮನಸ್ಸು, ಬ್ರಹ್ಮ ಮತ್ತು ಚಂದ್ರರಲ್ಲಿ ಇರುವ ವಿಷ್ಣುವನ್ನು ಮುಕ್ತಿಪ್ರದನೆಂದು ಯಾವಾಗಲೂ ಸ್ಮರಣೆ ಮಾಡುವರೋ ಅವರು ಏನೂ ಕಷ್ಟವಿಲ್ಲದೆ ವಿಷ್ಣುಲೋಕವನ್ನು ಕುರಿತು ನಿಸ್ಸಂಶಯವಾಗಿ ಹೋಗುತ್ತಾರೆ.

**ಭಾಷ್ಯ**—ಹೋತ್ರಗ್ನ್ಯಾದೀನಿ ನಾಮಾನಿ ವಿಷ್ಣೋಃ ಸರ್ವಾಣಿ ಮುಖ್ಯತಃ ।
ತತ್ಸಂಬಂಧಾತ್ ತದನ್ಯೇಷಾಂ ಸ ವೈ ಹೋತ್ರಾದಿಕರ್ಮಕೃತ್ ।
ತಸ್ಮಾದ್ ಹೋತ್ರಗ್ನಿವಾಗಾದೇರೈಕ್ಯಂ ಶ್ರುತಿಷು ಚೋಚ್ಯತೇ ।
ಹೋತ್ರಾದಿಷು ಚತುರ್ಷ್ವೇಷ ವಾಸುದೇವಾದಿರೂಪಧೃಕ್ ।
ವ್ಯವಸ್ಥಿತೋ ಹಿ ತಜ್ಜ್ಞಾನಾದಚಿರಾತ್ ಮುಕ್ತಿಮೇಷ್ಯತಿ ।
ಮುಕ್ತಿನಾಮಾ ಸ ಭಗವಾನ್ ಮೋಕ್ಷದತ್ವಾತ್ ಪ್ರಕೀರ್ತಿತಃ ।
ಮನುಷ್ಯೇಭ್ಯೋಽಧಿಕಸುಖಂ ದೇವೇಭ್ಯೋ ಯತ್ ಪ್ರಯಚ್ಛತಿ ।
ಮುಕ್ತಾವಪ್ಯತಿಮೋಕ್ಷಃ ಸ ತೇನ ದೇವಃ ಪ್ರಕೀರ್ತಿತಃ ।
ಏತಾ ಹ್ಯುಪಾಸನಾ ನಿತ್ಯಂ ನೈವ ಯೋಗ್ಯಾ ನೃಣಾಂ ಶ್ರುತಾಃ ।
ಅತಿಮುಕ್ತಿಪ್ರದಾ ಯಸ್ಮಾತ್ ದೇವಾದ್ಯಾಸ್ತಾಸು ಯೋಗಿನಃ ।

**ಅನುವಾದ**—ಹೋತೃ ಅಗ್ನಿ ಮೊದಲಾದ ಎಲ್ಲ ಹೆಸರುಗಳೂ ಪರಮಮುಖ್ಯ ವೃತ್ತಿಯಿಂದ ವಿಷ್ಣುವಿಗೇ ಅನ್ವಯಿಸುತ್ತವೆ. ಅವನ ಸಂಬಂಧವಿರುವುದರಿಂದ ಬೇರೆಯವರಿಗೂ ಅನ್ವಯಿಸುತ್ತದೆ. ಅವನೇ ಹೋತೃ ಮೊದಲಾದವರಲ್ಲಿದ್ದು ಮುಖ್ಯವಾಗಿ ಅವರ ಕರ್ಮವನ್ನು ಮಾಡುವವನು. ಹೀಗೆ ಹೋತೃ ಮೊದಲಾದ ಶಬ್ದಗಳು ವಿಷ್ಣು ವಾಚಕಗಳಾದುದರಿಂದಲೇ ಉಪನಿಷತ್ತು ಹೋತೃ, ಅಗ್ನಿ, ವಾಕ್ ಮೊದಲಾದವುಗಳಿಗೆ ಐಕ್ಯವನ್ನು ಹೇಳುತ್ತಿದೆ. ವಾಸುದೇವಾದಿ ರೂಪನಾಗಿ ಈ ವಿಷ್ಣುವು ಹೋತೃ ಮೊದಲಾದವರ ನಾಲ್ಕು ವರ್ಗಗಳಲ್ಲಿದ್ದಾನೆ. ಅವನ ಜ್ಞಾನದಿಂದಲೇ ಸಾಧಕನು ಬೇಗನೆ ಮುಕ್ತಿಯನ್ನು ಹೊಂದುತ್ತಾನೆ. ಭಗವಾನ್ ವಿಷ್ಣುವು ಮುಕ್ತಿಯನ್ನು ಕೊಡುವವನಾದುದರಿಂದ ಅವನೆ ಉಪನಿಷತ್ತಿನಲ್ಲಿ ಮುಕ್ತಿ ಎಂದು ಹೇಳಲ್ಪಟ್ಟಿದ್ದಾನೆ. ಮುಕ್ತಿಯಲ್ಲಿಯೂ ದೇವತೆಗಳಿಗೆ ಮನುಷ್ಯರಿಗಿಂತ ಹೆಚ್ಚು ಸುಖವನ್ನು ಕೊಡುವುದರಿಂದ ಅವನೆ ಅತಿಮುಕ್ತಿ ಎಂದೂ ಉಪನಿಷತ್ತಿನಲ್ಲಿ ಉಕ್ತನಾಗಿದ್ದಾನೆ. ಉಪನಿಷತ್ತಿನಲ್ಲಿ ಹೇಳಿದ ಈ ಉಪಾಸನೆಗಳು ಮಾನವರಿಗೆ ಸರ್ವಥಾ ಯೋಗ್ಯವಲ್ಲ. ಇವು ಅತಿಮುಕ್ತಿಯನ್ನು ಕೊಡುವುದರಿಂದ ದೇವತೆಗಳು ಮಾತ್ರ ಈ ರೀತಿಯ ಉಪಾಸನೆಯನ್ನು ಮಾಡಲು ಅರ್ಹರು.

**ವಿವರಣೆ**—ಹೋತೃ ಮೊದಲಾದವರ ನಾಲ್ಕು ವರ್ಗಗಳೆಂದರೆ—

೧. ಹೋತೃ, ವಾಕ್, ಅಗ್ನಿ
೨. ಅಧ್ವರ್ಯು, ಚಕ್ಷುಷ್, ಆದಿತ್ಯ
೩. ಉದ್ಗಾತೃ, ವಾಯು, ಪ್ರಾಣ
೪. ಬ್ರಹ್ಮ, ಮನಸ್ಸು, ಚಂದ್ರ

**ದೇವಪದವಿ ಪ್ರಾಪ್ತಿಗೆ ಉಪಾಯ :**

**ಉಪನಿಷತ್—ಅಥ ಸಂಪದಃ । ಯಾಜ್ಞವಲ್ಕ್ಯೇತಿ ಹೋವಾಚ। 'ಕತಿಭಿರಯಮದ್ಯ ಋಗ್ಭಿರ್ಹೋತಾಽಸ್ಮಿನ್ ಯಜ್ಞೇ ಕರಿಷ್ಯತೀ'ತಿ । 'ತಿಸೃಭಿರಿ'ತಿ । 'ಕತಮಾಸ್ತಾಸ್ತಿಸ್ರ' ಇತಿ । 'ಪುರೋನುವಾಕ್ಯಾ ಚ ಯಾಜ್ಯಾ ಚ ಶಸ್ಯೈವ ತೃತೀಯಾ' । 'ಕಿಂ ತಾಭಿರ್ಜಯತೀ'ತಿ । 'ಯತ್ಕಿಂಚೇದಂ ಪ್ರಾಣಭೃದಿ'ತಿ ।**

ಹೀಗೆ ಮೋಕ್ಷಸಾಧನವಾದ ಉಪಾಸನೆಗಳ ಅನಂತರ ದೇವಪದವಿಪ್ರಾಪ್ತಿ ಸಾಧನವಾದ ಉಪಾಸನೆಗಳ ನಿರೂಪಣೆ ಹೀಗಿದೆ–ಅಶ್ವಲನು ಕೇಳಿದನು, 'ಯಾಜ್ಞವಲ್ಕ್ಯರೇ, ಈ ಹೋತೃವು ಈ ದಿನ ಎಷ್ಟು ಋಕ್‌ಗಳಿಂದ ಈ ಯಜ್ಞದಲ್ಲಿ ದೇವತೆಗಳನ್ನು ಸ್ತುತಿಸುತ್ತಾನೆ?' 'ಮೂರು ಋಕ್ಕುಗಳಿಂದ'. 'ಆ ಮೂರು ಯಾವುವು?' 'ಮೊದಲನೆಯದು ಪುರೋನುವಾಕ್ಯಾ. ಎರಡನೆಯದು ಯಾಜ್ಯಾ ಮತ್ತು ಮೂರನೆ

ಯದು ಶಸ್ತ್ರಾ'. 'ಅವುಗಳಿಂದ ಏನು ಫಲವನ್ನು ಪಡೆಯುತ್ತಾನೆ?' 'ಸಕಲ ಪ್ರಾಣಿಗಳಿಗೂ ಅಧಿಪತಿಯಾಗುತ್ತಾನೆ'.

**ಭಾಷ್ಯ—ಯಾಜ್ಯಾಶಸ್ತ್ರಾಪುರೋಽವಾಕ್ಯಾಸಂಸ್ಥಿತಂ ಯೋ ಹರಿಂ ಸ್ಮರೇತ್ ।**
**ಸರ್ವಪ್ರಾಣಭೃತಾಮೀಶಃ ಸ ಭವೇನ್ನಾತ್ರ ಸಂಶಯಃ ।**

**ಅನುವಾದ**–ಯಾಜ್ಯಾ ಶಸ್ತ್ರಾ ಮತ್ತು ಪುರೋಽನುವಾಕ್ಯಾ ಎಂಬ ಮಂತ್ರಗಳಲ್ಲಿರುವ ಶ್ರೀಹರಿಯನ್ನು ಯಾರು ಸ್ಮರಿಸುವನೋ ಅವನು ಎಲ್ಲ ಪ್ರಾಣಿಗಳಿಗೂ ಒಡೆಯನಾಗುವನು. ಈ ವಿಷಯದಲ್ಲಿ ಸಂಶಯವಿಲ್ಲ.

**ಉಪನಿಷತ್–ಯಾಜ್ಞವಲ್ಕ್ಯೇತಿ ಹೋವಾಚ। ಕತ್ಯಯಮದ್ಯಾಧ್ವರ್ಯುರಸ್ಮಿನ್ ಯಜ್ಞ ಆಹುತೀರ್ಹೋಷ್ಯತೀ'ತಿ । 'ತಿಸ್ರ' ಇತಿ । 'ಕತಮಾಸ್ತಾಸ್ತಿಸ್ರ' ಇತಿ । 'ಯಾ ಹುತಾ ಉಜ್ಜ್ವಲಂತಿ,ಯಾ ಹುತಾ ಅತಿನೇದಂತೇ, ಯಾ ಹುತಾ ಅತಿಶೇರತೇ' । 'ಕಿಂ ತಾಭಿರ್ಜಯತೀ'ತಿ । 'ಯಾ ಹುತಾ ಉಜ್ಜ್ವಲಂತಿ ದೇವಲೋಕಮೇವ ತಾಭಿರ್ಜಯತಿ । ದೀಪ್ಯತ ಇವ ಹಿ ದೇವಲೋಕಃ । ಯಾ ಹುತಾ ಅತಿನೇದಂತೇ ಪಿತೃಲೋಕಮೇವ ತಾಭಿರ್ಜಯತಿ ಅತೀವ ಹಿ ಪಿತೃಲೋಕಃ । ಯಾ ಹುತಾ ಅಧಿಶೇರತೇ ಮನುಷ್ಯಲೋಕಮೇವ ತಾಭಿರ್ಜಯತಿ ಅಧ ಇವ ಹಿ ಮನುಷ್ಯಲೋಕಃ।**

ಆಶ್ವಲನು ಕೇಳಿದನು,'ಯಾಜ್ಞವಲ್ಕ್ಯರೇ ಈ ಅಧ್ವರ್ಯು ಈ ಯಾಗದಲ್ಲಿ ಎಷ್ಟು ಆಹುತಿಗಳನ್ನು ಹಾಕುತ್ತಾನೆ ?' 'ಮೂರು'. 'ಆ ಮೂರು ಯಾವುವು?''ಹೋಮಿಸಲ್ಪಟ್ಟಾಗ ಉಜ್ವಲವಾಗಿ ಉರಿಯುವ ಸಮಿತ್ ಮತ್ತು ತುಪ್ಪ, ಹೋಮಿಸಲ್ಪಟ್ಟಾಗ ಬಹಳ ಶಬ್ದ ಮಾಡುವ ಮಾಂಸ ಮತ್ತು ಹೋಮಿಸಲ್ಪಟ್ಟಾಗ ಕೆಳಗೆ ಹೋಗಿ ತಳದಲ್ಲಿ ನಿಲ್ಲುವ ಹಾಲು ಸೋಮರಸಗಳು ಇವೇ ಆ ಮೂರು ಆಹುತಿಗಳು'. 'ಆ ಆಹುತಿಗಳಲ್ಲಿರುವ ಸಂಕರ್ಷಣನ ಉಪಾಸನೆಯಿಂದ ಯಜಮಾನನು ಏನನ್ನು ಪಡೆಯುತ್ತಾನೆ? 'ಹೋಮಿಸಲ್ಪಟ್ಟಾಗ ಉರಿಯುವ ಆಹುತಿಗಳಿಂದ, ಅಂದರೆ ಅವುಗಳಲ್ಲಿರುವ ಸಂಕರ್ಷಣನಿಂದ ಯಜಮಾನನು ದೇವಲೋಕವನ್ನು ಪಡೆಯುತ್ತಾನೆ. ಏಕೆಂದರೆ, ದೇವಲೋಕವು ಉಜ್ವಲವಾಗಿದೆ. ಹೋಮಿಸಲ್ಪಟ್ಟಾಗ ಬಹಳ ಶಬ್ದ ಮಾಡುವ ಆಹುತಿಗಳಿಂದ ಪಿತೃಲೋಕವನ್ನು ಪಡೆಯುತ್ತಾನೆ. ಏಕೆಂದರೆ ಪಿತೃಲೋಕವು ಬಹಳ ಶಬ್ದ ಮಾಡುತ್ತದೆ. ಹೋಮಿಸಲ್ಪಟ್ಟಾಗ ತಳಕ್ಕೆ ಹೋಗಿ ನಿಲ್ಲುವ ಆಹುತಿಗಳಿಂದ ಮನುಷ್ಯಲೋಕವನ್ನು ಪಡೆಯುತ್ತಾನೆ. ಮನುಷ್ಯಲೋಕ ಕೆಳಗಿದೆಯಷ್ಟೆ ?'

**ವಿವರಣೆ**–ಉಜ್ವಲವಾದ ಆಹುತಿಯಿಂದ ಉಜ್ವಲವಾದ ದೇವಲೋಕವು ದೊರೆಯುತ್ತದೆ. ಶಬ್ದಮಾಡುವ ಆಹುತಿಯಿಂದ ಶಬ್ದಮಾಡುವ ಪಿತೃಲೋಕ. ಪಿತೃ

ಗಳು ತಮ್ಮ ವಂಶಾಭಿವೃದ್ಧಿಯನ್ನು ಕಂಡು ಆನಂದದಿಂದ ಹೆಮ್ಮೆಯಿಂದ ಭುಜತಟ್ಟಿ ಬಹಳ ಶಬ್ದವನ್ನು ಮಾಡುತ್ತಿರುತ್ತಾರೆ. ಮತ್ತು ತಳಕ್ಕೆ ಹೋಗುವ ಆಹುತಿಗಳಿಂದ ದೇವಲೋಕ ಪಿತೃಲೋಕಗಳಿಗಿಂತ ಕೆಳಗಿನ ಭೂಲೋಕ ಸುಖ ಸಿಗುತ್ತದೆ.

**ಭಾಷ್ಯ—ಉಜ್ಜ್ವಲಚ್ಛಬ್ದವದ್ದ್ರಾವಿಷ್ವೇಕಮೇವ ಹರಿಂ ಸ್ಮರೇತ್ ।**
**ಸರ್ವಲೋಕಾಧಿಪತ್ಯಂ ಸ ಲಭತೇ ಪುರುಷೋತ್ತಮಾತ್ ।**

**ಅನುವಾದ**—ಉರಿಯುವ, ಶಬ್ದಮಾಡುವ ಮತ್ತು ಕೆಳಗೆ ಹರಿಯುವ ಎಲ್ಲ ಆಹುತಿಗಳಲ್ಲಿಯೂ ಒಬ್ಬನೇ ಹರಿಯನ್ನು ಉಪಾಸನೆ ಮಾಡಬೇಕು. ಆಗ ಆ ಪುರುಷೋತ್ತಮನಿಂದ ಎಲ್ಲ ಲೋಕಾಧಿಪತ್ಯವನ್ನೂ ಉಪಾಸಕನು ಪಡೆಯುತ್ತಾನೆ.

**ಉಪನಿಷತ್—ಯಾಜ್ಞವಲ್ಕ್ಯೇತಿ ಹೋವಾಚ । 'ಕತಿಭಿರಯಮದ್ಯ ಬ್ರಹ್ಮಾ ಯಜ್ಞಂ ದಕ್ಷಿಣತೋ ದೇವತಾಭಿರ್ಗೋಪಾಯತಿ' ಇತಿ । 'ಏಕಯಾ' ಇತಿ । 'ಕತಮಾ ಸಾ ಏಕಾ' ಇತಿ । 'ಮನ ಏವೇ'ತಿ । 'ಅನಂತಂ ವೈ ಮನಃ । ಅನಂತಾ ವಿಶ್ವೇ ದೇವಾಃ । ಅನಂತಮೇವ ಸ ತೇನ ಲೋಕಂ ಜಯತಿ' ।**

ಅಶ್ವಲನು ಕೇಳಿದನು,'ಯಾಜ್ಞವಲ್ಕ್ಯರೇ, ಆಹವನೀಯಾಗ್ನಿಯ ಬಲಭಾಗದಲ್ಲಿ ಕುಳಿತಿರುವ ಬ್ರಹ್ಮನೆಂಬ ಋತ್ವಿಜನು ಎಷ್ಟು ದೇವತೆಗಳ ಸಹಾಯದಿಂದ ಯಾಗವನ್ನು ರಕ್ಷಿಸುತ್ತಾನೆ?' 'ಒಬ್ಬ ದೇವತೆಯ ಸಹಾಯದಿಂದ'. 'ಆ ಒಬ್ಬ ದೇವತೆ ಯಾರು?' 'ಮನಸ್ಸಿಗೆ ಅಭಿಮಾನಿಯಾದ ಚತುರ್ಮುಖ. ಅವನನ್ನು ಆಶ್ರಯಿಸಿರುವ ವಿಶ್ವೇ ದೇವತೆಗಳು ಅನಂತರಾಗಿದ್ದಾರೆ. ಎಂದಮೇಲೆ ಅವನು ಅನಂತನೆಂದು ಬೇರೆ ಹೇಳ ಬೇಕಾಗಿಲ್ಲ. ಆದ್ದರಿಂದ ಮನಸ್ಸಿನಲ್ಲಿ ಮನಸ್ಸಿಗೆ ಅಭಿಮಾನಿಯಾದ ಚತುರ್ಮುಖನಲ್ಲಿ ಮತ್ತು ವಿಶ್ವೇದೇವತೆಗಳಲ್ಲಿ ಪ್ರದ್ಯುಮ್ನನ ಉಪಾಸನೆ ಮಾಡುವುದರಿಂದ ಅನಂತವಾದ ವಿಷ್ಣುಲೋಕವನ್ನು ಉಪಾಸಕನು ಪಡೆಯುತ್ತಾನೆ.

**ಭಾಷ್ಯ—ಮನಸೋ ದೇವತಾ ಬ್ರಹ್ಮಾ ಸರ್ವದೇವೇಷು ಸಂಸ್ಥಿತಃ ।**
**ದೇವಬ್ರಹ್ಮಮನಃಸ್ವೇಕಂ ಯೋ ವಿಷ್ಣುಂ ಸರ್ವದಾ ಸ್ಮರೇತ್ ।**
**ಅನಂತನಾಮಕಂ ತೇನ ತಲ್ಲೋಕಂ ನಿತ್ಯಮಶ್ನುತೇ ।**
**ನಿಶ್ಚಯೇನ ವಿಮೋಕ್ಷ್ಯತ್ವಾದ್ ವಿಶ್ವೇ ದೇವಾ ಅನಂತಕಾಃ ।**
**ಅನಂತನಾಮಕಂ ವಿಷ್ಣುಮುಪಾಸ್ಯಾಪಿ ಹ್ಯನಂತಕಾಃ ।**

**ಅನುವಾದ**—ಮನಸ್ಸಿನ ಅಭಿಮಾನಿ ದೇವತೆಯಾದ ಚತುರ್ಮುಖ ಬ್ರಹ್ಮನು ವಿಶ್ವೇದೇವತೆಗಳಲ್ಲಿ ನಿಯಾಮಕನಾಗಿ ಇದ್ದಾನೆ. ವಿಶ್ವೇದೇವತೆಗಳು, ಚತುರ್ಮುಖ

ಬ್ರಹ್ಮ, ಮನಸ್ಸು ಇವರಲ್ಲಿ ಒಬ್ಬನೇ ವಿಷ್ಣುವನ್ನು ಯಾರು ಯಾವಾಗಲೂ ಸ್ಮರಿಸುವರೋ ಅವರು ಆ ಸ್ಮರಣೆಯಿಂದ ಅನಂತ ಎಂಬ ಹೆಸರಿನ ನಿತ್ಯವಾದ ವಿಷ್ಣುಲೋಕವನ್ನು ಹೊಂದುತ್ತಾರೆ. ನಿಃಸಂಶಯವಾಗಿ ಮೋಕ್ಷಭಾಗಿಗಳಾದುದರಿಂದ ವಿಶ್ವೇದೇವತೆಗಳಿಗೆ ಅನಂತ ಎಂದು ಹೆಸರು. ಅನಂತನಾಮಕನಾದ ವಿಷ್ಣುವನ್ನು ಉಪಾಸನೆ ಮಾಡುವುದರಿಂದಲೂ ಅವರಿಗೆ ಅನಂತ ಎಂದು ಹೆಸರು.

**ಸಾಮಗಾನದಿಂದ ಅಭೀಷ್ಟಲೋಕಪ್ರಾಪ್ತಿ :**

**ಉಪನಿಷತ್—'ಯಾಜ್ಞವಲ್ಕ್ಯೇ'ತಿ ಹೋವಾಚ । 'ಕತ್ಯಯಮದ್ಯೋದ್ಗಾ-ತಾಽಸ್ಮಿನ್ ಯಜ್ಞೇ ಸ್ತೋತ್ರಿಯಾಃ ಸ್ತೋಷ್ಯತೀ'ತಿ । 'ತಿಸ್ರ' ಇತಿ । 'ಕತಮಾಸ್ತಾಸ್ತಿಸ್ರ' ಇತಿ । 'ಪುರೋಽನುವಾಕ್ಯಾ ಚ ಯಾಜ್ಯಾ ಚ ಶಸ್ಯೈವ ತೃತೀಯಾ' । 'ಕತಮಾಸ್ತಾ ಯಾ ಅಧ್ಯಾತ್ಮಮಿ'ತಿ । 'ಪ್ರಾಣ ಏವ ಪುರೋಽನುವಾಕ್ಯಾ,ಅಪಾನೋ ಯಾಜ್ಯಾ, ವ್ಯಾನಃ ಶಸ್ಯಾ' । 'ಕಿಂ ತಾಭಿರ್ಜಯತೀ'ತಿ । 'ಪೃಥಿವೀಲೋಕಮೇವ ಪುರೋಽನುವಾಕ್ಯಯಾ ಜಯತಿ, ಅಂತರಿಕ್ಷಲೋಕಂ ಯಾಜ್ಯಯಾ, ದ್ಯುಲೋಕಂ ಶಸ್ಯಯಾ । ತತೋ ಹ ಹೋತಾ ಆಶ್ವಲ ಉಪರರಾಮ । ಇತ್ಯಾಶ್ವಲ ಬ್ರಾಹ್ಮಣಂ ।**

ಆಶ್ವಲನು ಕೇಳಿದನು, 'ಯಾಜ್ಞವಲ್ಕ್ಯರೇ, ಉದ್ಗಾತೃವು ಈ ಯಾಗದಲ್ಲಿ ಎಷ್ಟು ಋಕ್‌ಗಳಲ್ಲಿ ಸಾಮವನ್ನು ಹಾಡುತ್ತಾನೆ?' 'ಮೂರು'.. 'ಆ ಮೂರು ಯಾವುವು?' 'ಮೊದಲನೆಯದು ಪುರೋನುವಾಕ್ಯಾ. ಎರಡನೆಯದು ಯಾಜ್ಯಾ ಮತ್ತು ಮೂರನೆಯದು ಶಸ್ಯಾ'. 'ದೇಹದಲ್ಲಿ ಈ ಋಕ್‌ಗಳ ಅಭಿಮಾನಿದೇವತೆಗಳು ಯಾರು?' 'ಪ್ರಾಣನೇ ಪುರೋನುವಾಕ್ಯದ ಅಭಿಮಾನಿ. ಅಪಾನನು ಯಾಜ್ಯಾಭಿಮಾನಿ. ವ್ಯಾನನು ಶಸ್ಯಾಭಿಮಾನಿ'. 'ಯಜಮಾನನು ಅವುಗಳಿಂದ ಏನನ್ನು ಪಡೆಯುತ್ತಾನೆ?' 'ಪುರೋನುವಾಕ್ಯಾಭಿಮಾನಿ ಪ್ರಾಣನ ಅಂತರ್ಯಾಮಿಯಾದ ಅನಿರುದ್ಧನ ಉಪಾಸನೆಯಿಂದ ಪೃಥಿವೀಲೋಕವನ್ನು ಪಡೆಯುತ್ತಾನೆ. ಯಾಜ್ಯಾಭಿಮಾನಿ ಅಪಾನನ ಅಂತರ್ಯಾಮಿಯಾದ ಅನಿರುದ್ಧನ ಉಪಾಸನೆಯಿಂದ ಅಂತರಿಕ್ಷಲೋಕವನ್ನೂ ಶಸ್ಯಾಭಿಮಾನಿ ವ್ಯಾನನ ಅಂತರ್ಯಾಮಿ ಅನಿರುದ್ಧನ ಉಪಾಸನೆಯಿಂದ ಸ್ವರ್ಗಲೋಕವನ್ನೂ ಪಡೆಯುತ್ತಾನೆ'. ಹೀಗೆ ಯಾಜ್ಞವಲ್ಕ್ಯರು ಎಲ್ಲ ಪ್ರಶ್ನೆಗಳನ್ನೂ ಉತ್ತರಿಸಿದುದರಿಂದ ಹೋತೃ ಆಶ್ವಲನು ಸುಮ್ಮನಾದನು.

**ಭಾಷ್ಯ—ಪುರೋವಾಕ್ಯಾದಿಷು ಪ್ರಾಣಾದಿಷೂಪಾಸಾಂ ಕರೋತಿ ಯಃ ।**
**ಏಕಮೇವ ಹರಿಂ ಲೋಕವ್ಯಾಪ್ತಿಮೇವ ಲಭೇದಸೌ ।**

**ಅನುವಾದ**—ಪುರೋವಾಕ್ಯಾದಿಗಳಲ್ಲಿರುವ ಪ್ರಾಣಾದಿಗಳಲ್ಲಿ ಒಬ್ಬನೇ ಹರಿಯನ್ನು ಯಾರು ಉಪಾಸನೆ ಮಾಡುವನೋ ಅವನು ಲೋಕಾಧಿಪತ್ಯವನ್ನು ಹೊಂದುತ್ತಾನೆ.

**ಭಾಷ್ಯ—ಅತ್ರಾಪಿ ವಾಸುದೇವಾದ್ಯಾಶ್ಚತ್ವಾರೋ ದೇವತಾಃ ಸ್ಮೃತಾಃ ।**
**ದೇವಾನಾಂ ಪದಹೇತುತ್ವಾತ್ ಸಂಪನ್ನಾಮ್ನ್ಯ ಉಪಾಸನಾಃ ।**
**ಮುಕ್ತೌ ಭೋಗವಿಶೇಷಸ್ಯ ಹೇತುತ್ವಾಚ್ಚ ಪ್ರಕೀರ್ತಿತಾಃ ।**
**ಏತಾಶ್ಚ ದೇವತಾಯೋಗ್ಯಾ ನ ಮನುಷ್ಯೇಷು ಕುತ್ರಚಿತ್ ।**
**ಮನುಷ್ಯಾಣಾಂ ಜ್ಞಾನಮಾತ್ರಾದ್ ಗುಣಾಧಿಕ್ಯಂ ಭವಿಷ್ಯತಿ ।**
**ಇತಿ ಪರಮಶ್ರುತೌ ।**

**||ಇತ್ಯಾಶ್ವಲ ಬ್ರಾಹ್ಮಣಂ||**

**ಅನುವಾದ**—ಹಿಂದೆ ಹೇಳಿದ ಋಕ್, ಆಹುತಿ, ಮಾನಸ್ ಮತ್ತು ಸ್ತೋತ್ರೀಯ ಮಂತ್ರಗಳು ಈ ನಾಲ್ಕರಲ್ಲಿಯೂ ವಾಸುದೇವಾದಿ ನಾಲ್ಕು ರೂಪಗಳು ನಿಯಾಮಕಗಳಾಗಿವೆ.

ಈ ಉಪಾಸನೆಗಳು ದೇವತೆಗಳಿಗೆ ತಮ್ಮ ಪದವಿಯನ್ನು ಪಡೆಯಲು ಮತ್ತು ಮುಕ್ತಿಯಲ್ಲಿ ವಿಶೇಷವಾದ ಸುಖವನ್ನು ಪಡೆಯಲು ಸಾಧನಗಳು. ಆದ್ದರಿಂದ ಅವುಗಳನ್ನು ಉಪನಿಷತ್ತಿನಲ್ಲಿ ಸಂಪದ್ ಎಂದು ಕರೆಯಲಾಗಿದೆ.

ಈ ಉಪಾಸನೆಗಳನ್ನು ಮಾಡಲು ದೇವತೆಗಳು ಮಾತ್ರ ಅರ್ಹರು. ಯಾವ ಮನುಷ್ಯರೂ ಈ ಉಪಾಸನೆಗಳಿಗೆ ಅರ್ಹರಲ್ಲ. ಕೇವಲ ಜ್ಞಾನದಿಂದ ಮನುಷ್ಯರಿಗೆ ಹೆಚ್ಚು ಫಲ ಲಭಿಸುವುದು ಎಂದು ಪರಮಶ್ರುತಿಯಲ್ಲಿ ಹೇಳಿದೆ.

ಇಲ್ಲಿಗೆ ಆಶ್ವಲ ಬ್ರಾಹ್ಮಣವು ಮುಗಿಯಿತು.

**ಇಂದ್ರಿಯಗಳೆಷ್ಟು ? ವಿಷಯಗಳೆಷ್ಟು ?**

**ಉಪನಿಷತ್—ಅಥ ಹೈನಂ ಜಾರತ್ಕಾರವ ಆರ್ತಭಾಗಃ ಪಪ್ರಚ್ಛ । 'ಯಾಜ್ಞ-ವಲ್ಕ್ಯೇ'ತಿ ಹೋವಾಚ । 'ಕತಿ ಗ್ರಹಾಃ ಕತ್ಯತಿಗ್ರಹಾಃ' ಇತಿ । 'ಅಷ್ಟೌ ಗ್ರಹಾ ಅಷ್ಟಾವತಿಗ್ರಹಾ' ಇತಿ । 'ಯೇ ತೇ ಅಷ್ಟೌ ಗ್ರಹಾ ಅಷ್ಟಾವತಿ-ಗ್ರಹಾಃ ಕತಮೇ ತೇ' ಇತಿ ।**

ಅನಂತರ ಜರತ್ಕಾರುವಿನ ಗೋತ್ರದಲ್ಲಿ ಹುಟ್ಟಿದ ಆರ್ತಭಾಗನು ಕೇಳಿದನು, 'ಯಾಜ್ಞವಲ್ಕ್ಯರೇ, ಇಂದ್ರಿಯಗಳು ಎಷ್ಟು? ಮತ್ತು ವಿಷಯಗಳು ಎಷ್ಟು?'

'ಇಂದ್ರಿಯಗಳು ಎಂಟು, ವಿಷಯಗಳೂ ಎಂಟು'. 'ಆ ಎಂಟು ಇಂದ್ರಿಯಗಳು ಮತ್ತು ವಿಷಯಗಳು ಯಾವುವು ?'

**ಉಪನಿಷತ್—'ಪ್ರಾಣೋ ವೈ ಗ್ರಹಃ । ಸೋಽಪಾನೇನಾತಿಗ್ರಹೇಣ ಗೃಹೀತಃ। ಅಪಾನೇನ ಹಿ ಗಂಧಾನ್ ಜಿಘ್ರತಿ ।**

**ವಾಗ್ ವೈ ಗ್ರಹಃ । ಸ ನಾಮ್ನಾಽತಿಗ್ರಹೇಣ ಗೃಹೀತಃ । ವಾಚಾ ಹಿ ನಾಮಾನ್ಯಭಿವದತಿ ।**

**ಜಿಹ್ವಾ ವೈ ಗ್ರಹಃ । ಸ ರಸೇನಾತಿಗ್ರಹೇಣ ಗೃಹೀತಃ । ಜಿಹ್ವಯಾ ಹಿ ರಸಾನ್ ವಿಜಾನಾತಿ ।**

**ಚಕ್ಷುರ್ವೈ ಗ್ರಹಃ । ಸ ರೂಪೇಣ ಅತಿಗ್ರಹೇಣ ಗೃಹೀತಃ । ಚಕ್ಷುಷಾ ಹಿ ರೂಪಾಣಿ ಪಶ್ಯತಿ ।**

**ಶ್ರೋತ್ರಂ ವೈ ಗ್ರಹಃ । ಸ ಶಬ್ದೇನಾತಿಗ್ರಹೇಣ ಗೃಹೀತಃ । ಶ್ರೋತ್ರೇಣ ಹಿ ಶಬ್ದಾನ್ ಶೃಣೋತಿ ।**

**ಮನೋ ವೈ ಗ್ರಹಃ । ಸ ಕಾಮೇನಾತಿಗ್ರಹೇಣ ಗೃಹೀತಃ । ಮನಸಾ ಹಿ ಕಾಮಾನ್ ಕಾಮಯತೇ ।**

**ಹಸ್ತೌ ವೈ ಗ್ರಹಃ । ಸ ಕರ್ಮಣಾಽತಿಗ್ರಹೇಣ ಗೃಹೀತಃ । ಹಸ್ತಾಭ್ಯಾಂ ಹಿ ಕರ್ಮ ಕರೋತಿ ।**

**ತ್ವಗ್ ವೈ ಗ್ರಹಃ । ಸ ಸ್ಪರ್ಶೇನಾತಿಗ್ರಹೇಣ ಗೃಹೀತಃ । ತ್ವಚಾ ಹಿ ಸ್ಪರ್ಶಾನ್ ವೇದಯತೇ । ಇತ್ಯಷ್ಟೌ ಗ್ರಹಾಃ ಅಷ್ಟಾವತಿಗ್ರಹಾಃ ।**

ಘ್ರಾಣವು ಒಂದು ಇಂದ್ರಿಯ. ಅದು ಗಂಧದಿಂದ ಆಕರ್ಷಿಸಲ್ಪಡುತ್ತದೆ. ಏಕೆಂದರೆ ಜೀವನು ಘ್ರಾಣೇಂದ್ರಿಯದಿಂದ ಸುಗಂಧದ್ರವ್ಯಗಳನ್ನು ಆಘ್ರಾಣಿಸುತ್ತಾನೆ.

ವಾಕ್ ಒಂದು ಇಂದ್ರಿಯ. ಅದು ನಾಮದಿಂದ ಆಕರ್ಷಿಸಲ್ಪಡುತ್ತದೆ. ಏಕೆಂದರೆ ಜೀವನು ವಾಗಿಂದ್ರಿಯದಿಂದ ನಾಮಗಳನ್ನು ಉಚ್ಚರಿಸುತ್ತಾನೆ.

ರಸನೆಯೂ ಒಂದು ಇಂದ್ರಿಯ. ಅದು ರಸದಿಂದ ಆಕರ್ಷಿಸಲ್ಪಡುತ್ತದೆ. ಏಕೆಂದರೆ ಜೀವನು ರಸನೇಂದ್ರಿಯದಿಂದ ರಸಗಳನ್ನು ತಿಳಿಯುತ್ತಾನೆ.

ಚಕ್ಷುಸ್ ಒಂದು ಇಂದ್ರಿಯ. ಅದು ರೂಪದಿಂದ ಆಕರ್ಷಿಸಲ್ಪಡುತ್ತದೆ. ಏಕೆಂದರೆ, ಜೀವನು ಚಕ್ಷುರಿಂದ್ರಿಯದಿಂದ ರೂಪಗಳನ್ನು ನೋಡುತ್ತಾನೆ.

ಶ್ರೋತ್ರವೂ ಒಂದು ಇಂದ್ರಿಯ, ಅದು ಶಬ್ದದಿಂದ ಆಕರ್ಷಿಸಲ್ಪಡುತ್ತದೆ. ಏಕೆಂದರೆ ಜೀವನು ಶ್ರೋತ್ರೇಂದ್ರಿಯದಿಂದ ಶಬ್ದಗಳನ್ನು ಕೇಳುತ್ತಾನೆ.

ಮನಸ್ಸೂ ಒಂದು ಇಂದ್ರಿಯ. ಅದು ಇಷ್ಟ ವಸ್ತುಗಳಿಂದ ಆಕರ್ಷಿಸಲ್ಪಡುತ್ತದೆ. ಏಕೆಂದರೆ ಜೀವನು ಮನಸ್ಸಿನಿಂದ ಇಷ್ಟವಾದ ವಸ್ತುಗಳನ್ನು ಬಯಸುತ್ತಾನೆ.

ಹಸ್ತವೂ ಒಂದು ಇಂದ್ರಿಯ. ಅದು ಕರ್ಮದಿಂದ ಆಕರ್ಷಿಸಲ್ಪಡುತ್ತದೆ. ಏಕೆಂದರೆ ಜೀವನು ಹಸ್ತೇಂದ್ರಿಯದಿಂದ ಕರ್ಮ ಮಾಡುತ್ತಾನೆ.

ತ್ವಕ್ ಒಂದು ಇಂದ್ರಿಯ. ಅದು ಸ್ಪರ್ಶದಿಂದ ಆಕರ್ಷಿಸಲ್ಪಡುತ್ತದೆ.ಏಕೆಂದರೆ ಜೀವನು ತ್ವಗಿಂದ್ರಿಯದಿಂದ ಸ್ಪರ್ಶಗಳನ್ನು ತಿಳಿಯುತ್ತಾನೆ. ಪಾದ ಪಾಯು ಉಪಸ್ಥಗಳನ್ನು ಪಾಣೀಂದ್ರಿಯದ ಜೊತೆ ಸೇರಿಸಿ ಒಂದಾಗಿ ಭಾವಿಸಿದರೆ ಇಂದ್ರಿಯಗಳು ಎಂಟು, ವಿಷಯಗಳು ಎಂಟು ಎಂದಾಗುತ್ತದೆ.

**ಉತ್ಕ್ರಮಣಕಾಲದಲ್ಲಿ ಇಂದ್ರಿಯಾಭಿಮಾನಿಗಳು :**

**ಉಪನಿಷತ್—'ಯಾಜ್ಞವಲ್ಕ್ಯ'ೇತಿ ಹೋವಾಚ । 'ಯದಿದಂ ಸರ್ವಂ ಮೃತ್ಯೋರನ್ನಂ ಕಾಸ್ವಿತ್ ಸಾ ದೇವತಾ ಯಸ್ಯಾ ಮೃತ್ಯುರನ್ನಮಿ'ತಿ। 'ಅಗ್ನಿರ್ವೈ ಮೃತ್ಯುಃ । ಸೋಽಪಾಮನ್ನಮ್ । ಅಪ ಪುನರ್ಮೃತ್ಯುಂ ಜಯತಿ ಯ ಏವಂ ವೇದ ।**

ಆರ್ತಭಾಗನು ಪುನಃ ಕೇಳಿದನು, 'ಯಾಜ್ಞವಲ್ಕ್ಯರೇ, ಇಂದ್ರಿಯ ಹಾಗೂ ವಿಷಯಾಭಿಮಾನಿ ದೇವತೆಗಳೆಲ್ಲರೂ ಯಾವ ಮೃತ್ಯುವಿಗೆ ತುತ್ತಾಗುವರೋ ಆ ಮೃತ್ಯುದೇವತೆ ಯಾರು? ಆ ಮೃತ್ಯುವು ಯಾರಿಗೆ ತುತ್ತಾಗುವನೋ ಆ ದೇವತೆ ಯಾರು?' ಯಾಜ್ಞವಲ್ಕ್ಯರು ಹೇಳಿದರು,'ಅಗ್ನಿನಾಮಕ ಬ್ರಹ್ಮದೇವನೇ ಆ ಮೃತ್ಯು. ಆ ಬ್ರಹ್ಮನು ಆಪ್‌ನಾಮಕ ಹರಿಯಲ್ಲಿ ಲಯಹೊಂದುತ್ತಾನೆ. ಯಾರು ಹೀಗೆ ತಿಳಿಯುವನೋ ಅವನು ಮೃತ್ಯುವನ್ನು ಜಯಿಸುತ್ತಾನೆ. ಮುಕ್ತಿಹೊಂದುತ್ತಾನೆ.

**ಉಪನಿಷತ್—'ಯಾಜ್ಞವಲ್ಕ್ಯ'ೇತಿ ಹೋವಾಚ । 'ಯತ್ರಾಯಂ ಪುರುಷೋ ಮ್ರಿಯತೇ ಉದಸ್ಮಾತ್ ಪ್ರಾಣಾಃ ಕ್ರಾಮಂತ್ಯಾಹೋ ನೇ'ತಿ । ನೇತಿ ಹೋವಾಚ ಯಾಜ್ಞವಲ್ಕ್ಯಃ।ಅತ್ರೈವ ಸಮವನೀಯಂತೇ, ಸ ಉಚ್ಛ್ವಯತಿ, ಆಧ್ಮಾಯತಿ । ಆಧ್ಮಾತೋ ಮೃತಃ ಶೇತೇ ।**

ಆರ್ತಭಾಗನು ಕೇಳಿದನು, 'ಯಾಜ್ಞವಲ್ಕ್ಯರೇ, ಆತ್ಮತ್ವ ಮಾತ್ರವನ್ನು ಉಪಾಸನೆ ಮಾಡಿ ಅಪರೋಕ್ಷ ಜ್ಞಾನ ಸಂಪಾದಿಸಿದ ಬ್ರಹ್ಮಜ್ಞಾನಿಯು ಮೃತನಾದಾಗ ಇಂದ್ರಿಯಾಭಿಮಾನಿದೇವತೆಗಳ ಜೊತೆಗೆ ಬ್ರಹ್ಮನಾಡಿಯಿಂದ ಉತ್ಕ್ರಮಣ ಹೊಂದುವನೋ ಇಲ್ಲವೋ?' 'ಇಲ್ಲ. ಕಣ್ಣು ಕಿವಿ ಮುಂತಾದ ದ್ವಾರಗಳಿಂದಲೇ ಹೊರಗೆ ಹೋಗುತ್ತಾನೆ. ತನ್ನನ್ನು ಕರೆದೊಯ್ಯುವ ವಿಷ್ಣುವನ್ನೇ ಹಿಂಬಾಲಿಸುತ್ತಾನೆ.

ಇಂದ್ರಿಯಾಭಿಮಾನಿಗಳು ತಮ್ಮ ಮೂಲರೂಪವನ್ನು ಸೇರುತ್ತಾರೆ. ದೇಹವು ಊದಿಕೊಳ್ಳುತ್ತದೆ. ಗಾಳಿಯಿಂದ ತುಂಬಿಕೊಳ್ಳುತ್ತದೆ. ಗಾಳಿ ತುಂಬಿಕೊಂಡು ನಿಷ್ಕ್ರಿಯವಾಗುತ್ತದೆ'.

**ಉಪನಿಷತ್—'ಯಾಜ್ಞವಲ್ಕ್ಯೇ'ತಿ ಹೋವಾಚ । 'ಯತ್ರಾಯಂ ಪುರುಷೋ ಮ್ರಿಯತೇ ಕಿಮೇನಂ ನ ಜಹಾತೀ'ತಿ । 'ನಾಮ' ಇತಿ । 'ಅನಂತಂ ವೈ ನಾಮ । ಅನಂತಾ ವಿಶ್ವೇ ದೇವಾಃ । ಅನಂತಮೇವ ಸ ತೇನ ಲೋಕಂ ಜಯತಿ ।**

ಆರ್ತಭಾಗನು ಕೇಳಿದನು, 'ಯಾಜ್ಞವಲ್ಕ್ಯರೇ, ಬ್ರಹ್ಮಜ್ಞಾನಿಯು ಮುಕ್ತನಾದಾಗ ಯಾವುದು ಇವನನ್ನು ಬಿಡುವುದಿಲ್ಲ?' 'ಹೆಸರು'. ಎಲ್ಲ ಬಿಟ್ಟು ಹೋದರೂ ಹೆಸರು ಬಿಟ್ಟು ಹೋಗುವುದಿಲ್ಲ. ಹೆಸರಿಗೆ ಅವಸಾನವಿಲ್ಲ. ಎಲ್ಲಾ ದೇವತೆಗಳೂ ನಾಶರಹಿತರಾಗಿರುವಾಗ ಅವರ ಹೆಸರಿಗೆ ನಾಶವಿರಬಹುದೇ?' ಎಂದರು ಯಾಜ್ಞವಲ್ಕ್ಯರು. ಹೀಗೆ ತಿಳಿದವನು ವಿಷ್ಣುಲೋಕವನ್ನು ಹೊಂದುತ್ತಾನೆ.

**ಉಪನಿಷತ್—'ಯಾಜ್ಞವಲ್ಕ್ಯೇ'ತಿ ಹೋವಾಚ । 'ಯತ್ರಾಸ್ಯ ಪುರುಷಸ್ಯ ಮೃತಸ್ಯ ಅಗ್ನಿಂ ವಾಗಪ್ಯೇತಿ, ವಾತಂ ಪ್ರಾಣಃ, ಚಕ್ಷುರಾದಿತ್ಯಂ, ಮನಶ್ಚಂದ್ರಂ, ದಿಶಃ ಶ್ರೋತ್ರಂ, ಪೃಥಿವೀಂ ಶರೀರಂ, ಆಕಾಶಮಾತ್ಮಾ, ಓಷಧೀರ್ಲೋಮಾನಿ, ವನಸ್ಪತೀನ್ ಕೇಶಾಃ, ಅಪ್ಸು ಲೋಹಿತಂ ಚ ರೇತಶ್ಚ ನಿಧೀಯತೇ। ಕ್ವ ಅಯಂ ತದಾ ಪುರುಷೋ ಭವತೀ'ತಿ। 'ಆಹರ ಸೋಮ್ಯ ಹಸ್ತಮಾರ್ತಭಾಗ, ಆವಾಮೇವೈತಸ್ಯ ವೇದಿಷ್ಯಾವಃ, ನ ನಾವೇತ್ ತತ್ ಸ ಜನ' ಇತಿ । ತೌ ಹೋತ್ಕ್ರಮ್ಯ ಮಂತ್ರಯಾಂ-ಚಕ್ರಾತೇ । ತೌ ಹ ಯದೂಚತುಃ, ಕರ್ಮ ಹೈವ ತದೂಚತುಃ। ಅಥ ಯತ್ ಪ್ರಶಶಂಸತುಃ, ಕರ್ಮ ಹೈವ ತತ್ ಪ್ರಶಶಂಸತುಃ । 'ಪುಣ್ಯೋ ವೈ ಪುಣ್ಯೇನ ಕರ್ಮಣಾ ಭವತಿ, ಪಾಪಃ ಪಾಪೇನೇ'ತಿ । ತತೋ ಹ ಜಾರತ್ಕಾರವ ಆರ್ತಭಾಗ ಉಪರರಾಮ । ಇತ್ಯಾರ್ತಭಾಗ ಬ್ರಾಹ್ಮಣಂ।**

ಆರ್ತಭಾಗನು ಕೇಳಿದನು, 'ಯಾಜ್ಞವಲ್ಕ್ಯರೇ, ಜೀವನು ಮರಣ ಹೊಂದುವಾಗ ಅವನ ವಾಗಿಂದ್ರಿಯಾಭಿಮಾನಿ ಅಗ್ನಿಯು ಒಂದು ರೂಪದಿಂದ ಅಧಿದೈವದ ತನ್ನ ಮೂಲರೂಪವನ್ನು ಹೊಂದುತ್ತಾನೆ. ಇನ್ನೊಂದು ರೂಪದಿಂದ ಜೀವನ ಜೊತೆಗಿರುತ್ತಾನೆ. ಹಾಗೆಯೇ ಪ್ರಾಣಾಭಿಮಾನಿಯು ವಾಯುವನ್ನೂ, ಚಕ್ಷುರಭಿಮಾನಿ ಆದಿತ್ಯನನ್ನೂ, ಮನೋಭಿಮಾನಿ ಚಂದ್ರನನ್ನೂ, ಶ್ರೋತ್ರಾಭಿಮಾನಿಗಳು ದಿಗ್ದೇವತೆಗಳನ್ನೂ, ಶರೀರಾಭಿಮಾನಿ ಭೂಮಿಯನ್ನೂ, ಹೃದಯದೊಳಗಿರುವ

ಪರಮಾತ್ಮನು ಹೊರಗೆ ವ್ಯಾಪ್ತವಾದ ತನ್ನ ರೂಪವನ್ನೂ, ರೋಮಾಭಿಮಾನಿಗಳು ಸಸ್ಯಾಭಿಮಾನಿಗಳನ್ನೂ, ಕೇಶಾಭಿಮಾನಿಗಳು ವೃಕ್ಷಾಭಿಮಾನಿಗಳನ್ನೂ, ರಕ್ತ ಮತ್ತು ರೇತಸ್ಸುಗಳ ಅಭಿಮಾನಿಗಳು ಜಲಾಭಿಮಾನಿಗಳನ್ನೂ ಸೇರುತ್ತಾರೆ. ಆಗ ಈ ಮೃತ ಜೀವನು ಎಲ್ಲಿ ಇರುತ್ತಾನೆ?' ಯಾಜ್ಞವಲ್ಕ್ಯರು ಹೇಳಿದರು, 'ಆರ್ತಭಾಗ, ಕೈಯನ್ನು ಕೊಡು. ನಾವಿಬ್ಬರೇ ರಹಸ್ಯವಾದ ಈ ವಿಷಯವನ್ನು ತಿಳಿದಿರೋಣ. ಅಯೋಗ್ಯ ಜನರು ನಮ್ಮಿಂದ ಆ ತತ್ತ್ವವನ್ನು ತಿಳಿಯಬಾರದು'. ಬಳಿಕ ಅವರಿಬ್ಬರೂ ಎದ್ದು ಹೋಗಿ ರಹಸ್ಯವಾಗಿ ಮಾತಾಡಿಕೊಂಡರು. ಅವರಿಬ್ಬರೂ ಮಾತಾಡಿಕೊಂಡುದುದು ಕರ್ಮಫಲದಾತನಾದ ಪರಮಾತ್ಮನ ಬಗ್ಗೆ. ಅವರು ಪ್ರಶಂಸಿಸಿದುದೂ ಕರ್ಮಫಲದಾತನಾದ ಪರಮಾತ್ಮನನ್ನೇ. ಮೃತನಾದ ಜೀವನು ಎಲ್ಲಿಗೆ ಹೋಗುವನೆಂದರೆ, ಆತ ಪುಣ್ಯ ಮಾಡಿದ್ದರೆ ಪುಣ್ಯಕರ್ಮನಿಯಾಮಕನಾದ ಪರಮಾತ್ಮನ ಅನುಗ್ರಹದಿಂದ ಸ್ವರ್ಗವನ್ನು ಹೊಂದುತ್ತಾನೆ. ಪಾಪ ಮಾಡಿದ್ದರೆ ಪಾಪನಿಯಾಮಕನಾಜ್ಞೆಯಿಂದ ನರಕವನ್ನು ಹೊಂದುತ್ತಾನೆ. ಜ್ಞಾನವನ್ನು ಸಂಪಾದಿಸಿದ್ದರೆ ಜ್ಞಾನಾಂತರ್ಗತ ಪರಮಾತ್ಮನಿಂದ ಮುಕ್ತಿ ಪಡೆಯುತ್ತಾನೆ'. ಹೀಗೆ ತನ್ನ ಎಲ್ಲ ಪ್ರಶ್ನೆಗಳಿಗೂ ಯಾಜ್ಞವಲ್ಕ್ಯರು ಉತ್ತರ ನೀಡಿದುದರಿಂದ ಆರ್ತಭಾಗನೂ ಸುಮ್ಮನಾದನು.

**ಭಾಷ್ಯ—ಆಕಾಶಂ ಪರಮಾತ್ಮನಮೇವ ।**

**ಕೇಚಿತ್ತು ಮಾನುಷಾ ಮುಕ್ತಿಮನುತ್ಕ್ರಮ್ಯೈವ ದೇಹತಃ ।**
**ದೇಹಪಾತೇ ತು ದೇಹಸ್ಯ ದೋಷಾನ್ ಭುಕ್ತ್ವೈವ ಸರ್ವಶಃ ।**
**ಮರಣೋಚ್ಛೂನತಾದೀಂಸ್ತು ಸ್ವಕೀಯಾರಬ್ಧ ಕರ್ಮಜಾನ್ ।**
**ದೇಹೇ ಕ್ಷೀಣೇ ತು ಗಚ್ಛಂತಿ ದೃಷ್ಟ್ವಾ ವಿಷ್ಣುಮನುಜ್ಞಯಾ ।**
**ಪುನರತ್ರೈವ ತಿಷ್ಠಂತಿ ನಿತ್ಯಾನಂದೈಕ ಭೋಗಿನಃ ।**
**ದೇಹಾದುತ್ಕ್ರಮ್ಯ ದೇವಾಸ್ತು ಯಾಂತಿ ವಿಷ್ಣುಂ ಸನಾತನಮ್ ।**
**ದೇಹಾದುತ್ಕ್ರಮ್ಯ ಯಾತಾನಾಂ ದೇವಾ ಭಾಗತ ಏವ ತು ।**
**ಸ್ವಾಧಿದೈವಂ ವ್ರಜಂತ್ಯದ್ಧಾ ಭಾಗತೋಽನು ವ್ರಜಂತಿ ತಾನ್ ।**

**ಅನುವಾದ**—'ಆಕಾಶಮಾತ್ಮಾ' ಎಂದರೆ ಬ್ರಹ್ಮಜ್ಞಾನಿಯ ಹೃದಯದೊಳಗಿನ ಪರಮಾತ್ಮ ರೂಪವು ಮೂಲರೂಪವನ್ನು ಹೋಗಿ ಸೇರುತ್ತದೆ ಎಂದರ್ಥ.

ಪರಬ್ರಹ್ಮನನ್ನು ಕೇವಲ ಆತ್ಮಾ ಎಂದು ಉಪಾಸನೆ ಮಾಡಿ ಅಪರೋಕ್ಷಿಗಳಾದ ಕೆಲವು ಅಲ್ಪ ಮನುಷ್ಯರು ದೇಹದಿಂದ ಬ್ರಹ್ಮನಾಡಿಯ ಮೂಲಕ ಹೊರಗೆ ಹೋಗುವುದಿಲ್ಲ. ದೇಹವು ಬಿದ್ದು ಹೋಗುವ ಕಾಲ ಬಂದಾಗ ತಮ್ಮ ಪ್ರಾರಬ್ಧ ಕರ್ಮದ ಫಲವಾಗಿ ಮರಣ ಕಾಲದ ಬಾವು ಮೊದಲಾದ ದೇಹದ ಎಲ್ಲಾ ದೋಷಗಳನ್ನೂ

ಸಂಪೂರ್ಣವಾಗಿ ಅನುಭವಿಸಿ ದೇಹ ಕ್ಷೀಣವಾದಾಗ ಬ್ರಹ್ಮನಾಡಿಯಿಂದ ಉತ್ಕ್ರಮಣ ಮಾಡದೆ ಚಕ್ಷುರಾದಿ ದ್ವಾರದಿಂದ ಹೊರಗೆ ಹೋಗಿ ಲಿಂಗಭಂಗರೂಪಮುಕ್ತಿಯನ್ನು ಹೊಂದುತ್ತಾರೆ. ಅನಂತರ ಒಮ್ಮೆ ಶ್ವೇತದ್ವೀಪಕ್ಕೆ ಹೋಗಿ ಅಲ್ಲಿ ವಿಷ್ಣುವನ್ನು ನೋಡಿ ಅವನ ಅನುಮತಿಯಿಂದ ಪುನಃ ಭೂಲೋಕಕ್ಕೆ ಬಂದು ಶಾಶ್ವತ ಮುಕ್ತಿ ಸುಖವನ್ನು ಅನುಭವಿಸುತ್ತಾ ಇರುತ್ತಾರೆ. ಮನುಷ್ಯರಾಗಿ ಅವತರಿಸಿದ ದೇವತೆಗಳು ಬ್ರಹ್ಮನಾಡಿಯಿಂದ ಉತ್ಕ್ರಮಿಸಿ ತಮ್ಮ ಮೂಲರೂಪವನ್ನೂ, ಚತುರ್ಗುಣೋಪಾಸಕ ರಾದ ಮನುಷ್ಯೋತ್ತಮರು ಉತ್ಕ್ರಮಿಸಿ ವಿಷ್ಣುವನ್ನೂ ಹೊಂದುವರು. ಜೀವ ಮರಣ ಕಾಲದಲ್ಲಿ ಇಂದ್ರಿಯಾಭಿಮಾನಿ ದೇವತೆಗಳು ಒಂದು ರೂಪದಿಂದ ತಮ್ಮನ್ನು ಕರೆದೊಯ್ಯುವ ವಿಷ್ಣುವನ್ನೇ ಹಿಂಬಾಲಿಸುವರು. ಒಂದು ರೂಪದಿಂದ ತಮ್ಮ ಮೂಲ ರೂಪವನ್ನು ಸೇರುತ್ತಾರೆ. ಮತ್ತೊಂದು ರೂಪದಿಂದ ಉತ್ಕ್ರಮಿಸಿದ ಜೀವರ ಜೊತೆಗೇ ಹೋಗುತ್ತಾರೆ ಎಂದೂ ಪರಮಶ್ರುತಿಯಲ್ಲಿ ಹೇಳಿದೆ.

**ಭಾಷ್ಯ—ಆಕಾಶಾಖ್ಯಂ ಸ್ವರೂಪಂ ತು ವಿಷ್ಣುಸ್ತದ್ಧೃದಿ ಸಂಸ್ಥಿತಃ ।**
**ಭಾಗತೋ ಭಾಗತಶ್ಚೈತಾನನುಯಾತಿ ಜನಾರ್ದನಃ ।**
**ಜ್ಞಾನಸ್ಥಿತೇನ ರೂಪೇಣ ದೇವಾನಾಂ ಮುಕ್ತಿದೋ ಹರಿಃ ।**
**ಪುಣ್ಯಸ್ಥಿತೇನ ರೂಪೇಣ ಸ್ವರ್ಗಂ ನಿರಯಮನ್ಯಗಃ ।**
**ರಹಸ್ಯಮೇತದ್ದೇವಾನಾಂ ವಿದುಃ ಕರ್ಮೇತಿ ಮಾನುಷಾಃ ।**
**ತಸ್ಮಾನ್ನೈವ ಜನೇಷ್ವೇತದ್ ವಿಷ್ಣೋಃ ಕರ್ಮ ಪ್ರಕಾಶಯೇತ್ ।**
**ಇತಿ ಚ ।**

**ಅತ ಏವ ಯಾಜ್ಞವಲ್ಕ್ಯೋ ನ ಜನೇಷೂವಾಚ ।**

**ಅನುವಾದ**—ಜೀವನ ಹೃದಯದಲ್ಲಿದ್ದ ವಿಷ್ಣುವು ಒಂದು ಅಂಶದಿಂದ ಆಕಾಶ ಎಂಬ ಹೆಸರಿನ ತನ್ನ ರೂಪದಲ್ಲಿ ಸೇರುತ್ತಾನೆ. ಇನ್ನೊಂದು ಅಂಶದಿಂದ ಈ ಜೀವರ ಜೊತೆಗೇ ಹೋಗುತ್ತಾನೆ.

ಶ್ರೀಹರಿಯು ದೇವತೆಗಳು ಸಂಪಾದಿಸಿದ ಜ್ಞಾನದಲ್ಲಿ ಸನ್ನಿಹಿತವಾಗಿರುವ ತನ್ನ ರೂಪದಿಂದ ದೇವತೆಗಳಿಗೆ ಮುಕ್ತಿಯನ್ನು ಕೊಡುವನು. ಪುಣ್ಯದಲ್ಲಿ ಸನ್ನಿಹಿತ ವಾಗಿರುವ ತನ್ನ ರೂಪದಿಂದ ಪುಣ್ಯವಂತರಿಗೆ ಸ್ವರ್ಗವನ್ನು ಕೊಡುವನು. ಪಾಪ ದಲ್ಲಿರುವ ರೂಪದಿಂದ ಪಾಪಿಗಳಿಗೆ ನರಕವನ್ನು ಕೊಡುವನು.

ಜ್ಞಾನಾದಿಗಳಲ್ಲಿರುವ ಶ್ರೀಹರಿಯೇ ಮುಕ್ತ್ಯಾದಿಗಳನ್ನು ಕೊಡುವವನೆಂಬ ವಿಷಯವು ದೇವತೆಗಳಿಗೆ ಮಾತ್ರ ಗೊತ್ತಿರುವ ವಿಷಯ. ಮನುಷ್ಯರು ಪುಣ್ಯ-ಪಾಪ

ಕರ್ಮಗಳು ಸ್ವರ್ಗ-ನರಕಗಳಿಗೆ ಕಾರಣವೆಂದು ತಿಳಿದಿದ್ದಾರೆ. ಹೀಗೆ ದೇವರಹಸ್ಯವಾದುದರಿಂದ ವಿಷ್ಣುವಿನ ಈ ಕಾರ್ಯವನ್ನು ಸಾಧಾರಣ ಜನಗಳಿಗೆ ಹೇಳಬಾರದು ಎಂದು ಪರಮಶ್ರುತಿಯಲ್ಲಿ ಹೇಳಿದೆ.

ಸಾಧಾರಣ ಜನಗಳಿಗೆ ದೇವರಹಸ್ಯವನ್ನು ತಿಳಿಸಬಾರದೆಂಬ ಕಾರಣದಿಂದಲೇ ಯಾಜ್ಞವಲ್ಕ್ಯರು ಜನರ ಮಧ್ಯೆ ಹೇಳಲಿಲ್ಲ.

**ಭಾಷ್ಯ—ಕರ್ಮನಾಮಾ ತು ಭಗವಾನ್ ಫಲಕರ್ತೃತ್ವತೋ ಹರಿಃ ।**
**ಪಾತನಾತ್ ಪಾಪನಾಮಾಸೌ ಪುನಾತೇಃ ಪುಣ್ಯನಾಮವಾನ್ ।**
**ಇತಿ ಭಾರತೇ।**

**॥ ಇತ್ಯಾರ್ತಭಾಗ ಬ್ರಾಹ್ಮಣಂ ॥**

**ಅನುವಾದ**—ಶ್ರೀಹರಿಯು ಕರ್ಮಗಳಿಗೆ ಫಲವನ್ನು ಕೊಡುವವನಾದ್ದರಿಂದ ಅವನಿಗೆ ಕರ್ಮ ಎಂದು ಹೆಸರು. ನರಕದಲ್ಲಿ ಬೀಳಿಸುವುದರಿಂದ ಪಾಪ ಎಂದು ಹೆಸರು. ಪವಿತ್ರಗೊಳಿಸುವುದರಿಂದ ಪುಣ್ಯ ಎಂದು ಹೆಸರು ಎಂದು ಭಾರತದಲ್ಲಿದೆ.

ಇಲ್ಲಿಗೆ ಆರ್ತಭಾಗ ಬ್ರಾಹ್ಮಣವು ಮುಗಿಯಿತು.

**ಬ್ರಹ್ಮಾಂಡದ ವಿಸ್ತಾರ :**

**ಉಪನಿಷತ್—ಅಥ ಹೈನಂ ಭುಜ್ಯುರ್ಲಾಹ್ಯಾಯನಿಃ ಪಪ್ರಚ್ಛ । ಯಾಜ್ಞವಲ್ಕ್ಯೇತಿ ಹೋವಾಚ । ಮದ್ರೇಷು ಚರಕಾಃ ಪರ್ಯವ್ರಜಾಮ । ತೇ ಪತಂಜಲಸ್ಯ ಕಾಪ್ಯಸ್ಯ ಗೃಹಾನೈಮ । ತಸ್ಯಾಸೀದ್ ದುಹಿತಾ ಗಂಧರ್ವಗೃಹೀತಾ । ತಮಪೃಚ್ಛಾಮ, ಕೋಽಸೀತಿ । ಸೋಽಬ್ರವೀತ್ ಸುಧನ್ವಾಽಽಂಗಿರಸ ಇತಿ । ತಂ ಯದಾ ಲೋಕಾನಾಮಂತಾನಪೃಚ್ಛಾಮ ಅಥೈನಮಬ್ರೂಮ ಕ್ವ ಪಾರೀಕ್ಷಿತಾ ಅಭವನ್ ಇತಿ । ಕ್ವ ಪಾರೀಕ್ಷಿತಾ ಅಭವನ್ । ಸ ತ್ವಾ ಪೃಚ್ಛಾಮಿ ಯಾಜ್ಞವಲ್ಕ್ಯ ಕ್ವ ಪಾರೀಕ್ಷಿತಾ ಅಭವನ್ನಿತಿ ।**

ಅನಂತರ ಲಹ್ಯರ ಮಗನಾದ ಭುಜ್ಯುವು ಇವರನ್ನು ಕೇಳಿದನು. 'ಯಾಜ್ಞವಲ್ಕ್ಯರೇ, ತೀರ್ಥಯಾತ್ರೆ ಮಾಡುತ್ತಿದ್ದ ನಾವು ಮದ್ರದೇಶದಲ್ಲಿ ಸಂಚರಿಸುತ್ತಿದ್ದೆವು. ಆಗ ಕಪಿಗೋತ್ರದಲ್ಲಿ ಹುಟ್ಟಿದ ಪತಂಜಲನ ಮನೆಗೆ ಹೋದೆವು. ಅವನ ಮಗಳು ಗಂಧರ್ವನ ಆವೇಶಕ್ಕೊಳಗಾಗಿದ್ದಳು. ಆ ಗಂಧರ್ವನನ್ನು ನೀನು ಯಾರು ಎಂದು ಕೇಳಿದೆವು. ಆಂಗಿರಸ ಋಷಿಗಳ ಗೋತ್ರದಲ್ಲಿ ಹುಟ್ಟಿದ ಸುಧನ್ವ ಎಂದು ಅವನು ಹೇಳಿದನು. ಲೋಕಗಳ ಪರಿಮಾಣಾದಿಗಳ ಬಗ್ಗೆ ನಿರ್ಣಯವನ್ನು ಕುರಿತು ಅವನನ್ನು ಕೇಳಿದಾಗ, ಹಿಂದಿನ ಮುಂದಿನ ಎಲ್ಲ ಕಲ್ಪಗಳ ಮನ್ಮಥರೂ ಮುಕ್ತರಾದಾಗ

ಎಲ್ಲಿರುತ್ತಾರೆ ಎಂದು ಕೇಳಿ ತಿಳಿದೆವು. ಮುಕ್ತರಾದ ಮನ್ಮಥರು ಎಲ್ಲಿರುತ್ತಾರೆ ? ನಾನು ನಿಮ್ಮನ್ನು ಕೇಳುತ್ತೇನೆ ಯಾಜ್ಞವಲ್ಕ್ಯರೇ ಮುಕ್ತರಾದ ಮನ್ಮಥರು ಎಲ್ಲಿರುತ್ತಾರೆ ?'

**ಭಾಷ್ಯ—ಪಾರೀಕ್ಷಿತಾಃ ಪ್ರದ್ಯುಮ್ನಾಃ ।**

**ಅನುವಾದ**—ಪಾರೀಕ್ಷಿತಾಃ ಎಂದರೆ ಮನ್ಮಥರು.

**ವಿವರಣೆ**—ಉಪನಿಷತ್ತಿನಲ್ಲಿ ಮನ್ಮಥರನ್ನು ಪಾರೀಕ್ಷಿತಾಃ ಎಂಬ ಶಬ್ದದಿಂದ ಹೇಳಲಾಗಿದೆ. ಪರೀಕ್ಷಿತ್ ಎಂದರೆ ವಿಷ್ಣು. ಪಾರೀಕ್ಷಿತ ಎಂದರೆ ಪರೀಕ್ಷಿತನ ಮಗ. ಎಂದರೆ ವಿಷ್ಣುವಿನ ಮಗ ಮನ್ಮಥ. ಪಾರೀಕ್ಷಿತಾಃ ಎಂಬ ಬಹುವಚನದಿಂದ ಹಿಂದಿನ ಮುಂದಿನ ಎಲ್ಲ ಕಲ್ಪಗಳ ಮನ್ಮಥರು ಎಂದು ತಿಳಿಯಬೇಕು.

**ಉಪನಿಷತ್—ಸ ಹೋವಾಚ । ಉವಾಚ ವೈ ಸೋಽಗಚ್ಛನ್ ವೈ ತೇ ತದ್ ಯತ್ರಾಶ್ವಮೇಧಯಾಜಿನೋ ಗಚ್ಛಂತೀತಿ।ಕ್ವನು ಅಶ್ವಮೇಧಯಾಜಿನೋ ಗಚ್ಛಂತೀತಿ । ದ್ವಾತ್ರಿಂಶತಂ ವೈ ದೇವರಥಾಹ್ನ್ಯಾನಿ ಅಯಂ ಲೋಕಃ । ತಂ ಸಮಂತಂ ಪೃಥಿವೀ ದ್ವಿಸ್ತಾವತ್ ಪರ್ಯೇತಿ । ತಾಂ ಸಮಂತಂ ಪೃಥಿವೀಂ ದ್ವಿಸ್ತಾವತ್ ಸಮುದ್ರಃ ಪರ್ಯೇತಿ । ತದ್ ಯಾವತೀ ಕ್ಷುರಸ್ಯ ಧಾರಾ ಯಾವದ್ ವಾ ಮಕ್ಷಿಕಾಯಾಃ ಪತ್ರಂ ತಾವಾನಂತರೇಣಾಕಾಶಃ। ತಾನಿಂದ್ರಃ ಸುಪರ್ಣೋ ಭೂತ್ವಾ ವಾಯವೇ ಪ್ರಾಯಚ್ಛತ್ । ತಾನ್ ವಾಯುರಾತ್ಮನಿ ಧಿತ್ವಾ ತತ್ರಾಗಮಯದ್ ಯತ್ರಾಶ್ವಮೇಧಯಾ-ಜಿನೋಽಭವನ್ ಇತ್ಯೇವಮಿವ ವೈ। ಸ ವಾಯುಮೇವ ಪ್ರಶಶಂಸ । ತಸ್ಮಾದ್ ವಾಯುರೇವ ವ್ಯಷ್ಟಿಃ । ವಾಯುರೇವ ಸಮಷ್ಟಿಃ । ಅಪ ಪುನರ್ಮೃತ್ಯುಂ ಜಯತಿ ಯ ಏವಂ ವೇದ । ತತೋ ಹ ಭುಜ್ಯುರ್ಲಾ-ಹ್ಯಾಯನಿರುಪರರಾಮ । ಇತಿ ಭುಜ್ಯು ಬ್ರಾಹ್ಮಣಂ॥**

'ಹಿಂದಿನ ಮುಂದಿನ ಎಲ್ಲ ಕಲ್ಪಗಳ ಇಂದ್ರರು ಮುಕ್ತರಾದಾಗ ಎಲ್ಲಿ ಇರುವರೋ ಅಲ್ಲಿ ಈ ಮನ್ಮಥರೂ ಇರುವರು ಎಂದು ಗಂಧರ್ವನು ಹೇಳಿದನಷ್ಟೆ?' ಎಂದು ಯಾಜ್ಞವಲ್ಕ್ಯರು ಹೇಳಿದರು. 'ಇಂದ್ರರು ಎಲ್ಲಿರುತ್ತಾರೆ?' ಮೂವತ್ತೆರಡು ಮುಹೂರ್ತಗಳಲ್ಲಿ ಸೂರ್ಯನ ರಥವು ಎಷ್ಟು ಯೋಜನಗಳನ್ನು ಕ್ರಮಿಸುವುದೋ ಅಷ್ಟು ಯೋಜನ ಪ್ರದೇಶದಲ್ಲಿ ಸೂರ್ಯನ ಪ್ರಕಾಶವು ವ್ಯಾಪಿಸಿದೆ. ಆ ಪ್ರದೇಶಕ್ಕೆ ಲೋಕ ಎಂದು ಹೆಸರು. ಲೋಕದ ಎರಡರಷ್ಟು ವಿಸ್ತಾರವಾಗಿ ಅಂಧಂತಮಸ್ಸು ಲೋಕದ ಸುತ್ತಲೂ ಇದೆ. ತಮಸ್ಸಿನ ಎರಡರಷ್ಟು ಅಳತೆಯುಳ್ಳ ಘನೋದಕ ಸಮುದ್ರವು ತಮಸ್ಸಿನ ಸುತ್ತಲೂ ಇದೆ. ಅದರಾಚೆ ಸಿಗುವ ಬ್ರಹ್ಮಾಂಡಕಟಾಹದಲ್ಲಿ

ಕ್ಷೌರಿಕನ ಕತ್ತರಿಯ ಅಲುಗಿನಂತೆ, ನೊಣದ ರೆಕ್ಕೆಯಂತೆ ಸೂಕ್ಷ್ಮವಾಗಿರುವ ಅವಕಾಶ ವಿದೆ. ಪುರುಷರೂಪಿ ಗರುಡನು ತನ್ನದೇ ಆದ ಪಕ್ಷಿಯ ರೂಪವನ್ನು ಧರಿಸಿ ಮುಕ್ತರನ್ನು ಆ ಅವಕಾಶದ ಮೂಲಕ ಬ್ರಹ್ಮಾಂಡದಿಂದ ಹೊರಗೆ ಒಯ್ದು ವಾಯು ದೇವನಿಗೆ ಒಪ್ಪಿಸುತ್ತಾನೆ. ವಾಯುದೇವನು ಮುಂದೆ ಆ ಮುಕ್ತರನ್ನು ತನ್ನಲ್ಲಿಟ್ಟು ಕೊಂಡು ನೂರು ಅಶ್ವಮೇಧಗಳನ್ನು ಮಾಡಿದ ಇಂದ್ರರು ಎಲ್ಲಿರುವರೋ ಅಲ್ಲಿಗೆ ಕಳುಹಿಸುತ್ತಾನೆ. ಹೀಗೆ ಮೋಕ್ಷದಾತ ವಾಯುವೆಂದು ನಾನು ಹೊಗಳುತ್ತೇನೆ. ಹೀಗೆಯೇ ಗಂಧರ್ವನೂ ವಾಯುವನ್ನೇ ಸ್ತುತಿಸಿರುತ್ತಾನೆ' ಎಂದು ಯಾಜ್ಞವಲ್ಕ್ಯರು ಹೇಳಿದರು. ಆದ್ದರಿಂದ ವಾಯುವೇ ವ್ಯಷ್ಟಿ, ವಾಯುವೇ ಸಮಷ್ಟಿ. ಹೀಗೆ ತಿಳಿದವನು ಅಪಮೃತ್ಯುವನ್ನು ಜಯಿಸುತ್ತಾನೆ. ಅನಂತರ ಭುಜ್ಯು ವಿರಮಿಸಿದನು.

**ವಿವರಣೆ**—ದೇವ, ಋಷಿ, ಪಿತೃ, ಯಕ್ಷ, ಗಂಧರ್ವ, ಮಾನುಷ, ಉರಗ, ಅಸುರ ಎಂದು 'ವಿ' ಅಂದರೆ ವಿವಿಧವಾದ ಎಂಟು ವರ್ಗದ ಚೇತನರನ್ನು ಮುಕ್ತಿಗೆ ಕರೆದೊಯ್ಯುವನಾದ್ದರಿಂದ ವಾಯುವಿಗೆ ವ್ಯಷ್ಟಿ ಎಂದು ಹೆಸರು.

ಗರುಡ, ರುದ್ರ, ಶೇಷ, ಇಂದ್ರ ಇವರು ನಾಲ್ವರು ಮತ್ತು ಇವರ ಪತ್ನಿಯರು ನಾಲ್ವರು ಹೀಗೆ 'ಸಂ' ಎಂದರೆ ಸಂಪೂರ್ಣರಾದ ಎಂಟು ಮಂದಿಯನ್ನೂ ಮುಕ್ತಿಗೆ ಕರೆದೊಯ್ಯುವವನಾದ್ದರಿಂದ ವಾಯುವಿಗೆ ಸಮಷ್ಟಿ ಎಂದೂ ಹೆಸರು.

**ಭಾಷ್ಯ—ಅಶ್ವಮೇಧಯಾಜಿನ ಇಂದ್ರಾಃ ।**

**ಅನುವಾದ**—ಅಶ್ವಮೇಧಯಾಜಿನಃ ಎಂದರೆ ಇಂದ್ರರು.

**ಭಾಷ್ಯ—ಪ್ರದ್ಯುಮ್ನಃ ಕಾಮನಾಮಾಸೌ ಪಾರೀಕ್ಷಿತ ಇತೀರಿತಃ ।**
**ಸರ್ವೇಕ್ಷಣಾತ್ ಪರೋ ವಿಷ್ಣುಃ ಪರೀಕ್ಷಿದಿತಿ ಕೀರ್ತಿತಃ ।**
**ತತ್ಪುತ್ರತ್ವಾತ್ ಕಾಮದೇವಃ ಪಾರೀಕ್ಷಿತ ಇತಿ ಸ್ಮೃತಃ ।**
**ಶತಾಶ್ವಮೇಧಯಾಜಿತ್ವಾದಿಂದ್ರಾ ಏವಾಶ್ವಮೇಧಿನಃ ।**
**ಅತೀತಾನಾಗತಾನಾಂ ಚ ಕಾಮಾನಾಂ ವಜ್ರಿಣಾಮಪಿ ।**
**ಏಕಮೇವ ಹಿ ಮುಕ್ತಾನಾಂ ಸ್ಥಾನಂ ವೇದೋದಿತಂ ಸದಾ ।**
**ಇಂದ್ರನಾಮಾ ತು ಗರುಡಃ ಸಾಮರ್ಥ್ಯಾದೇವ ಕಥ್ಯತೇ ।**
**ತಸ್ಯ ರೂಪದ್ವಯಂ ನಿತ್ಯಂ ಸೌಪರ್ಣಂ ಪೌರುಷಂ ತಥಾ ।**
**ತತ್ರ ಪೌರುಷರೂಪೀ ಸನ್ ಭೂತ್ವಾ ಸೌಪರ್ಣರೂಪವಾನ್ ।**
**ಕಾಮದೇವಾನುಪಾದಾಯ ಮುಕ್ತಾನ್ ವಾಯೋಃ ಪ್ರಯಚ್ಛತಿ ।**
**ವಾಯುಸ್ತಾನ್ ಸ್ವಶರೀರಸ್ಥಾನ್ ಕೃತ್ವೇಂದ್ರಾ ಯತ್ರ ಮುಕ್ತಿಗಾಃ ।**
**ಪ್ರದ್ಯುಮ್ನನಾಮಕೇ ವಿಷ್ಣಾವೇವಂ ವಾಯುರ್ಹಿ ಮೋಕ್ಷದಃ ।**
**ತಸ್ಮಾತ್ ಸರ್ವೋತ್ತಮೋ ವಾಯುರ್ವಿವಿಧಂ ತು ಯದಷ್ಟಕಮ್ ।**

ದೇವಾನ್ ಋಷೀನ್ ಪಿತೄನ್ ಯಕ್ಷಾನ್ ಗಂಧರ್ವಾನ್
ಮಾನುಷೋರಗಾನ್ ।
ಅಸುರಾಂಶ್ಚ ವಶೇ ನಿತ್ಯಂ ನಯತ್ಯಮಿತ ಪೌರುಷಃ ।
ಸಂಪೂರ್ಣಾಂಶ್ಚ ಸುಪರ್ಣೇಶಶೇಷೇಂದ್ರಾನ್ ತತ್ ಸ್ತ್ರಿಯೋऽಪಿ ಚ ।
ಅಷ್ಟೌ ನಯತ್ಯುನ್ನಯತಿ ವಶೀಕೃತ್ಯ ಸ್ವಯಂ ಪ್ರಭುಃ ।
ಅತೋ ವ್ಯಷ್ಟಿಃ ಸಮಷ್ಟಿಶ್ಚ ವಾಯುರೇವಾಭಿಧೀಯತೇ ।
ಏವಂ ವ್ಯಷ್ಟಿಂ ಸಮಷ್ಟಿಂ ಚ ಯೋ ವಾಯುಂ ವೇದ ತತ್ತ್ವತಃ ।
ತತ್ಪರಂ ಚ ಹರಿಂ ನಿತ್ಯಂ ಮುಚ್ಯತೇ ಸಂಸೃತೇಃ ಪುಮಾನ್ ।
ಇತಿ ಪರಮಸಂಹಿತಾಯಾಮ್ ।

**ಅನುವಾದ**—ಕಾಮ ನಾಮಕ ಪ್ರದ್ಯುಮ್ನನು ಪಾರೀಕ್ಷಿತ ಎನಿಸಿದ್ದಾನೆ. ಸರ್ವೋತ್ತಮನಾದ ವಿಷ್ಣುವು ಎಲ್ಲವನ್ನೂ ನೋಡುವುದರಿಂದ ಪರೀಕ್ಷಿತ್ ಎನಿಸಿದ್ದಾನೆ. ಕಾಮದೇವನು ಅವನ ಮಗನಾದುದರಿಂದ ಪಾರೀಕ್ಷಿತ ಎನಿಸಿದ್ದಾನೆ. ಅಶ್ವಮೇಧಿಗಳೆಂದರೆ ಇಂದ್ರರೇ. ಏಕೆಂದರೆ ನೂರು ಅಶ್ವಮೇಧಗಳನ್ನು ಅವರು ಮಾಡಿರುತ್ತಾರೆ. ಹಿಂದೆ ಆಗಿ ಹೋಗಿರುವ ಮತ್ತು ಮುಂದೆ ಬರಲಿರುವ ಎಲ್ಲ ಕಾಮದೇವತೆಗಳ ಮತ್ತು ಇಂದ್ರರ ಮುಕ್ತಸ್ಥಾನವು ಯಾವಾಗಲೂ ಒಂದೇ ಎಂದು ಉಪನಿಷತ್ತಿನಲ್ಲಿ ಹೇಳಿದೆ. ಗರುಡನೇ ಸಾಮರ್ಥ್ಯಶಾಲಿಯಾದುದರಿಂದ ಇಂದ್ರ ಎನಿಸುತ್ತಾನೆ. ಅವನಿಗೆ ಸದಾ ಎರಡು ರೂಪಗಳು, ಹಕ್ಕಿಯ ರೂಪ ಮತ್ತು ಪುರುಷರೂಪ ಎಂದು. ಪುರುಷ ರೂಪಿಯು ಹಕ್ಕಿಯ ರೂಪವನ್ನು ಪಡೆದು ಕಾಮರನ್ನು ಮುಕ್ತಿಗಾಗಿ ವಾಯುದೇವರಿಗೆ ಒಪ್ಪಿಸುತ್ತಾನೆ. ವಾಯುವು ಅವರನ್ನು ಮೊದಲಿಗೆ ತನ್ನ ಶರೀರದಲ್ಲಿ ಇಟ್ಟುಕೊಂಡು ಅನಂತರ ಮುಕ್ತರಾದ ಇಂದ್ರರಿಗೆ ಆಶ್ರಯನಾದ ಪ್ರದ್ಯುಮ್ನನಾಮಕ ವಿಷ್ಣುವಿನ ಬಳಿಗೆ ಕಳುಹಿಸುತ್ತಾನೆ. ಹೀಗೆ ವಾಯುದೇವನೇ ಮೋಕ್ಷವನ್ನು ಕೊಡುವವನು. ಆದ್ದರಿಂದ ಸಕಲಜೀವೋತ್ತಮನಾದ, ಅಮಿತ ಬಲಶಾಲಿಯಾದ ವಾಯುದೇವನೆ ಪ್ರತ್ಯೇಕವಾಗಿ ನಾನಾವಿಧರಾದ ದೇವ, ಋಷಿ, ಪಿತೃ, ಯಕ್ಷ, ಗಂಧರ್ವ, ಮಾನುಷ, ಉರಗ ಮತ್ತು ಅಸುರ ಎಂಬ ಎಂಟುವಿಧ ಚೇತನಗಳನ್ನು ಯಾವಾಗಲೂ ತನ್ನ ವಶದಲ್ಲಿಟ್ಟುಕೊಂಡಿರುತ್ತಾನೆ. ಆದ್ದರಿಂದ ವಾಯುವಿಗೆ ವ್ಯಷ್ಟಿ ಎಂದು ಹೆಸರು. ಪ್ರಭುವಾದ ಆ ವಾಯುವು ಸಂಪೂರ್ಣರಾದ ಅಂದರೆ ಮೇಲೆ ಹೇಳಿದ ಎಂಟುವಿಧ ಚೇತನಗಳಲ್ಲಿ ಹೆಚ್ಚು ಪೂರ್ಣರಾದ ಗರುಡ ರುದ್ರ, ಶೇಷ, ಇಂದ್ರ ಮತ್ತು ಅವರ ಪತ್ನಿಯರು ಎಂಬ ಎಂಟು ಮಂದಿ ದೇವತೆಗಳನ್ನು ತಾನೇ ವಶದಲ್ಲಿಟ್ಟುಕೊಂಡು ಪ್ರೇರಣೆ ಮಾಡುತ್ತಾನೆ. ಉನ್ನತಿಯನ್ನು ಕೊಡುತ್ತಾನೆ. ಆದ್ದರಿಂದ ವಾಯುವಿಗೆ ಸಮಷ್ಟಿ ಎಂದೂ ಹೆಸರು. ಹೀಗೆ ವಾಯುವೇ ವ್ಯಷ್ಟಿ ಮತ್ತು ಸಮಷ್ಟಿ ಎಂದೂ, ಅವನಿಗಿಂತಲೂ ಶ್ರೀಹರಿ

ಉತ್ತಮನೆಂದೂ ಯಥಾರ್ಥವಾಗಿ ಯಾರು ತಿಳಿಯುವನೋ ಅವನು ಸಂಸಾರದಿಂದ ಶಾಶ್ವತ ಬಿಡುಗಡೆಯನ್ನು ಪಡೆಯುವನು' ಎಂದು ಪರಮಸಂಹಿತಾ ಎಂಬ ಗ್ರಂಥದಲ್ಲಿ ಹೇಳಲಾಗಿದೆ.

**ಭಾಷ್ಯ—ಚರಕಸ್ತೀರ್ಥ ಸಂಚಾರೀ ವಿತ್ತಾರ್ಥೀ ಕರಕಃ ಸ್ಮೃತಃ ।**
**ಇತ್ಯಭಿಧಾನಮ್ ।**

**ಅಹರ್ಮುಹೂರ್ತಂ ವಿಜ್ಞೇಯಮಹರ್ಮಾಸೋಽಪಿ ಭಣ್ಯತೇ ।**
**ಅಹರ್ದಿನಂ ಪ್ರಕಾಶಶ್ಚ ಕ್ವಚಿಜ್ಜ್ಞಾನಂ ಬಲಂ ತಥಾ । ಇತಿ ಚ ।**
**ಮುಹೂರ್ತಮಷ್ಟಭಾಗೋನಘಟಿಕಾದ್ವಯಮಿಷ್ಯತೇ ।**
**ಕ್ವಚಿದ್ ದ್ವಿಘಟಿಕಾಪಿ ಸ್ಯಾತ್ ಕ್ವಚಿತ್ ಸ್ಯಾತ್ ತಾವದುತ್ತರಃ ।**
**ಇತಿ ಕಾಲ ನಿರ್ಣಯೇ ।**

**ದ್ವಾತ್ರಿಂಶತ್ತು ಮುಹೂರ್ತಾನಾಂ ದಿನಮೇಕಂ ವಿದುರ್ಬುಧಾಃ ।**
**ತ್ರಿಂಶನ್ಮುಹೂರ್ತಮಥವಾ ಮುಹೂರ್ತೋನ್ಮಾನ ಭೇದತಃ ।**
**ಇತಿ ಚ ।**

**ಅನುವಾದ**—ತೀರ್ಥಯಾತ್ರೆ ಮಾಡುವವನು ಚರಕ ಎಂದೂ, ಹಣಕ್ಕಾಗಿ ಸಂಚರಿಸುವವನು ಕರಕ ಎಂದೂ ಪ್ರಸಿದ್ಧ ಎಂದು ಕೋಶವಿದೆ.

'ದ್ವಾತ್ರಿಂಶತಂ ವೈ ದೇವರಥಾಹ್ನ್ಯಾನಿ' ಎಂಬಲ್ಲಿ ಅಹನ್ ಎಂದರೆ ಮುಹೂರ್ತ ಪ್ರಕಾಶ ಎಂಬ ಎರಡು ಅರ್ಥ ವಿವಕ್ಷಿತ. ಏಕೆಂದರೆ ಅಹನ್ ಎಂದರೆ ಮುಹೂರ್ತ ಎಂದು ತಿಳಿಯಬೇಕು. ತಿಂಗಳಿಗೂ ಅಹನ್ ಎಂದು ಹೇಳುತ್ತಾರೆ. ಕೆಲವೆಡೆ ಅಹನ್ ಎಂದರೆ ಹಗಲು ಪ್ರಕಾಶ ಜ್ಞಾನ ಮತ್ತು ಬಲ ಎಂದೂ ಅರ್ಥವಿದೆ' ಎಂದೂ ಕೋಶವು ಹೇಳುತ್ತದೆ.

ಘಳಿಗೆಯ ಎಂಟನೇ ಒಂದು ಭಾಗದಷ್ಟು ಕಡಿಮೆಯಾಗಿರುವ ಎರಡು ಘಳಿಗೆಯು ಮುಹೂರ್ತ ಎನಿಸುವುದು. ಕೆಲವು ಕಡೆ ಎರಡು ಘಳಿಗೆಗೆ ಮುಹೂರ್ತ ಎಂದು ಹೆಸರು. ಕೆಲವು ಕಡೆ ಒಂದು ವಿಘಳಿಗೆ ಮತ್ತು ಘಳಿಗೆಯ ಎಂಟನೇಒಂದು ಭಾಗದಷ್ಟು ಹೆಚ್ಚಾಗಿರುವ ಎರಡು ಘಳಿಗೆಗಳೆ ಮುಹೂರ್ತ ಎಂದು ಕಾಲನಿರ್ಣಯ ಎನ್ನುವ ಗ್ರಂಥದಲ್ಲಿದೆ.

ಮುಹೂರ್ತದ ಅಳತೆಯ ವ್ಯತ್ಯಾಸಕ್ಕೆ ಅನುಗುಣವಾಗಿ ಮೂವತ್ತೆರಡು ಮೂವತ್ತು ಅಥವಾ ಇಪ್ಪತ್ತೆಂಟು ಮುಹೂರ್ತಗಳಿಗೆ ಒಂದು ದಿನವೆಂದು ಜ್ಞಾನಿಗಳು ಹೇಳುತ್ತಾರೆ ಎಂದೂ ಕಾಲನಿರ್ಣಯದಲ್ಲಿದೆ. ಈ ಮೂರು ಪಕ್ಷಗಳಲ್ಲಿಯೂ ಒಂದು ದಿವಸಕ್ಕೆ ಅರವತ್ತುಘಳಿಗೆ ಎಂಬುದು ಸಮಾನ. ಆದ್ದರಿಂದ

ಉಪನಿಷತ್ತಿನಲ್ಲಿ ಮೂವತ್ತೆರಡು ಮುಹೂರ್ತಗಳೆಂದು ಹೇಳಿದುದು ಘಳಿಗೆಯ ಎಂಟನೆ ಒಂದು ಭಾಗದಷ್ಟು ಕಡಿಮೆಯಾದ ಎರಡುಘಳಿಗೆಗಳ ಮುಹೂರ್ತದ ವಿವಕ್ಷೆಯಿಂದ.

**ಭಾಷ್ಯ—ಸಪ್ತಕೋಟಿಂ ಚ ಲಕ್ಷಾಣಾಂ ಚತುರ್ದಶ ಚ ನಿತ್ಯಶಃ ।**
**ಅಷ್ಟಾವಿಂಶತ್ಸಹಸ್ರಂ ಚ ಸಪ್ತಾಂಶ ಶತಪಂಚಕಮ್ ।**
**ಸೌರೋ ರಥಸ್ತ್ವಹೋರಾತ್ರಾತ್ ಪರಿಯಾತಿ ದಿವಿ ಸ್ಥಿತಃ ।**
**ತತ್ ತ್ರಿಭಾಗಾಧಿಕಂ ಚಕ್ರಂ ಮಾನಸೋತ್ತರಗಂ ಚರೇತ್ ।**
**ನೃಣಾಂ ಕಾರ್ತಯುಗಾನಾಂ ತು ಯೋಜನಾ ಮಾನತೋ ಭವೇತ್।**
**ಯಾವತ್ ಸೂರ್ಯರಥೋ ಯಾತಿ ದಿವಾರಾತ್ರೇಣ ಪಾರ್ಶ್ವಯೋಃ ।**
**ಸೂರ್ಯಸ್ಯ ತಾವದೇವ ಸ್ಯಾತ್ ಪ್ರಕಾಶಃ ಸರ್ವತಸ್ತಥಾ ।**
**ತತೋಽಂಧಂ ದ್ವಿಗುಣಂ ತಸ್ಮಾತ್ ಕಾಠಿನ್ಯಾತ್ ಪೃಥ್ವಿನಾಮಕಮ್ ।**
**ತತೋ ಮಂಡೋದಕಂ ಚಾಪಿ ದ್ವಿಗುಣಂ ಪರಿಕೀರ್ತಿತಮ್ ।**
**ಪಂಚಾಶತ್ಕೋಟಿವಿಸ್ತಾರಮೇವಮಂಡಾಂತರುಚ್ಯತೇ ।**
**ತತಸ್ತ್ವಂಡಂ ಚ ಸೌವರ್ಣಂ ತದ್ ಭಿನ್ನಂ ಹರಿಣಾ ಪುರಾ।**
**ಸುಷಿರಂ ಸರ್ವತೋ ದಿಕ್ಷು ಕ್ಷುರಧಾರಾಸಮಂ ತತಃ ।**
**ಸುಪರ್ಣೋ ವಾಯುನಾ ತೇನ ಮುಕ್ತಾನ್ ಕಾಮಾನ್ ಪ್ರಯಚ್ಛತಿ ।**
**ಇತಿ ತತ್ತ್ವಸಂಹಿತಾಯಾಮ್ ।**

**॥ ಇತಿ ಭುಜ್ಯು ಬ್ರಾಹ್ಮಣಂ ॥**

**ಅನುವಾದ**—ಆಕಾಶದಲ್ಲಿರುವ ಸೂರ್ಯರಥವು ಮಾನಸೋತ್ತರಪರ್ವತದ ಒಳ ಭಾಗದಲ್ಲಿ ಪ್ರತಿನಿತ್ಯವೂ ಹಗಲು ರಾತ್ರಿ ಏಳುಕೋಟಿ ಹದಿನಾಲ್ಕುಲಕ್ಷ ಇಪ್ಪತ್ತೆಂಟು ಸಾವಿರದ ಐದುನೂರು ಎಪ್ಪತ್ತೊಂದುವರೆ ಯೋಜನವನ್ನು ಕ್ರಮಿಸುತ್ತದೆ. ಮಾನಸೋತ್ತರಪರ್ವತದ ಮೇಲೆ ಸಂಚರಿಸುವ ಅದರ ಚಕ್ರವು ಮೇಲೆ ಹೇಳಿದ ಯೋಜನಕ್ಕಿಂತ ಮೂರನೇ ಒಂದರಷ್ಟು ಹೆಚ್ಚು ದೂರವನ್ನು ಕ್ರಮಿಸುತ್ತದೆ. ಇಲ್ಲಿ ಕೃತಯುಗದ ಮನುಷ್ಯರ ಅಂಗುಲಿ ಹಸ್ತಾದಿ ಅಳತೆಯಿಂದ ಇಪ್ಪತ್ತುನಾಲ್ಕು ಅಂಗುಲ ಒಂದು ಹಸ್ತ. ನಾಲ್ಕು ಹಸ್ತ ಒಂದು ದಂಡ. ಸಾವಿರ ದಂಡ ಒಂದು ಕ್ರೋಶ. ನಾಲ್ಕು ಕ್ರೋಶ ಒಂದು ಯೋಜನವೆಂದು ಯೋಜನವನ್ನು ಪರಿಗಣಿಸಬೇಕು. ಎಷ್ಟು ಯೋಜನ ಪ್ರದೇಶದಲ್ಲಿ ಒಂದು ಹಗಲು ರಾತ್ರಿ ಸೂರ್ಯರಥವು ಸೂರ್ಯನ ಎರಡು ಪಾರ್ಶ್ವಗಳಲ್ಲಿ ಸಂಚರಿಸುವುದೋ ಅಷ್ಟು ಯೋಜನ ವಿಸ್ತಾರವಾದ ಲೋಕಾಲೋಕ ಮೇರುಪರ್ವತಗಳ ನಡುವಿನ ಪ್ರದೇಶದಲ್ಲಿ ಸೂರ್ಯನ ಪ್ರಕಾಶವು ಎಲ್ಲಕಡೆ ಇರುವುದು. ಈ ಪ್ರದೇಶಕ್ಕಿಂತ ಎರಡು ಪಟ್ಟು ಹೆಚ್ಚಿನ ಪ್ರದೇಶವು ಅಂಧಂತಮಸ್ಸು. ಕಠಿಣ ವಾಗಿರುವುದರಿಂದ ಈ ಪ್ರದೇಶಕ್ಕೆ ಉಪನಿಷತ್ತಿನಲ್ಲಿ ಪೃಥ್ವಿ ಎಂದು ಹೆಸರು. ಅಂಧಂ

ತಮಸ್ಸಿಗಿಂತ ಎರಡರಷ್ಟು ಹೆಚ್ಚು ಪ್ರದೇಶದಲ್ಲಿ ಘನೋದಕವಿದೆ. ಹೀಗೆ ಬ್ರಹ್ಮಾಂಡದ ಒಳಗಿರುವ ಭಾಗವು ಐವತ್ತು ಕೋಟಿ ಯೋಜನ ವಿಸ್ತಾರವಾಗಿದೆ. ಘನೋದಕದ ಆಚೆ ಸುವರ್ಣಮಯವಾದ ಬ್ರಹ್ಮಾಂಡ ಕಟಾಹವಿದೆ. ಅದು ಹಿಂದೆ ತ್ರಿವಿಕ್ರಮ ರೂಪಿ ಶ್ರೀಹರಿಯಿಂದ ಒಡೆಯಲ್ಪಟ್ಟಿತು. ಆದ್ದರಿಂದ ಎಲ್ಲಿಡೆ ಬಿರುಕು ಇದೆ. ಅದು ಕ್ಷೌರದ ಕತ್ತಿಯಲುಗಿನಂತೆ ಸೂಕ್ಷ್ಮವಾಗಿದೆ. ಗರುಡನು ಮುಕ್ತರಾಗುತ್ತಿರುವ ಮನ್ಮಥರನ್ನು ಈ ಮಾರ್ಗದ ಮೂಲಕ ವಾಯುವಿಗೆ ಒಪ್ಪಿಸುತ್ತಾನೆ ಎಂದು ತತ್ತ್ವ ಸಂಹಿತಾ ಎಂಬ ಗ್ರಂಥದಲ್ಲಿ ಹೇಳಿದೆ.

**ವಿವರಣೆ**–ಅನುವ್ಯಾಖ್ಯಾನದಲ್ಲಿ ಕಾಮದೇವನು ಶೇಷಪತ್ನಿ ವಾರುಣಿಯಲ್ಲಿಯೂ ಅವಳು ಶೇಷನಲ್ಲಿಯೂ ಲಯಹೊಂದುವಳೆನ್ನಲಾಗಿದೆ. ಆದ್ದರಿಂದ ಕಾಮನಿಗೆ ಗರುಡನಲ್ಲಿ ಲಯವನ್ನು ಹೇಳುವ ವಿವಕ್ಷೆ ಉಪನಿಷತ್ತಿಗೆ ಉಂಟೆಂದು ತಿಳಿಯಬಾರದು. ಬ್ರಹ್ಮಾಂಡಕಟಾಹದ ರಂಧ್ರದ ಮೂಲಕ ಗರುಡನು ಮನ್ಮಥನನ್ನು ಒಯ್ಯುವನೆಂದರೆ ಅದು ಲಯವೆನಿಸುವುದೂ ಶಕ್ಯವಿಲ್ಲ. ಆದ್ದರಿಂದ ಮುಕ್ತನಾಗಲಿರುವ ಮನ್ಮಥನಿಗೆ ಗರುಡನು ತಾನು ಉಪದೇಶ ಮಾಡಿ ಬ್ರಹ್ಮಾಂಡದ ಹೊರಗೆ ಮಹತ್ತತ್ತ್ವಾವರಣದಲ್ಲಿರುವ ವಾಯುದೇವನ ಬಳಿಗೊಯ್ದು ಅವನಿಂದಲೂ ಉಪದೇಶಕೊಡಿಸುತ್ತಾನೆ. ಮುಂದೆ ಆ ಕಾಮದೇವನನ್ನು ಬ್ರಹ್ಮನು ಪ್ರದ್ಯುಮ್ನರೂಪಿ ಶ್ರೀಹರಿಯ ಬಳಿ ಇರಿಸುತ್ತಾನೆ. ಇದು ಕಾಮದೇವನ ಒಂದು ಅಂಶ ಮಾತ್ರ. ಮೂಲರೂಪವಲ್ಲ. ಲಯ ಕಾಲ ಬಂದಾಗ ಈ ಅಂಶರೂಪ ಮೂಲರೂಪದಲ್ಲಿ ಸೇರಿ ಶೇಷಪತ್ನಿ ವಾರುಣಿ ಶೇಷರ ಮೂಲಕ ಬ್ರಹ್ಮನಲ್ಲಿ ಲಯ ಹೊಂದಿಯೆ ಮುಕ್ತನಾಗಬೇಕು. ದೇವತೆಗಳ ಅಂಶಗಳು ಮನುಷ್ಯರಾಗಿ ಅವತರಿಸುವಾಗಲೂ ಆ ಅಂಶಗಳು ಅರ್ಚಿರಾದಿ ಮಾರ್ಗದಿಂದ ಹೋಗಿ ಶ್ರೀಹರಿಯ ಬಳಿಯಲ್ಲಿ ಕುಳಿತು ಲಯಕಾಲದಲ್ಲಿ ಮೂಲರೂಪದೊಂದಿಗೆ ಸೇರಿ ಸ್ವೋತ್ತಮರಲ್ಲಿ ಲಯ ಹೊಂದುತ್ತವೆ. ಪ್ರಕೃತದಲ್ಲಿಯೂ ಹಾಗೆಯೇ ಎಂದು ತಿಳಿಯಬೇಕು.

ಇಲ್ಲಿಗೆ ಭುಜ್ಯುಬ್ರಾಹ್ಮಣ ಮುಗಿಯಿತು

**ಭಗವಂತನ ಲಕ್ಷಣಗಳು :**

**ಉಪನಿಷತ್**—**ಅಥ ಹೈನಮುಷಸ್ತಶ್ಚಾಕ್ರಾಯಣಃ ಪಪ್ರಚ್ಛ । ಯಾಜ್ಞವಲ್ಕ್ಯೇತಿ ಹೋವಾಚ । ಯತ್ ಸಾಕ್ಷಾದಪರೋಕ್ಷಾದ್ ಬ್ರಹ್ಮ ಯ ಆತ್ಮಾ ಸರ್ವಾಂತರಸ್ತಂ ಮೇ ವ್ಯಾಚಕ್ಷ್ವೇತಿ। ಏಷ ತೇ ಆತ್ಮಾ ಸರ್ವಾಂತರಃ । ಕತಮೋ ಯಾಜ್ಞವಲ್ಕ್ಯ ಸರ್ವಾಂತರಃ । ಯಃ ಪ್ರಾಣೇನ ಪ್ರಾಣಿತಿ ಸ ತೇ ಆತ್ಮಾ ಸರ್ವಾಂತರಃ । ಯೋಽಪಾನೇನಾಪಾನಿತಿ ಸ ತೇ**

**ಆತ್ಮಾ ಸರ್ವಾಂತರಃ। ಯೋ ವ್ಯಾನೇನ ವ್ಯಾನಿತಿ ಸ ತೇ ಆತ್ಮಾ ಸರ್ವಾಂತರಃ । ಯ ಉದಾನೇನೋದಾನಿತಿ ಸ ತೇ ಆತ್ಮಾ ಸರ್ವಾಂತರಃ । ಏಷ ತೇ ಆತ್ಮಾ ಸರ್ವಾಂತರಃ ।**

ಅನಂತರ ಚಕ್ರ್ರನ ಮಗ ಉಷಸ್ತನು ಕೇಳಿದನು, 'ಯಾಜ್ಞವಲ್ಕ್ಯರೇ ಯಾರು ಬೇರೆಯವರ ಸಹಾಯವಿಲ್ಲದೆ ನೇರವಾಗಿ ತನ್ನ ಸ್ವರೂಪವನ್ನು ಮತ್ತು ಪ್ರಪಂಚದ ಎಲ್ಲ ವಸ್ತುಗಳನ್ನು ತಾನೇ ಅನುಭವದಿಂದ ಅರಿತುಕೊಳ್ಳುವನೋ, ಸರ್ವಗುಣ ಪೂರ್ಣನೋ, ಸರ್ವ ನಿಯಾಮಕನೋ, ಸರ್ವಶಕ್ತನೋ ಆ ಪರಮಾತ್ಮನ ಬಗ್ಗೆ ನನಗೆ ಹೇಳಿರಿ' ಎಂದು. 'ನಿನ್ನ ನಿಯಾಮಕನಾದ ಸರ್ವಶಕ್ತ ಪರಮಾತ್ಮನು ಇವನೇ' ಎಂದು ಯಾಜ್ಞವಲ್ಕ್ಯರು ಹೇಳಿದರು. 'ಯಾರು ಆ ಸರ್ವಶಕ್ತ ಪರಮಾತ್ಮ, ಯಾಜ್ಞವಲ್ಕ್ಯರೇ?' 'ಯಾರು ಪ್ರಾಣನಾಮಕ ಮುಖ್ಯವಾಯುರೂಪದ ಮೂಲಕ ಲೋಕಕ್ಕೆ ಉಸಿರಾಟದ ಕ್ರಿಯೆಯನ್ನು ಕೊಡುವವನೋ ಅವನೇ ನಿನ್ನ ನಿಯಾಮಕನಾದ ಸರ್ವಶಕ್ತ ಪರಮಾತ್ಮ. ಯಾರು ಅಪಾನನಾಮಕ ಮುಖ್ಯವಾಯು ರೂಪದ-ಮೂಲಕ ಲೋಕಕ್ಕೆ ಮಲವಿಸರ್ಜನೆ ಕ್ರಿಯೆಯನ್ನು ಮಾಡಿಸುವನೋ ಅವನೇ ನಿನ್ನ ನಿಯಾಮಕನಾದ ಸರ್ವಶಕ್ತ ಪರಮಾತ್ಮ. ಯಾರು ವ್ಯಾನನಾಮಕ ಮುಖ್ಯ ವಾಯು ರೂಪದ ಮೂಲಕ ಶರೀರದಲ್ಲಿ ಆಹಾರವನ್ನು ಆಯಾ ಅಂಗಗಳಿಗೊಯ್ಯುವನೋ ಅವನೇ ನಿನ್ನ ನಿಯಾಮಕನಾದ ಸರ್ವಶಕ್ತ ಪರಮಾತ್ಮ. ಯಾರು ಉದಾನನಾಮಕ ಮುಖ್ಯವಾಯುರೂಪದ ಮೂಲಕ ವಾಯುವನ್ನು ಊರ್ಧ್ವಮುಖಿಗೊಳಿಸುವನೋ ಅವನೇ ನಿನ್ನ ನಿಯಾಮಕನಾದ ಸರ್ವಶಕ್ತ ಪರಮಾತ್ಮ. ಯಾರು ಸಮಾನನಾಮಕ ಮುಖ್ಯವಾಯುರೂಪದಿಂದ ಶರೀರದಲ್ಲಿ ಎಲ್ಲ ಅಂಗಗಳಿಗೂ ಸಮಾನವಾಗಿ ಆಹಾರ ವನ್ನೊಯ್ಯುವನೋ ಅವನೇ ನಿನ್ನ ನಿಯಾಮಕನಾದ ಸರ್ವಶಕ್ತ ಪರಮಾತ್ಮ.

**ಭಾಷ್ಯ—ಯತ್ 'ಸಾಕ್ಷಾದಪರೋಕ್ಷಾತ್' ಸಾಕ್ಷಾದೇನಾಪರೋಕ್ಷಂ ಆತ್ಮಾ ಅನುಭವತಿ ಸ್ವರೂಪಮ್ ಅನ್ಯಚ್ಚ ಸರ್ವಂ ಪಶ್ಯತೀತಿ ಸಾಕ್ಷಾದಪರೋಕ್ಷಾತ್ ।**

**ಅಪರೋಕ್ಷ್ಯೇಣ ಪಶ್ಯತಾಮಪ್ಯನ್ಯೇಷಾಂ ಭಗವತ್ಪ್ರಸಾದಾದೇವ ದರ್ಶನಂ ಭವತಿ, ನ ಭಗವತೋಽನ್ಯಾಪೇಕ್ಷಯೇತಿ ಸಾಕ್ಷಾದಿತಿವಿಶೇಷಣಂ। ಅನನ್ಯಾಪೇಕ್ಷಸ್ಯಾಪ್ಯಪೂರ್ಣತ್ವಂ ಭವತೀತ್ಯತೋ ಬ್ರಹ್ಮೇತಿ ।**

**ಅನುವಾದ**—ಯತ್ ಸಾಕ್ಷಾದಪರೋಕ್ಷಾತ್ ಎಂದರೆ ಯಾರು ಸ್ವತಃ ಅನುಭವ ದಿಂದ ನೇರವಾಗಿ ತನ್ನ ಸ್ವರೂಪವನ್ನು ತಿಳಿಯಬಲ್ಲನೋ ಮತ್ತು ಬೇರೆ ಎಲ್ಲವನ್ನೂ ಪ್ರತ್ಯಕ್ಷವಾಗಿ ನೋಡುತ್ತಾನೋ ಅಂಥ ಪರಮಾತ್ಮನು, ಸಾಕ್ಷಾದಪರೋಕ್ಷಾತ್ ಎನಿಸು ತ್ತಾನೆ.

ತಮ್ಮ ಸ್ವರೂಪವನ್ನೂ ಬೇರೆ ವಸ್ತುಗಳನ್ನೂ ಪ್ರತ್ಯಕ್ಷವಾಗಿ ಇತರರೂ ನೋಡು ತ್ತಾರೆ. ಆದರೆ ಭಗವಂತನ ಅನುಗ್ರಹದಿಂದ ಅವರು ಹಾಗೆ ನೋಡಬಲ್ಲರು. ಭಗವಂತನಿಗೆ ಯಾರ ಅನುಗ್ರಹವೂ ಬೇಡ. ಈ ವಿಷಯವನ್ನು ತಿಳಿಸುವುದಕ್ಕಾಗಿ ಅಪರೋಕ್ಷಾತ್ ಎನ್ನುವ ಪದಕ್ಕೆ ಸಾಕ್ಷಾತ್ ಎಂದು ವಿಶೇಷಣವು ಮಂತ್ರದಲ್ಲಿದೆ.

ಯಾವುದಾದರೊಂದು ವಿಷಯದಲ್ಲಿ ಪರಾವಲಂಬನೆ ಇಲ್ಲದವನಿಗೂ ಅಪೂರ್ಣತೆ ಇದ್ದೇ ಇರುತ್ತದೆ. ಎಲ್ಲ ವಿಷಯದಲ್ಲಿ ಸ್ವಾವಲಂಬಿಯಾದರೂ ಪೂರ್ಣನಾಗಬೇಕೆಂದಿಲ್ಲ. ಆದ್ದರಿಂದ ಪರಮಾತ್ಮನು ಅಪೂರ್ಣನೇ ಎನ್ನುವ ಸಂಶಯವನ್ನು ಪರಿಹರಿಸಲು ಪೂರ್ಣ ಎಂಬ ಅರ್ಥದ ಬ್ರಹ್ಮ ಎನ್ನುವ ಪದವು ಮಂತ್ರದಲ್ಲಿ ಸಾರ್ಥಕವಾಗಿದೆ.

**ಭಾಷ್ಯ—ಅನ್ಯೇಷಾಂ ನಿಯಂತೃತ್ವಂ ಚಾಸ್ತೀತ್ಯತ ಆತ್ಮಾ। ಅನ್ಯನಿಯಂತೃತ್ವೇ-ಪ್ಯನ್ಯಾಪೇಕ್ಷಾ ನಾಸ್ತೀತ್ಯತಃ ಸರ್ವಾಂತರಃ। ಸರ್ವಂಸಾಮರ್ಥ್ಯಂ ಸ್ವಾಂತರೇವಾಸ್ತೀತಿ।**

**ಅನುವಾದ**—ಪರಮಾತ್ಮನು ಜೀವನಲ್ಲ, ಜೀವರಾದ ಅನ್ಯರಿಗೆ ಅವನು ನಿಯಾಮಕನಾಗಿದ್ದಾನೆಂದು ತಿಳಿಸುವುದಕ್ಕೆ ನಿಯಾಮಕ ಎಂಬ ಅರ್ಥದ ಆತ್ಮಾ ಎನ್ನುವ ಪದವಿದೆ. ಪರಮಾತ್ಮನ ಅನ್ಯನಿಯಾಮಕತ್ವವೂ ಪರಾಧೀನವಲ್ಲ ಎಂದು ತಿಳಿಸುವುದಕ್ಕಾಗಿ ಸರ್ವಾಂತರಃ ಎನ್ನುವ ಪದವಿದೆ. ಎಲ್ಲ ಸಾಮರ್ಥ್ಯವೂ ಪರಮಾತ್ಮನಿಗೆ ತನ್ನೊಳಗೇ ಇದೆ, ಇನ್ನೊಬ್ಬರ ಅಪೇಕ್ಷೆ ಇಲ್ಲ ಎಂದು ಈ ಪದದ ಅರ್ಥ.

**ಭಾಷ್ಯ—ಜೀವೇಶ್ವರಾಭೇದನಿವೃತ್ತ್ಯರ್ಥಂ ತೇ ಆತ್ಮೇತಿ। ಸಾಕ್ಷಾದಪರೋಕ್ಷ-ತ್ವಾದಿಗುಣೈರೇವ ಭೇದೇ ಸಿದ್ಧೇಽಪಿ ಪರಮಾರ್ಥತೋ ಜೀವೇಶ್ವರಾಭೇದ ನಿವೃತ್ತ್ಯರ್ಥಃ 'ತೇ ಆತ್ಮಾ'ಇತಿ। ತತ್ರ ಪ್ರಧಾನತಾತ್ಪರ್ಯಜ್ಞಾಪನಾರ್ಥಂ ಪುನಃ ಪುನರಭ್ಯಾಸಃ।**

**ಅನುವಾದ**—ಪ್ರಶ್ನೆ ಕೇಳಿದ ಉಷಸ್ತರು ಜೀವ-ಬ್ರಹ್ಮರಿಗೆ ಐಕ್ಯವಿದೆ ಎಂದು ಭಾವಿಸಿ ಜೀವಸ್ವರೂಪವನ್ನೇ ಕೇಳಿದ್ದಾರೆ ಎಂದು ಕೆಲವರಿಗೆ ಭ್ರಾಂತಿ ಬರಬಹುದು. ಇದರ ಪರಿಹಾರಕ್ಕಾಗಿ ಯಾಜ್ಞವಲ್ಕ್ಯರು ಉತ್ತರ ಕೊಡುವಾಗ 'ತೇ ಆತ್ಮಾ', 'ನಿನ್ನ ನಿಯಾಮಕ' ಎಂದು ಹೇಳಿದ್ದಾರೆ. ಸಾಕ್ಷಾದಪರೋಕ್ಷತ್ವ ಮೊದಲಾದ ಗುಣ ಗಳಿಂದಲೇ ಜೀವ-ಬ್ರಹ್ಮರಲ್ಲಿ ಭೇದ ಸಿದ್ಧವಾದರೂ ಈ ಗುಣಗಳು ವ್ಯಾವಹಾರಿಕ, ಪಾರಮಾರ್ಥಿಕವಾಗಿ ಅಭೇದವೇ ಇದೆ ಎಂದು ತಿಳಿಯಬಾರದೆಂದು. 'ತೇ ಆತ್ಮಾ' ನಿನ್ನ ನಿಯಾಮಕ ಎಂದು ಹೇಳಿದ್ದಾರೆ.

ನಿಯಾಮಕತ್ವವೂ ವ್ಯಾವಹಾರಿಕವೇ ಏಕಾಗಿರಬಾರದು ಎಂಬ ಸಂದೇಹಕ್ಕೆ ಉತ್ತರವಾಗಿ ಜೀವೇಶ್ವರ ಭೇದದಲ್ಲಿಯೇ ಈ ಮಂತ್ರಕ್ಕೆ ಮುಖ್ಯತಾತ್ಪರ್ಯವಿದೆ ಎಂದು ತಿಳಿಸುವುದಕ್ಕಾಗಿ 'ತೇ ಆತ್ಮಾ ಸರ್ವಾಂತರಃ' ಎಂದು ಪುನಃ ಪುನಃ ಹೇಳಿದೆ. ಶ್ರುತಿಯ ಮುಖ್ಯ ತಾತ್ಪರ್ಯಕ್ಕೆ ಗೋಚರವಾದ ಜೀವೇಶ್ವರ ಭೇದವು ಪಾರಮಾರ್ಥಿಕವೇ ಇರಬೇಕಾಗುತ್ತದೆ.

**ಉಪನಿಷತ್—ಸ ಹೋವಾಚೋಷಸ್ತಶ್ಚಾಕ್ರಾಯಣಃ ಯಥಾ ವಿಬ್ರೂಯಾದ್ ಅಸೌ ಗೌರಸಾವಶ್ವ ಇತ್ಯೇವಮೇವೈತದ್ ವ್ಯಪದಿಷ್ಟಂ ಭವತಿ । ಯದೇವ ಸಾಕ್ಷಾದಪರೋಕ್ಷಾದ್ ಬ್ರಹ್ಮ ಯ ಆತ್ಮಾ ಸರ್ವಾಂತರಸ್ತಮೇವ ಮೇ ವ್ಯಾಚಕ್ಷ್ವ ಇತಿ । ಏಷ ತೇ ಆತ್ಮಾ ಸರ್ವಾಂತರಃ । ಕತಮೋ ಯಾಜ್ಞ-ವಲ್ಕ್ಯ ಸರ್ವಾಂತರಃ । ನ ದೃಷ್ಟೇರ್ದ್ರಷ್ಟಾರಂ ಪಶ್ಯೇಃ । ನ ಶ್ರುತೇಃ ಶ್ರೋತಾರಂ ಶೃಣುಯಾಃ । ನ ಮತೇರ್ಮಂತಾರಂ ಮನ್ವೀಥಾಃ । ನ ವಿಜ್ಞಾತೇರ್ವಿಜ್ಞಾತಾರಂ ವಿಜಾನೀಯಾಃ । ಏಷ ತೇ ಆತ್ಮಾ ಸರ್ವಾಂ-ತರಃ । ಅತೋಽನ್ಯದಾರ್ತಮ್ । ತತೋ ಹ ಉಷಸ್ತಶ್ಚಾಕ್ರಾಯಣ ಉಪರರಾಮ ॥ ಇತಿ ಉಷಸ್ತ ಬ್ರಾಹ್ಮಣಂ॥**

ಚಕ್ರ ರ ಮಗ ಉಷಸ್ತನು ಹೇಳಿದನು'ಹಸು, ಕುದುರೆ ಮುಂತಾದವುಗಳ ಲಕ್ಷಣವನ್ನು ಕೇಳಿದಾಗ, ನಾಲ್ಕು ಕಾಲುಗಳುಳ್ಳದ್ದು ಹಸು, ನಾಲ್ಕು ಕಾಲುಗಳುಳ್ಳದ್ದು ಕುದುರೆ ಎಂದು ಮುಂತಾಗಿ ಹೇಳಿದರೆ ಹೇಗೆ ಲಕ್ಷಣವು ಅತಿವ್ಯಾಪ್ತಿದೋಷದಿಂದಾಗಿ ಅಸಮರ್ಪಕವಾಗುವುದೋ ಹಾಗೆ ನೀವು ಹೇಳಿದ ಪರಮಾತ್ಮ ಲಕ್ಷಣವೂ ಬ್ರಹ್ಮ-ರುದ್ರಾದಿಗಳಲ್ಲಿ ಬರಬಹುದಾದ್ದರಿಂದ ಅಸಮರ್ಪಕವಾಗಿದೆ ಆದ್ದರಿಂದ ಯಾರು ಬೇರೆಯವರ ಸಹಾಯವಿಲ್ಲದೆ ನೇರವಾಗಿ ತನ್ನ ಸ್ವರೂಪವನ್ನು ಮತ್ತು ಇತರ ವಸ್ತುಗಳನ್ನು ಅನುಭವದಿಂದ ಅರಿಯಬಲ್ಲನೋ ಅಂಥ ಸರ್ವಗುಣಪೂರ್ಣ, ಸರ್ವನಿಯಾಮಕ ಸರ್ವಶಕ್ತ ಪರಮಾತ್ಮನಿಗೆ ಮಾತ್ರ ಅನ್ವಯವಾಗುವ ಲಕ್ಷಣವನ್ನು ಹೇಳಿರಿ'. ಯಾಜ್ಞವಲ್ಕ್ಯರು ಹೇಳಿದರು, 'ನಿನ್ನ ನಿಯಾಮಕನಾದ ಸರ್ವಶಕ್ತ ಪರಮಾತ್ಮ ಇವನೇ'. 'ಯಾಜ್ಞವಲ್ಕ್ಯರೆ, ಯಾರು ಈ ಸರ್ವಶಕ್ತ?' 'ಎಲ್ಲವನ್ನೂ ಕಣ್ಣಿಂದ ನೋಡುವ ಅವನನ್ನು ನೀನು ಕಣ್ಣಿಂದ ನೋಡಲಾರೆ. ಎಲ್ಲವನ್ನೂ ಕಿವಿಯಿಂದ ಕೇಳುವ ಅವನನ್ನು ನೀನು ಕಿವಿಯಿಂದ ಕೇಳಲಾರೆ. ಎಲ್ಲವನ್ನೂ ಮನಸ್ಸಿನಿಂದ ತಿಳಿಯುವ ಅವನನ್ನು ನೀನು ಮನಸ್ಸಿನಿಂದ ತಿಳಿಯಲಾರೆ. ಎಲ್ಲವನ್ನೂ ಬುದ್ಧಿಯಿಂದ ತಿಳಿಯುವ ಅವನನ್ನು ನೀನು ಬುದ್ಧಿಯಿಂದ ತಿಳಿಯಲಾರೆ. ಇವನೇ ಸರ್ವನಿಯಾಮಕ, ಸರ್ವಶಕ್ತ. ಸರ್ವೇಂದ್ರಿಯಗಳಿಗೆ ಅಗೋಚರನಾಗಿರುವುದು ಇವನೊಬ್ಬನಿಗೇ

ಅನ್ವಯಿಸುವ ಅಸಾಧಾರಣ ಲಕ್ಷಣ. ಅಕಾರವಾಚ್ಯನಾದ ಇವನನ್ನು ಬಿಟ್ಟು ಬೇರೆ ಎಲ್ಲರೂ ದುಃಖಿಗಳು. ಅವರಲ್ಲಿ ಲಕ್ಷಣಕ್ಕೆ ಅತಿವ್ಯಾಪ್ತಿ ಬರಲಾರದು'. ಹೀಗೆ ಹೇಳಿ ಉಷಸ್ತನು ವಿರಮಿಸಿದನು.

**ಭಾಷ್ಯ—ದೇವತಾಂತರಸ್ಯಾಪೀದಂ ಲಕ್ಷಣಂ ಸಮಾನಮಿತಿ ಪೃಚ್ಛತಿ । ಯಥಾ ವಿಬ್ರೂಯಾದಿತ್ಯಾದಿನಾ । ಚತುಷ್ಪಾತ್ತ್ವಾದಿ ಲಕ್ಷಣಂ ಗೋರಶ್ವಸ್ಯಾಪಿ ಯಥಾ ಸಮಂ ಏವಮೇವ ಸಾಕ್ಷಾದಪರೋಕ್ಷತ್ವಾದಿ ಲಕ್ಷಣಂ ತತ್ತದ್ದೇವತಾವಾದಿಭಿಸ್ತಸ್ಯಾಸ್ತಸ್ಯಾ ಅಂಗೀಕ್ರಿಯತ ಏವ । ಅತೋ ವಿಶೇಷನಾಮ ವಕ್ತಿ ಅಃ ಇತಿ ।**

**ಅತೋಽನ್ಯದ್ ವಿಷ್ಣೋರನ್ಯದ್ ಆರ್ತಂ । ಅ ಇತಿ ವಿಷ್ಣೋರ್ಹಿನಾಮ ।**

**ಅನುವಾದ**-ಮುಖ್ಯವಾಯುಪ್ರೇರಕತ್ವವೆಂಬ ಈ ಲಕ್ಷಣ ಬೇರೆ ದೇವತೆಗಳಲ್ಲಿಯೂ ಸಮಾನವಾಗಿ ಅನ್ವಯಿಸುವಂಥದ್ದು ಎಂಬ ಅಭಿಪ್ರಾಯದಿಂದ ಉಷಸ್ತರು ಕೇಳುತ್ತಾರೆ 'ಯಥಾ ವಿಬ್ರೂಯಾತ್' ಎಂದು ಮುಂತಾಗಿ. ನಾಲ್ಕು ಕಾಲುಗಳು ಮೊದಲಾದ ಲಕ್ಷಣವು ಹಸು ಕುದುರೆಗಳೆರಡಕ್ಕೂ ಹೇಗೆ ಸಮನಾಗಿ ಅನ್ವಯಿಸುವುದೋ ಹಾಗೆಯೇ ಮುಖ್ಯವಾಯುಪ್ರೇರಕತ್ವರೂಪವಾದ ಲಕ್ಷಣವು ಬ್ರಹ್ಮ ರುದ್ರ ಮೊದಲಾದ ದೇವತೆಗಳಿಗೂ ಅವರನ್ನು ಸರ್ವೋತ್ತಮರೆಂದು ಹೇಳುವ ಮತದಲ್ಲಿ ಸಮಾನವಾಗಿ ಅನ್ವಯಿಸುತ್ತದೆ. ಆದ್ದರಿಂದ ವಿಶೇಷವಾಗಿ ವಿಷ್ಣುವಿಗೆ ಮಾತ್ರ ಅನ್ವಯಿಸುವ 'ಅ' ಎಂಬ ನಾಮವನ್ನು ಹೇಳುತ್ತಾರೆ 'ಅತಃ' ಎಂದು.

ಅತೋಽನ್ಯದ್ ಎಂದರೆ ವಿಷ್ಣುವಿಗಿಂತ ಬೇರೆಯಾದ ದೇವತೆಗಳು ದುಃಖಿಗಳು ಎಂದರ್ಥ. 'ಅ' ಎನ್ನುವುದು ವಿಷ್ಣುವಿನ ಹೆಸರೆನ್ನುವುದು ಅಕಾರನಾಮಾ ನಾನ್ಯೋಽಸ್ತಿ ತಸ್ಮಾತ್ ಪುರುಷೋತ್ತಮಂ ಎಂದು ಮುಂತಾಗಿ ಪ್ರಸಿದ್ಧವೇ ಇದೆ.

**ಭಾಷ್ಯ—'ನ ತೇ ವಿಷ್ಣೋ' 'ಪರೋ ಮಾತ್ರಯಾ' ಇತ್ಯಾದಿ ಶ್ರುತಿಪ್ರಸಿದ್ಧಂ ವಿಷ್ಣೋರ್ಲಕ್ಷಣಂ 'ನ ದೃಷ್ಟೇರ್ದ್ರಷ್ಟಾರಂ' ಇತ್ಯಾದಿನಾ ವಕ್ತಿ ।**

**ಅನುವಾದ**–'ನ ತೇ ವಿಷ್ಣೋ ಜಾಯಮಾನೋ ನ ಜಾತೋ ದೇವ ಮಹಿಮ್ನಃ ಪರಮಂತಮಾಪ', 'ಪರೋ ಮಾತ್ರಯಾ ತನ್ವಾ ವೃಧಾನ ನ ತೇ ಮಹಿತ್ವಮನ್ವಶ್ನುವಂತಿ' ಮೊದಲಾದ ಶ್ರುತಿಗಳಲ್ಲಿ ವಿಷ್ಣುವಿನಲ್ಲಿ ಮಾತ್ರ ಇರುವುದೆಂದು ಪ್ರಸಿದ್ಧವಾದ ಇಂದ್ರಿಯಾಗೋಚರತ್ವರೂಪವಾದ ಲಕ್ಷಣವನ್ನು 'ನ ದೃಷ್ಟೇರ್ದ್ರಷ್ಟಾರಂ' ಇತ್ಯಾದಿ ವಾಕ್ಯಗಳಿಂದ ಉಪನಿಷತ್ತು ಹೇಳುತ್ತದೆ.

ಭಾಷ್ಯ—ವಿನೈವಾನ್ಯಪ್ರಸಾದೇನ ಪೂರ್ಣಸರ್ವಗುಣಾತ್ಮಕಮ್ ।
ಪಶ್ಯನ್ನನುಭವತ್ಯೇವ ಸ್ವರೂಪಂ ಕೇಶವಃ ಪ್ರಭುಃ ।
ಪಶ್ಯತ್ಯವ್ಯವಧಾನೇನ ಸರ್ವಂ ಚಾನ್ಯಜ್ಜಡಾಜಡಮ್ ।
ಸಾಕ್ಷಾದೇವಾಪರೋಕ್ಷಾತ್ ಸ ವಿಷ್ಣುರೇವ ತತಃ ಸ್ಮೃತಃ ।
ಸಾಕ್ಷಾಚ್ಛಬ್ದಃ ಸ್ವತಂತ್ರತ್ವಮುಪರೋಕ್ಷಸ್ತ್ವನಾವೃತಿಮ್ ।
ಆದನಂ ಭೋಗ ಉದ್ದಿಷ್ಟಸ್ತಸ್ಮಾದ್ ವಿಷ್ಣುಸ್ತಥಾ ಸ್ಮೃತಃ ।

**ಅನುವಾದ**—ಪ್ರಭು ಶ್ರೀಹರಿಯು ಪೂರ್ಣಸರ್ವಗುಣಾತ್ಮಕವಾದ ತನ್ನ ಸ್ವರೂಪವನ್ನು ಬೇರೆಯವರ ಅನುಗ್ರಹವಿಲ್ಲದೆಯೆ ನೋಡಿ ಅನುಭವಿಸುತ್ತಾನೆ. ಚೇತನಾಚೇತನಾತ್ಮಕವಾದ ಸಕಲ ಜಗತ್ತನ್ನೂ ಬೇರೆಯವರ ಅನುಗ್ರಹವಿಲ್ಲದೆ ತಾನೇ ನೇರವಾಗಿ ನೋಡುತ್ತಾನೆ. ಆದ್ದರಿಂದಲೇ ವಿಷ್ಣುವು ಸಾಕ್ಷಾದ್ ಅಪರೋಕ್ಷಾದ್ ಎನಿಸಿದ್ದಾನೆ. ಆದ್ದರಿಂದ ಶ್ರುತಿಯಲ್ಲಿ ಸಾಕ್ಷಾತ್ ಎಂಬ ಶಬ್ದವು ಬೇರೆಯವರ ಅನುಗ್ರಹವಿಲ್ಲದೆ ಪ್ರವೃತ್ತಿಮಾಡುವ ಸ್ವಾತಂತ್ರ್ಯವನ್ನೂ, ಅಪರೋಕ್ಷ ಶಬ್ದವು ಆವರಣವಿಲ್ಲದೆ ಪ್ರತ್ಯಕ್ಷಯೋಗ್ಯವಾಗಿರುವ ಸ್ಥಿತಿಯನ್ನೂ ಹೇಳುತ್ತದೆ. 'ಆದ್' ಎಂದರೆ ಅನುಭವ. ಆದ್ದರಿಂದ ವಿಷ್ಣುವಿಗೆ ಸಾಕ್ಷಾದ್ ಅಪರೋಕ್ಷಾದ್ ಎಂಬ ಹೆಸರು.

ಭಾಷ್ಯ—ಬ್ರಹ್ಮಾಸೌ ಗುಣಪೂರ್ಣತ್ವಾದಾತ್ಮಾ ಸರ್ವನಿಯಂತೃತಃ ।
ಅನಿಯಮ್ಯತ್ವತೋ ನಿತ್ಯಂ ಸರ್ವೈಃ ಸರ್ವಾಂತರಃ ಸ್ಮೃತಃ ।
ಪ್ರಾಣಾದಿ ಪಂಚರೂಪೋ ಯೋ ವಾಯುಃ ಸರ್ವನಿಯಾಮಕಃ ।
ನಿಯಂತಾ ಪರಮೋ ವಿಷ್ಣುರ್ವಾಯೋಸ್ತಸ್ಯಾಪಿ ಸರ್ವದಾ ।

**ಅನುವಾದ**—ವಿಷ್ಣುವು ಗುಣಪೂರ್ಣನಾದುದರಿಂದ ಬ್ರಹ್ಮ ಎಂದೂ ಸರ್ವನಿಯಾಮಕನಾದುದರಿಂದ 'ಆತ್ಮಾ' ಎಂದೂ ಯಾವ ಕಾಲದಲ್ಲೂ ಯಾರಿಂದಲೂ ನಿಯಂತ್ರಿಸಲ್ಪಡುವುದಿಲ್ಲವಾದ್ದರಿಂದ 'ಸರ್ವಾಂತರ' ಎಂದೂ ಹೇಳಲ್ಪಟ್ಟಿದ್ದಾನೆ. ಪ್ರಾಣ ಮೊದಲಾದ ಐದು ರೂಪಗಳುಳ್ಳ ಯಾವ ವಾಯುವು ಸರ್ವನಿಯಾಮಕನಾಗಿರುವನೋ ಆ ವಾಯುವಿಗೂ ಸರ್ವೋತ್ತಮನಾದ ವಿಷ್ಣುವು ಸರ್ವದಾ ನಿಯಾಮಕನಾಗಿದ್ದಾನೆ.

ಭಾಷ್ಯ—ನ ದೃಶ್ಯಶ್ಚಕ್ಷುಷಾ ಚಾಸೌ ನ ಮನೋಬುದ್ಧಿಗೋಚರಃ ।
ಅನಂತತ್ವಾನ್ಮಹಾವಿಷ್ಣುರವಾಚ್ಯೋಽಶ್ರಾವ್ಯ ಏವ ಚ ।

**ಅನುವಾದ**—ಮಹಾವಿಷ್ಣುವು ಕಣ್ಣಿನಿಂದ ನೋಡಲು ಸಿಗುವುದಿಲ್ಲ. ಮನಸ್ಸು

ಬುದ್ಧಿಗಳಿಗೂ ಗೋಚರನಾಗುವುದಿಲ್ಲ. ಕಾಲ ದೇಶ ಗುಣಗಳಿಂದ ಅನಂತನಾದುದರಿಂದ ಅವನನ್ನು ಪೂರ್ಣವಾಗಿ ವರ್ಣಿಸಲೂ ಶ್ರವಣದಿಂದ ಅರಿಯಲೂ ಸಾಧ್ಯವಿಲ್ಲ.

**ಭಾಷ್ಯ—ಯದ್ಯಪ್ಯೇತೇ ಗುಣಾಃ ಸರ್ವೇ ವಿಷ್ಣೋರೇವ ನ ಚಾನ್ಯಗಾಃ ।**
**ತಥಾಪ್ಯೇತೈರ್ಗುಣೈರ್ಯುಕ್ತಾನಜ್ಞಾಃ ಪ್ರಾಹುಃ ಶಿವಾದಿಕಾನ್ ।**
**ಅನಾಮ್ನೈವ ತತೋ ವಿಷ್ಣುಮಾಹುರ್ವೇದಾ ಅದೋಷತಃ।**
**ಅದೋಷತ್ವಾದ್ ಗುಣೋದ್ರೇಕಾದ್ ಅ ಇತ್ಯುಕ್ತೋ ಹರಿಃ ಸ್ವಯಂ**
**ಅಗಮ್ಯಾತ್ವಾಚ್ಚ ಬುಧ್ಧ್ಯಾದೇಃ...............।**

**ಅನುವಾದ**—ಸರ್ವನಿಯಾಮಕತ್ವ ಮೊದಲಾದ ಈ ಗುಣಗಳು ವಸ್ತುತಃ ವಿಷ್ಣುವಿನಲ್ಲಿ ಮಾತ್ರ ಇವೆ. ಬೇರೆಯವರಲ್ಲಿ ಇಲ್ಲ. ಆದರೆ ಅಜ್ಞಾನಿಗಳು ಶಿವ ಮೊದಲಾದವರಲ್ಲಿ ಈ ಗುಣಗಳಿವೆಯೆಂದು ಹೇಳುತ್ತಾರೆ. ಆದ್ದರಿಂದ ಅತೋಽನ್ಯ-ದಾರ್ತಂ ಎಂದು ಮುಂತಾಗಿ ವೇದಗಳು ವಿಷ್ಣುವನ್ನು, ಅವನು ದೋಷರಹಿತನಾದುದರಿಂದ 'ಅ' ಎಂಬ ಹೆಸರಿನಿಂದಲೇ ಹೇಳುತ್ತವೆ. ದೋಷರಹಿತನಾದುದರಿಂದಲೂ, ಗುಣಪೂರ್ಣನಾದುದರಿಂದಲೂ, ಬುದ್ಧಿಗೆ ನಿಲುಕದವನಾದುದರಿಂದಲೂ ವಿಷ್ಣು ಒಬ್ಬನೇ 'ಅ' ಎನಿಸುತ್ತಾನೆ.

**ಭಾಷ್ಯ—............ಅತೋಽನ್ಯೇ ಸರ್ವ ಏವ ತು ।**
**ಬ್ರಹ್ಮರುದ್ರಾದಯೋ ಜೀವಾ ದುಃಖಿನಃ.........।**

**ಅನುವಾದ**—'ಅತೋಽನ್ಯದಾರ್ತಂ' ಎಂದರೆ ವಿಷ್ಣುವಿಗಿಂತ ಇತರರಾದ ಬ್ರಹ್ಮ ರುದ್ರ ಮೊದಲಾದ ಎಲ್ಲ ಜೀವರೂ ದುಃಖಿಗಳು ಎಂದರ್ಥ.

**ಭಾಷ್ಯ—...............ತತ್ಪ್ರಸಾದತಃ ।**
**ದುಃಖಮುಕ್ತಾ ನಿಜಾನಂದಂ ಪ್ರಾಪ್ನುಯುರ್ನಿತ್ಯಮಂಜಸಾ ।**
**ಮುಕ್ತಾನಾಮಪಿ ಸರ್ವೇಷಾಂ ವಿಷ್ಣುರೇವ ನಿಯಾಮಕಃ ।**
**ಪೂರ್ಣಾನಂದಸ್ಯ ತಸ್ಯೈವ ಮುಕ್ತಾ ವಿಪ್ರುಟ್ಸುಖಾತ್ಮಕಾಃ ।**

**ಅನುವಾದ**—ಕಹೋಳಬ್ರಾಹ್ಮಣದಲ್ಲಿರುವ ಏತಂ ವೈ ತಮಾತ್ಮಾನಂ ವಿದಿತ್ವಾ ಬ್ರಾಹ್ಮಣಾಃ ಎಂಬ ಭಾಗಕ್ಕೆ, ವಿಷ್ಣುವಿನ ಪ್ರಸಾದದಿಂದ ದುಃಖಮುಕ್ತರಾದವರು ಶಾಶ್ವತ ಸ್ವರೂಪಾನಂದವನ್ನು ಚೆನ್ನಾಗಿ ಅನುಭವಿಸುವರು ಎಂದರ್ಥ. ಅಥ ಭಿಕ್ಷಾ ಚರ್ಯಂ ಚರಂತಿ ಎಂದರೆ ವಿಷ್ಣುವೇ ಎಲ್ಲ ಮುಕ್ತರಿಗೂ ನಿಯಾಮಕ. ಮುಕ್ತರು ಪೂರ್ಣಾನಂದ ಸ್ವರೂಪನಾದ ಆ ವಿಷ್ಣುವಿನಿಂದ ಅವನ ಸುಖಕ್ಕಿಂತ ಅತ್ಯಲ್ಪವಾದ ತಮ್ಮ ಸ್ವರೂಪ ಸುಖವನ್ನು ಹೊಂದುತ್ತಾರೆ.

**ಭಾಷ್ಯ—ತಾರತಮ್ಯೇನ ತಿಷ್ಠಂತಿ ಬ್ರಹ್ಮಾ ತೇಷ್ವಧಿಕಃ ಸದಾ ।**
**ಯಥಾ ಚಂದ್ರಾತ್ ಸದಾ ಭಿನ್ನಾಃ ಸರ್ವೇ ತುಹಿನ ಬಿಂದವಃ ।**
**ಏವಂ ವಿಷ್ಣೋಃ ಸದಾ ಭಿನ್ನಾ ಮುಕ್ತಾ ಬ್ರಹ್ಮಾದಿಕಾ ಗಣಾಃ ।**

**ಅನುವಾದ**—ಗಾರ್ಗಿ ಬ್ರಾಹ್ಮಣದಲ್ಲಿ ಹೇಳುವಂತೆ ಮುಕ್ತರಲ್ಲಿ ಯಾವಾಗಲೂ ತಾರತಮ್ಯವಿದೆ. ಅವರಲ್ಲಿ ಬ್ರಹ್ಮನೇ ಶ್ರೇಷ್ಠ. ಹಿಮಕಣಗಳು ಚಂದ್ರನಿಂದ ಹೇಗೆ ಸದಾ ಭಿನ್ನವಾಗಿರುವುವೋ ಹಾಗೆಯೇ ಚತುರ್ಮುಖಬ್ರಹ್ಮಾದಿ ಮುಕ್ತರ ಸಮುದಾಯಗಳು ವಿಷ್ಣುವಿನಿಂದ ಸದಾ ಭಿನ್ನವಾಗಿವೆ.

**ಭಾಷ್ಯ—ಏವಂ ನಿಯಂತಾ ಭಗವಾನ್ ಪೂರ್ಣಸರ್ವಗುಣಾರ್ಣವಃ ।**
**ಏಕ ಏವ ಪರೋ ವಿಷ್ಣುರನಿಯಮ್ಯಃ ಸದೋದಿತಃ ।**
**ಇತ್ಯಾದಿ ಬೃಹಚ್ಛ್ರುತಿಃ ।**

**ಅನುವಾದ**—ಅಂತರ್ಯಾಮಿ ಬ್ರಾಹ್ಮಣದಲ್ಲಿ ಹೇಳುವಂತೆ ಪೂರ್ಣಸರ್ವಗುಣಸಾಗರನಾಗಿರುವ ಭಗವಾನ್ ವಿಷ್ಣುವೊಬ್ಬನೇ ಹೀಗೆ ಸರ್ವನಿಯಾಮಕನಾಗಿದ್ದು ಸದಾ ಸರ್ವೋತ್ತಮ ಮತ್ತು ಯಾರಿಂದಲೂ ನಿಯಂತ್ರಿಸಲ್ಪಡದವನು ಎನಿಸಿದ್ದಾನೆ ಎಂದು ಮುಂತಾಗಿ ಬೃಹತ್ ಶ್ರುತಿಯಲ್ಲಿ ಹೇಳಲ್ಪಟ್ಟಿದೆ.

**ಭಾಷ್ಯ—ಆರ್ತಿರ್ದುಃಖಂ ಸಮುದ್ದಿಷ್ಟಮನಾರ್ತೋ ವಿಷ್ಣುರಚ್ಯುತಃ । ಇತಿ ಚ।**

**ಅನುವಾದ**—ಆರ್ತಿ ಎಂದರೆ ದುಃಖ. ಅವಿನಾಶಿಯಾದ ವಿಷ್ಣುವೇ ಅನಾರ್ತ ಎಂದೂ ಹೇಳಿದೆ.

**ಭಾಷ್ಯ—ಅತೋಽನ್ಯದಾರ್ತಮಿತ್ಯೇತಸ್ಮಾಚ್ಚ ಜೀವಾನಾಂ ಭೇದಃ ಪ್ರಸಿದ್ಧಃ। ನ ಹಿ ಜೀವಾದನ್ಯಸ್ಯಾರ್ತಿರ್ಯುಜ್ಯತೇ । ಅತೋ ಜೀವೇಭ್ಯೋಽನ್ಯಶ್ಚ ವಿಷ್ಣುರೇವ । ತದನ್ಯೇ ಬ್ರಹ್ಮರುದ್ರಾದಯಃ ಸರ್ವೇ ಜೀವಾ ಏವೇತಿ ಸಿದ್ಧಮ್ ।**

**ಅನುವಾದ**–'ವಿಷ್ಣುಃ ಅಃ' ವಿಷ್ಣುವು ಅಕಾರವಾಚ್ಯನೆಂದು ಮಾತ್ರ ಹೇಳಿದರೂ ಸಾಕಾಗುತ್ತಿತ್ತು. ಆದರೂ ಅತೋಽನ್ಯದಾರ್ತಂ ಎಂದು ಹೇಳಿದ್ದರಿಂದ ಜೀವರಿಗೆ ವಿಷ್ಣುವಿನ ಭೇದವು ಸ್ಪಷ್ಟವಾಗಿ ಸಿದ್ಧಿಸುತ್ತದೆ. ಏಕೆಂದರೆ ಜೀವನಲ್ಲದೆ ಬೇರೆ ಯಾರಿಗೂ ಆರ್ತಿ ಇರಲು ಸಾಧ್ಯವಿಲ್ಲ. ಆದ್ದರಿಂದ ಮೇಲೆ ಹೇಳಿದ ಕಾರಣಗಳಿಂದ ವಿಷ್ಣು ಜೀವರಿಗಿಂತ ಅನ್ಯನೆಂದೂ ಇತರ ಬ್ರಹ್ಮ ರುದ್ರಾದಿಗಳೆಲ್ಲರೂ ಜೀವರೇ, ಅವರಲ್ಲಿ ವಿಷ್ಣುವಿನ ಲಕ್ಷಣ ಬರಲಾರದು ಎಂದೂ ಸಿದ್ಧವಾಗುತ್ತದೆ.

ಭಾಷ್ಯ—ಪ್ರಕೃತಿಸ್ತ್ವತಿಸಾಮೀಪ್ಯಾದನಾರ್ತಾಪಿ ಪೃಥಙ್ ನ ತು ।
ಉಚ್ಯತೇ ನ ಸ್ತ್ರಿಯೋ ಯದ್ವತ್ ತ್ರಯಸ್ತ್ರಿಂಶತ್ಸುಭೇದಿತಾಃ। ಇತಿ ಚ।

॥ ಇತಿ ಉಷಸ್ತ ಬ್ರಾಹ್ಮಣಮ್ ॥

**ಅನುವಾದ**—ಲಕ್ಷ್ಮಿಯೂ ವಿಷ್ಣುವಿನಂತೆ ಅನಾರ್ತಳೇ. ಆದರೂ ಹಾಗೆಂದು ಉಪನಿಷತ್ತಿನಲ್ಲಿ ಪ್ರತ್ಯೇಕವಾಗಿ ಹೇಳಿಲ್ಲ. ಏಕೆಂದರೆ ಅವಳು ವಿಷ್ಣುವಿಗೆ ಪತ್ನಿಯಾಗಿರುವಳು. ಅಷ್ಟ ವಸುಗಳು, ಏಕಾದಶ ರುದ್ರರು, ದ್ವಾದಶಾದಿತ್ಯರು, ಇಂದ್ರ ಪ್ರಜಾಪತಿ ಎಂದು ಮೂವತ್ತುಮೂರು ದೇವತೆಗಳನ್ನು ನಿರೂಪಿಸುವಾಗ ಅವರ ಪತ್ನಿಯರನ್ನು ಪ್ರತ್ಯೇಕವಾಗಿ ನಿರೂಪಿಸದಿರುವಂತೆ ವಿಷ್ಣುವನ್ನು ಹೇಳುವಾಗ ಲಕ್ಷ್ಮಿಯನ್ನು ಪ್ರತ್ಯೇಕವಾಗಿ ಹೇಳಿಲ್ಲ.

**ಭಗವಂತನು ಮುಕ್ತಜೀವರಿಗಿಂತಲೂ ವಿಲಕ್ಷಣ :**

**ಉಪನಿಷತ್—ಅಥ ಹೈನಂ ಕಹೋಳಃ ಕೌಷೀತಕೇಯಃ ಪಪ್ರಚ್ಛ । ಯಾಜ್ಞ-ವಲ್ಕ್ಯೇತಿ ಹೋವಾಚ । ಯದೇವ ಸಾಕ್ಷಾದಪರೋಕ್ಷಾದ್ ಬ್ರಹ್ಮ ಯ ಆತ್ಮಾ ಸರ್ವಾಂತರಸ್ತಮೇವ ಮೇ ವ್ಯಾಚಕ್ಷ್ವೇತಿ । ಏಷ ತೇ ಆತ್ಮಾ ಸರ್ವಾಂತರಃ । ಕತಮೋ ಯಾಜ್ಞವಲ್ಕ್ಯ ಸರ್ವಾಂತರಃ । ಯೋಽಶ-ನಾಯಾಪಿಪಾಸೇ ಶೋಕಂ ಮೋಹಂ ಜರಾಂ ಮೃತ್ಯುಮತ್ಯೇತಿ ।**

**ಏತಂ ವೈ ತಮಾತ್ಮಾನಂ ವಿದಿತ್ವಾ ಬ್ರಾಹ್ಮಣಾಃ ಪುತ್ರೈಷಣಾಯಾಶ್ಚ ವಿತ್ತೈಷಣಾಯಾಶ್ಚ, ಲೋಕೈಷಣಾಯಾಶ್ಚ ವ್ಯುತ್ಥಾಯ । ಅಥ ಭಿಕ್ಷಾ ಚರ್ಯಂ ಚರಂತಿ । ಯಾ ಹ್ಯೇವ ಪುತ್ರೈಷಣಾ ಸಾ ವಿತ್ತೈಷಣಾ । ಯಾ ವಿತ್ತೈಷಣಾ ಸಾ ಲೋಕೈಷಣಾ। ಉಭೇ ಹ್ಯೇತೇ ಏಷಣೇ ಏವ ಭವತಃ। ತಸ್ಮಾತ್ ಬ್ರಾಹ್ಮಣಃ ಪಾಂಡಿತ್ಯಂ ನಿರ್ವಿದ್ಯ ಬಾಲ್ಯೇನ ತಿಷ್ಠಾಸೇದ್ । ಬಾಲ್ಯಂ ಚ ಪಾಂಡಿತ್ಯಂ ಚ ನಿರ್ವಿದ್ಯಾಥಮುನಿಃ । ಅಮೌನಂ ಚ ಮೌನಂ ಚ ನಿರ್ವಿದ್ಯ ಅಥ ಬ್ರಾಹ್ಮಣಃ । ಸ ಬ್ರಾಹ್ಮಣಃ ಕೇನ ಸ್ಯಾದ್ ಯೇನ ಸ್ಯಾತ್ ತೇನೇದೃಶ ಏವ । ಅತೋಽನ್ಯದಾರ್ತಮ್ । ತತೋ ಹ ಕಹೋಳಃ ಕೌಷೀತಕೇಯ ಉಪರರಾಮ । ಇತಿ ಕಹೋಳ ಬ್ರಾಹ್ಮಣಂ॥**

ಅನಂತರ ಕುಷೀತಕನ ಮಗನಾದ ಕಹೋಳನು ಪ್ರಶ್ನೆ ಮಾಡಿದನು, 'ಯಾಜ್ಞ ವಲ್ಕ್ಯರೇ, ಯಾವ ಪರಬ್ರಹ್ಮನು ಮಾತ್ರ ಮುಕ್ತಬ್ರಹ್ಮಾದಿಗಳಿಗಿಂತಲೂ ವಿಲಕ್ಷಣ ನಾಗಿ ಪರಾನುಗ್ರಹವಿಲ್ಲದೆ ನೇರವಾಗಿ ಎಲ್ಲವನ್ನೂ ಕಂಡು ಅನುಭವಿಸುವನೋ, ಗುಣ ಪೂರ್ಣನೋ, ಅಂತರ್ಯಾಮಿಯೋ ಮತ್ತು ಸರ್ವಶಕ್ತನೋ ಅಂಥ ಮುಕ್ತವಿಲಕ್ಷಣ ಪರಮಾತ್ಮನನ್ನೇ ಕುರಿತು ನನಗೆ ಉಪದೇಶಿಸಿರಿ' ಎಂದು. 'ನಿನ್ನ ಅಂತರ್ಯಾಮಿಯಾದ

ಸರ್ವಶಕ್ತ ಪರಮಾತ್ಮ ಇವನೆ'. 'ಯಾಜ್ಞವಲ್ಕ್ಯರೇ, ಯಾರು ಈ ಸರ್ವಶಕ್ತ?' 'ಯಾರು ಹಸಿವು ಬಾಯಾರಿಕೆಗಳನ್ನು, ಶೋಕ, ಮೋಹ, ಮುಪ್ಪು ಮತ್ತು ಮೃತ್ಯು ಗಳನ್ನು ದಾಟಿರುವನೋ ಅವನು.

ಈ ಮೇಲೆ ಹೇಳಿದ ಗುಣಗಳುಳ್ಳ ಪರಮಾತ್ಮನನ್ನು ತಿಳಿದು ಸಾಕ್ಷಾತ್ಕರಿಸಿ ಕೊಂಡವರು, ಮಕ್ಕಳ ಬಗ್ಗೆ, ಧನದ ಬಗ್ಗೆ ಮತ್ತು ಸ್ವರ್ಗಾದಿ ಲೋಕಗಳ ಬಗ್ಗೆ ಇಚ್ಛೆಯನ್ನು ಬಿಟ್ಟು ಬ್ರಹ್ಮನನ್ನು ಹೊಂದುತ್ತಾರೆ, ಮುಕ್ತರಾಗುತ್ತಾರೆ. ಅನಂತರ ಆ ಪರಮಾತ್ಮನ ಸುಖಕ್ಕಿಂತ ಅತ್ಯಲ್ಪವಾದ ತಮ್ಮ ಸ್ವರೂಪಭೂತವಾದ ಆನಂದವನ್ನು ಅನುಭವಿಸುತ್ತಾರೆ. ಯಾವುದು ಧನದ ಬಗ್ಗೆ ಇಚ್ಛೆಯೋ ಅದೇ ಮಕ್ಕಳ ಬಗ್ಗೆ ಇಚ್ಛೆ, ಮಕ್ಕಳಿಗಾಗಿ ಹಣಸಂಪಾದನೆ. ಆದ್ದರಿಂದ ಧನದ ಇಚ್ಛೆ ಪುತ್ರೇಚ್ಛೆಯಲ್ಲಿಯೇ ಸೇರಿ ಹೋಗುತ್ತದೆ. ಯಾವುದು ಧನದ ಮತ್ತು ಪುತ್ರರ ಬಗ್ಗೆ ಇಚ್ಛೆಯೋ ಅದೇ ಸ್ವರ್ಗಾದಿ ಲೋಕಗಳ ಬಗ್ಗೆ ಇಚ್ಛೆ. ಧನವೂ ಪುತ್ರ ಸಂತತಿಯೂ ಸ್ವರ್ಗಸಾಧನೆಗಾಗಿಯೇ ಇದೆ. ಅವುಗಳ ಇಚ್ಛೆ ಸ್ವರ್ಗೇಚ್ಛೆಯಲ್ಲಿಯೇ ಸೇರಿಹೋಗು ತ್ತದೆ. ಧನ ಮತ್ತು ಪುತ್ರಸಂತತಿಯೆಂಬ ಲೌಕಿಕ ಪದಾರ್ಥೇಚ್ಛೆ ಒಂದು, ಸ್ವರ್ಗ ವೆಂಬ ಅಲೌಕಿಕ ಪದಾರ್ಥೇಚ್ಛೆ ಒಂದು. ಹೀಗೆ ಎರಡೇ ಇಚ್ಛೆಗಳು ಜೀವರಿಗೆ ಇರು ತ್ತವೆ. ಇವೆರಡೂ ವಿಷಯ ಸುಖಕ್ಕಾಗಿ ಇರುವುದರಿಂದ ದುಃಖರೂಪವೇ. ಆದ್ದ ರಿಂದ ಸಾಧಕನು ಶಾಸ್ತ್ರಶ್ರವಣದಿಂದ ಜ್ಞಾನ ಸಂಪಾದಿಸಿ ಮನನದಿಂದ ಜ್ಞಾನ ಸಂಪಾದಿಸಬೇಕು. ಮನನ ಜ್ಞಾನವನ್ನೂ ಶ್ರವಣ ಜ್ಞಾನವನ್ನೂ ಸಂಪಾದಿಸಿ ಧ್ಯಾನಮಾಡಬೇಕು. ಶ್ರವಣ ಮನನಗಳನ್ನೂ, ಧ್ಯಾನವನ್ನೂ ಹೊಂದಿದ ಬಳಿಕ ಸಾಧಕನು ಭಗವತ್ಸಾಕ್ಷಾತ್ಕಾರವನ್ನು ಹೊಂದುತ್ತಾನೆ. ಅನಂತರ ಮುಕ್ತನಾಗುತ್ತಾನೆ. ಮುಕ್ತನು ಯಾವ ಭೋಗವನ್ನು ಅನುಭವಿಸುತ್ತಿದ್ದರೂ ಸಂಸಾರದಲ್ಲಿ ಹೇಗೋ ಹಾಗೆಯೇ ವಿಷ್ಣುವಿನ ಆನಂದಕ್ಕಿಂತ ಅತ್ಯಲ್ಪ ಆನಂದಾನುಭವವನ್ನೇ ಪಡೆಯುತ್ತಿರು ತ್ತಾನೆ. ಆದ್ದರಿಂದ ವಿಷ್ಣುವಿಗಿಂತ ಭಿನ್ನರಾದ ಮುಕ್ತ ಅಮುಕ್ತ ಜೀವರೆಲ್ಲರೂ ದುಃಖ ಉಳ್ಳವರೇ ಅಸ್ವತಂತ್ರರೇ. ಹೀಗೆ ಕುಷೀತಕನ ಮಗ ಕಹೋಳನು ಹೇಳಿ ವಿರಮಿಸಿದನು.

**ಭಾಷ್ಯ—ಯದೇವ ಸಾಕ್ಷಾದಿತಿ ಪುನಃ ಪ್ರಶ್ನೋ ಮುಕ್ತಾನಾಮಪಿ ಭಗವತೋ ಭೇದೋऽಸ್ತೀತಿ ಜ್ಞಾಪಯಿತುಂ । ಯದೇವ ಬ್ರಹ್ಮ, ತದನ್ಯೇ ಬ್ರಹ್ಮ ರುದ್ರಾದಯೋ ಮುಕ್ತಾ ಅಪಿ ಯನ್ನೈವ ಭವಂತಿ ಕದಾಚನ, ತಮೇವ ಮೇ ವಾಚಕ್ಷ್ವ ಮುಕ್ತಜೀವ ವೈಲಕ್ಷಣ್ಯೇನ ಸಹೇತಿ ದ್ವಿತೀಯ ಏವ- ಶಬ್ದಾರ್ಥಃ ।**

**ಅನುವಾದ**—ಮುಕ್ತರಿಗೂ ಭಗವಂತನಿಂದ ಭೇದವಿದೆ ಎಂಬುವನ್ನು ತಿಳಿಸು

ವುದಕ್ಕಾಗಿ ಯದೇವ ಸಾಕ್ಷಾತ್ ಇತ್ಯಾದಿಯಾಗಿ ಉಷಸ್ತನು ಕೇಳಿದ ಪ್ರಶ್ನೆಯನ್ನೇ ಕಹೋಳನು ಪುನಃ ಕೇಳುತ್ತಿದ್ದಾನೆ. ಯಾವ ವಿಷ್ಣುವು ಮಾತ್ರ ಗುಣಪೂರ್ಣನಾಗಿರುವನೋ ಅವನಿಂದ ಭಿನ್ನರಾದ ಬ್ರಹ್ಮರುದ್ರಾದಿಗಳು ಮುಕ್ತರಾದಾಗಲೂ ಯಾವ ಸಮಯದಲ್ಲಿಯೂ ಯಾವ ವಿಷ್ಣುವಿನಿಂದ ಅಭಿನ್ನರಾಗುವುದಿಲ್ಲವೋ ಆ ವಿಷ್ಣುವನ್ನು ಕುರಿತೇ ತಿಳಿಸಿರಿ. ಅಂದರೆ ವಿಷ್ಣುವು ಮುಕ್ತಜೀವರಿಗಿಂತಲೂ ಹೇಗೆ ವಿಲಕ್ಷಣನೆಂಬುದನ್ನು ತಿಳಿಸಿರಿ ಎಂಬುದು 'ತಮೇವ' ಎಂಬಲ್ಲಿರುವ ಎರಡನೆ 'ಏವ' ಶಬ್ದದ ಅರ್ಥ.

**ಭಾಷ್ಯ—ಸ ತು ಭಗವಾನ್ ಸ್ವತ ಏವಾತೀತಾಶನಾಯಾದಿರತೀತಾನಾಗತ ವರ್ತಮಾನಕಾಲೇಷು। ಬ್ರಹ್ಮಾದಯಸ್ತು ತಂ ವಿದಿತ್ವಾ ತತ್ಪ್ರಸಾದಾದೇವ ಪಶ್ಚಾದೇಷ್ಯಂತಿ । ಏತಂ ವೈ ತಮಿತಿ ಏತಾದೃಶೈರ್ಗುಣೈಃ ಸಾಕ್ಷಾದ್ ಅಪರೋಕ್ಷತ್ವ ಜೀವಭೇದಾದಿಭಿರ್ಯುಕ್ತಮಿತ್ಯರ್ಥಃ ।**

**ಅನುವಾದ**—ಆ ಭಗವಂತನು ಭೂತಭವಿಷ್ಯದ್ವರ್ತಮಾನಕಾಲಗಳಲ್ಲಿ ಪರಾವಲಂಬನೆ ಇಲ್ಲದೆ, ಹಸಿವು ಬಾಯಾರಿಕೆ ಮೊದಲಾದವುಗಳನ್ನು ಮೀರಿದವನು. ಲಕ್ಷ್ಮೀದೇವಿ ಅವನ ಅನುಗ್ರಹದಿಂದಲೇ ಅವುಗಳನ್ನು ಮೀರಿದ್ದಾಳೆ. ಚತುರ್ಮುಖ ಬ್ರಹ್ಮ ಮೊದಲಾದವರೂ ಆ ವಿಷ್ಣುವನ್ನು ಸಾಕ್ಷಾತ್ಕರಿಸಿಕೊಂಡು ಅನಂತರವೇ ಕೇವಲ ಅವನ ಅನುಗ್ರಹದಿಂದಲೇ ಹಸಿವು ಬಾಯಾರಿಕೆಗಳನ್ನು ಮೀರುತ್ತಾರೆ. 'ಏತಂ ವೈ ತಂ' ಎಂಬಲ್ಲಿ ಏತಂ ಎಂದರೆ ಸಾಕ್ಷಾದಪರೋಕ್ಷತ್ವ, ಜೀವಭೇದ ಮೊದಲಾದ ಈ ಗುಣಗಳಿಂದ ಕೂಡಿರುವ ಎಂದು ಅರ್ಥ.

**ಭಾಷ್ಯ—'ಭಿಕ್ಷಾಚರ್ಯಂ ಚರಂತಿ' ಮುಕ್ತಾ ಅಪಿ ಬ್ರಹ್ಮಾದಯಸ್ತಸ್ಮಾದೇವ ಪರಮೇಶ್ವರಾತ್ ವಿಪ್ರುಡಾನಂದಮೇವ ಭಿಕ್ಷಂತೋ ವರ್ತಂತೇ। ಬ್ರಹ್ಮಾಣನಾನ್ಮುಕ್ತಾ ಏವ ಬ್ರಾಹ್ಮಣಶಬ್ದೇನೋಚ್ಯಂತೇ । ನ ಹಿ ಜ್ಞಾನಾದನಂತರಂ ಸಂನ್ಯಾಸಸ್ಯ ಕರ್ತವ್ಯತಾ । ಯೇಷಾಂ ಚ ತದ್ಯೋಗ್ಯತಾ ತೇಷಾಮಪಿ ಜ್ಞಾನಾರ್ಥತ್ವೇನೈವ ಸಂನ್ಯಾಸಃ । ಮುಕ್ತಾ ಅಪಿ ಯಂ ಭಿಕ್ಷಂತೇ ಸೋಽತಿಪರಿಪೂರ್ಣಮಹಾನಂದೋ ಭಗವಾನ್ ಸ್ವತ ಏವ । ತದನ್ಯೇ ಬ್ರಹ್ಮಾದಯೋ ಮುಕ್ತಾ ಅಪಿ ತತ ಏವ ವಿಪ್ರುಡಾನಂದ ಭಿಕ್ಷುಕಾ ಇತಿ ವಿಶೇಷಃ ।**

**ಅನುವಾದ**—'ಭಿಕ್ಷಾಚರ್ಯಂ ಚರಂತಿ' ಎಂದರೆ ಮುಕ್ತರಾದ ಚತುರ್ಮುಖ ಬ್ರಹ್ಮಾದಿಗಳೂ ಕೂಡ ಆ ಪರಮೇಶ್ವರನ ಅನುಗ್ರಹದಿಂದ ಅವನ ಆನಂದಸಾಗರಕ್ಕೆ ಹೋಲಿಸಿದರೆ ಒಂದು ಹನಿಯಷ್ಟೇ ಆಗುವ ತಮ್ಮ ಸ್ವರೂಪಾನಂದಾನುಭವವನ್ನು ಪಡೆಯುತ್ತಾ ಇರುತ್ತಾರೆ ಎಂದು ಅರ್ಥ. ಬ್ರಹ್ಮನನ್ನು ಹೊಂದುವುದರಿಂದ

ಮುಕ್ತರೆ ಬ್ರಾಹ್ಮಣಶಬ್ದದಿಂದ ಹೇಳಲ್ಪಡುತ್ತಾರೆ. ಬ್ರಹ್ಮನಿಷ್ಠರು ಅಥವಾ ಬ್ರಾಹ್ಮಣ ಜಾತಿಯವರು ಏಷಣಾತ್ರಯಗಳನ್ನು ತ್ಯಜಿಸಿ ಸಂನ್ಯಾಸ ಸ್ವೀಕರಿಸಿದ ನಂತರ ದೇಹಸ್ಥಿತಿಗಾಗಿ ಭಿಕ್ಷಾವೃತ್ತಿಯನ್ನು ಮಾಡುತ್ತಾರೆಂದು ಈ ವಾಕ್ಯದ ಅರ್ಥವಲ್ಲ. ಏತಂ ವೈ ತಮಾತ್ಮಾನಂ ವಿದಿತ್ವಾ ಎಂದು ಹೇಳಿರುವುದರಿಂದ ಇಲ್ಲಿ ಹೇಳಿದ ಬ್ರಾಹ್ಮಣನು ಅಪರೋಕ್ಷಜ್ಞಾನ ಪಡೆದವನು ಎಂದು ಸಿದ್ಧವಾಗುತ್ತದೆ. ಅಪರೋಕ್ಷಜ್ಞಾನ ಪಡೆದ ನಂತರ ಸಂನ್ಯಾಸವನ್ನು ಆಚರಿಸಬೇಕಾಗಿಲ್ಲ. ಅಪರೋಕ್ಷಜ್ಞಾನ ಸಂಪಾದನೆಗಾಗಿಯೇ ಸಂನ್ಯಾಸ ಸ್ವೀಕಾರವು ವಿಹಿತವಾಗಿದೆ. ಅಪರೋಕ್ಷಜ್ಞಾನ ಪಡೆದ ನಂತರವೂ ಯಾರಿಗೆ ಸಂನ್ಯಾಸಯೋಗ್ಯತೆ ಇದೆಯೋ ಅವರೂ ಕೂಡ ವಿಶೇಷಜ್ಞಾನಕ್ಕಾಗಿಯೇ ಸಂನ್ಯಾಸಧರ್ಮವನ್ನು ಆಚರಿಸುತ್ತಾರೆ.ಮುಕ್ತರೂ ಕೂಡ ಯಾರ ಅನುಗ್ರಹದಿಂದ ಅಲ್ಪವಾದ ಸ್ವರೂಪಾನಂದ ಪಡೆಯುತ್ತಾರೋ ಆ ಭಗವಂತನು ಪರಾವಲಂಬನೆಯಿಲ್ಲದೆ ಅತ್ಯಂತ ಪರಿಪೂರ್ಣವಾದ ಮಹಾ ಆನಂದ ಉಳ್ಳವನು. ಅವನಿಗಿಂತ ಭಿನ್ನರಾದ ಬ್ರಹ್ಮಾದಿಗಳೆಲ್ಲರೂ ಮುಕ್ತರಾದಾಗಲೂ ಅವನಿಂದಲೇ ಅತ್ಯಲ್ಪವಾದ ತಮ್ಮ ಸ್ವರೂಪಭೂತವಾದ ಆನಂದವನ್ನು ಬೇಡುವವರು. ಇದು ಪರಬ್ರಹ್ಮ ಮತ್ತು ಮುಕ್ತರಿಗೆ ಇರುವ ವ್ಯತ್ಯಾಸ.

**ಭಾಷ್ಯ—ತಥಾಪಿ ತೇಷಾಮೇಷಣಾऽತೀತತ್ವಾನ್ನ ದುಃಖಮ್ । ಪುತ್ರಸ್ಯ ವಿತ್ತಸ್ಯ ಚ ಲೋಕಾರ್ಥತ್ವಾಲ್ಲೋಕೈಷಣಾಯಾಮಂತರ್ಭಾವಃ । ವಿತ್ತಸ್ಯಾಪಿ ಪ್ರಾಯಃ ಪುತ್ರಾರ್ಥತ್ವಾತ್ ಪುತ್ರೈಷಣಾಯಾಮ್ । ಲೋಕೈಷಣಾಯಾ ಅಪಿ ದುಃಖರೂಪತ್ವಾತ್ ಸಾऽಪಿ ತೇಷಾಂ ನಾಸ್ತ್ಯೇವೇತಿ ದರ್ಶಯಿತುಂ 'ಉಭೇ ಹ್ಯೇತೇ ಏಷಣೇ ಏವ ಭವತಃ' ಇತ್ಯಾಹ। ಉಭೇ ಅಪಿ ದೃಷ್ಟಾದೃಷ್ಟವಿಷಯೇ ಏಷಣಾತ್ವಾತ್ ದುಃಖರೂಪೇ ಏವೇತ್ಯರ್ಥಃ। ಪುತ್ರವಿತ್ತೈಷಣೇ ಉಭೇ ಅಪಿ ದೃಷ್ಟವಿಷಯತ್ವಾತ್ ಏಕೈವೇತ್ಯುಭೇ ಏವೇತ್ಯುಕ್ತಮ್ ।**

**ಅನುವಾದ**—ಚತುರ್ಮುಖಾದಿಗಳು ಶ್ರೀಹರಿಯಲ್ಲಿ ಆನಂದವನ್ನು ಬೇಡುವ ಭಿಕ್ಷುಕರಾದರೂ ಏಷಣಾರಹಿತರಾದುದರಿಂದ ಅವರಿಗೆ ದುಃಖವಿಲ್ಲ. ಸ್ವರ್ಗಾದಿ ಲೋಕ ಪ್ರಾಪ್ತಿಗಾಗಿಯೇ ಪುತ್ರ ಮತ್ತು ವಿತ್ತಗಳ ಬಯಕೆ. ಆದ್ದರಿಂದ ಅವೆರಡೂ ಲೋಕೈಷಣದಲ್ಲಿ ಅಂತರ್ಭಾವ ಹೊಂದುತ್ತದೆ. ಹೆಚ್ಚಾಗಿ ವಿತ್ತವನ್ನು ಪುತ್ರನಿಗಾಗಿಯೇ ಬಯಸುವುದರಿಂದ ವಿತ್ತೈಷಣವು ಪುತ್ರೈಷಣದಲ್ಲಿ ಅಂತರ್ಭಾವ ಹೊಂದುತ್ತದೆ. ಲೋಕೈಷಣವೂ ದುಃಖರೂಪವೇ ಆದುದರಿಂದ ಅದೂ ಮುಕ್ತರಿಗೆ ಇಲ್ಲವೇ ಇಲ್ಲ ಎಂದು ತೋರಿಸುವುದಕ್ಕಾಗಿ ಉಭೇ ಹ್ಯೇತೇ ಏಷಣೇ ಏವ ಭವತಃ ಎಂದು ಯಾಜ್ಞವಲ್ಕ್ಯರು ಹೇಳುತ್ತಾರೆ. ಎರಡೂ ಕೂಡ ದುಃಖಮಯವಾದ ದೃಷ್ಟ ವಿಷಯ

ಭೋಗ ಮತ್ತು ಅದೃಷ್ಟ ವಿಷಯಭೋಗಕ್ಕೇ ಸಂಬಂಧಿಸಿದ ಬಯಕೆಗಳಾದು ದರಿಂದ ದುಃಖಮಯವೇ ಎಂದು ಅರ್ಥ. ಪುತ್ರೈಷಣ ಮತ್ತು ವಿತ್ತೈಷಣಗಳೆರಡೂ ಈ ಲೋಕದಲ್ಲಿ ಲಭ್ಯವಾದ ದೃಷ್ಟವಿಷಯಭೋಗಕ್ಕೇ ಸಂಬಂಧಿಸಿದುವುಗಳಾದುದ ರಿಂದ ಅವುಗಳನ್ನು ಒಂದು ಎಂದೂ ಈ ಲೋಕದಲ್ಲಿಲ್ಲದ ಪರಲೋಕದಲ್ಲಿ ಮಾತ್ರ ಲಭ್ಯವಾದ ಅದೃಷ್ಟವಿಷಯಭೋಗಕ್ಕೆ ಸಂಬಂಧಿಸಿದ ಲೋಕೈಷಣವನ್ನು ಇನ್ನೊಂದು ಎಂದು ಪರಿಗಣಿಸಿ ಉಭೇ ಏವ ಎಂದೇ ಉಪನಿಷತ್ತಿನಲ್ಲಿ ಹೇಳಲಾಗಿದೆ.

**ಭಾಷ್ಯ—ದ್ವಿತೀಯೋ ಬ್ರಾಹ್ಮಣಃ ಬ್ರಹ್ಮ ಅಣಿತುಂ ಯೋಗ್ಯಃ । ಪಾಂಡಿತ್ಯ-ಮಾಗಮಜ್ಞಾನಂ । ಬಾಲ್ಯಂ ಯುಕ್ತಿ ಸಹಿತಮ್ । ಬಲಯುಕ್ತತ್ವಾತ್। ಮೌನಮುಪಾಸನಾಜಮ್ । ಅಮೌನಮಪರೋಕ್ಷಜ್ಞಾನಂ । ನಿರ್ವಿದ್ಯ ನಿತರಾಂ ಪ್ರಾಪ್ಯ ಲಬ್ಧ್ವಾ । 'ವಿದ ಲಾಭೇ' ಇತಿ ಧಾತೋಃ । 'ಅಥ ಬ್ರಾಹ್ಮಣಃ' ಮುಕ್ತೋ ಭವಿಷ್ಯತೀತ್ಯರ್ಥಃ । ಸ ಮುಕ್ತೋ ಯೇನ ಕೇನಾಪಿ ವರ್ತಯನ್ ಈದೃಶ ಏವ ಭಿಕ್ಷುಕ ಏವ । ನ ಕದಾಚಿತ್ ಸ್ವತಂತ್ರೋ ಭವತಿ ।**

**ಅನುವಾದ**—ತಸ್ಮಾದ್ ಬ್ರಾಹ್ಮಣಃ ಪಾಂಡಿತ್ಯಂ ನಿರ್ವಿದ್ಯ ಎಂದು ಎರಡ ನೆಯ ಸಲ ಪ್ರಯೋಗಿಸಲ್ಪಟ್ಟಿರುವ ಬ್ರಾಹ್ಮಣ ಶಬ್ದಕ್ಕೆ ಮುಕ್ತ ಎಂದರ್ಥವಲ್ಲ. ಬ್ರಹ್ಮ ಸಾಕ್ಷಾತ್ಕಾರವನ್ನು ಪಡೆಯಲು ಯೋಗ್ಯನಾದವನು ಎಂದು ಅರ್ಥ. ಪಾಂಡಿತ್ಯ ಎಂದರೆ ಶಾಸ್ತ್ರಶ್ರವಣದಿಂದ ಉಂಟಾದ ಜ್ಞಾನ. ಬಾಲ್ಯಂ ಎಂದರೆ ಯುಕ್ತಿಸಹಿತವಾದ ಆಗಮದಿಂದ ಉಂಟಾದ ಜ್ಞಾನ. ಯುಕ್ತಿಸಹಿತವಾದ ಎಂದರೆ ಶಾಸ್ತ್ರಮನನದಿಂದ ಉಂಟಾದ ಜ್ಞಾನ ಬಲಶಾಲಿಯಾಗುವುದರಿಂದ ಅದಕ್ಕೆ ಬಾಲ್ಯ ಎಂದು ಹೆಸರು. ಮೌನ ಎಂದರ ನಿದಿಧ್ಯಾಸನದಿಂದ ಹುಟ್ಟಿದ ಜ್ಞಾನ. ಅಮೌನ ಎಂದರೆ ಅಪರೋಕ್ಷಜ್ಞಾನ. ನಿರ್ವಿದ್ಯ ಎಂದರೆ ಪಡೆದು ಎಂದರ್ಥ. ಲಾಭ ಎಂಬ ಅರ್ಥವುಳ್ಳ 'ವಿದ್' ಧಾತುವಿನಿಂದ ನಿಷ್ಪನ್ನವಾಗುವುದ ರಿಂದ ಈ ಅರ್ಥ ಸಿಗುತ್ತದೆ. 'ಅಥ ಬ್ರಾಹ್ಮಣಃ' ಎಂದರೆ ಮುಕ್ತನಾಗುತ್ತಾನೆ ಎಂದು ಅರ್ಥ. ಆ ಮುಕ್ತನು ಯಾವುದೇ ರೀತಿಯಿಂದ ಭೋಗವೈಭವದಿಂದ ಇದ್ದರೂ ಹೀಗೆಯೇ ಎಂದರೆ ಪರಮಾತ್ಮನ ಅನುಗ್ರಹದಿಂದ ಆನಂದವನ್ನು ಪಡೆಯು ವವನಾಗಿಯೇ ಇರುತ್ತಾನೆ. ಎಂದೂ ಸ್ವತಂತ್ರನಾಗುವುದಿಲ್ಲ.

**ಭಾಷ್ಯ—'ಏತಸ್ಯೈವಾನಂದಸ್ಯಾನ್ಯಾನಿ ಭೂತಾನಿ ಮಾತ್ರಾಮುಪಜೀವಂತಿ' ಇತಿ ಚ ವಕ್ಷ್ಯತಿ ।**

**ಮುಕ್ತವಿಷಯಂ ಚೈತತ್ । 'ಅತ್ರ ಪಿತಾ ಅಪಿತಾ ಭವತಿ' ಇತ್ಯಾದಿ**

**ತತ್ರೈವಾನ್ತೇ 'ಓಂ ಸ್ವಾಪ್ಯಯಸಂಪತ್ತ್ಯೋರನ್ಯತರಾಪೇಕ್ಷಮಾವಿಷ್ಕೃತಂ ಹಿ ಓಂ ಇತಿ ಹಿ ಭಗವದ್ವಚನಮ್ ।**

**ಅನುವಾದ**—ಈ ಪರಮಾತ್ಮನ ಆನಂದದ ಒಂದು ಅಂಶಕ್ಕೆ ಸಮಾನವಾದ ಆನಂದವನ್ನು ಅವನ ಅನುಗ್ರಹದಿಂದ ಜ್ಞೇರೆ ಮುಕ್ತಜೀವರು ಅನುಭವಿಸುತ್ತಾರೆ ಎಂದೂ ಈ ಉಪನಿಷತ್ತೇ ಮುಂದೆ ಹೇಳುತ್ತದೆ.

ಈ ವಾಕ್ಯವು ಸುಪ್ತರ ಬಗ್ಗೆ ಮಾತ್ರವಲ್ಲದೆ ಮುಕ್ತರ ಬಗ್ಗೆಯೂ ಹೇಳುತ್ತದೆ. ಹೇಗೆಂದರೆ, ಇದೇ ಪ್ರಕರಣ ಪ್ರಾರಂಭದಲ್ಲಿ 'ಇಲ್ಲಿ ತಂದೆಯು ತಂದೆಯಲ್ಲವಾಗು ತ್ತಾನೆ' ಎಂದು ಮುಂತಾಗಿ ಹೇಳಿರುವುದನ್ನು ಕುರಿತು ವಿಚಾರ ಮಾಡುತ್ತಾ ಭಗವಾನ್ ವೇದವ್ಯಾಸರು ಬ್ರಹ್ಮಸೂತ್ರದಲ್ಲಿ 'ಈ ವಾಕ್ಯವು ಸುಪ್ತಿ ಮುಕ್ತಿಗಳೆರಡಕ್ಕೂ ಅನ್ವಯಿಸುತ್ತದೆ' ಎಂದು ಹೇಳಿದ್ದಾರೆ.

**ಭಾಷ್ಯ—ತತ್ರೈವ ಮುಕ್ತಾನಾಮಾನಂದತಾರತಮ್ಯಂ ಚೋಕ್ತಮ್'ಸ ಯೋಽ-ಮನುಷ್ಯಾಣಾಂ ರಾದ್ಧಃ ಸಮೃದ್ಧಃ ಭವತಿ' ಇತ್ಯಾದಿನಾ । ಶ್ರೋತ್ರಿ-ಯತ್ವಾವೃಜಿನತ್ವಾಕಾಮಹತತ್ವಾನಾಂ ಮುಕ್ತೇಷ್ವೇವ ಮುಖ್ಯತ್ವಾತ್ ।**

**ಅನುವಾದ**—ಅದೇ ವಾಕ್ಯದ ಮುಂದೆ ಮನುಷ್ಯರ ಮಧ್ಯದಲ್ಲಿ ಯಾರು ಮುಕ್ತನಾಗುತ್ತಾನೋ ಅವನು ಸರ್ವಭೋಗಗಳ ಸಮೃದ್ಧಿವುಳ್ಳವನಾಗುವನು ಎಂದು ಮುಂತಾದ ವಾಕ್ಯಗಳಿಂದ ಮುಕ್ತರ ಆನಂದ ತಾರತಮ್ಯವು ಹೇಳಲ್ಪಟ್ಟಿದೆ. ಏಕೆಂದರೆ ಇಲ್ಲಿ ಹೇಳಿದ ಶ್ರೋತ್ರಿಯತ್ವ, ಅವೃಜಿನತ್ವ, ಅಕಾಮಹತತ್ವಗಳು ಮುಕ್ತರಲ್ಲಿ ಮಾತ್ರ ಪೂರ್ಣವಾಗಿ ಇರುತ್ತವೆ.

**ಭಾಷ್ಯ—'ಯಶ್ಚ ಶ್ರೋತ್ರಿಯಃ'ಇತಿ ಹ್ಯಭ್ಯಾಸಃ । ನ ಹ್ಯಮುಕ್ತಾ ಅವೃಜಿನಾ ಅಕಾಮಹತಾ ವಾ । ನ ಚ ಶ್ರುತಿಫಲಂ ಸಮ್ಯಕ್ ಪ್ರಾಪ್ತಾಃ ।ಶ್ರುತಿಫಲ ಪ್ರಾಪ್ತಿರ್ಹಿ ಶ್ರೋತ್ರಿಯತ್ವಮ್ ।**

**ಅನುವಾದ**—ಪೂರ್ಣಪ್ರಮಾಣದ ಶ್ರೋತ್ರಿಯತ್ವ ಮುಂತಾದವುಗಳೇ ಇಲ್ಲಿ ವಿವಕ್ಷಿತ. ಏಕೆಂದರೆ 'ಯಶ್ಚಶ್ರೋತ್ರಿಯಃ' ಯಾರು ಶ್ರೋತ್ರಿಯನೋ ಎಂದು ಮುಂತಾಗಿ ಇಲ್ಲಿ ಅನೇಕ ಸಲ ಹೇಳಿದೆ. ಅಮುಕ್ತರು ಪೂರ್ಣಪ್ರಮಾಣದಲ್ಲಿ ಪಾಪ ರಹಿತರೂ ಅಕಾಮಹತರೂ ಆಗಿರುವುದಿಲ್ಲ. ಏಕೆಂದರೆ ಅವರು ವೇದಾಧ್ಯಯನದ ಫಲವನ್ನು ಪೂರ್ಣವಾಗಿ ಪಡೆದಿರುವುದಿಲ್ಲ. ವೇದಾಧ್ಯಯನ ಫಲಪ್ರಾಪ್ತಿಯೇ ಇಲ್ಲಿ ವಿವಕ್ಷಿತವಾದ ಶ್ರೋತ್ರಿಯತ್ವ.

**ಭಾಷ್ಯ—'ಸರ್ವೇ ವಿಮೋಹಿತಧಿಯಸ್ತವ ಮಾಯಯೇಮೇ ।
ಬ್ರಹ್ಮಾದಯಸ್ತನುಭೃತೋ ಬಹಿರರ್ಥಭಾವಾಃ' ಇತಿ ಭಾಗವತೇ ।
ಶರೀರಸಂಬಂಧಿನಾಂ ಮೋಹಾದಿಯುತತ್ವಂ । ಮೋಹಾದಿ ಯುತಾನಾಂ
ನ ಶ್ರೋತ್ರಿಯತ್ವಮದುಃಖತ್ವಮಕಾಮಹತತ್ವಂ ವಾ । 'ವೃಜಿನಂ
ವೃಜಿನಂ ದುಃಖಂ ಕ್ಲೇಶೋ ಬಾಧೇತಿ ಚೋಚ್ಯತೇ' ಇತ್ಯಭಿಧಾನಮ್ ।
ನ ಚ ದೇವಾದಿಪದಾಕಾಮಾನಾಮಿಂದ್ರಾದಿಪದಾಕಾಮಾನಾಂ ಚ
ಕಶ್ಚಿದ್ ವಿಶೇಷೋ ದೃಶ್ಯತೇ । ಅತೋ ಮುಕ್ತವಿಷಯಮೇವೈತತ್ ।**

**ಅನುವಾದ**—'ಈ ಬ್ರಹ್ಮಾದಿಗಳೆಲ್ಲರೂ ನಿನ್ನ ಇಚ್ಛೆಯಿಂದ ಶರೀರ ಧರಿಸಿ ಹುಟ್ಟಿದ್ದಾರೆ. ಆದ್ದರಿಂದಲೇ ಮೋಕ್ಷಸಾಧನ ತೊರೆದು ಬಾಹ್ಯ ವಿಷಯ ಪದಾರ್ಥಗಳಲ್ಲಿಯೇ ಆಸಕ್ತಿವುಳ್ಳವರಾಗಿ ಮೋಹಕ್ಕೊಳಗಾಗಿದ್ದಾರೆ' ಎಂದು ಭಾಗವತದಲ್ಲಿ ಹೇಳಲಾಗಿದೆ. ಆದ್ದರಿಂದ ಅಮುಕ್ತರಿಗೆ ಶ್ರೋತ್ರಿಯತ್ವಾದಿಗಳು ಪೂರ್ಣಪ್ರಮಾಣದಲ್ಲಿರುವುದು ಅಸಂಭಾವಿತ. ಶರೀರ ಸಂಬಂಧವುಳ್ಳ ಸಂಸಾರಿ ಜೀವರಿಗೆ ಮೋಹ ಮೊದಲಾದ ದೋಷಗಳು ಅನಿವಾರ್ಯ. ಮೋಹ ಮೊದಲಾದ ದೋಷವುಳ್ಳವರು ಶ್ರೋತ್ರಿಯರೂ, ದುಃಖರಹಿತರೂ, ಅಕಾಮಹತರೂ ಆಗಿರುವುದು ಸಾಧ್ಯವಿಲ್ಲ. ಆದ್ದರಿಂದ ಇಲ್ಲಿ ಹೇಳಿದ ಆನಂದತಾರತಮ್ಯ ಮುಕ್ತರಿಗೇ ಅನ್ವಯಿಸುತ್ತದೆ. ವೃಜಿನವೆಂದರೆ ದುಃಖ. ಏಕೆಂದರೆ, 'ದುಃಖವು ವೃಜಿನ, ವೃಜಿನ, ಕ್ಲೇಶ ಮತ್ತು ಬಾಧೆ ಎಂದೂ ಹೇಳಲ್ಪಡುತ್ತದೆ' ಎಂದು ಕೋಶವಿದೆ. ದೇವಪದವಿ ಮೊದಲಾದ ಸ್ಥಾನಗಳನ್ನು ಬಯಸದವರಿಗೂ, ಇಂದ್ರಪದವಿ ಮೊದಲಾದ ಸ್ಥಾನಗಳನ್ನು ಬಯಸದವರಿಗೂ ಯಾವ ವ್ಯತ್ಯಾಸವೂ ಕಾಣುವುದಿಲ್ಲ. ಆದ್ದರಿಂದ 'ಸ ಯೋ ಮನುಷ್ಯಾಣಾಂ ರಾದ್ಧಃ' ಎಂಬುದೂ, 'ಏತಸ್ಯೈವಾನಂದಸ್ಯ' ಎಂಬುದೂ ಮುಕ್ತರ ಬಗ್ಗೆಯೇ.

**ವಿವರಣೆ**—ಈ ಪ್ರಕರಣವು ಮುಕ್ತರ ತಾರತಮ್ಯವನ್ನು ಪ್ರತಿಪಾದಿಸುವುದಿಲ್ಲ. ಆದರೆ 'ಯಶ್ಚ ಶ್ರೋತ್ರಿಯಃ ಅವೃಜಿನಃ ಅಕಾಮಹತಃ' ಎಂಬ ಮಾತುಗಳಿಂದ ಆಯಾಯ ಸ್ಥಾನಗಳ ಬಯಕೆ ಇಲ್ಲದಿರುವವನಿಗೆ ಆಯಾಯ ಸ್ಥಾನದಿಂದ ದೊರೆಯುವ ಆನಂದಕ್ಕೆ ಸಮಾನವಾದ ಆನಂದವು ದೊರೆಯುವುದು ಎಂದು ಪ್ರತಿಪಾದಿಸುವುದು ಎಂದು ಕೆಲವರು ಹೇಳುತ್ತಾರೆ. ಇದು ತಪ್ಪು. ಹೀಗಾದರೆ ಹಿಂದಿನ ಸ್ಥಾನಗಳನ್ನು ಬಯಸದವನಿಗಿಂತ ಮುಂದಿನ ಸ್ಥಾನಗಳನ್ನು ಬಯಸದವನಿಗೆ ನೂರುಪಟ್ಟು ಹೆಚ್ಚು ಸುಖಪ್ರಾಪ್ತಿಯಾಗುತ್ತದೆ ಎಂದು ಹೇಳಬೇಕಾಗುತ್ತದೆ. ಆದರೆ ಹೀಗೆ ಹೇಳಲು ಯಾವಪ್ರಮಾಣದ ಆಧಾರವೂ ಇಲ್ಲ.

**ಭಾಷ್ಯ—'ಪರೋ ಮಾತ್ರಯಾ ತನ್ವಾ ವೃಧಾನ ನ ತೇ ಮಹಿತ್ವಮನ್ವಶ್ನು-**

**ವಂತಿ', 'ಬ್ರಹ್ಮೇಶಾನಾದಿಭಿರ್ದೇವೈರ್ಯತ್ ಪ್ರಾಪ್ತುಂ ನೈವ ಶಕ್ಯತೇ । ತದ್ ಯತ್‌ಸ್ವಭಾವಃ ಕೈವಲ್ಯಂ ಸ ಭವಾನ್ ಕೇವಲೋ ಹರೇ ।' 'ಮುಕ್ತಾನಾಂ ಪರಮಾ ಗತಿಃ' 'ಕೃಷ್ಣೋ ಮುಕ್ತೈರಿಜ್ಯತೇ ವೀತ ಮೋಹೈಃ' ಇತ್ಯಾದಿವಚನೈಶ್ಚ ಭಗವದನುಗ್ರಾಹ್ಯತ್ವಂ ತದಾನಂದಾ- ನವಾಪ್ತಿಶ್ಚ ಮುಕ್ತಾನಾಂ ದೃಶ್ಯತೇ ।**

**ಅನುವಾದ**—'ಶರೀರದಿಂದಲೂ ವ್ಯಾಪಿಸಿರುವ ವಿಷ್ಣುವೇ, ನೀನು ಅಪರಿಮಿತ ನಾಗಿರುವಿ. ನಿನ್ನ ಮಹಿಮೆಯನ್ನು ಬೇರೆ ಯಾರೂ ಹೊಂದುವುದಿಲ್ಲ' 'ಹರಿಯೇ, ಚತುರ್ಮುಖ ಬ್ರಹ್ಮ ಶಿವ ಮೊದಲಾದ ದೇವತೆಗಳಿಂದ ಎಂದೂ ಪಡೆಯಲಾಗದ ಸರ್ವೋತ್ತಮತ್ವವು ಯಾರಿಗೆ ಸ್ವಭಾವಭೂತವಾಗಿದೆಯೋ ಅವನು ನೀನು. ಏಕೆಂದರೆ ನೀನು ಎಂದೂ ಜಡಶರೀರದ ಸಂಬಂಧವಿಲ್ಲದವನು, ನಿತ್ಯಮುಕ್ತ'. ಈ ವಾಕ್ಯಗಳಿಂದ ಪರಮಾತ್ಮನ ಆನಂದ ಇನ್ನೊಬ್ಬರಿಗೆ ಸಿಗಲಾರದೆಂದೂ ಅದರಿಂದ ಇನ್ನೊಬ್ಬರು ಪರಮಾತ್ಮಾಭೇದ ಹೊಂದಲಾರರೆಂದೂ ಸಿದ್ಧವಾಗುವುದು. 'ಮುಕ್ತರ ಅಂತಿಮ ನೆಲೆ ಶ್ರೀಹರಿ'. 'ಮೋಹರಹಿತರಾದ ಮುಕ್ತರಿಂದ ಕೃಷ್ಣನು ಪೂಜಿಸಲ್ಪಡು ತ್ತಾನೆ' ಎಂದು ಮೊದಲಾದ ವಚನಗಳಿಂದಲೂ ಮುಕ್ತರು ಭಗವದನುಗ್ರಹಾವಲಂಬಿ ಗಳೆಂಬುದು ಮತ್ತು ಭಗವಂತನ ಆನಂದ ಮುಕ್ತರಿಗೆ ದೊರೆಯುವುದಿಲ್ಲವೆಂಬುದು ದೃಷ್ಟವಾಗಿದೆ.

**ಭಾಷ್ಯ—ಬಹ್ವಭ್ಯಾಸಾತ್ ತ ಆತ್ಮೇತಿ ಮುಕ್ತೌ ಜೀವೇಶಯೋರ್ಭಿದಾ ।**
**ಪ್ರಧಾನ ತತ್ಪರತ್ವೇನ ದೃಶ್ಯತೇಽತ್ಯಾದರಾತ್ ಸದಾ ।**
**ಮಹಾತಾತ್ಪರ್ಯಯೋಗಾಚ್ಚ ಸ ಏವಾರ್ಥೋಽವಗಮ್ಯತೇ ।**
**ತಾತ್ಪರ್ಯಂ ಪರಮಂ ವಿಷ್ಣೋರತ್ಯುದ್ರೇಕೇ ವಿಶೇಷತಃ ।**
**ಸರ್ವಶ್ರುತಿಸ್ಮೃತೀನಾಂ ಚ ದೃಶ್ಯತೇಽನ್ಯತ್ ತದರ್ಥತಃ ।**
**ಸ ಚ ಜೀವೇಶಯೋರ್ಭೇದೇ ಸರ್ವೋದ್ರೇಕೋ ಹಿ ಯುಜ್ಯತೇ ।**

**ಅನುವಾದ**—ಶ್ರುತಿಯಲ್ಲಿ 'ತೇ ಆತ್ಮಾ' ಎಂದು ಜೀವೇಶ್ವರ ಭೇದವನ್ನು ಬಹಳ ಸಲ ಆದರದಿಂದ ಹೇಳಿರುವುದರಿಂದ ಅದು ಶ್ರುತಿಯ ಪ್ರಧಾನತಾತ್ಪರ್ಯವೆಂದು ಸಿದ್ಧವಾಗುತ್ತದೆ. ಆದ್ದರಿಂದ ಜೀವೇಶ್ವರ ಭೇದ ಪಾರಮಾರ್ಥಿಕವಾಗಿದ್ದು ಮುಕ್ತಿ ಯಲ್ಲಿಯೂ ಇರುತ್ತದೆ. ಎಲ್ಲ ಶಾಸ್ತ್ರಗಳ ಮಹಾತಾತ್ಪರ್ಯಕ್ಕೆ ಅನುಗುಣವಾಗಿರುವುದ ರಿಂದಲೂ ಮುಕ್ತಿಯಲ್ಲಿ ಜೀವೇಶ್ವರರಿಗೆ ಭೇದವಿರುತ್ತದೆ ಎಂಬ ವಿಷಯವು ಸಿದ್ಧ ವಾಗುತ್ತದೆ. ಏಕೆಂದರೆ ವಿಷ್ಣು ಸರ್ವೋತ್ತಮತ್ವದಲ್ಲಿಯೇ ಸಕಲ ಆಗಮಗಳಿಗೆ ಮಹಾ ತಾತ್ಪರ್ಯವಿರುತ್ತದೆ. ಬೇರೆ ವಿಷಯಗಳು ವಿಷ್ಣು ಸರ್ವೋತ್ತಮತ್ವದ ಸಮರ್ಥನೆ

ಗಾಗಿಯೇ ಆಗಮಗಳಲ್ಲಿ ಉಕ್ತವಾಗುತ್ತವೆ. ಜೀವೇಶ್ವರರಿಗೆ ಭೇದ ಪಾರಮಾರ್ಥಿಕ ವಾಗಿದ್ದರೆ ಮಾತ್ರ ವಿಷ್ಣು ಸರ್ವೋತ್ತಮತ್ವವು ಯುಕ್ತವಾಗುತ್ತದೆ.

**ವಿವರಣೆ**—ಇವು ಬ್ರಹ್ಮತರ್ಕದ ವಾಕ್ಯಗಳು. ಉಷಸ್ತ ಬ್ರಾಹ್ಮಣಕ್ಕೆ ಅನ್ವಯಿ ಸುತ್ತವೆ. ಉಷಸ್ತ ಬ್ರಾಹ್ಮಣದಲ್ಲಿ 'ತೇ ಆತ್ಮಾ' ಎಂದು ಎಂಟು ಸಲ ಹೇಳಲ್ಪಟ್ಟಿದೆ ಒಂದೇ ವಿಧವಾದ ಪದ ಅಥವಾ ವಾಕ್ಯ ಅನೇಕಸಲ ಬಂದರೆ ಅಭ್ಯಾಸ ಎಂದು ಹೆಸರು. ಅಭ್ಯಾಸದಿಂದ ವಾಕ್ಯಗಳ ತಾತ್ಪರ್ಯವು ಸಿದ್ಧವಾಗುತ್ತವೆ. ಯಾವುದಾದ ರೊಂದು ವಿಷಯದಲ್ಲಿ ದೃಢವಾದ ಅಭಿಪ್ರಾಯವಿದ್ದಾಗ ಅದನ್ನು ಪುನಃಪುನಃ ಹೇಳು ವುದು ಪ್ರತಿಪಾದನೆಯ ಒಂದು ಕ್ರಮ. ಇದು ಅನುಭವಸಿದ್ಧ. ತೇ ಆತ್ಮಾ ಎಂದರೆ ನಿನ್ನ ನಿಯಾಮಕ ಎಂದು ಅರ್ಥ. ಇದರಿಂದ ಭೇದವು ತಿಳಿಯುತ್ತದೆ. ಈ ಮಾತನ್ನು ಪುನಃ ಪುನಃ ಹೇಳಿರುವುದರಿಂದ ಜೀವೇಶ್ವರರಿಗೆ ಪಾರಮಾರ್ಥಿಕ ಭೇದವಿದೆ ಎನ್ನು ವುದು ಬ್ರಾಹ್ಮಣದ ತಾತ್ಪರ್ಯವೆಂದು ಸಿದ್ಧವಾಗುತ್ತದೆ.

**ಭಾಷ್ಯ—ಬಹ್ವಭ್ಯಾಸಸ್ತ ಆತ್ಮೇತಿ ಶ್ರುತಾವಾದರತಸ್ತತಃ ।**
**ಮಮಾತ್ಮೇತಿ ವಚೋ ಯತ್ರ ವಿಷ್ಣೋರಪಿ ತು ದೃಶ್ಯತೇ ।**
**ದೇಹಸ್ಯಾಪಿ ಸ್ವರೂಪತ್ವಜ್ಞಾಪನಂ ತತ್ಪ್ರಯೋಜನಂ ।**
**ನ ಹ್ಯಪ್ರಯೋಜಕಂ ವೇದಪದಂ ವರ್ಣೋಽಥ ವಾ ಸ್ವರಃ ।**

**ಅನುವಾದ**—ಜೀವೇಶ್ವರರಿಗೆ ಮುಕ್ತಿಯಲ್ಲಿಯೂ ಭೇದವಿರುವುದರಿಂದಲೇ ಶ್ರುತಿಯಲ್ಲಿ ತೇ ಆತ್ಮಾ ಎಂದು ಬಹಳ ಸಲ ಆದರಪೂರ್ವಕವಾಗಿ ಹೇಳಿದೆ. ಮಮ ಆತ್ಮಾ ಎಂದು ವಿಷ್ಣುವಿನ ಮಾತು ಎಲ್ಲಿ ಕಂಡುಬರುವುದೋ ಅಲ್ಲಿ ವಿಷ್ಣುವಿನ ದೇಹವು ವಿಷ್ಣುವಿನ ಸ್ವರೂಪವೇ ಎಂದು ತಿಳಿಸುವುದಕ್ಕಾಗಿಯೇ ಅಂತಹ ಪ್ರಯೋಗ. ವೇದದ ಪದವಾಗಲಿ ವರ್ಣವಾಗಲಿ ಅಥವಾ ಸ್ವರವಾಗಲಿ ವ್ಯರ್ಥವಾಗಿರುವುದಿಲ್ಲ.

**ವಿವರಣೆ**—'ತೇ ಆತ್ಮಾ' ನಿನ್ನ ಸ್ವಾಮಿ ಎನ್ನುವ ಪ್ರಯೋಗವು ಭೇದಪ್ರತಿ ಪಾದಕ ಎಂದು ಹಿಂದೆ ವಿವರಿಸಲಾಗಿದೆ. 'ಮಮಾತ್ಮಾ ಭೂತಭಾವನಃ' ಎಂಬ ಭಗವದ್ಗೀತೆಯ ಶ್ರೀಕೃಷ್ಣನ ವಚನದಲ್ಲಿ (೯–೫) 'ಮಮ ಆತ್ಮಾ' ಎನ್ನುವ ಪ್ರಯೋಗ, ಉಪನಿಷತ್ತಿನ 'ತೇ ಆತ್ಮಾ' ಎನ್ನುವ ಪ್ರಯೋಗದಂತೆಯೇ ಇದೆ. 'ತೇ ಆತ್ಮಾ' ಎನ್ನುವುದು ಭೇದಪ್ರತಿಪಾದಕವಾದರೆ ಮಮಾತ್ಮಾ'ಎನ್ನುವುದೂ ವಿಷ್ಣು ಮತ್ತು ಅವನ ದೇಹಕ್ಕೆ ಭೇದಪ್ರತಿಪಾದಕ ಎಂದು ಹೇಳಬೇಕಾಗುತ್ತದೆ. ಈ ಪ್ರಶ್ನೆಗೆ ಈ ಬ್ರಹ್ಮತರ್ಕ ವಚನವು ಉತ್ತರವನ್ನು ಹೇಳುತ್ತದೆ. ಭೂತಭಾವನ ಎಂದರೆ ಸಕಲ ಚೇತನಗಳಿಗೆ ಜನ್ಮಕೊಡುವಂತಹುದು ಎಂದು ಅರ್ಥ. ವಿಷ್ಣುವೇ ಸಕಲಚೇತನಗಳಿಗೆ ಜನ್ಮ ಕೊಡುವವನಾದ್ದರಿಂದ ಅವನ ದೇಹವೂ ಜನ್ಮ ಕೊಡುತ್ತದೆ

ಎಂದು ಹೇಳಿದಾಗ ಅವನಿಗೂ ಅವನ ದೇಹಕ್ಕೂ ಪರಸ್ಪರ ಭೇದವಿಲ್ಲವೆಂದು ಅರ್ಥಾತ್ ಸಿದ್ಧವಾಗುತ್ತದೆ. ಆದ್ದರಿಂದ 'ಮಮ ಆತ್ಮಾ' ಎಂಬ ಪ್ರಯೋಗವು ಮಾತ್ರ ಅಭೇದಪ್ರತಿಪಾದಕವೆ. 'ನನ್ನ ಸ್ವರೂಪ' ಎಂದರ್ಥ.

**ಭಾಷ್ಯ—ದೇಹಸ್ವರೂಪತಾ ವಿಷ್ಣೋರ್ನ ಮಮೇತಿ ಪದಂ ವಿನಾ।**
**ಸಮ್ಯಗ್ ಜ್ಞಾಪಯಿತುಂ ಶಕ್ಯಾ ತತಸ್ತತ್ಪದಮಿಷ್ಯತೇ ॥**
**ತತಸ್ತ ಆತ್ಮೇತಿ ವಚೋ ಭೇದಾಭಾವೇ ನ ಯುಜ್ಯತೇ ।**
**ಭಿಕ್ಷಯಾ ಭಕ್ಷಣಂ ತಸ್ಮಾದಾನಂದಸ್ಯ ತತೋಽವದತ್ ।**

**ಅನುವಾದ**–ವಿಷ್ಣುವಿನ ದೇಹ ಅವನ ಸ್ವರೂಪವೇ ಎಂಬುವನ್ನು ಚೆನ್ನಾಗಿ ತಿಳಿಸಲು' ಮಮ' ಎಂಬ ಪದವಿಲ್ಲದೆ ಸಾಧ್ಯವಾಗುವುದಿಲ್ಲ. ಆದ್ದರಿಂದ ಆ ಪದವು ಸಾರ್ಥಕವೆನಿಸುತ್ತದೆ. 'ಮಮ ಆತ್ಮಾ' ಎಂಬಲ್ಲಿ ಸಂಬಂಧಬೋಧಕವಾದ 'ಮಮ' ಎನ್ನುವ ಶಬ್ದಕ್ಕೆ ಹೀಗೆ ಬೇರೆ ಪ್ರಯೋಜನವಿರುವುದರಿಂದ 'ತೇ ಆತ್ಮಾ' ಎಂಬಲ್ಲಿ 'ತೇ' ಎಂಬ ಶಬ್ದಕ್ಕೆ ಅಂತಹ ಪ್ರಯೋಜನವಿಲ್ಲದಿರುವುದರಿಂದ ತೇ ಆತ್ಮಾ ಎನ್ನುವ ಸಂಬಂಧ ವಚನವು ಭೇದಸಾಧಕವೆ. ಭೇದವಿಲ್ಲದಿದ್ದರೆ ಅದು ಯುಕ್ತವಾಗುವುದಿಲ್ಲ. ಭೇದವಿರುವುದರಿಂದಲೇ ಮುಕ್ತರು ವಿಷ್ಣುವಿನಿಂದ ಅಲ್ಪ ಆನಂದವನ್ನು ಬೇಡಿ ಪಡೆದು ಅನುಭವಿಸುತ್ತಾರೆ ಎಂದು ಉಪನಿಷತ್ತು ಹೇಳಿದೆ.

**ವಿವರಣೆ**—'ಮಮ ಆತ್ಮಾ ಭೂತಭಾವನಃ' ಎಂಬಲ್ಲಿ 'ಮಮ' ಎಂಬ ಪದವನ್ನು ಬಿಟ್ಟು 'ಆತ್ಮಾ ಭೂತ ಭಾವನಃ' ಎಂದು ಮಾತ್ರ ಹೇಳಿದರೂ ವಿಷ್ಣುವಿನ ದೇಹ ಅವನ ಸ್ವರೂಪ ಎಂದು ತಿಳಿಯಲು ಸಾಧ್ಯವಾಗುತ್ತಿತ್ತು. ಆತ್ಮಶಬ್ದಕ್ಕೆ ದೇಹ ಎಂದು ಅರ್ಥವಿರುವುದರಿಂದ ವಿಷ್ಣು ಒಬ್ಬನಲ್ಲಿಯೇ ಕಂಡುಬರುವ ಭೂತ ಭಾವನತ್ವ ಲಕ್ಷಣವನ್ನು ದೇಹಕ್ಕೂ ಹೇಳಿದ ಮಾತ್ರದಿಂದಲೇ ವಿಷ್ಣುವಿನ ದೇಹ ಅವನ ಸ್ವರೂಪವೆಂದಾಗುತ್ತಿತ್ತು. ಆದ್ದರಿಂದ 'ಮಮ' ಎನ್ನುವ ಪದ ವ್ಯರ್ಥ. ಈ ಪ್ರಶ್ನೆಗೆ ಈ ಬ್ರಹ್ಮತರ್ಕವಚನವು ಉತ್ತರ ಹೇಳಿದೆ.

**ಭಾಷ್ಯ—ಮುಕ್ತಾನಾಮೇಕದೇಶತ್ವಂ ಬ್ರಹ್ಮಾನಂದ ವ್ಯಪೇಕ್ಷಯಾ ।**
**ವಿಪ್ರುಟ್ತ್ವಂ ಪ್ರತಿಬಿಂಬತ್ವಂ ಶ್ರುತಿಷೂಕ್ತಂ ಹಿ ಸರ್ವಶಃ ।**
**ತಥಾಪಿ ಪೂರ್ಣಾನಂದತ್ವಮುಮುಕ್ತಾನಾಂ ವ್ಯಪೇಕ್ಷಯಾ ।**
**ಬ್ರಹ್ಮಾದೇಸ್ತಾರತಮ್ಯಂ ಚ ಮುಕ್ತಾವೇವ ಸದಾತನಂ ।**
**ದೃಷ್ಟಾದೃಷ್ಟೈಷಣಾನಾಶಾನ್ನಿರ್ದುಃಖತ್ವಂ ಚ ಸರ್ವದಾ ।**

**ಅನುವಾದ**—ಮುಕ್ತರ ಆನಂದವು ಅಲ್ಪವಾದರೂ ಅಪೂರ್ಣವೇನಲ್ಲ. ಪರ

ಬ್ರಹ್ಮನ ಆನಂದಕ್ಕಿಂತ ಅತ್ಯಲ್ಪವಾದರೂ, ಅಮುಕ್ತರ ಆನಂದಕ್ಕೆ ಹೋಲಿಸಿದರೆ ಮುಕ್ತರ ಆನಂದ ಪರಿಪೂರ್ಣವೇ ಆಗಿದೆ. ಅದು ಪರಬ್ರಹ್ಮನ ಆನಂದದ ಒಂದು ಅತ್ಯಲ್ಪ ಅಂಶವೆಂದು ಎಲ್ಲ ಕಡೆ ಶ್ರುತಿಗಳಲ್ಲಿ ಹೇಳಿರುವುದು ಅಭೇದಾಭಿಪ್ರಾಯ ದಿಂದಲ್ಲ. ಪರಬ್ರಹ್ಮನ ಆನಂದಕ್ಕೆ ಅಧೀನ ಮತ್ತು ಸದೃಶ ಎಂಬ ಅಭಿಪ್ರಾಯ ದಿಂದ. ಮುಕ್ತಿಯಲ್ಲಿಯೂ ಬ್ರಹ್ಮಾದಿಗಳಿಗೆ ಶಾಶ್ವತ ತಾರತಮ್ಯವಿದೆ. ಆದರೂ ದೃಷ್ಟ ಅದೃಷ್ಟ ಅಂದರೆ ಇಹಲೋಕ ಮತ್ತು ಪರಲೋಕಗಳಿಗೆ ಸಂಬಂಧಿಸಿದ ವಿಷಣ ಗಳು ನಾಶವಾಗಿರುವುದರಿಂದ ತಾರತಮ್ಯಪ್ರಯುಕ್ತವಾದ ದ್ವೇಷಾಸೂಯೆಗಳಿಗೆ ಅವಕಾಶವಿಲ್ಲದಿರುವುದರಿಂದ ಯಾವಾಗಲೂ ದುಃಖರಹಿತರಾಗಿರುತ್ತಾರೆ.

**ಭಾಷ್ಯ—ಪರಬ್ರಹ್ಮತ್ವ ವಚನಂ ಮುಕ್ತಾನಾಂ ಯತ್ರ ದೃಶ್ಯತೇ ।**
**ಜೀವೇಷು ಬ್ರಹ್ಮಶಬ್ದೋಕ್ತೇಃ ಪರತ್ವಂ ಚ ವಿಮುಕ್ತಿತಃ ।**
**ತತ್ ಪರಬ್ರಹ್ಮತಾ ತೇಷಾಂ ಬದ್ಧಜೀವೋಚ್ಚತಾ ಮತಾ ।**
**ತತೋ ಬ್ರಹ್ಮಾಣನೇ ಯೋಗ್ಯಃ ಪಾಂಡಿತ್ಯಂ ಪ್ರಾಪ್ನುಯಾತ್ ಪರಂ।**
**ಪಾಂಡಿತ್ಯಮಾಗಮಜ್ಞತ್ವಂ ಬಾಲ್ಯಂ ಯುಕ್ತಿಸಹಾಯತಾ ।**
**ಮೌನಂ ತೂಪಾಸನಾಸಿದ್ಧಿರಮೌನಂ ಭಗವದ್ದೃಶಿಃ ।**

**ಅನುವಾದ**—ಮುಕ್ತರನ್ನು ಪರಬ್ರಹ್ಮರೆಂದು ವ್ಯವಹರಿಸಿದುದು ಎಲ್ಲಿ ಕಂಡು ಬರುವುದೋ ಅಲ್ಲಿ ಪರಬ್ರಹ್ಮರು ಎಂದರೆ ಸಂಸಾರಿಗಳಿಗಿಂತ ಉತ್ತಮರು ಎಂದೇ ಅರ್ಥ. ಮುಕ್ತರಾಗಿರುವುದರಿಂದ ಮುಕ್ತರು ಸಂಸಾರಿಜೀವರಿಗಿಂತ ಉತ್ತಮರು. ಆದ್ದರಿಂದ ಬ್ರಹ್ಮಜ್ಞಾನಕ್ಕೆ ಯೋಗ್ಯನಾದವನು ಉತ್ತಮವಾದ ಪಾಂಡಿತ್ಯವನ್ನು ಪಡೆಯಬೇಕು. ಪಾಂಡಿತ್ಯವೆಂದರೆ ಶಾಸ್ತ್ರಜ್ಞಾನ. ಬಾಲ್ಯವೆಂದರೆ ಆ ಶಾಸ್ತ್ರ ಜ್ಞಾನಕ್ಕೆ ಯುಕ್ತಿಜ್ಞಾನದ ಸಹಾಯ. ಮೌನ ಎಂದರೆ ಧ್ಯಾನ ಸಿದ್ಧಿ. ಅಮೌನ ಎಂದರೆ ಭಗವತ್ಸಾಕ್ಷಾತ್ಕಾರ.

**ವಿವರಣೆ**—ಬ್ರಹ್ಮಾಣಿ ಜೀವಾಃ ಸರ್ವೇಽಪಿ ಪರಬ್ರಹ್ಮಾಣಿ ಮುಕ್ತಿಗಾಃ ।
ಪ್ರಕೃತಿಃ ಪರಮಂ ಬ್ರಹ್ಮ ಪರಮಂ ಮಹದಚ್ಯುತಃ ।

ಎನ್ನುವ ಶ್ಲೋಕದಲ್ಲಿ ಪರಬ್ರಹ್ಮಾಣಿ ಮುಕ್ತಿಗಾಃ ಮುಕ್ತರು ಪರಬ್ರಹ್ಮರು ಎಂದು ವರ್ಣಿಸಲಾಗಿದೆ. ಆದರೂ ಮುಕ್ತರಿಗೂ ಮತ್ತು ಪರಬ್ರಹ್ಮನಿಗೂ ಐಕ್ಯವಿದೆ ಎಂದು ತಿಳಿಯಬಾರದು. 'ಬ್ರಹ್ಮಾಣಿ ಜೀವಾಃ ಸರ್ವೇಽಪಿ' ಎಲ್ಲ ಜೀವರೂ ಬ್ರಹ್ಮರು ಎಂದೂ ಹೇಳಿರುವುದರಿಂದ ಪರಬ್ರಹ್ಮರೆಂದರೆ ಉತ್ತಮ ಜೀವರೆಂದೇ ಅರ್ಥಗ್ರಹಿಸ ಬೇಕು. ಅಭೇದವನ್ನು ಗ್ರಹಿಸಿದರೆ 'ಪರಮಂ ಮಹದ್ ಅಚ್ಯುತಃ' 'ಪರಮಾತ್ಮನು ಪರಮ ಮಹದ್ ಬ್ರಹ್ಮ' ಎಂದು ವರ್ಣಿಸುವುದು ವಿರುದ್ಧವಾದೀತು. ಆದ್ದರಿಂದ

ಸಂಸಾರಿ ಜೀವನು ಬ್ರಹ್ಮ, ಮುಕ್ತಜೀವನು ಪರಬ್ರಹ್ಮ, ಮಹಾಲಕ್ಷ್ಮಿ ಪರಮ ಬ್ರಹ್ಮ, ಶ್ರೀಹರಿ ಪರಮ ಮಹದ್ಬ್ರಹ್ಮ ಎಂದು ತಾರತಮ್ಯಪೂರ್ವಕವಾಗಿ ಭೇದ ವನ್ನೇ ಇಲ್ಲಿ ಹೇಳಿದೆ ಎಂದು ಗ್ರಹಿಸಬೇಕು. ಆದ್ದರಿಂದ ಬ್ರಹ್ಮಜ್ಞಾನಕ್ಕೆ ಯೋಗ್ಯ ನಾದವನು ಉತ್ತಮವಾದ ಪಾಂಡಿತ್ಯವನ್ನು ಪಡೆಯಬೇಕು. ಪಾಂಡಿತ್ಯವೆಂದರೆ ಶಾಸ್ತ್ರಜ್ಞಾನ. ಬಾಲ್ಯವೆಂದರೆ ಆ ಶಾಸ್ತ್ರಜ್ಞಾನಕ್ಕೆ ಯುಕ್ತಿಜ್ಞಾನದ ಸಹಾಯ. ಮೌನ ಎಂದರೆ ಧ್ಯಾನ ಸಿದ್ಧಿ. ಅಮೌನ ಎಂದರೆ ಭಗವತ್ಸಾಕ್ಷಾತ್ಕಾರ.

**ಭಾಷ್ಯ—ಏತಾನ್ಯಾಪ್ಯ ಭವೇನ್ಮುಕ್ತಿರ್ಮುಕ್ತೋ ವೈ ಭಿಕ್ಷುಕೋ ಭವೇತ್ ।**
**ನ ಹ್ಯನ್ಯಭಿಕ್ಷಿತಂ ವಿಷ್ಣುರ್ದದ್ಯಾನ್ನಿಯಮತಃ ಕ್ವಚಿತ್ ।**
**ಮುಕ್ತಸ್ಯ ಭಿಕ್ಷಿತಂ ಸರ್ವಂ ದದ್ಯಾನ್ನಿಯಮತೋ ಹರಿಃ ।**
**ಅಯೋಗ್ಯಭಿಕ್ಷಣಂ ತೇಷಾಂ ನ ಕದಾಚಿತ್ತು ಯುಜ್ಯತೇ ।**
**ಯೇನ ಕೇನಾಪಿ ನೈತೇಷಾಂ ಭಿಕ್ಷಾವೃತ್ತಿರ್ವಿನಶ್ಯತಿ ।**

**ಅನುವಾದ**—ಇವುಗಳನ್ನು ಪಡೆದಾಗ ಮುಕ್ತಿ ಉಂಟಾಗುವುದು. ಮುಕ್ತನು ಶ್ರೀಹರಿಯಲ್ಲಿ ಆನಂದದ ಭಿಕ್ಷುಕನಾಗುವನು. ಮುಕ್ತನಲ್ಲದವನು ಬೇಡಿದ್ದನ್ನು ವಿಷ್ಣು ಕೊಟ್ಟೇ ಕೊಡುವನೆಂಬ ನಿಯಮವಿಲ್ಲ. ಮುಕ್ತನು ಬೇಡಿದ್ದೆಲ್ಲವನ್ನೂ ವಿಷ್ಣು ತಪ್ಪದೇ ಕೊಡುವನು. ಏಕೆಂದರೆ ಮುಕ್ತರು ತಮಗೆ ಯೋಗ್ಯವಲ್ಲದ ಶ್ರೀಹರಿಯ ಪೂರ್ಣಾನಂದಾದಿಗಳನ್ನು ಎಂದೂ ಬೇಡುವುದೇ ಇಲ್ಲ. ಮುಕ್ತರಿಗೆ ಈ ಭಿಕ್ಷಾವೃತ್ತಿಯು ಯಾವುದೇ ಕಾರಣದಿಂದಲೂ ತಪ್ಪುವುದಿಲ್ಲ.

**ಭಾಷ್ಯ—ಪ್ರಥಮೋ ಬ್ರಾಹ್ಮಣೋ ಮುಕ್ತೋ ದ್ವಿತೀಯೋ ಯೋಗ್ಯಉಚ್ಯತೇ**
**ಅಪರೋಕ್ಷವಿನ್ಮುಕ್ತಯೋಸ್ತು ತಾರ್ತೀಯೇನೋಭಯೋರ್ಗ್ರಹಃ ।**
**ಅತೋ ಮುಕ್ತಾ ಅಮುಕ್ತಾಶ್ಚ ನ ಸ್ವತಂತ್ರಾಃ ಕದಾಚನ ।**
**ಸ್ವತಂತ್ರಸ್ತು ಸ ಏವೈಕೋ ಭಗವಾನ್ ಪುರುಷೋತ್ತಮಃ ।**
**ಇತ್ಯಾದಿ ಬ್ರಹ್ಮತರ್ಕೇ ।**

**ಅನುವಾದ**—ಈ ಬ್ರಾಹ್ಮಣದಲ್ಲಿ ಮೊದಲನೆಯ ಬ್ರಾಹ್ಮಣಶಬ್ದಕ್ಕೆ ಮುಕ್ತ ಎಂದೂ, ಎರಡನೆಯ ಬ್ರಾಹ್ಮಣಶಬ್ದಕ್ಕೆ ಬ್ರಹ್ಮನನ್ನು ತಿಳಿಯಲು ಯೋಗ್ಯ ಎಂದೂ ಅರ್ಥ. ಮೂರನೆಯ ಬ್ರಾಹ್ಮಣಶಬ್ದದಿಂದ ಅಪರೋಕ್ಷಜ್ಞಾನಿ ಮತ್ತು ಮುಕ್ತ ಇಬ್ಬರನ್ನೂ ಗ್ರಹಿಸಬೇಕು. ಆದ್ದರಿಂದ 'ಅತೋಽನ್ಯದಾರ್ತಂ' ಮುಕ್ತರಾಗಲಿ ಅಮುಕ್ತರಾಗಲಿ ಎಂದೂ ಸ್ವತಂತ್ರರಲ್ಲ. ಭಗವಾನ್ ಪುರುಷೋತ್ತಮನೊಬ್ಬನೇ ಸ್ವತಂತ್ರ ಎಂದು ಮುಂತಾಗಿ ಬ್ರಹ್ಮತರ್ಕದಲ್ಲಿ ಹೇಳಿದೆ.

**ಭಾಷ್ಯ—ದ್ವಾವಿಮೌ ಪುರುಷೌ ಲೋಕೇ ಕ್ಷರಶ್ಚಾಕ್ಷರ ಏವ ಚ।**
**ಕ್ಷರಃ ಸರ್ವಾಣಿ ಭೂತಾನಿ ಕೂಟಸ್ಥೋಽಕ್ಷರ ಉಚ್ಯತೇ ।**
**ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ ।**
**ಇತ್ಯಾದಿನಾ ಚ ಭೇದೇನ ಮಹೋತ್ಕರ್ಷೇ ಪರಮತಾತ್ಪರ್ಯಂ ಸರ್ವ ಶಾಸ್ತ್ರಾಣಾಮಾಹ ॥ ಇತಿ ಕಹೋಳ ಬ್ರಾಹ್ಮಣಮ್ ॥**

**ಅನುವಾದ**—ಕ್ಷರ ಅಕ್ಷರ ಎಂದು ಚೇತನರು ಎರಡು ಬಗೆ. ಎಲ್ಲ ಜೀವರೂ ಕ್ಷರರು. ಲಕ್ಷ್ಮೀ ಅಕ್ಷರಳು. ಸರ್ವೋತ್ತಮ ಪರಮಾತ್ಮ ಬೇರೆಯೆ ಎಂದು ಮುಂತಾಗಿ ಗೀತಾ ವಾಕ್ಯವೂ ಭೇದದ ಮೂಲಕ ವಿಷ್ಣುಸರ್ವೋತ್ತಮತ್ವದಲ್ಲಿಯೇ ಸರ್ವಶಾಸ್ತ್ರಗಳಿಗೂ ಮಹಾತಾತ್ಪರ್ಯವೆಂದು ಹೇಳುತ್ತಿದೆ.

ಕಹೋಳ ಬ್ರಾಹ್ಮಣವು ಮುಗಿಯಿತು.

**ಮುಕ್ತರಲ್ಲಿ ತಾರತಮ್ಯ :**

**ಉಪನಿಷತ್-ಅಥ ಹೈನಂ ಗಾರ್ಗೀ ವಾಚಕ್ನವೀ ಪಪ್ರಚ್ಛ । ಯಾಜ್ಞವಲ್ಕ್ಯೇತಿ ಹೋವಾಚ । ಯದಿದಂ ಸರ್ವಮಪ್ಸು ಓತಂ ಚ ಪ್ರೋತಂ ಚೇತಿ । ಕಸ್ಮಿನ್ ಖಲು ಅಪ ಓತಾಶ್ಚ ಪ್ರೋತಾಶ್ಚೇತಿ । ವಾಯೌ ಗಾರ್ಗೀತಿ । ಕಸ್ಮಿನ್ ಖಲು ವಾಯುರೋತಶ್ಚ ಪ್ರೋತಶ್ಚೇತಿ । ಗಂಧರ್ವಲೋಕೇಷು ಗಾರ್ಗೀತಿ। ಕಸ್ಮಿನ್ ಖಲು ಗಂಧರ್ವಲೋಕಾ ಓತಾಶ್ಚ ಪ್ರೋತಾಶ್ಚೇತಿ । ಅಂತರಿಕ್ಷಲೋಕೇಷು ಗಾರ್ಗೀತಿ । ಕಸ್ಮಿನ್ ಖಲು ಅಂತರಿಕ್ಷಲೋಕಾ ಓತಾಶ್ಚ ಪ್ರೋತಾಶ್ಚೇತಿ ।ಆದಿತ್ಯಲೋಕೇಷು ಗಾರ್ಗೀತಿ।ಕಸ್ಮಿನ್ ಖಲ್ವಾದಿತ್ಯಲೋಕಾ ಓತಾಶ್ಚ ಪ್ರೋತಾಶ್ಚೇತಿ । ಚಂದ್ರಲೋಕೇಷು ಗಾರ್ಗೀತಿ। ಕಸ್ಮಿನ್ ಖಲು ಚಂದ್ರಲೋಕಾ ಓತಾಶ್ಚ ಪ್ರೋತಾಶ್ಚೇತಿ । ನಕ್ಷತ್ರಲೋಕೇಷು ಗಾರ್ಗೀತಿ । ಕಸ್ಮಿನ್ ಖಲು ನಕ್ಷತ್ರಲೋಕಾ ಓತಾಶ್ಚ ಪ್ರೋತಾಶ್ಚೇತಿ । ದೇವಲೋಕೇಷು ಗಾರ್ಗೀತಿ । ಕಸ್ಮಿನ್ ಖಲು ದೇವಲೋಕಾ ಓತಾಶ್ಚ ಪ್ರೋತಾಶ್ಚೇತಿ । ಇಂದ್ರಲೋಕೇಷು ಗಾರ್ಗೀತಿ । ಕಸ್ಮಿನ್ ಖಲು ಇಂದ್ರಲೋಕಾ ಓತಾಶ್ಚ ಪ್ರೋತಾಶ್ಚೇತಿ । ಪ್ರಜಾಪತಿಲೋಕೇಷು ಗಾರ್ಗೀತಿ । ಕಸ್ಮಿನ್ ಖಲು ಪ್ರಜಾಪತಿಲೋಕಾ ಓತಾಶ್ಚ ಪ್ರೋತಾಶ್ಚೇತಿ । ಬ್ರಹ್ಮಲೋಕೇಷು ಗಾರ್ಗೀತಿ । ಕಸ್ಮಿನ್ ಖಲು ಬ್ರಹ್ಮಲೋಕಾ ಓತಾಶ್ಚ ಪ್ರೋತಾಶ್ಚೇತಿ । ಸ ಹೋವಾಚ । ಗಾರ್ಗಿ ಮಾಽತಿಪ್ರಾಕ್ಷೀಃ।ಮಾ ತೇ ಮೂರ್ಧಾ ವ್ಯಪತತ್। ಅನತಿಪ್ರಶ್ನ್ಯಾಂ ವೈ ದೇವತಾಮತಿಪೃಚ್ಛಸಿ । ಗಾರ್ಗಿ ಮಾಽತಿಪ್ರಾಕ್ಷೀಃ ಇತಿ । ತತೋ ಹ ಗಾರ್ಗೀ ವಾಚಕ್ನವೀ ಉಪರರಾಮ ।**

ಕಹೋಳನು ಸುಮ್ಮನಾದ ಬಳಿಕ ಗರ್ಗಗೋತ್ರದ ವಚಕ್ನುವಿನ ಮಗಳು ಗಾರ್ಗಿ ಯಾಜ್ಞವಲ್ಕ್ಯರನ್ನು ಕೇಳಿದಳು. ಯಾಜ್ಞವಲ್ಕ್ಯರೇ, ಮುಕ್ತರಾದ ಈ ಮನುಷ್ಯೋತ್ತಮರು ಮುಕ್ತ ಚಕ್ರವರ್ತಿಗಳಲ್ಲಿ ಆಶ್ರಿತರಾಗಿದ್ದಾರೆ. ಮುಕ್ತಚಕ್ರವರ್ತಿಗಳು ಯಾರಲ್ಲಿ ಆಶ್ರಿತರಾಗಿದ್ದಾರೆ? ಗಾರ್ಗಿ, ಮುಖ್ಯ ವಾಯುಪುತ್ರನಾದ ಚಕ್ರನಾಮಕ ವಾಯುವಿನಲ್ಲಿ ಆಶ್ರಿತರಾಗಿದ್ದಾರೆ. ಮುಕ್ತ ಚಕ್ರನು ಎಲ್ಲಿ ಆಶ್ರಿತನಾಗಿದ್ದಾನೆ? ಗಾರ್ಗಿ, ಮುಕ್ತನಾದ ಗಂಧರ್ವನಾಮಕ ಮುಖ್ಯವಾಯುಪುತ್ರನ ಸ್ವರೂಪಸುಖದಲ್ಲಿ. ಮುಕ್ತಗಂಧರ್ವನ ಸ್ವರೂಪಸುಖವು ಎಲ್ಲಿ ಆಶ್ರಿತವಾಗಿದೆ? ಅಂತರಿಕ್ಷನಾಮಕ ವಾಯುಪುತ್ರನ ಸ್ವರೂಪ ಸುಖದಲ್ಲಿ. ಮುಕ್ತ ಅಂತರಿಕ್ಷನ ಸ್ವರೂಪಸುಖ ಎಲ್ಲಿ ಆಶ್ರಿತವಾಗಿದೆ? ಮುಕ್ತ ಸೂರ್ಯನ ಆನಂದದಲ್ಲಿ. ಮುಕ್ತ ಸೂರ್ಯನ ಆನಂದ ಎಲ್ಲಿ ಆಶ್ರಿತವಾಗಿದೆ? ಮುಕ್ತನಾದ ಅನಿರುದ್ಧನ ಆನಂದದಲ್ಲಿ. ಮುಕ್ತ ಅನಿರುದ್ಧನ ಆನಂದ ಎಲ್ಲಿ ಆಶ್ರಿತವಾಗಿದೆ? ಮುಕ್ತನಾದ ಇಂದ್ರನ ಆನಂದದಲ್ಲಿ. ಮುಕ್ತ ಇಂದ್ರನ ಆನಂದ ಎಲ್ಲಿ ಆಶ್ರಿತವಾಗಿದೆ? ಮುಕ್ತನಾದ ಶೇಷನ ಆನಂದದಲ್ಲಿ. ಮುಕ್ತಶೇಷನ ಆನಂದ ಎಲ್ಲಿ ಆಶ್ರಿತವಾಗಿದೆ? ಮುಕ್ತ ಸರಸ್ವತಿಯ ಆನಂದದಲ್ಲಿ. ಮುಕ್ತ ಸರಸ್ವತಿಯ ಆನಂದ ಎಲ್ಲಿ ಆಶ್ರಿತವಾಗಿದೆ? ಮುಕ್ತ ಚತುರ್ಮುಖನ ಆನಂದದಲ್ಲಿ. ಮುಕ್ತ ಚತುರ್ಮುಖನ ಆನಂದ ಎಲ್ಲಿ ಆಶ್ರಿತವಾಗಿದೆ? ಪರಬ್ರಹ್ಮನ ಆನಂದದಲ್ಲಿ. ಪರಬ್ರಹ್ಮನ ಆನಂದವು ಎಲ್ಲಿ ಆಶ್ರಿತವಾಗಿದೆ? ಗಾರ್ಗಿ, ಮಿತಿಮೀರಿ ಪ್ರಶ್ನೆ ಮಾಡಬೇಡ. ತಮಸ್ಸಿನಲ್ಲಿ ನಿನ್ನ ತಲೆಯು ಬೀಳದಿರಲಿ. ಆಶ್ರಯದ ವಿಷಯದಲ್ಲಿ ಪ್ರಶ್ನಗೆ ಅನರ್ಹವಾದ ಪರದೇವತೆಯ ಬಗ್ಗೆಯೂ ಮಿತಿಮೀರಿ ಪ್ರಶ್ನೆ ಮಾಡುತ್ತಿರುವೆ. ಹಾಗೆ ಮಾಡಬೇಡ. ಯಾಜ್ಞವಲ್ಕ್ಯರ ಈ ಮಾತನ್ನು ಕೇಳಿ ಗಾರ್ಗಿ ಸುಮ್ಮನಾದಳು.

**ಭಾಷ್ಯ—ಮುಕ್ತಾನಾಂ ತಾರತಮ್ಯಂ ಗಾರ್ಗಿಬ್ರಾಹ್ಮಣೇನೋಚ್ಯತೇ । ಲೋಕಾ ಇತಿ ಮುಕ್ತಾನಾಮಾನಂದಾನುಭವಾಃ ಸ್ವರೂಪಭೂತಾಃ । ಅಪ್ಸು ವಾಯಾವಿತಿ ಸ್ವರೂಪಸ್ಯೈವ ಪ್ರಸ್ತುತತ್ವಾತ್। 'ಅನತಿಪ್ರಶ್ನ್ಯಾಂ ವೈ ದೇವತಾಮತಿಪೃಚ್ಛಸಿ' ಇತಿ ದೇವತಾಸ್ವರೂಪಪ್ರಶ್ನಸ್ಯೈವಾವಗಮ್ಯಮಾನತ್ವಾಚ್ಚ ।**

**ಅನುವಾದ**—ಮುಕ್ತರ ತಾರತಮ್ಯವು ಗಾರ್ಗಿ ಬ್ರಾಹ್ಮಣದಲ್ಲಿ ಉಕ್ತವಾಗುತ್ತಿದೆ. ಅಚೇತನವಸ್ತುಗಳಲ್ಲ. ಇಲ್ಲಿ ಲೋಕಶಬ್ದಕ್ಕೆ ಮುಕ್ತರ ಸ್ವರೂಪಾನಂದಾನುಭವ ಎಂದು ಅರ್ಥ. ಏಕೆಂದರೆ ಪ್ರಾರಂಭದಲ್ಲಿ ಅಪ್ಸು, ವಾಯೌ ಎಂದು ಚಕ್ರವರ್ತಿ ಮತ್ತು ವಾಯುಗಳ ಸ್ವರೂಪವೇ ಪ್ರಸ್ತುತವಾಗಿದೆ. ಉಪಸಂಹಾರದಲ್ಲಿಯೂ ಕೂಡ 'ಅನತಿ ಪ್ರಶ್ನ್ಯಾಂ ವೈ ದೇವತಾಮತಿಪೃಚ್ಛಸಿ' ಎಂದು ಹೇಳಿರುವುದರಿಂದ ದೇವತಾಸ್ವರೂಪದ ಬಗ್ಗೆಯೇ ಪ್ರಶ್ನೆ ಮಾಡಲ್ಪಟ್ಟಿದೆ ಎಂದು ತಿಳಿಯುತ್ತದೆ.

**ವಿವರಣೆ**—ಬ್ರಹ್ಮಲೋಕಕ್ಕೆ ಯಾವುದು ಆಶ್ರಯವೆಂದು ಗಾರ್ಗಿ ಪ್ರಶ್ನೆ ಮಾಡಿದಾಗ 'ಅನತಿ ಪ್ರಶ್ನ್ಯಾಂ ವೈ ದೇವತಾಮತಿಪೃಚ್ಛಸಿ' ಪ್ರಶ್ನೆಗೆ ಅನರ್ಹವಾದ ದೇವತೆಯ ಬಗ್ಗೆ ಪ್ರಶ್ನೆ ಮಾಡುತ್ತಿರುವಿ ಎಂದು ಯಾಜ್ಞವಲ್ಕ್ಯರು ಆಕ್ಷೇಪಿಸುತ್ತಾರೆ. ಇದರಿಂದ ಬ್ರಹ್ಮಲೋಕದ ಪ್ರಶ್ನೆ ದೇವತಾ ಪ್ರಶ್ನೆಯೇ ಆಗಿದೆ ಎಂದು ತಿಳಿದುಬರುತ್ತದೆ. ಬ್ರಹ್ಮಶಬ್ದದಿಂದಲೇ ದೇವತಾ ಎಂಬ ಅರ್ಥವು ಲಭಿಸುವುದರಿಂದ ಬ್ರಹ್ಮಲೋಕ ಶಬ್ದಕ್ಕೆ ಸ್ವರೂಪಾನಂದಾನುಭವ ಎಂಬ ಅರ್ಥವನ್ನು ಹೇಳುವುದು ಅನಿವಾರ್ಯ. ಹೀಗೆ ಒಂದು ಕಡೆ ಲೋಕಶಬ್ದಕ್ಕೆ ಸ್ವರೂಪಾನಂದಾನುಭವವೆ ಅರ್ಥವೆನ್ನುವುದಾದರೆ ಈ ಬ್ರಾಹ್ಮಣದಲ್ಲಿ ಬಂದಿರುವ ಎಲ್ಲ ಲೋಕಶಬ್ದಗಳಿಗೂ ಸ್ವರೂಪಾನಂದಾನುಭವ ಎಂಬ ಅರ್ಥವೇ ಯುಕ್ತವಾಗಿದೆ.

**ಭಾಷ್ಯ—ನ ಚೋಪರಿತನಲೋಕೇಷ್ವಧಸ್ತನಾ ಲೋಕಾ ಆಶ್ರಿತಾಃ । ನ ಚ ವಾಯುರ್ಗಂಧರ್ವಲೋಕಮಾಶ್ರಿತಃ । ವಾಯ್ವಾಶ್ರಯತ್ವಶ್ರುತೇಃ ಸರ್ವಲೋಕಾನಾಂ-'ವಾಯುನಾ ಹಿ ಸರ್ವೇ ಲೋಕಾ ನೇನೀಯಂತೇ' ಇತ್ಯಾದಿನಾ । ಸಪ್ತಸ್ಕಂಧಗತೋ ಲೋಕಾನ್ ಯೋ ಬಿಭರ್ತಿ ಮಹಾ ಬಲಃ ಇತಿ ಚ ಹರಿವಂಶೇಷು । ನ ಚಾನತಿಪ್ರಶ್ನ್ಯತ್ವಂ ಲೋಕಮಾತ್ರಸ್ಯಾಸ್ತಿ । ಅಧಸ್ತನೇಷು ಚೋಪರಿತನಾ ಲೋಕಾಃ ತಿಷ್ಠಂತಿ । ನ ಚ ಮರುತಾಮೇಕೋಽಪಿ ಗಂಧರ್ವಲೋಕಾದವರೋ ವಿದ್ಯತೇ ।**

**ಅನುವಾದ**—ಲೋಕಶಬ್ದಕ್ಕೆ ಅಚೇತನ ಲೋಕಗಳೆಂದೇ ಅರ್ಥ ಗ್ರಹಿಸುವ ಪಕ್ಷದಲ್ಲಿ ಅನೇಕ ಅನುಪಪತ್ತಿಗಳಿವೆ. ಏಕೆಂದರೆ ಕೆಳಗಿನ ಲೋಕಗಳು ಮೇಲಿನ ಲೋಕಗಳನ್ನು ಆಶ್ರಯಿಸಿರುವುದಿಲ್ಲ. ವಾಯುವು ಗಂಧರ್ವಲೋಕವನ್ನು ಆಶ್ರಯಿಸಿಲ್ಲ. 'ವಾಯುವಿನಿಂದಲೇ ಎಲ್ಲಾ ಲೋಕಗಳೂ ಚೆನ್ನಾಗಿ ಧರಿಸಲ್ಪಟ್ಟಿವೆ' ಎಂದು ಮುಂತಾದ ಶ್ರುತಿಗಳಿಂದ, ಎಲ್ಲ ಲೋಕಗಳೂ ವಾಯುವನ್ನು ಆಶ್ರಯಿಸಿವೆ ಎಂದೇ ಪ್ರಸಿದ್ಧಿಯಿದೆ. 'ಸಪ್ತಸ್ಕಂಧಗತನಾದ ಮಹಾ ಬಲಶಾಲಿಯಾದ ವಾಯುವು ಲೋಕಗಳನ್ನು ಧರಿಸಿದ್ದಾನೆ' ಎಂದು ಹರಿವಂಶವೂ ಹೇಳಿದೆ. ಕೇವಲ ಲೋಕಗಳ ಬಗ್ಗೆಯೇ ಪ್ರಶ್ನೆಯಾಗಿದ್ದರೆ ಬ್ರಹ್ಮಲೋಕಕ್ಕೂ ಇನ್ನೊಂದು ಆಶ್ರಯವಿರಬಹುದಾದ್ದರಿಂದ ಅದರ ಬಗ್ಗೆ ಪ್ರಶ್ನೆ ಅಸಾಧುವೆನ್ನುವುದೂ ಯುಕ್ತವಾಗಲಾರದು. ಕೆಳ ಕೆಳಗಿನ ಲೋಕಗಳಲ್ಲಿ ಮೇಲೆ ಮೇಲಿನ ಲೋಕಗಳು ಇರುತ್ತವೆ. ಮರುತ್‌ಗಳಲ್ಲಿ ಒಬ್ಬ ಸಾಮಾನ್ಯ ವಾಯುವೂ ಕೂಡ ಗಂಧರ್ವಲೋಕಕ್ಕಿಂತ ಕೆಳಗಿನವನಲ್ಲ.

**ವಿವರಣೆ**—ಲೋಕಶಬ್ದಕ್ಕೆ ಪ್ರಸಿದ್ಧವಾದ ಅರ್ಥವೇ ಆಗಿದ್ದರೆ ಆದಿತ್ಯ ಮೊದಲಾದ ಲೋಕಗಳು ಚಂದ್ರ ಮೊದಲಾದ ಲೋಕಗಳನ್ನು ಆಶ್ರಯಿಸಿವೆ ಎಂದು ಹೇಳುವುದು ತಪ್ಪಾಗುತ್ತದೆ. ಏಕೆಂದರೆ ಆದಿತ್ಯ ಮೊದಲಾದ ಲೋಕಗಳಿಗಿಂತ ಚಂದ್ರ

ಮೊದಲಾದ ಲೋಕಗಳು ಮೇಲೆ ಇವೆ. ಮೇಲಿನ ಲೋಕಗಳನ್ನು ಕೆಳಗಿನ ಲೋಕಗಳು ಎಂದೂ ಆಶ್ರಯಿಸಿರುವುದಿಲ್ಲ. ವಾಯುವಿಗೆ ಗಂಧರ್ವಲೋಕ ಆಶ್ರಯ ಎಂಬಲ್ಲಿ ಲೋಕಶಬ್ದಕ್ಕೆ ಪ್ರಸಿದ್ಧ ಅರ್ಥವನ್ನೇ ಇಟ್ಟುಕೊಂಡರೆ ತಪ್ಪಾಗುತ್ತದೆ. ಏಕೆಂದರೆ ವಾಯುವೇ ಸರ್ವಲೋಕಗಳಿಗೂ ಆಧಾರ ಎಂದು ಶ್ರುತಿಸ್ಮೃತಿಗಳು ಹೇಳಿವೆ. ಗಂಧರ್ವಲೋಕ ಒಂದನ್ನು ಬಿಟ್ಟು ಉಳಿದೆಲ್ಲ ಲೋಕಗಳನ್ನು ವಾಯು ಧರಿಸುತ್ತಾನೆ ಎಂದಿಟ್ಟುಕೊಳ್ಳುವುದೂ ಸರಿಯಲ್ಲ. ನಲವತ್ತೊಂಭತ್ತು ಮಂದಿ ಮರುತ್ತುಗಳಲ್ಲಿ ಒಬ್ಬನೂ ಕೂಡ ಗಂಧರ್ವಲೋಕಕ್ಕಿಂತ ದುರ್ಬಲನಾಗಿದ್ದು ಅದನ್ನು ಆಶ್ರಯಿಸುವವನಲ್ಲ. ಇನ್ನು ಮುಖ್ಯ ವಾಯು ಗಂಧರ್ವಲೋಕವನ್ನಾಶ್ರಯಿಸಿರುವುದು ಅಸಂಭಾವಿತ. ಆದ್ದರಿಂದಲೂ ಲೋಕಶಬ್ದಕ್ಕೆ ಪ್ರಸಿದ್ಧವಾದ ಅರ್ಥವನ್ನು ಇಲ್ಲಿ ಗ್ರಹಿಸಬಾರದು.

**ಭಾಷ್ಯ**—**ಉಕ್ತಂ ಚ ।**

**ಆ ಪಿಬಂತ್ಯಖಿಲಾನ್ ಭೋಗಾನಿತ್ಯಾಪಶ್ಚಕ್ರವರ್ತಿನಃ ।**
**ಮುಕ್ತಾಸ್ತೇಷಾಂ ವಾಯುಸುತಶ್ಚಕ್ರೋ ನಾಮ ವ್ಯಪಾಶ್ರಯಃ ।**
**ಮುಕ್ತಸ್ತಸ್ಯ ಚ ಮುಕ್ತಸ್ತು ಮರುತ್ ಗಂಧರ್ವನಾಮವಾನ್ ।**
**ಸುತೋ ವಾಯೋಸ್ತತ್ಸುಖಾನಾಂ ಮೌಕ್ತಾನಾಮಂತರಿಕ್ಷಗಃ ।**
**ಮರುತಾಮೇಕ ಏವಾಸಾವಂತರಿಕ್ಷಶ್ಚ ವಾಯುಜಃ ।**
**ತತ್ಸುಖಾನಾಂ ಚ ಮೌಕ್ತಾನಾಮಾನಂದಾಃ ಸೂರ್ಯರೂಪಕಾಃ ।**
**ಸೌರಾಣಾಂ ಚಾಪಿ ಮುಕ್ತಾನಾಮಾನಂದಾಶ್ಚಂದ್ರರೂಪಕಾಃ ।**
**ಆಹ್ಲಾದನಾಚ್ಚಂದ್ರನಾಮಾ ದೇವೋಽಸಾವನಿರುದ್ಧಕಃ ।**
**ಸ ಏವ ಚಂದ್ರಮಾವಿಶ್ಯ ಸ್ಥಿತಸ್ತನ್ನಾಮಕೋಽಪಿ ಸಃ ।**

**ಅನುವಾದ**—ಎಲ್ಲ ರಾಜ್ಯಭೋಗಗಳನ್ನು ಅನುಭವಿಸುವುದರಿಂದ ಮುಕ್ತರಾದ ಚಕ್ರವರ್ತಿಗಳಿಗೆ ಆಪ ಎಂದು ಹೆಸರು. ಅವರಿಗೆ ಮುಕ್ತನಾದ ಚಕ್ರನಾಮಕ ವಾಯುಸುತನು ಆಶ್ರಯ. ಆ ಚಕ್ರನಿಗೆ ಮುಕ್ತನಾದ ಗಂಧರ್ವನಾಮಕ ವಾಯುಸುತನು ಆಶ್ರಯ. ಗಂಧರ್ವನಿಗೆ ಮುಕ್ತಿಯಲ್ಲಿ ಸಿಗುವ ಸ್ವರೂಪಾನಂದಗಳಿಗೆ ಮರುತ್ ದೇವತೆಗಳಲ್ಲಿ ಒಬ್ಬನಾದ ಅಂತರಿಕ್ಷಾಭಿಮಾನಿ ಅಂತರಿಕ್ಷನಾಮಕ ವಾಯುಪುತ್ರನು ಆಶ್ರಯ. ಅಂತರಿಕ್ಷನಿಗೆ ಮುಕ್ತಿಯಲ್ಲಿ ಲಭಿಸುವ ಸ್ವರೂಪಸುಖಗಳಿಗೆ ಸೂರ್ಯನ ಸ್ವರೂಪಾನಂದವು ಆಶ್ರಯ. ಸೂರ್ಯನಿಗೆ ಮುಕ್ತಿಯಲ್ಲಿ ಲಭಿಸುವ ಸುಖಗಳಿಗೆ ಚಂದ್ರನ ಸ್ವರೂಪಾನಂದವು ಆಶ್ರಯ. ಆಹ್ಲಾದಪಡಿಸುವುದರಿಂದ ಅನಿರುದ್ಧ ದೇವನು ಚಂದ್ರ ಎಂಬ ಹೆಸರುಳ್ಳವನು. ಚಂದ್ರನ ಒಳಗೆ ಇರುವುದರಿಂದಲೂ ಅವನಿಗೆ ಚಂದ್ರ ಎಂದು ಹೆಸರು.

**ಭಾಷ್ಯ**—ಅನಿರುದ್ಧಸುಖಾನಾಂ ಚ ಮೌಕ್ತಾನಾಮಿಂದ್ರ ಆಶ್ರಯಃ ।
ನಕ್ಷತ್ರನಾಮವಾನಿಂದ್ರೋ ನೈವಾನ್ಯಃ ಕ್ಷತ್ರಿಯೋಽಸ್ಯ ಹಿ ।
ವಿದ್ಯತೇ ತ್ರಿಷು ಲೋಕೇಷು ಬ್ರಹ್ಮಾದ್ಯಾಸ್ತೂರ್ಧ್ವಲೋಕಗಾಃ ।
ಆನಂದಾನಾಂ ತಥೈಂದ್ರಾಣಾಂ ಮೌಕ್ತಾನಾಂ ದೇವ ಆಶ್ರಯಃ ।
ದೇವೇತಿ ಲಿಂಗನಾಮ ಸ್ಯಾಲ್ಲಿಂಗಾತ್ಮಾ ರುದ್ರ ಉಚ್ಯತೇ ।
ಇಂದ್ರಾಶ್ರಯಃ ಶಿವಸ್ಯಾಪಿ ಸುಖಾನಾಂ ಮುಕ್ತಿಗಾಮಿನಾಮ್ ।
ಶಿವೋ ಹೀಶ್ವರನಾಮಾ ಸ್ಯಾತ್ ತತ್ಪಾರಮ್ಯಾತ್ ಸರಸ್ವತೀ ।
ಇಂದ್ರೇತ್ಯುಕ್ತಾ ತತ್ಸುಖಾನಾಂ ಬ್ರಹ್ಮಾಥಿರ್ಮುಕ್ತಿಗಾಮಿನಾಮ್ ।
ತತ್ಸುಖಾನಾಂ ಪರಂ ಬ್ರಹ್ಮ ಮುಕ್ತಿಗಾನಾಂ ಪರಾಶ್ರಯಃ ।
ಏವಮೇವ ಚ ಸಂಸಾರೇ ಬಿಂಬತ್ವಾದುತ್ತರೋತ್ತರಮ್ ।

**ಅನುವಾದ**—ಮುಕ್ತಿಯಲ್ಲಿ ಅನಿರುದ್ಧನಿಗೆ ಲಭಿಸುವ ಸುಖಿಗಳಿಗೆ ಇಂದ್ರನು ಆಶ್ರಯ. ಇಂದ್ರನಿಗೆ ನಕ್ಷತ್ರ ಎಂದು ಹೆಸರು. ಏಕೆಂದರೆ ಇವನಿಗೆ ಮೂರು ಲೋಕಗಳಲ್ಲಿ ಬೇರೊಬ್ಬರು ಕ್ಷತ್ರಿಯ ಎಂದರೆ ರಕ್ಷಕನಿಲ್ಲ. ರಕ್ಷಕರಾದ ಬ್ರಹ್ಮಾದಿಗಳು ಮೂರುಲೋಕಕ್ಕಿಂತ ಮೇಲಿನ ಲೋಕಗಳಲ್ಲಿ ಇರುವವರು. ಮುಕ್ತಿಯಲ್ಲಿರುವ ಇಂದ್ರನ ಸುಖಿಗಳಿಗೆ ದೇವನು ಆಶ್ರಯ. ದೇವ ಎನ್ನುವುದು ಲಿಂಗನ ಹೆಸರು. ಲಿಂಗ ಎಂದರೆ ರುದ್ರ, ಎಂದರೆ ಮುಕ್ತಿಪ್ರಕರಣವಾಗಿರುವುದರಿಂದ ಶೇಷ ಎಂದಿಟ್ಟು ಕೊಳ್ಳಬೇಕು. ಮುಕ್ತಿಯಲ್ಲಿರುವ ಶಿವನ, ಅಂದರೆ ಶೇಷನ ಸುಖಿಗಳಿಗೆ ಸರಸ್ವತಿಯು ಆಶ್ರಯ. ಶಿವನಿಗೆ ಈಶ್ವರ ಎಂದು ಹೆಸರೇ ಇರುವುದರಿಂದ ಐಶ್ವರ್ಯವುಳ್ಳವನು ಶಿವ. ಅವನ ಐಶ್ವರ್ಯವನ್ನೂ ಮೀರಿಸಿ ಪರಮೈಶ್ವರ್ಯವುಳ್ಳವಳಾದ್ದರಿಂದ 'ಇದಿ ಪರಮೈಶ್ವರ್ಯೇ' ಎಂಬ ಧಾತು ನಿಷ್ಪನ್ನವಾದ ಇಂದ್ರ ಎಂಬ ಹೆಸರು ಸರಸ್ವತಿಗೆ ಅನ್ವರ್ಥಕವಾಗಿದೆ. ಮುಕ್ತಿಯಲ್ಲಿರುವ ಸರಸ್ವತಿಯ ಸುಖಿಗಳಿಗೆ ಚತುರ್ಮುಖ ಬ್ರಹ್ಮನು ಆಶ್ರಯ. ಮುಕ್ತಿಯಲ್ಲಿರುವ ಅವನ ಸುಖಿಗಳಿಗೆ ಪರಬ್ರಹ್ಮನು ಶ್ರೇಷ್ಠ ಆಶ್ರಯ. ಮುಕ್ತಿಯಲ್ಲಿ ಮಾತ್ರವಲ್ಲದೇ ಸಂಸಾರದಲ್ಲಿಯೂ ಹೀಗೆಯೇ ತಾರತಮ್ಯ ಉಂಟೆನ್ನುವ ವಿವಕ್ಷೆ ಈ ಬ್ರಾಹ್ಮಣಕ್ಕೆ ಇದೆ. ಮೇಲು ಮೇಲಿನವರು ಕೆಳ ಕೆಳಗಿನ ವರಿಗೆ ಬಿಂಬರಾದುದರಿಂದಲೇ ಈ ತಾರತಮ್ಯ.

**ಭಾಷ್ಯ**—ನ ಪರಬ್ರಹ್ಮಣಃ ಕಶ್ಚಿದಾಶ್ರಯಃ ಸ್ಯಾಶ್ರಯಂ ಯತಃ ।
ತಸ್ಯಾಶ್ರಯೋಽಸ್ತಿ ನೇತ್ಯೇವಂ ಪೃಚ್ಛತೋಽಪಿ ಶಿರಃ ಸದಾ ।
ಭಿದ್ಯತೇ ಪರ್ವತೈರಂಧೇ ತಮಸಿಸ್ಥಸ್ಯ ದೈವತೈಃ ।
ತಸ್ಮಾದ್ ಬ್ರಹ್ಮ ಪರಂ ನಿತ್ಯಂ ಜ್ಞೇಯಂ ಪೂರ್ಣಮನಾಶ್ರಯಂ ।
ಇತಿ ಬ್ರಹ್ಮಾಂಡೇ ॥

**ಅನುವಾದ**—ಪರಬ್ರಹ್ಮನಿಗೆ ಆಶ್ರಯರಾದವರು ಯಾರೂ ಇಲ್ಲ. ಏಕೆಂದರೆ ಅವನು ಸ್ವತಂತ್ರ. ಅವನಿಗೆ ಆಶ್ರಯ ಇದೆಯೋ? ಎಂದು ಕೇಳುವವನಿಗೂ ತಮಸ್ಸು ಪ್ರಾಪ್ತವಾಗುತ್ತದೆ ಮತ್ತು ಅಲ್ಲಿ ಅವನ ತಲೆಯನ್ನು ದೇವತೆಗಳು ಬೆಟ್ಟದಂಥ ಬಂಡೆಗಳಿಂದ ಒಡೆದು ಕೆಡವುತ್ತಾರೆ. ಆದ್ದರಿಂದ ಪರಬ್ರಹ್ಮನನ್ನು ನಿತ್ಯ, ಪೂರ್ಣ ಮತ್ತು ಸ್ವತಂತ್ರ ಎಂದು ತಿಳಿಯಬೇಕು ಎಂದು ಬ್ರಹ್ಮಾಂಡಪುರಾಣದಲ್ಲಿ ಹೇಳಿದೆ.

**ಭಾಷ್ಯ—ರುದ್ರಂ ಸಮಾಶ್ರಿತಾ ದೇವಾ ರುದ್ರೋ ಬ್ರಹ್ಮಾಣಮಾಶ್ರಿತಃ ।**
**ಬ್ರಹ್ಮಾ ಮಾಮಾಶ್ರಿತೋ ನಿತ್ಯಂ ನಾಹಂ ಕಂಚಿದುಪಾಶ್ರಿತಃ ।**
**ಇತಿ ಭಾರತೇ ।**

**'ಅಥಾತ ಆನಂದಸ್ಯ ಮೀಮಾಂಸಾ ಭವತಿ' ಇತ್ಯಾದೇಶ್ಚ । ಸಂಸಾರಾಲ್ಲುಪ್ತಾನಾಂ ಮುಕ್ತಾನಾಂ ಕಾನಿ ಸುಖಾನಿ ಲೋಕಾಃ । ರೋಚಮಾನಾನಿ ಕಾನಿ ಲೋಕಾಃ । 'ಲೀನಂ ಸುಖಂ ಕ ಇತ್ಯುಕ್ತಂ ಕಂ ನಾಮ ಕ್ಷೇಯತೇಽತ್ರ ಯತ್ ।'**

**॥ ಇತಿ ಗಾರ್ಗಿ ಬ್ರಾಹ್ಮಣಂ ॥**

**ಅನುವಾದ**—ದೇವತೆಗಳೆಲ್ಲ ರುದ್ರನನ್ನು ಆಶ್ರಯಿಸಿದ್ದಾರೆ. ರುದ್ರನು ಬ್ರಹ್ಮನನ್ನು ಆಶ್ರಯಿಸಿದ್ದಾನೆ. ಬ್ರಹ್ಮನು ಯಾವಾಗಲೂ ನನ್ನನ್ನು ಆಶ್ರಯಿಸಿದ್ದಾನೆ. ನಾನು ಯಾರನ್ನೂ ಆಶ್ರಯಿಸಿಲ್ಲ ಎಂದು ಭಾರತದಲ್ಲಿ ಹೇಳಿದೆ. 'ಅಥಾತ ಆನಂದಸ್ಯ ಮೀಮಾಂಸಾ ಭವತಿ' ಎಂದು ಮೊದಲಾದ ಶ್ರುತಿವಾಕ್ಯಗಳಿಂದಲೂ ಮುಕ್ತರ ಆನಂದದಲ್ಲಿ ತಾರತಮ್ಯವಿದೆ ಎಂದು ತಿಳಿಯುತ್ತದೆ. 'ಲೋ' ಎಂದರೆ ಸಂಸಾರದಿಂದ ಲುಪ್ತರಾದ ಅಂದರೆ ಬಿಡುಗಡೆ ಹೊಂದಿದವರ 'ಕ' ಅಂದರೆ ಸುಖಗಳೇ ಲೋಕಗಳು. ಅಥವಾ 'ಲೋ' ಅನುಭವಗೋಚರವಾಗುವ 'ಕ' ಸುಖಗಳೇ ಲೋಕಗಳು. ಮೊದಲಿಗೆ ಆವೃತವಾಗಿದ್ದು ಅನಂತರ ಮೋಕ್ಷದಲ್ಲಿ ಅಭಿವ್ಯಕ್ತವಾಗುವ ಸ್ವರೂಪ ಸುಖವು 'ಕಃ' ಎಂದು ಪುಲ್ಲಿಂಗ ಶಬ್ದದಿಂದ ಹೇಳಲ್ಪಡುತ್ತದೆ. ಸಂಸಾರದಲ್ಲಿ ಇರುವ ಸುಖವು 'ಕಂ' ಎಂದು ನಪುಂಸಕಲಿಂಗದಿಂದ ಹೇಳಲ್ಪಡುತ್ತದೆ. ಆದ್ದರಿಂದ ಲೋಕಃ ಎಂಬ ಪುಲ್ಲಿಂಗ ಶಬ್ದವನ್ನು ಈ ಬ್ರಾಹ್ಮಣದಲ್ಲಿ ಪ್ರಯೋಗಿಸಿರುವುದು ಯುಕ್ತವೇ.

ಗಾರ್ಗಿ ಬ್ರಾಹ್ಮಣ ಮುಗಿಯಿತು.

**ಯಾರು ಸರ್ವಾಂತರ್ಯಾಮಿ ಮತ್ತು ಸರ್ವಾಶ್ರಯರು :**

**ಉಪನಿಷತ್—ಅಥ ಹೈನಮುದ್ದಾಲಕ ಆರುಣಿಃ ಪಪ್ರಚ್ಛ, ಯಾಜ್ಞವಲ್ಕ್ಯೇತಿ ಹೋವಾಚ । ಮದ್ರೇಷ್ವವಸಾಮ ತೇ ಪತಂಚಲಸ್ಯ ಕಾಪ್ಯಸ್ಯ ಗೃಹೇಷು**

**ಯಜ್ಞಮಧೀಯಾನಾಃ । ತಸ್ಯಾಸೀದ್ ಭಾರ್ಯಾ ಗಂಧರ್ವಗೃಹೀತಾ । ತಮಪೃಚ್ಛಾಮ ಕೋಽಸೀತಿ । ಸೋಽಬ್ರವೀತ್ ಕಬಂಧ ಆಥರ್ವಣ ಇತಿ । ಸೋಽಬ್ರವೀತ್ ಪತಂಚಲಂ ಕಾಪ್ಯಂ ಯಾಜ್ಞಿಕಾಂಶ್ಚ-ವೇತ್ಥ ನು ತ್ವಂ ಕಾಪ್ಯ ತತ್ ಸೂತ್ರಂ ಯೇನಾಯಂ ಚ ಲೋಕಃ ಪರಶ್ಚ ಲೋಕಃ ಸರ್ವಾಣಿ ಚ ಭೂತಾನಿ ಸಂದೃಬ್ಧಾನಿ ಭವಂತೀತಿ । ಸೋಽಬ್ರವೀತ್ ಪತಂಚಲಃ ಕಾಪ್ಯೋ- ನಾಹಂ ತದ್ ಭಗವನ್ ವೇದೇತಿ । ಸೋಽಬ್ರವೀತ್ ಪತಂಚಲಂ ಕಾಪ್ಯಂ ಯಾಜ್ಞಿಕಾಂಶ್ಚ-ವೇತ್ಥ ನು ತ್ವಂ ಕಾಪ್ಯ ತಮಂತರ್ಯಾಮಿಣಂ ಯ ಇಮಂ ಚ ಲೋಕಂ ಪರಂ ಚ ಲೋಕಂ ಸರ್ವಾಣಿ ಚ ಭೂತಾನಿ ಯೋಽಂತರೋ ಯಮಯತೀತಿ । ಸೋಽಬ್ರವೀತ್ ಪತಂಚಲಃ ಕಾಪ್ಯೋ-ನಾಹಂ ತಂ ಭಗವನ್ ವೇದೇತಿ। ಸೋಽಬ್ರವೀತ್ ಪತಂಚಲಂ ಕಾಪ್ಯಂ ಯಾಜ್ಞಿಕಾಂಶ್ಚ-ಯೋ ವೈ ತತ್ ಕಾಪ್ಯ ಸೂತ್ರಂ ವಿದ್ಯಾತ್ ತಂ ಚಾಂತರ್ಯಾಮಿಣಮಿತಿ, ಸ ಬ್ರಹ್ಮವಿತ್, ಸ ಲೋಕವಿತ್, ಸ ದೇವವಿತ್, ಸ ವೇದವಿತ್, ಸ ಭೂತವಿತ್, ಸ ಆತ್ಮವಿತ್, ಸ ಸರ್ವವಿತ್ ಇತಿ । ತೇಭ್ಯೋಽಬ್ರವೀತ್ । ತದಹಂ ವೇದ। ತಚ್ಚೇತ್ ತ್ವಂ ಯಾಜ್ಞವಲ್ಕ್ಯ ಸೂತ್ರಮವಿದ್ವಾನ್ ತಂ ಚಾಂತರ್ಯಾಮಿಣಂ ಬ್ರಹ್ಮಗವೀರುದಜಸೇ ಮೂರ್ಧಾ ತೇ ವಿಪತಿಷ್ಯತೀತಿ । ವೇದ ವಾ ಅಹಂ ಗೌತಮ ತತ್ ಸೂತ್ರಂ ತಂ ಚಾಂತರ್ಯಾಮಿಣಮಿತಿ । ಯೋ ವಾ ಇದಂ ಕಶ್ಚಿದ್ ಬ್ರೂಯಾದ್ ವೇದ ವೇದೇತಿ । ಯಥಾ ವೇತ್ಥ ತಥಾ ಬ್ರೂಹೀತಿ ।**

ಅನಂತರ ಅರುಣಪುತ್ರನಾದ ಉದ್ದಾಲಕನು ಕೇಳಿದನು 'ಯಾಜ್ಞವಲ್ಕ್ಯರೇ, ಮದ್ರದೇಶದಲ್ಲಿ ಕಪಿಗೋತ್ರಸಂಜಾತರಾದ ಪತಂಚಲರ ಮನೆಯಲ್ಲಿ ನಾವು ಯಜ್ಞ ವಿದ್ಯೆಯನ್ನು ಕಲಿಯುತ್ತಾ ವಾಸಿಸಿದ್ದೆವು. ಅವರ ಪತ್ನಿಯಲ್ಲಿ ಒಬ್ಬ ಗಂಧರ್ವನು ಆವೇಶಗೊಂಡನು. ಅವನನ್ನು ಕೇಳಿದೆವು ನೀನು ಯಾರು ಎಂದು. ಅಥರ್ವಣನ ಪುತ್ರ ಕಬಂಧ ಎಂದು ಆತ ಹೇಳಿದನು ಮತ್ತು ಪತಂಚಲರನ್ನೂ, ಯಾಜ್ಞಿಕರನ್ನೂ ಕೇಳಿದನು, 'ಕಾಪ್ಯರೇ, ಈ ಭೂಲೋಕ, ಅಂತರಿಕ್ಷ ಮೊದಲಾದ ಪರಲೋಕ ಮತ್ತು ಎಲ್ಲ ಪ್ರಾಣಿಗಳನ್ನು ಸುವ್ಯವಸ್ಥಿತವಾಗಿ ಧರಿಸಿರುವ ಆ ಸೂತ್ರವನ್ನು ತಿಳಿದಿದ್ದೀರಾ?' ಎಂದು. ಆ ಕಾಪ್ಯ ಪತಂಚಲರು ಹೇಳಿದರು, ಪೂಜ್ಯರೇ ಅದನ್ನು ನಾನು ತಿಳಿದಿಲ್ಲ. ಕಬಂಧನು ಹೇಳಿದನು, ಯಾರು ಈ ಲೋಕವನ್ನೂ, ಪರಲೋಕವನ್ನೂ ಮತ್ತು ಎಲ್ಲ ಪ್ರಾಣಿಗಳನ್ನೂ ಅವುಗಳ ಒಳಗಡೆ ಇದ್ದು ನಿಯಮನ ಮಾಡುವನೋ ಮತ್ತು ಪೂರ್ಣನಾಗಿರುವನೋ ಆ ಅಂತರ್ಯಾಮಿಯನ್ನು ತಿಳಿದಿದ್ದೀರಾ? ಎಂದು. ಪೂಜ್ಯರೇ, ನಾನು ಅದನ್ನು ತಿಳಿದಿಲ್ಲ ಎಂದು ಕಾಪ್ಯ ಪತಂಚಲರು ಹೇಳಿದರು. ಕಾಪ್ಯರೇ, ಯಾರು ಆ

ಸೂತ್ರವನ್ನು ಮತ್ತು ಆ ಅಂತರ್ಯಾಮಿಯನ್ನು ಮೇಲೆ ವರ್ಣಿಸಿದಂತೆ ತಿಳಿಯು ವನೋ ಅವನು ಬ್ರಹ್ಮಜ್ಞಾನಿ, ಅವನು ಲೋಕಜ್ಞಾನಿ, ಅವನು ದೇವಜ್ಞಾನಿ, ಅವನು ವೇದಜ್ಞಾನಿ, ಅವನು ಭೂತಜ್ಞಾನಿ, ಅವನು ಆತ್ಮಜ್ಞಾನಿ, ಅವನು ಸರ್ವ ಜ್ಞಾನಿ ಎಂದು ಆ ಗಂಧರ್ವನು ಕಾಪ್ಯ ಪತಂಚಲರಿಗೆ ಮತ್ತು ಯಾಜ್ಞಿಕರಿಗೆ ಹೇಳಿ ದನು. ಮತ್ತು ಅವರಿಗೆ ಸೂತ್ರ ಮತ್ತು ಅಂತರ್ಯಾಮಿಗಳ ಸ್ವರೂಪವನ್ನು ಉಪದೇಶಿ ಸಿದನು. ನಾನು ಆ ಸೂತ್ರ ಮತ್ತು ಅಂತರ್ಯಾಮಿಗಳ ಸ್ವರೂಪವನ್ನು ತಿಳಿದಿದ್ದೇನೆ. ಯಾಜ್ಞವಲ್ಕ್ಯರೇ, ನೀವು ಸೂತ್ರ ಮತ್ತು ಅಂತರ್ಯಾಮಿಗಳ ಸ್ವರೂಪವನ್ನು ತಿಳಿಯದೆ ಬ್ರಹ್ಮಜ್ಞಾನಿಗಳಿಗೆ ಸೇರಬೇಕಾದ ಗೋವುಗಳನ್ನು ತೆಗೆದುಕೊಂಡು ಹೋದರೆ ನಿಮ್ಮ ತಲೆಯು ಬಿದ್ದುಹೋಗುತ್ತದೆ ಎಂದು ಉದ್ದಾಲಕನು ಹೇಳಿದನು. ಗೌತಮರೇ, 'ಆ ಸೂತ್ರವನ್ನು ಮತ್ತು ಆ ಅಂತರ್ಯಾಮಿಯನ್ನು ನಾನು ತಿಳಿದಿದ್ದೇನೆ ಎಂದು ಯಾಜ್ಞವಲ್ಕ್ಯರು ಹೇಳಿದರು. ಇದನ್ನು ನಾನು ತಿಳಿದಿದ್ದೇನೆ, ನಾನು ತಿಳಿದಿದ್ದೇನೆ' ಎಂದು ಯಾರು ಬೇಕಾದರೂ ಆತ್ಮಶ್ಲಾಘನೆ ಮಾಡಿಕೊಳ್ಳಬಹುದು. ಅದರಿಂದ ಪ್ರಯೋಜನವಿಲ್ಲ. ತಿಳಿದಿದ್ದರೆ ತಿಳಿದಂತೆ ಹೇಳಿರಿ ಎಂದು ಉದ್ದಾಲಕನು ಹೇಳಿದನು.

**ಭಾಷ್ಯ—ಪುನಸ್ತಸ್ಯೈವ ಸರ್ವನಿಯಂತೃತ್ವಮುಚ್ಯತೇ । 'ಯೋಽಂತರೋ ಯಮಯತಿ' ಇತಿ ದ್ವಿತೀಯೋ ಯಶಬ್ದೋ ವಿಷ್ಣುಶಬ್ದಪರ್ಯಾಯಃ ।**

**ಅಕಯಪ್ರನಿಸಂಭೂಮಸಖಹಾ ವಿಷ್ಣುವಾಚಕಾಃ ।**
**ಏಕಾಕ್ಷರಾ ಅ ಇತ್ಯೇಷ ನಿರ್ದೋಷತ್ವಾಜ್ಜನಾರ್ದನಃ ।**
**ಆನಂದತ್ವಾತ್ ಕ ಇತ್ಯುಕ್ತಃ ಪೂರ್ಣತ್ವಾದ್ ಯ ಇತೀರ್ಯತೇ।**
**ಇತ್ಯಾದಿ ಶಬ್ದನಿರ್ಣಯೇ ।**

**'ಇತಿ' ಸ್ವಪ್ರತಿಜ್ಞಾತಪ್ರಕಾರೇಣ ।**

**ಅನುವಾದ**—ಹಿಂದೆ ಮುಕ್ತರಿಗೆ ಆಶ್ರಯನೆಂದು ಹೇಳಿದ ಪರಬ್ರಹ್ಮನೇ ಸರ್ವ ನಿಯಾಮಕ ಎಂದು ಪುನಃ ಈ ಬ್ರಾಹ್ಮಣದಲ್ಲಿ ಹೇಳಲ್ಪಡುತ್ತದೆ. 'ಯ ಇಮಂ ಚ ಲೋಕಂ' ಎಂದು ಯಕಾರ ಒಮ್ಮೆ ಬಂದಿದ್ದರೂ 'ಯೋಽಂತರೋ ಯಮಯತಿ' ಅಂತ ರ್ಯಾಮಿಯನ್ನು ತಿಳಿದಿದ್ದೀರಾ ಎಂದು ಕೇಳುವ ಗಂಧರ್ವನ ವಾಕ್ಯದಲ್ಲಿ ಬರುವ ಎರಡ ನೆಯ ಯಕಾರವು ವಿಷ್ಣುವಾಚಕ. ಅ, ಕ, ಯ, ಪ್ರ, ನಿ, ಸಂ, ಭೂ, ಮ, ಸ, ಖ, ಹ ಇವುಗಳು ವಿಷ್ಣುವಾಚಕಗಳಾದ ಏಕಾಕ್ಷರಗಳು. ಜನಾರ್ದನನು ದೋಷರಹಿತನಾದು ದರಿಂದ ಅ ಎಂದೂ, ಆನಂದರೂಪನಾದುದರಿಂದ ಕ ಎಂದೂ ಪೂರ್ಣನಾದುದರಿಂದ ಯ ಎಂದೂ ಹೇಳಲ್ಪಡುತ್ತಾನೆ ಎಂದು ಮುಂತಾಗಿ ಶಬ್ದನಿರ್ಣಯದಲ್ಲಿ ಹೇಳಲಾಗಿದೆ. 'ತಂ ಚಾಂತರ್ಯಾಮಿಣಮಿತಿ' ಎಂಬಲ್ಲಿರುವ ಇತಿಶಬ್ದ ವ್ಯರ್ಥವಲ್ಲ. ಅದಕ್ಕೆ ತನ್ನಿಂದ ಅಂದರೆ ಗಂಧರ್ವನಿಂದ ಹೇಳಲ್ಪಟ್ಟ ರೀತಿಯಿಂದ ಎಂದು ಅರ್ಥ.

ಭಾಷ್ಯ---ಬ್ರಹ್ಮವಿತ್ ಪೂರ್ಣವಿಜ್ಞಾನಾಲ್ಲೋಕಾನಾಂ ಕರ್ತೃವೇದನಾತ್ ।
ಲೋಕವಿದ್ ದೇವವಿಜ್ಞಾಸೌ ದೇವಾನಾಂ ದೇವವೇದನಾತ್ ।
ವೇದಾರ್ಥ ವೇದನಾಚ್ಚೈವ ವೇದವಿದ್ ಭೂತವಿತ್ ತಥಾ ।
ತನ್ನಿಯಂತೃಪರಿಜ್ಞಾನಾದಾತ್ಮವಿಜ್ಞಾऽಪ್ತವೇದನಾತ್ ।
ಸರ್ವವಿತ್ ಸರ್ವಸಾರಜ್ಞೋ ಯೋ ವೇದ ಪುರುಷೋತ್ತಮಮ್ ।
ದೇಶಾಧಿಷ್ಠಾತೃವಿಜ್ಞಾನಾದ್ ದೇಶಜ್ಞ ಇತಿ ಚೋಚ್ಯತೇ ।
ಯಥಾ ತದ್ವದ್ಧರೇಜ್ಞಾನಾತ್ ಸರ್ವಜ್ಞ ಇತಿ ವೈದಿಕಮ್ ।
ಇತಿ ಬ್ರಹ್ಮತರ್ಕೇ ।

**ಅನುವಾದ**—'ಜೀವರಲ್ಲಿ ಉತ್ತಮನಾದ ಸೂತ್ರನನ್ನು ಮತ್ತು ಚೇತನಗಳಲ್ಲಿ ಉತ್ತಮನಾದ ವಿಷ್ಣುವನ್ನು ತಿಳಿಯುವ ಉತ್ತಮಾಧಿಕಾರಿಯು, ಸೂತ್ರನು ಸರ್ವಾಶ್ರಯ ಮತ್ತು ಅಂತರ್ಯಾಮಿಯು ಸರ್ವನಿಯಾಮಕ ಎಂಬ ತಿಳಿವಿಗೆ ಅವಶ್ಯಕವಾದ ಎಲ್ಲ ವಿಷಯಗಳನ್ನು ತಿಳಿದಿರುವನು. ಆದ್ದರಿಂದ ಅವನು ಪೂರ್ಣತ್ವಜ್ಞಾನವುಳ್ಳವನಾದ್ದರಿಂದ ಬ್ರಹ್ಮಜ್ಞಾನಿ. ಲೋಕಗಳ ಧಾರಣ ನಿಯಮನಕರ್ತೃವಿನ ಜ್ಞಾನವಿರುವುದರಿಂದ ಲೋಕಜ್ಞಾನಿ. ದೇವತೆಗಳ ದೇವನನ್ನು ತಿಳಿದಿರುವುದರಿಂದ ದೇವಜ್ಞಾನಿ. ವೇದಗಳ ಅರ್ಥವನ್ನು ತಿಳಿದಿರುವುದರಿಂದ ವೇದಜ್ಞಾನಿ. ಭೂತಗಳ ಆಧಾರ ಹಾಗೂ ನಿಯಾಮಕರನ್ನು ತಿಳಿದಿರುವುದರಿಂದ ಭೂತಜ್ಞಾನಿ. ಆತ್ಮ ಅಂದರೆ ವ್ಯಾಪಿಸಿರುವವನು ಎಂದು ಅವರನ್ನು ತಿಳಿದಿರುವುದರಿಂದ ಆತ್ಮಜ್ಞಾನಿ. ಸರ್ವೋತ್ತಮನನ್ನು ತಿಳಿದಿರುವುದರಿಂದ ಸರ್ವಜ್ಞಾನಿ. ದೇಶದ ಆಧಾರವನ್ನು ತಿಳಿದವನಿಗೆ ದೇಶಜ್ಞಾನಿ ಎಂದು ಹೇಳುವಂತೆ ಲೋಕದ ಆಧಾರ ಹಾಗೂ ನಿಯಾಮಕರ ಜ್ಞಾನವಿರುವವನಿಗೆ ಲೋಕಜ್ಞಾನಿ ಎನ್ನುತ್ತಾರೆ ಎಂದು ಮುಂತಾಗಿ ಉಪನಿಷತ್ತು ಹೇಳಿದೆ' ಎಂದು ಬ್ರಹ್ಮತರ್ಕದಲ್ಲಿ ಹೇಳಿದೆ.

**ವಿವರಣೆ**—ಜೀವೋತ್ತಮನಾದ ಸೂತ್ರನಾಮಕ ವಾಯುವನ್ನು ಸರ್ವಾಧಾರನೆಂದೂ, ಸರ್ವೋತ್ತಮನಾದ ವಿಷ್ಣುವನ್ನು ಸರ್ವಾಂತರ್ನಿಯಾಮಕನೆಂದೂ ತಿಳಿಯುವ ಉತ್ತಮಾಧಿಕಾರಿಯು ಅವರಲ್ಲಿ ಸರ್ವಾಧಾರತ್ವ, ಸರ್ವನಿಯಾಮಕತ್ವಗಳಿಗೆ ಆವಶ್ಯಕವಾದ ಜ್ಞಾನ ಶಕ್ತ್ಯಾದಿ ಗುಣಪೂರ್ಣತ್ವವನ್ನು ತಿಳಿದಿರುವುದರಿಂದ ಅವನು ಬ್ರಹ್ಮಜ್ಞಾನಿ ಎನಿಸುವನು. ಬ್ರಹ್ಮ ಎಂದರೆ ಪೂರ್ಣ. ಲೋಕಗಳ ಧಾರಣ ನಿಯಮನ ಕರ್ತೃತ್ವಗಳನ್ನೂ ಅವರಲ್ಲಿ ತಿಳಿದಿರುವುದರಿಂದ ಲೋಕಗಳನ್ನು ಅವನು ತಿಳಿದಿರಬೇಕಾಗುತ್ತದೆ. ಆದ್ದರಿಂದ ಅವನು ಲೋಕಜ್ಞಾನಿ ಎನಿಸುವನು. ಸೂತ್ರನೂ, ವಿಷ್ಣುವೂ ದೇವತೆಗಳಿಗೆ ದೇವರಾಗಿ, ಅವರಿಗೆ ದೇವತ್ವ ನೀಡಿ, ಅವರಿಗೆ ಆಧಾರ ಹಾಗೂ ನಿಯಾಮಕರಾಗಿರುವರು. ಅವರ ಸರ್ವಾಧಾರತ್ವ, ಸರ್ವನಿಯಾಮಕತ್ವ

ಗಳನ್ನು ತಿಳಿದವನು ಈ ದೇವಾಧಾರತ್ವ ದೇವನಿಯಾಮಕತ್ವಗಳನ್ನೂ ತಿಳಿದಿರುವ್ವ ದರಿಂದ ದೇವತೆಗಳನ್ನೂ ತಿಳಿದಿರಬೇಕಾಗುತ್ತದೆ. ಆದ್ದರಿಂದ ಅವನು ದೇವಜ್ಞಾನಿ ಎನಿಸುವನು. ಸರ್ವಾಧಾರತ್ವ ಸರ್ವನಿಯಾಮಕತ್ವಗಳು ವೇದಗಳಲ್ಲಿ ಪ್ರತಿಪಾದಿತ ವಾಗುವುದರಿಂದ, ಪ್ರತಿಪಾದ್ಯವಾದ ಅವುಗಳನ್ನು ತಿಳಿದವನು ಪ್ರತಿಪಾದಕವಾದ ವೇದ ಗಳನ್ನೂ ತಿಳಿದಿರುತ್ತಾನೆ. ಆದ್ದರಿಂದ ವೇದಜ್ಞಾನಿ ಎನಿಸುತ್ತಾನೆ. ಸರ್ವಾಧಾರ ಸರ್ವನಿಯಾಮಕರು ಸಕಲ ಪ್ರಾಣಿಗಳಿಗೆ ಆಧಾರ ಹಾಗೂ ನಿಯಾಮಕರಾಗಿರುವ ರೆಂದು ತಿಳಿದಿರುವುದರಿಂದ, ಸಕಲ ಪ್ರಾಣಿಗಳನ್ನು ತಿಳಿಯದೆ ಸಕಲ ಪ್ರಾಣ್ಯಾಧಾರತ್ವ ನಿಯಾಮಕತ್ವಗಳನ್ನು ತಿಳಿಯಲಾಗದುದರಿಂದ ಭೂತಜ್ಞಾನಿ ಎನಿಸುವನು. ಭೂತ ಗಳೆಂದರೆ ಪ್ರಾಣಿಗಳು. ಸರ್ವವ್ಯಾಪ್ತನಿಗೇ ಸರ್ವಾಧಾರತ್ವ ಸರ್ವನಿಯಾಮಕತ್ವ ಗಳನ್ನು ತಿಳಿದವನು ಸರ್ವವ್ಯಾಪ್ತತ್ವವನ್ನೂ ತಿಳಿದಿರುವುದರಿಂದ ಆತ್ಮಜ್ಞಾನಿಯೆನಿ ಸುವನು. ಆತ್ಮ ಎಂದರೆ ಸರ್ವವ್ಯಾಪ್ತ. ಸರ್ವಾಧಾರ, ಸರ್ವನಿಯಾಮಕರೇ ಸರ್ವೋತ್ತಮರಾಗಿರುವುದರಿಂದ ಸರ್ವಾಧಾರ ಸರ್ವನಿಯಾಮಕರನ್ನು ತಿಳಿದವನು ಸರ್ವೋತ್ತಮರನ್ನೇ ತಿಳಿದಿರುತ್ತಾನೆ. ಆದ್ದರಿಂದ ಸರ್ವವನ್ನೂ ತಿಳಿದಿರುವುದರಿಂದ ಸರ್ವಜ್ಞಾನಿಯೆನಿಸುವನು. ಇದು ಉತ್ತಮಾಧಿಕಾರಿಗಳ ವಿಷಯದಲ್ಲಿ ಮಾತ್ರ ಕೂಡುತ್ತದೆ. ಸಾಮಾನ್ಯ ಅಧಿಕಾರಿಗಳು ಲೋಕ ವೇದ ದೇವ ಭೂತ ಮುಂತಾದವು ಗಳನ್ನು ಪ್ರತ್ಯೇಕವಾಗಿ ಅರಿಯಲಾರರು. ಆದ್ದರಿಂದ ಲೋಕಧಾರಣಾದಿ ಕರ್ತನನ್ನು ತಿಳಿದ ಮಾತ್ರಕ್ಕೆ ಲೋಕವನ್ನು ತಿಳಿದಂತೆಯೆ, ವೇದಪ್ರತಿಪಾದ್ಯನನ್ನು ತಿಳಿದರೆ ವೇದ ವನ್ನೂ ತಿಳಿದಂತೆಯೇ ಎಂದು ಮುಂತಾಗಿ ಔಪಚಾರಿಕವಾಗಿ ಲೋಕಜ್ಞಾನಿತ್ವ, ವೇದ ಜ್ಞಾನಿತ್ವಗಳನ್ನು ಅಂಗೀಕರಿಸಬೇಕಾಗುತ್ತದೆ. ಇದು ರೂಢಿ. ಇದಕ್ಕೆ ಉದಾಹರಣೆ– ದೇಶವನ್ನಾಳುವ ದೊರೆಯನ್ನು ಬಲ್ಲವನಾದರೆ, ದೇಶವನ್ನು ಬಲ್ಲವನೆಂದೇ ಔಪಚಾರಿಕ ವಾಗಿ ವ್ಯವಹರಿಸುತ್ತಾರೆ. ಹಾಗೆಯೇ ಪ್ರಕೃತದಲ್ಲಿಯೂ ತಿಳಿಯಬೇಕು.

**ಮುಖ್ಯವಾಯು ಪ್ರಪಂಚಕ್ಕೆ ಆಧಾರ ಸೂತ್ರ :**

**ಉಪನಿಷತ್—ಸ ಹೋವಾಚ । ವಾಯುರ್ವೈ ಗೌತಮ ತತ್ ಸೂತ್ರಮ್ । ವಾಯುನಾ ವೈ ಗೌತಮ ಸೂತ್ರೇಣಾಯಂ ಚ ಲೋಕಃ ಪರಶ್ಚ ಲೋಕಃ ಸರ್ವಾಣಿ ಚ ಭೂತಾನಿ ಸಂದೃಬ್ಧಾನಿ ಭವಂತೀತಿ । ತಸ್ಮಾದ್ ವೈ ಗೌತಮ ಪುರುಷಂ ಪ್ರೇತಮಾಹುರ್ವ್ಯಸ್ರಂಸಿಷತಾಸ್ಯಾಂಗಾನೀತಿ । ವಾಯುನಾ ಹಿ ವೈ ಗೌತಮ ಸೂತ್ರೇಣ ಸಂದೃಬ್ಧಾನಿ ಭವಂತೀತಿ । ಏವಮೇವೈತದ್ । ಯಾಜ್ಞವಲ್ಕ್ಯ, ಅಂತರ್ಯಾಮಿಣಂ ಬ್ರೂಹೀತಿ ।**

ಯಾಜ್ಞವಲ್ಕ್ಯರು ಹೇಳಿದರು. 'ಗೌತಮ! ವಾಯುವೇ ಸೂತ್ರ. ಏಕೆಂದರೆ ಗೌತಮ! ಸೂತ್ರನಾದ ವಾಯುವಿನಿಂದಲೇ ಈ ಲೋಕ ಮತ್ತು ಪರಲೋಕ ಮತ್ತು

ಎಲ್ಲ ಪ್ರಾಣಿಗಳು ಸುವ್ಯವಸ್ಥಿತವಾಗಿ ಧರಿಸಲ್ಪಟ್ಟಿವೆ. ಗೌತಮ! ವಾಯುವು ಸರ್ವಾಧಾರನಾದುದರಿಂದಲೇ ಮೃತನಾದ ಅಂದರೆ ಪ್ರಾಣವಾಯುರಹಿತನಾದ ಪುರುಷನ ಬಗ್ಗೆ ಇವನ ಕಣ್ಣು ಕೈ ಕಾಲು ಮುಂತಾದ ಎಲ್ಲ ಅಂಗಗಳು ದಾರ ಕಡಿದ ಮಣಿಗಳಂತೆ ಬಿದ್ದು ಹೋದವು ಎಂದು ಹೇಳುತ್ತಾರೆ. ಅದ್ದರಿಂದ ಗೌತಮ! ಸೂತ್ರನಾದ ವಾಯುವಿನಿಂದಲೇ ಎಲ್ಲವೂ ಸುವ್ಯವಸ್ಥಿತವಾಗಿ ಧರಿಸಲ್ಪಟ್ಟಿದೆ'. 'ಯಾಜ್ಞವಲ್ಕ್ಯರೇ, ಇದು ಸರಿ. ಇನ್ನು ಅಂತರ್ಯಾಮಿಯ ಬಗ್ಗೆ ಹೇಳಿರಿ'.

**ಭಾಷ್ಯ—ಸ್ಯೂತಂ ಜಗದಿದಂ ಯಸ್ಮಿನ್ ಸೂತ್ರಂ ವಾಯುರಸೌ ಸ್ಮೃತಃ ।**
**ತಂ ಚಾಪಿ ಯಮಯೇದ್ ಯಸ್ಮಾದ್ ಅಂತರ್ಯಾಮೀ ಹರಿಃಸ್ಮೃತಃ।**

**ಅನುವಾದ**—ಈ ಜಗತ್ತು ಯಾರಲ್ಲಿ ಆಶ್ರಯ ಪಡೆದಿದೆಯೋ ಅವನು ಸೂತ್ರನೆನಿಸುವನು. ಆದ್ದರಿಂದ ವಾಯುವೇ ಸೂತ್ರನೆನಿಸಿದ್ದಾನೆ. ಅವನಿಗೂ ನಿಯಾಮಕನಾದುದರಿಂದ ಹರಿಯು ಅಂತರ್ಯಾಮಿ ಎನಿಸಿದ್ದಾನೆ.

**ವಿಷ್ಣು ಸರ್ವಾಂತರ್ಯಾಮಿ :**

**ಉಪನಿಷತ್—ಯಃ ಪೃಥಿವ್ಯಾಂ ತಿಷ್ಠನ್ ಪೃಥಿವ್ಯಾ ಅಂತರೋ,ಯಂ ಪೃಥಿವೀ ನ ವೇದ,ಯಸ್ಯ ಪೃಥಿವೀ ಶರೀರಂ, ಯಃ ಪೃಥಿವೀಮಂತರೋ ಯಮಯತಿ ಏಷ ತೇ ಆತ್ಮಾ ಅಂತರ್ಯಾಮ್ಯಮೃತಃ ।**

ಯಾರು ಪೃಥಿವೀನಾಮಕ ಗರುಡ-ಗರುಡ ಪತ್ನಿಯರಲ್ಲಿದ್ದು ಅವರಿಗಿಂತ ಭಿನ್ನನಾಗಿದ್ದಾನೋ, ಅವರು ಯಾರನ್ನು ತಿಳಿದಿಲ್ಲವೋ, ಅವರು ಯಾರಿಗೆ ಅಧೀನರಾಗಿದ್ದು ಶರೀರದಂತಿರುವರೋ, ಯಾರು ಅವರ ಒಳಗಿದ್ದು ತಾನು ಸುಖಪಡುತ್ತಾ ಅವರಿಗೂ ಸುಖ ಉಂಟುಮಾಡುವನೋ ಮತ್ತು ನಿಯಮಿಸುವನೋ ಅವನೇ ನಿನ್ನ ನಿಯಾಮಕನಾದ ನಿತ್ಯನಾದ ಅಂತರ್ಯಾಮಿ.

**ಉಪನಿಷತ್—ಯೋ ಅಪ್ಸು ತಿಷ್ಠನ್ ಅದ್ಭ್ಯೋಽಂತರೋ, ಯಮಾಪೋ ನ ವಿದುಃ,ಯಸ್ಯಾಪಃ ಶರೀರಂ,ಯೋಽಪೋಽಂತರೋ ಯಮಯತಿ ಏಷ ತೇ ಆತ್ಮಾ ಅಂತರ್ಯಾಮ್ಯಮೃತಃ ।**

ಯಾರು ಜಲಾಭಿಮಾನಿ ವರುಣನಲ್ಲಿ ಇದ್ದು ವರುಣನಿಂದ ಭಿನ್ನನಾಗಿದ್ದಾನೋ ವರುಣನು ಯಾರನ್ನು ತಿಳಿದಿಲ್ಲವೋ, ವರುಣ ಯಾರಿಗೆ ಶರೀರದಂತಿರುವನೋ, ಯಾರು ವರುಣನ ಒಳಗಿದ್ದು ಸುಖ ಉಂಟುಮಾಡುವನೋ ಮತ್ತು ನಿಯಮಿಸುವನೋ ಅವನೇ ನಿನ್ನ ನಿಯಾಮಕನಾದ ನಿತ್ಯನಾದ ಅಂತರ್ಯಾಮಿ.

**ಉಪನಿಷತ್—ಯೋऽಗ್ನೌ ತಿಷ್ಠನ್ ಅಗ್ನೇರಂತರೋ, ಯಮಗ್ನಿರ್ನ ವೇದ, ಯಸ್ಯಾಗ್ನಿಃ ಶರೀರಂ, ಯೋऽಗ್ನಿಮಂತರೋ ಯಮಯತಿ ಏಷ ತೇ ಆತ್ಮಾ ಅಂತರ್ಯಾಮ್ಯಮೃತಃ ।**

ಯಾರು ಭೂತಾಗ್ನಿಯ ಅಭಿಮಾನಿಯಲ್ಲಿ ಇದ್ದು, ಆ ಅಗ್ನಿಯಿಂದ ಭಿನ್ನನಾಗಿದ್ದಾನೋ, ಅಗ್ನಿಯು ಯಾರನ್ನು ತಿಳಿದಿಲ್ಲವೋ, ಅಗ್ನಿಯು ಯಾರಿಗೆ ಶರೀರದಂತಿರುವನೋ, ಯಾರು ಅಗ್ನಿಯ ಒಳಗಿದ್ದು ಸುಖ ಉಂಟುಮಾಡುವನೋ ಮತ್ತು ನಿಯಮಿಸುವನೋ ಅವನೇ ನಿನ್ನ ನಿಯಾಮಕನಾದ ನಿತ್ಯನಾದ ಅಂತರ್ಯಾಮಿ.

**ಉಪನಿಷತ್—ಯೋऽಂತರಿಕ್ಷೇ ತಿಷ್ಠನ್ ಅಂತರಿಕ್ಷಾದಂತರೋ, ಯಮಂತರಿಕ್ಷಂ ನ ವೇದ, ಯಸ್ಯಾಂತರಿಕ್ಷಂ ಶರೀರಂ, ಯೋऽಂತರಿಕ್ಷಮಂತರೋ ಯಮಯತಿ ಏಷ ತೇ ಆತ್ಮಾ ಅಂತರ್ಯಾಮ್ಯಮೃತಃ ।**

ಯಾರು ಅಂತರಿಕ್ಷನಾಮಕರಾದ ರುದ್ರ ಮತ್ತು ವಾಯು ಪತ್ನಿ ಶ್ರದ್ಧಾದೇವಿಯರಲ್ಲಿ ಇದ್ದು ಅವರಿಂದ ಭಿನ್ನನಾಗಿದ್ದಾನೋ, ರುದ್ರ–ಶ್ರದ್ಧಾದೇವಿಯರು ಯಾರನ್ನು ತಿಳಿದಿಲ್ಲವೋ,ರುದ್ರ–ಶ್ರದ್ಧಾದೇವಿಯರು ಯಾರಿಗೆ ಶರೀರದಂತಿರುವರೋ ಯಾರು ರುದ್ರ–ಶ್ರದ್ಧಾದೇವಿಯರಲ್ಲಿದ್ದು ಸುಖ ಉಂಟು ಮಾಡುವನೋ ಮತ್ತು ನಿಯಮಿಸುವನೋ ಅವನೇ ನಿನ್ನ ನಿಯಾಮಕನಾದ ನಿತ್ಯನಾದ ಅಂತರ್ಯಾಮಿ.

**ಉಪನಿಷತ್—ಯೋ ವಾಯೌ ತಿಷ್ಠನ್ ವಾಯೋರಂತರೋ, ಯಂ ವಾಯುರ್ನ ವೇದ, ಯಸ್ಯ ವಾಯುಃ ಶರೀರಂ, ಯೋ ವಾಯುಮಂತರೋ ಯಮಯತಿ ಏಷ ತೇ ಆತ್ಮಾ ಅಂತರ್ಯಾಮ್ಯಮೃತಃ ।**

ಯಾರು ಮುಖ್ಯಪ್ರಾಣನಲ್ಲಿದ್ದು ಮುಖ್ಯಪ್ರಾಣನಿಂದ ಭಿನ್ನನೋ, ಯಾರನ್ನು ಮುಖ್ಯಪ್ರಾಣನು ತಿಳಿದಿಲ್ಲವೋ, ಮುಖ್ಯಪ್ರಾಣನು ಯಾರಿಗೆ ಶರೀರದಂತಿರುವನೋ, ಯಾರು ಮುಖ್ಯಪ್ರಾಣನಲ್ಲಿದ್ದು ಸುಖ ಉಂಟುಮಾಡುವನೋ ಮತ್ತು ನಿಯಮಿಸುವನೋ ಅವನೇ ನಿನ್ನ ನಿಯಾಮಕನಾದ ನಿತ್ಯನಾದ ಅಂತರ್ಯಾಮಿ.

**ಉಪನಿಷತ್—ಯೋ ದಿವಿ ತಿಷ್ಠನ್ ದಿವೋऽಂತರೋ, ಯಂ ದ್ಯೌರ್ನ ವೇದ, ಯಸ್ಯ ದ್ಯೌಃ ಶರೀರಂ, ಯೋ ದಿವಮಂತರೋ ಯಮಯತಿ ಏಷ ತೇ ಆತ್ಮಾ ಅಂತರ್ಯಾಮ್ಯಮೃತಃ ।**

ಯಾರು ದ್ಯುನಾಮಕರಾದ ಸರಸ್ವತಿ ಉಮೆಯರಲ್ಲಿದ್ದು ಸರಸ್ವತಿ ಉಮೆಯರಿಂದ ಭಿನ್ನನೋ, ಯಾರನ್ನು ಸರಸ್ವತಿ ಉಮೆಯರು ತಿಳಿದಿಲ್ಲವೋ, ಸರಸ್ವತಿ–ಉಮೆ

ಯಾರು ಯಾರಿಗೆ ಶರೀರದಂತಿರುವವರೋ, ಯಾರು ಸರಸ್ವತಿ ಉಮೆಯರಲ್ಲಿದ್ದು ಸುಖ ಉಂಟುಮಾಡುವನೋ ಮತ್ತು ನಿಯಮಿಸುವನೋ ಅವನೇ ನಿನ್ನ ನಿಯಾಮಕನಾದ ನಿತ್ಯನಾದ ಅಂತರ್ಯಾಮಿ.

**ಉಪನಿಷತ್—ಯ ಆದಿತ್ಯೇ ತಿಷ್ಠನ್ ಆದಿತ್ಯಾದಂತರೋ, ಯಮಾದಿತ್ಯೋ ನ ವೇದ, ಯಸ್ಯ ಆದಿತ್ಯಃ ಶರೀರಂ, ಯ ಆದಿತ್ಯಮಂತರೋ ಯಮಯತಿ, ಏಷ ತೇ ಆತ್ಮಾ ಅಂತರ್ಯಾಮ್ಯಮೃತಃ ।**

ಯಾರು ಸೂರ್ಯನಲ್ಲಿದ್ದು ಸೂರ್ಯನಿಂದ ಭಿನ್ನನೋ, ಸೂರ್ಯನು ಯಾರನ್ನು ತಿಳಿದಿಲ್ಲವೋ, ಸೂರ್ಯನು ಯಾರಿಗೆ ಶರೀರದಂತಿರುವನೋ, ಯಾರು ಸೂರ್ಯನಲ್ಲಿದ್ದು ಸುಖ ಉಂಟುಮಾಡುವನೋ ಮತ್ತು ನಿಯಮಿಸುವನೋ ಅವನೇ ನಿನ್ನ ನಿಯಾಮಕನಾದ, ನಿತ್ಯನಾದ ಅಂತರ್ಯಾಮಿ.

**ಉಪನಿಷತ್—ಯೋ ದಿಕ್ಷು ತಿಷ್ಠನ್ ದಿಗ್ಭ್ಯೋಽಂತರೋ, ಯಂ ದಿಶೋ ನ ವಿದುಃ,ಯಸ್ಯ ದಿಶಃ ಶರೀರಂ,ಯೋ ದಿಶೋಽಂತರೋ ಯಮಯತಿ ಏಷ ತೇ ಆತ್ಮಾ ಅಂತರ್ಯಾಮ್ಯಮೃತಃ ।**

ಯಾರು ದಿಕ್ಕುಗಳ ಅಭಿಮಾನಿ ದೇವತೆಗಳಲ್ಲಿದ್ದು ಅವರಿಂದ ಭಿನ್ನನೋ, ಅವರು ಯಾರನ್ನು ತಿಳಿದಿಲ್ಲವೋ, ಅವರು ಯಾರಿಗೆ ಶರೀರದಂತಿರುವರೋ, ಯಾರು ಅವರುಗಳಲ್ಲಿದ್ದು ಸುಖವನ್ನುಂಟು ಮಾಡುವನೋ ಮತ್ತು ನಿಯಮಿಸುವನೋ ಅವನೇ ನಿನ್ನ ನಿಯಾಮಕನಾದ ನಿತ್ಯನಾದ ಅಂತರ್ಯಾಮಿ.

**ಉಪನಿಷತ್—ಯಶ್ಚಂದ್ರತಾರಕೇ ತಿಷ್ಠನ್ ಚಂದ್ರತಾರಕಾದಂತರೋ, ಯಂ ಚಂದ್ರತಾರಕಂ ನ ವೇದ, ಯಸ್ಯ ಚಂದ್ರ ತಾರಕಂ ಶರೀರಂ, ಯಶ್ಚಂದ್ರ ತಾರಕಮಂತರೋ ಯಮಯತಿ ಏಷ ತೇ ಆತ್ಮಾ ಅಂತರ್ಯಾಮ್ಯಮೃತಃ ।**

ಯಾರು ಚಂದ್ರನಾಮಕ ಕಾಮನಲ್ಲಿಯೂ, ತಾರಕನಾಮಕ ಇಂದ್ರನಲ್ಲಿಯೂ ಇದ್ದು ಇಂದ್ರ ಕಾಮರಿಂದ ಭಿನ್ನನೋ, ಇಂದ್ರ ಕಾಮರು ಯಾರನ್ನು ತಿಳಿದಿಲ್ಲವೋ ಇಂದ್ರಕಾಮರು ಯಾರಿಗೆ ಶರೀರದಂತಿರುವರೋ, ಯಾರು ಇಂದ್ರ ಕಾಮರಲ್ಲಿದ್ದು ಸುಖ ಉಂಟು ಮಾಡುವನೋ ಮತ್ತು ನಿಯಮಿಸುವನೋ ಅವನೇ ನಿನ್ನ ನಿಯಾಮಕನಾದ ನಿತ್ಯನಾದ ಅಂತರ್ಯಾಮಿ.

**ಉಪನಿಷತ್—ಯ ಆಕಾಶೇ ತಿಷ್ಠನ್ ಆಕಾಶಾದಂತರೋ, ಯಮಾಕಾಶೋ ನ ವೇದ, ಯಸ್ಯಾಕಾಶಃ ಶರೀರಂ, ಯ ಆಕಾಶಮಂತರೋ ಯಮಯತಿ ಏಷ ತೇ ಆತ್ಮಾ ಅಂತರ್ಯಾಮ್ಯಮೃತಃ ।**

ಯಾರು ಆಕಾಶಾಭಿಮಾನಿ ಗಣಪತಿಯಲ್ಲಿದ್ದು ಗಣಪತಿಯಿಂದ ಭಿನ್ನನೋ, ಗಣಪತಿಯು ಯಾರನ್ನು ತಿಳಿದಿಲ್ಲವೋ, ಗಣಪತಿಯು ಯಾರಿಗೆ ಶರೀರದಂತಿರುವನೋ ಯಾರು ಗಣಪತಿಯಲ್ಲಿದ್ದು ಸುಖವನ್ನುಂಟುಮಾಡುವನೋ ಮತ್ತು ನಿಯಮಿಸು ವನೋ ಅವನೇ ನಿನ್ನ ನಿಯಾಮಕನಾದ ನಿತ್ಯನಾದ ಅಂತರ್ಯಾಮಿ.

**ಉಪನಿಷತ್—ಯಸ್ತಮಸಿ ತಿಷ್ಠನ್ ತಮಸೋಽಂತರೋ, ಯಂ ತಮೋ ನ ವೇದ, ಯಸ್ಯ ತಮಃ ಶರೀರಂ,ಯಸ್ತಮೋಽಂತರೋ ಯಮಯತಿ ಏಷ ತೇ ಆತ್ಮಾ ಅಂತರ್ಯಾಮ್ಯಮೃತಃ ।**

ಯಾರು ತಮೋ ನಾಮಕಳಾದ ದುರ್ಗಾದೇವಿಯಲ್ಲಿದ್ದು ದುರ್ಗಾದೇವಿಯಿಂದ ಭಿನ್ನನೋ, ದುರ್ಗಾದೇವಿಯು ಯಾರನ್ನು ತಿಳಿದಿಲ್ಲವೋ, ದುರ್ಗಾದೇವಿಯು ಯಾರಿಗೆ ಶರೀರದಂತಿರುವಳೋ, ಯಾರು ದುರ್ಗಾದೇವಿಯಲ್ಲಿದ್ದು ಸುಖವನ್ನುಂಟು ಮಾಡುವನೋ ಮತ್ತು ನಿಯಮಿಸುವನೋ ಅವನೇ ನಿನ್ನ ನಿಯಾಮಕನಾದ ನಿತ್ಯ ನಾದ ಅಂತರ್ಯಾಮಿ.

**ಉಪನಿಷತ್—ಯಸ್ತೇಜಸಿ ತಿಷ್ಠನ್ ತೇಜಸೋಽಂತರೋ, ಯಂ ತೇಜೋ ನ ವೇದ, ಯಸ್ಯ ತೇಜಃ ಶರೀರಂ, ಯಸ್ತೇಜೋಽಂತರೋ ಯಮಯತಿ ಏಷ ತೇ ಆತ್ಮಾ ಅಂತರ್ಯಾಮ್ಯಮೃತಃ । ಇತ್ಯಧಿ ದೈವತಂ ॥**

ಯಾರು ತೇಜೋನಾಮಕಳಾದ ಶ್ರೀದೇವಿಯಲ್ಲಿದ್ದು ಶ್ರೀದೇವಿಯಿಂದ ಭಿನ್ನನೋ, ಶ್ರೀದೇವಿಯು ಯಾರನ್ನು ತಿಳಿದಿಲ್ಲವೋ, ಶ್ರೀದೇವಿಯು ಯಾರಿಗೆ ಶರೀರ ದಂತಿರುವಳೋ, ಯಾರು ಶ್ರೀದೇವಿಯಲ್ಲಿದ್ದು ಸುಖವನ್ನುಂಟು ಮಾಡುವನೋ ಮತ್ತು ನಿಯಮಿಸುವನೋ ಅವನೇ ನಿನ್ನ ನಿಯಾಮಕನಾದ ನಿತ್ಯನಾದ ಅಂತರ್ಯಾಮಿ. ಇಲ್ಲಿಗೆ ದೇವತೆಗಳಲ್ಲಿ ಅಂತರ್ಯಾಮಿ ನಿರೂಪಣೆ ಮುಗಿಯಿತು.

**ವಿವರಣೆ**—ಈ ಬ್ರಾಹ್ಮಣದಲ್ಲಿ 'ಅಂತರ್ಯಾಮಿ' ಜೀವನೇ ಏಕಾಗಿರಬಾರದು? ಪರಮಾತ್ಮನಿಗೆ ಜಡಶರೀರವಿಲ್ಲ ತಾನೆ? ಎಂದರೆ ಇಲ್ಲಿ ಹೇಳಿದ ಪೃಥಿವ್ಯಾದಿಗಳು ದೇವತೆ ಗಳು. ಏಕೆಂದರೆ ಅವುಗಳನ್ನು ಆಧಿದೈವ ಎಂದು ಉಪನಿಷತ್ತೇ ಹೇಳಿದೆ. 'ಯಂ ಪೃಥಿವೀ ನ ವೇದ' ಎಂದು ಮುಂತಾಗಿ, ಪೃಥಿವೀ ಮುಂತಾದುದು ಅಂತರ್ಯಾಮಿ ಯನ್ನು ತಿಳಿದಿಲ್ಲ ಎಂದು ಹೇಳಿದೆ. ಪೃಥಿವೀ ಮುಂತಾದುದು ಜಡಪದಾರ್ಥವಾಗಿರು ತ್ತಿದ್ದರೆ, ಜಡವಸ್ತು ಯಾವುದನ್ನೂ ಎಂದೂ ತಿಳಿಯುವ ಪ್ರಸಕ್ತಿ ಇಲ್ಲದಿರುವುದರಿಂದ ಅಂತರ್ಯಾಮಿಯನ್ನು ತಿಳಿದಿಲ್ಲ ಎಂದು ಹೇಳುವುದು ಅನುಚಿತವಾಗುತ್ತದೆ. ಆದ್ದರಿಂದ ಇಲ್ಲಿ ಪೃಥಿವೀ ಇತ್ಯಾದಿಗಳು ಜಡವಲ್ಲ, ದೇವತೆಗಳು. ದೇವತೆಗಳೂ ಜೀವರಿಗೆ

ಯಾವ ರೀತಿಯಿಂದಲೂ ಶರೀರವಾಗಿರಲು ಶಕ್ಯವಿಲ್ಲ. ಪರಮಾತ್ಮನಿಗೆ ಮಾತ್ರ ಅವರು ಸರ್ವಾತ್ಮನಾ ಅಧೀನರಾದುದರಿಂದ ಶರೀರದಂತಿರುವರೆಂದೇ ಉಪನಿಷತ್ತು ಹೇಳುತ್ತಿದೆ. ಆದ್ದರಿಂದ ಅಂತರ್ಯಾಮಿ ಪರಮಾತ್ಮನೇ.

**ಉಪನಿಷತ್—ಅಥಾಧಿಭೂತಂ । ಯಃ ಸರ್ವೇಷು ಭೂತೇಷು ತಿಷ್ಠನ್ ಸರ್ವೇಭ್ಯೋ ಭೂತೇಭ್ಯೋಽಂತರೋ, ಯಂ ಸರ್ವಾಣಿ ಭೂತಾನಿ ನ ವಿದುಃ, ಯಸ್ಯ ಸರ್ವಾಣಿ ಭೂತಾನಿ ಶರೀರಂ, ಯಃ ಸರ್ವಾಣಿ ಭೂತಾನ್ಯಂತರೋ ಯಮಯತಿ ಏಷ ತೇ ಆತ್ಮಾ ಅಂತರ್ಯಾಮ್ಯಮೃತಃ । ಇತ್ಯಧಿಭೂತಂ ॥**

ಇನ್ನು ಮುಂದೆ ಜೀವರಲ್ಲಿ ಅಂತರ್ಯಾಮಿ ನಿರೂಪಣೆ. ಯಾರು ಎಲ್ಲಾ ಜೀವರಲ್ಲಿದ್ದು ಜೀವರಿಂದ ಭಿನ್ನನೋ, ಎಲ್ಲಾ ಜೀವರು ಯಾರನ್ನು ತಿಳಿದಿಲ್ಲವೋ, ಜೀವರು ಯಾರಿಗೆ ಶರೀರದಂತಿರುವರೋ, ಯಾರು ಜೀವರಲ್ಲಿದ್ದು ಸುಖವನ್ನುಂಟು ಮಾಡುವನೋ ಮತ್ತು ನಿಯಮಿಸುವನೋ ಅವನೇ ನಿನ್ನ ನಿಯಾಮಕನಾದ ನಿತ್ಯನಾದ ಅಂತರ್ಯಾಮಿ. ಇಲ್ಲಿಗೆ ಜೀವಾಂತರ್ಯಾಮಿ ನಿರೂಪಣೆ ಮುಗಿಯಿತು.

**ಉಪನಿಷತ್—ಅಥಾಧ್ಯಾತ್ಮಮ್। ಯಃ ಪ್ರಾಣೇ ತಿಷ್ಠನ್ ಪ್ರಾಣಾದಂತರೋ' ಯಂ ಪ್ರಾಣೋ ನ ವೇದ, ಯಸ್ಯ ಪ್ರಾಣಃ ಶರೀರಂ, ಯಃ ಪ್ರಾಣಮಂತರೋ ಯಮಯತಿ ಏಷ ತೇ ಆತ್ಮಾ ಅಂತರ್ಯಾಮ್ಯಮೃತಃ ।**

ಇನ್ನು ಮುಂದೆ ಶರೀರದಲ್ಲಿ ಅಂತರ್ಯಾಮಿ ನಿರೂಪಣೆ. ಯಾರು ಪ್ರಾಣನಾಮಕನಾದ ಘ್ರಾಣೇಂದ್ರಿಯಾಭಿಮಾನಿ ದೇವತೆಯಲ್ಲಿದ್ದು ಅವನಿಂದ ಭಿನ್ನನೋ, ಅವನು ಯಾರನ್ನು ತಿಳಿದಿಲ್ಲವೋ, ಅವನು ಯಾರಿಗೆ ಶರೀರದಂತಿರುವನೋ, ಯಾರು ಅವನಲ್ಲಿದ್ದು ಸುಖವನ್ನುಂಟು ಮಾಡುವನೋ ಮತ್ತು ನಿಯಮಿಸುವನೋ ಅವನೇ ನಿನ್ನ ನಿಯಾಮಕನಾದ ನಿತ್ಯನಾದ ಅಂತರ್ಯಾಮಿ.

**ಉಪನಿಷತ್—ಯೋ ವಾಚಿ ತಿಷ್ಠನ್ ವಾಚೋಽಂತರೋ, ಯಂ ವಾಙ್ ನ ವೇದ, ಯಸ್ಯ ವಾಕ್ ಶರೀರಂ, ಯೋ ವಾಚಮಂತರೋ ಯಮಯತಿ ಏಷ ತೇ ಆತ್ಮಾ ಅಂತರ್ಯಾಮ್ಯಮೃತಃ ।**

ಯಾರು ವಾಗಿಂದ್ರಿಯಾಭಿಮಾನಿಯಲ್ಲಿದ್ದು ಅವನಿಂದ ಭಿನ್ನನೋ, ಅವನು ಯಾರನ್ನು ತಿಳಿದಿಲ್ಲವೋ, ಅವನು ಯಾರಿಗೆ ಶರೀರದಂತಿರುವನೋ, ಯಾರು ಅವನಲ್ಲಿದ್ದು ಸುಖವನ್ನುಂಟು ಮಾಡುವನೋ ಮತ್ತು ನಿಯಮಿಸುವನೋ ಅವನೇ ನಿನ್ನ ನಿಯಾಮಕನಾದ ನಿತ್ಯನಾದ ಅಂತರ್ಯಾಮಿ.

**ಉಪನಿಷತ್—ಯಶ್ಚಕ್ಷುಷಿ ತಿಷ್ಠನ್ ಚಕ್ಷುಷೋಽಂತರೋ, ಯಂ ಚಕ್ಷುರ್ನ ವೇದ, ಯಸ್ಯ ಚಕ್ಷುಃ ಶರೀರಂ, ಯಶ್ಚಕ್ಷುರಂತರೋ ಯಮಯತಿ ಏಷ ತೇ ಆತ್ಮಾ ಅಂತರ್ಯಾಮ್ಯಮೃತಃ ।**

ಯಾರು ಚಕ್ಷುರಿಂದ್ರಿಯಾಭಿಮಾನಿಯಲ್ಲಿದ್ದು ಅವನಿಂದ ಭಿನ್ನನೋ, ಅವನು ಯಾರನ್ನು ತಿಳಿದಿಲ್ಲವೋ, ಅವನು ಯಾರಿಗೆ ಶರೀರದಂತಿರುವನೋ, ಯಾರು ಅವನಲ್ಲಿದ್ದು ಸುಖವನ್ನುಂಟು ಮಾಡುವನೋ ಮತ್ತು ನಿಯಮಿಸುವನೋ ಅವನೇ ನಿನ್ನ ನಿಯಾಮಕನಾದ ನಿತ್ಯನಾದ ಅಂತರ್ಯಾಮಿ.

**ಉಪನಿಷತ್—ಯಃ ಶ್ರೋತ್ರೇ ತಿಷ್ಠನ್ ಶ್ರೋತ್ರಾದಂತರೋ,ಯಂ ಶ್ರೋತ್ರಂ ನ ವೇದ, ಯಸ್ಯ ಶ್ರೋತ್ರಂ ಶರೀರಂ, ಯಃ ಶ್ರೋತ್ರಮಂತರೋ ಯಮಯತಿ ಏಷ ತೇ ಆತ್ಮಾ ಅಂತರ್ಯಾಮ್ಯಮೃತಃ ।**

ಯಾರು ಶ್ರೋತ್ರೇಂದ್ರಿಯಾಭಿಮಾನಿಯಲ್ಲಿದ್ದು ಅವನಿಂದ ಭಿನ್ನನೋ, ಅವನು ಯಾರನ್ನು ತಿಳಿದಿಲ್ಲವೋ, ಅವನು ಯಾರಿಗೆ ಶರೀರದಂತಿರುವನೋ, ಯಾರು ಅವನಲ್ಲಿದ್ದು ಸುಖವನ್ನುಂಟು ಮಾಡುವನೋ ಮತ್ತು ನಿಯಮಿಸುವನೋ ಅವನೇ ನಿನ್ನ ನಿಯಾಮಕನಾದ ನಿತ್ಯನಾದ ಅಂತರ್ಯಾಮಿ.

**ಉಪನಿಷತ್—ಯೋ ಮನಸಿ ತಿಷ್ಠನ್ ಮನಸೋಽಂತರೋ,ಯಂ ಮನೋ ನ ವೇದ, ಯಸ್ಯ ಮನಃ ಶರೀರಂ, ಯೋ ಮನೋಽಂತರೋ ಯಮಯತಿ ಏಷ ತೇ ಆತ್ಮಾ ಅಂತರ್ಯಾಮ್ಯಮೃತಃ ।**

ಯಾರು ಮನೋಽಭಿಮಾನಿಯಲ್ಲಿದ್ದು ಮನಸ್ಸಿನ ಅಭಿಮಾನಿಯಿಂದ ಭಿನ್ನನೋ, ಮನಸ್ಸಿನ ಅಭಿಮಾನಿ ಯಾರನ್ನು ತಿಳಿದಿಲ್ಲವೋ, ಮನಸ್ಸಿನ ಅಭಿಮಾನಿ ಯಾರಿಗೆ ಶರೀರದಂತಿರುವನೋ, ಯಾರು ಮನಸ್ಸಿನ ಅಭಿಮಾನಿಯಲ್ಲಿದ್ದು ಸುಖವನ್ನುಂಟು ಮಾಡುವನೋ ಮತ್ತು ನಿಯಮಿಸುವನೋ ಅವನೇ ನಿನ್ನ ನಿಯಾಮಕನಾದ ನಿತ್ಯನಾದ ಅಂತರ್ಯಾಮಿ.

**ಉಪನಿಷತ್—ಯಸ್ತ್ವಚಿ ತಿಷ್ಠನ್ ತ್ವಚೋಽಂತರೋ, ಯಂ ತ್ವಕ್ ನ ವೇದ, ಯಸ್ಯ ತ್ವಕ್ ಶರೀರಂ, ಯಸ್ತ್ವಚಮಂತರೋ ಯಮಯತಿ ಏಷ ತೇ ಆತ್ಮಾ ಅಂತರ್ಯಾಮ್ಯಮೃತಃ ।**

ಯಾರು ತ್ವಗಿಂದ್ರಿಯಾಭಿಮಾನಿಯಲ್ಲಿದ್ದು ತ್ವಗಿಂದ್ರಿಯಾಭಿಮಾನಿಯಿಂದ

ಭಿನ್ನನೋ, ತ್ವಗಿಂದ್ರಿಯಾಭಿಮಾನಿ ಯಾರನ್ನು ತಿಳಿದಿಲ್ಲವೋ, ತ್ವಗಿಂದ್ರಿಯಾಭಿಮಾನಿ ಯಾರಿಗೆ ಶರೀರದಂತಿರುವನೋ, ಯಾರು ತ್ವಗಿಂದ್ರಿಯಾಭಿಮಾನಿಯಲ್ಲಿದ್ದು ಸುಖವನ್ನುಂಟು ಮಾಡುವನೋ ಮತ್ತು ನಿಯಮಿಸುವನೋ ಅವನೇ ನಿನ್ನ ನಿಯಾಮಕನಾದ ನಿತ್ಯನಾದ ಅಂತರ್ಯಾಮಿ.

**ಉಪನಿಷತ್–ಯೋ ವಿಜ್ಞಾನೇ ತಿಷ್ಠನ್ ವಿಜ್ಞಾನಾದಂತರೋ, ಯಂ ವಿಜ್ಞಾನಂ ನ ವೇದ, ಯಸ್ಯ ವಿಜ್ಞಾನಂ ಶರೀರಂ, ಯೋ ವಿಜ್ಞಾನಮಂತರೋ ಯಮಯತಿ ಏಷ ತೇ ಆತ್ಮಾ ಅಂತರ್ಯಾಮ್ಯಮೃತಃ ।**

ಯಾರು ಎಲ್ಲ ಜೀವರ ಅಭಿಮಾನಿಯಾದ ಚತುರ್ಮುಖನಲ್ಲಿದ್ದು ಚತುರ್ಮುಖನಿಂದ ಭಿನ್ನನೋ, ಚತುರ್ಮುಖನು ಯಾರನ್ನು ತಿಳಿಯುವುದಿಲ್ಲವೋ, ಚತುರ್ಮುಖನು ಯಾರಿಗೆ ಶರೀರದಂತಿರುವನೋ ಯಾರು ಚತುರ್ಮುಖನಲ್ಲಿದ್ದು ಸುಖವನ್ನುಂಟು ಮಾಡುವನೋ ಮತ್ತು ನಿಯಮಿಸುವನೋ ಅವನೇ ನಿನ್ನ ನಿಯಾಮಕನಾದ ನಿತ್ಯನಾದ ಅಂತರ್ಯಾಮಿ.

**ಉಪನಿಷತ್—ಯೋ ರೇತಸಿ ತಿಷ್ಠನ್ ರೇತಸೋಽಂತರೋ, ಯಂ ರೇತೋ ನ ವೇದ, ಯಸ್ಯ ರೇತಃ ಶರೀರಂ, ಯೋ ರೇತೋಽಂತರೋ ಯಮಯತಿ ಏಷ ತೇ ಆತ್ಮಾ ಅಂತರ್ಯಾಮ್ಯಮೃತಃ ।**

ಯಾರು ರೇತಸ್ಸಿನ ಅಭಿಮಾನಿಯಲ್ಲಿದ್ದು ಅವನಿಂದ ಭಿನ್ನನೋ, ಅವನು ಯಾರನ್ನು ತಿಳಿಯುವುದಿಲ್ಲವೋ, ಅವನು ಯಾರಿಗೆ ಶರೀರದಂತಿರುವನೋ, ಯಾರು ಅವನಲ್ಲಿದ್ದು ಸುಖವನ್ನುಂಟು ಮಾಡುವನೋ ಮತ್ತು ನಿಯಮಿಸುವನೋ ಅವನೇ ನಿನ್ನ ನಿಯಾಮಕನಾದ ನಿತ್ಯನಾದ ಅಂತರ್ಯಾಮಿ.

**ಉಪನಿಷತ್—ಅದೃಷ್ಟೋ ದ್ರಷ್ಟಾ। ಅಶ್ರುತಃ ಶ್ರೋತಾ। ಅಮತೋ ಮಂತಾ। ಅವಿಜ್ಞಾತೋ ವಿಜ್ಞಾತಾ । ನಾನ್ಯೋಽತೋಽಸ್ತಿ ದ್ರಷ್ಟಾ। ನಾನ್ಯೋಽತೋಽಸ್ತಿ ಶ್ರೋತಾ। ನಾನ್ಯೋಽತೋಽಸ್ತಿ ಮಂತಾ।ನಾನ್ಯೋಽತೋಽಸ್ತಿ ವಿಜ್ಞಾತಾ।ಏಷ ತೇ ಆತ್ಮಾ ಅಂತರ್ಯಾಮ್ಯಮೃತಃ।ಅತೋಽನ್ಯದಾರ್ತಮ್। ತತೋ ಹೋದ್ದಾಲಕ ಆರುಣಿರುಪರರಾಮ ।**

**॥ ಇತಿ ಅಂತರ್ಯಾಮಿ ಬ್ರಾಹ್ಮಣಮ್ ॥**

ಈ ಅಂತರ್ಯಾಮಿಯು ಪೂರ್ಣವಾಗಿ ನೋಡಲಾಗದವನು, ಪೂರ್ಣವಾಗಿ ನೋಡುವವನು. ಪೂರ್ಣವಾಗಿ ಕೇಳಲಾಗದವನು, ಪೂರ್ಣವಾಗಿ ಕೇಳುವವನು.

ಪೂರ್ಣವಾಗಿ ಮನಸ್ಸಿನಿಂದ ತಿಳಿಯಲಾಗದವನು,ಪೂರ್ಣವಾಗಿ ಮನಸ್ಸಿನಿಂದ ತಿಳಿಯು ವವನು. ಪೂರ್ಣವಾಗಿ ಬುದ್ಧಿಗೆ ನಿಲುಕದವನು, ಪೂರ್ಣವಾಗಿ ಬುದ್ಧಿಯಿಂದ ತಿಳಿಯುವವನು. ಇವನನ್ನು ಬಿಟ್ಟು ಬೇರೆ ಯಾರೂ ಸ್ವತಂತ್ರವಾಗಿ ನೋಡುವವರಿಲ್ಲ. ಇವನನ್ನು ಬಿಟ್ಟು ಬೇರೆ ಯಾರೂ ಸ್ವತಂತ್ರವಾಗಿ ಕೇಳುವವರಿಲ್ಲ. ಇವನನ್ನು ಬಿಟ್ಟು ಬೇರೆ ಯಾರೂ ಸ್ವತಂತ್ರವಾಗಿ ಮನಸ್ಸಿನಿಂದ ತಿಳಿಯುವವರಿಲ್ಲ. ಇವನನ್ನು ಬಿಟ್ಟು ಯಾರೂ ಸ್ವತಂತ್ರವಾಗಿ ಬುದ್ಧಿಯಿಂದ ತಿಳಿಯುವವರಿಲ್ಲ. ಇವನು ನಿನ್ನ ನಿಯಾಮಕ ನಾದ ನಿತ್ಯನಾದ ಅಂತರ್ಯಾಮಿ. ಇವನನ್ನು ಬಿಟ್ಟು ಬೇರೆಯವರೆಲ್ಲರೂ ದುಃಖಿ ಗಳು. ಹೀಗೆ ಹೇಳಿ ಅರುಣನ ಮಗ ಉದ್ದಾಲಕನು ವಿರಮಿಸಿದನು.

**ಭಾಷ್ಯ—ಪೃಥಿವ್ಯಾದ್ಯಾ ದೇವತಾಸ್ತು ದೇಹವದ್ ಯದ್ವಶತ್ವತಃ ।**
**ಶರೀರಮಿತಿ ಚೋಚ್ಯಂತೇ ಯಸ್ಯ ವಿಷ್ಣೋರ್ಮಹಾತ್ಮನಃ ।**
**ಅಂತಸ್ಥೋ ದೇವತಾನಾಂ ಚ ನ ವಿದುರ್ಯಂ ಚ ದೇವತಾಃ ।**
**ಪ್ರವಿಷ್ಟತ್ವಾದ್ ದೇವತಾಸ್ಥಃ ಸೋಽಂತರಃ ಸ್ವವಶತ್ವತಃ ।**
**ಬಾಹ್ಯಾಪೇಕ್ಷಾಂ ವಿನಾ ಯಸ್ತು ರಮತೇ ಸೋಽಂತರಃ ಸ್ಮೃತಃ ।**
**ಅತಿಪ್ರಿಯತ್ವಾಚ್ಚ ಹರೇರಂತರತ್ವಮುದಾಹೃತಂ ।**
**ಜೀವಾನಾಂ ಸ್ವಪ್ರಿಯತ್ವಂ ಚ ವಿಷ್ಣುನಾ ನಿಯತಂ ಯತಃ ।**
**ತಸ್ಯ ಪ್ರಿಯತ್ವಂ ನಾನ್ಯೇನ ದೇವಸ್ಯ ನಿಯತಂ ಕ್ವಚಿತ್ ।**

**ಅನುವಾದ**—ದೇಹವು ಜೀವನಿಗೆ ವಶವಾಗಿರುವಂತೆ ಪೃಥಿವೀ ಮೊದಲಾದ ದೇವತೆಗಳು ವಿಷ್ಣುವಿಗೆ ವಶವಾಗಿರುವುದರಿಂದ ಮತ್ತು ವಿಷ್ಣುವು ಅವರೊಳಗೆ ಇರುವು ದರಿಂದ ಮಹಾತ್ಮನಾದ ವಿಷ್ಣುವಿಗೆ ಅವರು ಶರೀರವೆಂದು ಉಪನಿಷತ್ತಿನಲ್ಲಿ ಹೇಳ ಲ್ಪಡುತ್ತಾರೆ. ಆದ್ದರಿಂದ ದೇವತೆಗಳು ಅವನನ್ನು ತಿಳಿದಿಲ್ಲ ಎನ್ನುವುದು ಯುಕ್ತ. ದೇವತೆಗಳ ಒಳಗೆ ನಿಯಾಮಕನಾಗಿ ಪ್ರವೇಶ ಮಾಡಿರುವುದರಿಂದ ವಿಷ್ಣುವು ಪೃಥಿ ವ್ಯಾದಿ ದೇವತೆಗಳಲ್ಲಿರುವವನೆಂದು ಹೇಳಲ್ಪಡುತ್ತಾನೆ. ಬಾಹ್ಯ ಸಾಮಗ್ರಿಗಳನ್ನು ಅವಲಂಬಿಸದೆ ಅವನು ತನ್ನಲ್ಲೇ ತಾನು ಸುಖಿಪಡುತ್ತಾನೆ. ಹೀಗೆ ಅಂತಃ ತನ್ನೊಳಗೆ ಸುಖಪಡುವವನಾದ್ದರಿಂದ ಸ್ವತಂತ್ರನಾದ್ದರಿಂದಲೇ ಅಂತರ ಎನಿಸಿದ್ದಾನೆ. ಪೃಥಿವ್ಯಾದಿ ದೇವತೆಗಳ ಒಳಗೆ ಇದ್ದು ಅವರಿಗೆ ಸುಖವನ್ನು ಮಾಡುತ್ತ ಅವರಿಗೆ ಅತಿಪ್ರಿಯನಾದ್ದರಿಂದಲೂ 'ಅಂತರ' ಎಂದು ಪ್ರಸಿದ್ಧನಾಗಿದ್ದಾನೆ. ಪ್ರತಿಯೊಬ್ಬ ಜೀವನಿಗೂ ತನಗೆ ತಾನೆ ಅತಿಪ್ರಿಯನೆನಿಸಿದರೂ ಈ ಪ್ರಿಯತ್ವವು ವಿಷ್ಣುವಿನ ಅಧೀನ ವಾಗಿದೆ. ಅವನ ಪ್ರಿಯತ್ವವು ಯಾರಿಗೂ ಅಧೀನವಲ್ಲ. ಆದ್ದರಿಂದ ಅವನೇ ಜೀವರಿಗೆ ಮುಖ್ಯವಾಗಿ ಅತಿಪ್ರಿಯ.

**ಭಾಷ್ಯ—ಸ್ವತಂತ್ರಃ ಸನ್ ನಿಯಂತಾಽಸಾವಂತರ್ಯಾಮೀ ತತಃ ಸ್ಮೃತಃ ।**

**ದೇವತಾನಾಂ ಸ್ವಭಾವೋऽಪಿ ಸ್ವರೂಪಮಪಿ ಸರ್ವದಾ ।**
**ತದಧೀನಂ ತತೋ ಯಾಮೀ ವಾಸುದೇವಃ ಪ್ರಕೀರ್ತಿತಃ ।**
**ಸ್ವಭಾವಸತ್ತಾದಾತೃತ್ವಂ ಯಂತೃತ್ವಮಿತಿ ಕಥ್ಯತೇ ।**
**ಇತಿ ಬ್ರಹ್ಮತರ್ಕೇ ।**

**ಅನುವಾದ**—ಅಂತರ್ಯಾಮಿ ಶಬ್ದವು 'ಸ್ವತಂತ್ರನಾಗಿದ್ದು ನಿಯಾಮಕನಾಗಿದ್ದಾನೆ' ಎಂಬ ಅರ್ಥವನ್ನು ಕೊಡುವುದರಿಂದ ಸ್ವತಂತ್ರನೂ ನಿಯಾಮಕನೂ ಆದ ವಿಷ್ಣುವೇ ಅಂತರ್ಯಾಮಿ ಎಂದು ಪ್ರಸಿದ್ಧ. ದೇವತೆಗಳ ಸ್ವಭಾವವೂ ಮತ್ತು ಸ್ವರೂಪವೂ ಕೂಡ ಯಾವಾಗಲೂ ವಿಷ್ಣುವಶವಾಗಿರುವುದರಿಂದ ವಿಷ್ಣು ಯಾಮಿ ಎನಿಸಿದ್ದಾನೆ. ಸ್ವಭಾವವನ್ನೂ ಮತ್ತು ಅಸ್ತಿತ್ವವನ್ನೂ ಕೊಡುವುದೇ ನಿಯಾಮಕತ್ವವೆನಿಸುತ್ತದೆ. ಆದ್ದರಿಂದ ಯಾಮಿ ಎಂದರೂ ನಿಯಾಮಕ ಎಂದರೂ ಒಂದೇ ಅರ್ಥ ಎಂದು ಬ್ರಹ್ಮತರ್ಕದಲ್ಲಿ ಹೇಳಿದೆ.

**ಭಾಷ್ಯ—ಅಧಿಭೂತಂ ಸರ್ವಜೀವಾ ಅಧ್ಯಾತ್ಮಂ ತಚ್ಛರೀರಗಾಃ ।**
**ದೇವತಾಸ್ತಾಃ ಸ್ವಲೋಕಸ್ಥಾ ಅಧಿದೈವಾಭಿಧಾ ಮತಾಃ ।**
**ಲೋಕಾಭಿಮಾನಿನ್ಯಸ್ತಾ ಏವಾಧಿಲೋಕಾ ಇತೀರಿತಾಃ ।**
**ಯಜ್ಞಾಭಿಮಾನಿನೋ ದೇವಾ ಅಧಿಯಜ್ಞಾ ಇತಿ ಸ್ಮೃತಾಃ ।**
**ಇತಿ ಚ ।**

**ಅನುವಾದ**—ಮನುಷ್ಯಾದಿ ಸಕಲ ಜೀವರಿಗೆ ಅಧಿಭೂತ ಎಂದು ಹೆಸರು. ಅವರ ಶರೀರದಲ್ಲಿ ಇಂದ್ರಿಯಾಭಿಮಾನಿಗಳಾಗಿರುವ ದೇವತೆಗಳೆ ಅಧ್ಯಾತ್ಮ. ಬೇರೆ ರೂಪಗಳಿಂದ ತಮ್ಮ ಲೋಕಗಳಲ್ಲಿರುವ ಆ ಇಂದ್ರಿಯಾಭಿಮಾನಿಗಳೇ ಅಧಿದೈವ. ಆ ದೇವತೆಗಳೇ ಲೋಕಗಳ ಅಭಿಮಾನಿಗಳೂ ಆಗಿರುವುದರಿಂದ ಅಧಿಲೋಕವೆನಿಸುತ್ತಾರೆ. ಯಜ್ಞಾಭಿಮಾನಿಗಳಾದ್ದರಿಂದ ಆ ದೇವತೆಗಳೇ ಅಧಿಯಜ್ಞ ಎಂದೂ ಪ್ರಸಿದ್ಧರಾಗಿದ್ದಾರೆ ಎಂದೂ ಹೇಳಿದೆ.

**ವಿವರಣೆ**—ಅಧಿಲೋಕ ಮತ್ತು ಅಧಿಯಜ್ಞಗಳ ಪ್ರಸ್ತಾವ ಇಲ್ಲಿ ಇಲ್ಲ. ಆದರೂ ಅವುಗಳು ಮಾಧ್ಯಂದಿನಾಯನ ಶಾಖೆಯಲ್ಲಿ ಪ್ರಸ್ತುತವಾಗಿವೆ. ಆದ್ದರಿಂದ ಭಾಷ್ಯ ವಚನವು ಆ ಪ್ರಸ್ತಾವಕ್ಕೆ ಸಂಬಂಧಪಟ್ಟಿದೆ.

**ಭಾಷ್ಯ—ಭವನಾಧಿಕಾರೇ ಸ್ಥಿತತ್ವಾತ್ ಅಧಿಭೂತವತ್ ।**
**ಪೃಥುಂ ನಾರಾಯಣಂ ವಾತಿ ಸಮಾದಾಯ್ಯೈವ ಪಕ್ಷಿರಾಟ್ ।**
**ಅತಃ ಸ ಪೃಥಿವೀತ್ಯುಕ್ತಸ್ತ್ವಂತರಿಕ್ಷಂ ಹರಃ ಸ್ಮೃತಃ।**

ಸ್ವಾಂತರ್ಗತಂ ಯತಃ ಸರ್ವಮಿಚ್ಛಯಾ ಕ್ಷಪಯೇದಸೌ ।
ದ್ಯೌರ್ನಾಮ ದೇವೀ ವಿದ್ಯುತ್ ಸ್ಯಾತ್ ಸಾಕ್ಷಾದೇವ ಸರಸ್ವತೀ ।
ದ್ಯೋತನಾತ್ಸರ್ವವಸ್ತೂನಾಂ ತಮೋ ದುರ್ಗಾ ಪ್ರಕೀರ್ತಿತಾ ।
ಯತಃ ಸಂಗ್ಲಪಯೇತ್ ಸರ್ವಾಂಸ್ತೇಜಃ ಶ್ರೀಃ ಪರಿಕೀರ್ತಿತಾ ।
ಆಕಾಶೋ ವಿಘ್ನ ಉದ್ದಿಷ್ಟಃ ಕಾಶತೇ ಹಿ ಪೃಥೂದರಃ ।
ಆಪೋ ವರುಣ ಉದ್ದಿಷ್ಟೋ ಯದೇತತ್ ಪಾಲಯತ್ಯಸೌ ।
ಆತ್ಮಾ ವಿಜ್ಞಾನಮಿತಿ ತು ಸರ್ವಜೀವಾಭಿಮಾನವಾನ್ ।
ಬ್ರಹ್ಮೈವೋಕ್ತಸ್ತ್ವಮೀ ಸರ್ವೇಽಪ್ಯನುಕ್ತಾ ಯಾಶ್ಚ ದೇವತಾಃ ।
ಯೇ ಚ ಜೀವಾಃ ಪರೇ ಸರ್ವೇ ನಿಯತಾ ವಿಷ್ಣುನೈವ ಹಿ ।
ಜೀವಾನಾಂ ನಿಯಮೋಽಜೀವಂ ಕಮು ವಾಚ್ಯಮಿತಿ ಶ್ರುತಿಃ ।
ಪೃಥಕ್ ತನ್ನಿಯಮಂ ನೈಷಾ ವಕ್ತಿ ಸಿದ್ಧತ್ವತಃ ಸ್ವತಃ ।
ಸ ಏವ ಸರ್ವನೇತಾ ಹಿ ಪರಮಾತ್ ಪರಮೋ ಹರಿಃ ।
ನಾನ್ಯೋ ನೇತಾ ಸ್ವತಂತ್ರೋಽಸ್ತಿ ಜೀವಾಃ ಸರ್ವೇ ಹಿ ದುಃಖಿನಃ ।
ಯದಿ ಸ್ವತಂತ್ರಾ ನೈವೈತೇ ದುಃಖಿನಃ ಸ್ಯುಃ ಕದಾಚನ ।
ಅತ ಆರ್ತಿಮತಾಮಾರ್ತಿದಾತಾ ಮುಕ್ತಿಪ್ರದಶ್ಚ ಸಃ ।
ಭಗವಾನ್ ಪರಮೋ ವಿಷ್ಣುಃ ಸ್ವತಂತ್ರಃ ಸರ್ವದೈಕರಾಟ್ ।
ಇತ್ಯಾದಿ ಮಹಾಮೀಮಾಂಸಾಯಾಂ ।

|| ಇತಿ ಅಂತರ್ಯಾಮಿ ಬ್ರಾಹ್ಮಣಂ ||

**ಅನುವಾದ**—ಜನನ ಎಂದರೆ ಉತ್ಪತ್ತಿ ಉಳ್ಳವರಾದ್ದರಿಂದ ಅಥವಾ ಉತ್ಪತ್ತಿ ಪ್ರತಿಪಾದಕ ಗ್ರಂಥೋಕ್ತರಾದ್ದರಿಂದ ಜೀವಾತ್ಮರಿಗೆ ಅಧಿಭೂತ ಎಂದು ಹೆಸರು.

ಗರುಡನು 'ಪೃಥು' ಎಂದರೆ ಪೂರ್ಣನಾದ ನಾರಾಯಣನನ್ನು ಹೊತ್ತು, 'ವೀ' ತಿರುಗುವುದರಿಂದ ಪೃಥಿವೀ ಎನಿಸಿದ್ದಾನೆ. ಅಂತರಿಕ್ಷ ಎಂದರೆ ರುದ್ರ. ಏಕೆಂದರೆ ಅವನು 'ಅಂತಃ' ತನ್ನೊಳಗಿರುವ ತನ್ನ ಅಧಿಕಾರಕ್ಕೊಳಪಟ್ಟ ಎಲ್ಲವನ್ನೂ 'ಇ' ತನ್ನ ಇಚ್ಛೆಯಿಂದಲೇ, 'ಕ್ಷ' ನಾಶಪಡಿಸುವವನು. ದ್ಯೌಃ ಎಂದರೆ ದ್ಯೌರ್ನಾಮ ವಿದ್ಯುತ್ ಎಂಬಂತೆ ಸರಸ್ವತೀದೇವಿ. ಎಲ್ಲ ವಸ್ತುಗಳನ್ನೂ ಸಾಕ್ಷಾತ್ತಾಗಿ ಪ್ರಕಾಶಗೊಳಿಸುವುದರಿಂದ ಆವಳಿಗೆ ವಿದ್ಯುತ್ ಎಂದು ಹೆಸರು. ತಮಸ್ ಎಂದರೆ ದುರ್ಗಾದೇವಿ. ಏಕೆಂದರೆ ಪ್ರಳಯಕಾಲದಲ್ಲಿ ಎಲ್ಲರಿಗೂ ದುಃಖ ಉಂಟುಮಾಡುತ್ತಾಳೆ. ತೇಜಸ್ ಎಂದರೆ ಶ್ರೀದೇವಿ. ಆಕಾಶ ಎಂದರೆ ವಿಘ್ನೇಶ. ಏಕೆಂದರೆ ದೊಡ್ಡ ಹೊಟ್ಟೆ ಉಳ್ಳವನಾದ್ದರಿಂದ ಎಲ್ಲೆಡೆ ಪ್ರಕಾಶಿಸುತ್ತಾನೆ. ಆಪಃ ಎಂದರೆ ವರುಣ. ಏಕೆಂದರೆ ಅವನು ಪಶ್ಚಿಮ ದಿಕ್ಪಾಲಕನಾಗಿದ್ದಾನೆ. ಸರ್ವಜೀವರ ಅಭಿಮಾನಿಯಾದ ಚತುರ್ಮುಖ ಬ್ರಹ್ಮನೇ ಆತ್ಮಾ ಎಂದೂ, ವಿಜ್ಞಾನ ಎಂದೂ ಕರೆಯ

ಲ್ಪಡುತ್ತಾನೆ. ಈ ಎಲ್ಲ ದೇವತೆಗಳೂ, ಇಲ್ಲಿ ಹೇಳದಿದ್ದ ದೇವತೆಗಳೂ, ಬೇರೆ ಎಲ್ಲ ಜೀವರೂ ವಿಷ್ಣುವಿನಿಂದಲೇ ನಿಯಂತ್ರಿಸಲ್ಪಡುವವರು. ಹೀಗೆ ವಿಷ್ಣುವು ಸರ್ವ ಜೀವನಿಯಾಮಕ ಎಂದು ಹೇಳಿದ ಮೇಲೆ ಜಡನಿಯಾಮಕ ಎಂದು ಪ್ರತ್ಯೇಕ ಹೇಳದೆಯೇ ಸಿದ್ಧವಾಗುತ್ತದೆ. ಆದ್ದರಿಂದ ಈ ವಿಷಯವನ್ನು ಶ್ರುತಿಯು ಪ್ರತ್ಯೇಕವಾಗಿ ಹೇಳಿಲ್ಲ. ಉತ್ತಮರಿಗಿಂತಲೂ ಉತ್ತಮನಾದ ಈ ವಿಷ್ಣುವೇ ಸರ್ವಜ್ಞ. ಸ್ವತಂತ್ರ ಜ್ಞಾನಶಕ್ತಿ ಉಳ್ಳವನು ಮತ್ತೊಬ್ಬನಿಲ್ಲ. ಜೀವರೆಲ್ಲರೂ ದುಃಖಿಗಳು. ಜೀವರು ಸ್ವತಂತ್ರರಾಗಿದ್ದರೆ ಯಾವ ಕಾಲದಲ್ಲೂ ಅವರು ದುಃಖಿಗಳಾಗುತ್ತಿರಲಿಲ್ಲ. ಆದ್ದರಿಂದ ಷಡ್ಗುಣ ಸಂಪನ್ನನೂ ಸರ್ವೋತ್ತಮನೂ, ಸರ್ವದಾ ಸ್ವತಂತ್ರನೂ, ವಿಶ್ವಕ್ಕೆ ಮುಖ್ಯ ಪ್ರಭುವೂ ಆಗಿರುವ ಆ ವಿಷ್ಣುವೇ ದುಃಖಿಗಳಿಗೆ ದುಃಖಪ್ರದನೂ, ಮುಕ್ತಿಪ್ರದನೂ ಆಗಿದ್ದಾನೆ ಎಂದು ಮುಂತಾಗಿ ಮಹಾ ಮೀಮಾಂಸೆಯಲ್ಲಿ ಹೇಳಿದೆ.

**ವಿವರಣೆ**—ಈ ಉಪನಿಷತ್ತಿನಲ್ಲಿ 'ಯೋ ವಿಜ್ಞಾನೇ ತಿಷ್ಠನ್' ಎಂದು ವಿಜ್ಞಾನದ ಬಗ್ಗೆ ಹೇಳಲಾಗಿದೆ. ಮಾಧ್ಯಂದಿನಾಯನ ಶಾಖೆಯಲ್ಲಿ ಇದೇ ವಿಷಯ ವನ್ನು ಹೇಳುವಾಗ ಇದೇ ರೀತಿ 'ಯ ಆತ್ಮನಿ ತಿಷ್ಠನ್' ಎಂದು ಆತ್ಮನನ್ನು ಪ್ರಸ್ತಾಪಿಸಿದೆ. ಅದನ್ನು ಗಮನದಲ್ಲಿಟ್ಟುಕೊಂಡು ಮಹಾಮೀಮಾಂಸೆಯು ಆತ್ಮನನ್ನೂ ಸೇರಿಸಿ ಹೇಳಿದೆ. ಆತ್ಮ ಎಂದರೂ ವಿಜ್ಞಾನ ಎಂದರೂ ಚತುರ್ಮುಖ ಬ್ರಹ್ಮ ಎಂದಿವೆ. 'ಶಾರೀರಶ್ಚೋಭಯೇಽಪಿ ಹಿ' ಎಂಬ ಬ್ರಹ್ಮಸೂತ್ರದ ಭಾಷ್ಯದಲ್ಲಿ ಈ ಆತ್ಮ ಶಬ್ದಕ್ಕೆ ಜೀವ ಎಂದು ಅರ್ಥ ಹೇಳಿದ್ದರೂ ಅದು ಜೀವಾಭಿಮಾನಿ ಚತುರ್ಮುಖನಿಗಿಂತ ಅಂತರ್ಯಾಮಿ ಭಿನ್ನನೆಂದಾದರೆ ಜೀವರಿಗಿಂತ ಭಿನ್ನನೆಂಬುದು ಸ್ವತಃ ಸಿದ್ಧ ಎಂಬ ಅಭಿಪ್ರಾಯದಿಂದ. ಆದ್ದರಿಂದ ವಿರೋಧವಿಲ್ಲ.

ಅಂತರ್ಯಾಮಿ ಬ್ರಾಹ್ಮಣ ಮುಗಿಯಿತು.

**ಕಥಾಲಕ್ಷಣ- ವಾದ ಜಲ್ಪ ಮತ್ತು ವಿತಂಡಾ :**

**ಉಪನಿಷತ್**—**ಅಥ ಹ ವಾಚಕ್ನವ್ಯುವಾಚ । ಬ್ರಾಹ್ಮಣಾ ಭಗವಂತೋ ಹಂತಾಹಮಿಮಂ ದ್ವೌ ಪ್ರಶ್ನೌ ಪ್ರಕ್ಷ್ಯಾಮಿ । ತೌ ಚೇನ್ಮೇ ವಕ್ಷ್ಯತಿ, ನ ವೈ ಜಾತು ಯುಷ್ಮಾಕಮಿಮಂ ಕಶ್ಚಿದ್ ಬ್ರಹ್ಮೋದ್ಯಂ ಜೇತೇತಿ । ಪೃಚ್ಛ ಗಾರ್ಗೀತಿ ।**

ಅನಂತರ ವಚಕ್ನುವಿನ ಮಗಳಾದ ಗಾರ್ಗಿಯು ಹೇಳಿದಳು. 'ಪೂಜ್ಯ ಬ್ರಾಹ್ಮಣರೇ, ನೀವು ಅನುಮತಿ ಕೊಟ್ಟರೆ ನಾನು ಈ ಯಾಜ್ಞವಲ್ಕ್ಯರನ್ನು ಕುರಿತು ಎರಡು ಪ್ರಶ್ನೆಗಳನ್ನು ಕೇಳುತ್ತೇನೆ. ಅವರು ನನಗೆ ಈ ಪ್ರಶ್ನೆಗಳಿಗೆ ಉತ್ತರ ಹೇಳಿದರೆ ನಿಮ್ಮಲ್ಲಿ ಯಾರೂ ಕೂಡ ಈ ಬ್ರಹ್ಮವಾದಿಯನ್ನು ಗೆಲ್ಲಲಾರಿರಿ' ಬ್ರಾಹ್ಮಣರು 'ಗಾರ್ಗಿಯೇ,ಕೇಳು' ಎಂದರು.

**ಭಾಷ್ಯ--ಪೂರ್ವಂ ಗಾರ್ಗ್ಯಾ ಜೀವಾನಾಮುತ್ತರೋತ್ತರಾಶ್ರಯತ್ವಂ ಸರ್ವೇಷಾಂ ಭಗವದಾಶ್ರಯತ್ವಂ ಚ ಶ್ರುತಮ್ । ನ ತು ಮೂಲ ಪ್ರಕೃತೇರಾಧಾರತ್ವಮಾಧೇಯತ್ವಂ ವಾ । ಅತಃ ಪುನಃ ಪೃಚ್ಛತಿ ವಿಜಿಗೀಷುಕಥಾತ್ವಾದ್ ಬ್ರಾಹ್ಮಣಾನುಜ್ಞಯಾ। ಸ್ವಭರ್ತುರ್ವಿದ್ಯಾಬಲಂ ಜಾನಂತ್ಯಪಿ ಯುಷ್ಮಾಕಮೇನಂ ಜೇತುಂ ನ ಶಕ್ಯತ ಇತಿ ಜ್ಞಾಪಯಿತ್ವಾ ತೇಷಾಮುಪಕಾರಾರ್ಥಂ ಚ ಪಪ್ರಚ್ಛ । ನ ಚ ಯುಕ್ತ್ಯಾ ಪೂರ್ವ-ಮುಪರತಾ । ಭಾರ್ಯಾತ್ವಾದ್ ಭಗವತೋಽನ್ಯಾಧಾರತ್ವಂ ನಾಶಂಕ್ಯಮಿ-ತ್ಯುಕ್ತೇ ಭೀತ್ಯೈವೋಪರತಾ। ಭಗವತೋಽನ್ಯಾಧಾರತ್ವಂ ಚ ಸರ್ವಾಧಾರ ಮೂಲಪ್ರಕೃತೇರಪಿ ಭಗವಾನೇವಾಧಾರ ಇತ್ಯುಕ್ತೇ ಯುಕ್ತಿತ ಏವ ನಿವಾರಿತಂ ಭವತಿ । 'ನಾನ್ಯದತೋಽಸ್ತಿ ದ್ರಷ್ಟೃ' ಇತ್ಯಾದಿ ಯುಕ್ತಿಭಿಶ್ಚ। ಅಸ್ಥೂಲತ್ವಾದಿ ಯುಕ್ತಿಭಿಶ್ಚ ।**

**ಅನುವಾದ**—'ಹಿಂದೆ ಗಾರ್ಗಿಬ್ರಾಹ್ಮಣದಲ್ಲಿ ಜೀವರಲ್ಲಿ ಕೆಳವರ್ಗದವರಿಗೆ ಮೇಲುವರ್ಗದವರು ಆಶ್ರಯ ಎಂದೂ, ಸಮಸ್ತ ಜೀವರಿಗೆ ವಿಷ್ಣುವು ಆಶ್ರಯ ಎಂದೂ ಯಾಜ್ಞವಲ್ಕ್ಯರು ಹೇಳಿದ್ದನ್ನು ಗಾರ್ಗಿಯು ಕೇಳಿದ್ದಾಳೆ. ಆದರೆ ಮೂಲ ಪ್ರಕೃತಿಯು ಯಾರಿಗೆ ಆಧಾರ ಎಂಬುದನ್ನಾಗಲೀ, ಅವಳಿಗೆ ಯಾರು ಆಧಾರ ಎಂಬು ದನ್ನಾಗಲೀ ಅವರಿಂದ ಕೇಳಿರಲಿಲ್ಲ. ಆದ್ದರಿಂದ ಪುನಃ ಪ್ರಶ್ನೆ ಮಾಡುತ್ತಿದ್ದಾಳೆ. ಇದು ಜಯೇಚ್ಛೆಯಿಂದ ಮಾಡುವ ವಾದವಾಗಿರುವುದರಿಂದ ಹಿಂದೊಮ್ಮೆ ಸೋತಿ ರುವ ಗಾರ್ಗಿ ನಿರ್ಣಾಯಕರ ಅನುಮತಿ ಇಲ್ಲದೆ ಪುನಃ ಪ್ರಶ್ನೆ ಮಾಡುವಂತಿಲ್ಲ. ಆದ್ದರಿಂದ ಬ್ರಾಹ್ಮಣರ ಅನುಮತಿ ಪಡೆದೇ ಪುನಃ ಪ್ರಶ್ನೆ ಕೇಳುತ್ತಾಳೆ. ವಸ್ತುತಃ ಯಾಜ್ಞವಲ್ಕ್ಯರು ಗಾರ್ಗಿಯ ಪತಿ. ಅವಳಿಗೆ ತನ್ನ ಪತಿಯ ವಿದ್ಯಾಬಲ ತಿಳಿದಿದೆ. ಅವರಲ್ಲಿ ವಾದಿಸಿ ಜಯಗಳಿಸುವ ಆಸೆ ಅವಳಿಗಿಲ್ಲ. ಆದರೂ 'ನಿಮಗೆ ಇವನನ್ನು ಗೆಲ್ಲಲು ಸಾಧ್ಯವಿಲ್ಲ' ಎಂದು ತಿಳಿಸಿ, ಆ ಬ್ರಾಹ್ಮಣರಿಗೆ ಉಪಕಾರ ಮಾಡುವುದಕ್ಕಾಗಿಯೆ ಪ್ರಶ್ನೆ ಕೇಳುತ್ತಿದ್ದಾಳೆ. ವಸ್ತುತಃ ಗಾರ್ಗಿ ವಾದದಲ್ಲಿ ಪರಾಜಯ ಹೊಂದಿರಲಿಲ್ಲ. ಯಾಜ್ಞವಲ್ಕ್ಯರ ತರ್ಕಕ್ಕೆ ಮಣಿದು ಗಾರ್ಗಿಯು ಪ್ರಶ್ನೆಯನ್ನು ನಿಲ್ಲಿಸಿರಲಿಲ್ಲ. 'ಪರಬ್ರಹ್ಮನಿಗೆ ಯಾರು ಆಧಾರ' ಎಂದು ಕೇಳಬಾರದೆಂದು ಯಾಜ್ಞವಲ್ಕ್ಯರು ಹೇಳಿದಾಗ, ತಾನು ಅವರ ಭಾರ್ಯೆಯಾದುದರಿಂದ ಹೆದರಿಕೆಯಿಂದಲೇ ವಿರಮಿಸಿದಳು. ಈಗ ಬೇಕೆಂದು ಸೋಲೊಪ್ಪಿಕೊಂಡು ಪ್ರಶ್ನೆ ಮಾಡುತ್ತಿದ್ದಾಳೆ. ಇದರಿಂದ ಮುಂದೆ ಯಾಜ್ಞವಲ್ಕ್ಯರು ಸರ್ವಾಧಾರಳಾದ ಮೂಲಪ್ರಕೃತಿಗೂ ಕೂಡ ಭಗವಂತನೇ ಆಧಾರ ಎಂದು ಹೇಳಿದಾಗ, ಈ ಯುಕ್ತಿಯಿಂದಲೇ ಭಗವಂತನಿಗೆ ಬೇರೆ ಯಾರಾ ದರೂ ಆಧಾರವಾಗಿರಬಹುದೆಂಬ ಸಂಶಯ ಪರಿಹೃತವಾಗುತ್ತದೆ. 'ಪರಬ್ರಹ್ಮನಿಗಿಂತ ಬೇರೆ ದ್ರಷ್ಟೃ ಇಲ್ಲ' ಎಂದು ಮೊದಲಾದ ಯುಕ್ತಿಗಳಿಂದಲೂ ಅಸ್ಥೂಲತ್ವ ಮೊದ

ರಾವ ಯುಕ್ತಿಗಳಿಂದಲೂ ಕೂಡ ಈ ಸಂಶಯ ಪರಿಹಾರವಾಗುತ್ತದೆ.

**ಭಾಷ್ಯ**—ವಾದೋ ಜಲ್ಪೋ ವಿತಂಡೇತಿ ತ್ರಿವಿಧಾ ವಿದುಷಾಂ ಕಥಾ ।
ಕೇವಲಂ ತತ್ತ್ವವಿಜ್ಞಾನಮುದ್ದಿಶ್ಯ ಗುರುಶಿಷ್ಯಯೋಃ ।
ಅನ್ಯಯೋರ್ವಾ ಬಹೂನಾಂ ವಾ ನಿರ್ದುಷ್ಟಮನಸಾಂ ಕಥಾ ।
ವಾದ ಇತ್ಯುಚ್ಯತೇ ಸದ್ಭಿಃ ಜಯಸ್ತತ್ರಾರ್ಥಿಕೋ ಭವೇತ್ ।
ವಿಜಯೇ ಶಿಷ್ಯತಾಽನ್ಯೇಷಾಂ ಪೂಜಾ ಚ ಜಯಿನಃ ಸದಾ ।
ಪುನಶ್ಚ ಸಂಶಯೋ ಯತ್ ಸ್ಯಾತ್ ತೇಷಾಂ ತಸ್ಯಾಪಿ ವಾರಣಮ್ ।
ಕರ್ತವ್ಯಂ ಜಯಿನಾ ನಿತ್ಯಮಶಕ್ತಸ್ಯ ಸ್ವತೋಽಧಿಕಾತ್ ।
ಅನ್ಯೋನ್ಯನಿರ್ಣಯಶ್ಚೇತ್ ಸ್ಯಾತ್ ತದಾ ಸಬ್ರಹ್ಮಚಾರಿಣಃ ।
ಪೃಷ್ಟೇನ ಪ್ರಥಮಂ ಮಾನಂ ವಕ್ತವ್ಯಂ ವಾದಿನಾ ಶುಭಂ ।
ವೇದಾಃ ಸರ್ವೇ ಶುಭಂ ಮಾನಂ ಸೇತಿಹಾಸಪುರಾಣಕಾಃ ।
ಸಪಂಚರಾತ್ರಮೀಮಾಂಸಾಃ ಸ್ಮೃತಯಶ್ಚಾಪ್ಯನಂತರಮ್ ।
ತದನ್ಯದಶುಭಂ ಪ್ರೋಕ್ತಂ ನ ಪ್ರಯೋಜ್ಯಂ ಕಥಾಸು ಚ ।
ಮಿಶ್ರಮುಕ್ತಾನುಮಾನೇ ತು ಗ್ರಾಹ್ಯೇ ಶಬ್ದಾರ್ಥನಿರ್ಣಯೇ ।

**ಅನುವಾದ**—ಅನೇಕ ಮಂದಿ ವಿದ್ವಾಂಸರು ನಡೆಸುವ ಚರ್ಚೆಗೆ ಕಥಾ ಎಂದು ಹೆಸರು. ಕಥೆಯು ವಾದ, ಜಲ್ಪ ಮತ್ತು ವಿತಂಡಾ ಎಂದು ಮೂರು ವಿಧ. ಕೇವಲ ತತ್ತ್ವವನ್ನು ತಿಳಿಯುವ ಉದ್ದೇಶದಿಂದ ಗುರು-ಶಿಷ್ಯರ ನಡುವೆ ಅಥವಾ ಬೇರೆ ಯಾರಾದರೂ ಇಬ್ಬರ ನಡುವೆ ಅಥವಾ ನಿರ್ದುಷ್ಟ ಮನಸ್ಸಿನ ಬಹುಮಂದಿ ವಿದ್ವಾಂಸರಲ್ಲಿ ನಡೆಯುವ ಕಥೆಯೇ ವಾದ ಎಂದು ತಿಳಿದವರು ಹೇಳುತ್ತಾರೆ. ವಾದದಲ್ಲಿ ಜಯವು ಅರ್ಥಾತ್ ಸಿದ್ಧವಾಗಬಹುದು. ಆದರೆ ಅದು ವಾದದ ಉದ್ದೇಶವಲ್ಲ. ಹೀಗೆ ಜಯ ಉಂಟಾದಾಗ ಜಯಿಸಿದವನಿಗೆ ಸೋತವರು ಶಿಷ್ಯ ರಾಗಬೇಕು. ಸನ್ಮಾನವನ್ನು ಮಾಡಬೇಕು. ವಾದ ಮುಗಿದ ನಂತರವೂ ಸೋತವ ರಿಗಾಗಲಿ ಅನ್ಯರಿಗಾಗಲಿ ಸಂಶಯ ಉಂಟಾದರೆ, ಪರಿಹರಿಸಿಕೊಳ್ಳುವ ಶಕ್ತಿ ಯಿಲ್ಲದವರ ಆ ಸಂಶಯವನ್ನೂ ವಿಜಯಿಯಾದವನು ಪರಿಹರಿಸಬೇಕು. ತನಗಿಂತ ಹೆಚ್ಚು ಬಲ್ಲವರ ಸಂಶಯವನ್ನು ಪರಿಹರಿಸಬೇಕಾಗಿಲ್ಲ. ವಾದದಲ್ಲಿ ಇಬ್ಬರಿಗೂ ಪರಸ್ಪರ ತತ್ತ್ವನಿರ್ಣಯವಾದರೆ ಅವರಲ್ಲಿ ಗುರು-ಶಿಷ್ಯಭಾವವಿಲ್ಲ. ಇಬ್ಬರೂ ಸಹ. ಪಾಠಿಗಳು ಅಥವಾ ಮಿತ್ರರು. ವಾದದಲ್ಲಿ ಪ್ರತಿವಾದಿಯು ಪ್ರಮಾಣವನ್ನು ಕೇಳಿ ದಾಗ ವಾದಿಯು ಮೊದಲಿಗೆ ಶುಭ ಪ್ರಮಾಣವನ್ನೇ ಹೇಳಬೇಕು. ಎಲ್ಲ ವೇದಗಳೂ, ಇತಿಹಾಸ ಮತ್ತು ಪುರಾಣಗಳೂ, ಪಂಚರಾತ್ರ ಮತ್ತು ಮೀಮಾಂಸಾಶಾಸ್ತ್ರಗಳೂ ಮುಖ್ಯವಾಗಿ ಶುಭಪ್ರಮಾಣಗಳು. ಸ್ಮೃತಿಗಳು ಎರಡನೆಯ ಶುಭಪ್ರಮಾಣಗಳು. ಬೇರೆ ಎಲ್ಲವೂ ಅಶುಭ ಪ್ರಮಾಣಗಳು. ಅವುಗಳನ್ನು ವಾದದಲ್ಲಿ ಉಪಯೋಗಿಸ

ಬಾರದು. ಪ್ರತ್ಯಕ್ಷ ಮತ್ತು ಅನುಮಾನಗಳು ಮಿತ್ರಪ್ರಮಾಣಗಳು. ಆಗಮ ಪ್ರಮಾಣವು ಯಾವ ವಿಷಯದಲ್ಲಿ ಇಲ್ಲವೋ ಆ ವಿಷಯದಲ್ಲಿ ನಿರ್ಣಯಕ್ಕಾಗಿ ಮತ್ತು ವಾಕ್ಯಗಳ ಅರ್ಥನಿರ್ಣಯಕ್ಕಾಗಿ ಪ್ರತ್ಯಕ್ಷ ಅನುಮಾನಗಳು ಗ್ರಾಹ್ಯ

**ಭಾಷ್ಯ—ಅದುಷ್ಟಮಿಂದ್ರಿಯಂ ತ್ವಕ್ಷಮುಪಪತ್ತಿಸ್ತಥಾಽನುಮಾ ।**
**ಅನುಮೈವ ತ್ವಭಾವಾಖ್ಯೋ ಹ್ಯರ್ಥಾಪತ್ತ್ಯುಪಮೇ ತಥಾ ।**
**ಉಪಪತ್ತಿಭೇದಾ ಯತ್ ತೇಽಪಿ ವಾಕ್ಯಮೇವಾಗಮಃ ಶುಭಮ್ ।**
**ತತ್ತ್ವನಿರ್ಣಯ ವೈಲೋಮ್ಯಂ ಸಂವಾದೋ ವಾ ವಿರೋಧಿತೇ ।**
**ಪರಾಜಯ ಇತಿ ಪ್ರೋಕ್ತಃ ಸಮಃ ಸರ್ವಕಥಾಸು ಚ ।**

**ಅನುವಾದ**—ದೋಷವಿಲ್ಲದ ಇಂದ್ರಿಯಗಳೇ ಪ್ರತ್ಯಕ್ಷ ಪ್ರಮಾಣವೆನಿಸುತ್ತವೆ. ದೋಷರಹಿತ ಯುಕ್ತಿಯೇ ಅನುಮಾನ. ಅನುಪಲಬ್ಧಿ, ಅರ್ಥಾಪತ್ತಿ ಮತ್ತು ಉಪಮಾನಗಳು ಅನುಮಾನದಲ್ಲೇ ಸೇರುತ್ತವೆ. ಏಕೆಂದರೆ ಅವುಗಳು ವ್ಯಾಪ್ತಿಬಲವನ್ನವಲಂಬಿಸುವ ಯುಕ್ತಿಯ ಪ್ರಭೇದಗಳು. ದೋಷವಿಲ್ಲದ ವಾಕ್ಯವೇ ಆಗಮ. ತತ್ತ್ವನಿರ್ಣಯಕ್ಕೆ ವಿರುದ್ಧವಾದ ಮಾತು ಅಥವಾ ವರ್ತನೆ ವಾದದಲ್ಲಿ ಪರಾಜಯಕ್ಕೆ ಕಾರಣವಾಗುವ ಅಂಶ. ವಿವಾದಾಸ್ಪದವಾದ ವಿಷಯದ ಅಂಗೀಕಾರವು ಜಲ್ಪ-ವಿತಂಡಗಳಲ್ಲಿ ಪರಾಜಯಕ್ಕೆ ಕಾರಣವಾಗುವ ಅಂಶ ಹೀಗೆ ಪರಾಜಯವು ಮೂರು ವಿಧವಾದ ಕಥೆಗಳಲ್ಲಿಯೂ ಇದೆ.

**ಭಾಷ್ಯ—ತತ್ತ್ವನಿರ್ಣಯ ವೈಲೋಮ್ಯೇ ದಂಡ್ಯಾ ವಾದಕಥಾಸ್ವಪಿ ।**
**ಗುರುಣೈವ ತ್ವವಶ್ಯಾನಾಂ ರಾಜಾ ದಂಡಂ ಪ್ರಯೋಜಯೇತ್ ।**
**ಗುರುದಂಡಸ್ತು ವಾಚಾ ಸ್ಯಾದ್ ರಾಜದಂಡೋಽರ್ಥದೇಹತಃ ।**
**ಗುರುದಂಡೋಽಪ್ಯರ್ಥತಃ ಸ್ಯಾತ್ ಸಂವಾದೇ ವ್ರತತೋಽಪಿ ವಾ।**
**ರಾಜದಂಡೋ ಬಲಾಚ್ಚ ಸ್ಯಾದ್ ದೋಷಸ್ಯ ಗುರುಲಾಘವಾತ್ ।**
**ಸಂವಾದೇ ದಂಡ್ಯತಾ ನಾಸ್ತಿ ಜಲ್ಪಾದೌ ಚ ಕಥಂಚನ ।**

**ಅನುವಾದ**—ತತ್ತ್ವನಿರ್ಣಯಕ್ಕೆ ವಿರೋಧಿಯಾಗಿ ನಡದು, ಸೋತರೂ ಸೋಲೊಪ್ಪಿಕೊಳ್ಳದವರು ವಾದಕಥೆಗಳಲ್ಲಿ ಗುರುಗಳಿಂದಲೇ ಶಿಕ್ಷಾರ್ಹರು. ಜಲ್ಪ-ವಿತಂಡಗಳಲ್ಲಿ ತೀರ್ಪುಗಾರರಿಂದಲೇ ಶಿಕ್ಷಾರ್ಹರು. ಗುರುಗಳಿಗಾಗಲೀ ತೀರ್ಪುಗಾರರಿಗಾಗಲೀ ಮಣಿಯದವರಿಗೆ ರಾಜನು ಶಿಕ್ಷೆಯನ್ನು ವಿಧಿಸುವನು. ಗುರುಗಳು ವಿಧಿಸುವ ಶಿಕ್ಷೆ ಬಾಯಿ ಮಾತಿನ ರೂಪದ್ದು. ರಾಜದಂಡವು ಹಣದ ರೂಪದ್ದು ಅಥವಾ ಶಾರೀರಕ ಶಿಕ್ಷೆಯ ರೂಪದ್ದು. ಶಿಷ್ಯನು ಒಪ್ಪಿಕೊಂಡರೆ ಗುರುಗಳೂ ಅರ್ಥದಂಡವನ್ನು ಅವನಿಗೆ ವಿಧಿಸಬಹುದು. ಅಂದರೆ ಶಿಕ್ಷೆಯಾಗಿ ಹಣವನ್ನು ವಸೂಲಿ ಮಾಡಬಹುದು. ಅಥವಾ ಉಪವಾಸ ಮೊದಲಾದ ವ್ರತಗಳನ್ನು ಪ್ರಾಯಶ್ಚಿತ್ತಕ್ಕಾಗಿ

ವಿಧಿಸಬಹುದು. ರಾಜನು ಮಾತ್ರ ಈ ಒಪ್ಪಿಗೆ ಇಲ್ಲದೆಯೇ ಬಲಾತ್ಕಾರವಾಗಿ ತಪ್ಪಿನ ಪ್ರಮಾಣಕ್ಕನುಗುಣವಾಗಿ ಶಿಕ್ಷೆ ವಿಧಿಸಬಹುದು. ಜಲ್ಪ–ವಿತಂಡಗಳಲ್ಲಿಯೂ ಕೂಡ ಸೋತವನು ಸೋಲನ್ನು ಒಪ್ಪಿಕೊಂಡರೆ ಶಿಕ್ಷೆಯನ್ನು ವಿಧಿಸಬಾರದು ಎಂದಮೇಲೆ ವಾದದಲ್ಲಿ ಇನ್ನೇನು ?

**ಭಾಷ್ಯ—ತತ್ತ್ವವಿಪ್ಲವಕರ್ತಾರಂ ಸಂಸತ್ಸು ಚ ಪರಾಜಿತಂ ।**
**ಛಿತ್ವಾ ಜಿಹ್ವಾಂ ಚ ಕಾಕಾಂಕಂ ರಾಜಾ ರಾಜ್ಯಾದ್ ವಿನಾಶಯೇತ್।**
**ಅನ್ಯಸಾಮ್ಯಮಭೇದೋ ವಾ ನೀಚತಾ ವಾ ಕುತಶ್ಚನ ।**
**ವಿಷ್ಣೋಃ ಶ್ರೀಪೂರ್ವಕಾಣಾಂ ಚ ವ್ಯತ್ಯಾಸೋ ಗುಣದೋಷತಃ ।**
**ತದ್ಭಕ್ತೇರನ್ಯಧರ್ಮತ್ವಂ ಪಂಚೈತೇ ತತ್ತ್ವವಿಪ್ಲವಾಃ ।**
**ತತ್ತ್ವವಿಪ್ಲಾವಕಂ ಶೂದ್ರಂ ವೈಶ್ಯಂ ಕ್ಷತ್ರಿಯಮೇವ ವಾ ।**
**ಹನ್ಯಾದೇವಾವಿಚಾರೇಣ ವಿಪ್ರಜಿಹ್ವಾಂ ತಥೋದ್ಧರೇತ್ ।**

**ಅನುವಾದ**—ವಿತಂಡಕಥೆಯಲ್ಲಿ ಸೋತವನು ತತ್ತ್ವವಿಪ್ಲವವನ್ನು ಮಾಡು ತ್ತಿದ್ದರೆ ಅವನ ನಾಲಿಗೆಯನ್ನು ಕತ್ತರಿಸಿ, ಕಾಗೆಯ ಚಿಹ್ನೆಯನ್ನು ಮಾಡಿ ರಾಜನು ರಾಜ್ಯದಿಂದ ಹೊರಹಾಕಬೇಕು. ವಿಷ್ಣುವಿಗೆ ಅನ್ಯದೇವತೆಗಳ ಸಾಮ್ಯ, ಅಭೇದ, ನೀಚತಾ, ವಿಷ್ಣು ಮತ್ತು ಲಕ್ಷ್ಮೀ ಮೊದಲಾದ ದೇವತೆಗಳ ಗುಣ ದೋಷಗಳಲ್ಲಿ ವ್ಯತ್ಯಾಸಮಾಡಿ ಹೇಳುವುದು, ವಿಷ್ಣುಭಕ್ತಿಗಿಂತ ಬೇರೆ ದೇವತೆಗಳ ಭಕ್ತಿಯೇ ಧರ್ಮ ವೆನ್ನುವುದು ಈ ಐದು ತತ್ತ್ವವಿಪ್ಲವಗಳು. ತತ್ತ್ವವಿಪ್ಲವವನ್ನು ಮಾಡುವವರು ವೈಶ್ಯ, ಶೂದ್ರ ಅಥವಾ ಕ್ಷತ್ರಿಯರಾಗಿದ್ದರೆ ವಿಚಾರ ಮಾಡದೆ ಕೊಲ್ಲಬೇಕು. ಬ್ರಾಹ್ಮಣನಾಗಿದ್ದರೆ ನಾಲಿಗೆಯನ್ನು ಕತ್ತರಿಸಬೇಕು.

**ಭಾಷ್ಯ—ಸ್ವಸಿದ್ಧಾಂತೇ ಪ್ರಮಾಣಂ ಚ ಪರಸಿದ್ಧಾಂತದೂಷಣಂ ।**
**ವಕ್ತವ್ಯಮುಭಯಂ ವಾದೇ ಜಲ್ಪೇ ಚೇತಿ ಸತಾಂ ಮತಮ್ ।**
**ಅವಾಕ್ಯದೂಷಣಂ ತರ್ಕಾದಾಗಮಾದೇವ ಸಾಧನಂ ।**
**ವಾಕ್ಯತಾತ್ಪರ್ಯವಿಜ್ಞಪ್ತ್ಯೈ ಮಾನಮನ್ಯನ್ನ ಚಾನ್ಯಥಾ ।**

**ಅನುವಾದ**—ವಾದದಲ್ಲಿಯೂ, ಜಲ್ಪದಲ್ಲಿಯೂ ವಾದಿ ಪ್ರತಿವಾದಿಗಳಿಬ್ಬರೂ ತಮ್ಮ ತಮ್ಮ ಸಿದ್ಧಾಂತಕ್ಕೆ ಸಾಧಕ ಪ್ರಮಾಣವನ್ನೂ ಪರಸಿದ್ಧಾಂತದಲ್ಲಿ ದೋಷವನ್ನೂ ಹೇಳಲೇಬೇಕೆಂಬುದು ಬಲ್ಲವರ ಅಭಿಪ್ರಾಯ. ಪ್ರತಿವಾದಿಯು ಅನುಮಾನವನ್ನು ಹೇಳಿದ್ದರೆ, ಅದನ್ನು ತರ್ಕದಿಂದ ಖಂಡಿಸಬೇಕು. ಅಪೌರುಷೇಯ ಆಗಮವನ್ನು ಉದಾಹರಿಸಿದರೆ ಅದಕ್ಕೆ ಬೇರೆ ಸರಿಯಾದ ಅರ್ಥವನ್ನು ಹೇಳಬೇಕು. ಆಗಮಾದಿ ಅನೇಕ ಪ್ರಮಾಣಗಳಿರುವಾಗ ಸಿದ್ಧಾಂತ ಸಾಧನೆಯನ್ನು ಆಗಮದಿಂದಲೇ ಮಾಡ

ಬೇಕು. ಆ ಆಗಮದ ತಾತ್ಪರ್ಯವನ್ನು ನಿರ್ಣಯ ಮಾಡಿಕೊಳ್ಳುವುದಕ್ಕಾಗಿ ಮಾತ್ರ ಆಗಮಕ್ಕಿಂತ ಬೇರೆಯಾದ ಅನುಮಾನ ಮೊದಲಾದ ಪ್ರಮಾಣಗಳನ್ನು ಹೇಳಬೇಕು. ಮೊರತು ಸಿದ್ಧಾಂತದ ಸಾಧನೆಗಾಗಿ ಮೊದಲಿಗೇ ಅನುಮಾನಾದಿಗಳನ್ನು ಹೇಳ ಬಾರದು.

ಭಾಷ್ಯ—ಸತೋರೇವ ಯದಾ ಸ್ಪರ್ಧಾ ಗುಣತೋಽರ್ಥಾರ್ಥನೋವ ವಾ ।
ತದಾ ಜಲ್ಪಃ ಸಮುದ್ದಿಷ್ಟಸ್ತತ್ರ ವಿದ್ಯಾಂ ಪರೀಕ್ಷಯೇತ್ ।
ವಿದ್ಯಾಪರೀಕ್ಷಾಪೂರ್ವಾ ಹಿ ಸತ್ಕಥಾ ಜಲ್ಪ ಉಚ್ಯತೇ ।
ಸರ್ವಜ್ಞಾ ವೈಷ್ಣವಾಃ ಪಂಚ ಸಪ್ತ ವೋಭಯಸಮ್ಮತಾಃ ।
ಅಧಿಕಾ ವಾ ಯಥಾಲಬ್ಧಾಃ ಪ್ರಾಶ್ನಿಕಾಸ್ತು ಪರೀಕ್ಷಕಾಃ ।
ಉಭಯೋಃ ಪ್ರಶ್ನಕರ್ತೃತ್ವಾತ್ ಪ್ರಾಶ್ನಿಕಾ ಇತಿ ಕೀರ್ತಿತಾಃ ।
ತದಭಾವೇ ಗುಣೋದ್ರೇಕಂ ದರ್ಶಯೇತಾಂ ಪೃಥಗ್ಜನೇ ।
ವಿದ್ಯಾಸಾಮ್ಯೇ ಕಥಾ ಕಾರ್ಯಾ ಹ್ಯನ್ಯಥೈಕಪರಾಜಯಃ ।
ವಿದ್ಯೋನೋ ದಂಡ್ಯ ಏವ ಸ್ಯಾದ್ ಯದಿ ನೋಚ್ಚಸ್ಯ ಶಿಷ್ಯತಾಂ ।
ವ್ರಜೇತ್ ಪಶ್ಚಾದ್ ಯಥಾವಾದ ಏವ ಜಲ್ಪಃ ಪ್ರಕೀರ್ತಿತಃ ।
ಅರ್ಥನಿರ್ಣಯಹೇತುತ್ವಾದ್ ವಾದೇ ಪ್ರಶ್ನೋ ಜಯೇಽಪಿ ತು ।
ನ ಜಲ್ಪೇ ತು ಪುನಃ ಪ್ರಶ್ನಃ ಸಭ್ಯಾನುಜ್ಞಾಂ ವಿನಾ ಭವೇತ್ ।

**ಅನುವಾದ**—ತತ್ತ್ವಜ್ಞಾನ ಯೋಗ್ಯರಲ್ಲಿಯೇ ಕೇವಲ ಅಧಿಕ ಯೋಗ್ಯತೆಗಾಗಿ ಅಥವಾ ಹಣ ಕೀರ್ತಿಗಳಿಗಾಗಿ ಸ್ಪರ್ಧೆಯಿಂದ ನಡೆಯುವ ಕಥೆಯನ್ನು ಜಲ್ಪ ಎಂದು ಹೇಳುವರು. ಜಲ್ಪ ಕಥೆಯನ್ನು ನಡೆಸುವಾಗ ಮೊದಲು ಭಾಗವಹಿಸುವವರ ವಿದ್ವತ್ತೆಯನ್ನು ಪರೀಕ್ಷಿಸಬೇಕು. ಏಕೆಂದರೆ ವಿದ್ಯಾಪರೀಕ್ಷೆಯ ನಂತರ ಸಜ್ಜನರ ಮಧ್ಯೆ ನಡೆಯುವ ಕಥೆಗೇ ಜಲ್ಪ ಎಂದು ಹೆಸರು. ವಾದಿ ಪ್ರತಿವಾದಿಗಳ ಶಾಸ್ತ್ರ ಗಳನ್ನೂ ಚರ್ಚೆಗೆ ಉಪಯುಕ್ತವಾದ ವ್ಯಾಕರಣ ಮೊದಲಾದ ಶಾಸ್ತ್ರಗಳನ್ನೂ ಚೆನ್ನಾಗಿ ತಿಳಿದಿರುವ, ರಾಗದ್ವೇಷರಹಿತರಾಗಿದ್ದು ಉಭಯ ಸಮ್ಮತರಾದ, ವಿಷ್ಣು ಭಕ್ತರಾದ, ಮೂರು ಐದು ಏಳು ಅಥವಾ ಲಭ್ಯವಿದ್ದಷ್ಟು ಹೆಚ್ಚು ವಿಷಮ ಸಂಖ್ಯೆಯ ಜನರು ವಿದ್ಯೆಯ ಪರೀಕ್ಷಕರಾಗಬೇಕು. ಇವರಿಗೆ ಪ್ರಾಶ್ನಿಕರೆಂದು ಹೆಸರು. ಏಕೆಂದರೆ ಇವರು ವಾದಿ–ಪ್ರತಿವಾದಿಗಳಿಬ್ಬರನ್ನೂ ಪ್ರಶ್ನಿಸುವರು. ಇಂಥ ಪರೀಕ್ಷಕರಿಲ್ಲ ದಿದ್ದರೆ ದಡ್ಡನನ್ನೇ ಉತ್ತಮನೆಂದು ವಾದಿ ಪ್ರತಿವಾದಿಗಳು ತೋರಿಸಿಯಾರು. ಆದರಿಂದ ವಿದ್ಯಾಸಾಮ್ಯ ನಿರ್ಣಯವಾಗದೆ ಜಲ್ಪವೇ ನಡೆಯಬಾರದು. ವಾದಿ ಪ್ರತಿ ವಾದಿಗಳಲ್ಲಿ ವಿದ್ಯಾಸಾಮ್ಯವಿದ್ದರೆ ಮಾತ್ರ ಜಲ್ಪವನ್ನು ನಡೆಸಬೇಕು. ಇಲ್ಲದಿದ್ದರೆ ಅಲ್ಪವಿದ್ಯೆ ಉಳ್ಳವನಿಗೆ ಸುಲಭವಾಗಿ ಸೋಲುಂಟಾಗುವುದು. ಜಲ್ಪದಲ್ಲಿ ಕಡಿಮೆ

ವಿದ್ಯೆ ಇರುವವನು ಪರಾಜಿತನಾದರೂ ಸೋಲನ್ನೊಪ್ಪದೆ, ಗೆದ್ದವನ ಶಿಷ್ಯನಾಗದಿದ್ದರೆ ಅವನನ್ನು ಶಿಕ್ಷಿಸಬೇಕು. ಇದು ವಾದದಲ್ಲಿ ದೇಗೋ ಹಾಗೆ. ವಾದವು ತತ್ತ್ವ ನಿರ್ಣಯಕ್ಕಾಗಿಯೇ ನಡೆಯುವುದರಿಂದ ಜಯ–ಪರಾಜಯ ನಿರ್ಣಯವಾದ ನಂತರವೂ ಸೋತವನು ಪುನಃ ಸಂದೇಹದಿಂದ ಪ್ರಶ್ನೆಯನ್ನು ಕೇಳಬಹುದು. ಏಕೆಂದರೆ ಸಂದೇಹವಿರುವಷ್ಟು ಕಾಲ ತತ್ತ್ವ ನಿರ್ಣಯವೇ ಆಗುವುದಿಲ್ಲ. ಆದರೆ ಜಲ್ಪದಲ್ಲಿ ಸಭಾಸದಸ್ಯರ ಅನುಮತಿ ಇಲ್ಲದೆ ಪುನಃ ಪ್ರಶ್ನೆ ಮಾಡುವಂತಿಲ್ಲ. ಏಕೆಂದರೆ ಜಯ–ಪರಾಜಯ ನಿರ್ಣಯವೇ ಜಲ್ಪದ ಉದ್ದೇಶವಾಗಿದ್ದು ಅದು ನಡೆಯಿತೆಂದರೆ ಪುನಃ ಚರ್ಚೆಗೆ ಅವಕಾಶವಿಲ್ಲ.

**ಭಾಷ್ಯ—ಸ್ಪರ್ಧಾ ಸತಾಂ ವಿತಂಡಾ ಸ್ಯಾತ್ ತತ್ತ್ವವಿಪ್ಲಾವಕೈರ್ಯದಾ ।**
**ಮೂಲಪಕ್ಷಗ್ರಹಾಪೇತಾ ವಿತಂಡಾ ಕವಿಭಿರ್ಮತಾ ।**
**ಸತಾಮೇವ ವಿತಂಡಾ ಸ್ಯಾದಸತಾಂ ಜಲ್ಪ ಏವ ತು ।**
**ಏವಂ ಜಲ್ಪವಿತಂಡೇತಿ ಹ್ಯುಭಯೋಃ ಸಹಿತಾ ಕಥಾ ।**
**ಅಪ್ರಕಾಶ್ಯಃ ಸ್ವಪಕ್ಷೋ ಹಿ ಪಾಷಂಡಾನಾಂ ಯತಸ್ತತಃ ।**
**ಅಗ್ರಹೇಣೈವ ಪಕ್ಷಸ್ಯ ತರ್ಕಾಗಮಬಲೇನ ತು ।**
**ದೂಷಯೇದೇವ ಪಾಷಂಡಾನ್ ತತ್ತ್ವವಿಪ್ಲಾವಕಾನ್ ಸದಾ ।**
**ತತ್ಪಕ್ಷಾಣಾಂ ನಿಷೇಧ್ಯತ್ವಾತ್ ತೇಷಾಂ ಪಕ್ಷಗ್ರಹೋ ಭವೇತ್ ।**
**ವಿಷ್ಣುಭಕ್ತ್ಯನ್ಯಧರ್ಮಾಖ್ಯಸ್ತತ್ತ್ವವಿಪ್ಲವ ಏವ ತು ।**
**ಬೌದ್ಧಾದೀನಾಂ ಯತಃ ಸರ್ವೇ ತತ್ತ್ವವಿಪ್ಲಾವಕಾಸ್ತಥಾ ।**
**ಸರ್ವನಾಸ್ತಿಕವಾದೀ ವಾ ಸ್ವಮನೀಷಾಮತೋಽಪಿ ವಾ ।**
**ತಸ್ಯಾಽಪಿ ಪಕ್ಷಂ ಸಂಶ್ರಿತ್ಯ ದೂಷಯೇದ್ ವಾಕ್ಯಯುಕ್ತಿತಃ ।**

**ಅನುವಾದ**—ಸಜ್ಜನರು ತತ್ತ್ವವಿಪ್ಲವ ಮಾಡುವವರ ಜೊತೆ ನಡೆಸುವ ಸ್ಪರ್ಧೆಗೆ ವಿತಂಡಾ ಎಂದು ಹೆಸರು. ಸ್ವಪಕ್ಷ ಸ್ಥಾಪನೆಯಿಲ್ಲದೆ ಇರುವ ಚರ್ಚೆಯೇ ವಿತಂಡಾ ಎಂದು ವಿದ್ವಾಂಸರ ಅಭಿಪ್ರಾಯ. ಆದರೆ ವಿತಂಡಾದಲ್ಲಿ ಸಜ್ಜನರು ಮಾತ್ರ ತಮ್ಮ ಪಕ್ಷವನ್ನು ಸಾಧಿಸಬೇಕಿಲ್ಲ. ಅಸಜ್ಜನರು ಸ್ವಪಕ್ಷವನ್ನು ಸಾಧಿಸಬೇಕು. ಹೀಗೆ ಸಜ್ಜನರಿಂದ ಕೇವಲ ಪರಪಕ್ಷನಿರಾಕರಣೆ ಮತ್ತು ಅಸಜ್ಜನರಿಂದ ಪರಪಕ್ಷ ನಿರಾಕರಣ ಪೂರ್ವಕ ಸ್ವಪಕ್ಷ ಸ್ಥಾಪನೆ, ಈ ಎರಡೂ ಅಂಶಗಳಿಂದ ಕೂಡಿರುವುದರಿಂದ ವಿತಂಡಾ ಚರ್ಚೆಯೇ ಜಲ್ಪವಿತಂಡಾ ಎನಿಸುತ್ತದೆ ಹೊರತು ಜಲ್ಪ ವಿತಂಡಾ ಎಂಬ ನಾಲ್ಕನೇ ಪ್ರಭೇದ ಇಲ್ಲ. ಪಾಷಂಡವಾದಿಗಳಿಗೆ ಸ್ವಪಕ್ಷವನ್ನು ತೋರಿಸಬಾರದು. ಆದ್ದರಿಂದ ವಿತಂಡಾದಲ್ಲಿ ಸಜ್ಜನರು ಸ್ವಪಕ್ಷವನ್ನು ಸಾಧಿಸದೆ ತರ್ಕದ ಮತ್ತು ಆಗಮದ ಬಲದಿಂದ ತತ್ತ್ವವಿಪ್ಲವವನ್ನು ಮಾಡುವ ಪಾಷಂಡರನ್ನು ಸದಾ ನಿಗ್ರಹಿಸಬೇಕು. ಪಾಷಂಡ

ಪಕ್ಷಗಳನ್ನು ಖಂಡಿಸಬೇಕಾಗಿರುವುದರಿಂದ ಅದಕ್ಕಾಗಿ ಪಾಷಂಡಿಗಳಿಂದ ಅವರ ಪಕ್ಷವನ್ನು ಸಜ್ಜನರು ತಿಳಿಯಬೇಕು. ಆದ್ದರಿಂದ ಪಾಷಂಡಿಗಳು ಸ್ವಪಕ್ಷ ಸಾಧನೆಯನ್ನು ಮಾಡಬೇಕಾಗುತ್ತದೆ. ವಿಷ್ಣುಭಕ್ತಿಗಿಂತ ಬೇರೆಯಾದ ಧರ್ಮವೇ ತತ್ತ್ವವಿಪ್ಲವ. ಇದು ಬೌದ್ಧ ಮೊದಲಾದವರಲ್ಲಿ ಎಲ್ಲರಲ್ಲಿಯೂ ಸಾಧಾರಣವಾಗಿರುವುದರಿಂದ ಅವರೆಲ್ಲರೂ ತತ್ತ್ವವಿಪ್ಲವಕಾರಿಗಳು ಎನ್ನಬಹುದು. ಎಲ್ಲವನ್ನೂ ಇಲ್ಲ ಎಂಬು ಹೇಳುವ ಅಥವಾ ತನ್ನ ಬುದ್ಧಿಗೆ ತೋರುವುದನ್ನೆ ಯಥಾರ್ಥವೆಂದು ಒಪ್ಪುವ ನಾಸ್ತಿಕನ ಪಕ್ಷವನ್ನು ವಹಿಸಿ ಸಜ್ಜನರು ಪ್ರತಿವಾದಿಯ ಪಕ್ಷವನ್ನು ಆಗಮ ಮತ್ತು ಯುಕ್ತಿಗಳಿಂದ ನಿರಾಕರಣೆ ಮಾಡಬಹುದು.

**ಭಾಷ್ಯ—ಯಸ್ಯ ನೈವಾಗಮೋ ಮಾನಂ ತಂ ಬ್ರೂಯಾದ್ ಆಗಮಾಶ್ರಯಃ ।**
**ಧರ್ಮಾರ್ಥೋಽಥ ವೃಥೈವಾಯಂ ತವ ಪಕ್ಷಸ್ಯ ಸಂಗ್ರಹಃ ।**
**ಧರ್ಮಾರ್ಥಶ್ಚೇನ್ನ ಧರ್ಮೋ ಹಿ ಶಕ್ಯೋ ದ್ರಷ್ಟುಂ ವಿನಾಽಗಮಾತ್ ।**
**ಯಥಾನುಮೀಯತೇ ಹಿಂಸಾ ಪಾಪಹೇತುಸ್ತಥೈವ ಹಿ ।**
**ಧರ್ಮಹೇತುತ್ವಮಪ್ಯಸ್ಯಾ ಅನುಮಾತುಂ ಸುಶಕ್ಯತೇ ।**
**ವೃಥಾಪಕ್ಷಂ ವೃಥಾ ಹನ್ಯಾದ್ಯದಿ ಕಶ್ಚಿತ್ಕಿಮುತ್ತರಮ್ ।**

**ಅನುವಾದ**—ಯಾರು ಆಗಮವನ್ನು ಪ್ರಮಾಣವೆಂದು ಅಂಗೀಕರಿಸುವುದಿಲ್ಲವೋ ಅವನನ್ನು ಆಗಮ ಪ್ರಾಮಾಣ್ಯವಾದಿಯು ಹೀಗೆ ಕೇಳಬೇಕು– ನಿನ್ನ ಸಿದ್ಧಾಂತವನ್ನು ಇತರರು ಏಕೆ ಅಂಗೀಕರಿಸಬೇಕು? ಧರ್ಮಕ್ಕಾಗಿಯೆ? ಅಥವಾ ವ್ಯರ್ಥವಾಗಿಯೆ? ಧರ್ಮಕ್ಕಾಗಿ ಎನ್ನುವುದಾದರೆ ನೀನೂ ಆಗಮ ಪ್ರಾಮಾಣ್ಯವನ್ನು ಅಂಗೀಕರಿಸಲೇಬೇಕು. ಏಕೆಂದರೆ ಆಗಮವಿಲ್ಲದೆ ಧರ್ಮವನ್ನು ತಿಳಿಯಲು ಸಾಧ್ಯವಿಲ್ಲ. ಯಾಗದ ಪಶುಹಿಂಸೆಯೂ ಹಿಂಸೆಯಾದ್ದರಿಂದಲೇ ಪಾಪಸಾಧನ ಎಂಬುದು ಆಗಮ ಸಹಾಯವಿಲ್ಲದೆ ಕೇವಲ ಅನುಮಾನದಿಂದ ಸಾಧಿಸಲು ಬರುತ್ತದೆ ಎನ್ನುವುದಾದರೆ ಆ ಹಿಂಸೆ ಅನಿಷಿದ್ಧವಾದ್ದರಿಂದ ಪಾಪಸಾಧನವಲ್ಲವೆಂದೂ ಅನುಮಾನದಿಂದ ಸಾಧಿಸಲು ಬರುತ್ತದೆ. ನಿನ್ನ ಸಿದ್ಧಾಂತವನ್ನು ವ್ಯರ್ಥವಾಗಿಯೇ ಇತರರು ಅಂಗೀಕರಿಸಬೇಕೆನ್ನುವುದಾದರೆ, ನಿನ್ನನ್ನೇ ಯಾರಾದರೂ ವ್ಯರ್ಥವಾಗಿ ಹೊಡೆದಾಗ ನೀನೇನು ಹೇಳುವೆ? ಏಕೆ ಹೊಡೆದೆ ಎಂದು ನೀನು ಕೇಳಲಾರೆ. ಕೇಳಿದರೆ ಅವನು ಹೇಳುತ್ತಾನೆ ನಿನ್ನ ಸಿದ್ಧಾಂತವನ್ನು ನಾವು ವ್ಯರ್ಥವಾಗಿ ಒಪ್ಪುವಂತೆ ನಾವು ನಿನ್ನನ್ನು ವ್ಯರ್ಥವಾಗಿಯೇ ಹೊಡೆಯುತ್ತೇವೆ. ಇದಕ್ಕೆ ನಿನ್ನ ಉತ್ತರವೇನು?

**ಭಾಷ್ಯ—ಇತ್ಯಶಕ್ತ್ಯಾ ಸತಾಂ ಸರ್ವೇ ಸಂಭೂಯಾಪಿ ನಿವಾರಣಂ ।**
**ಕುರ್ಯುರೇವಾಸತಾಂ ಸಂತಸ್ತತ್ತ್ವವಿಪ್ಲಾವಿನಾಂ ಜಯೇ ।**

**ಯೇಷಾಂ ವಿಷ್ಣೋಃ ಸಮಂ ಕಿಂಚಿದಧಿಕಂ ವಾ ನ ತು ಕ್ವಚಿತ್ ।**
**ಕ್ಷರಾಕ್ಷರಾಭ್ಯಾಂ ಭಿನ್ನಂ ಚ ವಿಷ್ಣುಂ ಪಶ್ಯಂತಿ ಯೇ ಸದಾ ।**
**ತಾರತಮ್ಯವಿದಃ ಸರ್ವಜೀವಾನಾಂ ಪ್ರಕೃತೇರಪಿ ।**
**ಭಗವದ್ಧರ್ಮಿಣೋ ನಿತ್ಯಂ ತೇ ಸಂತಃ ಪರಿಕೀರ್ತಿತಾಃ ।**
**ಪರಾಜಿತೇಷ್ವಸತ್ಸೂಕ್ತಂ ರಾಜಾ ದಂಡಂ ಪ್ರಪಾತಯೇತ್ ।**
**ಜಿತೇಷು ಸತ್ಸ್ವಸದ್ಭಿಸ್ತು ರಾಜೋದಾಸೀನತಾಂ ವ್ರಜೇತ್ ।**
**ಯಾವದೇಷಾಂ ವಿಜೇತಾ ಸ್ಯಾದಥ ದಂಡಂ ನಿಪಾತಯೇತ್ ।**
**ಇತ್ಯಾದಿ ಬ್ರಹ್ಮತರ್ಕೇ ।**

**ಅನುವಾದ**—ತತ್ತ್ವವಿಪ್ಲವ ಮಾಡುವವರನ್ನು ವಾದದಲ್ಲಿ ಗೆಲ್ಲಲು ಪ್ರತಿವಾದಿಗಳಾದ ಸಜ್ಜನರು ಅಶಕ್ತರಾದಾಗ ತ್ರಿಪುರಗಾರರೂ ಸೇರಿದಂತೆ ಎಲ್ಲ ಸಜ್ಜನರೂ ಒಟ್ಟಾಗಿಯಾದರೂ ಅವರನ್ನು ನಿಯಂತ್ರಿಸಬೇಕು. ವಿಷ್ಣುವಿಗೆ ಸಮಾನ ಅಥವಾ ಅಧಿಕ ಯಾವುದೂ ಎಲ್ಲಿಯೂ ಇಲ್ಲವೆಂದು ಯಾರು ಅಂಗೀಕರಿಸುವರೋ, ಯಾರು ವಿಷ್ಣುವನ್ನು ಕ್ಷರಾಕ್ಷರ ವಿಲಕ್ಷಣನೆಂದು ತಿಳಿದಿರುವರೋ ಯಾರು ಸರ್ವಜೀವರಿಗೂ ಪ್ರಕೃತಿಗೂ ತಾರತಮ್ಯವನ್ನು ತಿಳಿದಿರುವರೋ ಮತ್ತು ಯಾವಾಗಲೂ ಭಾಗವತ ಧರ್ಮವನ್ನು ಪಾಲಿಸುವರೋ ಅವರು ಸಜ್ಜನರು. ತತ್ತ್ವವಿಪ್ಲವಕಾರಿಗಳು ಪರಾಜಿತರಾದಾಗ ರಾಜನು ಮೇಲೆ ಹೇಳಿದ ಜಿಹ್ವಾಚ್ಛೇದಾದಿ ಶಿಕ್ಷೆಯನ್ನು ಅವರಿಗೆ ವಿಧಿಸಬೇಕು. ತತ್ತ್ವವಿಪ್ಲವಕಾರಿಗಳಿಂದ ಸಜ್ಜನರೇ ಸೋಲಿಸಲ್ಪಟ್ಟರೆ, ಆ ತತ್ತ್ವವಿಪ್ಲವಕಾರಿಗಳನ್ನು ಮುಂದೆ ಸಜ್ಜನರು ಸೋಲಿಸುವವರೆಗೂ ಉದಾಸೀನನಾಗಿರಬೇಕು. ಅನಂತರ ಸೋತವರನ್ನು ಶಿಕ್ಷಿಸಬೇಕು ಎಂದು ಮುಂತಾಗಿ ಬ್ರಹ್ಮತರ್ಕದಲ್ಲಿ ಹೇಳಿದೆ.

**ಲಕ್ಷ್ಮೀದೇವಿ ಸರ್ವಲೋಕಗಳಿಗೂ ಆಧಾರ :**

**ಉಪನಿಷತ್**—**ಸಾ ಹೋವಾಚ । ಅಹಂ ವೈ ತ್ವಾ ಯಾಜ್ಞವಲ್ಕ್ಯ ಯಥಾ ಕಾಶ್ಯೋ ವಾ ವೈದೇಹೋ ವೋಗ್ರಪುತ್ರ ಉಜ್ಜ್ಯಂ ಧನುರಧಿಜ್ಯಂ ಕೃತ್ವಾ ದ್ವೌ ಬಾಣವಂತೌ ಸಪತ್ನಾತಿವ್ಯಾಧಿನೌ ಹಸ್ತೇ ಕೃತ್ವೋಪೋತ್ತಿಷ್ಠೇದ್ ಏವಮೇವಾಹಂ ದ್ವಾಭ್ಯಾಂ ಪ್ರಶ್ನಾಭ್ಯಾಮುಪೋದಸ್ಥಾನ್। ತೌ ಮೇ ಬ್ರೂಹೀತಿ । ಪೃಚ್ಛ ಗಾರ್ಗೀತಿ ।**

ಗಾರ್ಗಿ ಹೇಳಿದಳು 'ಯಾಜ್ಞವಲ್ಕ್ಯರೇ,ನಾನು ನಿಮ್ಮಲ್ಲಿ ಎರಡು ಪ್ರಶ್ನೆಗಳನ್ನು ಕೇಳುತ್ತೇನೆ. ಕಾಶಿಯ ಅಥವಾ ವಿದೇಹದ ಪ್ರತಾಪಶಾಲಿ ರಾಜಕುಮಾರನು ಹೆದೆಯೇರಿಸದಿದ್ದ ಬಿಲ್ಲಿಗೆ ಹೆದೆಯೇರಿಸಿ, ಶತ್ರುಗಳಿಗೆ ಭಯಂಕರ ನೋವನ್ನುಂಟು ಮಾಡುವ ಕಬ್ಬಿಣದ ಮೊನೆಯುಳ್ಳ ಎರಡು ಬಾಣಗಳನ್ನು ಕೈಯಲ್ಲಿ ಹಿಡಿದು ಹೇಗೆ

ರತ್ನಗಳ ಮುಂದೆ ನಿಲ್ಲುವನೋ ಹಾಗೆಯೇ ನಾನು ಕೂಡ ಎರಡು ಪ್ರಶ್ನೆ ಸಿದ್ಧಪಡಿಸಿ ಕೊಂಡು ನಿಮ್ಮ ಬಳಿ ಬಂದಿರುವೆನು. ನೀವು ನನ್ನ ಆ ಪ್ರಶ್ನೆಗಳಿಗೆ ಉತ್ತರ ಹೇಳಿರಿ'. ಯಾಜ್ಞವಲ್ಕ್ಯರು ಹೇಳಿದರು 'ಗಾರ್ಗಿ ಕೇಳು ಆ ಪ್ರಶ್ನೆಗಳನ್ನು'.

**ಭಾಷ್ಯ—ಬಾಣಸ್ತ್ವಯೋಮಯಃ ಪ್ರೋಕ್ತಃ ಶರೋ ನಾಲೋಽಸ್ಯ ಕೀರ್ತಿತಃ।**
**ಇತ್ಯಭಿಧಾನಂ ।**

**ಕರ್ಮ್ಮಾರಸ್ತು ತದಾ ಬಾಣಂ ತೀಕ್ಷ್ಣಮಂಜಲಿಕಾಭಿಧಂ ।**
**ಸಂದಧಾನಃ ಶರೇ ಯಾಂತಂ ರಾಜಾನಂ ನ ದದರ್ಶ ಹ ।**
**ಇತಿ ಪಾದ್ಮೇ ।**

**ಅನುವಾದ**—ಕಬ್ಬಿಣದ ಮೊನೆಯು ಬಾಣವೆಂದೂ, ನಾಳವು ಶರವೆಂದೂ ಪ್ರಸಿದ್ಧವಾಗಿದೆ ಎಂದು ಕೋಶವು ಹೇಳುತ್ತದೆ. 'ಅಂಜಲಿಕಾ ಎಂಬ ಹೆಸರಿನ ತೀಕ್ಷ್ಣ ವಾದ ಬಾಣವನ್ನು ಶರದಲ್ಲಿ ಹೂಡುತ್ತಿದ್ದ ಕರ್ಮ್ಮಾರನು ಬಳಿಯಲ್ಲಿಯೇ ಹೋಗುತ್ತಿದ್ದ ರಾಜನನ್ನು ನೋಡಲಿಲ್ಲ' ಎಂದು ಪದ್ಮಪುರಾಣದಲ್ಲಿ ಬಾಣಶಬ್ದವನ್ನು ಮೇಲೆ ಹೇಳಿದ ಅರ್ಥದಲ್ಲಿ ಪ್ರಯೋಗಿಸಲಾಗಿದೆ.

**ಉಪನಿಷತ್—ಸಾ ಹೋವಾಚ । ಯದೂರ್ಧ್ವಂ ಯಾಜ್ಞವಲ್ಕ್ಯ ದಿವೋ, ಯದರ್ವಾಕ್ ಪೃಥಿವ್ಯಾ, ಯದಂತರಾ ದ್ಯಾವಾಪೃಥಿವೀ ಇಮೇ ಯದ್ಭೂತಂ ಚ ಭವಚ್ಚ ಭವಿಷ್ಯಚ್ಚೇತ್ಯಾಚಕ್ಷತೇ ಕಸ್ಮಿಂಸ್ತದೋತಂ ಚ ಪ್ರೋತಂ ಚೇತಿ ।**

ಗಾರ್ಗಿ ಕೇಳಿದಳು. 'ಸ್ವರ್ಗದಿಂದ ಮೇಲಿನ ಮಹರಾದಿ ಲೋಕಗಳೂ, ವೈಕುಂಠ ದಿಂದ ಮೇಲಿನ ಬ್ರಹ್ಮಾಂಡ ನವಾವರಣಗಳೂ, ಪೃಥಿವಿಯ ಕೆಳಗಿನ ಪಾತಾಳ ಲೋಕ ಗಳೂ, ಅವುಗಳಿಗಿಂತ ಕೆಳಗಿನ ಅಂಡೋದಕವೂ, ನಡುವೆ ಇರುವ ಸ್ವರ್ಗಾದಿ ಲೋಕ ಗಳೂ, ಪೃಥಿವ್ಯಾದಿ ಲೋಕಗಳೂ, ಭೂತ ವರ್ತಮಾನ ಭವಿಷ್ಯತ್ತುಗಳೆಂದು ಬಲ್ಲವರು ಹೇಳುವವೆಲ್ಲವೂ ಯಾವುದರಲ್ಲಿ ಓತಪ್ರೋತವಾಗಿ ಆಶ್ರಯಿಸಿಕೊಂಡಿವೆ?'

**ಉಪನಿಷತ್—ಸ ಹೋವಾಚ। ಯದೂರ್ಧ್ವಂ ಗಾರ್ಗಿ ದಿವೋ, ಯದರ್ವಾಕ್ ಪೃಥಿವ್ಯಾ, ಯದಂತರಾ ದ್ಯಾವಾಪೃಥಿವೀ ಇಮೇ ಯದ್ಭೂತಂ ಚ ಭವಚ್ಚ ಭವಿಷ್ಯಚ್ಚ ಇತ್ಯಾಚಕ್ಷತೇ ಆಕಾಶೇ ತದೋತಂ ಚ ಪ್ರೋತಂ ಚೇತಿ ।**

ಯಾಜ್ಞವಲ್ಕ್ಯರು ಹೇಳಿದರು 'ಗಾರ್ಗಿ, ಸ್ವರ್ಗಕ್ಕಿಂತ ಮೇಲಿನ ಮಹರಾದಿ

ಲೋಕಗಳೂ, ವೈಕುಂಠಕ್ಕಿಂತ ಮೇಲಿನ ಬ್ರಹ್ಮಾಂಡಾವರಣಗಳೂ, ಪೃಥಿವಿಗಿಂತ ಕೆಳಗಿನ ಪಾತಾಳಲೋಕಗಳೂ, ಅವುಗಳಿಗಿಂತಲೂ ಕೆಳಗಿನ ಅಂಡೋದಕವೂ, ನಡುವೆ ಇರುವ ಸ್ವರ್ಗಾದಿ ಲೋಕಗಳೂ, ಪೃಥಿವ್ಯಾದಿ ಲೋಕಗಳೂ, ಭೂತ ವರ್ತಮಾನ ಭವಿಷತ್ತುಗಳೆಂದು ಬಲ್ಲವರು ಯಾವುದನ್ನು ಹೇಳುವರೋ ಅವೆಲ್ಲವೂ ಆಕಾಶನಾಮಕ ಳಾದ ಲಕ್ಷ್ಮೀದೇವಿಯಲ್ಲಿ ಓತಪ್ರೋತವಾಗಿ ಆಶ್ರಯಿಸಿಕೊಂಡಿವೆ.

**ಭಾಷ್ಯ—ದೀಪ್ತೇರಾಕಾಶಶಬ್ದೋಕ್ತಾ ಶ್ರೀರ್ಹಿ ಸರ್ವಾಶ್ರಯಾ ಮತಾ ।**
**ತದಾಶ್ರಯಃ ಪರೋ ವಿಷ್ಣುಃ ಸೋಽಸ್ಥೂಲಾದಿಗುಣೋ ಮತಃ ।**
**ಇತಿ ಸ್ಕಾಂದೇ ।**

**ಅನುವಾದ**—ಆಕಾಶ ಎಂದರೆ ಅತಿಶಯ ಪ್ರಕಾಶ ಉಳ್ಳದ್ದು. ಲಕ್ಷ್ಮೀಗೆ ಅತಿಶಯ ಪ್ರಕಾಶ ಇರುವುದರಿಂದ ಅವಳನ್ನು ಆಕಾಶ ಎಂದು ಕರೆಯುವರು. ಅವಳೆ ಸಮಸ್ತ ಲೋಕಗಳಿಗೂ ಆಶ್ರಯ. ಅವಳಿಗೂ ಆಶ್ರಯ ಸರ್ವೋತ್ತಮನಾದ ವಿಷ್ಣು. ಅವನೆ ಅಸ್ಥೂಲತ್ವ ಮೊದಲಾದ ಗುಣಗಳುಳ್ಳವನು. ಇದು ಜ್ಞಾನಿಗಳ ಅಭಿಪ್ರಾಯ ಎಂದು ಸ್ಕಾಂದಪುರಾಣದಲ್ಲಿ ಹೇಳಿದೆ.

**ಉಪನಿಷತ್—ಸಾ ಹೋವಾಚ । ನಮಸ್ತೇಽಸ್ತು ಯಾಜ್ಞವಲ್ಕ್ಯ ಯೋ ಮ ಏತಂ ವ್ಯವೋಚಃ । ಅಥಾಪರಸ್ಮೈ ಧಾರಯಸ್ವೇತಿ । ಪೃಚ್ಛ ಗಾರ್ಗೀತಿ।**

ಗಾರ್ಗಿ ಹೇಳಿದಳು 'ಯಾಜ್ಞವಲ್ಕ್ಯರೇ, ನನ್ನ ಈ ಪ್ರಶ್ನೆಗೆ ಸರಿಯಾಗಿ ಉತ್ತರ ಹೇಳಿದಿರಿ. ನಿಮಗೆ ನಮಸ್ಕಾರ. ಇನ್ನೊಂದು ಪ್ರಶ್ನೆಗೆ ಸಿದ್ಧರಾಗಿರಿ'. ಯಾಜ್ಞವಲ್ಕ್ಯರು ಹೇಳಿದರು 'ಗಾರ್ಗಿ, ಕೇಳು'.

**ಉಪನಿಷತ್—ಸಾ ಹೋವಾಚ । ಯದೂರ್ಧ್ವಂ ಯಾಜ್ಞವಲ್ಕ್ಯ ದಿವೋ, ಯದರ್ವಾಕ್ ಪೃಥಿವ್ಯಾ, ಯದಂತರಾ ದ್ಯಾವಾಪೃಥಿವೀ ಇಮೇ ಯದ್ಭೂತಂ ಚ ಭವಚ್ಚ ಭವಿಷ್ಯಚ್ಚೇತ್ಯಾಚಕ್ಷತೇ ಕಸ್ಮಿಂಸ್ತದೋತಂ ಚ ಪ್ರೋತಂ ಚೇತಿ ।**

ಗಾರ್ಗಿ ಕೇಳಿದಳು, 'ಯಾಜ್ಞವಲ್ಕ್ಯರೇ, ಸ್ವರ್ಗಕ್ಕಿಂತ ಮೇಲಿರುವ ಮಹರಾದಿ ಲೋಕಗಳೂ, ವೈಕುಂಠಕ್ಕಿಂತ ಮೇಲಿನ ಬ್ರಹ್ಮಾಂಡಾವರಣಗಳೂ, ಪೃಥಿವಿಗಿಂತ ಕೆಳಗಿನ ಪಾತಾಳ ಲೋಕಗಳೂ, ಅವುಗಳಿಗಿಂತ ಕೆಳಗಿನ ಅಂಡೋದಕವೂ, ನಡುವೆ ಇರುವ ಸ್ವರ್ಗಾದಿ ಲೋಕಗಳೂ, ಪೃಥಿವ್ಯಾದಿ ಲೋಕಗಳೂ, ಭೂತ ವರ್ತಮಾನ ಭವಿಷ್ಯತ್ತುಗಳೆಂದು ಬಲ್ಲವರು ಯಾವುದನ್ನು ಹೇಳುವರೋ ಅವೆಲ್ಲವೂ ಯಾವುದರಲ್ಲಿ ಓತಪ್ರೋತವಾಗಿ ಆಶ್ರಯಿಸಿಕೊಂಡಿವೆ?

**ಉಪನಿಷತ್**—ಸ ಹೋವಾಚ । ಯದೂರ್ಧ್ವಂ ಗಾರ್ಗಿ ದಿವೋ ಯದರ್ವಾಕ್ ಪೃಥಿವ್ಯಾ, ಯದಂತರಾ ದ್ಯಾವಾಪೃಥಿವೀ ಇಮೇ ಯದ್ಭೂತಂ ಚ ಭವಚ್ಚ ಭವಿಷ್ಯಚ್ಚ ಇತ್ಯಾಚಕ್ಷತ ಆಕಾಶ ಏವ ತದೋತಂ ಚ ಪ್ರೋತಂ ಚೇತಿ । ಕಸ್ಮಿನ್ ಖಲ್ವಾಕಾಶ ಓತಶ್ಚ ಪ್ರೋತಶ್ಚೇತಿ ।

ಯಾಜ್ಞವಲ್ಕ್ಯರು ಹೇಳಿದರು 'ಗಾರ್ಗಿ, ಸ್ವರ್ಗಕ್ಕಿಂತ ಮೇಲಿರುವ ಮಹರಾದಿ ಲೋಕಗಳು, ವೈಕುಂಠಕ್ಕಿಂತ ಮೇಲಿರುವ ಬ್ರಹ್ಮಾಂಡಾವರಣಗಳೂ, ಪೃಥಿವಿಗಿಂತ ಕೆಳಗಿನ ಪಾತಾಳ ಲೋಕಗಳೂ, ಅವುಗಳಿಗಿಂತ ಕೆಳಗಿನ ಅಂಡೋದಕವೂ, ನಡುವೆ ಇರುವ ಸ್ವರ್ಗಾದಿ ಲೋಕಗಳೂ, ಪೃಥಿವ್ಯಾದಿ ಲೋಕಗಳೂ, ಭೂತ ವರ್ತಮಾನ ಭವಿಷ್ಯತ್ತುಗಳೆಂದು ಯಾವುದನ್ನು ಬಲ್ಲವರು ಹೇಳುವರೋ ಅವೆಲ್ಲವೂ, ಆಕಾಶ ನಾಮಕಳಾದ ಲಕ್ಷ್ಮೀದೇವಿಯಲ್ಲಿಯೇ ಓತಪ್ರೋತವಾಗಿ ಆಶ್ರಯಿಸಿಕೊಂಡಿವೆ'. ಗಾರ್ಗಿ ಕೇಳಿದಳು 'ಲಕ್ಷ್ಮೀದೇವಿ ಯಾರನ್ನು ಓತಪ್ರೋತವಾಗಿ ಆಶ್ರಯಿಸಿಕೊಂಡಿರುವಳು?'

**ಭಾಷ್ಯ**—ಪುನಃ ಪ್ರಶ್ನಃ ಸರ್ವಾಧಾರಾ ಪ್ರಕೃತಿರಿತ್ಯನುಪಚರಿತತ್ವೇನಾವಧಾರಣಾರ್ಥಮ್ । ಆಕಾಶ ಏವೇತ್ಯವಧಾರಣಾತ್ ।

**ಅನುವಾದ**—ಲಕ್ಷ್ಮಿಯು ಸರ್ವಾಧಾರಳು ಎನ್ನುವ ಮಾತು ಬರಿ ಉಪಚಾರದ ಮಾತಲ್ಲ ಎಂಬುವನ್ನು ದೃಢಪಡಿಸಿಕೊಳ್ಳುವುದಕ್ಕಾಗಿ ಒಮ್ಮೆ ಕೇಳಿದ ಪ್ರಶ್ನೆಯನ್ನೇ ಗಾರ್ಗಿಯು ಪುನಃ ಕೇಳಿದ್ದಾಳೆ. ಯಾಜ್ಞವಲ್ಕ್ಯರು ಉತ್ತರದಲ್ಲಿ 'ಲಕ್ಷ್ಮೀದೇವಿಯಲ್ಲಿಯೇ' ಎಂದು ಒತ್ತುಕೊಟ್ಟು ಹೇಳಿರುವುದರಿಂದ ದೃಢಪಡಿಸಿದಂತಾಯಿತು.

**ಭಾಷ್ಯ**—ಪುನರುಕ್ತಿಃ ಶಬ್ದದೋಷೋ ನ್ಯೂನಾಧಿಕ್ಯಾದಿಕಂ ತಥಾ ।
ನ ಜಿಗೀಷುಕಥಾಯಾಂ ತು ಕಾರಣಂ ಸ್ಯಾತ್ಪರಾಜಯೇ ।
ಕ್ವಚಿದ್ವಿದ್ಯಾಧಿಕಸ್ಯಾಪಿ ಸ್ಖಲನಂ ಸಂಭವೇದ್ಯತಃ ।
ತತ್ತ್ವನಿರ್ಣಯವೈಲೋಮ್ಯಂ ವಿಲಂಬೋ ವಾ ಮುಹೂರ್ತತಃ ।
ವಿದ್ಯಾದೌರ್ಬಲ್ಯಹೇತುಃ ಸ್ಯಾದತಸ್ತಸ್ಮಿನ್ ಪರಾಜಯಃ ।
ಇತಿ ಬ್ರಹ್ಮಾಂಡೇ ।
ಅತಃ ತತ್ತ್ವನಿರ್ಣಯವಿರೋಧಿಪುನರುಕ್ತ್ಯಾದೀನಿ ನಿಗ್ರಹಃ ।

**ಅನುವಾದ**—ಪುನರುಕ್ತಿ ನ್ಯೂನತೆ ಆಧಿಕ್ಯ ಮೊದಲಾದ ಶಬ್ದದೋಷಗಳು ವಿಜಯೇಚ್ಛೆಯಿಂದ ನಡೆಸುವ ಚರ್ಚೆಯಲ್ಲಿಯೂ, ತತ್ತ್ವನಿರ್ಣಯೇಚ್ಛೆಯಿಂದ ನಡೆ

ಸುವ ಚರ್ಚೆಯಲ್ಲಿಯೂ ಪರಾಜಯ ಕಾರಣವಾದ ಅಂಶಗಳೆಂಬ ನಿಯಮವಿಲ್ಲ. ಏಕೆಂದರೆ ಒಮ್ಮೊಮ್ಮೆ ವಿದ್ಯೆಯಲ್ಲಿ ಉತ್ತಮರಾದವರ ಮಾತಿನಲ್ಲಿ ಕೂಡ ವಾಗಿಂದ್ರಿಯ ಪಾಟವದ ಕೊರತೆಯಿಂದ ಶಬ್ದದೋಷವು ಸಂಭವಿಸಬಹುದು. ಇದು ಪಾಂಡಿತ್ಯ ಕೊರತೆಗೆ ಸೂಚಕವಲ್ಲ. ತತ್ತ್ವನಿರ್ಣಯಕ್ಕೆ ವಿರೋಧಿಯಾದ ವಿರೋಧ ಅಸಂಗತಿ ರೂಪವಾದ ಅರ್ಥದೋಷಗಳೂ, ಒಂದು ಮುಹೂರ್ತದಷ್ಟು ಕಾಲವೂ ಮೌನವಾಗಿರುವಂಥ ಅನುಕ್ತಿಯೂ,ಪ್ರತಿವಾದಿಯ ವಾದವನ್ನು ತಾನೇ ಒಪ್ಪಿಕೊಳ್ಳುವ ಸಂವಾದವೂ ಪಾಂಡಿತ್ಯದ ಕೊರತೆಯನ್ನು ತೋರಿಸುವುದರಿಂದ, ಇವು ಇದ್ದಾಗ ಪರಾಜಯ ಉಂಟಾಗುತ್ತದೆ, ಎಂದು ಬ್ರಹ್ಮಾಂಡ ಪುರಾಣದಲ್ಲಿ ಹೇಳಲಾಗಿದೆ. ಆದ್ದರಿಂದ ತತ್ತ್ವನಿರ್ಣಯ ವಿರೋಧಿಯಾದ, ಪಾಂಡಿತ್ಯದ ಕೊರತೆಯನ್ನು ಸೂಚಿಸಬಲ್ಲ ಪುನರುಕ್ತಿ ಮೊದಲಾದವುಗಳೇ ಪರಾಜಯ ಕಾರಣಗಳು.

**ವಿವರಣೆ**—ಯಾಜ್ಞವಲ್ಕ್ಯರ ಜೊತೆ ವಿದ್ವಾಂಸರು ಈಗ ನಡೆಸುತ್ತಿರುವುದು ವಿಜಯೇಚ್ಛೆಯಿಂದ ನಡೆಸುವ ಚರ್ಚೆ. ಗಾರ್ಗಿ ಒಮ್ಮೆ ಕೇಳಿದ ಪ್ರಶ್ನೆಯನ್ನೇ ಪುನಃ ಕೇಳಿದ್ದಾಳೆ. ಇದು ಪುನರುಕ್ತಿ ಎಂಬ ಒಂದು ದೋಷ. ವಿಜಯೇಚ್ಛೆಯಿಂದ ನಡೆಸುವ ಚರ್ಚೆಯಲ್ಲಿ ಇದು ಪರಾಜಯ ಕಾರಣ. ಗಾರ್ಗಿಯು ಪುನರುಕ್ತಿ ದೋಷದಿಂದ ಪರಾಜಿತಳಾಗಿದ್ದಾಳೆ ಎಂದು ಯಾಜ್ಞವಲ್ಕ್ಯರು ಹೇಳಬೇಕಿತ್ತು. ಹೇಳದಿದ್ದರೆ ಅದೇ ಯಾಜ್ಞವಲ್ಕ್ಯರಿಗೆ ಪರಾಜಯ ಕಾರಣವಾಗುತ್ತದೆ. ಯಾಜ್ಞವಲ್ಕ್ಯರು ಏಕೆ ಹೇಳಲಿಲ್ಲ? ಹೇಳದಿದ್ದರೂ ಅವರು ಏಕೆ ಪರಾಜಯ ಹೊಂದಲಿಲ್ಲ? ಈ ಪ್ರಶ್ನೆಗೆ ಸಮಾಧಾನ – ಪುನರುಕ್ತಿ ಎಲ್ಲವೂ ಪರಾಜಯಕಾರಣವೆಂಬ ನಿಯಮವಿಲ್ಲ. ಪ್ರಕೃತ ಗಾರ್ಗಿಯ ಪುನರುಕ್ತಿ ಯಾಜ್ಞವಲ್ಕ್ಯರಿಂದ ತಮ್ಮ ಹೇಳಿಕೆಯನ್ನು ದೃಢೀಕರಿಸುವ ಇಚ್ಛೆಯಿಂದ ಹೊರತು ಅಜ್ಞಾನದಿಂದಲ್ಲ. ಆದ್ದರಿಂದ ಅವಳಿಗೆ ಅದು ಪರಾಜಯ ಕಾರಣವೂ ಅಲ್ಲ. ಅದನ್ನು ಎತ್ತಿ ಹೇಳದ ಯಾಜ್ಞವಲ್ಕ್ಯರಿಗೆ ಅದರಿಂದ ಪರಾಜಯವೂ ಇಲ್ಲ.

**ಉಪನಿಷತ್–ಸ ಹೋವಾಚ । ಏತದ್ವೈ ತದಕ್ಷರಂ ಗಾರ್ಗಿ ಬ್ರಾಹ್ಮಣಾ ಅಭಿವದಂತಿ ಅಸ್ಥೂಲಂ ಅನಣು ಅಹ್ರಸ್ವಂ ಅದೀರ್ಘಂ ಅಲೋಹಿತಂ ಅಸ್ನೇಹಂ ಅಚ್ಛಾಯಂ ಅತಮಃ ಅವಾಯು ಅನಾಕಾಶಂ ಅಸಂಗಂ ಅರಸಂ ಅಗಂಧಂ ಅಚಕ್ಷುಷ್ಕಂ ಅಶ್ರೋತ್ರಂ ಅವಾಕ್ ಅಮನಃ ಅತೇಜಸ್ಕಂ ಅಪ್ರಾಣಂ ಅಮುಖಂ ಅಮಾತ್ರಂ ಅನಂತರಂ ಅಬಾಹ್ಯಂ । ನ ತದಶ್ನಾತಿ ಕಿಂಚನ। ನ ತದಶ್ನಾತಿ ಕಶ್ಚನ ।**

ಯಾಜ್ಞವಲ್ಕ್ಯರು ಹೇಳಿದರು 'ಗಾರ್ಗಿ,ಲಕ್ಷ್ಮಿಗೆ ಅಕ್ಷರನಾಮಕ ನಾರಾಯಣನು ಆಧಾರ. ಆ ಅಕ್ಷರನ ಲಕ್ಷಣಗಳನ್ನು ಬ್ರಹ್ಮಜ್ಞಾನಿಗಳು ಹೀಗೆ ಹೇಳುತ್ತಾರೆ–ಅವನು

ಸ್ಥೂಲ ಸೂಕ್ಷ್ಮ ಹ್ರಸ್ವ ಅಥವಾ ದೀರ್ಘವಾದ ಎಲ್ಲ ಪ್ರಾಕೃತ ವಸ್ತುಗಳಿಂದ ಭಿನ್ನ. ಪ್ರಾಕೃತರಕ್ತಾದಿ ರೂಪವಿಲ್ಲದವನು. ಪ್ರಾಕೃತಜಿಗಟುತನವಿಲ್ಲದವನು. ಅಜ್ಞಾನ ರಹಿತ. ಆವರಣ ರಹಿತ. ಶ್ವಾಸೋಚ್ಛ್ವಾಸ ರಹಿತ. ಆಕಾಶ ಮೊದಲಾದ ಪಂಚ ಭೂತಮಯ ಶರೀರ ರಹಿತ. ಎಲ್ಲ ಕಡೆ ಇದ್ದರೂ ತತ್ಸಂಯುಕ್ತ ದೋಷಲೇಪವಿಲ್ಲ ದವನು. ಪ್ರಾಕೃತ ರಸರಹಿತ, ಪ್ರಾಕೃತಗಂಧರಹಿತ, ಪ್ರಾಕೃತನೇತ್ರರಹಿತ, ಪ್ರಾಕೃತ ಶ್ರೋತ್ರ ರಹಿತ, ಪ್ರಾಕೃತ ವಾಗಿಂದ್ರಿಯ ರಹಿತ, ಪ್ರಾಕೃತ ಮನೋರಹಿತ, ಪ್ರಾಕೃತ ಕಾಂತಿರಹಿತ, ಪ್ರಾಕೃತ ಜ್ಞಾನೇಂದ್ರಿಯ ಕರ್ಮೇಂದ್ರಿಯ ರಹಿತ, ಪ್ರಾಕೃತ ಶರೀರ ರಹಿತ, ಪರಿಮಿತಿ ರಹಿತ, ಎಲ್ಲಕ್ಕೂ ಒಳಗಿರುವವ, ಎಲ್ಲಕ್ಕೂ ಹೊರಗೂ ಇರುವವ. ಆ ಅಕ್ಷರನು ತನ್ನ ಉಳಿವಿಗಾಗಿ ಯಾರನ್ನೂ ಆಶ್ರಯಿಸಿಲ್ಲ. ಅವನನ್ನು ಯಾರೂ ಅಳಿಸಲೂ ಶಕ್ತರಲ್ಲ.

**ಭಾಷ್ಯ—ಪ್ರಸಿದ್ಧಸ್ಥೂಲಸೂಕ್ಷ್ಮಾದಿವೈಲಕ್ಷಣ್ಯಾದ್ ಜನಾರ್ದನಃ ।**
**ಅಸ್ಥೂಲಾದಿರಿತಿ ಪ್ರೋಕ್ತೋ ನೈವ ಸ್ಥೌಲ್ಯಾದ್ಯಭಾವತಃ ।**
**ಅನಾವೃತೇಸ್ತಮೋ ನಾಸ್ಯ ಸ್ವಾತಂತ್ರ್ಯಾನ್ನಾದ್ಯತೇ ಕ್ವಚಿತ್ ।**

**ಅನುವಾದ**—ಲೋಕದಲ್ಲಿ ಕಂಡುಬರುವ ಪ್ರಾಕೃತವಾದ ಸ್ಥೂಲ ಸೂಕ್ಷ್ಮ ಮೊದಲಾದ ವಸ್ತುಗಳಿಂದ ಹರಿಯು ವಿಲಕ್ಷಣನಾಗಿರುವುದರಿಂದ 'ಅಸ್ಥೂಲ' 'ಅನಣು' ಎಂದು ಮೊದಲಾಗಿ ಉಪನಿಷತ್ತಿನಲ್ಲಿ ಹೇಳಿದೆ. ಸ್ಥೌಲ್ಯ, ಅಣುತ್ವ ಮೊದಲಾದವುಗಳು ಇಲ್ಲವೇ ಇಲ್ಲ ಎಂದಲ್ಲ. ಆವರಣ ರಹಿತನಾದುದರಿಂದ ಅವನು 'ಅತಮ'ಎನಿಸಿದ್ದಾನೆ. ಸ್ವತಂತ್ರನಾದುದರಿಂದ ಯಾರಿಂದಲೂ ಸಂಹರಿಸಲ್ಪಡುವುದಿಲ್ಲ.

**ಇಚ್ಛಾಮಾತ್ರದಿಂದ ಲೋಕಗಳನ್ನು ಧರಿಸುವವ ನಾರಾಯಣ :**

**ಉಪನಿಷತ್—ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ಸೂರ್ಯಾಚಂದ್ರಮಸೌ ವಿಧೃತೌ ತಿಷ್ಠತಃ । ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ದ್ಯಾವಾ ಪೃಥಿವ್ಯೌ ವಿಧೃತೇ ತಿಷ್ಠತಃ । ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ನಿಮೇಷಾ ಮುಹೂರ್ತಾ ಅಹೋರಾತ್ರಾಣಿ ಅರ್ಧಮಾಸಾ ಮಾಸಾ ಋತವಃ ಸಂವತ್ಸರಾ ಇತಿ ವಿಧೃತಾಸ್ತಿಷ್ಠಂತಿ । ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ಪ್ರಾಚ್ಯೋಽನ್ಯಾ ನದ್ಯಃ ಸ್ಯಂದಂತೇ ಶ್ವೇತೇಭ್ಯಃ ಪರ್ವತೇಭ್ಯಃ ಪ್ರತೀಚ್ಯೋಽನ್ಯಾ ಯಾಂ ಯಾಂ ಚ ದಿಶಮನು । ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ದದತೋ ಮನುಷ್ಯಾಃ ಪ್ರಶಂಸಂತಿ, ಯಜಮಾನಂ ದೇವಾಃ, ದರ್ವೀಂ ಪಿತರೋಽನ್ವಾಯತ್ತಾಃ ।**

ಈ ಅಕ್ಷರನಾಮಕ ಹರಿಯು ಇಚ್ಛಾಮಾತ್ರದಿಂದಲೇ ಬ್ರಹ್ಮ-ರುದ್ರರು ಸುಸ್ಥಿತಿ

ಯಲ್ಲಿದ್ದಾರೆ. ಈ ಅಕ್ಷರನ ಇಚ್ಛೆಯಿಂದಲೇ ಶ್ರೀ ಭೂ ದೇವಿಯರು ಸುಸ್ಥಿತಿಯಲ್ಲಿದ್ದಾರೆ. ಗಾರ್ಗಿ, ಈ ಅಕ್ಷರನ ಇಚ್ಛೆಯಿಂದಲೇ ನಿಮಿಷಗಳು, ಮುಹೂರ್ತಗಳು, ಹಗಲು-ರಾತ್ರಿಗಳು, ಪಕ್ಷಗಳು, ತಿಂಗಳುಗಳು, ಋತುಗಳು, ವರ್ಷಗಳು ಇವುಗಳ ಅಭಿಮಾನಿದೇವತೆಗಳು ಸುಸ್ಥಿತಿಯಲ್ಲಿರುತ್ತಾರೆ. ಗಾರ್ಗಿ, ಈ ಅಕ್ಷರನ ಇಚ್ಛೆಯಿಂದಲೇ ಪೂರ್ವದಿಕ್ಕಿನಲ್ಲಿ ಹರಿಯುವ ಬೇರೆ ಬೇರೆ ನದಿಗಳೂ, ಪಶ್ಚಿಮದಿಕ್ಕಿನಲ್ಲಿ ಹರಿಯುವ ಬೇರೆ ಬೇರೆ ನದಿಗಳೂ, ಶ್ವೇತಪರ್ವತಗಳಿಂದ ಯಾವ ಯಾವ ದಿಕ್ಕುಗಳಿಗೆ ಹರಿಯಬೇಕೋ ಆ ದಿಕ್ಕುಗಳಿಗೇ ಹರಿಯುತ್ತವೆ. ಗಾರ್ಗಿ, ಈ ಅಕ್ಷರನ ಇಚ್ಛೆಯಿಂದಲೇ ದಾನ ಮಾಡುವವರನ್ನು ಮನುಷ್ಯರೂ, ಯಾಗ ಮಾಡುವವರನ್ನು ದೇವತೆಗಳೂ ಹೊಗಳುತ್ತಾರೆ. ಪಿತೃಗಳು ದರ್ವೀ ಹೋಮವನ್ನು ಆಶ್ರಯಿಸುತ್ತಾರೆ.

**ಭಾಷ್ಯ—ದ್ಯಾವಾಪೃಥಿವ್ಯೌ ಶ್ರೀಭೂಮೀ ಕೇಶೌ ಸೂರ್ಯವಿಧೂ ಮತೌ ।**
**ದೀಪ್ತೇಃ ಪೃಥುತ್ವಾತ್ ಜ್ಞಾನಾಚ್ಚ ತಥಾಹ್ಲಾದವಿಧೇರಪಿ ।**
**ತದಾಧಾರೋ ಹರಿರ್ನಿತ್ಯಂ ಸ್ವಾತಂತ್ರ್ಯೇಣ ಪ್ರಶಾಸಕಃ।**
**ಆಧಾರತ್ವಂ ಶ್ರಿಯೋ ಯಚ್ಚ ತಚ್ಚ ವಿಷ್ಣೋಃ ಪ್ರಶಾಸನಾತ್ ।**
**ತದ್ಬಲಾನ್ನ ಸ್ವತಂತ್ರತ್ವಂ ಸ್ವತಂತ್ರೋऽಕೋ ಹರಿಃ ಸದಾ ।**
**ಇತಿ ಮಹಾಮೀಮಾಂಸಾಯಾಮ್ ।**

**ಅನುವಾದ**—ದ್ಯಾವಾಪೃಥಿವೀ ಎಂದರೆ ಶ್ರೀ ಭೂದೇವಿಯರು. ಸೂರ್ಯ ಚಂದ್ರರೆಂದರೆ ಬ್ರಹ್ಮ ರುದ್ರರು. ದಿವ್ ಎಂದರೆ ಪ್ರಕಾಶವುಳ್ಳದ್ದು. ಶ್ರೀದೇವಿಯು ಪ್ರಕಾಶವುಳ್ಳವಳಾದ್ದರಿಂದ ಅವಳಿಗೆ ದಿವ್ ಎಂದು ಹೆಸರು. ಪೃಥು ಎಂದರೆ ವಿಸ್ತಾರವಾಗಿ ಹರಡಿಕೊಂಡಿರುವುದು. ಭೂಮಿಯು ವಿಸ್ತಾರವಾಗಿದ್ದಾಳೆ. ಆದ್ದರಿಂದ ಪೃಥಿವೀ ಎಂದು ಹೆಸರು. ಸೂರ್ಯ ಎಂದರೆ ತಿಳಿಯುವವನು. ಎಲ್ಲವನ್ನು ತಿಳಿಯುವವನು ಚತುರ್ಮುಖ ಬ್ರಹ್ಮ. ಆದ್ದರಿಂದ ಅವನಿಗೆ ಸೂರ್ಯ ಎಂದು ಹೆಸರು. ಚಂದ್ರ ಎಂದರೆ ಆಹ್ಲಾದವನ್ನುಂಟುಮಾಡುವವನು. ಸರ್ವರಿಗೂ ಆಹ್ಲಾದವನ್ನು ಉಂಟುಮಾಡುವವನು ರುದ್ರ. ಆದ್ದರಿಂದ ಚಂದ್ರ ಎಂದರೆ ರುದ್ರ. ಶ್ರೀಹರಿಯು ಸ್ವತಂತ್ರನಾಗಿ ಇಚ್ಛಿಸಿ, ಇಚ್ಛಾನುಸಾರ ಇವರೆಲ್ಲರಿಗೂ ಯಾವಾಗಲೂ ಆಧಾರನಾಗಿರುತ್ತಾನೆ. ಶ್ರೀದೇವಿಯು ಲೋಕಕ್ಕೆ ಆಧಾರಳಾಗಿರುವುದೂ ಕೂಡ ವಿಷ್ಣುವಿನ ಇಚ್ಛೆಯಿಂದ ಮತ್ತು ಅವನ ಬಲದಿಂದ. ಅವಳಿಗೆ ಸ್ವಾತಂತ್ರ್ಯವಿಲ್ಲ. ಹರಿಯೊಬ್ಬನೇ ಯಾವಾಗಲೂ ಸ್ವತಂತ್ರ ಎಂದು ಮಹಾಮೀಮಾಂಸೆಯಲ್ಲಿ ಹೇಳಿದೆ.

**ಭಾಷ್ಯ—'ನ ತಸ್ಯ ಪ್ರಾಕೃತಾ ಮೂರ್ತಿರ್ಮಾಂಸಮೇದೋऽಸ್ಥಿಸಂಭವಾ ।**
**ನಯೋಗಿತ್ವಾದೀಶ್ವರತ್ವಾತ್ ಸತ್ಯರೂಪಾಚ್ಯುತೋ ವಿಭುಃ ।'**
**ಇತಿ ವಾರಾಹೇ ।**

**'ಆದಿತ್ಯವರ್ಣಂ ತಮಸಸ್ತು ಪಾರೇ' ಇತ್ಯಾದೇಶ್ಚ । 'ನ ಸತ್ತನ್ನಾಸದುಚ್ಯತೇ । ಅದುಃಖಮಸುಖಂ ಸಮಮ್' । 'ನ ಪ್ರಜ್ಞಂ ನಾಪ್ರಜ್ಞಮ್' ಇತ್ಯಾದಿ ಚ । ಇತಿ ಅಕ್ಷರ ಬ್ರಾಹ್ಮಣಂ ।**

**ಅನುವಾದ**—'ಶ್ರೀಹರಿಯು ಸತ್ಯವಾದ ಚಿನ್ಮಯರೂಪವುಳ್ಳವನು. ಚ್ಯುತಿ ರಹಿತ. ಸರ್ವತ್ರವ್ಯಾಪ್ತ. ಅಸಂಗನಾದುದರಿಂದ ಮತ್ತು ಅಚಿಂತ್ಯ ಶಕ್ತಿವುಳ್ಳವ ನಾದುದರಿಂದ ಅವನಿಗೆ ಪ್ರಾಕೃತವಾದ ಮಾಂಸ, ಮೇದಸ್ಸು ಮತ್ತು ಎಲುಬುಗಳಿಂದ ಆದ ಶರೀರವಿಲ್ಲ' ಎಂದು ವರಾಹ ಪುರಾಣವು ಹೇಳಿದೆ. 'ಸೂರ್ಯನಂತೆ ಬಣ್ಣ ಉಳ್ಳ ವನು', 'ಪ್ರಕೃತಿಯ ಆಚೆ ಇರುವವನು' ಮೊದಲಾದ ವೇದಮಂತ್ರಗಳಿಂದಲೂ ಹರಿಗೆ ಅಪ್ರಾಕೃತ ರೂಪವಿದೆ ಎಂದು ತಿಳಿಯುತ್ತದೆ. 'ಬ್ರಹ್ಮ ಸತ್ ಎಂದಾಗಲಿ ಅಸತ್ ಎಂದಾಗಲಿ ಹೇಳಲ್ಪಡುವುದಿಲ್ಲ'. 'ಬ್ರಹ್ಮನು ದುಃಖರಹಿತ ಸುಖರಹಿತ ಮತ್ತು ಸಮಾನ', 'ಬ್ರಹ್ಮನು ಜ್ಞಾನವಿಲ್ಲದವನು ಮತ್ತು ಅಜ್ಞಾನವಿಲ್ಲದವನು' ಇತ್ಯಾದಿ ವಚನಗಳೂ ಇವೆ.

**ವಿವರಣೆ**—ಅತಮಃ ಇತ್ಯಾದಿ ಪದಗಳನ್ನು ಸರ್ವಥಾ ಆವರಣರಹಿತ ಇತ್ಯಾದಿ ಯಾಗಿ ವ್ಯಾಖ್ಯಾನಿಸಲಾಗಿದೆ. ಅಮುಖಂ ಇತ್ಯಾದಿ ಪದಗಳನ್ನು ಪ್ರಾಕೃತಶರೀರರಹಿತ ಎಂದು ವ್ಯಾಖ್ಯಾನಿಸಲಾಗಿದೆ. ಅತಮಃ ಇತ್ಯಾದಿ ಪದಗಳನ್ನು ವ್ಯಾಖ್ಯಾನಿಸಿದಂತೆ ಅಮುಖಂ ಇತ್ಯಾದಿಗಳನ್ನು ಸರ್ವಥಾ ಶರೀರರಹಿತ ಎಂದು ಏಕೆ ವ್ಯಾಖ್ಯಾನಿಸ ಬಾರದು? ಎಂಬ ಆಕ್ಷೇಪಕ್ಕೆ ಸಮಾಧಾನ–'ನ ಸತ್ ತನ್ನಾಸದುಚ್ಯತೇ' ಎಂಬ ವಾಕ್ಯ ವನ್ನು ಬ್ರಹ್ಮನು ಮೂರ್ತವಸ್ತು ಮತ್ತು ಅಮೂರ್ತವಸ್ತುಗಳಿಂದ ಭಿನ್ನ ಎಂದು ವ್ಯಾಖ್ಯಾನ ಮಾಡಲಾಗುತ್ತದೆ ಹೊರತು ಸತ್ತ್ವರಹಿತ ಮತ್ತು ಅಸತ್ತ್ವರಹಿತ ಎಂದು ವ್ಯಾಖ್ಯಾನ ಮಾಡುವುದಿಲ್ಲ. ಏಕೆಂದರೆ ಬ್ರಹ್ಮನು ಸತ್ ಆಗಿದ್ದಾನೆ. ಹಾಗೆಯೇ ಬ್ರಹ್ಮನು ಅಣುವೂ ಮಹತ್ತೂ ಆಗಿರುವುದರಿಂದ ಪ್ರಾಕೃತ ಸ್ಥೂಲಭಿನ್ನ, ಪ್ರಾಕೃತ ಅಣುಭಿನ್ನ ಎಂದೇ ವ್ಯಾಖ್ಯಾನ ಮಾಡಬೇಕು. ಅಸ್ಥೂಲಂ ಅತಮಃ ಎಂಬಲ್ಲಿ ಸ್ಥೂಲಾದಿ ಪದಗಳಿಗೆ ಪ್ರಾಕೃತ ಸ್ಥೂಲಾದಿ ಭಿನ್ನ ಎಂದೂ, ಅತಮಾದಿ ಪದಗಳಿಗೆ ತಮ ಆದಿರಹಿತನೆಂದೂ, ಒಂದೇ ವಾಕ್ಯದಲ್ಲಿರುವ ಬೇರೆ ಬೇರೆ ಪದಗಳಿಗೆ ಬೇರೆ ಬೇರೆ ರೀತಿಯ ವ್ಯಾಖ್ಯಾನವನ್ನು ಮಾಡಬಹುದೆ ಎಂದರೆ ಮಾಡಬಹುದು. ಇದಕ್ಕೆ ಉದಾ ಹರಣೆ– 'ಅದುಃಖಮಸುಖಂ ಸಮಂ' ಎಂಬ ಒಂದೇ ವಾಕ್ಯದಲ್ಲಿ, ಅದುಃಖ ಎಂದರೆ ಸರ್ವಥಾ ದುಃಖರಹಿತ ಎಂದೂ, ಅಸುಖ ಎಂದರೆ ಪ್ರಾಕೃತ ಸುಖರಹಿತ ಎಂದೂ ಬೇರೆ ಬೇರೆ ರೀತಿಯ ವ್ಯಾಖ್ಯಾನವನ್ನು ಮಾಡುತ್ತೇವೆ. ಹೀಗೆಯೇ 'ನ ಪ್ರಜ್ಞಂ ನಾಪ್ರಜ್ಞಂ' ಎಂಬ ಒಂದೇ ವಾಕ್ಯದಲ್ಲಿ 'ನಪ್ರಜ್ಞ' ಎಂದರೆ ಪ್ರಾಕೃತ ಜ್ಞಾನರಹಿತ ನೆಂದೂ, 'ನಾಪ್ರಜ್ಞ' ಎಂದರೆ ಸರ್ವಥಾ ಅಜ್ಞಾನ ರಹಿತನೆಂದೂ ಬೇರೆ ಬೇರೆ ರೀತಿ

ವ್ಯಾಖ್ಯಾನ ಮಾಡುತ್ತೇವೆ. ಆದ್ದರಿಂದ ಹೀಗೆಯೇ ಪ್ರಕೃತ ವಾಕ್ಯದ ಪದಗಳಿಗೂ ಬೇರೆ ಬೇರೆ ರೀತಿ ವ್ಯಾಖ್ಯಾನ ಮಾಡಬಹುದು.

**ನಾರಾಯಣನನ್ನು ತಿಳಿಯದೆ ಮೋಕ್ಷವಿಲ್ಲ :**

**ಉಪನಿಷತ್—ಯೋ ವಾ ಏತದಕ್ಷರಂ ಗಾರ್ಗಿ ಅವಿದಿತ್ವಾ ಅಸ್ಮಿನ್ ಲೋಕೇ ಜುಹೋತಿ ಯಜತೇ ತಪಸ್ತಪ್ಯತೇ ಬಹೂನಿ ವರ್ಷಸಹಸ್ರಾಣಿ, ಅಂತವ-ದೇವಾಸ್ಯ ತದ್ ಭವತಿ । ಯೋ ವಾ ಏತದಕ್ಷರಂ ಗಾರ್ಗಿ ಅವಿದಿತ್ವಾ ಅಸ್ಮಾಲ್ಲೋಕಾತ್ ಪ್ರೈತಿ, ಸ ಕೃಪಣಃ। ಅಥ ಯ ಏತದಕ್ಷರಂ ಗಾರ್ಗಿ ವಿದಿತ್ವಾ ಅಸ್ಮಾಲ್ಲೋಕಾತ್ ಪ್ರೈತಿ, ಸ ಬ್ರಾಹ್ಮಣಃ।**

ಗಾರ್ಗಿ, ಈ ಲೋಕದಲ್ಲಿ ಯಾರು ಈ ಅಕ್ಷರನನ್ನು ತಿಳಿಯದೆ ಹೋಮ ಮಾಡುತ್ತಾನೋ, ದಾನ ಮಾಡುತ್ತಾನೋ, ಬಹುಸಾವಿರ ವರ್ಷ ತಪಸ್ಸನ್ನು ಮಾಡುತ್ತಾನೋ ಅವನು ಸ್ವರ್ಗಾದಿ ಲೋಕಗಳಲ್ಲಿ ಬಹು ಸಾವಿರ ವರ್ಷ ವಾಸ ಮಾಡಬಹುದು. ಆದರೂ ಆ ಫಲವು ನಶ್ವರವೇ ಆಗಿರುತ್ತದೆ. ಗಾರ್ಗಿ, ಯಾರು ಈ ಅಕ್ಷರನನ್ನು ತಿಳಿಯದೆ ಮರಣ ಹೊಂದುತ್ತಾನೋ ಅವನು ಶೋಚನೀಯನಾಗಿರುತ್ತಾನೆ. ಸಂಸಾರ ಬಂಧನದಲ್ಲಿಯೇ ಇರುತ್ತಾನೆ. ಗಾರ್ಗಿ, ಯಾರು ಈ ಅಕ್ಷರನನ್ನು ತಿಳಿದು ಮರಣ ಹೊಂದುತ್ತಾನೋ ಅವನು ಮುಕ್ತನಾಗುತ್ತಾನೆ.

**ಉಪನಿಷತ್—ತದ್ ವಾ ಏತದಕ್ಷರಂ ಗಾರ್ಗಿ, ಅದೃಷ್ಟಂ ದ್ರಷ್ಟೃ । ಅಶ್ರುತಂ ಶ್ರೋತೃ ।ಅಮತಂ ಮಂತೃ। ಅವಿಜ್ಞಾತಂ ವಿಜ್ಞಾತೃ। ನಾನ್ಯದತೋಽಸ್ತಿ ದ್ರಷ್ಟೃ । ನಾನ್ಯದತೋಽಸ್ತಿ ಶ್ರೋತೃ । ನಾನ್ಯದತೋಽಸ್ತಿ ಮಂತೃ । ನಾನ್ಯದತೋಽಸ್ತಿ ವಿಜ್ಞಾತೃ । ಏತಸ್ಮಿನ್ ಖಲು ಅಕ್ಷರೇ ಗಾರ್ಗಿ ಆಕಾಶ ಓತಶ್ಚ ಪ್ರೋತಶ್ಚೇತಿ ।**

ಗಾರ್ಗಿ, ಈ ಅಕ್ಷರನು ಅನ್ಯರಿಗೆ ಸಂಪೂರ್ಣವಾಗಿ ನೋಡಲಾಗದವನು. ತಾನು ಎಲ್ಲವನ್ನೂ ನೋಡುವವನು. ಅನ್ಯರಿಗೆ ಸಂಪೂರ್ಣವಾಗಿ ಕೇಳಿ ತಿಳಿಯಲಾಗದವನು. ತಾನು ಎಲ್ಲವನ್ನೂ ಕೇಳುವವನು. ಅನ್ಯರಿಗೆ ಸಂಪೂರ್ಣವಾಗಿ ಮನಸ್ಸಿನಿಂದ ಗ್ರಹಿಸಲಾಗದವನು. ತಾನು ಎಲ್ಲವನ್ನೂ ಮನಸಾ ಗ್ರಹಿಸುವವನು. ಅನ್ಯರಿಗೆ ಸಂಪೂರ್ಣವಾಗಿ ತಿಳಿಯಲಾಗದವನು. ತಾನು ಎಲ್ಲವನ್ನೂ ತಿಳಿಯುವವನು. ಅಕ್ಷರನಿಂದ ಅನ್ಯರು ಯಾರೂ ಸ್ವತಂತ್ರವಾಗಿ ನೋಡುವವರಲ್ಲ. ಇವನಿಗಿಂತ ಅನ್ಯರು ಯಾರೂ ಸ್ವತಂತ್ರವಾಗಿ ಕೇಳುವವರಲ್ಲ. ಇವನಿಗಿಂತ ಅನ್ಯರು ಯಾರೂ ಸ್ವತಂತ್ರವಾಗಿ ಮನಸಾ ತಿಳಿಯುವವರಲ್ಲ. ಇವನಿಗಿಂತ ಬೇರೆ ಯಾರೂ ಸ್ವತಂತ್ರವಾಗಿ ತಿಳಿಯುವವ

ನಿಲ್ಲ. ಗಾರ್ಗಿ ಇಂಥ ಅಕ್ಷರನಲ್ಲಿಯೇ ಲಕ್ಷ್ಮ್ಯಯೂ ಓತಪ್ರೋತವಾಗಿ ಆಶ್ರಯ ಪಡದಿದ್ದಾಳೆ.

**ಉಪನಿಷತ್—ಸಾ ಹೋವಾಚ । ಬ್ರಾಹ್ಮಣಾ ಭಗವಂತಃ ತದೇವ ಬಹು ಮನ್ಯಧ್ವಂ ಯದ್ ಅಸ್ಮಾದ್ ನಮಸ್ಕಾರೇಣ ಮುಚ್ಯಧ್ವಮ್ । ನ ವೈ ಜಾತು ಯುಷ್ಮಾಕಮಿಮಂ ಕಶ್ಚಿದ್ ಬ್ರಹ್ಮೋದ್ಯಂ ಜೇತಾ ಇತಿ। ತತೋ ಹ ವಾಚಕ್ನವೀ ಉಪರರಾಮ ।**

**॥ ಇತಿ ಅಕ್ಷರ ಬ್ರಾಹ್ಮಣಂ ॥**

ಗಾರ್ಗಿ ಹೇಳಿದಳು, 'ಪೂಜ್ಯ ಬ್ರಾಹ್ಮಣರೇ ನಾನು ಹೇಳುವುದನ್ನು ಆದರದಿಂದ ಕೇಳಿರಿ. ನೀವು ಯಾಜ್ಞವಲ್ಕ್ಯರಿಗೆ ನಮಸ್ಕರಿಸಿ ಅವರಿಂದ ಬಿಡುಗಡೆಯನ್ನು ಪಡೆಯಿರಿ. ಏಕೆಂದರೆ ನಿಮ್ಮಲ್ಲಿ ಯಾರೂ ಈ ಬ್ರಹ್ಮವಾದಿಯನ್ನು ಗೆಲ್ಲಲಾರಿರಿ'. ಹೀಗೆ ಹೇಳಿ ಗಾರ್ಗಿ ವಿರಮಿಸಿದಳು.

॥ ಇಲ್ಲಿಗೆ ಅಕ್ಷರ ಬ್ರಾಹ್ಮಣ ಮುಗಿಯಿತು ॥

**ಮೂವತ್ತಮೂರು ದೇವತೆಗಳು :**

**ಉಪನಿಷತ್—ಅಥ ಹೈನಂ ವಿದಗ್ಧಃ ಶಾಕಲ್ಯಃ ಪಪ್ರಚ್ಛ । ಕತಿ ದೇವಾ ಯಾಜ್ಞವಲ್ಕ್ಯೇತಿ । ಸ ಹೈತಯೈವ ನಿವಿದಾ ಪ್ರತಿಪೇದೇ ಯಾವಂತೋ ವೈಶ್ವದೇವಸ್ಯ ನಿವಿದ್ಯುಚ್ಯಂತೇ ತ್ರಯಶ್ಚ ತ್ರೀ ಚ ಶತಾ ತ್ರಯಶ್ಚ ತ್ರೀ ಚ ಸಹಸ್ರಾ ಇತಿ । ಓಮಿತಿ ಹೋವಾಚ । ಕತ್ಯೇವ ದೇವಾ ಯಾಜ್ಞವಲ್ಕ್ಯೇತಿ । ತ್ರಯಸ್ತ್ರಿಂಶದಿತಿ । ಓಮಿತಿ ಹೋವಾಚ । ಕತ್ಯೇವ ದೇವಾ ಯಾಜ್ಞವಲ್ಕ್ಯೇತಿ ಷಳಿತಿ । ಓಮಿತಿ ಹೋವಾಚ । ಕತ್ಯೇವ ದೇವಾ ಯಾಜ್ಞವಲ್ಕ್ಯೇತಿ । ತ್ರಯ ಇತಿ । ಓಮಿತಿ ಹೋವಾಚ । ಕತ್ಯೇವ ದೇವಾ ಯಾಜ್ಞವಲ್ಕ್ಯೇತಿ । ದ್ವಾವಿತಿ । ಓಮಿತಿ ಹೋವಾಚ । ಕತ್ಯೇವ ದೇವಾ ಯಾಜ್ಞವಲ್ಕ್ಯೇತಿ । ಅಧ್ಯರ್ಧ ಇತಿ । ಓಮಿತಿ ಹೋವಾಚ । ಕತ್ಯೇವ ದೇವಾ ಯಾಜ್ಞವಲ್ಕ್ಯೇತಿ । ಏಕ ಇತಿ । ಓಮಿತಿ ಹೋವಾಚ । ಕತಮೇ ತೇ ತ್ರಯಶ್ಚ ತ್ರೀ ಚ ಶತಾ ತ್ರಯಶ್ಚ ತ್ರೀ ಚ ಸಹಸ್ರೇತಿ ।**

ಅನಂತರ ಶಕಲನ ಮಗನಾದ ವಿದಗ್ಧನು ಯಾಜ್ಞವಲ್ಕ್ಯರಲ್ಲಿ ಪ್ರಶ್ನೆ ಮಾಡಿದನು. 'ಒಂಭತ್ತುಕೋಟಿ ದೇವತೆಗಳಲ್ಲಿ ಮುಖ್ಯರಾದ ದೇವತೆಗಳು ಎಷ್ಟು ಮಂದಿ? ಯಾಜ್ಞವಲ್ಕ್ಯರು ಹೇಳಿದರು 'ವೈಶ್ವದೇವ ಶಸ್ತ್ರ ಮಂತ್ರದಲ್ಲಿ ಸೇರಿದ ನಿವಿತ್ತೆಂಬ ಮಂತ್ರದಲ್ಲಿ ಎಷ್ಟು ದೇವತೆಗಳನ್ನು ಹೇಳಿದೆಯೋ ಅಷ್ಟು ದೇವತೆಗಳು ಮುಖ್ಯ.

'ಮೂವತ್ತಮೂರು ನೂರು, ಮೂವತ್ತಮೂರು ಸಾವಿರ' ಎಂದು ಆ ಮಂತ್ರವು ಹೇಳುವುದರಿಂದ ಒಂಭತ್ತುಕೋಟಿ ದೇವತೆಗಳಲ್ಲಿ ಮೂವತ್ತಮೂರು ಸಾವಿರ ಮಂದಿ ಮುಖ್ಯ. ಅವರಲ್ಲಿಯೂ ಮೂವತ್ತಮೂರು ನೂರು ಮಂದಿ ಮುಖ್ಯ. ಶಾಕಲ್ಯನು 'ಸರಿ' ಎಂದನು. ಪುನಃ ಕೇಳಿದನು 'ಯಾಜ್ಞವಲ್ಕ್ಯರೇ ಆ ದೇವತೆಗಳಲ್ಲಿಯೂ ಮುಖ್ಯರಾದವರು ಎಷ್ಟು?' 'ಮೂವತ್ತಮೂರು'. 'ಸರಿ' ಎಂದೊಪ್ಪಿ ಪುನಃ ಶಾಕಲ್ಯನು ಕೇಳಿದನು 'ಯಾಜ್ಞವಲ್ಕ್ಯರೇ, ಅವರಲ್ಲಿಯೂ ಮುಖ್ಯರು ಎಷ್ಟು ?' 'ಆರು ಮಂದಿ'. 'ಸರಿ. ಯಾಜ್ಞವಲ್ಕ್ಯರೇ, ಅವರಲ್ಲಿಯೂ ಮುಖ್ಯರು ಎಷ್ಟು ?' 'ಇಬ್ಬರು'. 'ಸರಿ. ಯಾಜ್ಞವಲ್ಕ್ಯರೇ ಅವರೊಳಗೆ ಯಾರು ಶ್ರೇಷ್ಠರು ?' 'ಅಧ್ಯರ್ಧನೆನಿಸಿದ ವಾಯುದೇವ'. 'ಸರಿ, ಯಾಜ್ಞವಲ್ಕರೇ ಅವನಿಗಿಂತ ಶ್ರೇಷ್ಠರು ಯಾರು?' 'ಶ್ರೀಹರಿ'. 'ಸರಿ, ಯಾಜ್ಞವಲ್ಕ್ಯರೇ ಆ ಮೂವತ್ತಮೂರು ನೂರು ಮತ್ತು ಮೂವತ್ತ ಮೂರು ಸಾವಿರ ದೇವತೆಗಳು ಯಾರು?'

**ಉಪನಿಷತ್—ಸ ಹೋವಾಚ। ಮಹಿಮಾನ ಏವೈಷಾಮೇತೇ । ತ್ರಯಸ್ತ್ರಿಂಶತ್ ತು ಏವ ದೇವಾ ಇತಿ । ಕತಮೇ ತೇ ತ್ರಯಸ್ತ್ರಿಂಶದಿತಿ । ಅಷ್ಟೌ ವಸವ ಏಕಾದಶ ರುದ್ರಾ ದ್ವಾದಶಾದಿತ್ಯಾಃ ತ ಏಕತ್ರಿಂಶದ್ । ಇಂದ್ರಶ್ಚೈವ ಪ್ರಜಾಪತಿಶ್ಚ ತ್ರಯಸ್ತ್ರಿಂಶಾವಿತಿ ।**

ಯಾಜ್ಞವಲ್ಕ್ಯರು ಹೇಳಿದರು 'ಮೂವತ್ತಮೂರು ದೇವತೆಗಳು ಮಾತ್ರ ಶ್ರೇಷ್ಠರು. ಮೂವತ್ತಮೂರು ನೂರು ದೇವತೆಗಳು ಈ ಮೂವತ್ತುಮೂರು ದೇವತೆಗಳಿಗೆ ಪರಿವಾರದವರು ಮತ್ತು ಮೂವತ್ತಮೂರು ಸಾವಿರ ದೇವತೆಗಳು ಮೂವತ್ತಮೂರುನೂರು ದೇವತೆಗಳ ಪರಿವಾರವಾಗಿರುವರು.' 'ಆ ಮೂವತ್ತಮೂರು ದೇವತೆಗಳು ಯಾರು?' 'ಎಂಟು ವಸುಗಳು, ಹನ್ನೊಂದು ರುದ್ರರು, ಹನ್ನೆರಡು ಆದಿತ್ಯರು, ಇವರು ಒಟ್ಟು ಮೂವತ್ತೊಂದು. ವಾಯುಪುತ್ರನಾದ ಇಂದ್ರ ಮತ್ತು ಇಂದ್ರನ ಪುತ್ರನಾದ ಜಯಂತ ಕ್ರಮವಾಗಿ ಮೂವತ್ತೆರಡನೆಯ ಮತ್ತು ಮೂವತ್ತ ಮೂರನೆಯ ದೇವತೆಗಳು.

**ಭಾಷ್ಯ—ಯೇ ಯೇಽವರಾಃ ಸುರಾಸ್ತೇ ತು ಪರೇಷಾಂ ಮಹಿಮಾತ್ಮಕಾಃ।**
**ಮಹೀತ್ಯುಕ್ತಂ ಹಿ ಮಾಹಾತ್ಮ್ಯಂ ಮಹಿಮಾನೋ ಹಿ ತನ್ಮಿತಾಃ ।**
**ಏವಂ ಹಿ ಮಹಿಮಾಶಬ್ದಸ್ತದ್ವಶತ್ವಂ ವದತ್ಯಯಂ ।**
**ಯತ್ರ ಮಾಹಾತ್ಮ್ಯವಾಚೀ ಸ್ಯಾತ್ ಮಹತ್ವಂ ಮಹಿಮಾ ತದಾ ।**
**ತ್ರಯಸ್ತ್ರಿಂಶತ್ಸುರಾಣಾಂ ಹಿ ಪರಿವಾರಾಸ್ತತಃ ಪರೇ ।**
**ಷಣ್ಣಾಮೇತೇ ತ್ರಯಾಣಾಂ ತೇ ತೇ ದ್ವಯೋಃ ಸಾಧಿಕಸ್ಯ ತೌ ।**

**ಏಕಸ್ಯ ಸೋऽಪಿ ಕ್ರಮತಃ ಪರಾಧೀನಸ್ವರೂಪಿಣಃ ।**
**ಪರಾಧೀನಬಲಾಶ್ಚೈವ ಪರಾಧೀನಪ್ರವೃತ್ತಯಃ ।**
**ಏಕ ಏವ ಸ್ವತಂತ್ರೋऽಸೌ ಭಗವಾನ್ ಪುರುಷೋತ್ತಮಃ ।**

**ಅನುವಾದ**–ಯಾವ ಯಾವ ದೇವತೆಗಳು ತಾರತಮ್ಯದಲ್ಲಿ ಕೆಳಗಿನವರೋ ಅವರೆಲ್ಲರೂ ಉತ್ತಮರ ಮಾಹಾತ್ಮ್ಯಕ್ಕೆ ಅಧೀನರಾದವರು, ಅವರಿಗೆ ಪರಿವಾರದವರು. 'ಮಹಿ' ಎಂದರೆ ಮಾಹಾತ್ಮ್ಯ. ಅದರ ಮಿತಿಗೆ ಒಳಪಟ್ಟವರು, ಅಂದರೆ ಕಡಿಮೆಯವರು, ಮಹಿಮರು. ಹೀಗೆ ಮಹಿಮಶಬ್ದವು ಈ ಉಪನಿಷತ್ತಿನಲ್ಲಿ ಕೆಳಗಿನ ದೇವತೆಗಳು ಮೇಲಿನವರಿಗೆ ಅಧೀನರು ಎಂದು ಹೇಳುತ್ತದೆ. 'ಸತ್ಯಃ ಸೋ ಅಸ್ಯ ಮಹಿಮಾ' 'ಏತಾವಾನಸ್ಯ ಮಹಿಮಾ' ಎಂದು ಮುಂತಾದೆಡೆಗಳಲ್ಲಿ ಎಲ್ಲಿ ಮಹಿಮ ಶಬ್ದವು ಮಾಹಾತ್ಮ್ಯವಾಚಕವೋ ಅಲ್ಲಿ ಮಹಿಮಾ ಎಂದರೆ ಮಹತ್ವ ಎಂದೇ ಅರ್ಥ. ಮೂವತ್ತಮೂರು ದೇವತೆಗಳಿಗೆ ಬೇರೆ ದೇವತೆಗಳೆಲ್ಲರೂ ಪರಿವಾರ. ಈ ಮೂವತ್ತಮೂರು ದೇವತೆಗಳಲ್ಲಿಯೂ ಇಪ್ಪತ್ತೇಳು ದೇವತೆಗಳು ಉಳಿದ ಆರು ದೇವತೆಗಳ ಪರಿವಾರ. ಆರು ದೇವತೆಗಳಲ್ಲಿ ಮೂರು ದೇವತೆಗಳು ಉಳಿದ ಮೂರು ದೇವತೆಗಳ ಪರಿವಾರ. ನಾಲ್ವರು ಇಬ್ಬರ ಪರಿವಾರ. ಇಬ್ಬರಲ್ಲಿ ಒಬ್ಬನು ಇನ್ನೊಬ್ಬನಿಗೆ ಪರಿವಾರ. ಆ ಇನ್ನೊಬ್ಬನೂ ಕೂಡಾ ಮತ್ತೊಬ್ಬನ ಪರಿವಾರ. ಪರಿವಾರವೆಂದರೆ ಕೆಳಕೆಳಗಿನವರು ಕ್ರಮವಾಗಿ ಮೇಲುಮೇಲಿನವರಿಗೆ ಸ್ವರೂಪದಲ್ಲಿ ಅಧೀನರು, ಬಲದಲ್ಲಿ ಅಧೀನರು, ಪ್ರವೃತ್ತಿಯಲ್ಲಿಯೂ ಅಧೀನರು ಎಂದರ್ಥ. ಷಡ್ಗುಣಸಂಪನ್ನನಾದ ಪುರುಷೋತ್ತಮನೊಬ್ಬನೇ ಯಾರಿಗೂ ಅಧೀನನಲ್ಲ, ಸ್ವತಂತ್ರನು.

**ಉಪನಿಷತ್—ಕತಮೇ ವಸವ ಇತಿ । ಅಗ್ನಿಶ್ಚ ಪೃಥಿವೀ ಚ ವಾಯುಶ್ಚಾಂತರಿಕ್ಷಂ ಚ ಆದಿತ್ಯಶ್ಚ ದ್ಯೌಶ್ಚ ಚಂದ್ರಮಾಶ್ಚ ನಕ್ಷತ್ರಾಣಿ ಚ ಏತೇ ವಸವಃ। ಏತೇಷು ಹೀದಂ ವಸು ಸರ್ವಂ ನಿಹಿತಮಿತಿ ತಸ್ಮಾದ್ ವಸವ ಇತಿ ।**

ವಸುಗಳು ಎಷ್ಟು? ಗರುಡ, ಅವನ ಪತ್ನಿಯಾದ ಸೌಪರ್ಣೀ, ಮುಖ್ಯ ವಾಯು, ಅವನ ಪತ್ನಿಯಾದ ಶ್ರದ್ಧಾ, ಶಿವ, ಅವನ ಪತ್ನಿಯಾದ ಪಾರ್ವತೀ, ಕಾಮ ಮತ್ತು ಬಹುರೂಪನಾದ ಇಂದ್ರ ಇವರು ವಸುಗಳು. ಇವರಲ್ಲಿ ಈ ಜಗತ್ತೆಲ್ಲವೂ ಸುರಕ್ಷಿತವಾಗಿ ನಿಂತಿದೆ. ಆದ್ದರಿಂದ ಅವರು ವಸುಗಳು.

**ಭಾಷ್ಯ—ಅಗ್ರಂ ವಿಷ್ಣುಂ ನಯೇದ್ಯಸ್ಮಾತ್ ಸುಪರ್ಣೋऽಗ್ನಿರುದಾಹೃತಃ ।**
**ಪ್ರಥಿತಂ ಹರಿಮಾದಾಯ ವಾತೀತಿ ಪ್ರಥಿವಃ ಸ್ಮೃತಃ ।**

ತದ್ಭಾರ್ಯಾ ಪೃಥಿವೀ ನಾಮ ಯತ್ ತದಿಚ್ಛಾನುಸಾರಿಣೀ ।
ಸರ್ವಜ್ಞಾನಾತ್ ತಥಾಽಽಯುಷ್ಯಾತ್ ಸೂತ್ರಾತ್ಮಾ
ವಾಯುರುಚ್ಯತೇ ।
ಶ್ರದ್ಧಾ ನಾಮ್ನೈವ ತತ್ಪತ್ನೀ ಸರ್ವಸ್ಯಾಂತರ್ನಿರೀಕ್ಷಣಾತ್ ।
ಅಂತರಿಕ್ಷಮಿತಿ ಪ್ರೋಕ್ತಾ ದೇವೇಭ್ಯೋಽಧಿಕವೀಕ್ಷಣಾತ್ ।
ಆದಿಕಾಲಸ್ಥಿತೋ ಯಸ್ಮಾದಾದಿತ್ಯಸ್ತು ಸದಾಶಿವಃ ।
ದ್ಯೌರುಮಾ ಚ ಸಮುದ್ದಿಷ್ಟಾ ವಾಗ್ರೂಪಾ ದ್ಯೋತಿಕಾ ಯತಃ ।
ತ ಏತೇ ಸರ್ವದೇವೇಭ್ಯೋ ವಿಶಿಷ್ಟಾಸ್ತದ್ವಶಾಃ ಪರೇ ।
ನಕ್ಷತ್ರಮಿಂದ್ರ ಉದ್ದಿಷ್ಟಶ್ಚಂದ್ರಃ ಕಾಮ ಉದಾಹೃತಃ ।
ಅತ್ರಾಣಾತ್ ಸೂರ್ಯಚಂದ್ರಾದ್ಯೈರಾಹ್ಲಾದಾಚ್ಚೈವ ಹೇತುತಃ ।
ವಾಸಯಂತಿ ಜಗದ್ಯಸ್ಮಾದೇತೇಽಷ್ಟೌ ವಸವಃ ಸ್ಮೃತಾಃ ।

**ಅನುವಾದ**—ಅಗ್ರ ಎಂದರೆ ಶ್ರೇಷ್ಠನಾದ ವಿಷ್ಣುವಿನ ನಿ ಅಂದರೆ ವಾಹನವಾದ್ದರಿಂದ ಗರುಡನಿಗೆ ಅಗ್ನಿ ಎಂದು ಹೆಸರು. ಪ್ರಥಿತನಾದ ಅಂದರೆ ಪೂರ್ಣನಾದ ಹರಿಗೆ ವ ಅಂದರೆ ವಾಹನವಾದ್ದರಿಂದ ಗರುಡನಿಗೇ ಪ್ರಥಿವ ಎಂದೂ ಹೆಸರು. ಅವನ ಇಚ್ಛೆಯಂತೆಯೇ ನಡೆಯುವ ಅವನ ಪತ್ನಿಗೆ ಪೃಥಿವೀ ಎಂದು ಹೆಸರು. ವ ಅಂದರೆ ಸರ್ವಜ್ಞನೂ, ಆಯು ಎಂದರೆ ಆಯುಷ್ಯವನ್ನು ಕೊಡುವವನೂ ಆದುದರಿಂದ ಮುಖ್ಯಪ್ರಾಣನಿಗೆ ವಾಯು ಎಂದು ಹೆಸರು. ಅಂತರ್ ಅಂದರೆ ಎಲ್ಲರ ಒಳಗೆ ಶೇಷಗರುಡಾದಿ ದೇವತೆಗಳಿಗಿಂತಲೂ ಅಧಿಕವಾಗಿ ಈಕ್ಷ ನೋಡುವುದರಿಂದ ವಾಯು ಪತ್ನಿಯಾದ ಶ್ರದ್ಧಾದೇವಿಗೆ ಅಂತರಿಕ್ಷ ಎಂದು ಹೆಸರು. ಆದಿ ಅಂದರೆ ಪಾರ್ವತೀ ಮುಂತಾದ ಎಲ್ಲ ದೇವತೆಗಳಿಗಿಂತ ಆದಿಕಾಲದಲ್ಲಿ ಇರುವುದರಿಂದ ಸದಾಶಿವನಿಗೆ ಆದಿತ್ಯ ಎಂದು ಹೆಸರು. ವಾಗಿಂದ್ರಿಯಾಭಿಮಾನಿಯಾಗಿ ಮಾತಿನಿಂದ ಅರ್ಥವನ್ನು ಪ್ರಕಾಶಗೊಳಿಸುವುದರಿಂದ ಪಾರ್ವತಿಗೆ 'ದ್ಯೌ' ಎಂದು ಹೆಸರು. ಈ ಆರು ದೇವತೆಗಳು ಬೇರೆ ದೇವತೆಗಳಿಗಿಂತ ಶ್ರೇಷ್ಠರು. ಬೇರೆಲ್ಲರೂ ಇವರಿಗೆ ಅಧೀನರು. ನಕ್ಷತ್ರ ಎಂದರೆ ಇಂದ್ರ. ಚಂದ್ರ ಎಂದರೆ ಕಾಮ. ಸೂರ್ಯ ಚಂದ್ರ ಮೊದಲಾದವರಿಂದ ರಕ್ಷಿಸಲ್ಪಡುವವನಲ್ಲವಾದುದರಿಂದ ಇಂದ್ರನಿಗೆ ನ-ಕ್ಷತ್-ತ್ರ, ನಕ್ಷತ್ರ ಎಂದು ಹೆಸರು. ಆಹ್ಲಾದವನ್ನುಂಟುಮಾಡುವುದರಿಂದ ಕಾಮನಿಗೆ ಚಂದ್ರ ಎಂದು ಹೆಸರು. ಈ ಎಂಟು ದೇವತೆಗಳು ಜಗತ್ತು ತಮ್ಮಲ್ಲಿ ಸುರಕ್ಷಿತವಾಗಿ ವಾಸಿಸುವಂತೆ ಮಾಡುವುದರಿಂದ 'ವಸು'ಗಳೆಂದು ಪ್ರಸಿದ್ಧರಾಗಿದ್ದಾರೆ.

**ಭಾಷ್ಯ**—ಜ್ಞಾನಾದಿ ಷಡ್ಗುಣಾಃ ಷಟ್ಸು ತದನ್ಯೇಭ್ಯೋಽಧಿಕಾ ಯತಃ ।
ವಸುಷ್ವಪಿ ತ ಏವೋಚ್ಚಾ ವೀಂದ್ರಾದ್ಯಾಃ ಪೂರ್ವಕೀರ್ತಿತಾಃ ।

**ಅನುವಾದ**—ಅಷ್ಟ ವಸುಗಳಲ್ಲಿ ಗರುಡ ಮೊದಲಾದ ಆರು ದೇವತೆಗಳಿಗೆ ಇತರ ದೇವತೆಗಳಿಗಿಂತ ಹೆಚ್ಚು ಜ್ಞಾನ, ವಿಜ್ಞಾನ, ಐಶ್ವರ್ಯ, ವೀರ್ಯ, ಯಶಸ್, ಶ್ರೀ ಈ ಆರು ಗುಣಗಳಿರುವುದರಿಂದ ಅವರೇ ಮೂವತ್ತಮೂರು ದೇವತೆಗಳಲ್ಲಿ ಶ್ರೇಷ್ಠರು. ವಸುಗಳಲ್ಲೂ ಈ ಆರು ದೇವತೆಗಳೇ ಶ್ರೇಷ್ಠರು.

**ಉಪನಿಷತ್—ಕತಮೇ ರುದ್ರಾ ಇತಿ । ದಶೇಮೇ ಪುರುಷೇ ಪ್ರಾಣಾ ಆತ್ಮೈಕಾದಶಃ । ತೇ ಯದಾಸ್ಮಾಚ್ಛರೀರಾನ್ಮರ್ತ್ಯಾದುತ್ಕ್ರಾಮಂತಿ ಅಥ ರೋದಯಂತಿ। ತದ್ಯದ್ ರೋದಯಂತಿ ತಸ್ಮಾದ್ ರುದ್ರಾ ಇತಿ ।**

'ರುದ್ರರು ಎಷ್ಟು?' 'ಜೀವನಲ್ಲಿ ಜ್ಞಾನೇಂದ್ರಿಯಗಳ ಮತ್ತು ಕರ್ಮೇಂದ್ರಿಯಗಳ ನಿಯಾಮಕರಾದ ಹತ್ತು ದೇವತೆಗಳು ಮತ್ತು ಹನ್ನೊಂದನೆಯವನಾದ ಬುದ್ಧ್ಯಭಿಮಾನಿ ಬೃಹಸ್ಪತಿ.ಇವರು ಜೀವರ ಮರಣಕಾಲದಲ್ಲಿ ಶರೀರದಿಂದ ಯಾವಾಗ ಹೊರಗೆ ಹೋಗುವರೋ ಆಗ ಮೃತನ ಸಂಬಂಧಿಗಳನ್ನು ಅಳುವಂತೆ ಮಾಡುತ್ತಾರೆ.ಅಳುವಂತೆ ಮಾಡುವುದರಿಂದ ಅವರು 'ರುದ್ರ'ರು.

**ಭಾಷ್ಯ—ಪ್ರಾಣಾದ್ಯಾ ವಾಯುಪುತ್ರಾಸ್ತು ದಶ ಬುದ್ಧ್ಯಭಿಮಾನವಾನ್ ।
ಬೃಹಸ್ಪತಿರಿತಿ ಹ್ಯೇತೇ ರುದ್ರಾ ಇತ್ಯೇವ ಕೀರ್ತಿತಾಃ ।**

**ಅನುವಾದ**—ವಾಯುಪುತ್ರರಾದ ಪ್ರಾಣ ಮೊದಲಾದ ಹತ್ತು ಮಂದಿ ಮತ್ತು ಬುದ್ಧಿಗೆ ಅಭಿಮಾನಿಯಾದ ಬೃಹಸ್ಪತಿ ಇವರೇ ರುದ್ರರೆಂದು ಪ್ರಸಿದ್ಧರಾಗಿದ್ದಾರೆ.

**ಉಪನಿಷತ್—ಕತಮ ಆದಿತ್ಯಾ ಇತಿ । ದ್ವಾದಶ ವೈ ಮಾಸಾಃ ಸಂವತ್ಸರಸ್ಯ। ಏತ ಆದಿತ್ಯಾಃ । ಏತೇ ಹೀದಂ ಸರ್ವಮಾದದಾನಾ ಯಂತಿ । ತೇ ಯದಿದಂ ಸರ್ವಮಾದದಾನಾ ಯಂತಿ ತಸ್ಮಾದಾದಿತ್ಯಾ ಇತಿ ।**

ಆದಿತ್ಯರು ಎಷ್ಟು ? ಒಂದು ವರ್ಷಕ್ಕೆ ಹನ್ನೆರಡು ತಿಂಗಳುಗಳು. ಈ ಹನ್ನೆರಡು ತಿಂಗಳುಗಳಿಗೆ ಅಭಿಮಾನಿಗಳೇ ಆದಿತ್ಯರು. ಇವರು ಪ್ರಾಣಿಗಳ ಆಯುಷ್ಯ ಮೊದಲಾದವೆಲ್ಲವನ್ನು ಸೆಳೆದುಕೊಂಡು ಹೋಗುತ್ತಾರೆ. ಆದ್ದರಿಂದ ಇವರಿಗೆ ಆದಿತ್ಯ ಎಂದು ಹೆಸರು.

**ಭಾಷ್ಯ—ಮಾಸಾಭಿಮಾನಿನೋ ಯೇ ತು ಯಮಚಂದ್ರಯುತಾ ದ್ವಿಷಟ್ ।
ಧಾತ್ರರ್ಯಮಾದ್ಯಾ ಆದಿತ್ಯಾ ಇಂದ್ರಾವಿಷ್ಣೂ ವಿನೈವ ತು ।**

**ಅನುವಾದ**—ಇಂದ್ರ ವಿಷ್ಣುಗಳನ್ನು ಬಿಟ್ಟು ಉಳಿದ ಮಾಸಾಭಿಮಾನಿಗಳಾದ

ಧಾತೃ, ಅರ್ಯಮಾ ಮೊದಲಾದ ಹತ್ತುಮಂದಿ ದೇವತೆಗಳು ಯಮ ಚಂದ್ರರಿಂದೊಡ ಗೂಡಿ ಹನ್ನೆರಡು ಮಂದಿ ಆದಿತ್ಯರು.

**ವಿವರಣೆ**—ಇಂದ್ರ ವಿಷ್ಣುಗಳನ್ನು ಏಕೆ ಬಿಡಬೇಕೆಂದರೆ, ಇಂದ್ರನು ನಕ್ಷತ್ರ ಪದದಿಂದ ವಸುಗಳಲ್ಲಿ ಪರಿಗಣಿತ. ವಿಷ್ಣು, ಗರುಡಾದಿಗಳಿಗೆ ಪರಿವಾರ ದೇವತೆಯಲ್ಲ. ಆದ್ದರಿಂದ ಅವರಿಬ್ಬರನ್ನು ಬಿಡಬೇಕು.

**ಉಪನಿಷತ್—ಕತಮ ಇಂದ್ರಃ ಕತಮಃ ಪ್ರಜಾಪತಿರಿತಿ । ಸ್ತನಯಿತ್ನು|ರೇವೇಂದ್ರೋ ಯಜ್ಞಃ ಪ್ರಜಾಪತಿರಿತಿ । ಕತಮಃ ಸ್ತನಯಿತ್ನುರಿತಿ । ಅಶನಿರಿತಿ । ಕತಮೋ ಯಜ್ಞ ಇತಿ । ಪಶವ ಇತಿ ।**

'ಇಂದ್ರ ಯಾರು? ಪ್ರಜಾಪತಿ ಯಾರು?' 'ಸಿಡಿಲಿನ ಅಭಿಮಾನಿಯೇ ಇಂದ್ರ. ಯಜ್ಞಾಭಿಮಾನಿಯೇ ಪ್ರಜಾಪತಿ'. 'ಸಿಡಿಲಿನ ಅಭಿಮಾನಿ ಯಾರು?' 'ವಜ್ರಾಯುಧದ ಅಭಿಮಾನಿಯೇ ಸಿಡಿಲಿನ ಅಭಿಮಾನಿ'. 'ಯಜ್ಞಾಭಿಮಾನಿ ಯಾರು?' 'ಪಶುಗಳ ಅಭಿಮಾನಿಯೇ ಯಜ್ಞಾಭಿಮಾನಿ'.

**ಭಾಷ್ಯ—ಸ್ತನಯಿತ್ನೋರಭಿಮಾನೀ ವಾಯುಜಸ್ತ್ವಿಂದ್ರ ಉಚ್ಯತೇ ।**
**ಸ ಏವ ವಜ್ರ ಇಂದ್ರಸ್ಯ ಸೋಽಶನಿಶ್ಚಾಶನಾದರೇಃ ।**
**ಯಜ್ಞೋ ನಾಮೇಂದ್ರಪುತ್ರೋ ಯೋ ಜಯಂತ ಇತಿ ಚೋಚ್ಯತೇ-**
**ಸ ಏವ ಪಶುಮಾನಿತ್ವಾತ್ ಪಶವಶ್ಚೇತಿ ಕಥ್ಯತೇ ।**

**ಅನುವಾದ**—ನಕ್ಷತ್ರನಾಮಕರೂಪದಿಂದ ವಸುಗಳಲ್ಲಿ ಅಂತರ್ಗತನಾದ ಇಂದ್ರನೆ ಇನ್ನೊಂದು ರೂಪದಿಂದ ವಾಯುಪುತ್ರನಾಗಿ ಸಿಡಿಲಿನ ಅಭಿಮಾನಿಯಾಗಿದ್ದಾನೆ. ಅವನೇ ಇಂದ್ರನ ವಜ್ರಾಯುಧಕ್ಕೆ ಅಭಿಮಾನಿಯಾಗಿ ಅಶನಿ ಎನಿಸಿದ್ದಾನೆ. ಶತ್ರುಗಳನ್ನು ಸಂಹರಿಸುವುದರಿಂದ ಅವನಿಗೇ ಅಶನಿ ಎಂದೂ ಹೆಸರು. ಇಂದ್ರನ ಮಗನಾದ ಜಯಂತನೇ ಯಜ್ಞ. ಅವನೇ ಪಶುಗಳ ಅಭಿಮಾನಿಯಾದುದರಿಂದ ಪಶು ಎನಿಸಿದ್ದಾನೆ.

**ಉಪನಿಷತ್—ಕತಮೇ ಷಳಿತಿ । ಅಗ್ನಿಶ್ಚ ಪೃಥಿವೀ ಚ ವಾಯುಶ್ಚಾಂತರಿಕ್ಷಂ ಚ ಆದಿತ್ಯಶ್ಚ ದ್ಯೌಶ್ಚೈತೇ ಷಳ್। ಏತೇಷು ಹೀದಂ ಸರ್ವಂ ಷಳಿತಿ ।**

'ಆರು ದೇವತೆಗಳು ಯಾರು?' 'ಗರುಡ, ಗರುಡಪತ್ನಿ, ಮುಖ್ಯವಾಯು, ಮುಖ್ಯವಾಯುಪತ್ನಿ, ಶಿವ, ಶಿವಪತ್ನಿ ಈ ಆರು ದೇವತೆಗಳು ಮೂವತ್ತಮೂರು ದೇವತೆಗಳಲ್ಲಿ ಶ್ರೇಷ್ಠರು. ಏಕೆಂದರೆ ಇವರಲ್ಲಿ ಐಶ್ವರ್ಯ, ವೀರ್ಯ, ಯಶಸ್, ಶ್ರೀ,

ಜ್ಞಾನ ಮತ್ತು ವಿಜ್ಞಾನ ಎಂಬ ಆರು ಗುಣಗಳು ಬೇರೆ ದೇವತೆಗಳಲ್ಲಿರುವುದಕ್ಕಿಂತ ಅಧಿಕವಾಗಿವೆ.

**ಉಪನಿಷತ್—ಕತಮೇ ತೇ ತ್ರಯೋ ದೇವಾ ಇತಿ । ಇಮ ಏವ ತ್ರಯೋ ಲೋಕಾಃ । ಏಷು ಹೀಮೇ ಸರ್ವೇ ದೇವಾ ಇತಿ । ಕತಮೌ ತೌ ದ್ವೌ ದೇವಾವಿತಿ । ಅನ್ನಂ ಚೈವ ಪ್ರಾಣಶ್ಚೇತಿ ।**

ಆ ಮೂರು ದೇವತೆಗಳು ಯಾರು? ಹಿಂದೆ ಹೇಳಿದ ಗರುಡ ವಾಯು ರುದ್ರರೇ ತಮ್ಮ ಪತ್ನಿಯರಿಗೆ ಆಶ್ರಯರೂ, ಜ್ಞಾನರೂಪರೂ ಆಗಿದ್ದು ಆರು ದೇವತೆಗಳಲ್ಲಿ ಶ್ರೇಷ್ಠರೆನಿಸಿದ್ದಾರೆ. ಏಕೆಂದರೆ ಉಳಿದೆಲ್ಲ ದೇವತೆಗಳೂ ಇವರಿಗೆ ಪರಿವಾರದವರು'. 'ಆ ಇಬ್ಬರು ದೇವತೆಗಳು ಯಾರು?' 'ಶ್ರದ್ಧಾದೇವಿ ಮತ್ತು ಮುಖ್ಯಪ್ರಾಣ'.

**ಉಪನಿಷತ್—ಕತಮೋಽಧ್ಯರ್ಧ ಇತಿ । ಯೋಽಯಂ ಪವತ ಇತಿ । ತದಾಹುರ್ಯದಯಮೇಕ ಇವೈವ ಪವತೇ । ಅಥ ಕಥಮಧ್ಯರ್ಧ ಇತಿ । ಯದಸ್ಮಿನ್ನಿದಂ ಸರ್ವಮಧ್ಯಾರ್ಧ್ನೋತ್ ತೇನಾಧ್ಯರ್ಧ ಇತಿ । ಕತಮ ಏಕೋ ದೇವ ಇತಿ । ಪ್ರಾಣ ಇತಿ । ಸ ಬ್ರಹ್ಮ ತ್ಯದಿತ್ಯಾಚಕ್ಷತೇ ।**

'ಇಬ್ಬರಲ್ಲಿ ಅಧ್ಯರ್ಧನು ಯಾರು?' 'ಯಾರು ಲೋಕಾಧಾರನಾಗಿ ಸಂಚರಿಸುವನೋ ಆ ವಾಯುವೇ ಅಧ್ಯರ್ಧ'. ವಾಯುವು ಅಧ್ಯರ್ಧನೆನಿಸಿದ ವಿಷಯದಲ್ಲಿ ಶಾಕಲ್ಯ ಮೊದಲಾದವರು ಕೇಳುತ್ತಾರೆ— 'ಈ ವಾಯುವು ಅಧ್ಯರ್ಧನೆನಿಸಿದುದು ಹೇಗೆ?' 'ಈ ವಾಯುವಿನಲ್ಲಿ ಜ್ಞಾನ ಮೊದಲಾದ ಎಲ್ಲ ಗುಣಗಳೂ ಬಹಳ ಸಮೃದ್ಧವಾಗಿರುವುದರಿಂದ ಅವನು ಅಧ್ಯರ್ಧ. 'ಗುಣ ಸಮೃದ್ಧಿಗೆ ಕಾರಣವೇನು?' 'ಸರ್ವೋತ್ತಮದೇವನಿಗೆ ಅತಿಪ್ರಿಯನಾದುದರಿಂದ'. 'ಸರ್ವೋತ್ತಮದೇವನು ಯಾರು?' 'ವಿಷ್ಣು. ಅವನು ಗುಣಪೂರ್ಣನೆಂದೂ, ಅನಂತಕಾಲದಲ್ಲಿ ವಿಕಾರ ರಹಿತನಾಗಿ ಇರುವವನೆಂದೂ ಹೇಳುತ್ತಾರೆ.'

**ಭಾಷ್ಯ—ಏವಂ ಪ್ರಾಧಾನ್ಯತೋ ದೇವಾಸ್ತ್ರಯಸ್ತ್ರಿಂಶತ್ ಪ್ರಕೀರ್ತಿತಾಃ ।**
**ದಕ್ಷಾಗ್ನಿಪ್ರಮುಖಾಃ ಸರ್ವೇ ಪ್ರಾಣಾ ಏವ ಹಿ ವಾಯುಜಾಃ ।**
**ರುದ್ರಾ ಅಪಿ ತದಾವೇಶಾತ್ ಪೃಥಙ್ ನೋದೀರಿತಾ ಇಹ ।**
**ಕಾಮ ಏವಾನುವಿಷ್ಟತ್ವಾದನಿರುದ್ಧಶ್ಚ ನೋದಿತಃ ।**
**ಮನ್ವಾವೇಶಾದಿಂದ್ರಜಸ್ತು ಸಂಖ್ಯಾಯಾಮನುವೇಶಿತಃ ।**
**ಅಶ್ವಿನೌ ನಿರ್ಋತಿಶ್ಚೈವ ಕುಬೇರಶ್ಚ ವಿನಾಯಕಃ ।**
**ಅರ್ಯಮ್ಣ್ಯಂಶಾದಿಚತುರ್ಷು ವಿಶೇಷಾವೇಶಸಂಯುತಾಃ ।**
**ಅತ್ರೋಕ್ತಾ ಅಪಿ ಪೃಥಿವ್ಯಾದ್ಯಾ ಅಂತರ್ಯಾಮಿಬ್ರಾಹ್ಮಣೇ ಭವಂತಿ।**

**ಅನುವಾದ**—ಹೀಗೆ ಪ್ರಾಧಾನ್ಯದೃಷ್ಟಿಯಿಂದ ದೇವತೆಗಳು ಮೂವತ್ತಮೂರು ಎಂದು ಹೇಳಲ್ಪಟ್ಟಿದ್ದಾರೆ. ದಕ್ಷ ಅಗ್ನಿ ಮೊದಲಾದವರೆಲ್ಲರೂ ವಾಯುಪುತ್ರರಾದ ಇಂದ್ರಿಯಾಭಿಮಾನಿ ದೇವತೆಗಳೇ ಬೇರೆಯಲ್ಲ. ಆದ್ದರಿಂದ ಮೂವತ್ತಮೂರು ದೇವತೆಗಳಲ್ಲಿ ಪ್ರಧಾನರೆಂದು ಪ್ರತ್ಯೇಕ ಹೇಳಿಲ್ಲ. ಎಲ್ಲ ಬೇರೆ ರುದ್ರರೂ ಶಿವನಲ್ಲಿ ಅಂತರ್ಭಾವ ಹೊಂದುವುದರಿಂದ ಪ್ರತ್ಯೇಕವಾಗಿ ಮೂವತ್ತಮೂರು ದೇವತೆಗಳಲ್ಲಿ ಹೇಳಲ್ಪಟ್ಟಿಲ್ಲ. ಅನಿರುದ್ಧನು ತನ್ನ ತಂದೆಯಾದ ಕಾಮನಲ್ಲಿ ಅಂತರ್ಭಾವ ಹೊಂದುವುದರಿಂದ ಪ್ರತ್ಯೇಕವಾಗಿ ಹೇಳಲ್ಪಟ್ಟಿಲ್ಲ. ಇಂದ್ರನ ಮಗ ಜಯಂತನು ಮನುವಿಗಿಂತ ಕಡಿಮೆಯವನಾದರೂ, ಮನುವಿನ ಆವೇಶವುಳ್ಳವನು ಮೂವತ್ತಮೂರರಲ್ಲಿ ಪರಿಗಣಿಸಲ್ಪಟ್ಟಿದ್ದಾನೆ. ಆದ್ದರಿಂದ ಮನುವನ್ನು ಪ್ರತ್ಯೇಕ ಹೇಳಿಲ್ಲ. ಅಶ್ವಿನಿ ದೇವತೆಗಳು, ನಿರ್ಋತಿ, ಕುಬೇರ ಮತ್ತು ವಿನಾಯಕ ಇವರುಗಳು ಅರ್ಯಮಾ ಎಂಬ ಆದಿತ್ಯನಲ್ಲಿಯೂ ಅಂಶ ಮೊದಲಾದ ನಾಲ್ಕು ಆದಿತ್ಯರಲ್ಲಿಯೂ ವಿಶೇಷ ಆವೇಶವನ್ನು ಹೊಂದಿದ್ದಾರೆ. ಆದ್ದರಿಂದ ಆರ್ಯಮಾದಿಗಳನ್ನು ಹೇಳಿದ್ದರಿಂದಲೇ ಅಶ್ವಿನ್ಯಾದಿಗಳನ್ನು ಹೇಳಿದಂತಾಗಿದೆ. ಈ ಶಾಕಲ್ಯ ಬ್ರಾಹ್ಮಣದಲ್ಲಿ ಪೃಥಿವೀ, ವಾಯು, ಅಂತರಿಕ್ಷ, ಆದಿತ್ಯ, ದ್ಯು, ಚಂದ್ರ, ನಕ್ಷತ್ರ ಈ ಶಬ್ದಗಳಿಂದ ಹೇಳಿದ ದೇವತೆಗಳೂ ಕೂಡ, ಅಂತರ್ಯಾಮಿ ಬ್ರಾಹ್ಮಣದಲ್ಲಿ ಪೃಥಿವಿ ಮೊದಲಾದ ಶಬ್ದಗಳಿಂದ ವಿವಕ್ಷಿತರಾಗಿದ್ದಾರೆ.

**ಭಾಷ್ಯ—ಷಟ್ಸು ಪ್ರಧಾನಾಸ್ತ್ರಿಸ್ರೋ ಹಿ ವಾಯುವೀಂದ್ರಮಹೇಶ್ವರಾಃ ।**
**ಸ್ವಭಾರ್ಯಾಣಾಂ ಸ್ವಾಶ್ರಯತ್ವಾತ್ ತೇ ಲೋಕಾ ಜ್ಞಾನರೂಪತಃ ।**
**ಪದೈಕ್ಯಾದ್ ಬ್ರಹ್ಮವಾಯ್ವೋಸ್ತು ಪದಸಾಮ್ಯಾಚ್ಛಿವಸ್ಯ ಚ ।**
**ಶೇಷಸ್ಯಾಪಿ ತು ನೈವೋಕ್ತಿಃ ಪೃಥಕ್.........।**

**ಅನುವಾದ**—ಆರು ದೇವತೆಗಳಲ್ಲಿ ಮುಖ್ಯವಾಯು, ಗರುಡ ಮತ್ತು ರುದ್ರ ಈ ಮೂರು ದೇವತೆಗಳು ಶ್ರೇಷ್ಠರು. ಅವರು ತಮ್ಮ ಪತ್ನಿಯರಿಗೆ ಉತ್ತಮ ಆಶ್ರಯರಾಗಿರುವುದರಿಂದ ಮತ್ತು ಜ್ಞಾನಸರೂಪರಾದುದರಿಂದ ಲೋಕ ಎನಿಸುತ್ತಾರೆ. ಬ್ರಹ್ಮವಾಯುಗಳ, ಅವರ ಪತ್ನಿಯರಾದ ಶ್ರದ್ಧಾದೇವಿ ಸರಸ್ವತಿಯರ, ಶಿವ–ಶೇಷರ ಮತ್ತು ಇವರ ಪತ್ನಿಯರಾದ ಉಮಾ ವಾರುಣಿಯರ ಪದವಿಗಳು ಒಂದೇ. ಶೇಷ–ಗರುಡ ಮತ್ತು ಅವರ ಪತ್ನಿಯರ ಪದವಿಗಳು ಸಮಾನ. ಆದ್ದರಿಂದ ಬ್ರಹ್ಮ, ಸರಸ್ವತಿ, ಶೇಷ, ವಾರುಣಿ ಇವರನ್ನು ಪ್ರತ್ಯೇಕವಾಗಿ ಹೇಳಿಲ್ಲ. ವಾಯುವನ್ನು ಹೇಳಿದ್ದರಿಂದ ಬ್ರಹ್ಮನನ್ನೂ ಶ್ರದ್ಧಾದೇವಿಯನ್ನೂ ಹೇಳಿದ್ದರಿಂದ ಸರಸ್ವತಿಯನ್ನೂ, ಶಿವ ಅಥವಾ ಗರುಡನನ್ನು ಹೇಳಿದ್ದರಿಂದ ಶೇಷನನ್ನೂ, ಉಮಾ ಅಥವಾ ಸೌಪರ್ಣಿಯನ್ನು ಹೇಳಿದ್ದರಿಂದ ವಾರುಣಿಯನ್ನೂ ಹೇಳಿದಂತೆಯೆ.

**ಭಾಷ್ಯ**—............ **ಶ್ರದ್ಧಾ ಚ ಮಾರುತಃ ।**
**ದ್ವೌ ದೇವಾವಿತಿ ಸಂಪ್ರೋಕ್ತಾವನ್ನಂ ಶ್ರದ್ಧಾ ಪ್ರಕೀರ್ತಿತಾ ।**
**ಅತೀತತ್ವಾದ್ ದೇವತಾಭ್ಯೋ ನೇತೃತ್ವಾಚ್ಚಾನ್ನಮುಚ್ಯತೇ ।**
**ಶ್ರದ್ಧೇತಿ ವಾಯೋಃ ಪತ್ನೀ ಸಾ**.........।

**ಅನುವಾದ**—ಶ್ರದ್ಧಾದೇವಿ ಮುಖ್ಯಪ್ರಾಣರು ಇಬ್ಬರು ದೇವತೆಗಳು ಎಂದು ಹೇಳಲ್ಪಟ್ಟಿದ್ದಾರೆ. ಮುಖ್ಯಪ್ರಾಣನ ಪತ್ನಿಯಾದ ಶ್ರದ್ಧಾದೇವಿಯು ರುದ್ರ ಶೇಷಾದಿ ದೇವತೆಗಳಿಗಿಂತ ಅತ್ ಎಂದರೆ ಅತೀತ, ಉತ್ತಮಳಾದುದರಿಂದ ಮತ್ತು ನ ಅಂದರೆ ಅವರಿಗೆ ನಾಯಕಳಾದುದರಿಂದ 'ಅತ್ ನ' ಅನ್ನ ಎಂದು ಹೇಳಲ್ಪಡುತ್ತಾಳೆ. ಪ್ರಾಣನೆಂದು ಮುಖ್ಯಪ್ರಾಣ ಹೇಳಲ್ಪಡುತ್ತಾನೆ.

**ಭಾಷ್ಯ**—............ **ಪ್ರಾಣೋ ವೈ ವಿಷ್ಣುರುತ್ತಮಃ ।**
**ಣೇತ್ಯೇವಾನಂದ ಉದ್ದಿಷ್ಟ ಆ ಸಮಂತಾತ್ ಪ್ರಕೃಷ್ಟತಃ ।**
**ಪ್ರಾಣೋ ಹಿ ಭಗವಾನ್ ವಿಷ್ಣುರಧ್ಯರ್ಧೋ ವಾಯುರುಚ್ಯತೇ ।**
**ಅಧ್ಯರ್ಧಾ ಹಿ ಗುಣಾ ನಿತ್ಯಂ ವಾಯೋರಧ್ಯರ್ಧ ಏವ ತತ್ ।**
**ನ ಚೈಕತ್ವಂ ಭವೇದ್ ವಾಯೋಃ ತದ್ವಿಶಿಷ್ಟೋ ಯತೋ ಹರಿಃ ।**
**ನ ಚ ದ್ವಿತೀಯತಾ ತಸ್ಮಿನ್ ಪ್ರೀತಿರಭ್ಯಧಿಕಾ ಹರೇಃ ।**
**ತೇನಾಧ್ಯರ್ಧಗುಣೋ ಯಸ್ಮಾತ್ ಸರ್ವಸ್ಮಾತ್ ದೇವತಾಗಣಾತ್ ।**
**ನ ಚಾತಕ್ಯಂ ನ ಚಾಪ್ರಾಪ್ಯಮತೋಽಧ್ಯರ್ಧ ಇತೀರಿತಃ ।**

**ಅನುವಾದ**—ಸರ್ವೋತ್ತಮದೇವನು ಯಾರೆಂಬ ಪ್ರಶ್ನೆಗೆ ಉತ್ತರವಾಗಿ ಹೇಳಿದ 'ಪ್ರಾಣ' ಎಂದರೆ ಸರ್ವೋತ್ತಮನಾದ ವಿಷ್ಣುವೇ. 'ಣ' ಎಂದರೆ ಆನಂದ. ಎಲ್ಲ ದೃಷ್ಟಿಯಿಂದಲೂ ಉತ್ತಮ ಆನಂದರೂಪನಾದುದರಿಂದ ಭಗವಾನ್ ವಿಷ್ಣು ಪ್ರಾಣ ಎನಿಸುತ್ತಾನೆ. ಭೂತವಾಯು ಅಲ್ಲ, ಮುಖ್ಯವಾಯು ಅಧ್ಯರ್ಧ ಎನಿಸುತ್ತಾನೆ. ಮುಖ್ಯವಾಯುವಿನ ಗುಣಗಳು ಯಾವಾಗಲೂ ಸಮೃದ್ಧವಾಗಿರುವುದರಿಂದ ಅವನು ಅಧ್ಯರ್ಧ. ಮುಖ್ಯವಾಯು 'ಏಕ' ಅಂದರೆ ಸರ್ವೋತ್ತಮ ಅಲ್ಲ. ಶ್ರೀಹರಿ ಅವನಿಗಿಂತ ಉತ್ತಮ. ಆದ್ದರಿಂದ ಅವನು ಏಕನೆನಿಸುವುದಿಲ್ಲ. ಆದರೆ ದ್ವಿತೀಯನೆಂದೂ ಉಕ್ತನಾಗುವುದಿಲ್ಲ. ಏಕೆಂದರೆ, ಶ್ರೀಹರಿಗೆ ವಾಯು ದೇವನಲ್ಲಿ, ಬೇರೆ ಎಲ್ಲಾ ದೇವತೆಗಳಲ್ಲಿರುವುದಕ್ಕಿಂತ ಅಧಿಕ ಪ್ರೀತಿ ಇದೆ. ಅಧಿಕ ಪ್ರೀತಿ ಪಾತ್ರರನ್ನು ಬೇರೆಯವರೆಂದು ವ್ಯವಹರಿಸುವುದೂ ಇಲ್ಲ. ಆದ್ದರಿಂದ 'ಏಕ ಇವ' ಎಂದಿದೆ. ಹೀಗೆ ಶ್ರೀಹರಿಗೆ ಅತ್ಯಂತ ಪ್ರಿಯನಾದ್ದರಿಂದ ಸಮೃದ್ಧವಾದ ಗುಣವುಳ್ಳವನು ವಾಯು. ಈ ಜಗತ್ತು ವಾಯುದೇವನ ನಿಯಂತ್ರಣಕ್ಕೆ ಅಶಕ್ಯವೂ

ಅಲ್ಲ, ಅವನನ್ನು ಅದು ಆಶ್ರಯಿಸದಿರುವುದೂ ಇಲ್ಲ. ಆದ್ದರಿಂದಲೂ ವಾಯು ಅಧ್ಯರ್ಧನೆನಿಸುತ್ತಾನೆ.

**ಭಾಷ್ಯ—ಅತ್ಯಂತರಂಗಂ ಯತ್ ತಸ್ಮಾನ್ನ ಹರೇಃ ಪೃಥಗೀರಿತಾ ।**
**ಶ್ರೀಃ ಸ್ವರೂಪವಿಭೇದೇಽಪಿ ಸರ್ವೋತ್ಕೃಷ್ಟಾಪಿ ನಿತ್ಯಶಃ।**
**ತಸ್ಯಾ ಅಪಿ ಪರೋ ವಿಷ್ಣುರ್ಗುಣೈಃ ಸರ್ವೈರದೋಷವಾನ್ ।**
**ಏಕ ಇತ್ಯುಚ್ಯತೇ ನಿತ್ಯಂ ಯಸ್ಮಾನ್ನಾನ್ಯಸ್ತಥಾವಿಧಃ ।**
**ತತ್ಪರೋ ವಾ ಗುಣೋದ್ರೇಕೇ ಬ್ರಹ್ಮಾಸೌ ಗುಣಪೂರ್ತಿತಃ ।**
**ತಥಾತ್ವೇನ ಯತೋ ನಿತ್ಯಮವಿಕಾರೇಣ ಯಾತಿ ಹಿ ।**
**ತ್ಯದಿತ್ಯುಕ್ತಸ್ತತೋ ವಿಷ್ಣುಃ ಸರ್ವದೇವೇಶ್ವರೇಶ್ವರಃ ।**
**ಇತಿ ಮಹಾಮೀಮಾಂಸಾಯಾಮ್ ।**

**ಅನುವಾದ**—ಲಕ್ಷ್ಮಿಯು ಮುಖ್ಯವಾಯುವಿಗಿಂತಲೂ ಹೆಚ್ಚು ಹರಿಯ ಅತ್ಯಂತ ಪ್ರೀತಿಗೆ ಪಾತ್ರಳು. ಆದ್ದರಿಂದ ಸರ್ವೋತ್ಕೃಷ್ಟಳಾದರೂ, ಹರಿಯಿಂದ ಭಿನ್ನಳಾಗಿದ್ದರೂ ಅವಳನ್ನು ಉಪನಿಷತ್ತು ಪ್ರತ್ಯೇಕವಾಗಿ ಹೇಳಿಲ್ಲ. ವಿಷ್ಣು ಸರ್ವ ಗುಣಗಳಿಂದಲೂ ಲಕ್ಷ್ಮಿಗಿಂತ ಉತ್ತಮ ಮತ್ತು ದೋಷರಹಿತ. ಗುಣಪೂರ್ಣತ್ವ ವಿಷಯದಲ್ಲಿ ಅವನಿಗೆ ಸಮಾನನಾಗಲಿ, ಉತ್ತಮನಾಗಲಿ ಯಾರೂ ಎಂದೂ ಇಲ್ಲದು ದರಿಂದ ಅವನು ಸರ್ವೋತ್ತಮನೆಂಬ ಅರ್ಥದಲ್ಲಿ 'ಏಕ' ಎನಿಸಿದ್ದಾನೆ. ಗುಣಪೂರ್ಣ ನಾದುದರಿಂದ ಬ್ರಹ್ಮನೆನಿಸಿದ್ದಾನೆ. ವೇದಗಳಲ್ಲಿ ಹೇಳಿದಂತೆಯೇ ಅನಂತಕಾಲದಲ್ಲಿ ವಿಕಾರರಹಿತನಾಗಿರುವುದರಿಂದ ತ್ಯತ್ ಎನಿಸಿದ್ದಾನೆ, ಸರ್ವದೇವಾಧಿಪತಿಗಳಿಗೂ ಅಧಿ ಪತಿಯಾದ ವಿಷ್ಣು' ಎಂದು ಮಹಾಮೀಮಾಂಸೆಯಲ್ಲಿ ಹೇಳಲ್ಪಟ್ಟಿದೆ.

**ಸ್ವಾಯಂಭುವ ಮನುವಿಗೆ ನಿಯಾಮಕ ವಾಯು :**

**ಉಪನಿಷತ್—ಪೃಥಿವೀ ಏವ ಯಸ್ಯಾಯತನಮ್, ಅಗ್ನಿರ್ಲೋಕಃ, ಮನೋ ಜ್ಯೋತಿಃ, ಯೋ ವೈ ತಂ ಪುರುಷಂ ವಿದ್ಯಾತ್ ಸರ್ವಸ್ಯಾತ್ಮನಃ ಪರಾಯಣಂ, ಸ ವೈ ವೇದಿತಾ ಸ್ಯಾದ್ ಯಾಜ್ಞವಲ್ಕ್ಯ । ವೇದ ವಾ ಅಹಂ ತಂ ಪುರುಷಂ ಸರ್ವಸ್ಯಾತ್ಮನಃ ಪರಾಯಣಂ ಯಮಾತ್ಥ । ಯ ಏವಾಯಂ ಶಾರೀರಃ ಪುರುಷಃ ಸ ಏಷಃ । ವದ ಏವ ಶಾಕಲ್ಯ । ತಸ್ಯ ಕಾ ದೇವತಾ ಇತಿ । ಅಮೃತಮಿತಿ ಹೋವಾಚ ।**

'ಪೃಥಿವೀ ಯಾರಿಗೆ ಅಧಿಷ್ಠಾನವಾಗಿರುವುದೋ, ವಾಗಭಿಮಾನಿಯಾದ ಅಗ್ನಿಯಲ್ಲಿ ಅಗ್ನಿನಾಮಕಳಾಗಿರುವ ರಮಾದೇವಿಯು ಯಾರ ಬಾಹ್ಯಜ್ಞಾನಕ್ಕೆ ಕಾರಣಳಾಗಿರು ವಳೋ, ಮನೋಭಿಮಾನಿಯಲ್ಲಿ ಮನೋನಾಮಕಳಾಗಿರುವ ರಮಾದೇವಿಯು ಯಾರ

ಸ್ವರೂಪಜ್ಞಾನದ ಅಭಿವ್ಯಕ್ತಿಗೆ ಕಾರಣಳಾಗಿರುವಳೋ, ಸಮಸ್ತ ಜೀವಸಮುದಾಯಕ್ಕೆ ಉತ್ತಮ ಅಭಿಮಾನಿಯಾಗಿ ಆಶ್ರಯನಾಗಿರುವ ಆ ಪುರುಷನನ್ನು ಯಾರು ತಿಳಿಯುವನೋ ಅವನೇ ನಿಜವಾದ ಜ್ಞಾನಿಯಾಗುವನು. ಯಾಜ್ಞವಲ್ಕ್ಯರೇ! ಆ ಪುರುಷನನ್ನು ನೀವು ತಿಳಿದಿದ್ದೀರಾ?' 'ನೀನು ಹೇಳುವ ಸಮಸ್ತ ಜೀವ ಸಮುದಾಯಕ್ಕೆ ಆಶ್ರಯನಾದ ಪುರುಷನನ್ನು ನಾನು ತಿಳಿದಿದ್ದೇನೆ. ಸರ್ವಜೀವಾಭಿಮಾನಿಯಾದ ಸ್ವಾಯಂಭುವಮನುವೇ ನೀನು ಕೇಳಿದ ಆ ಪುರುಷ. ಶಾಕಲ್ಯ, ಇನ್ನೂ ಪ್ರಶ್ನೆ ಕೇಳು' 'ಆ ಮನುವಿಗೆ ನಿಯಾಮಕನಾದ ದೇವತೆ ಯಾರು?' 'ವಾಯು' ಎಂದರು ಯಾಜ್ಞವಲ್ಕ್ಯರು.

**ಪ್ರದ್ಯುಮ್ನನಿಗೆ ನಿಯಾಮಕರು ಶ್ರೀ, ಸರಸ್ವತೀ, ಪಾರ್ವತಿಯರು :**

**ಉಪನಿಷತ್—ಕಾಮ ಏವ ಯಸ್ಯಾಯತನಂ, ಹೃದಯಂ ಲೋಕೋ, ಮನೋಜ್ಯೋತಿಃ, ಯೋ ವೈ ತಂ ಪುರುಷಂ ವಿದ್ಯಾತ್ ಸರ್ವಸ್ಯಾತ್ಮನಃ ಪರಾಯಣಂ ಸ ವೈ ವೇದಿತಾ ಸ್ಯಾದ್ ಯಾಜ್ಞವಲ್ಕ್ಯ। ವೇದ ವಾ ಅಹಂ ತಂ ಪುರುಷಂ ಸರ್ವಸ್ಯಾತ್ಮನಃ ಪರಾಯಣಂ ಯಮಾತ್ಥ।ಯ ಏವಾಯಂ ಕಾಮಮಯಃ ಪುರುಷಃ ಸ ಏಷಃ ವದೈವ ಶಾಕಲ್ಯ। ತಸ್ಯ ಕಾ ದೇವತಾ ಇತಿ। ಸ್ತ್ರಿಯ ಇತಿ ಹೋವಾಚ।**

'ಸ್ತ್ರೀ ಪುರುಷರ ಪರಸ್ಪರ ಅನುರಾಗವೇ ಯಾರಿಗೆ ಅಧಿಷ್ಠಾನವಾಗಿದೆಯೋ, ಬುದ್ಧಿಸ್ಥಳಾದ ಹೃದಯನಾಮಕಳಾದ ರಮೆಯು ಯಾರ ಬಾಹ್ಯಜ್ಞಾನಕ್ಕೆ ಕಾರಣಳಾಗಿರುವಳೋ, ಮನೋನಾಮಕಳಾದ ರಮಾದೇವಿಯು ಯಾರ ಸ್ವರೂಪಜ್ಞಾನದ ಅಭಿವ್ಯಕ್ತಿಗೆ ಕಾರಣಳಾಗಿರುವಳೋ, ಸಮಸ್ತ ಜೀವ ಸಮುದಾಯಕ್ಕೆ ಉತ್ತಮ ಆಶ್ರಯನಾಗಿರುವ ಆ ಪುರುಷನನ್ನು ಯಾರು ತಿಳಿಯುವನೋ ಅವನೇ ನಿಜವಾದ ಜ್ಞಾನಿಯಾಗುವನು. ಯಾಜ್ಞವಲ್ಕ್ಯರೇ! ನೀವು ಆ ಪುರುಷನನ್ನು ತಿಳಿದಿರುವಿರಾ?' 'ನೀನು ಹೇಳಿದ, ಸಮಸ್ತ ಜೀವಸಮುದಾಯಕ್ಕೆ ಉತ್ತಮ ಆಶ್ರಯನಾದ ಆ ಪುರುಷನನ್ನು ತಿಳಿದಿದ್ದೇನೆ. ಕಾಮಾಭಿಮಾನಿಯಾದ ಪ್ರದ್ಯುಮ್ನನೇ ಆ ಪುರುಷ. ಶಾಕಲ್ಯ, ಇನ್ನೂ ಪ್ರಶ್ನೆ ಕೇಳು'. 'ಆ ಪ್ರದ್ಯುಮ್ನನಿಗ ನಿಯಾಮಕನಾದ ದೇವತೆ ಯಾರು?' 'ಶ್ರೀ, ಸರಸ್ವತಿ, ಉಮಾದೇವಿಯರು' ಎಂದರು ಯಾಜ್ಞವಲ್ಕ್ಯರು.

**ರುದ್ರನಿಗೆ ಚತುರ್ಮುಖ ನಿಯಾಮಕ :**

**ಉಪನಿಷತ್—ರೂಪಾಣ್ಯೇವ ಯಸ್ಯಾಯತನಂ, ಚಕ್ಷುರ್ಲೋಕೋ, ಮನೋಜ್ಯೋತಿಃ, ಯೋ ವೈ ತಂ ಪುರುಷಂ ವಿದ್ಯಾತ್ ಸರ್ವಸ್ಯಾತ್ಮನಃ ಪರಾ-**

**ಯಣಂ ಸ ವೈ ವೇದಿತಾ ಸ್ಯಾದ್ ಯಾಜ್ಞವಲ್ಕ್ಯ । ವೇದ ವಾ ಅಹಂ ತಂ ಪುರುಷಂ ಸರ್ವಸ್ಯಾತ್ಮನಃ ಪರಾಯಣಂ ಯಮಾತ್ಥ । ಯ ಏವಾಸಾವಾದಿತ್ಯೇ ಪುರುಷಃ ಸ ಏಷಃ । ವದೈವ ಶಾಕಲ್ಯ । ತಸ್ಯ ಕಾ ದೇವತಾ ಇತಿ । ಸತ್ಯಮಿತಿ ಹೋವಾಚ ।**

'ಶುಕ್ಲಾದಿ ರೂಪಗಳೇ ಯಾರಿಗೆ ಅಧಿಷ್ಠಾನವಾಗಿಯೋ, ಚಕ್ಷುಸ್ಸಿನಲ್ಲಿರುವ ಚಕ್ಷುರ್ನಾಮಕ ರಮೆಯು ಯಾರ ಬಾಹ್ಯಜ್ಞಾನಕ್ಕೆ ಕಾರಣಳಾಗಿರುವಳೋ, ಮನೋನಾಮಕಳಾದ ರಮೆಯು ಯಾರ ಸ್ವರೂಪಜ್ಞಾನದ ಅಭಿವ್ಯಕ್ತಿಗೆ ಕಾರಣಳಾಗಿರುವಳೋ, ಸಮಸ್ತ ಜೀವ ಸಮುದಾಯಕ್ಕೆ ಉತ್ತಮ ಆಶ್ರಯನಾಗಿರುವ ಆ ಪುರುಷನನ್ನು ಯಾರು ತಿಳಿಯುವನೋ ಅವನೇ ನಿಜವಾದ ಜ್ಞಾನಿಯಾಗುವನು. ಯಾಜ್ಞವಲ್ಕ್ಯರೇ ! ನೀವು ಆ ಪುರುಷನನ್ನು ತಿಳಿದಿರುವಿರಾ?' 'ನೀನು ಕೇಳಿದ ಸಮಸ್ತ ಜೀವ ಸಮುದಾಯಕ್ಕೆ ಉತ್ತಮ ಆಶ್ರಯನಾದ ಆ ಪುರುಷನನ್ನು ತಿಳಿದಿದ್ದೇನೆ. ಸೂರ್ಯನಲ್ಲಿ ಇರುವ ರುದ್ರನೇ ಆ ಪುರುಷ. ಶಾಕಲ್ಯ, ಇನ್ನೂ ಪ್ರಶ್ನೆ ಕೇಳು', 'ಆ ರುದ್ರನಿಗೆ ನಿಯಾಮಕನಾದ ದೇವತೆ ಯಾರು ?' 'ಚತುರ್ಮುಖ ಬ್ರಹ್ಮ' ಎಂದರು ಯಾಜ್ಞವಲ್ಕ್ಯರು.

**ಚಂದ್ರನಿಗೆ ಗರುಡ ಶೇಷ ದಕ್ಷರು ನಿಯಾಮಕರು :**

**ಉಪನಿಷತ್—ಆಕಾಶ ಏವ ಯಸ್ಯಾಯತನಂ,ಶ್ರೋತ್ರಂ ಲೋಕೋ,ಮನೋ ಜ್ಯೋತಿಃ, ಯೋ ವೈ ತಂ ಪುರುಷಂ ವಿದ್ಯಾತ್ ಸರ್ವಸ್ಯಾತ್ಮನಃ ಪರಾಯಣಂ ಸ ವೈ ವೇದಿತಾ ಸ್ಯಾದ್ ಯಾಜ್ಞವಲ್ಕ್ಯ। ವೇದ ವಾ ಅಹಂ ತಂ ಪುರುಷಂ ಸರ್ವಸ್ಯಾತ್ಮನಃ ಪರಾಯಣಂ ಯಮಾತ್ಥ । ಯ ಏವಾಯಂ ಶ್ರೌತ್ರಃ ಪ್ರಾತಿಶ್ರುತ್ಕಃ ಪುರುಷಃ ಸ ಏಷಃ । ವದೈವ ಶಾಕಲ್ಯ । ತಸ್ಯ ಕಾ ದೇವತಾ ಇತಿ । ದಿಶ ಇತಿ ಹೋವಾಚ ।**

'ಭೂತಾಕಾಶವೇ ಯಾರಿಗೆ ಅಧಿಷ್ಠಾನವಾಗಿದೆಯೋ, ಶ್ರೋತ್ರದಲ್ಲಿರುವ ಶ್ರೋತ್ರನಾಮಕಳಾದ ರಮೆಯು ಯಾರ ಬಾಹ್ಯಜ್ಞಾನಕ್ಕೆ ಕಾರಣರೂಪಳಾಗಿರುವಳೋ, ಮನೋನಾಮಕಳಾದ ರಮೆಯು ಯಾರ ಸ್ವರೂಪಜ್ಞಾನದ ಅಭಿವ್ಯಕ್ತಿಗೆ ಕಾರಣಳಾಗಿರುವಳೋ ಸಮಸ್ತ ಜೀವ ಸಮುದಾಯಕ್ಕೆ ಉತ್ತಮ ಆಶ್ರಯನಾಗಿರುವ ಆ ಪುರುಷನನ್ನು ಯಾರು ತಿಳಿಯುವನೋ ಅವನೇ ನಿಜವಾದ ಜ್ಞಾನಿಯಾಗುವನು. ಯಾಜ್ಞವಲ್ಕ್ಯರೇ! ನೀವು ಆ ಪುರುಷನನ್ನು ತಿಳಿದಿರುವಿರಾ?' 'ನೀನು ಕೇಳಿದ ಸಮಸ್ತ ಜೀವ ಸಮುದಾಯಕ್ಕೆ ಉತ್ತಮ ಆಶ್ರಯನಾದ ಆ ಪುರುಷನನ್ನು ನಾನು ತಿಳಿದಿದ್ದೇನೆ. ಕಿವಿಯಲ್ಲಿದ್ದು ಎಲ್ಲ ಶಬ್ದಗಳನ್ನು ಕೇಳುವ ಚಂದ್ರನೇ ಆ ಪುರುಷ.

ಶಾಕಲ್ಯ ಇನ್ನೂ ಪ್ರಶ್ನೆ ಕೇಳು'. 'ಚಂದ್ರನಿಗೆ ನಿಯಾಮಕನಾದ ದೇವತೆ ಯಾರು?' 'ಗರುಡ ಶೇಷ ದಕ್ಷರು' ಎಂದರು ಯಾಜ್ಞವಲ್ಕ್ಯರು.

**ನಿರ್ಋತಿಗೆ ಯಮನು ನಿಯಾಮಕ :**

**ಉಪನಿಷತ್—ತಮ ಏವ ಯಸ್ಯಾಯತನಂ, ಹೃದಯಂ ಲೋಕೋ, ಮನೋ ಜ್ಯೋತಿಃ, ಯೋ ವೈ ತಂ ಪುರುಷಂ ವಿದ್ಯಾತ್ ಸರ್ವಸ್ಯಾತ್ಮನಃ ಪರಾಯಣಂ ಸ ವೈ ವೇದಿತಾ ಸ್ಯಾದ್ ಯಾಜ್ಞವಲ್ಕ್ಯ । ವೇದ ವಾ ಅಹಂ ತಂ ಪುರುಷಂ ಸರ್ವಸ್ಯಾತ್ಮನಃ ಪರಾಯಣಂ ಯಮಾತ್ಥ । ಯ ಏವಾಯಂ ಛಾಯಾಮಯಃ ಪುರುಷಃ ಸ ಏಷಃ । ವದೈವ ಶಾಕಲ್ಯ । ತಸ್ಯ ಕಾ ದೇವತಾ ಇತಿ । ಮೃತ್ಯುರಿತಿ ಹೋವಾಚ ।**

'ಅಂಧಕಾರವೇ ಯಾರಿಗೆ ಅಧಿಷ್ಠಾನವೋ, ಹೃದಯದಲ್ಲಿರುವ ಹೃದಯ ನಾಮಕಳಾದ ರಮೆಯು ಯಾರ ಬಾಹ್ಯ ಜ್ಞಾನಕ್ಕೆ ಕಾರಣಳೋ, ಮನೋನಾಮಕ ರಮೆಯು ಯಾರ ಸ್ವರೂಪಜ್ಞಾನದ ಅಭಿವ್ಯಕ್ತಿಗೆ ಕಾರಣಳೋ, ಸಮಸ್ತ ಜೀವ ಸಮುದಾಯಕ್ಕೆ ಉತ್ತಮ ಆಶ್ರಯನಾಗಿರುವ ಆ ಪುರುಷನನ್ನು ಯಾರು ತಿಳಿಯುವನೋ ಅವನೇ ನಿಜವಾದ ಜ್ಞಾನಿಯಾಗುವನು. ಯಾಜ್ಞವಲ್ಕ್ಯರೇ! ನೀವು ಆ ಪುರುಷನನ್ನು ತಿಳಿದಿರುವಿರಾ?' 'ನೀನು ಕೇಳಿದ, ಸಮಸ್ತ ಜೀವ ಸಮುದಾಯಕ್ಕೆ ಉತ್ತಮ ಆಶ್ರಯನಾದ ಆ ಪುರುಷನನ್ನು ನಾನು ತಿಳಿದಿದ್ದೇನೆ. ಛಾಯಾಭಿಮಾನಿಯಾದ ನಿರ್ಋತಿಯೇ ಆ ಪುರುಷ. ಶಾಕಲ್ಯ, ಇನ್ನೂ ಪ್ರಶ್ನೆ ಕೇಳು'. 'ನಿರ್ಋತಿಗೆ ನಿಯಾಮಕನಾದ ದೇವತೆ ಯಾರು?' 'ಯಮ' ಎಂದರು ಯಾಜ್ಞವಲ್ಕ್ಯರು.

**ಸೂರ್ಯನಿಗೆ ಪ್ರಾಣನು ನಿಯಾಮಕ :**

**ಉಪನಿಷತ್—ರೂಪಾಣ್ಯೇವ ಯಸ್ಯಾಯತನಂ, ಚಕ್ಷುರ್ಲೋಕೋ, ಮನೋ ಜ್ಯೋತಿಃ, ಯೋ ವೈ ತಂ ಪುರುಷಂ ವಿದ್ಯಾತ್ ಸರ್ವಸ್ಯಾತ್ಮನಃ ಪರಾಯಣಂ ಸ ವೈ ವೇದಿತಾ ಸ್ಯಾದ್ ಯಾಜ್ಞವಲ್ಕ್ಯ । ವೇದ ವಾ ಅಹಂ ತಂ ಪುರುಷಂ ಸರ್ವಸ್ಯಾತ್ಮನಃ ಪರಾಯಣಂ ಯಮಾತ್ಥ । ಯ ಏವಾಯಮಾದರ್ಶೇ ಪುರುಷಃ ಸ ಏಷಃ । ವದೈವ ಶಾಕಲ್ಯ । ತಸ್ಯ ಕಾ ದೇವತಾ ಇತಿ । ಅಸುರಿತಿ ಹೋವಾಚ ।**

'ಶುಕ್ಲ ಮೊದಲಾದ ರೂಪಗಳೇ ಯಾರಿಗೆ ಅಧಿಷ್ಠಾನಗಳೋ, ಚಕ್ಷುಸ್ಸಿನಲ್ಲಿರುವ ಚಕ್ಷುರ್ನಾಮಕಳಾದ ರಮೆಯು ಯಾರ ಬಾಹ್ಯಜ್ಞಾನಕ್ಕೆ ಕಾರಣಳೋ, ಮನೋನಾಮಕಳಾದ ರಮೆಯು ಯಾರ ಸ್ವರೂಪ ಜ್ಞಾನದ ಅಭಿವ್ಯಕ್ತಿಗೆ ಕಾರಣಳಾಗಿರು

ವಳೋ, ಸಮಸ್ತ ಜೀವ ಸಮುದಾಯಕ್ಕೆ ಉತ್ತಮ ಆಶ್ರಯನಾಗಿರುವ ಆ ಪುರುಷನನ್ನು ಯಾರು ತಿಳಿಯುವನೋ ಅವನೇ ನಿಜವಾದ ಜ್ಞಾನಿಯಾಗುವನು. ಯಾಜ್ಞವಲ್ಕ್ಯರೇ! ನೀವು ಆ ಪುರುಷನನ್ನು ತಿಳಿದಿರುವಿರಾ?' 'ನೀನು ಕೇಳಿದ ಸಮಸ್ತ ಜೀವ ಸಮುದಾಯಕ್ಕೆ ಉತ್ತಮ ಆಶ್ರಯನಾದ ಆ ಪುರುಷನನ್ನು ನಾನು ತಿಳಿದಿದ್ದೇನೆ. ಕಣ್ಣಿನಲ್ಲಿರುವ ಕಣ್ಣಿನ ಅಭಿಮಾನಿಯಾದ ಸೂರ್ಯನೇ ಆ ಪುರುಷ. ಶಾಕಲ್ಯ ಇನ್ನೂ ಪ್ರಶ್ನೆ ಕೇಳು'. 'ಸೂರ್ಯನಿಗೆ ನಿಯಾಮಕನಾದ ದೇವತೆ ಯಾರು?' 'ಪ್ರಾಣ' ಎಂದರು ಯಾಜ್ಞವಲ್ಕ್ಯರು.

**ಪರ್ಜನ್ಯನಿಗೆ ವರುಣನು ನಿಯಾಮಕ :**

**ಉಪನಿಷತ್—ಆಪ ಏವ ಯಸ್ಯಾಯತನಂ, ಹೃದಯಂ ಲೋಕೋ, ಮನೋ ಜ್ಯೋತಿಃ, ಯೋ ವೈ ತಂ ಪುರುಷಂ ವಿದ್ಯಾತ್ ಸರ್ವಸ್ಯಾತ್ಮನಃ ಪರಾಯಣಂ ಸ ವೈ ವೇದಿತಾ ಸ್ಯಾದ್ ಯಾಜ್ಞವಲ್ಕ್ಯ । ವೇದ ವಾ ಅಹಂ ತಂ ಪುರುಷಂ ಸರ್ವಸ್ಯಾತ್ಮನಃ ಪರಾಯಣಂ ಯಮಾತ್ಥ । ಯ ಏವಾಯಮಪ್ಸು ಪುರುಷಃ ಸ ಏಷಃ । ವದೈವ ಶಾಕಲ್ಯ । ತಸ್ಯ ಕಾ ದೇವತಾ ಇತಿ । ವರುಣ ಇತಿ ಹೋವಾಚ ।**

'ನೀರು ಯಾರಿಗೆ ಅಧಿಷ್ಠಾನವೋ, ಹೃದಯದಲ್ಲಿರುವ ಹೃದಯನಾಮಕಳಾದ ರಮೆಯು ಯಾರ ಬಾಹ್ಯಜ್ಞಾನಕ್ಕೆ ಕಾರಣಳೋ, ಮನೋನಾಮಕಳಾದ ರಮೆಯು ಯಾರ ಸ್ವರೂಪಜ್ಞಾನದ ಅಭಿವ್ಯಕ್ತಿಗೆ ಕಾರಣಳೋ, ಸಮಸ್ತ ಜೀವ ಸಮುದಾಯಕ್ಕೆ ಉತ್ತಮ ಆಶ್ರಯನಾಗಿರುವ ಆ ಪುರುಷನನ್ನು ಯಾರು ತಿಳಿಯುವನೋ ಅವನೇ ನಿಜವಾದ ಜ್ಞಾನಿಯಾಗುವನು. ಯಾಜ್ಞವಲ್ಕ್ಯರೇ! ನೀವು ಆ ಪುರುಷನನ್ನು ತಿಳಿದಿರುವಿರಾ?' 'ನೀನು ಕೇಳಿದ ಸಮಸ್ತ ಜೀವ ಸಮುದಾಯಕ್ಕೆ ಉತ್ತಮ ಆಶ್ರಯನಾದ ಆ ಪುರುಷನನ್ನು ನಾನು ತಿಳಿದಿದ್ದೇನೆ. ನೀರಿನಲ್ಲಿರುವ ಪರ್ಜನ್ಯನೇ ಆ ಪುರುಷ. ಶಾಕಲ್ಯ, ಇನ್ನೂ ಪ್ರಶ್ನೆ ಕೇಳು'. 'ಪರ್ಜನ್ಯನಿಗೆ ನಿಯಾಮಕನಾದ ದೇವತೆ ಯಾರು?' 'ವರುಣ' ಎಂದರು ಯಾಜ್ಞವಲ್ಕ್ಯರು.

**ಇಂದ್ರನಿಗೆ ಚತುರ್ಮುಖನು ನಿಯಾಮಕ :**

**ಉಪನಿಷತ್—ರೇತ ಏವ ಯಸ್ಯಾಯತನಂ, ಹೃದಯಂ ಲೋಕೋ, ಮನೋ ಜ್ಯೋತಿಃ, ಯೋ ವೈ ತಂ ಪುರುಷಂ ವಿದ್ಯಾತ್ ಸರ್ವಸ್ಯಾತ್ಮನಃ ಪರಾಯಣಂ ಸ ವೈ ವೇದಿತಾ ಸ್ಯಾದ್ ಯಾಜ್ಞವಲ್ಕ್ಯ । ವೇದ ವಾ ಅಹಂ ತಂ ಪುರುಷಂ ಸರ್ವಸ್ಯಾತ್ಮನಃ ಪರಾಯಣಂ ಯಮಾತ್ಥ । ಯ ಏವಾಯಂ ಪುತ್ರಮಯಃ ಪುರುಷಃ ಸ ಏಷಃ । ವದೈವ ಶಾಕಲ್ಯ । ತಸ್ಯ ಕಾ ದೇವತಾ ಇತಿ । ಪ್ರಜಾಪತಿರಿತಿ ಹೋವಾಚ ।**

ವೀರ್ಯವು ಯಾರಿಗೆ ಅಧಿಷ್ಠಾನವೋ, ಹೃದಯನಾಮಕಳಾದ ರಮೆಯು ಯಾರ ಬಾಹ್ಯ ಜ್ಞಾನಕ್ಕೆ ಕಾರಣಳೋ, ಮನೋನಾಮಕಳಾದ ರಮೆಯು ಯಾರ ಸ್ವರೂಪ ಜ್ಞಾನದ ಅಭಿವ್ಯಕ್ತಿಗೆ ಕಾರಣಳೋ, ಸಮಸ್ತ ಜೀವಸಮುದಾಯಕ್ಕೆ ಉತ್ತಮ ಆಶ್ರಯನಾಗಿರುವ ಆ ಪುರುಷನನ್ನು ಯಾರು ತಿಳಿಯುವನೋ ಅವನೆ ನಿಜವಾದ ಜ್ಞಾನಿಯಾಗುವನು. ಯಾಜ್ಞವಲ್ಕ್ಯರೇ! ನೀವು ಆ ಪುರುಷನನ್ನು ತಿಳಿದಿರುವಿರಾ?' 'ಸಮಸ್ತ ಜೀವ ಸಮುದಾಯಕ್ಕೆ ಉತ್ತಮ ಆಶ್ರಯನಾದ ಆ ಪುರುಷನನ್ನು ನಾನು ತಿಳಿದಿದ್ದೇನೆ. ಪುತ್ರಾಭಿಮಾನಿಯಾದ ಇಂದ್ರನೇ ಆ ಪುರುಷ. ಶಾಕಲ್ಯ! ಇನ್ನೂ ಪ್ರಶ್ನೆ ಕೇಳು'. 'ಇಂದ್ರನಿಗೆ ನಿಯಾಮಕನಾದ ಆ ದೇವತೆ ಯಾರು?' 'ಪ್ರಜಾಪಾಲಕನಾದ ಚತುರ್ಮುಖ ಬ್ರಹ್ಮ' ಎಂದರು ಯಾಜ್ಞವಲ್ಕ್ಯರು.

**ಭಾಷ್ಯ**—ಶಾರೀರೋ ಮನುರುದ್ದಿಷ್ಟಃ ಕಾಮಃ ಪ್ರದ್ಯುಮ್ನ ಉಚ್ಯತೇ ।
ಆದಿತ್ಯಸ್ಥಸ್ತಥಾ ರುದ್ರಃ ಶ್ರೌತ್ರಶ್ಚಂದ್ರ ಉದಾಹೃತಃ ।
ಛಾಯಾಮಯಸ್ತು ನಿರ್ಋತಿರಾದರ್ಶೇ ಸೂರ್ಯ ಏವ ಚ ।
ಪರ್ಜನ್ಯಸ್ತ್ವಪ್ಸು ಪುರುಷಃ ಶಕ್ರಃ ಪುತ್ರಾಭಿಮಾನವಾನ್ ।
ಅಮೃತಂ ವಾಯುರುದ್ದಿಷ್ಟಃ ಸ್ತ್ರಿಯಃ ಶ್ರೀರ್ಗೀರುಮಾ ತಥಾ ।
ಸತ್ಯಂ ಬ್ರಹ್ಮಾ ಸಮುದ್ದಿಷ್ಟೋ ಗರುತ್ಮಚ್ಛೇಷಕಾ ದಿಶಃ ।
ಆದೇಶಾನಾದ್ದಿಶಃ ಪ್ರೋಕ್ತಾಃ ಮೃತ್ಯುರ್ಯಮ ಉದಾಹೃತಃ ।
ಅಂತರ್ಗತೇನ ರೂಪೇಣ ವಾಯುರೇವ ತ್ವಸುಃ ಸ್ಮೃತಃ ।
ಪಾಲಕೇನ ಸ್ವರೂಪೇಣ ಬ್ರಹ್ಮೈವಾತ್ರ ಪ್ರಜಾಪತಿಃ ।
ಪ್ರಕಾಶಸ್ತ್ವಂತರೋ ಜ್ಯೋತಿರ್ಲೋಕೋ ಬಾಹ್ಯ ಇತೀರ್ಯತೇ ।
ಮನಃಸ್ಥಿತಾ ಮನೋನಾಮ್ನೀ ಬೋಧರೂಪತ್ವತೋ ರಮಾ ।
ಸೈವಾಗ್ನಿಸ್ಥಾಽದನಾನ್ನಿತ್ಯಮಗ್ನಿರಿತ್ಯೇವ ಗೀಯತೇ ।
ಹೃದಯಂ ಬುದ್ಧಿಸಂಸ್ಥಾ ಸಾ ತ್ವಯನಂ ಹೃದಿ ಯತ್ತತಃ ।
ಚಕ್ಷುಃ ಸಾ ದೃಷ್ಟಿಹೇತುತ್ವಾದಷ್ಟಾನಾಂ ಲೋಕ ಏವ ಸಾ ।
ಇತಿ ಚ ।

**ಅನುವಾದ**—'ಶಾರೀರ ಎಂದರೆ ಜೀವಾಭಿಮಾನಿಯಾದ ಮನು. ಕಾಮ ಎಂದರೆ ಪ್ರದ್ಯುಮ್ನ. ಆದಿತ್ಯನಲ್ಲಿರುವವನು ರುದ್ರ. ಶ್ರೋತ್ರಾಭಿಮಾನಿದೇವತೆ ಚಂದ್ರ. ಛಾಯಾಮಯ ಎಂದರೆ ನಿರ್ಋತಿ. ಕನ್ನಡಿಯಲ್ಲಿರುವವನು ಸೂರ್ಯ. ನೀರಿನಲ್ಲಿರುವ ಪುರುಷ ಎಂದರೆ ಪರ್ಜನ್ಯ. ಪುತ್ರಾಭಿಮಾನಿ ದೇವತೆ ಶಕ್ರ. ಅಮೃತ ಎಂದರೆ ವಾಯು. ಸ್ತ್ರೀಯರು ಎಂದರೆ ಶ್ರೀ, ಸರಸ್ವತಿ, ಉಮಾ. ಸತ್ಯ ಎಂದರೆ ಚತುರ್ಮುಖ ಬ್ರಹ್ಮ. ದಿಶ್ ಎಂದರೆ ಗರುಡ, ಶೇಷ, ದಕ್ಷ. ಇವರು ಆದೇಶ

ನೀಡುವುದರಿಂದ ಇವರಿಗೆ ದಿಶ್ ಎಂದು ಹೆಸರು. ಮೃತ್ಯು ಎಂದರೆ ಯಮ. ಅಮೃತ ಶಬ್ದದಿಂದ ಹೇಳಲ್ಪಟ್ಟ ವಾಯುವೇ ಜೀವನ ಅಂತರ್ಗತವಾದ ರೂಪದಿಂದ ಅಸು ಎಂದು ಪ್ರಸಿದ್ಧ. ಸತ್ಯಶಬ್ದದಿಂದ ಹೇಳಲ್ಪಟ್ಟ ಬ್ರಹ್ಮನೇ ಜೀವನ ಅಂತರ್ಗತ ಪಾಲಕ ರೂಪದಿಂದ ಪ್ರಜಾಪತಿ ಎಂದು ಪ್ರಸಿದ್ಧ. ಜ್ಯೋತಿಷ್ ಎಂದರೆ ಸ್ವರೂಪಜ್ಞಾನ. ಲೋಕ ಎಂದರೆ ಬಾಹ್ಯಜ್ಞಾನ. ಆದ್ದರಿಂದ ಪುನರುಕ್ತಿಯಿಲ್ಲ. ಮನಸ್ಸಿನಲ್ಲಿರುವ ರಮಾದೇವಿಯು ಜ್ಞಾನರೂಪಳಾದುದರಿಂದ ಮನಸ್ ಎಂಬ ಹೆಸರುಳ್ಳವಳು. ಅದೇ ರಮಾದೇವಿಯೇ ಅಗ್ನಿಯಲ್ಲಿದ್ದು ನಿತ್ಯವೂ ಸಂಹಾರ ಕ್ರಿಯೆಯನ್ನು ನಡೆಸುವುದರಿಂದ ಅಗ್ನಿ ಎನಿಸುತ್ತಾಳೆ. ಬುದ್ಧಿಯಲ್ಲಿರುವ ಅವಳು ಹೃದಯದಲ್ಲಿ ವಾಸ ಮಾಡುವುದ ರಿಂದ ಹೃದಯ ಎಂದು ಹೆಸರು. ದರ್ಶನಕ್ರಿಯೆಗೆ ಕಾರಣಳಾದುದರಿಂದ ಚಕ್ಷುಸ್ ಎಂದು ಹೆಸರು. ಶ್ರವಣಕ್ರಿಯೆಗೆ ಕಾರಣಳಾದುದರಿಂದ ಶ್ರೋತ್ರ ಎಂದು ಹೆಸರು. ಶಾರೀರ,ಕಾಮಮಯ ಮುಂತಾದ ಎಂಟು ಮಂದಿ ಪುರುಷರಿಗೂ ಅವಳೇ 'ಲೋಕ' ಎಂದರೆ ಪ್ರಕಾಶಕಳು' ಎಂದೂ ಮಹಾಸಂಹಿತೆಯಲ್ಲಿ ಹೇಳಿದೆ.

**ಭಾಷ್ಯ—ಬುದ್ಧಿವೃತ್ತ್ಯಪೇಕ್ಷಯಾ ಬಹಿಃಪ್ರಕಾಶಹೇತುತ್ವಮಪಿ ದೇವ್ಯಾ ನ ವಿರುಧ್ಯತೇ ।**

**ಅನುವಾದ**—ಬುದ್ಧಿವೃತ್ತಿಯನ್ನು ದೃಷ್ಟಿಯಲ್ಲಿಟ್ಟುಕೊಂಡಾಗ ರಮೆಯು ಬಾಹ್ಯಪ್ರಕಾಶಕ್ಕೆ ಕಾರಣಳು ಎನ್ನುವುದೂ ವಿರುದ್ಧವಲ್ಲ.

**ವಿವರಣೆ**—'ಮನಸ್ಸಿನಲ್ಲಿರುವ ರಮಾದೇವಿಯ ರೂಪದಂತೆ ವಾಗಭಿಮಾನಿ ಅಗ್ನಿ, ಹೃದಯ, ಚಕ್ಷುಷ್ ಮತ್ತು ಶ್ರೋತ್ರಗಳಲ್ಲಿರುವ ರಮೆಯ ರೂಪಗಳೂ ಶರೀರದ ಒಳಗೇ ಇರುವುದರಿಂದ ಅವೂ ಆಂತರಪ್ರಕಾಶಕ್ಕೆ ಕಾರಣ ಎಂದು ಹೇಳ ಬೇಕು. ಬಾಹ್ಯ ಪ್ರಕಾಶಕ್ಕೆ ಕಾರಣ ಎಂದು ಹೇಳುವುದು ಯುಕ್ತವಲ್ಲ'. ಈ ಆಕ್ಷೇಪಕ್ಕೆ ಉತ್ತರ ಹೀಗೆ—ಇಲ್ಲಿ ಆಂತರ ಬಾಹ್ಯ ಎಂದರೆ ಶರೀರದೊಳಗೆ ಹೊರಗೆ ಎಂದರ್ಥವಲ್ಲ. ಸಾಕ್ಷಿಜ್ಞಾನವು ಆಂತರ. ಅಂತಃಕರಣವೃತ್ತಿಯು ಜೀವಸ್ವರೂಪ ಕ್ಕಿಂತ ಭಿನ್ನವಾದದ್ದರಿಂದ ಬಾಹ್ಯ. ಬುದ್ಧಿವೃತ್ತಿಯು ಹೀಗೆ ಬಾಹ್ಯವೇ ಆಗುವುದ ರಿಂದ ಮನಸ್ಸಿನಲ್ಲಿರುವ ರಮಾರೂಪವೂ ಬಾಹ್ಯಪ್ರಕಾಶಕ್ಕೆ ಕಾರಣ. ಹಾಗೆಯೇ ಅಗ್ನಿ ಹೃದಯಾದಿಗಳಲ್ಲಿರುವ ರಮಾರೂಪಗಳೂ ಶರೀರದ ಒಳಗೇ ಬಾಹ್ಯಪ್ರಕಾಶ ಕಾರಣಗಳೆನ್ನುವುದು ವಿರುದ್ಧವಾಗುವುದಿಲ್ಲ.

**ಭಾಷ್ಯ—'ಇಮ ಏವ ತ್ರಯೋ ಲೋಕಾ' ಇತಿ ಪೂರ್ವೋಕ್ತಾನಾಂ ದೇವಾ- ನಾಮನುಕ್ತ್ವಾ ಕಥಂ ಲೋಕಮಾತ್ರೇ ಸರ್ವದೇವಾನಾಮಂತರ್ಭಾವಃ? ಉಕ್ತಾಂಗೀಕಾರೇಽನಂತರ್ಭಾವಃ ಕಥಂ? ಕಥಂ ಚಾಗ್ನ್ಯಾದಿಷು?**

**ಅನುವಾದ**—'ಇಮ ಏವ ತ್ರಯೋ ಲೋಕಾಃ' ಎಂಬುದಕ್ಕೆ ಹಿಂದೆ ಹೇಳಿದ ವಾಯು ಗರುಡ ಮಹೇಶ್ವರ ಎಂಬ ಮೂರು ದೇವತೆಗಳು ಎಂದು ಅರ್ಥವಲ್ಲದಿದ್ದರೆ, ಪೃಥಿವೀ, ಅಂತರಿಕ್ಷ, ಸ್ವರ್ಗಗಳೆಂಬ ಮೂರು ಲೋಕಗಳಿಗೆ ಸರ್ವದೇವತೆಗಳು ಅಧೀನರು ಎನಿಸುವುದು ಹೇಗೆ ಸಾಧ್ಯ? ಚೇತನರು ಜಡಕ್ಕೆ ಅಧೀನರಾಗುವರೇ? ದೇವತೆಗಳು ಅರ್ಥವೆಂದು ಅಂಗೀಕರಿಸಿದರೆ ಅವರಿಗೆ ಸರ್ವದೇವತೆಗಳೂ ಅಧೀನರೆನಿಸುವುದಾದರೂ ಹೇಗೆ? ಅಗ್ನಿ ವಾಯು ಆದಿತ್ಯರಿಗೆ ಸರ್ವದೇವತೆಗಳು ಅಧೀನರೆನಿಸುವುದು ಹೇಗೆ?

**ವಿವರಣೆ**—'ಇಮ ಏವ ತ್ರಯೋ ಲೋಕಾಃ' ಎಂಬುದಕ್ಕೆ ವಾಯು, ಗರುಡ, ಮಹೇಶ್ವರರೆಂಬ ಮೂರು ದೇವತೆಗಳು ಎಂದು ವ್ಯಾಖ್ಯಾನ ಮಾಡಲಾಗಿದೆ. ಹೀಗೆ ವ್ಯಾಖ್ಯಾನ ಮಾಡದೆ, ಪೃಥಿವೀ ಅಂತರಿಕ್ಷ ಮತ್ತು ದ್ಯುಲೋಕಗಳೆಂದು ವ್ಯಾಖ್ಯಾನ ಮಾಡಿದರೆ 'ಏಷು ಹೀಮೇ ಸರ್ವೇ ದೇವಾಃ', ಈ ಮೂರು ಲೋಕಗಳಿಗೆ ಅಧೀನರಾಗಿ ಎಲ್ಲ ದೇವತೆಗಳೂ ಇದ್ದಾರೆ ಎಂಬುದು ಅನುಪಪನ್ನವಾಗುತ್ತಿತ್ತು. ದೇವತೆಗಳು ಜಡಲೋಕಗಳ ಅಧೀನರಲ್ಲ. 'ತ್ರಯೋ ಲೋಕಾಃ' ಎಂದರೆ ವಾಯು ಮುಂತಾದ ಮೂರು ದೇವತೆಗಳು ಎಂದು ಅರ್ಥವನ್ನು ಅಂಗೀಕರಿಸಿದರೆ ಎಲ್ಲ ದೇವತೆಗಳಿಗಿಂತ ಈ ಮೂರು ದೇವತೆಗಳು ಅತಿ ಸಮರ್ಥರಾದುದರಿಂದ ಇವರಿಗೆ ಎಲ್ಲ ದೇವತೆಗಳು ಅಧೀನರೆನಿಸುವುದು ಸಾಧ್ಯ. 'ತ್ರಯೋ ಲೋಕಾಃ' ಎಂದರೆ ಪೃಥಿವಿ ಮತ್ತು ಅಗ್ನಿ, ಅಂತರಿಕ್ಷ ಮತ್ತು ವಾಯು, ದ್ಯುಲೋಕ ಮತ್ತು ಆದಿತ್ಯ ಎಂದು ಅರ್ಥ ಹೇಳುವುದೂ ಸರಿಯಲ್ಲ. ಏಕೆಂದರೆ, ಸರ್ವದೇವತೆಗಳಲ್ಲಿ ಸೇರುವ ಇಂದ್ರಾದಿ ದೇವತೆಗಳಿಗಿಂತ ಅಗ್ನಿ ವಾಯು ಆದಿತ್ಯರು ಉತ್ತಮರಲ್ಲ. ಅವರಿಗೆ ಇಂದ್ರಾದಿಗಳು ಅಧೀನರೆನಿಸಲಾರರು.

**ಭಾಷ್ಯ—ನ ಚಾವಾಸಮಾತ್ರಮತ್ರ ವಿವಕ್ಷಿತಮ್ । ಪ್ರತಿಶರೀರಮಪಿ ಸರ್ವದೇವಾನಾಮಾವಾಸಾತ್ ನ ಲೋಕಾದೀನಾಂ ವಿಶೇಷಃ । ಸಾಮರ್ಥ್ಯಾಧಿಕ್ಯಂ ಚಾತ್ರ ವಿವಕ್ಷಿತಮ್ ।**

**ಅನುವಾದ**—'ಇಮ ಏವ ತ್ರಯೋ ಲೋಕಾಃ' ಎಂಬ ವಾಕ್ಯದಲ್ಲಿ ಎಲ್ಲ ದೇವತೆಗಳೂ ಮೂರು ಲೋಕದಲ್ಲಿ ವಾಸಮಾಡುತ್ತಾರೆ ಎಂದಿಷ್ಟೇ ವಿವಕ್ಷಿತವೆಂದೂ ಹೇಳಲು ಶಕ್ಯವಿಲ್ಲ. ಏಕೆಂದರೆ ಪ್ರತಿ ಶರೀರದಲ್ಲಿಯೂ ಸರ್ವ ದೇವತೆಗಳು ತತ್ತ್ವಾಭಿಮಾನಿಗಳಾಗಿ ವಾಸ ಮಾಡುವುದರಿಂದ ಲೋಕಗಳಿಗೂ, ಶರೀರಗಳಿಗೂ ವ್ಯತ್ಯಾಸವಿಲ್ಲವೆಂದಾದೀತು. ಎಲ್ಲ ದೇವತೆಗಳೂ ಅಗ್ನಿ ವಾಯು ಆದಿತ್ಯರನ್ನಾಶ್ರಯಿಸಿರುವರೆಂದು ಅಭಿಪ್ರಾಯವಿಟ್ಟುಕೊಳ್ಳುವ ಪಕ್ಷದಲ್ಲಿಯೂ, ಪ್ರತಿಶರೀರದಲ್ಲಿ ನಿಯಾಮಕರಾಗಿ ಸರ್ವದೇವತೆಗಳಲ್ಲಿದ್ದು ಜೀವರನ್ನು ಆಶ್ರಯಿಸಿರುವುದರಿಂದ ಅಗ್ನ್ಯಾದಿಗಳಿಗೂ

ಜೀವರಿಗೂ ವ್ಯತ್ಯಾಸವಿಲ್ಲವೆಂದಾದೀತು. 'ಇಮ ಏವ ತ್ರಯೋ ಲೋಕಾಃ' ಎಂಬಲ್ಲಿ ಏವಕಾರ ನಿರರ್ಥಕವಾದೀತು. ವಸ್ತುತಃ ಲೋಕಗಳಲ್ಲಿ ವಾಸಮಾಡುವುದು ಮಾತ್ರ ವಿವಕ್ಷಿತವಲ್ಲ. ಅಗ್ನ್ಯಾದಿದೇವತೆಗಳನ್ನು ತಮ್ಮ ಸುಖಕ್ಕಾಗಿ ಆಶ್ರಯಿಸುವುದು ಮಾತ್ರವೂ ವಿವಕ್ಷಿತವಲ್ಲ. ಅಧಿಕಸಾಮರ್ಥ್ಯವೂ ವಿವಕ್ಷಿತ. ಈ ಲೋಕಗಳಿಗಾಗಲೀ ಅಗ್ನ್ಯಾದಿಗಳಿಗಾಗಲೀ ಅಧಿಕಸಾಮರ್ಥ್ಯವಿಲ್ಲದಿರುವುದರಿಂದ 'ತ್ರಯೋ ಲೋಕಾಃ' ಎಂದರೆ ಸರ್ವದೇವತೆಗಳಿಗಿಂತ ಅಧಿಕ ಸಾಮರ್ಥ್ಯವುಳ್ಳ ವಾಯು ಗರುಡ ರುದ್ರರೇ ಇಲ್ಲಿ ವಿವಕ್ಷಿತರು.

**ಭಾಷ್ಯ**—**'ಏತೇಷು ಹೀದಂ ಸರ್ವಂ ಷಟ್' 'ಯದಸ್ಮಿನ್ನಿದಂ ಸರ್ವಮಧ್ಯಾರ್ಧ್ನೋತ್' 'ಸ ಬ್ರಹ್ಮ ತ್ಯದಿತ್ಯಾಚಕ್ಷತೇ' 'ಮಹಿಮಾನ ಏವೈಷಾಮ್' ಇತ್ಯಾದಿಷು ಷಡ್ಗುಣೋದ್ರೇಕಾದೀನಾಮುಕ್ತೇಃ । ಅಂತರ್ಭಾವಸ್ಯ ಚ ಮಹಿಮಕಾರಣತ್ವೋಕ್ತೇಃ ।**

**ಅನುವಾದ**—'ಗರುಡ ಮೊದಲಾದ ಆರು ದೇವತೆಗಳಲ್ಲಿ ಜ್ಞಾನ ಮೊದಲಾದ ಆರು ಗುಣಗಳು ಪೂರ್ಣವಾಗಿವೆ'. 'ವಾಯುವಿನಲ್ಲಿ ಜ್ಞಾನಾದಿ ಗುಣಗಳು ಸಮೃದ್ಧವಾಗಿವೆ' 'ವಿಷ್ಣುವು ಗುಣಪೂರ್ಣ ಮತ್ತು ಅನಂತಕಾಲಗಳಲ್ಲಿ ವಿಕಾರರಹಿತನಾಗಿರುವವನು ಎಂದು ಪ್ರಸಿದ್ಧ' 'ಇವರು ಮೂವತ್ತಮೂರು ದೇವತೆಗಳ ನಿಯಂತ್ರಣಕ್ಕೆ ಒಳಪಟ್ಟವರು' ಮೊದಲಾದ ಮಂತ್ರಗಳಲ್ಲಿ ಷಡ್ಗುಣ ಪೂರ್ಣತ್ವ ಮೊದಲಾದುದನ್ನು ಹೇಳಿದ್ದರಿಂದ ಅಧಿಕಸಾಮರ್ಥ್ಯವು ವಿವಕ್ಷಿತವೆಂದೇ ತಿಳಿಯುತ್ತದೆ. ಕೆಳಗಿನವರು ಮೇಲಿನವರಲ್ಲಿ ಅಂತರ್ಭಾವ ಹೊಂದಲು ಅವರ ಅಲ್ಪಶಕ್ತಿಯೇ ಕಾರಣವೆಂದು ಉಪನಿಷತ್ತಿನಲ್ಲಿ ಹೇಳಿರುವುದರಿಂದ ಮೇಲಿನವರಲ್ಲಿ ಅಧಿಕಸಾಮರ್ಥ್ಯವಿರುವುದೇ ಅವರಿಗೆ ಕೆಳಗಿನವರು ಅಧೀನರಾಗಲು ಕಾರಣವೆಂದು ತಿಳಿಯುತ್ತದೆ.

**ಭಾಷ್ಯ**—**ಇದಂ ಸರ್ವಂ ಗುಣಷಟ್ಕಂ ಪೂರ್ಣಂ ಗುಣಷಟ್ಕಮಿತ್ಯರ್ಥಃ । ಇದಂ-ಶಬ್ದೋ ವಿವಕ್ಷಿತತ್ವಾದ್ 'ಅಯಂ ಭಗವಾನ್' ಇತಿವತ್ । ಏವಮೇವ 'ಇದಂ ಸರ್ವಮಧ್ಯಾರ್ಧ್ನೋತ್' ಇತಿ ಚ ।**

**ಅನುವಾದ**—'ಇದಂ ಸರ್ವಂ ಷಟ್' ಎಂದರೆ ಪೂರ್ಣವಾದ ಆರು ಗುಣಗಳು ಎಂದರ್ಥ. ಈ ಆರು ಗುಣಗಳು ಪೂರ್ವ ವಾಕ್ಯದಲ್ಲಿ ಪ್ರಸ್ತುತವಾಗಿಲ್ಲದಿದ್ದರೂ 'ಅಯಂ ಮೇ ಹಸ್ತೋ ಭಗವಾನ್' ಎಂಬ ವಾಕ್ಯದಲ್ಲಿ ಹೇಗೋ ಹಾಗೆ ಇದಂ ಸರ್ವಂ ಷಟ್ ಎಂಬ ವಾಕ್ಯದಲ್ಲಿಯೂ 'ಇದಂ' ಶಬ್ದವು ಮುಂದೆ ಹೇಳಬೇಕೆನಿಸಿರುವ ವಿಷಯವನ್ನು ಹೇಳುತ್ತದೆ. ಇದಂ ಶಬ್ದವು ಪೂರ್ವದಲ್ಲಿ

ಪ್ರಸ್ತುತವಾದುದನ್ನೇ ಹೇಳಬೇಕೆಂಬ ನಿಯಮವಿಲ್ಲ. ಇದು ಸರ್ವಮಧ್ವಗ್ರಂಥಗಳಲ್ಲಿ ಎಂಬಲ್ಲಿಯೂ ಇದು ಶಬ್ದವನ್ನು ಹೀಗೆಯೇ ತಿಳಿಯಬೇಕು.

**ಭಾಷ್ಯ—ಗುಣಾಧಿಕ್ಯೇನ ತದಧೀನತ್ವೇ ವಿವಕ್ಷಿತೇ ನಿವಾಸತ್ವಾದಿಕಮಂತರ್ಭವತಿ। ಉತ್ತಮಾನಾಮಧಿಕವ್ಯಾಪ್ತ್ಯಾದೇಃ । ನ ತು ನಿವಾಸತ್ವಾದೌ ಗುಣಾಧಿಕ್ಯಾದಿಕಮ್ । ಕಥಂ ಚ ತನ್ಮಹಿಮತ್ವೇನಾಂತರ್ಭಾವಮುಕ್ತ್ವಾ ನಿವಾಸತ್ವಮಾತ್ರೇಣಾಂತರ್ಭಾವ ಉಚ್ಯತೇ ?**

**ಅನುವಾದ**—ನಿವಾಸತ್ವಾದಿಗಳೂ ವಿವಕ್ಷಿತವೆ. ಆದರೆ ಉತ್ತಮ ದೇವತೆಗಳಲ್ಲಿ ಅಧಿಕಗುಣವಿರುವುದರಿಂದ ಆ ದೇವತೆಗಳಿಗೆ ಕಡಿಮೆ ಗುಣವುಳ್ಳ ದೇವತೆಗಳು ಅಧೀನರು ಎಂದು ಹೇಳುವುದು ಇಲ್ಲಿ ವಿವಕ್ಷಿತವೆಂದಿಟ್ಟುಕೊಂಡಾಗ ಅಧೀನತ್ವದ ಜೊತೆಗೆ ನಿವಾಸತ್ವಾದಿಗಳನ್ನು ಹೇಳಿದಂತಾಗುತ್ತದೆ. ಉತ್ತಮರಿಗೆ ಹೆಚ್ಚು ವ್ಯಾಪ್ತಿ ಮತ್ತು ಸಾಮರ್ಥ್ಯವಿರುವುದರಿಂದ ಅವರು ಇತರ ದೇವತೆಗಳಿಗೆ ನಿವಾಸಸ್ಥಾನಭೂತರೆನಿಸಬಹುದು. ಆದರೆ ಅಧೀನತ್ವವನ್ನು ಹೇಳದೆ ನಿವಾಸತ್ವಾದಿಗಳನ್ನೇ ಹೇಳಿದ್ದರೆ ಅಷ್ಟೇ ಹೇಳಿದಂತಾಗುತ್ತಿತ್ತು. ಗುಣಾಧಿಕ್ಯ ಮೊದಲಾದುವುಗಳನ್ನು ಜೊತೆಗೆ ಹೇಳಿದಂತಾಗುತ್ತಿದ್ದಿಲ್ಲ. ಅದೂ ಅಲ್ಲದೆ 'ಮಹಿಮಾನ ಏವೈಷಾಮೇತೇ' ಎಂದು ಒಮ್ಮೆ ಅಲ್ಪ ಸಾಮರ್ಥ್ಯಪ್ರಯುಕ್ತ ಅಧೀನತ್ವವನ್ನು ಸ್ಪಷ್ಟವಾಗಿ ಹೇಳಿದ ಮೇಲೆ ಅನಂತರ 'ಏತೇಷು ಹೀಮೇ ಸರ್ವೇ ದೇವಾಃ' ಎಂದು ನಿವಾಸತ್ವ ಮಾತ್ರ ಪ್ರಯುಕ್ತ ಅಂತರ್ಭಾವವನ್ನು ಹೇಳುವುದಾದರೂ ಹೇಗೆ ?

**ವಾಯ್ವಾದಿ ದೇವತೆಗಳು ಅಧಿಕಸಾಮರ್ಥ್ಯ ಉಳ್ಳವರು :**

**ಭಾಷ್ಯ—ಕಥಂ ಚಾನ್ಯಥಾ ಕಾಮಾದೀನಾಂ ಪ್ರಸಿದ್ಧಮಹಿಮಾನಾಂ ಸ್ತ್ರೀಮಾತ್ರಾದಿಕಂ ದೇವಕೋಚ್ಯತೇ? ಪ್ರಸಿದ್ಧಂ ಚೈತತ್ ।**

**ಅನುವಾದ**—ಅಮೃತ ಸ್ತ್ರೀ ಸತ್ಯ ಇತ್ಯಾದಿ ಶಬ್ದಗಳು ವಾಯು ಲಕ್ಷ್ಮೀ ಸರಸ್ವತಿ ಪಾರ್ವತಿ ಬ್ರಹ್ಮ ಇತ್ಯಾದಿ ದೇವತೆಗಳನ್ನು ಹೇಳದಿದ್ದರೆ ಪ್ರಸಿದ್ಧ ಮಹಿಮೆಯುಳ್ಳ ಪ್ರದ್ಯುಮ್ನ ಮೊದಲಾದವರಿಗೆ ಕೇವಲ ಸ್ತ್ರೀಯರು ಮೊದಲಾದವರು ನಿಯಾಮಕರು ಎಂದು ಹೇಳಲು ಹೇಗೆ ಸಾಧ್ಯ? ವಾಯು ಲಕ್ಷ್ಮಿ ಮುಂತಾದವರಿಗೆ ಇತರರಿಗಿಂತ ಹೆಚ್ಚು ಸಾಮರ್ಥ್ಯವಿದೆ ಎಂಬ ವಿಷಯವು ಪ್ರಮಾಣಸಿದ್ಧವಾಗಿದೆ.

**ಭಾಷ್ಯ–'ಆತ್ಮಾ ದೇವಾನಾಂ ಭುವನಸ್ಯ ಗರ್ಭಃ' 'ಆತ್ಮಾ ತೇ ವಾತಃ' 'ಇಂದ್ರೋ ವೈ ದೇವಾನಾಮೋಜಿಷ್ಠಃ' 'ಬ್ರಹ್ಮಾ ದೇವಾನಾಂ ಪ್ರಥಮಃ ಸಂಬಭೂವ' 'ಅಯಂ ವಾವ ಶಿಶುರ್ಯೋಽಯಂ ಮಧ್ಯಮಃ ಪ್ರಾಣಃ'**

**'ತಮೇತಾಃ ಸಪ್ತಾಕ್ಷಿತಯ ಉಪತಿಷ್ಠಂತೇ' 'ತದ್ ಯಾ ಇಮಾ ಅಕ್ಷನ್ ಲೋಹಿನ್ಯೋ ರಾಜಯಸ್ತಾಭಿರೇನಂ ರುದ್ರೋಽನ್ವಾಯತ್ತೋ ಯಚ್ಛುಕ್ಲಂ ತೇನೇಂದ್ರಃ'**

**ಅನುವಾದ**—'ಲೋಕವನ್ನು ವ್ಯಾಪಿಸಿರುವ ವಾಯುವು ದೇವತೆಗಳ ನಿಯಾಮಕ' 'ಇಂದ್ರನೇ! ವಾಯುವು ನಿನಗೆ ನಿಯಾಮಕ'. 'ಇಂದ್ರನು ದೇವತೆಗಳ ಮಧ್ಯೆ ಅತಿ ಹೆಚ್ಚು ಶಕ್ತಿಯನ್ನು ಹೊಂದಿರುವವನು'. 'ಚತುರ್ಮುಖ ಬ್ರಹ್ಮನು ದೇವತೆಗಳಲ್ಲಿ ಮೊದಲು ಹುಟ್ಟಿದವನು'. 'ಈ ಮುಖ್ಯಪ್ರಾಣನು ವಿಷ್ಣುವಿನ ಮಗನು'. 'ಮುಖ್ಯಪ್ರಾಣನನ್ನು ಈ ಏಳು ದೇವತೆಗಳೂ ಉಪಾಸನೆ ಮಾಡುತ್ತಾರೆ'. 'ಕಣ್ಣಿನಲ್ಲಿರುವ ಕೆಂಪುರೇಖೆಗಳನ್ನು ಆಶ್ರಯಿಸಿ ರುದ್ರನು ಮುಖ್ಯಪ್ರಾಣನನ್ನು ಉಪಾಸನೆ ಮಾಡುತ್ತಾನೆ. ಕಣ್ಣಿನಲ್ಲಿರುವ ಬಿಳಿಯಾದ ಸ್ಥಳವನ್ನು ಆಶ್ರಯಿಸಿ ಇಂದ್ರನು ಮುಖ್ಯಪ್ರಾಣನನ್ನು ಉಪಾಸನೆ ಮಾಡುತ್ತಾನೆ'.

**ಭಾಷ್ಯ—'ಅಶ್ವಮೇಧಃ ಕ್ರತುಶ್ರೇಷ್ಠೋ ಜ್ಯೋತಿಃಶ್ರೇಷ್ಠೋ ದಿವಾಕರಃ ।**
**ಬ್ರಾಹ್ಮಣೋ ದ್ವಿಪದಾಂ ಶ್ರೇಷ್ಠೋ ದೇವಶ್ರೇಷ್ಠಸ್ತು ಮಾರುತಃ।'**
**'ವಾಯುರ್ಭೀಮೋ ಭೀಮನಾದೋ ಮಹೌಜಾಃ**
**ಸರ್ವೇಷಾಂ ಚ ಪ್ರಾಣಿನಾಂ ಪ್ರಾಣಭೂತಃ।**
**ಅನಾವೃತ್ತಿರ್ದೇಹಿನಾಂ ದೇಹಪಾತೇ**
**ತಸ್ಮಾದ್ ವಾಯುರ್ದೇವದೇವೋ ವಿಶಿಷ್ಟಃ॥'**
**'ಕ್ರತುಂ ಸಚಂತ ಮಾರುತಸ್ಯ ವೇಧಸಃ ।'**

**ಅನುವಾದ**—'ಅಶ್ವಮೇಧವು ಯಾಗಗಳಲ್ಲಿ ಶ್ರೇಷ್ಠ. ಜ್ಯೋತಿಗಳಲ್ಲಿ ಸೂರ್ಯನು ಶ್ರೇಷ್ಠ. ಎರಡು ಕಾಲಿನ ಪ್ರಾಣಿಗಳಲ್ಲಿ ಬ್ರಾಹ್ಮಣ ಶ್ರೇಷ್ಠ. ಹಾಗೆಯೇ ದೇವತೆಗಳಲ್ಲಿ ವಾಯುವು ಶ್ರೇಷ್ಠ'. 'ವಾಯುವು ಭಯಂಕರ. ಭಯಂಕರ ಗರ್ಜನೆ ಮಾಡುವವನು. ಮಹಾಬಲಶಾಲಿ. ಎಲ್ಲಾ ಪ್ರಾಣಿಗಳಿಗೂ ಪ್ರಾಣಪ್ರದ. ದೇಹಿಗಳ ದೇಹವು ಬೀಳಲು ವಾಯುವೇ ಕಾರಣ. ಆದ್ದರಿಂದ ವಾಯುವು ದೇವತೆಗಳ ಪ್ರಭು. ಅವರಿಗಿಂತ ಉತ್ತಮ'. 'ವರುಣಾದಿ ದೇವತೆಗಳು ವಾಯುದೇವರ ಪ್ರೀತಿಗಾಗಿ ಯಾಗವನ್ನು ಮಾಡಿದರು'.

**ಭಾಷ್ಯ—'ವಾಯೋರಾತ್ಮಾನಂ ಕವಯೋ ನಿಚಿಕ್ಯುಃ' 'ಆತ್ಮತ ಏಷ ಪ್ರಾಣೋ ಜಾಯತೇ' 'ಯೋ ವಾಯೌ ತಿಷ್ಠನ್' 'ದೇವಾನಾಂ ದೇವತಾ ವಾಯುರ್ವಾಯೋರ್ದೇವೋ ಜನಾರ್ದನಃ' 'ಸ ಪ್ರಾಣಮಸೃಜತ ಪ್ರಾಣಾಚ್ಛ್ರದ್ಧಾಮ್' 'ಏತಸ್ಮಾಜ್ಜಾಯತೇ ಪ್ರಾಣಃ'**

**ರುದ್ರಂ ಸಮಾಶ್ರಿತಾ ದೇವಾ ರುದ್ರೋ ಬ್ರಹ್ಮಾಣಮಾಶ್ರಿತಃ ।**
**ಬ್ರಹ್ಮಾ ಮಾಮಾಶ್ರಿತೋ ನಿತ್ಯಂ ನಾಹಂ ಕಂಚಿದುಪಾಶ್ರಿತಃ ।**
**ಇತ್ಯಾದಿಷು ಸರ್ವತ್ರ ।**

**ಅನುವಾದ**–'ಜ್ಞಾನಿಗಳು ವಿಷ್ಣುವನ್ನು ವಾಯುವಿನ ಪ್ರಭುವೆಂದು ತಿಳಿದರು'. 'ಮುಖ್ಯಪ್ರಾಣನು ವಿಷ್ಣುವಿನಿಂದ ಹುಟ್ಟುತ್ತಾನೆ'. 'ವಿಷ್ಣುವು ವಾಯುವಿನಲ್ಲಿದ್ದು ನಿಯಾಮಕನಾಗಿದ್ದಾನೆ'. ದೇವತೆಗಳಿಗೆ ನಿಯಾಮಕ ವಾಯು. ವಾಯುವಿಗೆ ನಿಯಾಮಕ ವಿಷ್ಣು'. 'ವಿಷ್ಣುವು ಪ್ರಾಣನನ್ನು ಸೃಷ್ಟಿಸಿದನು. ಅನಂತರ ಭಾರತಿಯನ್ನು ಸೃಷ್ಟಿಸಿದನು' 'ವಿಷ್ಣುವಿನಿಂದ ಮುಖ್ಯಪ್ರಾಣನು ಹುಟ್ಟುತ್ತಾನೆ.' 'ದೇವತೆಗಳೆಲ್ಲರೂ ರುದ್ರನನ್ನು ಆಶ್ರಯಿಸಿದ್ದಾರೆ. ರುದ್ರನು ಚತುರ್ಮುಖ ಬ್ರಹ್ಮನನ್ನು ಆಶ್ರಯಿಸಿದ್ದಾನೆ. ಚತುರ್ಮುಖನು ಯಾವಾಗಲೂ ನನ್ನನ್ನು ಆಶ್ರಯಿಸಿದ್ದಾನೆ. ನಾನು ಯಾರನ್ನೂ ಆಶ್ರಯಿಸಿಲ್ಲ'. ಇವೇ ಮೊದಲಾದ ಪ್ರಮಾಣಗಳಲ್ಲಿ ಎಲ್ಲ ಕಡೆ ವಾಯು ಮೊದಲಾದ ದೇವತೆಗಳು ಅಧಿಕಸಾಮರ್ಥ್ಯವುಳ್ಳವರೆಂದು ವರ್ಣಿತರಾಗಿರುವರು.

**ಭಾಷ್ಯ—ಶ್ರಿಯಃ ಪ್ರಸಾದಂ ಸ ಕುಶೇಶಯೇಶಯಃ**
**ಶ್ರಿತಃ ಸ ಚಿಂತ್ಯಃ ಪ್ರಶಶಂಸ ಶೌರಿಮ್ । ಇತ್ಯಾದಿ ಚ ।**

**ಅನುವಾದ**—'ಲಕ್ಷ್ಮಿಯ ಅನುಗ್ರಹವನ್ನು ಆಶ್ರಯಿಸಿರುವವ ಚತುರ್ಮುಖ. ಅವನು ಯಾವ ಶ್ರೀಕೃಷ್ಣನನ್ನು ಸ್ತುತಿಸಿದನೋ ಆ ಕೃಷ್ಣನನ್ನು ಧ್ಯಾನ ಮಾಡಬೇಕು' ಇತ್ಯಾದಿ ಪ್ರಮಾಣಗಳೂ ಕೂಡ ಲಕ್ಷ್ಮೀದೇವಿ ಬ್ರಹ್ಮಾದಿಗಳಿಗಿಂತ ಶ್ರೇಷ್ಠಳೂ, ಶ್ರೀಹರಿಗೆ ಅತ್ಯಂತ ಪ್ರಿಯಳೂ ಆಗಿರುವಳೆಂದು ಹೇಳುತ್ತವೆ.

**ಉಪನಿಷತ್—ಶಾಕಲ್ಯೇತಿ ಹೋವಾಚ ಯಾಜ್ಞವಲ್ಕ್ಯಃ । ತ್ವಾಂ ಸ್ವಿದ್ ಇಮೇ ಬ್ರಾಹ್ಮಣಾ ಅಂಗಾರಾವಕ್ರಯಣಮಕ್ರತಾ೩ ಇತಿ ।**

ಯಾಜ್ಞವಲ್ಕ್ಯರು ಹೇಳಿದರು 'ಶಾಕಲ್ಯ, ಈ ಬ್ರಾಹ್ಮಣರು ನಿಮ್ಮನ್ನು ಕಿಡಿಗಳನ್ನು ಅತ್ತಿತ್ತ ಚೆಲ್ಲುವ ಕೊಳ್ಳಿಯನ್ನಾಗಿ ಮಾಡಿದ್ದಾರೆ ಎಂದು ನನಗೆ ಅನಿಸುತ್ತದೆ. ಪಾಪ, ಅದು ನಿಮಗೆ ಗೊತ್ತಿಲ್ಲ'.

**ವಿವರಣೆ**—'ಈ ವಿದ್ವಾಂಸರ ಪ್ರೇರಣೆಯಿಂದ ವಾದಕ್ಕೆ ನಿಂತು ನೀವು ಬಹಳ ಅಬದ್ಧ ಪ್ರಶ್ನೆಗಳನ್ನು ಕೇಳುತ್ತಿದ್ದೀರಿ. ಕಿಡಿ ಉಗುಳುತ್ತ ಉರಿವ ಕೊಳ್ಳಿಯಂತೆ ಆಗಿರುವಿರಿ. ಆದರೆ ಉರಿವ ಕೊಳ್ಳಿ ಕಿಡಿಗಳನ್ನುಗುಳುತ್ತ ಜ್ವಲಿಸಿದರೂ ಕೊನೆಯಲ್ಲಿ

ತಾನೇ ನಷ್ಟವಾಗುತ್ತದೆ. ಬೇಡ, ಸಾಕು' ಎಂದು ದಯೆಯಿಂದ ಯಾಜ್ಞವಲ್ಕ್ಯರು ಹೇಳಿದರು.

ಅಕ್ರ ತಾ೩ ಎಂಬಲ್ಲಿ ಪ್ಲುತವು ದಯೆಯನ್ನು ಸೂಚಿಸುತ್ತದೆ.

**ದಿಗ್‌ದೇವತೆಗಳು ಮತ್ತು ಅವರಿಗೆ ಆಶ್ರಯದಾತರು :**

**ಉಪನಿಷತ್—ಯಾಜ್ಞವಲ್ಕ್ಯೇತಿ ಹೋವಾಚ ಶಾಕಲ್ಯಃ। ಯದಿದಂ ಕುರು ಪಾಂಚಾಲಾನಾಂ ಬ್ರಾಹ್ಮಣಾನತ್ಯವಾದೀಃ, ಕಿಂ ಬ್ರಹ್ಮ ವಿದ್ವಾನಿತಿ। ದಿಶೋ ವೇದ ಸದೇವಾಃ ಸಪ್ರತಿಷ್ಠಾ ಇತಿ।**

ಯಾಜ್ಞವಲ್ಕ್ಯರ ಹಿತ ನುಡಿಯನ್ನು ವಿಪರೀತವಾಗಿ ಗ್ರಹಿಸಿ ಶಾಕಲ್ಯನು ಹೇಳಿದನು, 'ಯಾಜ್ಞವಲ್ಕ್ಯರೇ, ನನ್ನನ್ನು ಉರಿಯುತ್ತಿರುವ ಕೊಳ್ಳಿಯನ್ನಾಗಿ ಮಾಡಿದರೆಂದು ಕುರು ಮತ್ತು ಪಾಂಚಾಲ ದೇಶದ ವಿದ್ವಾಂಸರನ್ನು ನೀವು ತಿರಸ್ಕರಿಸಿದ್ದೀರಿ. ತಾನೇ ಬ್ರಹ್ಮಜ್ಞಾನಿಯೆಂಬ ಭಾವನೆಯಿಂದ ಹೀಗೆ ಮಾಡಿದಿರಾ?' ಯಾಜ್ಞವಲ್ಕ್ಯರು ಹೇಳಿದರು, 'ಹೌದು. ನಾನು ಬ್ರಹ್ಮಜ್ಞಾನಿ. ಕೇವಲ ಬ್ರಹ್ಮಸ್ವರೂಪಮಾತ್ರದ ಜ್ಞಾನಿಯೇ ಅಲ್ಲ. ಅಭಿಮಾನಿದೇವತೆಗಳಿಂದ ಸಹಿತವಾಗಿ, ಆಧಾರ ಸಹಿತವಾಗಿ ಬ್ರಹ್ಮನನ್ನಾಶ್ರಯಿಸಿರುವ ದಿಕ್ಕುಗಳನ್ನೂ ತಿಳಿದಿದ್ದೇನೆ'.

**ಭಾಷ್ಯ—'ದಿಶೋ ವೇದ ಸದೇವಾಃ ಸಪ್ರತಿಷ್ಠಾಃ' ಇತಿ ಯಾಜ್ಞವಲ್ಕ್ಯವಚನಂ ಸರ್ವಪ್ರತಿಷ್ಠಾತ್ವೇನ ಬ್ರಹ್ಮಣೋಽಪಿ ಜ್ಞಾನಂ ಭವತೀತಿ 'ಕಿಂ ಬ್ರಹ್ಮ ವಿದ್ವಾನ್' ಇತ್ಯಸ್ಯ ಚೋತ್ತರಮ್।**

**ಅನುವಾದ**—'ಅಭಿಮಾನಿದೇವತೆಗಳಿಂದ ಸಹಿತವಾಗಿ ಆಧಾರ ಸಹಿತವಾಗಿ ದಿಕ್ಕುಗಳನ್ನು ತಿಳಿದಿದ್ದೇನೆ' ಎನ್ನುವ ಯಾಜ್ಞವಲ್ಕ್ಯರ ಮಾತು'ಕೇವಲ ಬ್ರಹ್ಮಜ್ಞಾನವಲ್ಲ, ಬ್ರಹ್ಮನು ಸರ್ವಾಧಾರ ಎಂಬ ಜ್ಞಾನವೂ ನನ್ನಲ್ಲಿ ಇದೆ' ಎಂದು ಹೇಳುವುದರಿಂದ 'ನೀನು ಬ್ರಹ್ಮಜ್ಞಾನಿಯೆ?' ಎಂಬ ಶಾಕಲ್ಯರ ಆಕ್ಷೇಪಕ್ಕೆ ಇದು ಉತ್ತರವೂ ಆಗುತ್ತದೆ.

**ಉಪನಿಷತ್—ಯದ್ ದಿಶೋ ವೇತ್ಥ ಸದೇವಾಃ ಸಪ್ರತಿಷ್ಠಾಃ, ಕಿಂ ದೇವತೋಽಸ್ಯಾಂ ಪ್ರಾಚ್ಯಾಂ ದಿಶ್ಯಸೀತಿ। ಆದಿತ್ಯದೇವತ ಇತಿ। ಸ ಆದಿತ್ಯಃ ಕಸ್ಮಿನ್ ಪ್ರತಿಷ್ಠಿತ ಇತಿ। ಚಕ್ಷುಷಿ ಇತಿ। ಕಸ್ಮಿನ್ ನು ಚಕ್ಷುಃ ಪ್ರತಿಷ್ಠಿತಮಿತಿ। ರೂಪೇಷು ಇತಿ। ಚಕ್ಷುಷಾ ಹಿ ರೂಪಾಣಿ ಪಶ್ಯತಿ। ಕಸ್ಮಿನ್ ನು ರೂಪಾಣಿ ಪ್ರತಿಷ್ಠಿತಾನಿ ಭವಂತೀತಿ। ಹೃದಯ ಇತಿ ಹೋವಾಚ। ಹೃದಯೇನ ಹಿ ರೂಪಾಣಿ ಜಾನಾತಿ। ಹೃದಯೇ ಹ್ಯೇವ**

**ರೂಪಾಣಿ ಪ್ರತಿಷ್ಠಿತಾನಿ ಭವಂತಿ ಇತಿ । ಏವಮೇವೈತದ್ ಯಾಜ್ಞವಲ್ಕ್ಯ ।**

ಶಾಕಲ್ಯನು ಕೇಳಿದನು, 'ದಿಕ್ಕುಗಳನ್ನೂ ಅವುಗಳ ಅಭಿಮಾನಿ ಮತ್ತು ಆಧಾರ ಭೂತರಾದ ದೇವತೆಗಳ ಸಹಿತ ನೀವು ತಿಳಿದಿದ್ದರೆ, ಪೂರ್ವ ದಿಕ್ಕಿಗೆ ಅಭಿಮಾನಿ ದೇವತೆ ಯಾರು ಎಂದು ತಿಳಿದಿದ್ದೀರಿ?' ಯಾಜ್ಞವಲ್ಕ್ಯರು ಹೇಳಿದರು 'ಆದಿತ್ಯನು ದೇವತೆ ಎಂದು ತಿಳಿದಿದ್ದೇನೆ'. 'ಆ ಆದಿತ್ಯನು ಎಲ್ಲಿ ಆಧಾರವನ್ನು ಹೊಂದಿದ್ದಾನೆ?' 'ಚಕ್ಷುರಭಿಮಾನಿಯಾದ ಸ್ವಾಯಂಭುವ ಮನುವಿನಲ್ಲಿ'. 'ಚಕ್ಷುರಭಿಮಾನಿ ಯಾರಲ್ಲಿ ಆಧಾರವನ್ನು ಹೊಂದಿದ್ದಾನೆ?' 'ರೂಪಾಭಿಮಾನಿ ಇಂದ್ರನಲ್ಲಿ. ಚಕ್ಷುರಭಿಮಾನಿಯ ಅನುಗ್ರಹದಿಂದಲೇ ಜನರು ರೂಪಾಭಿಮಾನಿಯನ್ನು ಕಾಣುತ್ತಾರಷ್ಟೆ?' 'ರೂಪಾಭಿ ಮಾನಿ ಎಲ್ಲಿ ಆಧಾರವನ್ನು ಹೊಂದಿದ್ದಾನೆ?' 'ಬುದ್ಧ್ಯಭಿಮಾನಿನಿ ಪಾರ್ವತಿಯಲ್ಲಿ, ರೂಪಾಭಿಮಾನಿ ಇಂದ್ರನ ಅನುಗ್ರಹದಿಂದಲೇ ಜೀವರು ಬುದ್ಧ್ಯಭಿಮಾನಿನಿ ಪಾರ್ವತಿ ಯನ್ನು ಕಾಣುತ್ತಾರಷ್ಟೆ ? ಆದ್ದರಿಂದ ರೂಪಾಭಿಮಾನಿ ಬುದ್ಧ್ಯಭಿಮಾನಿನಿಯಲ್ಲಿಯೆ ಆಧಾರ ಹೊಂದಿದ್ದಾನೆ'. 'ಯಾಜ್ಞವಲ್ಕ್ಯರೇ! ಇದು ಸರಿ'.

**ವಿವರಣೆ**—ಚಕ್ಷುಸ್ಸು ರೂಪವನ್ನು ಆಶ್ರಯಿಸುವುದು, ರೂಪವು ಹೃದಯ ವನ್ನು ಆಶ್ರಯಿಸುವುದು– ಇವೆರಡಕ್ಕೂ ಇನ್ನೊಂದು ಬಗೆಯಿಂದ ವಿವರಣೆ ಕೊಡ ಬಹುದು. 'ರೂಪಜ್ಞಾನಕ್ಕೆ ಒಂದು ಕರಣವಿರಲೇಬೇಕು. ಅದೇ ಚಕ್ಷುರಿಂದ್ರಿಯ' ಎಂಬ ಅನುಮಾನದಿಂದ ಚಕ್ಷುಸ್ಸು ಸಿದ್ಧವಾಗುವುದರಿಂದ ಚಕ್ಷುಸ್ಸು ತನ್ನ ಸ್ವರೂಪ ಸಿದ್ಧಿಗೆ ರೂಪವನ್ನಾಶ್ರಯಿಸಿದೆ. ರೂಪವು ತನ್ನ ಸ್ವರೂಪಸಿದ್ಧಿಗೆ ಸರ್ವಜ್ಞಾನ ಸಾಧನವಾದ ಹೃದಯವನ್ನು ಅವಲಂಬಿಸಿದೆ. ಹೀಗೆ ಜಡವಾದ ಚಕ್ಷುರಿಂದ್ರಿಯ ರೂಪ ಬುದ್ಧಿಗಳು ಒಂದನ್ನೊಂದು ಆಶ್ರಯಿಸಿರಲು ಅವುಗಳ ಅಭಿಮಾನಿಗಳು ಒಬ್ಬರನ್ನೊಬ್ಬರು ಆಶ್ರಯಿಸಿರುವುದೇ ಕಾರಣ. ಆದ್ದರಿಂದ ಮನು ಇಂದ್ರನಲ್ಲಿ, ಇಂದ್ರನು ಪಾರ್ವತಿಯಲ್ಲಿ ಆಶ್ರಯ ಹೊಂದಿದ್ದಾರೆ.

**ಭಾಷ್ಯ—ಯದಿ ದಿಶೋ ವೇತ್ಥ ತರ್ಹಿ ಕಿಂದೇವತೋಽಸ್ಯಾಮ್ ।**
**ಆದಿತ್ಯಸ್ಯಾಶ್ರಯಶ್ಚಕ್ಷುರ್ನಾಮಾ ಸ್ವಾಯಂಭುವೋ ಮನುಃ ।**
**ಚಕ್ಷುಃಸ್ಥೋ ದೃಷ್ಟಿಶಕ್ತೀಶೋ ರೂಪಾತ್ಮೇಂದ್ರಸ್ತದಾಶ್ರಯಃ।**
**ಬುದ್ಧಿತತ್ತ್ವಾತ್ಮಿಕೋಮಾ ಚ ಶಕ್ರಸ್ಯಾಪಿ ಸಮಾಶ್ರಯಃ ।**

**ಅನುವಾದ**—'ನೀವು ದಿಕ್ಕುಗಳನ್ನು ತಿಳಿದಿದ್ದರೆ' ಎಂಬ ಹಿಂದಿನ ಖಂಡದ ವಚನವನ್ನು 'ಈ ದಿಕ್‌ಗೆ ಯಾರು ಅಭಿಮಾನಿ ದೇವತೆ ಎಂದು ತಿಳಿದಿದ್ದೀರಿ?' ಎಂಬ ಮುಂದಿನ ಖಂಡದ ವಚನದೊಂದಿಗೆ ಅನ್ವಯಿಸಿಕೊಳ್ಳಬೇಕು. ಆದಿತ್ಯನಿಗೆ, ದೃಷ್ಟಿ ಶಕ್ತಿ ನಿಯಾಮಕನಾಗಿ ಕಣ್ಣಿನಲ್ಲಿ ಇರುವ ಚಕ್ಷುರ್ನಾಮಕ ಸ್ವಾಯಂಭುವಮನುವು

ಆಶ್ರಯ. ಮನುವಿಗೆ ರೂಪಾಭಿಮಾನಿಯಾದ ಇಂದ್ರನು ಆಶ್ರಯ. ಇಂದ್ರನಿಗೆ ಬುದ್ಧಿಗೆ ಅಭಿಮಾನಿನಿಯಾದ ಪಾರ್ವತಿಯು ಆಶ್ರಯ.

**ಉಪನಿಷತ್—ಕಿಂದೇವತೋಽಸ್ಯಾಂ ದಕ್ಷಿಣಾಯಾಂ ದಿಶ್ಯಸೀತಿ । ಯಮ-ದೇವತ ಇತಿ । ಸ ಯಮಃ ಕಸ್ಮಿನ್ ಪ್ರತಿಷ್ಠಿತ ಇತಿ । ಯಜ್ಞ ಇತಿ । ಕಸ್ಮಿನ್ ನು ಯಜ್ಞಃ ಪ್ರತಿಷ್ಠಿತ ಇತಿ । ದಕ್ಷಿಣಾಯಾಮಿತಿ । ಕಸ್ಮಿನ್ ನು ದಕ್ಷಿಣಾ ಪ್ರತಿಷ್ಠಿತೇತಿ । ಶ್ರದ್ಧಾಯಾಮಿತಿ । ಯದಾ ಹ್ಯೇವ ಶ್ರದ್ಧತ್ತೇಽಥ ದಕ್ಷಿಣಾಂ ದದಾತಿ । ಶ್ರದ್ಧಾಯಾಂ ಹ್ಯೇವ ದಕ್ಷಿಣಾ ಪ್ರತಿಷ್ಠಿತೇತಿ । ಕಸ್ಮಿನ್ ನು ಶ್ರದ್ಧಾ ಪ್ರತಿಷ್ಠಿತೇತಿ । ಹೃದಯ ಇತಿ ಹೋವಾಚ । ಹೃದಯೇನ ಹಿ ಶ್ರದ್ಧಾಂ ಜಾನಾತಿ । ಹೃದಯೇ ಹ್ಯೇವ ಶ್ರದ್ಧಾ ಪ್ರತಿಷ್ಠಿತಾ ಭವತೀತಿ। ಏವಮೇವೈತದ್ ಯಾಜ್ಞವಲ್ಕ್ಯ ।**

'ಈ ದಕ್ಷಿಣ ದಿಕ್ಕಿನ ಅಭಿಮಾನಿದೇವತೆ ಯಾರು ಎಂದು ತಿಳಿದಿದ್ದೀರಿ ?' 'ಯಮನು ಅಭಿಮಾನಿದೇವತೆ ಎಂದು ತಿಳಿದಿದ್ದೇನೆ'. 'ಆ ಯಮನು ಎಲ್ಲಿ ಆಧಾರವನ್ನು ಪಡೆದಿದ್ದಾನೆ?' 'ಯಜ್ಞಾಭಿಮಾನಿಯಾದ ಅನಿರುದ್ಧನಲ್ಲಿ'. 'ಅನಿರುದ್ಧನು ಎಲ್ಲಿ ಆಶ್ರಯ ಪಡೆದಿದ್ದಾನೆ?' 'ದಕ್ಷಿಣಾಭಿಮಾನಿನಿಯಾದ ರತಿದೇವಿಯಲ್ಲಿ'. 'ರತಿಯು ಎಲ್ಲಿ ಆಶ್ರಯ ಪಡೆದಿದ್ದಾಳೆ?' 'ಶ್ರದ್ಧೆಗೆ ಅಭಿಮಾನಿಯಾದ ಕಾಮನಲ್ಲಿ. ಏಕೆಂದರೆ ಶ್ರದ್ಧೆಯನ್ನು ಹೊಂದಿದಾಗಲೇ ದಕ್ಷಿಣೆಯನ್ನು ಕೊಡುತ್ತಾರೆ. ಆದ್ದರಿಂದ ಶ್ರದ್ಧಾಭಿಮಾನಿಯಾದ ಕಾಮನಲ್ಲಿ ದಕ್ಷಿಣಾಭಿಮಾನಿನಿಯಾದ ರತಿಯು ಆಶ್ರಯ ಪಡೆದಿದ್ದಾಳೆ.' 'ಕಾಮನು ಎಲ್ಲಿ ಆಶ್ರಯ ಪಡೆದಿದ್ದಾನೆ?' 'ಬುದ್ಧಿಗೆ ಅಭಿಮಾನಿನಿಯಾದ ಪಾರ್ವತಿಯಲ್ಲಿ. ಬುದ್ಧಿಗೆ ಅಭಿಮಾನಿನಿಯಾದ ಪಾರ್ವತಿಯಿಂದಲೇ ಶ್ರದ್ಧೆಯನ್ನು ತಿಳಿಯುತ್ತಾನೆ. ಆದ್ದರಿಂದ ಹೃದಯಾಭಿಮಾನಿನಿಯಲ್ಲೇ ಶ್ರದ್ಧಾಭಿಮಾನಿಯು ಆಶ್ರಯ ಪಡೆದಿದ್ದಾನೆ'. 'ಯಾಜ್ಞವಲ್ಕ್ಯರೇ ! ಇದು ಸರಿ'.

**ಭಾಷ್ಯ—ಏವಂ ಯಮಸ್ಯಾಶ್ರಯಶ್ಚ ಯಜ್ಞಮಾನ್ಯನಿರುದ್ಧಕಃ ।**
**ದಕ್ಷಿಣಾಮಾನಿನೀ ದೇವೀ ರತಿರೇವ ತದಾಶ್ರಯಃ ।**
**ಶ್ರದ್ಧಾರೂಪಃ ಸದಾ ಕಾಮಸ್ತಸ್ಯಾ ಅಪಿ ಸಮಾಶ್ರಯಃ ।**
**ಹೃದಯಾತ್ಮಿಕ್ಯುಮಾ ತಸ್ಯ ಕಾಮಸ್ಯಾಪಿ ಸಮಾಶ್ರಯಃ ।**

**ಅನುವಾದ**—ಹೀಗೆಯೇ ಯಮನಿಗೆ ಯಜ್ಞಾಭಿಮಾನಿಯಾದ ಅನಿರುದ್ಧನು ಆಶ್ರಯ. ಅನಿರುದ್ಧನು ರತಿಗೆ ಸಮಾನನಾದರೂ ರತಿಪುತ್ರನಾದ್ದರಿಂದ ಅವನಿಗೆ ದಕ್ಷಿಣಾಭಿಮಾನಿನಿಯಾದ ರತಿಯು ಆಶ್ರಯ. ರತಿಗೆ ಶ್ರದ್ಧಾಭಿಮಾನಿಯಾದ

ಕಾಮನು ಆಶ್ರಯ. ಕಾಮನಿಗೆ ಹೃದಯಾಭಿಮಾನಿನಿಯಾದ ಪಾರ್ವತಿಯು ಆಶ್ರಯ.

**ಉಪನಿಷತ್—ಕಿಂದೇವತೋಽಸ್ಯಾಂ ಪ್ರತೀಚ್ಯಾಂ ದಿಶ್ಯಸೀತಿ । ವರುಣದೇವತ ಇತಿ । ಸ ವರುಣಃ ಕಸ್ಮಿನ್ ಪ್ರತಿಷ್ಠಿತ ಇತಿ । ಅಪ್ಸು ಇತಿ । ಕಸ್ಮಿನ್ ನು ಆಪಃ ಪ್ರತಿಷ್ಠಿತಾ ಇತಿ । ರೇತಸೀತಿ । ಕಸ್ಮಿನ್ನು ರೇತಃ ಪ್ರತಿಷ್ಠಿತಮಿತಿ । ಹೃದಯ ಇತಿ । ತಸ್ಮಾದಪಿ ಪ್ರತಿರೂಪಂ ಜಾತಮಾಹುರ್ಹೃದಯಾದಿವ ಸೃಪ್ತೋ ಹೃದಯಾದಿವ ನಿರ್ಮಿತ ಇತಿ । ಹೃದಯೇ ಹ್ಯೇವಾ ರೇತಃ ಪ್ರತಿಷ್ಠಿತಂ ಭವತೀತಿ । ಏವಮೇವೈತದ್ ಯಾಜ್ಞವಲ್ಕ್ಯ ।**

'ಈ ಪಶ್ಚಿಮದಿಕ್ಕಿನ ಅಭಿಮಾನಿದೇವತೆ ಯಾರು ಎಂದು ತಿಳಿದಿದ್ದೀರಿ?' 'ವರುಣನು ದೇವತೆ ಎಂದು ತಿಳಿದಿದ್ದೇನೆ'. 'ಆ ವರುಣನು ಎಲ್ಲಿ ಆಶ್ರಯ ಪಡೆದಿದ್ದಾನೆ?' 'ನೀರಿನ ಅಭಿಮಾನಿಯಾದ ಚಂದ್ರನಲ್ಲಿ'. 'ಚಂದ್ರನು ಎಲ್ಲಿ ಆಶ್ರಯ ಪಡೆದಿದ್ದಾನೆ?' 'ರೇತಸ್‌ಗೆ ಅಭಿಮಾನಿಯಾದ ಬೃಹಸ್ಪತಿಯಲ್ಲಿ'. 'ರೇತಸ್‌ನ ಅಭಿಮಾನಿ ದೇವತೆಯು ಎಲ್ಲಿ ಆಶ್ರಯ ಪಡೆದಿದ್ದಾನೆ?' 'ಹೃದಯಾಭಿಮಾನಿನಿಯಾದ ಪಾರ್ವತಿಯಲ್ಲಿ. ಆದ್ದರಿಂದಲೇ ತಂದೆಗೆ ಪ್ರತಿರೂಪನಾಗಿ ಹುಟ್ಟಿದ ಮಗನನ್ನು ತಂದೆಯ ಹೃದಯದಿಂದಲೇ ಹೊರಬಂದವನಂತೆ, ಹೃದಯದಿಂದಲೇ ನಿರ್ಮಿಸಲ್ಪಟ್ಟವನಂತೆ ಎಂದು ಜನರು ಹೇಳುತ್ತಾರೆ. ಆದ್ದರಿಂದ ಹೃದಯಾಭಿಮಾನಿನಿಯಾದ ಪಾರ್ವತಿಯಲ್ಲಿ ರೇತಸ್‌ನ ಅಭಿಮಾನಿಯು ಆಶ್ರಯ ಪಡೆದಿದ್ದಾನೆ'. 'ಯಾಜ್ಞವಲ್ಕ್ಯರೇ ! ಇದು ಸರಿ'.

**ಭಾಷ್ಯ—ಅಬ್ದೇವತಾ ಸದಾ ಚಂದ್ರೋ ವರುಣಸ್ಯ ಸಮಾಶ್ರಯಃ ।**
**ರೇತಆತ್ಮಾ ಸುರಗುರುಃ ಸೋಮಸ್ಯಾಪಿ ಸಮಾಶ್ರಯಃ ।**
**ತಸ್ಯಾಪ್ಯುಮೈವಾಶ್ರಯಃ ಸ್ಯಾತ್............।**

**ಅನುವಾದ**—ವರುಣನಿಗೆ ನೀರಿನ ಅಭಿಮಾನಿಯಾದ ಚಂದ್ರನು ಯಾವಾಗಲೂ ಆಶ್ರಯ. ಚಂದ್ರನಿಗೆ ರೇತಸ್ಸಿನ ಅಭಿಮಾನಿಯಾದ ಬೃಹಸ್ಪತಿಯು ಆಶ್ರಯ. ಬೃಹಸ್ಪತಿಗೆ ಪಾರ್ವತಿಯು ಆಶ್ರಯ.

**ಉಪನಿಷತ್—ಕಿಂದೇವತೋಽಸ್ಯಾಮುದೀಚ್ಯಾಂ ದಿಶ್ಯಸೀತಿ । ಸೋಮದೇವತ ಇತಿ । ಸ ಸೋಮಃ ಕಸ್ಮಿನ್ ಪ್ರತಿಷ್ಠಿತ ಇತಿ। ದೀಕ್ಷಾಯಾಮಿತಿ। ಕಸ್ಮಿನ್ ನು ದೀಕ್ಷಾ ಪ್ರತಿಷ್ಠಿತೇತಿ । ಸತ್ಯ ಇತಿ । ತಸ್ಮಾದಪಿ ದೀಕ್ಷಿತಮಾಹುಃ ಸತ್ಯಂ ವದೇತಿ । ಸತ್ಯೇ ಹ್ಯೇವ ದೀಕ್ಷಾ ಪ್ರತಿಷ್ಠಿತೇತಿ । ಕಸ್ಮಿನ್ ನು ಸತ್ಯಂ**

**ಪ್ರತಿಷ್ಠಿತಮ್ ಇತಿ । ಹೃದಯ ಇತಿ ಹೋವಾಚ । ಹೃದಯೇನ ಹಿ ಸತ್ಯಂ ಜಾನಾತಿ । ಹೃದಯೇ ಹ್ಯೇವ ಸತ್ಯಂ ಪ್ರತಿಷ್ಠಿತಂ ಭವತಿ ಇತಿ । ಏವಮೇವೈತದ್ ಯಾಜ್ಞವಲ್ಕ್ಯ ।**

'ಉತ್ತರ ದಿಕ್ಕಿನ ಅಭಿಮಾನಿದೇವತೆ ಯಾರು ಎಂದು ತಿಳಿದಿದ್ದೀರಿ?' 'ಚಂದ್ರನು ಅಭಿಮಾನಿದೇವತೆ ಎಂದು ತಿಳಿದಿದ್ದೇನೆ'. 'ಚಂದ್ರನು ಎಲ್ಲಿ ಆಶ್ರಯ ಪಡೆದಿದ್ದಾನೆ?' 'ದೀಕ್ಷಾಭಿಮಾನಿನಿಯಾದ ಶತರೂಪಾದೇವಿಯಲ್ಲಿ'. 'ದೀಕ್ಷಾಭಿಮಾನಿನಿಯು ಎಲ್ಲಿ ಆಶ್ರಯ ಪಡೆದಿದ್ದಾಳೆ?' 'ಸತ್ಯಾಭಿಮಾನಿಯಾದ ಸ್ವಾಯಂಭುವ ಮನುವಿನಲ್ಲಿ. ಆದ್ದರಿಂದಲೇ ದೀಕ್ಷೆಪಡೆದವನನ್ನು ಕುರಿತು 'ಸತ್ಯವನ್ನೇ ಹೇಳು' ಎಂದು ಹೇಳುತ್ತಾರೆ. ಆದ್ದರಿಂದ ಸತ್ಯಾಭಿಮಾನಿಯಲ್ಲಿಯೇ ದೀಕ್ಷಾಭಿಮಾನಿನಿಯು ಆಶ್ರಯ ಪಡೆದಿದ್ದಾಳೆ'. 'ಸತ್ಯಾಭಿಮಾನಿ ಎಲ್ಲಿ ಆಶ್ರಯ ಪಡೆದಿದ್ದಾನೆ?' 'ಹೃದಯಾಭಿಮಾನಿನಿಯಾದ ಪಾರ್ವತಿಯಲ್ಲಿ. ಹೃದಯದಿಂದಲೇ ಸತ್ಯವನ್ನು ತಿಳಿಯುತ್ತಾನೆ. ಆದ್ದರಿಂದ ಹೃದಯದಲ್ಲೇ ಸತ್ಯವು ಆಶ್ರಯವನ್ನು ಪಡೆದಿದೆ'. 'ಯಾಜ್ಞವಲ್ಕ್ಯರೇ! ಇದು ಸರಿ'.

**ಭಾಷ್ಯ—.........ತಸ್ಯೈವ ತು ದಿಗೀಶಿತುಃ ।**
**ಸೋಮಸ್ಯ ದೀಕ್ಷಾರೂಪಾ ತು ಶತರೂಪಾ ಸಮಾಶ್ರಯಃ ।**
**ತಸ್ಯಾಃ ಸತ್ಯಾತ್ಮಕೋ ದೇವೋ ಮನುರೇವ ಸಮಾಶ್ರಯಃ ।**
**ತಸ್ಯಾಪ್ಯುಮೈವಾಶ್ರಯಃ ಸ್ಯಾತ್ ಸ್ರಷ್ಟೃರೂಪಸ್ಯ ನಿತ್ಯದಾ ।**

**ಅನುವಾದ**—ಒಂದು ರೂಪದಲ್ಲಿ ಬೃಹಸ್ಪತಿಯನ್ನಾಶ್ರಯಿಸಿರುವ ಅದೇ ಚಂದ್ರನಿಗೆ, ಉತ್ತರದಿಕ್ಕಿನ ಅಭಿಮಾನಿಯಾದ ಇನ್ನೊಂದು ರೂಪದಲ್ಲಿ ದೀಕ್ಷಾಭಿಮಾನಿನಿಯಾದ ಶತರೂಪಾದೇವಿಯು ಆಶ್ರಯ. ಅವಳಿಗೆ ಸತ್ಯಾಭಿಮಾನಿಯಾದ ಸೃಷ್ಟಿಕರ್ತೃರೂಪದಲ್ಲಿರುವ ಸ್ವಾಯಂಭುವಮನುವು ಆಶ್ರಯ. ಸ್ವಾಯಂಭುವ ಮನುವಿಗೆ ಪಾರ್ವತಿಯೇ ಸದಾ ಆಶ್ರಯ.

**ವಿವರಣೆ**—ಸೋಮ ಶತರೂಪೆಯರು ಸಮಾನರೇ ಆದರೂ ಸ್ವೇಚ್ಛೆಯಿಂದ ಒಬ್ಬರು ಒಬ್ಬರನ್ನಾಶ್ರಯಿಸಬಹುದು. ಅಥವಾ ಕಾಮಸಮಾನನೆನಿಸಿದ ಇಂದ್ರನು ಕಾಮನಿಗಿಂತ ಸ್ವಲ್ಪ ಶ್ರೇಷ್ಠ ಹೇಗೋ ಹಾಗೆ ಶತರೂಪೆ ಸೋಮನಿಗಿಂತ ಸ್ವಲ್ಪ ಶ್ರೇಷ್ಠಳೆಂದೂ ಗ್ರಹಿಸಬಹುದು.

**ಉಪನಿಷತ್—ಕಿಂದೇವತೋऽಸ್ಯಾಂ ಧ್ರುವಾಯಾಂ ದಿಶ್ಯಸೀತಿ । ಅಗ್ನಿದೇವತ ಇತಿ । ಸೋऽಗ್ನಿಃ ಕಸ್ಮಿನ್ ನು ಪ್ರತಿಷ್ಠಿತ ಇತಿ । ವಾಚೀತಿ । ಕಸ್ಮಿನ್**

ನು ವಾಕ್ ಪ್ರತಿಷ್ಠಿತೇತಿ । ಹೃದಯ ಇತಿ । ಕಸ್ಮಿನ್ ನು ಹೃದಯಂ ಪ್ರತಿಷ್ಠಿತಮಿತಿ ।

'ಪೂರ್ವದಕ್ಷಿಣಗಳ ಮಧ್ಯದಲ್ಲಿರುವ ದಿಕ್ಕಿಗೆ ಅಭಿಮಾನಿ ದೇವತೆ ಯಾರು ಎಂದು ತಿಳಿದಿದ್ದೀರಿ?' 'ಅಗ್ನಿಯು ಅಭಿಮಾನಿದೇವತೆ ಎಂದು ತಿಳಿದಿದ್ದೇನೆ', 'ಆ ಅಗ್ನಿಯು ಎಲ್ಲಿ ಆಶ್ರಯ ಪಡೆದಿದ್ದಾನೆ?' 'ವಾಕ್‌ನ ಅಭಿಮಾನಿಯಾದ ಬೃಹಸ್ಪತಿಯಲ್ಲಿ'. 'ವಾಕ್‌ನ ಅಭಿಮಾನಿಯು ಎಲ್ಲಿ ಆಶ್ರಯ ಪಡೆದಿದ್ದಾನೆ?' 'ಹೃದಯಾಭಿಮಾನಿನಿ ಪಾರ್ವತಿಯಲ್ಲಿ'. 'ಪಾರ್ವತಿಯು ಎಲ್ಲಿ ಆಶ್ರಯಪಡೆದಿದ್ದಾಳೆ?'

**ಭಾಷ್ಯ—ಮಧ್ಯದಿಕ್‌ಸ್ವಾಮಿನೋಽಗ್ನೇಶ್ಚ ಸ್ವಾಧಾರೋ ವಾಗ್ ಬೃಹಸ್ಪತಿಃ ।**
**ತಸ್ಯಾಪ್ಯುಮೈವ ಹೃದಯರೂಪಾ ನಿತ್ಯಂ ಸಮಾಶ್ರಯಃ ।**

**ಅನುವಾದ**—ಮಧ್ಯ ದಿಕ್ಕಿನ ಅಭಿಮಾನಿಯಾದ ಅಗ್ನಿಗೆ 'ವಾಕ್'ನ ಅಭಿಮಾನಿಯಾದ ಬೃಹಸ್ಪತಿಯು ಆಶ್ರಯ.ಅವನಿಗೆ ಹೃದಯಾಭಿಮಾನಿನಿಯಾದ ಪಾರ್ವತಿಯು ಆಶ್ರಯ.

**ಯಾಜ್ಞವಲ್ಕ್ಯರೊಡನೆ ವಾದದಲ್ಲಿ ಶಾಕಲ್ಯನ ಸೋಲು :**

**ಉಪನಿಷತ್—ಅಹಲ್ಲಿಕೇತಿ ಹೋವಾಚ ಯಾಜ್ಞವಲ್ಕ್ಯಃ ಯತ್ರ ಏತದ್ ಅನ್ಯತ್ರ ಅಸ್ಮನ್ಮನ್ಯಾಸೈ । ಯದ್ ಹಿ ಏತದ್ ಅನ್ಯತ್ರ ಅಸ್ಮತ್ ಸ್ಯಾತ್ ಶ್ವಾನೋ ವಾ ಏನದ್ ಅದ್ಯುಃ ವಯಾಂಸಿ ವಾ ಏನದ್ ವಿಮಥ್ನೀರನ್ ಇತಿ ।**

'ಅಜ್ಞನೆ, ಬುದ್ಧ್ಯಭಿಮಾನಿನಿಯಾದ ಪಾರ್ವತಿಯು ಅಹಂಕಾರಾಭಿಮಾನಿಯಾದ ರುದ್ರನನ್ನು ಆಶ್ರಯಿಸಿದ್ದಾಳೆ ಎಂಬುದನ್ನು ತಿಳಿಯದೆ ಪ್ರಶ್ನಿಸುತ್ತಿದ್ದಿ. ಬುದ್ಧ್ಯಭಿಮಾನಿನಿ ಅಹಂಕಾರಾಭಿಮಾನಿಯಾದ ರುದ್ರನನ್ನು ಆಶ್ರಯಿಸದಿರುತ್ತಿದ್ದರೆ, ಅವಳಿಗೆ ಬುದ್ಧಿ ಉಂಟುಮಾಡುವ ಶಕ್ತಿ ಇಲ್ಲದೆ ಯಾರಿಗೂ ತಮ್ಮ ಶರೀರವನ್ನು ರಕ್ಷಿಸಿಕೊಳ್ಳುವ ಬುದ್ಧಿಯೇ ಬರುತ್ತಿರಲಿಲ್ಲ. ಶರೀರವನ್ನು ನಾಯಿಗಳು ತಿಂದು ಹಾಕುತ್ತಿದ್ದವು. ಪಕ್ಷಿಗಳು ಕಿತ್ತು ಎಳೆಯುತ್ತಿದ್ದವು.

**ಭಾಷ್ಯ—ತಸ್ಯಾಃ ಸಮಾಶ್ರಯೋ ರುದ್ರಸ್ತ್ವಮಹಂ ಚೇತಿ ರೂಪವಾನ್ ।**
**ಅಹಂಕಾರಾತ್ಮಕೋ ನಿತ್ಯಮಾತ್ಮೋಽಮಾ ಪರಿಕೀರ್ತಿತಾ ।**
**ಬುದ್ಧ್ಯಾತ್ಮನೈವಾಽತತತ್ವಾದ್ ಯದ್ಯಸ್ಯಾ ನಾಶ್ರಯೋ ಹರಃ।**

**ತದಾ ಬೋಧಾತ್ಮಿಕಾ ಶಕ್ತಿರ್ನಾಸ್ಯಾ ದೇಹಾಭಿರಕ್ಷಣೇ ।**
**ಅರಕ್ಷಿತಾನ್ ಮಾನುಷಾದೀನ್ ಶ್ವಾನೋ ವ್ಯಾದ್ಯುರ್ವಯಾಂಸಿ ವಾ।**

**ಅನುವಾದ**—ಅಹಂಕಾರಾಭಿಮಾನಿಯಾದ್ದರಿಂದ ನೀನು ನಾನು ಎಂಬ ಶಬ್ದಗಳಿಂದ ವಾಚ್ಯನಾದ ರುದ್ರನು ಪಾರ್ವತಿಗೆ ಯಾವಾಗಲೂ ಆಶ್ರಯ. ಬುದ್ಧಿಗೆ ಅಭಿಮಾನಿನಿಯಾಗಿ ಅತತ ಅಂದರೆ ಎಲ್ಲ ಕಡೆ ವ್ಯಾಪಿಸಿ ಇರುವುದರಿಂದ ಪಾರ್ವತಿಯು ಆತ್ಮಾ ಎನಿಸಿದ್ದಾಳೆ. ಇವಳಿಗೆ ರುದ್ರನು ಆಶ್ರಯನಾಗದೆ ಇದ್ದಿದ್ದರೆ ಇವಳಿಗೆ ಜೀವರಲ್ಲಿ ದೇಹರಕ್ಷಣೆಗೆ ಆವಶ್ಯಕವಾದ ಬುದ್ಧಿ ಉಂಟುಮಾಡುವ ಶಕ್ತಿಯು ಇಲ್ಲವಾಗುತ್ತಿತ್ತು. ಆಗ ಅರಕ್ಷಿತವಾದ ಮನುಷ್ಯಾದಿದೇಹಗಳನ್ನು ನಾಯಿಗಳು ಅಥವಾ ಪಕ್ಷಿಗಳು ತಿಂದುಹಾಕುತ್ತಿದ್ದವು.

**ಉಪನಿಷತ್**—**ಕಸ್ಮಿನ್ ನು ತ್ವಂ ಚಾತ್ಮಾ ಚ ಪ್ರತಿಷ್ಠಿತೌ ಸ್ಥ ಇತಿ । ಪ್ರಾಣ ಇತಿ । ಕಸ್ಮಿನ್ ನು ಪ್ರಾಣಃ ಪ್ರತಿಷ್ಠಿತ ಇತಿ । ಅಪಾನ ಇತಿ । ಕಸ್ಮಿನ್ ಅಪಾನಃ ಪ್ರತಿಷ್ಠಿತ ಇತಿ। ವ್ಯಾನ ಇತಿ। ಕಸ್ಮಿನ್ ವ್ಯಾನಃ ಪ್ರತಿಷ್ಠಿತ ಇತಿ । ಉದಾನ ಇತಿ । ಕಸ್ಮಿನ್ ಉದಾನಃ ಪ್ರತಿಷ್ಠಿತ ಇತಿ । ಸಮಾನ ಇತಿ । ಸ ಏಷ ನೇತಿ।ನೇತಿ।ಆತ್ಮಾ ಅಗೃಹ್ಯೋ ನ ಹಿ ಗೃಹ್ಯತೇ। ಅಶೀರ್ಯೋ ನ ಹಿ ಶೀರ್ಯತೇ। ಅಸಂಗೋ ನ ಹಿ ಸಜ್ಜತೇ ।ಅಸಿತೋ ನ ವ್ಯಥತೇ। ನ ರಿಷ್ಯತಿ । ಏತಾವಷ್ಟಾವಾಯತನಾನಿ। ಅಷ್ಟೌ ಲೋಕಾಃ। ಅಷ್ಟೌ ದೇವಾಃ। ಅಷ್ಟೌ ಪುರುಷಾಃ । ಸ ಯಸ್ತಾನ್ ಪುರುಷಾನ್ ನಿರೂಹ್ಯ ಪ್ರತ್ಯೂಹ್ಯ ಅತ್ಯಕ್ರಾಮತ್ ತಂ ತ್ವೌಪನಿಷದಂ ಪುರುಷಂ ಪೃಚ್ಛಾಮಿ । ತಂ ಚೇತ್ ಮೇ ನ ವಿವಕ್ಷ್ಯಸಿ, ಮೂರ್ಧಾ ತೇ ವಿಪತಿಷ್ಯತೀತಿ । ತಂ ಹ ನ ಮೇನೇ ಶಾಕಲ್ಯಃ। ತಸ್ಯ ಹ ಮೂರ್ಧಾ ವಿಪಪಾತ । ಅಪಿ ಹಾಸ್ಯ ಪರಿಮೋಷಿಣೋಽಸ್ಥೀನ್ಯಪಜಹ್ರುರನ್ಯತ್ ಮನ್ಯಮಾನಾಃ ।**

'ಅಹಂಕಾರಾಭಿಮಾನಿಯಾದ ರುದ್ರ ಮತ್ತು ಬುದ್ಧಿತತ್ತ್ವಾಭಿಮಾನಿನಿಯಾದ ಪಾರ್ವತಿಯು ಎಲ್ಲಿ ಆಶ್ರಯ ಪಡೆದಿದ್ದಾರೆ?' 'ಪ್ರಾಣನಾಮಕ ಶೇಷನಲ್ಲಿ'. 'ಶೇಷನು ಎಲ್ಲಿ ಆಶ್ರಯ ಪಡೆದಿದ್ದಾನೆ?' 'ಅಪಾನ ನಾಮಕ ಭಾರತೀದೇವಿಯಲ್ಲಿ'. 'ಭಾರತಿಯು ಎಲ್ಲಿ ಆಶ್ರಯ ಪಡೆದಿದ್ದಾಳೆ ?' 'ವ್ಯಾನನಾಮಕ ವಾಯುವಿನಲ್ಲಿ'. 'ವ್ಯಾನನು ಎಲ್ಲಿ ಆಶ್ರಯ ಪಡೆದಿದ್ದಾನೆ?' 'ಉದಾನನಾಮಕ ಶ್ರೀದೇವಿಯಲ್ಲಿ'. 'ಶ್ರೀದೇವಿಯು ಎಲ್ಲಿ ಆಶ್ರಯ ಪಡೆದಿದ್ದಾಳೆ?' 'ಸಮಾನನಾಮಕ ಹರಿಯಲ್ಲಿ. ಆ ಸಮಾನನಾಮಕ ಹರಿಯು ಮುಕ್ತಳಾದ ಶ್ರೀದೇವಿಯಂತೆಯೂ ಅಲ್ಲ.ಬದ್ಧರಾದ ಬ್ರಹ್ಮಾದಿಗಳಂತೆಯೂ ಅಲ್ಲ. ಏಕೆಂದರೆ ಅವನು ಯಾರಿಂದಲೂ ಪೂರ್ಣವಾಗಿ ತಿಳಿಯಲಾಗದವ. ಅವನು ಸಂಪೂರ್ಣವಾಗಿ ತಿಳಿಯಲ್ಪಡುತ್ತಾನೆ ಎಂಬ ವಿಷಯದಲ್ಲಿ ಪ್ರಮಾಣವಿಲ್ಲ. ಅವನು

ಕಾಲದಿಂದಾಗಲೀ ಅಥವಾ ಬೇರೆ ಕಾರಣಗಳಿಂದಾಗಲೀ ಎಂದೂ ಹಿಂಸೆ ಇಲ್ಲದವನು ಏಕೆಂದರೆ ಹಿಂಸೆಗೊಳಗಾಗುತ್ತಾನೆ ಎಂಬ ವಿಷಯದಲ್ಲಿ ಪ್ರಮಾಣವಿಲ್ಲ. ಪ್ರಪಂಚದ ಜೊತೆ ಸಂಪರ್ಕ ಹೊಂದಿದ್ದರೂ ಪ್ರಪಂಚದ ದೋಷಗಳ ಲೇಪವಿಲ್ಲದವನು. ಏಕೆಂದರೆ ದೋಷಲೇಪವಿದೆ ಎನ್ನಲು ಪ್ರಮಾಣವಿಲ್ಲ. ಸ್ವತಃ ಬಂಧನವಿಲ್ಲದವನು. ಏಕೆಂದರೆ ದುಃಖವಿದೆ ಎನ್ನಲು ಪ್ರಮಾಣವಿಲ್ಲ. ಯಾರು ಕಾಲದಲ್ಲಿಯೂ ನಾಶ ವಿಲ್ಲದವನು. ಏಕೆಂದರೆ ನಾಶವುಳ್ಳವನೆನ್ನಲೂ ಪ್ರಮಾಣವಿಲ್ಲ. ಇವೇ ಎಂಟು ಆಯತನಗಳು, ಇವೇ ಎಂಟು ಲೋಕಗಳು, ಇವರೇ ಎಂಟು ದೇವತೆಗಳು, ಇವರೇ ಎಂಟು ಪುರುಷರು. ಇವರುಗಳಿಂದ ಹೊರಗೆ ಮತ್ತು ಇವರುಗಳ ಒಳಗೆ ನಿಯಾಮಕ ನಾಗಿ ಮತ್ತು ಇವರುಗಳನ್ನು ಮೀರಿ ಪ್ರಸಿದ್ಧನಾದವನು ಯಾರು ಇರುವನೋ, ಕೇವಲ ಉಪನಿಷತ್ತುಗಳಿಂದಲೇ ಗಮ್ಯನಾದ ಆ ಪರಮಾತ್ಮನ ಬಗ್ಗೆ ನಿನ್ನನ್ನು ಕೇಳುತ್ತೇನೆ. ನೀನು ಅವನ ವಿಶೇಷಗುಣಗಳನ್ನು ಹೇಳದಿದ್ದರೆ ನಿನ್ನ ತಲೆ ಕೆಳಗೆ ಬೀಳುತ್ತದೆ' ಎಂದು ಯಾಜ್ಞವಲ್ಕ್ಯರು ಸಿಟ್ಟಿನಿಂದ ಹೇಳಿದರು. ಶಾಕಲ್ಯನು ಆ ಪರಮಾತ್ಮನ ಬಗ್ಗೆ ತಿಳಿದಿರಲಿಲ್ಲ. ಆದರಿಂದ ಅವನ ತಲೆ ಬಿದ್ದಿತು. ಅಷ್ಟು ಮಾತ್ರವೇ ಅಲ್ಲ. ಅವನ ಎಲುಬುಗಳನ್ನು ಬೆಳ್ಳಿ ಎಂದು ಭ್ರಮಿಸಿ ಕಳ್ಳರು ಅಪಹರಿಸಿ ದರು.

**ಭಾಷ್ಯ—ಶಿವಸ್ಯ ಚ ತಥೋಮಾಯಾಃ ಪ್ರಾಣಾತ್ಮಾ ಶೇಷ ಆಶ್ರಯಃ ।**
**ಶೇಷಸ್ಯಾಪಾನರೂಪಾ ಸಾ ಭಾರತ್ಯೇವ ವ್ಯಪಾಶ್ರಯಃ ।**
**ತಸ್ಯಾ ವ್ಯಾನಾಭಿಧೋ ವಾಯುರ್ವಿಶಿಷ್ಟಾನೋ ಯತೋ ಹಿ ಸಃ ।**
**ಉನ್ನೇತೃತ್ವಾದುದಾನಾಖ್ಯಾ ತಸ್ಯ ಶ್ರೀರಾಶ್ರಯಃ ಸದಾ ।**
**ಸಮಾನಾಖ್ಯೋ ಹರಿಸ್ತಸ್ಯಾಃ ಸಹೈವ ಹ್ಯಾನಯತ್ಯಸೌ ।**
**ಸ್ವಾವರಸ್ಯಾನಕಾಸ್ತ್ವನ್ಯೇ ಸರ್ವೇಷಾಂ ಚೇಷ್ಟಕೋ ಹಿ ಸಃ ।**

**ಅನುವಾದ**—ಶಿವ ಮತ್ತು ಪಾರ್ವತಿಗೆ ಪ್ರಾಣನಾಮಕ ಶೇಷನು ಆಶ್ರಯ. ಶೇಷನಿಗೆ ಅಪಾನನಾಮಕ ಭಾರತಿಯು ಆಶ್ರಯ. ಅವಳಿಗೆ ವ್ಯಾನನಾಮಕ ವಾಯುವು ಆಶ್ರಯ. ವಿಶಿಷ್ಟರೀತಿಯಲ್ಲಿ ಪ್ರೇರಕನಾದುದರಿಂದ ಅವನಿಗೆ ವ್ಯಾನ ಎಂದು ಹೆಸರು. ಚೆನ್ನಾಗಿ ಊರ್ಧ್ವಲೋಕಗಳಿಗೆ ಕರೆದೊಯ್ಯುವುದರಿಂದ ಉದಾನ ಎನಿಸಿದ ಲಕ್ಷ್ಮಿಯು ವಾಯುವಿಗೆ ಆಶ್ರಯ. ತನ್ನ ಜೊತೆಗೆ ನಿತ್ಯಾವಿಯೋಗಿನಿಯಾಗಿರುವಂತೆ ಶ್ರೀದೇವಿಯನ್ನು ಪ್ರೇರಿಸುವುದರಿಂದಲೂ, ಪ್ರೇರಕದೇವತೆಗಳೊಡನೆ, ಪ್ರೇರ್ಯರಾದ ಎಲ್ಲ ಜಡಚೇತನಗಳಿಗೂ ಸಮಾನವಾಗಿ ಪ್ರೇರಣೆ ಮಾಡುವುದರಿಂದಲೂ ಸಮಾನ ಎಂಬ ಹೆಸರಿನವನಾದ ಶ್ರೀಹರಿಯು ಶ್ರೀದೇವಿಗೆ ಆಶ್ರಯ. ಬೇರೆ ದೇವತೆಗಳೆಲ್ಲರೂ ತಮಗಿಂತ ಕೆಳಗಿನ ದೇವತೆಗಳಿಗೆ ಮಾತ್ರ ಪ್ರೇರಕರು. ಶ್ರೀಹರಿಯು ಎಲ್ಲರಿಗೂ

ಪ್ರೇರಕ. ಆದ್ದರಿಂದ ಬೇರೆ ದೇವತೆಗಳಿಗೆ ಯಾರಿಗೂ ಸಮಾನ ಎಂಬ ಹೆಸರು ಈ ಅರ್ಥದಲ್ಲಿ ಇಲ್ಲ.

**ಭಾಷ್ಯ**—ಸ ಏಷ ಭಗವಾನ್ ನೈವಂ ಶ್ರೀವದನ್ಯಾಶ್ರಯೋ ಹರಿಃ ।
ನ ಚ ಬ್ರಹ್ಮಾದಿವದ್ವಿಷ್ಣುರ್ನೈವಾಸೌ ಬದ್ಧವತ್ ಕ್ವಚಿತ್ ।
ನ ಚ ಮುಕ್ತವದೀಶೇಶಃ ಕುತ ಏವ ಜಡೋಪಮಃ ।
ಅಗ್ರಾಹ್ಯೋಽಶೀರ್ಯಸಂಗೋಽಸಾವಸಿತಶ್ಚ ನ ರಿಶ್ಯತಿ ।
ನ ಹಿ ಸರ್ವಾತ್ಮನಾ ಕ್ವಾಪಿ ಕೇನಚಿತ್ ಜ್ಞಾಯತೇ ಕ್ವಚಿತ್ ।
ಸ್ವಲ್ಪೋಽಪಿ ಶೀರ್ಯತೇ ನೈವ ಕಾರಣಾತ್ ಕಾಲತೋಽಪಿ ವಾ ।
ನ ಲಿಪ್ಯತೇ ಜಗನ್ನಾಥಃ ಕ್ವಚಿದ್ದೋಷೇಣ ಕೇನಚಿತ್ ।
ಭೂತಪೂರ್ವೋ ಭವಿಷ್ಯೋ ವಾ ಬಂಧೋ ನಾಸ್ಯ ಕುತಶ್ಚನ ।
ನ ಚ ನಾಶೋಽಭವತ್ ಕ್ವಾಪಿ ನ ನಶಿಷ್ಯತಿ ಚ ಕ್ವಚಿತ್ ।
ಅನ್ಯತ್ ಸರ್ವಂ ಗೃಹೀತಂ ಹಿ ತೇನ ಜ್ಞಾನಾದಿನಾ ಸದಾ ।
ಅಶೀರ್ಯತ್ವಾದಯೋಽನ್ಯೇಷಾಂ ಸರ್ವೇಷಾಂ ತತ್ಪ್ರಸಾದತಃ ।
ಅತಸ್ತಸ್ಯಾತಿ ವೈಷಮ್ಯಾತ್ ನೇತಿ ನೇತ್ಯಾಹ ತಂ ಶ್ರುತಿಃ ।
ಇತ್ಯಾದಿ ಚ ।

**ಅನುವಾದ**—ಷಡ್ಗುಣ ಸಂಪನ್ನನಾದ ಈ ಹರಿಯು ಲಕ್ಷ್ಮೀದೇವಿಯಂತೆಯೂ ಬೇರೊಬ್ಬನನ್ನು ಆಶ್ರಯಿಸಿಲ್ಲ. ಚತುರ್ಮುಖಬ್ರಹ್ಮ ಮೊದಲಾದವರಂತೆಯೂ ಬೇರೆಯವರನ್ನಾಶ್ರಯಿಸಿಲ್ಲ. ಇವನು ಸಂಸಾರ ಬಂಧನವುಳ್ಳ ಚೇತನರಂತೆಯೂ ಅಲ್ಲ. ಮುಕ್ತ ಚೇತನರಂತೆಯೂ ಅಲ್ಲ. ಅಂದ ಮೇಲೆ ಹೇಗೆ ತಾನೆ ಜಡಸದೃಶನಾಗುವನು? ಇದು ನೇತಿ ನೇತಿ ಎಂಬ ಶ್ರುತಿಯ ಅಭಿಪ್ರಾಯ. ಈ ಶ್ರೀಹರಿಯು ಅಗ್ರಾಹ್ಯ, ಅಶೀರ್ಯ, ಅಸಂಗ, ಅಸಿತ ಮತ್ತು ನಾಶರಹಿತ. ಅಂದರೆ, ಯಾವ ದೇಶ ಕಾಲಗಳಲ್ಲಿಯೂ ಯಾರಿಂದಲೂ ಸಂಪೂರ್ಣವಾಗಿ ತಿಳಿಯಲ್ಪಡುವುದಿಲ್ಲ. ಯಾವುದೇ ಕಾರಣದಿಂದ ಅಥವಾ ಕಾಲಕ್ರಮದಿಂದ ಸ್ವಲ್ಪವೂ ಹಿಂಸಿಸಲ್ಪಡುವುದಿಲ್ಲ. ಯಾವುದೇ ದೇಶ ಕಾಲಗಳಲ್ಲಿ ಯಾವುದೇ ದೋಷಲೇಪವನ್ನು ಹೊಂದುವುದಿಲ್ಲ. ಯಾರಿಂದಲೂ, ಯಾವ ಕಾರಣದಿಂದಲೂ ಇವನಿಗೆ ಹಿಂದೆ ಬಂಧನವಾಗಿರಲಿಲ್ಲ, ಮುಂದೆ ಆಗುವುದಿಲ್ಲ. ಹಿಂದೆ ಎಂದೂ ಎಲ್ಲಿಯೂ ನಾಶ ಉಂಟಾಗಿರಲಿಲ್ಲ, ಮುಂದೆ ಆಗುವುದಿಲ್ಲ. ಅವನಿಂದ ಭಿನ್ನವಾದ ಈ ಪ್ರಪಂಚವು ಅವನಿಂದ ಯಾವಾಗಲೂ ತಿಳಿಯಲ್ಪಟ್ಟಿದೆ. ಲಕ್ಷ್ಮೀ ಮೊದಲಾದ ಎಲ್ಲರಿಗೂ ಅಶೀರ್ಯತ್ವ ಮೊದಲಾದ ಮಹತ್ವವು ಅವನ ಅನುಗ್ರಹದಿಂದ ಲಭಿಸಿದೆ. ಹೀಗೆ ಶ್ರೀಹರಿಗೆ ಲಕ್ಷ್ಮೀದೇವಿಯೇ ಮೊದಲಾದ ಇಡೀ ಪ್ರಪಂಚದಿಂದ

ಅತ್ಯಂತ ವೈಲಕ್ಷಣ್ಯವಿ ಇರುವುದರಿಂದ ಶ್ರುತಿಯು ಅವನನ್ನು ಕುರಿತು ನೇತಿ ನೇತಿ ಎಂದು ಹೇಳಿದೆ.

**ಭಾಷ್ಯ—ತದ್ಗುಣಾನಾಂ ಸುಪೂರ್ಣಾನಾಂ ವಿಪ್ರುಟ್ಕಂ ಪ್ರತಿಬಿಂಬಿತಮ್ ।**
**ಶ್ರೀರ್ಭುಂಕ್ತೇ ತದ್ಗುಣಾನ್ ಬ್ರಹ್ಮಾ ತಸ್ಯ ರುದ್ರಾದಯೋಽಪಿ ಚ ।**
**ಇತ್ಯಾದಿ ಚ ।**

**ಅಹಜ್ಞಾನಮಸ್ಯ ಲೀನಮಿತ್ಯಹರ್ಲೀಕ ಏವಾಹಲ್ಲಿಕಃ । ಅಜ್ಞೇತ್ಯಾಕ್ಷಿಪತಿ । "ನ ಹಿ ಗೃಹ್ಯತೇ" ಇತ್ಯಾದಿನಾ ಗ್ರಹಣಶೀರಣಾದಿಷು ಸರ್ವ ಪ್ರಮಾಣಾಭಾವಂ ದರ್ಶಯತಿ ।**

**ನೇತಿ ನೇತ್ಯಾದಿ ರೂಪೇಣ ವಿಜ್ಞಾಪಿತ ಗುಣೋಽಪಿ ತು ।**
**ವಿಶೇಷಾಪೇಕ್ಷಯಾ ಪೃಷ್ಟೋ ನ ಶಾಕಲ್ಯೋ ವಿವೇದ ತಂ ।**
**ಇತಿ ಬ್ರಹ್ಮಾಂಡೇ ।**

**ಅನುವಾದ**—ಲಕ್ಷ್ಮೀ ಮುಂತಾದವರಿಗೆ ವಿಷ್ಣು ಮುಂತಾದವರು ಆಶ್ರಯರೆಂದರೆ ಬರೀ ಆಧಾರರೆಂದಲ್ಲ. ಶ್ರೀಹರಿಯ ಗುಣಗಳು ಅತ್ಯಂತ ಪೂರ್ಣ. ಅವುಗಳ ಅಲ್ಪಸಾದೃಶ್ಯವನ್ನು ಮಾತ್ರ ಹೊಂದಿರುವ ಸ್ವರೂಪಗುಣಗಳನ್ನು ಲಕ್ಷ್ಮಿಯು ಅನುಭವಿಸುತ್ತಾಳೆ. ಲಕ್ಷ್ಮಿಯ ಗುಣಗಳ ಅಲ್ಪಸಾದೃಶ್ಯವನ್ನು ಹೊಂದಿರುವ ತನ್ನ ಗುಣಗಳನ್ನು ಚತುರ್ಮುಖನು ಅನುಭವಿಸುತ್ತಾನೆ. ಅವನ ಗುಣಗಳಿಗೆ ಅಲ್ಪಸಾದೃಶ್ಯ ಹೊಂದಿರುವ ತಮ್ಮ ಗುಣಗಳನ್ನು ರುದ್ರಾದಿಗಳೂ ಅನುಭವಿಸುತ್ತಾರೆ ಎಂದು ಮುಂತಾಗಿಯೂ ಹೇಳಿದೆ. ಅಹಲ್ಲಿಕ ಶಬ್ದಕ್ಕೆ ಪರಭಾಷ್ಯಕಾರರು ಹೇಳುವಂತೆ ಪ್ರೇತ ಎಂದರ್ಥವಲ್ಲ, ಅಜ್ಞ ಎಂದು ಅರ್ಥ. ಅದು ಹೀಗೆ– ಅಹಃ ಎಂದರೆ ಜ್ಞಾನ. ಇದು ಯಾರಲ್ಲಿ ಲೀನವಾಗಿದೆ ಅವನು ಅಹರ್ಲೀಕ. ಅಹರ್ಲೀಕನೇ ಅಹಲ್ಲಿಕ. ಅಹಲ್ಲಿಕ ಅಜ್ಞ, ಎಂದು ಯಾಜ್ಞವಲ್ಕ್ಯರು ಶಾಕಲ್ಯನನ್ನು ಕರೆಯುತ್ತ ಅವನ ಪ್ರಶ್ನೆಯು ಸರಿಯಲ್ಲವೆಂದು ಆಕ್ಷೇಪಿಸುತ್ತಿದ್ದಾರೆ. ಏಕೆಂದರೆ, ಪಾರ್ವತಿಗೆ ಯಾರು ಆಶ್ರಯನೆಂದು ಶಾಕಲ್ಯ ಪ್ರಶ್ನಿಸುತ್ತಿದ್ದಾನೆ. ಶಿವನೇ ಆಶ್ರಯ ಎಂಬುದು ಪ್ರಸಿದ್ಧವಾದ ವಿಷಯ. ಇಲ್ಲಿ ಪ್ರಶ್ನೆಗೇ ಅವಕಾಶವಿಲ್ಲ. ಅಗ್ರಾಹ್ಯ ಎಂದು ಮುಂತಾಗಿ ಹೇಳಿದ ಅಗ್ರಾಹ್ಯತ್ವಾದಿಗಳಿಗೆ ನ ಹಿ ಗೃಹ್ಯತೇ ಎಂದು ಮುಂತಾಗಿ ಅಗ್ರಾಹ್ಯತ್ವಾದಿಗಳನ್ನೇ ಹೇತುಗಳೆಂದು ತೋರಿಸಿದರೆ ಅಸಂಗತವಾಗುತ್ತದೆ. ಆದ್ದರಿಂದ ಗ್ರಾಹ್ಯತ್ವಾದಿ ವಿಷಯಗಳಲ್ಲಿ ಯಾವ ಪ್ರಮಾಣವೂ ಇಲ್ಲ ಎಂಬುದನ್ನೇ ಹೇತುವೆಂದು ಮಂತ್ರವು ತೋರಿಸುತ್ತದೆ. 'ಯಾಜ್ಞವಲ್ಕ್ಯರು ನೇತಿ ನೇತಿ ಎಂದು ಮುಂತಾಗಿ ಶ್ರೀಹರಿಯ ಗುಣಗಳನ್ನು ವರ್ಣಿಸಿದ್ದಾರೆ. ಅದನ್ನು ಶಾಕಲ್ಯರು ಕೇಳಿ ತಿಳಿದಿದ್ದರೂ ಇನ್ನೂ ಹೆಚ್ಚಿನ ವಿಶೇಷ

ಗಳ ಬಗ್ಗೆ ಕೇಳಿದಾಗ ಅವರು ಅಂತಹ ಮಹಿಮೆಯುಳ್ಳ ಶ್ರೀಹರಿಯನ್ನು ತಿಳಿದಿರಲಿಲ್ಲ' ಎಂದು ಬ್ರಹ್ಮಾಂಡ ಪುರಾಣದಲ್ಲಿದೆ.

**ಭಾಷ್ಯ—ತದಪೇಕ್ಷಾಂ ವಿನೈವಾಸೌ ನಿರ್ಗತ್ಯ ಪುರುಷೋತ್ತಮಃ ।**
**ವಹತ್ಯೇವಾನಿಶಂ ಸರ್ವಂ ನಿರೂಢಂ ತೇನ ತಜ್ಜಗತ್ ।**
**ಪ್ರತಿ ಪ್ರತಿ ಸ್ಥಿತೈ ರೂಪೈರ್ಯಸ್ಮಾದ್ ಧತ್ತೇ ಹರಿಃ ಸದಾ ।**
**ಅತಃ ಪ್ರತ್ಯೂಹ್ಯತೇ ತೇನ ವ್ಯಕ್ತಾವ್ಯಕ್ತಮಿದಂ ಜಗತ್ ।**
**ಇತಿ ಬ್ರಹ್ಮತರ್ಕೇ ।**

**ಅನುವಾದ**—'ನಿರೂಢ್ಯ' 'ಪ್ರತ್ಯೂಹ್ಯ' ಶಬ್ದಗಳು ಉಪನಿಷತ್ತಿನಲ್ಲಿ ಏಕಾರ್ಥಗಳಲ್ಲ. ಬೇರೆ ಬೇರೆ ಅರ್ಥಗಳಿವೆ– 'ಪುರುಷೋತ್ತಮನಾದ ಶ್ರೀಹರಿಯು ಎಂಟು ಆಯತನಗಳು, ಎಂಟು ಲೋಕಗಳು ಮೊದಲಾದವುಗಳನ್ನು ಅವಲಂಬಿಸದೆ ಸ್ವತಂತ್ರನಾಗಿ ಅವುಗಳಿಂದ ಹೊರಗಿದ್ದು ಪ್ರಪಂಚವನ್ನು ಯಾವಾಗಲೂ ಹೊತ್ತಿದ್ದಾನೆ, ಎಂದರೆ ರಕ್ಷಿಸುತ್ತಿದ್ದಾನೆ. ಆದ್ದರಿಂದ ಪ್ರಪಂಚವು ಅವನಿಂದ ನಿರೂಢವಾಗಿದೆ. ಹರಿಯು ಪ್ರತಿಯೊಂದು ವ್ಯಕ್ತಿ ಮತ್ತು ವಸ್ತುಗಳಲ್ಲಿ ಒಳಗೆ ಇರುವ ತನ್ನ ರೂಪಗಳಿಂದ ಪ್ರಪಂಚವನ್ನು ಯಾವಾಗಲೂ ಪೋಷಿಸುತ್ತಾನೆ. ಆದ್ದರಿಂದ ಸ್ಥೂಲ ಮತ್ತು ಸೂಕ್ಷ್ಮವಾದ ಈ ಪ್ರಪಂಚವು ಅವನಿಂದ ಪ್ರತ್ಯೂಢವಾಗಿದೆ' ಎಂದು ಬ್ರಹ್ಮತರ್ಕದಲ್ಲಿ ಹೇಳಿದೆ.

**ಭಾಷ್ಯ—ನ ವಿನೋಪನಿಷದ್ಭಿಃ ಸ ಜ್ಞೇಯಃ ಕೇನಾಪಿ ಕಸ್ಯಚಿತ್ ।**
**ಅತ ಔಪನಿಷತ್ಕಂ ತಂ ಪ್ರಾಹುರ್ವಿಷ್ಣುಂ ಸನಾತನಮ್ । ಇತಿ ಚ ।**

**ಅನುವಾದ**—'ದೇವತಾ ಧರ್ಮಗಳೂ ಉಪನಿಷತ್ತಿನಲ್ಲಿ ಉಕ್ತವಾಗುತ್ತವೆ. ಆದರೆ ಅವುಗಳು ಬೇರೆ ಪ್ರಮಾಣಗಳಿಂದಲೂ ವೇದ್ಯಗಳೇ. ವಿಷ್ಣುವು ಮಾತ್ರ ಉಪನಿಷತ್ತುಗಳಿಂದ ಹೊರತು ಬೇರೆ ಯಾವುದೇ ಪ್ರಮಾಣದಿಂದ ಯಾರಿಗೂ ಗೋಚರನಾಗುವುದಿಲ್ಲ. ಆದ್ದರಿಂದ ಸನಾತನನಾದ ಆ ವಿಷ್ಣುವನ್ನು ಔಪನಿಷದ ಎಂದು ಹೇಳುತ್ತಾರೆ' ಎಂದೂ ಬ್ರಹ್ಮತರ್ಕದಲ್ಲಿ ಹೇಳಿದೆ.

**ವಿಶ್ವಾಸಾರ್ಹರಾದ ಉಪದೇಶಕರು :**

**ಭಾಷ್ಯ—ಪ್ರಶ್ನೋ ವಾದೇ ಚ ಜಲ್ಪಾದೌ ಕರ್ತವ್ಯಃ ಪ್ರತಿವಾದಿನಾ ।**
**ತದುಕ್ತಿಮಾತ್ರೇ ಪ್ರಾಮಾಣ್ಯಂ ಯದಿ ನಾಸ್ತ್ಯಾಗಮಾಂತರಮ್ ।**
**ಅಪೇಕ್ಷಿತಂ ಯದಾ ಶಂಕಾ ದರ್ಶನೀಯಸ್ತದಾಗಮಃ ।**
**ನಿಃಶಂಕತ್ವೇನ ಯೋ ವಕ್ತಾ ಪ್ರಶ್ನಾನಾಮುತ್ತರಂ ಸದಾ ।**
**ಆನುಕೂಲ್ಯೇನಾಗಮಾನಾಂ ನಾಶಂಕ್ಯಂ ತದ್ವಚಃ ಕ್ವಚಿತ್ ।**

**ಅನುವಾದ**—ವಾದ ಜಲ್ಪ ಮೊದಲಾದವುಗಳಲ್ಲಿ ಪ್ರತಿವಾದಿಯು ವಿವಾದಾಸ್ಪದವಾದ ಪ್ರಮೇಯದ ವಿಷಯದಲ್ಲಿ ಮಾತ್ರ ಪ್ರಮಾಣವೇನು ಎಂದು ಪ್ರಶ್ನೆ ಮಾಡಬೇಕು. ವಾದಿಯು ಪ್ರಮಾಣವನ್ನು ಹೇಳಬೇಕು. ವಾದಿಯ ಮಾತೇ ಪ್ರತಿವಾದಿಗೆ ವಿಶ್ವಾಸಾರ್ಹವೆನಿಸಿದರೆ ಅದೇ ಆಗಮಪ್ರಮಾಣವಾಗುವುದು. ಬೇರೆ ಆಗಮದ ಅವಶ್ಯಕತೆ ಇಲ್ಲ. ವಾದಿಯ ಮಾತಿನಲ್ಲಿ ಪ್ರಾಮಾಣ್ಯದ ಬಗ್ಗೆ ಸಂಶಯವಿದ್ದರೆ ಆಗ ಬೇರೆ ಆಗಮವನ್ನು ತೋರಿಸಬೇಕು. ಯಾರು ಯಾವಾಗಲೂ ಸಂಶಯಕ್ಕೇ ಅವಕಾಶವಿಲ್ಲದಂತೆ ಆಗಮಗಳಿಗೆ ಅನುಗುಣವಾಗಿಯೇ ಹೇಳುವರೋ ಅವರ ಮಾತಿನಲ್ಲಿ ಪ್ರತಿವಾದಿಗಳು ಅವಿಶ್ವಾಸ ಹೊಂದಬಾರದು. ಆದ್ದರಿಂದ ಅಶ್ವಲ ಮೊದಲಾದವರು ಕೇಳಿದ ಪ್ರಶ್ನೆಗಳಿಗೆ ಯಾಜ್ಞವಲ್ಕ್ಯರು ಉತ್ತರ ಹೇಳಿದ ಮೇಲೆ ಅವರ ಉತ್ತರಗಳಿಗೆ ಆಧಾರವಾದ ಪ್ರಮಾಣವೇನು ಎಂದು ಯಾರೂ ಪ್ರಶ್ನಿಸಲಿಲ್ಲ. ಯಾಜ್ಞವಲ್ಕ್ಯರ ಮಾತಿನಲ್ಲಿ ಅವಿಶ್ವಾಸವಿರಲಿಲ್ಲ.

**ಭಾಷ್ಯ—ದಶತಾಲೋ ದಶಮುಖೋ ಲಲಾಟತ್ರಿಂಶಕಸ್ತಥಾ ।**
**ಸಾರ್ಧೋನ್ನತಶ್ಚೈವ ಪುನಃ ಪರ್ಯಗ್ ದಶಶಿರಾಸ್ತಥಾ ।**
**ಪಂಚೋರಾಃ ಸಪ್ತಪಾದೋ ಯೋ ನಾಶಂಕ್ಯಂ ತದ್ವಚಃ ಕ್ವಚಿತ್ ।**
**ನವಾಂಗುಲಮುಖೋ ಯಸ್ತು ಗಲೇ ಚ ಚತುರಂಗುಲಃ ।**
**ಚತುರ್ವಿಂಶಾಂಗುಲತನುಸ್ತದ್ವಾಕ್ಯಂ ದೇವಪೂಜಿತಮ್ ।**

**ಅನುವಾದ**–ಯಾಜ್ಞವಲ್ಕ್ಯರ ಮಾತುಗಳು ವಿಶ್ವಾಸಾರ್ಹವೆನ್ನಲು ಇನ್ನೊಂದು ಕಾರಣವೂ ಇದೆ. ಯಾರ ಶರೀರವು ಅಂಗೈ ಅಳತೆಯ ಹತ್ತರಷ್ಟು, ಮುಖದ ಅಳತೆಯ ಹತ್ತರಷ್ಟು, ಹಣೆಯ ಅಳತೆಯ ಮೂವತ್ತರಷ್ಟು ಉದ್ದವಾಗಿರುವುದೋ, ಅರ್ಧಭಾಗ ಉನ್ನತವಾದ ಹಣೆಯನ್ನು ಹೊಂದಿದೆಯೋ, ಹಣೆಯ ಅಳತೆಯ ಹತ್ತರಷ್ಟು ಸುತ್ತಳತೆಯನ್ನು ಹೊಂದಿದೆಯೋ, ಎದೆಯ ಅಳತೆಯ ಐದರಷ್ಟು ಮತ್ತು ಪಾದದ ಅಳತೆಯ ಏಳರಷ್ಟು ಉದ್ದವಾಗಿದೆಯೋ, ಒಂಭತ್ತು ಅಂಗುಲ ಅಳತೆಯ ಮುಖವನ್ನು, ನಾಲ್ಕು ಅಂಗುಲ ಅಳತೆಯ ಕುತ್ತಿಗೆಯನ್ನು ಹೊಂದಿದೆಯೋ ಮತ್ತು ಇಪ್ಪತ್ತನಾಲ್ಕು ಅಂಗುಲ ಅಳತೆವುಳ್ಳದ್ದೋ ಅವರ ವಾಕ್ಯವನ್ನು ಯಾವಾಗಲೂ ಶಂಕಿಸಬಾರದು. ಅವರ ವಾಕ್ಯಗಳು ದೇವತೆಗಳಿಂದಲೂ ಪೂಜಿತವಾಗಿವೆ.

**ಭಾಷ್ಯ—ಪ್ರಾಧಾನ್ಯಾಲ್ಲಕ್ಷಣೋಪೇತೋ ದುರ್ಲಕ್ಷಣ ಯುತೋಽಪಿ ಸನ್ ।**
**ತಸ್ಯಾಪಿ ವಾಕ್ಯಂ ಮಾನಂ ಸ್ಯಾತ್ ಕಿಮು ಸರ್ವಯುತಸ್ಯ ತು ।**
**ಪ್ರಾಯೋ ದೇವಾಶ್ಚ ಋಷಯೋ ನ ಸರ್ವಶುಭಲಕ್ಷಣಾಃ ।**
**ಋತೇ ವಿಷ್ಣುಂ ಸುರಶ್ರೇಷ್ಠಂ ಬ್ರಹ್ಮಾಣಂ ವಾಽಪ್ಯನಂತರಂ ।**

ಯಸ್ಮಾನ್ನ ವಿದುಷಾಂ ವಾಕ್ಯಮಾಶಂಕ್ಯಂ ಕೇನಚಿತ್ ಕ್ವಚಿತ್ ।
ತಸ್ಮಾದ್ ವೇದೇಷು ಸರ್ವೇಷು ಕಥಾಃ ಪ್ರಶ್ನೋತ್ತರಾತ್ಮಿಕಾಃ ।
ನ ಪ್ರಮಾಣಾಂತರಂ ತತ್ರ ಪೃಚ್ಛಂತಿ ಘಟನಾಂ ವಿನಾ ।
ಏತಸ್ಮಾದಾಶ್ವಲಾದ್ಯಾಶ್ಚ ಪಪ್ರಚ್ಛುರ್ನೈವ ಕುತ್ರಚಿತ್ ।
ಆಗಮಂ ಯಾಜ್ಞವಲ್ಕ್ಯೋಕ್ತೇರನ್ಯಂ ತಂ ಮೈಥಿಲೋಽಪಿ ವಾ ।
ಇತಿ ಬ್ರಹ್ಮತರ್ಕೇ ।

**ಅನುವಾದ**—ಮೇಲೆ ಹೇಳಿದ ಲಕ್ಷಣಗಳಲ್ಲಿ ಹೆಚ್ಚು ಲಕ್ಷಣಗಳನ್ನು ಹೊಂದಿದ್ದರೆ ಅಲ್ಪಸ್ವಲ್ಪ ದುರ್ಲಕ್ಷಣಗಳನ್ನು ಹೊಂದಿದ್ದರೂ ಕೂಡ ಅಂತಹವರ ವಾಕ್ಯವು ಪ್ರಮಾಣವೇ. ಹೀಗಿರುವಾಗ ಸರ್ವಲಕ್ಷಣಗಳಿಂದ ಕೂಡಿದವರ ವಾಕ್ಯವು ಪ್ರಮಾಣವೆಂದು ಹೇಳಬೇಕೇನು! ದೇವಶ್ರೇಷ್ಠನಾದ ವಿಷ್ಣು ಚತುರ್ಮುಖ ಮತ್ತು ವಾಯು ಇವರನ್ನು ಬಿಟ್ಟು ಇತರ ದೇವತೆಗಳು ಮತ್ತು ಋಷಿಗಳು ಸಾಮಾನ್ಯವಾಗಿ ಸರ್ವಶುಭ ಲಕ್ಷಣ ಸಂಪನ್ನರಲ್ಲ. ಆದರೂ ಹೆಚ್ಚು ಲಕ್ಷಣವುಳ್ಳ ಜ್ಞಾನಿಗಳ ಮಾತು ಯಾರಿಂದಲೂ ಯಾವ ವಿಷಯದಲ್ಲೂ ಸಂಶಯಾರ್ಹವಲ್ಲ. ಆದ್ದರಿಂದ ಎಲ್ಲ ವೇದಗಳಲ್ಲಿಯೂ ಚರ್ಚೆಯು ಕೇವಲ ಪ್ರಶ್ನೋತ್ತರ ರೂಪವಾಗಿಯೇ ಇದೆ. ಮತ್ತು ಹೇಳಿದ ವಿಷಯಗಳ ಯುಕ್ತತೆಯನ್ನು ಕುರಿತು ಕೇಳುವರೆ ಹೊರತು ಆಧಾರವಾಗಿ ಬೇರೆ ಪ್ರಮಾಣಗಳನ್ನು ಕೇಳುವುದಿಲ್ಲ. ಈ ಕಾರಣದಿಂದಲೇ ಅಶ್ವಲ ಮೊದಲಾದವರಾಗಲೀ ಮಿಥಿಲೆಯ ರಾಜನಾಗಲೀ ಯಾಜ್ಞವಲ್ಕ್ಯರ ಉಕ್ತಿಗಳಿಗೆ ಆಧಾರವಾದ ಬೇರೆ ಆಗಮಗಳನ್ನು ಯಾವುದೇ ವಿಷಯದ ಬಗ್ಗೆ ಕೇಳಲಿಲ್ಲ ಎಂದು ಬ್ರಹ್ಮತರ್ಕದಲ್ಲಿ ಹೇಳಿದೆ.

**ಭಾಷ್ಯ**—ಯಚ್ಛಿನ್ನವಿಚಿಕಿತ್ಸಸ್ತು ಛಿನತ್ತ್ಯಪಿ ಚ ಸಂಶಯಾನ್ ।
ತಸ್ಯ ಪರ್ಯೇಷಣಂ ಕುರ್ಯಾತ್ಪ್ರತೀಚ್ಛನ್ನೋತ ದಕ್ಷಿಣಾಮ್ ।
ಇತಿ ಚ ಭಾರತೇ ।

ಷಣ್ಣವತ್ಯಂಗುಲೋ ಯಸ್ತು ನ್ಯಗ್ರೋಧ ಪರಿಮಂಡಲಃ ।
ದಶತಾಲಶ್ಚತುರ್ಹಸ್ತಃ ಸ ದೇವೈರಪಿ ಪೂಜ್ಯತೇ ।
ಇತಿ ವಾಯುಪ್ರೋಕ್ತೇ ।
ಅತ ಏವ ಚ ಸರ್ವಾಗಮೇಷು ಪ್ರತಿಸಂಹಿತಮಾಚಾರ್ಯಲಕ್ಷಣಮುಚ್ಯತೇ ।

**ಅನುವಾದ**—'ಯಾರು ತನ್ನ ಸಂಶಯಗಳನ್ನು ಪರಿಹರಿಸಿಕೊಂಡಿರುವನೋ ಮತ್ತು ಅನ್ಯರ ಸಂಶಯಗಳನ್ನು ಪರಿಹರಿಸುವನೋ ಅಂತಹವನನ್ನು ಜಿಜ್ಞಾಸುವು ಸಮಗ್ರ ದಕ್ಷಿಣೆಯನ್ನು ಕೊಡುವ ಇಚ್ಛೆವುಳ್ಳವನಾಗಿ ಹುಡುಕಬೇಕು' ಎಂದು ಭಾರತ

ದಲ್ಲಿ ಹೇಳಲ್ಪಟ್ಟಿದೆ. 'ಯಾರು ತೊಂಭತ್ತಾರು ಅಂಗುಲ ಎತ್ತರವಿರುವನೋ, ನಲವತ್ತೆಂಟು ಅಂಗುಲ ಸುತ್ತಳತೆಯನ್ನು ಹೊಂದಿರುವನೋ, ಹತ್ತು ಅಂಗೈ ಅಳತೆಯಷ್ಟು ಉದ್ದವಿರುವನೋ ಮತ್ತು ನಾಲ್ಕು ಮೊಳ ಉದ್ದವಿರುವನೋ ಅಂತಹವನು ದೇವತೆಗಳಿಂದಲೂ ಪೂಜಿಸಲ್ಪಡುವನು' ಎಂದು ವಾಯುಪ್ರೋಕ್ತದಲ್ಲಿ ಹೇಳಿದೆ. ಆದ್ದರಿಂದಲೇ ಪಂಚರಾತ್ರಾದಿ ಆಗಮಗಳಲ್ಲಿ ಎಲ್ಲ ಸಂಹಿತೆಗಳಲ್ಲಿಯೂ ಗುರುಲಕ್ಷಣವು ಹೇಳಲ್ಪಡುತ್ತದೆ. ಗುರುಲಕ್ಷಣವುಳ್ಳ ಜ್ಞಾನಿಗಳ ಮಾತಿನಲ್ಲಿ ಸಂಶಯಪಡಬಾರದೆಂಬ ಅಭಿಪ್ರಾಯವಿಲ್ಲದಿದ್ದರೆ ಗುರುಲಕ್ಷಣವನ್ನು ಹೇಳುವುದೇ ವ್ಯರ್ಥವಾಗುತ್ತದೆ.

## ಸ್ವತಂತ್ರ ಸೃಷ್ಟಿಕರ್ತನು ಯಾರು ?

**ಉಪನಿಷತ್—ಅಥ ಹೋವಾಚ । ಬ್ರಾಹ್ಮಣಾ ಭಗವಂತೋ ಯೋ ವಃ ಕಾಮಯತೇ ಸ ಮಾ ಪೃಚ್ಛತು । ಸರ್ವೇ ವಾ ಮಾ ಪೃಚ್ಛತ । ಯೋ ವಃ ಕಾಮಯತೇ ತಂ ವಃ ಪೃಚ್ಛಾಮಿ । ಸರ್ವಾನ್ ವಾ ವಃ ಪೃಚ್ಛಾಮೀತಿ। ತೇ ಹ ಬ್ರಾಹ್ಮಣಾ ನ ದಧೃಷುಃ ।**

ಅನಂತರ ಯಾಜ್ಞವಲ್ಕ್ಯರು ಹೇಳಿದರು 'ಪೂಜ್ಯ ಬ್ರಹ್ಮಜ್ಞಾನಿಗಳೇ, ನಿಮ್ಮಲ್ಲಿ ಯಾರೇ ಒಬ್ಬನು ನನ್ನಲ್ಲಿ ಪ್ರಶ್ನೆ ಕೇಳಲು ಬಯಸಿದರೂ ಅವನು ಕೇಳಲಿ. ಅಥವಾ ಎಲ್ಲರೂ ಕೇಳಲಿ. ನಿಮ್ಮಲ್ಲಿ ಯಾರೇ ಒಬ್ಬನಿಗೆ ನಾನು ಪ್ರಶ್ನೆ ಕೇಳಬೇಕೆಂಬ ಇಚ್ಛೆ ಇದ್ದರೆ ಅವನನ್ನು ನಾನು ಕೇಳುತ್ತೇನೆ, ಅಥವಾ ಎಲ್ಲರನ್ನೂ ಕೇಳುತ್ತೇನೆ.' ಆ ಬ್ರಹ್ಮಜ್ಞಾನಿಗಳು ಯಾರೂ ಇದಕ್ಕೆ ಧೈರ್ಯ ವಹಿಸಲಿಲ್ಲ.

**ಉಪನಿಷತ್—ತಾನ್ ಹ ಏತೈಃ ಶ್ಲೋಕೈಃ ಪಪ್ರಚ್ಛ ।**
**ಯಥಾ ವೃಕ್ಷೋ ವನಸ್ಪತಿಸ್ತಥೈವ ಪುರುಷೋಽಮೃಷಾ ।**
**ತಸ್ಯ ಲೋಮಾನಿ ಪರ್ಣಾನಿ ತ್ವಗಸ್ಯೋತ್ಪಾಟಿಕಾ ಬಹಿಃ ।**
**ತ್ವಚ ಏವಾಸ್ಯ ರುಧಿರಂ ಪ್ರಸ್ಯಂದಿ ತ್ವಚ ಉತ್ಪಟಃ ।**
**ತಸ್ಮಾದ್ ತದಾತೃಣ್ಣಾತ್ ಪ್ರೈತಿ ರಸೋ ವೃಕ್ಷಾದಿವಾಽಹತಾತ್ ।**
**ಮಾಂಸಾನ್ಯಸ್ಯ ಶಕರಾಣಿ ಕಿನಾಟಂ ಸ್ನಾವ ತತ್ ಸ್ಥಿರಮ್ ।**
**ಅಸ್ಥೀನ್ಯಂತರತೋ ದಾರೂಣಿ ಮಜ್ಜಾ ಮಜ್ಜೋಪಮಾ ಕೃತಾ ।**

ಯಾಜ್ಞವಲ್ಕ್ಯರು ಆ ಬ್ರಹ್ಮಜ್ಞಾನಿಗಳನ್ನು ಈ ಶ್ಲೋಕಗಳಿಂದ ಪ್ರಶ್ನಿಸಿದರು. ವನಸ್ಪತಿ ವಾಚಕವಾದ ವೃಕ್ಷಶಬ್ದವು ವನಸ್ಪತಿಯಲ್ಲಿ ಹೇಗೆ ಅನ್ವರ್ಥವೋ ಹಾಗೆಯೇ ಜೀವವಾಚಕವಾದ ಪುರುಷಶಬ್ದವು ಜೀವನಲ್ಲಿ ಅನ್ವರ್ಥವೇ. ಜೀವ–ವನಸ್ಪತಿಗಳಲ್ಲಿ ಸಾಮ್ಯವೂ ಇದೆ. ಏಕೆಂದರೆ ಜೀವನ ರೋಮಗಳು ಮರದ ಎಲೆಗಳಂತೆ. ಅವನ

ಚರ್ಮ ಮರದ ಹೊರಗಿನ ತೊಗಟೆಯಂತೆ. ಮರದ ತೊಗಟೆಯಿಂದ ಅಂಟು ಹರಿಯುವಂತೆ ಜೀವನ ದೇಹದಿಂದ ರಕ್ತವು ಹರಿಯುತ್ತದೆ. ಆದ್ದರಿಂದಲೇ ಕತ್ತರಿಸಲ್ಪಟ್ಟ ವೃಕ್ಷದಿಂದ ರಸವು ಹೊರಹರಿಯುವಂತೆ ಕತ್ತರಿಸಲ್ಪಟ್ಟ ಜೀವ ದೇಹದಿಂದ ರಕ್ತವು ಹೊರಹರಿಯುತ್ತದೆ. ಜೀವ ಶರೀರದ ಮಾಂಸಗಳು ಮರದ ತುಂಡುಗಳಿಗೆ ಅಥವಾ ಮರದ ಒಳತೊಗಟೆಗೆ ಸದೃಶ. ಶರೀರದ ಸ್ನಾಯುಗಳ ನಡುವೆ ಮೂಳೆಗಳಿಗೆ ಅಂಟಿಕೊಂಡ ಸ್ಥಿರವಾದ ವಸ್ತು ಮರದೊಳಗೆ ಇರುವ ನಾರಿನಂತೆ. ಶರೀರದ ಎಲುಬುಗಳು ಮರದ ಗಟ್ಟಿಯಾದ ಒಳಗಿನ ತಿರುಳಿನಂತೆ. ಶರೀರದ ಮಜ್ಜೆಯು ಮರದ ಮಜ್ಜೆಗೇ ಸಮಾನ.

**ವಿವರಣೆ**—ವೃಕ್ಷಶಬ್ದಕ್ಕೆ ಕಡಿಯಲ್ಪಡುವ ವಸ್ತು ಎಂದು ಅರ್ಥ. ವನಸ್ಪತಿಯು ಕಡಿಯಲ್ಪಡುವುದರಿಂದ ಅದಕ್ಕೆ ವೃಕ್ಷ ಎಂಬ ಹೆಸರು ಸಾರ್ಥಕ. ಹಾಗೆಯೇ ಪುರುಷ ಶಬ್ದಕ್ಕೆ ಚಿರಕಾಲ ಇರುವವನು ಎಂದು ಅರ್ಥ. ಜೀವನು ಚಿರಕಾಲ ಇರುವುದರಿಂದಲೇ ಅವನಿಗೆ ಪುರುಷ ಎಂಬ ಹೆಸರು ಸಾರ್ಥಕ. ಆದ್ದರಿಂದ ಜೀವ ನಿತ್ಯ. ಅವನ ಶರೀರ ವನಸ್ಪತಿಯಂತೆಯೇ ಇದ್ದು ನಶ್ವರವಾದ್ದರಿಂದ ಹೇಯ.

**ಉಪನಿಷತ್—ಯದ್ ವೃಕ್ಷೋ ವೃಕ್ಣೋ ರೋಹತಿ ಮೂಲಾನ್ನವತರಃ ಪುನಃ।**
**ಮರ್ತ್ಯಃ ಸ್ವಿನ್ಮೃತ್ಯುನಾ ವೃಕ್ಣಃ ಕಸ್ಮಾನ್ಮೂಲಾತ್ಪ್ರರೋಹತಿ ।**

ವೃಕ್ಷವನ್ನು ಕಡಿದರೆ ಬೇರಿನಿಂದ ಪುನಃ ಹೊಚ್ಚ ಹೊಸದಾಗಿ ಬೆಳೆಯುತ್ತದೆ. ಮರ್ತ್ಯನೂ ಹಾಗೆಯೇ ಮೃತ್ಯುವಿನಿಂದ ಕತ್ತರಿಸಲ್ಪಟ್ಟ ಬಳಿಕ ಪುನಃ ಹುಟ್ಟಿ ಬೆಳೆಯುತ್ತಾನೆ. ವೃಕ್ಷ ಮತ್ತು ಮರ್ತ್ಯರು ಯಾವ ಮೂಲದಿಂದ ಪುನಃ ಹುಟ್ಟಿ ಬೆಳೆಯುತ್ತಾರೆ?

### ಸೃಷ್ಟಿಯ ಆದಿಯಲ್ಲಿ ಜೀವ-ವೃಕ್ಷಗಳಿಗೆ ಜನಕ ಯಾರು ?

**ಉಪನಿಷತ್—ರೇತಸ ಇತಿ ಮಾ ವೋಚತ ಜೀವತಸ್ತತ್ಪ್ರಜಾಯತೇ ।**
**ಧಾನಾರುಹ ಇವ ವೈ ವೃಕ್ಷೋಽಂಜಸಾ ಪ್ರೇತ್ಯ ಸಂಭವಃ ।**

ರೇತಸ್ಸಿನಿಂದ ಪುರುಷನು ಹುಟ್ಟುತ್ತಾನೆ ಎಂದು ಹೇಳಬೇಡಿರಿ. ತಂದೆ ಜೀವಂತನಾಗಿದ್ದರೆ ಅವನ ರೇತಸ್ಸಿನಿಂದ ಮಗು ಹುಟ್ಟುತ್ತದೆ. ಮಹಾ ಪ್ರಲಯಾನಂತರ ಆದಿ ಸೃಷ್ಟಿಯಲ್ಲಿ ಜೀವನಿಗೆ ಜನಕ ಯಾರು ಎಂದು ಕೇಳುತ್ತಿದ್ದೇನೆ. ಆಗ ಯಾವ ತಂದೆಯೂ ಇರುವುದಿಲ್ಲ ತಾನೆ? ವೃಕ್ಷವೂ ಕೂಡ ಕೇವಲ ಬೀಜದಿಂದ ಅಥವಾ ಬೇರಿನಿಂದಲೇ ಹುಟ್ಟಿರುವಂತೆ ಅಜ್ಞರಿಗೆ ಕಾಣುತ್ತದೆ. ನಿಜವಾಗಿ ಅವು ಕಾರಣಗಳಲ್ಲ. ಆದ್ದರಿಂದ ಜೀವನಿಗಾಗಲೀ, ವೃಕ್ಷಕ್ಕಾಗಲೀ ಮುಖ್ಯ ಜನಕನಾರು ಎಂಬುದು ನನ್ನ ಪ್ರಶ್ನೆ.

**ಉಪನಿಷತ್— ಯತ್ ಸಮೂಲಮಾ ವೃಹೇಯುರ್ವೃಕ್ಷಂ ನ ಪುನರಾಭವೇತ್ ।**
**ಮರ್ತ್ಯಃ ಸ್ವಿನ್ಮೃತ್ಯುನಾ ವೃಕ್ಣಃ ಕಸ್ಮಾನ್ಮೂಲಾತ್ ಪ್ರರೋಹತಿ ।**

ಮಹಾಪ್ರಳಯದಲ್ಲಿ ವೃಕ್ಷವು ಬೇರು ಸಹಿತ ನಾಶವಾಗಿದ್ದರೂ, ಆದಿಸೃಷ್ಟಿಯಲ್ಲಿ ಅದು ಪುನಃ ಬೆಳೆಯುವುದಿಲ್ಲವೇನು? ಹಾಗೆಯೇ ಮರ್ತ್ಯನೂ ಮೃತ್ಯುವಿನಿಂದ ಕತ್ತರಿಸಲ್ಪಟ್ಟ ಬಳಿಕವೂ ಮತ್ತೆ ಹುಟ್ಟುವುದಿಲ್ಲವೇನು? ವೃಕ್ಷ, ಮರ್ತ್ಯರು ಇಬ್ಬರೂ ಪುನಃ ಹುಟ್ಟುತ್ತಾರೆ. ಯಾವ ಮೂಲಕಾರಣದಿಂದ ಹುಟ್ಟುತ್ತಾರೆ?

**ವಿಜ್ಞಾನಮಾನಂದಂ ಬ್ರಹ್ಮ :**

**ಉಪನಿಷತ್—ಜಾತ ಏವ ನ ಜಾಯತೇ ಕೋ ನ್ವೇನಂ ಜನಯೇತ್ ಪುನಃ ।**
**ವಿಜ್ಞಾನಮಾನಂದಂ ಬ್ರಹ್ಮ ರಾತಿರ್ದಾತುಃ ಪರಾಯಣಂ ।**
**ತಿಷ್ಠಮಾನಸ್ಯ ತದ್ವಿದ ಇತಿ ।**

**ಇತಿ ಶಾಕಲ್ಯ ಬ್ರಾಹ್ಮಣಮ್ ॥**

ಈ ಪ್ರಶ್ನೆಗೆ ಯಾರೂ ಉತ್ತರ ಕೊಡದಿದ್ದಾಗ ಯಾಜ್ಞವಲ್ಕ್ಯರು ತಾವೇ ಉತ್ತರ ಕೊಟ್ಟರು. 'ಪ್ರಪಂಚದ ಮೂಲಕಾರಣ ಶ್ರೀಹರಿ. ಅವನು ಅನಾದಿ ಕಾಲದಿಂದ ಜ್ಞಾನಾನಂದಮಯ ಶರೀರಯುಕ್ತನಾಗಿಯೇ ಇದ್ದಾನೆ. ಎಂದೂ ಹುಟ್ಟುವುದಿಲ್ಲ. ಅಂಥವನಿಗೆ ಯಾರು ತಾನೆ ಜನಕರಾಗಲು ಸಾಧ್ಯ? ಸರ್ವಜ್ಞನಾದ್ದರಿಂದ ಅವನು ಸರ್ವಸೃಷ್ಟಿಕರ್ತ. ಪೂರ್ಣಾನಂದರೂಪನಾದ್ದರಿಂದ ಆನಂದೋದ್ರೇಕದಿಂದಲೇ ಸೃಷ್ಟಿ ಮಾಡುತ್ತಾನೆ. ಹವಿಸ್ಸು ಮುಂತಾದುವನ್ನು ನೀಡುವವರಿಗೆ ಇವನು ಅಖಿಲಾಭೀಷ್ಟ ನೀಡುತ್ತ ಪ್ರಿಯನಾಗಿದ್ದಾನೆ. ಬ್ರಹ್ಮಜ್ಞಾನಿಗಳಿಗಂತೂ ಈತ ಪರಮ ಪ್ರಿಯ. ಭಕ್ತರಿಗೆ ಏಕೈಕ ಆಶ್ರಯ.

**ಭಾಷ್ಯ—ಯಥಾ ವನಸ್ಪತೌ ವೃಕ್ಷ ಇತ್ಯಯಂ ಶಬ್ದೋಽನ್ವರ್ಥಾ ತಥೈವ ಪುರುಷೇ ಪುರುಷಶಬ್ದೋ ವಿದ್ಯಮಾನ ಏವ । ಸ ಚ ನಿತ್ಯತ್ವೇ ಸಂಭವತಿ-ಪುರುಕಾಲೇಽಪಿ ಸನ್ ಪುರುಷ ಇತಿ ।**

**ಅನುವಾದ**—ವೃಕ್ಷ ಶಬ್ದವು ವನಸ್ಪತಿಯಲ್ಲಿ ಹೇಗೆ ಅನ್ವರ್ಥವೋ ಹಾಗೆಯೇ ಪುರುಷ ಶಬ್ದವೂ ಜೀವನಲ್ಲಿ ಅನ್ವರ್ಥವೇ. ಜೀವನು ನಿತ್ಯನಾಗಿದ್ದರೆ ಮಾತ್ರ ಪುರುಷಶಬ್ದವು ಅವನಲ್ಲಿ ಅನ್ವರ್ಥವಾಗುತ್ತದೆ. ಏಕೆಂದರೆ ಪುರು ಚಿರಕಾಲ, ಸ- ಇರುವವನು 'ಪುರುಷ'.

**ಭಾಷ್ಯ—ಸ್ನಾವಮಧ್ಯೇ ಯತ್ ಸ್ಥಿರಂ ವಿದ್ಯತೇಽಸ್ಥಿ ಸಂಲೀನಂ ತದ್ ದಾರುಸಂಶ್ಲಿಷ್ಟಸಾಶವತ್ । ವೃಕ್ಷೋ ಮೂಲಾದ್ ರೋಹತೀತ್ಯಂಗೀಕಾರಮಾತ್ರಮ್ । ಯತ್ ಸಮೂಲಮಾ ವೃಹೇಯುರಿತಿ ತಸ್ಯಾಪಿ ದೂಷಣಾತ್ । ಅನ್ಯಸ್ಯ ರೇತಸೋ ಜನನಮಪಿ ಜೀವತಃ ಪುರುಷಾಂತರಸ್ಯ ಭಾವೇ । ಪ್ರಲಯೇ ತು ಸರ್ವಪ್ರಲಯಾತ್ ಕಸ್ಮಾದುತ್ಪತ್ತಿಃ ?**

**ಅನುವಾದ**—ಪುರುಷನಲ್ಲಿ ಸ್ನಾಯುಗಳ ಮಧ್ಯೆ ಎಲುಬಿಗೆ ಅಂಟಿಕೊಂಡು ಯಾವ ಸ್ಥಿರವಾದ ವಸ್ತು ಇದೆಯೋ ಅದು, ವೃಕ್ಷದಲ್ಲಿ ತಿರುಳಿಗೆ ಅಂಟಿಕೊಂಡ ನಾರಿನಂತೆ. ಮರವು ಬೇರಿನಿಂದ ಮತ್ತೆ ಬೆಳೆಯುತ್ತದೆ ಎನ್ನುವುದು ಕೇವಲ ಬೇರೆಯವರ ದೃಷ್ಟಿಯಿಂದ ಹೇಳಿದ ಮಾತು. ಯಾಜ್ಞವಲ್ಕ್ಯರ ಸ್ವಂತ ಅಭಿಪ್ರಾಯವಲ್ಲ. ಏಕೆಂದರೆ 'ಮಹಾಪ್ರಳಯದಲ್ಲಿ ಬೇರುಸಹಿತ ನಾಶವಾದಾಗ' ಎಂದು ಮುಂದೆ ಆ ಅಭಿಪ್ರಾಯವನ್ನು ಅವರೆ ಖಂಡಿಸಿದ್ದಾರೆ. ಒಬ್ಬನ ರೇತಸ್ಸಿನಿಂದ ಇನ್ನೊಬ್ಬನು ಹುಟ್ಟುವುದು ಜೀವಂತನಾದ ಆ ಪುರುಷನಿದ್ದಾಗ ಮಾತ್ರ ಸಾಧ್ಯ. ಪ್ರಲಯದಲ್ಲಿ ಸರ್ವನಾಶವಾಗಿರುವುದರಿಂದ ಪ್ರಲಯಾನಂತರ ಯಾರಿಂದ ಜೀವಶರೀರದ ಉತ್ಪತ್ತಿಯಾಗುತ್ತದೆ?

**ಭಾಷ್ಯ—ತತ್ಪೃಷ್ಟಂ ಸರ್ವಂ ವಕ್ತುಮಶಕ್ತತ್ವಾತ್ ಪುರುಷಸ್ಯ ಪುನರುತ್ಪತ್ತೌ ಕಾರಣಂ ಭಗವಂತಂ ಜಾನಂತೋಽಪಿ ತೂಷ್ಣೀಮೃಷಯೋ ಬಭೂವುಃ । ಪುರುಷನಾಮಕತ್ವಾನ್ನಿತ್ಯಸ್ಯ ಜೀವಸ್ಯ ಯಾವನ್ಮುಕ್ತಿ ಪುನರುತ್ಪತ್ತ್ಯಾ ಭಾವ್ಯಮ್ । ನ ಶರೀರೇಣ ಸಹ ನಾಶಃ । ತಸ್ಯ ಚ ಸ್ವೋತ್ಪತ್ತಾವಸ್ವಾತಂತ್ರ್ಯಾದ್ ಅನ್ಯೇನೋತ್ಪಾದಕೇನ ಭಾವ್ಯಮ್ । ಕೋಽಸಾವಿತಿ ಪ್ರಶ್ನಾಶಯಃ ।**

**ಅನುವಾದ**—ಜೀವನ ಪುನರ್ಜನ್ಮಕ್ಕೆ ಷಡ್ಗುಣಸಂಪನ್ನನಾದ ಶ್ರೀಹರಿಯೇ ಕಾರಣ ಎಂದು ಋಷಿಗಳು ತಿಳಿದಿದ್ದಾರೆ. ಆದರೂ ಯಾಜ್ಞವಲ್ಕ್ಯರು ಕೇಳಿದ ಎಲ್ಲಾ ಪ್ರಶ್ನೆಗಳಿಗೆ ಉತ್ತರ ಹೇಳಲು ಅಸಮರ್ಥರಾದುದರಿಂದ ಸುಮ್ಮನೆ ಇದ್ದರು. ಪುರುಷ ಎಂಬ ಅನ್ವರ್ಥನಾಮವನ್ನು ಹೊಂದಿರುವುದರಿಂದ ಜೀವ ನಿತ್ಯ. ಮುಕ್ತಿ ಆಗುವವರೆಗೆ ಅವನು ಪುನಃ ಪುನಃ ಹುಟ್ಟಲೇಬೇಕು. ಏಕೆಂದರೆ ಮರಣಕಾಲದಲ್ಲಿ ಶರೀರದ ಜೊತೆಗೆ ಅವನಿಗೂ ನಾಶ ಉಂಟಾಗುವಂತಿಲ್ಲ. ಅವನು ತನ್ನ ಹುಟ್ಟಿನ ವಿಷಯದಲ್ಲಿ ತಾನು ಸ್ವತಂತ್ರನಲ್ಲ. ಬೇರೊಬ್ಬ ಉತ್ಪಾದಕನಿರಲೇಬೇಕು. ಅವನು ಯಾರು ಎಂಬುದು ಯಾಜ್ಞವಲ್ಕ್ಯರ ಪ್ರಶ್ನೆಯ ಆಶಯ.

ಭಾಷ್ಯ—ತೇಷು ತೂಷ್ಣೀಂಭೂತೇಷು ಸ್ವಯಮೇವ ಪರಿಹರತಿ ವಿಜ್ಞಾನಮಾನಂದಂ ಬ್ರಹ್ಮೇತಿ । ತಸ್ಯಾಪ್ಯನ್ಯ ಉತ್ಪಾದಕ ಇತ್ಯಾಶಂಕಾ ಮಾಭೂದಿತಿ ಜಾತ ಏವ ನ ಜಾಯತ ಇತ್ಯಾಹ । ಪುರುಷಾಂತರಾಪೇಕ್ಷಯಾ ಪುನಃಶಬ್ದಃ । ನ ತು ಕ್ರಿಯಾಭ್ಯಾಸಾಪೇಕ್ಷಯಾ । 'ಏಕ ಏವ ಹರಿರ್ಬಂಧುಃ ಪುನರನ್ಯೋ ನ ವಿದ್ಯತೇ' ಇತಿವತ್ । ರಾತಿರಿಷ್ಟಃ । ತಿಷ್ಠಮಾನಸ್ಯ ತದ್ವಿದಃ ಪರಾಯಣಮ್ ।

**ಅನುವಾದ**—ಆ ಋಷಿಗಳು ಸುಮ್ಮನಿರಲು ಯಾಜ್ಞವಲ್ಕ್ಯರು ಪ್ರಶ್ನೆಯನ್ನು ತಾವೇ ಪರಿಹರಿಸುತ್ತಾರೆ, 'ಸರ್ವಜ್ಞನೂ ಪೂರ್ಣಾನಂದನೂ ಆದ ನಾರಾಯಣನೇ ಮೂಲಕಾರಣ' ಎಂದು. ಆ ನಾರಾಯಣನಿಗೂ ಬೇರೊಬ್ಬ ಜನಕನಿದ್ದಾನೆಯೇ ಎಂಬ ಪ್ರಶ್ನೆಯೇ ಹುಟ್ಟದಿರಲೆಂದು 'ಅನಾದಿಕಾಲದಿಂದ ಚಿನ್ಮಯಶರೀರ ಸಹಿತನಾಗಿಯೇ ಇದ್ದಾನೆ. ಹುಟ್ಟುವುದಿಲ್ಲ' ಎಂದು ಹೇಳಿದ್ದಾರೆ. 'ಪುನಃ' ಶಬ್ದವು 'ಪುನಃ ಕಃ', ಇನ್ನೊಬ್ಬಪುರುಷನಾರು ಎಂದು ಬೇರೆ ಪುರುಷ ಎಂಬ ಅರ್ಥವುಳ್ಳದ್ದು. 'ಪುನಃ ಜನಯೇತ್' ಎಂದು ಅನ್ವಯ ಮಾಡಿ, 'ಪುನಃ ಹುಟ್ಟಿಸುವುದು' ಎಂಬ ಅರ್ಥಗ್ರಹಿಸುವುದು ಸರಿಯಲ್ಲ. 'ಏಕ ಏವ ಹರಿರ್ಬಂಧುಃ' ಹರಿಯೊಬ್ಬನೇ ಬಂಧು, 'ಪುನರನ್ಯೋ ನ ವಿದ್ಯತೇ' ಮತ್ತೊಬ್ಬನಿಲ್ಲ ಎಂಬ ಪ್ರಯೋಗದಲ್ಲಿ 'ಪುನಃ' ಶಬ್ದವು ಹೇಗೆ ಎರಡನೆಯವನು ಎಂಬ ಅರ್ಥವುಳ್ಳದ್ದೋ ಹಾಗೇ ಇದು. ರಾತಿಃ ಅಂದರೆ ಧನವೆಂದರ್ಥವಲ್ಲ. ಪ್ರಿಯ ಎಂದರ್ಥ. 'ತಿಷ್ಠಮಾನಸ್ಯ ತದ್ವಿದಃ' ಎಂಬುದು 'ಪರಾಯಣಂ' ಎಂಬುದರ ಜೊತೆ ಸೇರಿ ಧ್ಯಾನನಿರತನಾದ ಭಕ್ತನಿಗೆ ಶ್ರೀಹರಿ ಅತ್ಯುತ್ತಮ ಆಶ್ರಯ ಎಂಬ ಅರ್ಥ ಕೊಡುತ್ತದೆ.

ಭಾಷ್ಯ—ವಿಜಿತ್ಯ ಸರ್ವಾನ್ ಪಪ್ರಚ್ಛ ಯಾಜ್ಞವಲ್ಕ್ಯಃ ಪುನರ್ಮುನೀನ್ ।
ಯಥಾ ವನಸ್ಪತೌ ವೃಕ್ಷಶಬ್ದ ಏವಂ ಯಥಾರ್ಥತಃ ।
ಪುರುಷೇಽಪಿ ಹಿ ತಚ್ಛಬ್ದೋ ನಿತ್ಯತ್ವಾದೇವ ಯುಜ್ಯತೇ ।
ತಸ್ಮಾನ್ನಾಸ್ಯ ಶರೀರೇಣ ನಾಶಸ್ತಸ್ಮಾತ್ ಪುನರ್ಜನಿಃ ।
ಆ ಮುಕ್ತೇರ್ಭವಿತಾ ನಿತ್ಯಂ ಕುತಸ್ತದಿತಿ ಚೋಚ್ಯತಾಮ್ ।
ರೇತಸೋ ಜನನಂ ಯಾವತ್ ಪ್ರಲಯಸ್ತಾವದೇವ ಹಿ ।
ನಿರ್ಮೂಲಸ್ಯ ಚ ವೃಕ್ಷಸ್ಯ ಪ್ರಲಯೋ ಪುರುಷಸ್ಯ ಚ ।
ಪುನರುತ್ಪಾದಕೋ ಯಸ್ತಂ ವದಂತು ಮಮ ಕೃತ್ಸ್ನಶಃ ।
ಧಾನಾಜಾತ ಇವಾಯಂ ಹಿ ದೃಶ್ಯತೇಽವಿದುಷಾಂ ತರುಃ ।
ಅಸ್ವಾತಂತ್ರ್ಯಾತ್ತು ವಿದುಷಾಂ ನೈವ ತತ್ ಕಾರಣಂ ಭವೇತ್ ।
ಅಂಜಸಾ ಪ್ರೇತ್ಯ ಸಂಭೂತಿಕಾರಣಂ ತದ್ ವದಂತು ನಃ ।

ಪ್ರೇತ್ಯ ಸಂಭೂತಿಕರ್ತಾ ಹಿ ಸ್ವತಂತ್ರೋ ಘಟತೇ ಯತಃ ।
ಇತಿ ಪೃಷ್ಟಾಸ್ತು ಮುನಯೋ ನ ವಕ್ತುಂ ಶೇಕುರಂಜಸಾ ।
ತದ್ವೇತ್ತಾರೋಽಪಿ ತತ್ಪ್ರಶ್ನನಿರ್ಮೂಲನಬಲೋಜ್ಝಿತಾಃ ।

**ಅನುವಾದ**—ಯಾಜ್ಞವಲ್ಕ್ಯರು ವಾದದಲ್ಲಿ ಎಲ್ಲಾ ಮುನಿಗಳನ್ನು ಗೆದ್ದು ಪುನಃ ಅವರನ್ನು ಪ್ರಶ್ನಿಸಿದರು. 'ವನಸ್ಪತಿ ಎಂಬರ್ಥದಲ್ಲಿ ವೃಕ್ಷಶಬ್ದವು ಹೇಗೆ ಅನ್ವರ್ಥವೋ ಹಾಗೆಯೇ ಜೀವ ಎಂಬ ಅರ್ಥದಲ್ಲಿ ಪುರುಷ ಶಬ್ದವು ಜೀವನು ನಿತ್ಯನಾದುದರಿಂದ ಅನ್ವರ್ಥವಾಗಿ ಯುಕ್ತವಾಗಿದೆ. ಜೀವನಿಗೆ ಶರೀರದ ಜೊತೆಗೆ ನಾಶವಿಲ್ಲ. ಆದ್ದರಿಂದ ಅವನಿಗೆ ಮುಕ್ತಿಯವರೆಗೆ ತಪ್ಪದೇ ಪುನರ್ಜನ್ಮವಿದೆ. ಅದು ಯಾರಿಂದ ಆಗುವುದು? ಹೇಳಿರಿ. ರೇತಸ್‌ನಿಂದ ಜನ್ಮವು ಪ್ರಲಯದ ವರೆಗೆ ಮಾತ್ರ ಸಾಧ್ಯ. ಪ್ರಲಯಾನಂತರ ವೃಕ್ಷ ಮತ್ತು ಜೀವರ ಪುನರುತ್ಪಾದಕನು ಯಾರು? ಅದನ್ನು ಪೂರ್ಣವಾಗಿ ನನಗೆ ಹೇಳಿರಿ. ಮರವು ಬೀಜದಿಂದ ಹುಟ್ಟುವುದೆಂದು ಅಜ್ಞಾನಿಗಳಿಗೆ ತೋರುವುದು. ಆದರೆ ಅಸ್ವತಂತ್ರವಾದುದರಿಂದ, ಅದು ಕಾರಣ ವೆಂದು ಜ್ಞಾನಿಗಳಿಗೆ ಒಪ್ಪಿಗೆ ಇಲ್ಲ. ಪ್ರಳಯದಲ್ಲಿ ಸಂಪೂರ್ಣ ನಾಶವಾಗಿರುವ ಮರದ ಮತ್ತು ಜೀವನ ಉತ್ಪತ್ತಿಗೆ ಯಾವುದು ಕಾರಣ? ಅದನ್ನು ನಮಗೆ ಹೇಳಿರಿ. ಪ್ರಲಯ ದಲ್ಲಿ ನಾಶಹೊಂದಿರುವ ವಸ್ತುಗಳ ಪುನರುತ್ಪತ್ತಿಯನ್ನು ಆದಿ ಸೃಷ್ಟಿಯಲ್ಲಿ ಮಾಡು ವವನು ಸ್ವತಂತ್ರನಾಗಿರಬೇಕು. ಹೀಗೆ ಯಾಜ್ಞವಲ್ಕ್ಯರು ಕೇಳಿದಾಗ ಮುನಿಗಳು, ಪ್ರಲಯಾನಂತರ ಮೊದಲಿಗೆ ಸೃಷ್ಟಿ ಕಾರಣನಾದವ ನಾರಾಯಣನೆಂದು ತಿಳಿದಿದ್ದರೂ, ಯಾಜ್ಞವಲ್ಕ್ಯರ ಎಲ್ಲ ಪ್ರಶ್ನೆಗಳಿಗೆ ಸಂಪೂರ್ಣ ಪರಿಹಾರವನ್ನು ಕೊಡಲು ಸಾಮರ್ಥ್ಯ ವಿಲ್ಲದಿದ್ದುದರಿಂದ ಚೆನ್ನಾಗಿ ಉತ್ತರ ಹೇಳಲು ಸಮರ್ಥರಾಗಲಿಲ್ಲ.

**ಭಾಷ್ಯ**—ಅಧಾಷ್ಟ್ಯಾರ್ತ್ ಮತ್ಪ್ರಭಾವೇನ ಧರ್ಷಿತಾ ನಾಶಕನ್ ಯದಾ ।
ಸ್ವಯಮೇವ ತದೋವಾಚ ಯಾಜ್ಞವಲ್ಕ್ಯೋ ಮಹಾಮುನಿಃ ।
ಪೂರ್ಣಾನಂದೋ ಹರಿರ್ನಾನ್ಯಃ ಕಾರಣಂ ಸೃಜ್ಯಸರ್ಜನೇ ।
ನೈವಾಸ್ಯ ಜನಕಃ ಕಶ್ಚಿನ್ನಿತ್ಯಜಾತೋ ಹ್ಯಸೌ ಹರಿಃ ।
ಸ ಪ್ರಿಯಃ ಸರ್ವದಾತೃಣಾಂ ಜ್ಞಾನಿನಾಂ ಪರಮಪ್ರಿಯಃ ।
ಯೇ ತು ತದ್ಭಾವಿತಾ ನಿತ್ಯಂ ತೇಷಾಮೇಷ ಪರಾಯಣಮ್ ।
ಇತಿ ನಾರಾಯಣೀಯೇ ।

ಇತಿ ಶಾಕಲ್ಯ ಬ್ರಾಹ್ಮಣಂ ॥

ಇತಿ ಶ್ರೀಮದಾನಂದತೀರ್ಥ ಭಗವತ್ಪಾದ ವಿರಚಿತೇ
ಬೃಹದಾರಣ್ಯಕೋಪನಿಷದ್ಭಾಷ್ಯೇ ತೃತೀಯೋಽಧ್ಯಾಯಃ ॥

**ಅನುವಾದ**—ಮಹಾಮುನಿ ಯಾಜ್ಞವಲ್ಕ್ಯರು ತಮ್ಮ ಪ್ರಭಾವದಿಂದ ಎದೆಗುಂದಿಸಲ್ಪಟ್ಟ ಮುನಿಗಳು ಧೈರ್ಯವಿಲ್ಲದೆ ಉತ್ತರ ಹೇಳಲು ಅಸಮರ್ಥರಾದಾಗ ತಾವೇ ಹೇಳಿದರು. 'ಸೃಷ್ಟಿಯೋಗ್ಯ ಜೀವರ ಸೃಷ್ಟಿಗೆ ಪೂರ್ಣಾನಂದನಾದ ಹರಿಯೇ ಕಾರಣ. ಬೇರೆ ಯಾರೂ ಅಲ್ಲ. ಶ್ರೀಹರಿಗೆ ಯಾರೂ ಜನಕನಿಲ್ಲ. ಅವನು ಯಾವಾಗಲೂ ಜ್ಞಾನಾನಂದ ಶರೀರಸಹಿತನಾಗಿಯೇ ಇರುವನು. ಅವನು ಯಜ್ಞಾದಿಗಳಲ್ಲಿ ಹವಿಸ್ಸನ್ನು ನೀಡುವವರಿಗೆ ಪ್ರಿಯ. ಜ್ಞಾನಿಗಳಿಗೆ ಪರಮಪ್ರಿಯ. ಯಾರು ಯಾವಾಗಲೂ ಅವನ ಧ್ಯಾನದಲ್ಲಿ ಮಗ್ನರೋ ಅವರಿಗೆ ಅವನೇ ಅತಿ ಶ್ರೇಷ್ಠ ಆಶ್ರಯ ಎಂದು ನಾರಾಯಣೀಯದಲ್ಲಿದೆ.

ಇಲ್ಲಿಗೆ ಶಾಕಲ್ಯ ಬ್ರಾಹ್ಮಣವು ಮುಗಿಯಿತು.

ಶ್ರೀಮದಾನಂದತೀರ್ಥ ಭಗವತ್ಪಾದ ವಿರಚಿತ

ಶ್ರೀ ಬೃಹದಾರಣ್ಯಕೋಪನಿಷದ್ಭಾಷ್ಯದಲ್ಲಿ ಮೂರನೇ ಅಧ್ಯಾಯವು ಮುಗಿಯಿತು.

## ಅಧ್ಯಾಯ ನಾಲ್ಕು

### ಯಾಜ್ಞವಲ್ಕ್ಯರಲ್ಲಿ ಜನಕರಾಜನ ಶಿಷ್ಯವೃತ್ತಿ :

**ಉಪನಿಷತ್—ಜನಕೋ ಹ ವೈದೇಹ ಆಸಾಂಚಕ್ರೇ । ಅಥಹ ಯಾಜ್ಞವಲ್ಕ್ಯ ಆವವ್ರಾಜ । ತಂ ಹೋವಾಚ । ಯಾಜ್ಞವಲ್ಕ್ಯ ಕಿಮರ್ಥಮಚಾರೀಃ । ಪಶೂನಿಚ್ಛನ್ ಅಣ್ವಂತಾನ್ ಇತಿ । ಉಭಯಮೇವ ಸಮ್ರಾಳ್ ಇತಿ ಹೋವಾಚ ।**

ಮುನಿಗಳ ಪಾಂಡಿತ್ಯ ಪರೀಕ್ಷೆ ಮಾಡಿದ ಬಳಿಕ ಒಂದು ದಿನ ವಿದೇಹರಾಜನಾದ ಜನಕನು ಸಿಂಹಾಸನದಲ್ಲಿ ಕುಳಿತಿದ್ದನು. ಆಗ ಯಾಜ್ಞವಲ್ಕ್ಯರು ಸಮೀಪಕ್ಕೆ ಬಂದರು. ಜನಕನು ಅವರನ್ನು ಸತ್ಕರಿಸಿ ಕೇಳಿದನು 'ಯಾಜ್ಞವಲ್ಕ್ಯರೇ, ನೀವು ಏಕೆ ದೇಶಾಟನೆ ಕೈಗೊಂಡಿರಿ? ಪಶುಗಳನ್ನು ಅಪೇಕ್ಷಿಸಿಯೇ ಅಥವಾ ಸೂಕ್ಷ್ಮ ಸಿದ್ಧಾಂತ ತತ್ತ್ವಗಳನ್ನು ಜನರಿಗೆ ಉಪದೇಶಿಸುವುದಕ್ಕಾಗಿಯೇ?' ಆಗ ಯಾಜ್ಞವಲ್ಕ್ಯರು 'ರಾಜನೇ! ಎರಡನ್ನೂ ಬಯಸಿ ಸಂಚರಿಸುತ್ತಿದ್ದೇನೆ' ಎಂದು ಹೇಳಿದರು.

**ಭಾಷ್ಯ—ಅಣುರ್ಭಗವಾನ್ । ತದ್ವಿಷಯಾನ್ ನಿರ್ಣಯಾನ್ ವಕ್ತುಂ ವಾ ?**

**ಅನುವಾದ**—'ಅಣು ಎಂದರೆ ಸೂಕ್ಷ್ಮನಾದ ಭಗವಂತ. ಅವನ ಬಗ್ಗೆ ಸಿದ್ಧಾಂತ ಪ್ರಮೇಯಗಳನ್ನು ಹೇಳುವುದಕ್ಕಾಗಿಯೇ? ಎಂದು ಇದು ಜನಕನ ಪ್ರಶ್ನೆಯೇ

ಹೊರತು 'ಪಶುಗಳು ಮತ್ತು ಸಿದ್ಧಾಂತ ತತ್ತ್ವಜ್ಞಾನಗಳೆರಡನ್ನೂ ಬಯಸಿ ಸಂಚರಿಸುತ್ತೇನೆ' ಎಂದು ಯಾಜ್ಞವಲ್ಕ್ಯರ ಉತ್ತರವಲ್ಲ.

**ವಾಕ್‌ನಾಮಕ ಭಗವಂತನ ಉಪಾಸನೆ :**

**ಉಪನಿಷತ್—'ಯತ್ ತೇ ಕಶ್ಚಿದಬ್ರವೀತ್ ತತ್ ಶೃಣವಾಮ' ಇತಿ । ಅಬ್ರವೀತ್ ಮೇ ಜಿತ್ವಾ ಶೈಲಿನಿಃ 'ವಾಗ್ ವೈ ಬ್ರಹ್ಮ' ಇತಿ । ಯಥಾ ಮಾತೃಮಾನ್ ಪಿತೃಮಾನಾಚಾರ್ಯವಾನ್ ಬ್ರೂಯಾತ್ ತಥಾ ತಚ್ಛೈಲಿನೋಽಬ್ರವೀದ್ 'ವಾಗ್ ವೈ ಬ್ರಹ್ಮ' ಇತಿ । ಅವದತೋ ಹಿ ಕಿಂ ಸ್ಯಾದಿತಿ। ಅಬ್ರವೀತ್ ತು ತೇ ತಸ್ಯಾಯತನಂ ಪ್ರತಿಷ್ಠಾಂ? 'ನ ಮೇಽಬ್ರವೀತ್' ಇತಿ । 'ಏಕಪಾದ್ ವಾ ಏತತ್ ಸಮ್ರಾಳ್' ಇತಿ । 'ಸ ವೈ ನೋ ಬ್ರೂಹಿ ಯಾಜ್ಞವಲ್ಕ್ಯ' 'ವಾಕ್ ಏವ ಆಯತನಂ । ಆಕಾಶಃ ಪ್ರತಿಷ್ಠಾ । ಪ್ರಜ್ಞಾ ಇತಿ ಏನದುಪಾಸೀತ ।' 'ಕಾ ಪ್ರಜ್ಞತಾ ಯಾಜ್ಞವಲ್ಕ್ಯ ?' ವಾಕ್ ಏವ ಸಮ್ರಾಳ್ ಇತಿ ಹೋವಾಚ । ವಾಚಾ ವೈ ಸಮ್ರಾಳ್ ಬಂಧುಃ ಪ್ರಜ್ಞಾಯತೇ । ಋಗ್ವೇದೋ ಯಜುರ್ವೇದಃ ಸಾಮವೇದೋಽಥರ್ವಾಂಗಿರಸ ಇತಿಹಾಸಃ ಪುರಾಣಂ ವಿದ್ಯಾ ಉಪನಿಷದಃ ಶ್ಲೋಕಾಃ ಸೂತ್ರಾಣಿ ಅನುವ್ಯಾಖ್ಯಾನಾನಿ ವ್ಯಾಖ್ಯಾನಾನಿ ಇಷ್ಟಂ ಹುತಮ್ ಆಶಿತಂ ಪಾಯಿತಮ್ ಅಯಂ ಚ ಲೋಕಃ ಪರಶ್ಚ ಲೋಕಃ ಸರ್ವಾಣಿ ಚ ಭೂತಾನಿ ವಾಚಾ ಏವ ಸಮ್ರಾಟ್ ಪ್ರಜ್ಞಾಯಂತೇ । ವಾಗ್ ವೈ ಸಮ್ರಾಟ್ ಪರಮಂ ಬ್ರಹ್ಮ–ನೈನಂ ವಾಗ್ ಜಹಾತಿ । ಸರ್ವಾಣಿ ಏನಂ ಭೂತಾನಿ ಅಭಿಕ್ಷರಂತಿ । ದೇವೋ ಭೂತ್ವಾ ದೇವಾನಪ್ಯೇತಿ ಯ ಏವಂ ವಿದ್ವಾನ್ ಏತದುಪಾಸ್ತೇ । ಹಸ್ತ್ಯೃಷಭಂ ಸಹಸ್ರಂ ದದಾಮಿ ಇತಿ ಹೋವಾಚ ಜನಕೋ ವೈದೇಹಃ । ಸ ಹೋವಾಚ ಯಾಜ್ಞವಲ್ಕ್ಯಃ । ಪಿತಾ ಮೇ ಅಮನ್ಯತ ನಾನನುಶಿಷ್ಯ ಹರೇತ ಇತಿ ।**

'ಹಾಗಾದರೆ ನನಗೆ ಆ ಸಿದ್ಧಾಂತ ತತ್ತ್ವಗಳನ್ನು ಹೇಳಿ' ಎಂದು ಜನಕನು ಕೇಳಿದಾಗ 'ನಿನಗೆ ಯಾರಾದರೂ ಈ ಮೊದಲು ಉಪದೇಶಿಸಿರಬಹುದಾದ ಅಂಶವನ್ನು ಹೇಳು. ನಾವು ಕೇಳುತ್ತೇವೆ' ಎಂದರು ಯಾಜ್ಞವಲ್ಕ್ಯರು. ಜನಕನು ಹೇಳಿದನು "ಶಿಲಿನನ ಮಗನಾದ ಜಿತ್ವರು, 'ಪೂರ್ಣವಕ್ತೃತ್ವಶಕ್ತಿ ಉಳ್ಳ ಭಗವಂತನೇ ವಾಕ್ ಎಂದು ಪ್ರಸಿದ್ಧ' ಎಂದು ನನಗೆ ಉಪದೇಶಿಸಿರುವರು' 'ಪೂರ್ಣವಕ್ತೃತ್ವಶಕ್ತಿಉಳ್ಳ ಭಗವಂತನೇ ವಾಕ್‌ನಾಮಕನೆಂದು ಶೈಲಿನರು ಉಪದೇಶಿಸಿದುದು ತಾಯಿ ತಂದೆ

ಮತ್ತು ಗುರುಗಳಿಂದ ಶಿಕ್ಷಣ ಪಡೆದವನು ಮಾತ್ರ ಉಪದೇಶಿಸಬಹುದಾದ ಉತ್ತಮ ಉಪದೇಶವಾಗಿದೆ. ಏಕೆಂದರೆ ವಾಕ್‌ನಾಮಕ ಭಗವಂತನ ಸನ್ನಿಧಾನವಿಲ್ಲದವನಿಗೆ ಅಧ್ಯಯನಾದಿ ನಿತ್ಯಕರ್ಮವೂ ಅಶಕ್ಯವಾಗುವುದರಿಂದ ಜೀವನದಲ್ಲಿ ಅವನಿಗೇನು ಫಲ ಲಭಿಸೀತು? ಆದ್ದರಿಂದ ಭಗವಂತನನ್ನು ವಾಙ್‌ನಾಮಕನೆಂದು ಉಪಾಸನೆ ಮಾಡುವುದು ಯುಕ್ತವೆ. ಆದರೆ ಆ ಶೈಲಿನರು ನಿನಗೆ ವಾಕ್‌ನಾಮಕ ಬ್ರಹ್ಮನ ಸ್ಥಾನ, ಪ್ರತಿಮೆ, ವಾಕ್‌ಶಬ್ದಾರ್ಥಗಳ ಬಗ್ಗೆ ಉಪದೇಶಿಸಿರುವರೇ?' 'ನನಗೆ ಉಪದೇಶಿಸಿಲ್ಲ'. 'ಹಾಗಾದರೆ ರಾಜನೇ! ಈ ಉಪದೇಶವು ಅಪೂರ್ಣ. ಉಪಾಸ್ಯ ಭಗವನ್ಮೂರ್ತಿಯ ಸ್ಥಾನ, ಪ್ರತಿಮೆ, ನಾಮ ಮತ್ತು ಅದರ ಅರ್ಥ ಈ ನಾಲ್ಕರಲ್ಲಿ ನಿನಗೆ ನಾಮ ಒಂದನ್ನೇ ಅವರು ಉಪದೇಶಿಸಿದಂತಾಯಿತು. ಉಳಿದ ಮೂರನ್ನು ಉಪದೇಶಿಸಿಲ್ಲ'. 'ಯಾಜ್ಞವಲ್ಕ್ಯರೇ ! ನೀವೇ ನನಗೆ ದಯವಿಟ್ಟು ಉಪದೇಶಿಸಿರಿ'. 'ಈ ವಾಗಿಂದ್ರಿಯವೇ ವಾಕ್‌ನಾಮಕನ ಸ್ಥಾನ. ಆಕಾಶನಾಮಕಳಾದ ರಮಾದೇವಿಯು ಪ್ರತಿಮೆ. ಈ ವಾಕ್‌ನಾಮಕ ಬ್ರಹ್ಮನನ್ನು ಪ್ರಜ್ಞಾ ಎಂದು ಉಪಾಸನೆ ಮಾಡಬೇಕು'. 'ಪ್ರಜ್ಞಾ ಎಂದರೇನು ಯಾಜ್ಞವಲ್ಕ್ಯರೆ?' 'ರಾಜನೇ! ವಾಕ್‌ನಾಮಕ ಪರಬ್ರಹ್ಮನೇ ಪ್ರಜ್ಞಾ, ಏಕೆಂದರೆ ರಾಜನೆ! ವಾಕ್‌ನಾಮಕ ಭಗವದ್ರೂಪದಿಂದ ತಾನೆ ಹಿತೋಪದೇಶ ಮಾಡುತ್ತಾ ಬಂಧುವಿನಂತಿರುವ ಶಾಸ್ತ್ರವೆಲ್ಲವನ್ನೂ ತಿಳಿಯುತ್ತಾರೆ? ರಾಜನೆ! ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವವೇದ, ಇತಿಹಾಸ, ಪುರಾಣ, ಪಂಚರಾತ್ರಗದ್ಯ, ಉಪನಿಷತ್, ಪಂಚರಾತ್ರಶ್ಲೋಕ, ಬ್ರಹ್ಮಸೂತ್ರ ಮೊದಲಾದ ಸೂತ್ರ ಗ್ರಂಥಗಳು, ವೇದದ ವಿಸ್ತೃತ ವ್ಯಾಖ್ಯಾನಗಳಾದ ಬೃಹತ್ತರ್ಕ ಮೊದಲಾದವುಗಳು, ಬ್ರಹ್ಮತರ್ಕ ಮೊದಲಾದ ವೇದವ್ಯಾಖ್ಯಾನಗಳು, ಯಜ್ಞ ಹೋಮ ಅನ್ನದಾನ ಜಲದಾನ, ಈ ಲೋಕ ಪರಲೋಕಗಳು, ಎಲ್ಲ ಪ್ರಾಣಿಗಳು ಇವೆಲ್ಲವೂ ವಾಕ್‌ನಲ್ಲಿರುವ ವಾಕ್‌ನಾಮಕ ಭಗವದ್ರೂಪದಿಂದಲೇ ತಿಳಿಯಲ್ಪಡುತ್ತವೆಯಷ್ಟೆ? ಆದ್ದರಿಂದ ರಾಜನೇ! ವಾಕ್‌ನಲ್ಲಿರುವ ಪರಬ್ರಹ್ಮನೇ ಮುಖ್ಯವಾಗಿ ವಾಕ್. ಯಾರು ಹೀಗೆ ಸ್ಥಾನ-ಪ್ರತಿಮಾದಿಗಳನ್ನು ತಿಳಿದು ಪರಬ್ರಹ್ಮನನ್ನು ಉಪಾಸನೆ ಮಾಡುತ್ತಾರೋ ಅವರನ್ನು ವಾಕ್‌ನಾಮಕ ಪರಬ್ರಹ್ಮನು ಕೈಬಿಡುವುದಿಲ್ಲ. ಅವನು ದೇವತ್ವವನ್ನು ಹೊಂದುತ್ತಾನೆ. ಅನಂತರ ತನಗಿಂತ ಉತ್ತಮರಾದ ದೇವತೆಗಳಲ್ಲಿ ಸಾಯುಜ್ಯವನ್ನು ಹೊಂದಿ ಶ್ವೇತದ್ವೀಪಾದಿ ಧಾಮತ್ರಯದಲ್ಲಿರುವ ಶ್ರೀಹರಿಯ ರೂಪಗಳನ್ನು ಹೊಂದುತ್ತಾನೆ. ಅಲ್ಲಿ ತನಗಿಂತ ಕಿರಿಯರಾದ ಮುಕ್ತರು ಎಲ್ಲರೂ ಇವನನ್ನು ಸೇವಿಸುತ್ತ ಅಭೀಷ್ಟಗಳನ್ನು ನೆರವೇರಿಸುತ್ತಾರೆ'. ಹೀಗೆ ಯಾಜ್ಞವಲ್ಕ್ಯರು ಉಪದೇಶಿಸಿದಾಗ 'ಸಾವಿರ ಆನೆ ಎತ್ತುಗಳನ್ನು ಗುರುದಕ್ಷಿಣೆಯಾಗಿ ಕೊಡುತ್ತೇನೆ' ಎಂದು ವಿದೇಹ ರಾಜ ಜನಕನು ಹೇಳಿದನು. 'ಆದರೆ ನಾನು ಇನ್ನೂ ಉಪದೇಶಿಸಬೇಕಾದ್ದನ್ನು ಪೂರ್ಣವಾಗಿ ಉಪದೇಶಿಸಿಲ್ಲ. ಪೂರ್ಣವಾಗಿ ಉಪದೇಶಿಸದೆ ಗುರುದಕ್ಷಿಣೆಯನ್ನು

ತೆಗೆದುಕೊಳ್ಳಬಾರದು ಎಂದು ನಮ್ಮ ತಂದೆಯವರ ಅಭಿಪ್ರಾಯವಿದೆ' ಎಂದು ಯಾಜ್ಞವಲ್ಕ್ಯರು ಹೇಳಿದರು.

**ಭಾಷ್ಯ—ಪ್ರತಿಷ್ಠಾ ಪ್ರತಿಮಾ ಪ್ರೋಕ್ತಾ ಪ್ರತಿರೂಪೇಣ ಸಂಸ್ಥಿತೇಃ ।**
**ಪ್ರತಿಮಾಽಧಿಕಸಾದೃಶ್ಯಾನ್ಮುಖ್ಯಾ ವಿಷ್ಣೋಃ ಸದಾ ರಮಾ ।**
**ದೀಪ್ತತ್ವಾದಾ ಸಮಂತಾತ್ ಸಾ ಚಾಕಾಶ ಇತಿ ಗೀಯತೇ ।**
**ಪ್ರತ್ಯೇಕಂ ವಿಷ್ಣುರೂಪಾಣಾಮನ್ಯದಾಯತನಂ ಪೃಥಕ್ ।**
**ಇತ್ಯಧ್ಯಾತ್ಮೇ ।**

**ಅನುವಾದ**—ಪ್ರತಿ ಎಂದರೆ ಪ್ರತಿಬಿಂಬರೂಪದಿಂದ, ಷ್ಠಾ ಎಂದರೆ ಇದೆ ಎಂಬ ವಿವರಣೆಗನುಸಾರವಾಗಿ ಪ್ರತಿಷ್ಠಾ ಎಂದರೆ ಪ್ರತಿಮೆ ಎಂದರ್ಥ. ರಮಾದೇವಿಯು ಯಾವಾಗಲೂ ವಿಷ್ಣುವಿನ ಅಧಿಕಸಾದೃಶ್ಯವನ್ನು ಹೊಂದಿರುವುದರಿಂದ ಅವಳು ಮುಖ್ಯ ಪ್ರತಿಮೆ. ಎಲ್ಲ ಕಡೆಯೂ ಬೆಳಗುವುದರಿಂದ ರಮಾದೇವಿಯೇ ಆಕಾಶ ಎಂದು ಹೇಳಲ್ಪಡುತ್ತಾಳೆ. ಹೀಗೆ ರಮೆಯು ಒಬ್ಬಳೇ ಪ್ರತಿಮೆ. ಬೇರೆ ವಾಕ್ ಪ್ರಾಣ ಚಕ್ಷು ಶ್ರೋತ್ರ ಮನಸ್ ಹೃದಯ ಎಂಬ ಸ್ಥಾನಗಳು ಮಾತ್ರ ಆರು. ಏಕೆಂದರೆ ವಾಕ್ ಪ್ರಾಣಾದಿ ನಾಮಕವಾದ ಆರು ವಿಷ್ಣುರೂಪಗಳಿಗೆ ಅವು ಬೇರೆ ಬೇರೆಯಾಗಿ ಆರು ಸ್ಥಾನಗಳಾಗಿವೆ ಎಂದು ಅಧ್ಯಾತ್ಮ ಎಂಬ ಗ್ರಂಥದಲ್ಲಿ ಹೇಳಿದೆ.

**ಭಾಷ್ಯ—ಪ್ರತಿಮಾನಮವಸ್ಥಾನಂ ರಹಸ್ಯಂ ನಾಮ ಸಾರ್ಥಕಮ್ ।**
**ಚತುಷ್ಟಯಂ ಯದಾ ಜ್ಞಾತಂ ಸಮ್ಯಕ್ ವಿದ್ಯಾಫಲಂ ತದಾ ।**
**ಇತಿ ಚ ।**
**'ಕಾ ಪ್ರಜ್ಞತಾ? ವಾಗೇವೇ'ತ್ಯಾದೇರ್ಧರ್ಮಧರ್ಮ್ಯಭೇದಃ ।**

**ಅನುವಾದ**—ಪ್ರತಿಮೆ ಸ್ಥಾನ ರಹಸ್ಯನಾಮ ಮತ್ತು ಅದರ ಅರ್ಥ ಈ ನಾಲ್ಕನ್ನು ತಿಳಿದಾಗಲೇ ವಿದ್ಯೆಯ ಫಲವು ಪೂರ್ಣವಾಗಿ ಲಭಿಸುವುದು ಎಂದೂ ಅಧ್ಯಾತ್ಮದಲ್ಲಿ ಹೇಳಿದೆ. 'ಕಾ ಪ್ರಜ್ಞತಾ?' ಎಂಬ ಪ್ರಶ್ನೆಗೆ 'ವಾಕ್ ಏವ' ಎಂಬ ಉತ್ತರವು ಧರ್ಮಧರ್ಮಿಗಳಿಗೆ ಅಭೇದವಿದೆ ಎಂಬ ಅಭಿಪ್ರಾಯದಿಂದ ಸಂಗತವಾಗುತ್ತದೆ.

**ವಿವರಣೆ**—ವಾಕ್‌ನಲ್ಲಿ ಪ್ರಜ್ಞತಾ ಇರುತ್ತದೆ ಹೊರತು ವಾಕ್ ಪ್ರಜ್ಞತೆಯಲ್ಲ. ಆದ್ದರಿಂದ ಪ್ರಜ್ಞತಾ ಯಾವುದು? ಎಂಬ ಪ್ರಶ್ನೆಗೆ ವಾಕ್ ಎಂಬ ಉತ್ತರ ಹೇಗೆ? ಈ ಪ್ರಶ್ನೆಗೆ 'ಪ್ರಜ್ಞತಾ' ಧರ್ಮ. ವಾಕ್ ಅದನ್ನು ಹೊಂದಿರುವ ಧರ್ಮಿ ಎಂಬುದು ನಿಜ. ಆದರೂ ಧರ್ಮ ಧರ್ಮಿಗಳಿಗೆ ಅಭೇದವಿದೆ. ಆದ್ದರಿಂದ ಧರ್ಮವನ್ನು ಕೇಳಿದ್ದಕ್ಕೆ ಧರ್ಮಿಯನ್ನು ಹೇಳಿದೆ ಎಂದು ಸಮಾಧಾನ.

**ಭಾಷ್ಯ—ಅಮಿತಾಕ್ಷರಂ ಪಂಚರಾತ್ರಂ ವಿದ್ಯೇತ್ಯಾಹುರ್ಮನೀಷಣಃ ।**
**ಮಿತಾಕ್ಷರಂ ಶ್ಲೋಕವಾಚ್ಯಮುಭಯಂ ವೇದ ಈರ್ಯತೇ ।**
**ಇತಿ ಬ್ರಹ್ಮಾಂಡೇ ।**

**ಅನುವಾದ**—ವಿದ್ಯೆ ಎಂದರೂ, ಶ್ಲೋಕವೆಂದರೂ ಪಂಚರಾತ್ರವೆ. ಆದರೂ ಗದ್ಯರೂಪವಾದ ಪಂಚರಾತ್ರವನ್ನು ವಿದ್ಯಾ ಎಂದೂ, ಪದ್ಯರೂಪವಾದ ಪಂಚರಾತ್ರವನ್ನು ಶ್ಲೋಕ ಎಂದೂ ತಿಳಿದವರು ಹೇಳುತ್ತಾರೆ. ಆದ್ದರಿಂದ 'ವಿದ್ಯಾ ಉಪನಿಷದಃ ಶ್ಲೋಕಾಃ' ಎಂಬ ಉಪನಿಷದ್ವಾಕ್ಯದಲ್ಲಿ ಇವೆರಡೂ ಬೇರೆ ಬೇರೆಯಾಗಿ ಉಕ್ತವಾಗಿವೆ. ಪುನರುಕ್ತಿಯಾಗಿಲ್ಲ ಎಂದು ಬ್ರಹ್ಮಾಂಡಪುರಾಣದಲ್ಲಿ ಹೇಳಿದೆ.

**ಭಾಷ್ಯ—ಸೂತ್ರಂ ತು ಬ್ರಹ್ಮಸೂತ್ರಾಖ್ಯಂ ಮಹಾಮೀಮಾಂಸಿಕಾ ತಥಾ ।**
**ತಥಾ ಸಾಂಕರ್ಷಣಂ ಸೂತ್ರಂ ಬ್ರಹ್ಮತರ್ಕಾದಯಸ್ತಥಾ ।**
**ಪ್ರಕಾಶಿಕಾ ನಿರ್ಣಯಶ್ಚ ತತ್ತ್ವನಿರ್ಣಯ ಏವ ಚ ।**
**ವ್ಯಾಖ್ಯೇತಿ ಕಥಿತಾಃ ಸರ್ವಾಃ ಸ್ವಯಂ ಭಗವತಾ ಕೃತಾಃ ।**
**ಬೃಹತ್ತರ್ಕಾದಯಃ ಸರ್ವಾ ಅನುವ್ಯಾಖ್ಯಾಃ ಪ್ರಕೀರ್ತಿತಾಃ ।**
**ಇತಿ ಪ್ರತಿಸಂಖ್ಯಾನೇ ।**

**ಅನುವಾದ**—ಸೂತ್ರ ಎಂದರೆ ಬ್ರಹ್ಮಸೂತ್ರ, ಮಹಾಮೀಮಾಂಸಾ ಸೂತ್ರ ಮತ್ತು ಸಾಂಕರ್ಷಣ ಸೂತ್ರಗಳು. ಸಾಕ್ಷಾತ್ ಭಗವಂತನಿಂದಲೇ ರಚಿಸಲ್ಪಟ್ಟ ಬ್ರಹ್ಮತರ್ಕ ಮೊದಲಾದವು, ಪ್ರಕಾಶಿಕಾ, ನಿರ್ಣಯ ಮತ್ತು ತತ್ತ್ವನಿರ್ಣಯ ಇವೆಲ್ಲವುಗಳೂ ವ್ಯಾಖ್ಯಾನಗಳು. ಬೃಹತ್ತರ್ಕ ಮೊದಲಾದವುಗಳು ಅನುವ್ಯಾಖ್ಯಾನಗಳು ಎಂದು ಪ್ರಸಿದ್ಧವಾಗಿವೆ ಎಂದು ಪ್ರತಿಸಂಖ್ಯಾನ ಎಂಬ ಗ್ರಂಥದಲ್ಲಿ ಹೇಳಲಾಗಿದೆ.

**ಭಾಷ್ಯ—ವಾಕ್ ವಿಷ್ಣುರ್ವಾಚಕತ್ವೇನ ಪ್ರಾಣಃ ಪ್ರಣಯನಾತ್ ಸ್ವಯಮ್ ।**
**ಮನೋ ಮಂತೃತ್ವತೋ ನಿತ್ಯಂ ಸ ಚಕ್ಷುಃ ಸರ್ವದರ್ಶನಾತ್ ।**
**ಶ್ರೋತ್ರಂ ಶ್ರವಣಶಕ್ತಿತ್ವಾದ್ಧೃದಯಂ ಹೃದ್ಗತೋ ಯತಃ ।**
**ಇತಿ ಪ್ರತ್ಯಾಹಾರೇ ।**

**ಅನುವಾದ**—ವಿಷ್ಣು ಮಾತನಾಡುವ ಶಕ್ತಿಯನ್ನು ಕೊಡುವುದರಿಂದ 'ವಾಕ್' ಪ್ರೇರಣೆ ಮಾಡುವುದರಿಂದ 'ಪ್ರಾಣ' ತಿಳಿಯುವ ಶಕ್ತಿಯನ್ನು ಕೊಡುವುದರಿಂದ 'ಮಂತೃ' ಎಲ್ಲವನ್ನೂ ನೋಡುವ ಶಕ್ತಿಯನ್ನು ಕೊಡುವುದರಿಂದ 'ಚಕ್ಷುಸ್' ಕೇಳುವ ಶಕ್ತಿಯನ್ನು ಕೊಡುವುದರಿಂದ 'ಶ್ರೋತ್ರ' ಹೃದಯದಲ್ಲಿರುವುದರಿಂದ 'ಹೃದಯ' ಎನಿಸಿದ್ದಾನೆ ಎಂದು ಪ್ರತ್ಯಾಹಾರ ಎಂಬ ಗ್ರಂಥದಲ್ಲಿ ಹೇಳಲಾಗಿದೆ.

**ಭಾಷ್ಯ—ಅನ್ನಂ ಪ್ರಾಣಂ ಚಕ್ಷುಃ ಶ್ರೋತ್ರಂ ಮನೋ ವಾಚಮಿತಿ ।**
**ಇತ್ಯಾದಿ ಚ ।**
**ವಾಗಾದಿಷು ಸ್ಥಿತಂ ವಿಷ್ಣುಂ ಯ ಉಪಾಸ್ತೇ ಸದೈವ ತು ।**
**ವಾಗಾದಿನಾಮ್ನಾ ನೈನಂ ಸ ಪ್ರಜಹಾತಿ ಕದಾಚನ ।**
**ಇತಿ ಸತ್ತತ್ತ್ವೇ ।**

**ಅನುವಾದ**—ಆ ಬ್ರಹ್ಮನನ್ನು ಉಪದೇಶಿಸೆಂದು ಪ್ರಾರ್ಥಿಸಿದ ಭೃಗು ಮುನಿಗೆ ವರುಣನು 'ಅನ್ನ, ಪ್ರಾಣ, ಚಕ್ಷುಸ್, ಶ್ರೋತ್ರ, ಮನಸ್, ವಾಕ್ ಎಲ್ಲವೂ ಬ್ರಹ್ಮ' ಎಂದು ಮುಂತಾಗಿ ಉಪದೇಶಿಸಿದನೆಂದು ತೈತ್ತಿರೀಯ ಉಪನಿಷತ್ತಿನಲ್ಲಿ ಹೇಳಿದೆ. ಆದರಿಂದ ಪರಬ್ರಹ್ಮನಿಗೆ ವಾಕ್ ಮೊದಲಾದ ಹೆಸರುಗಳಿವೆ ಎಂದು ತಿಳಿಯುತ್ತದೆ. 'ವಾಕ್ ಮೊದಲಾದವುಗಳಲ್ಲಿ ವಾಕ್ ಮೊದಲಾದ ಹೆಸರಿನಿಂದ ಇರುವ ವಿಷ್ಣುವನ್ನು ಯಾರು ಯಾವಾಗಲೂ ಉಪಾಸನೆ ಮಾಡುವನೋ ಅವನನ್ನು ವಿಷ್ಣುವು ಎಂದೂ ಕೈಬಿಡುವುದಿಲ್ಲ' ಎಂದು ಸತ್ತತ್ತ್ವ ಎಂಬ ಗ್ರಂಥದಲ್ಲಿ ಹೇಳಲಾಗಿದೆ.

**ಭಾಷ್ಯ—ಅತ ಆಯತನನೋವ ವಾಗಿಂದ್ರಿಯಾದಿ । ಪರಮಂ ಬ್ರಹ್ಮೇತಿ ವಚನಾನ್ನ ವಾಗಿಂದ್ರಿಯಾದಿಮಾತ್ರಮುಪಾಸ್ಯಮ್ ।**

**ಅನುವಾದ**—ಹೀಗೆ ವಾಕ್ ಮುಂತಾದ ಶಬ್ದವು ಬ್ರಹ್ಮನ ನಾಮವೆಂದು ಪ್ರಮಾಣಗಳು ತಿಳಿಸುತ್ತಿರುವುದರಿಂದ 'ವಾಗೇವಾಯತನಂ' ಎಂದು ಮುಂತಾಗಿ ಸ್ಥಾನಗಳನ್ನು ಹೇಳುವಲ್ಲಿ ಮಾತ್ರ ವಾಕ್ ಮುಂತಾದವು ಇಂದ್ರಿಯಗಳು. ಹೊರತು 'ವಾಗ್ವೈ ಬ್ರಹ್ಮ' ಎಂದು ಮುಂತಾಗಿ ಬ್ರಹ್ಮನನ್ನು ಹೇಳುವಲ್ಲಿ ವಾಕ್ ಮುಂತಾದವು ಇಂದ್ರಿಯಗಳಲ್ಲ, ಬ್ರಹ್ಮನೇ. ಇಂದ್ರಿಯಗಳೆಂದಿಟ್ಟುಕೊಂಡರೆ ಅವುಗಳಿಗೆ ಇಂದ್ರಿಯಗಳನ್ನು ಸ್ಥಾನವೆಂದು ಹೇಳುವುದು ಸಮಂಜಸವಾಗಲಾರದು. ಇಂದ್ರಿಯಗಳು ತಮಗೆ ತಾವೇ ಸ್ಥಾನವೆನ್ನುವುದು ವಿರುದ್ಧ. 'ವಾಗ್ ವೈ ಸಮ್ರಾಟ್ ಪರಮಂ ಬ್ರಹ್ಮ', 'ಸ ಯ ಏವಂ ವಿದ್ವಾನೇತದುಪಾಸ್ತೇ' ಎಂದು ಹೇಳುವುದೂ ಸರಿಯಾಗದು. ಇಂದ್ರಿಯಗಳು ಜಡವಾದುದರಿಂದ ಅವುಗಳಲ್ಲಿ ಉಪಾಸ್ಯತ್ವ ಮತ್ತು ಪರಬ್ರಹ್ಮತ್ವಗಳು ಇಲ್ಲ. ಆದ್ದರಿಂದ ವಾಗ್ವೈ ಬ್ರಹ್ಮ ಎಂದು ಮುಂತಾಗಿ ವಾಗಾದಿನಾಮಕ ಬ್ರಹ್ಮನನ್ನೇ ಹೇಳಿದೆ ಎಂದು ಒಪ್ಪಬೇಕು.

**ಭಾಷ್ಯ—ಪ್ರತಿಮಾದ್ಯಂ ಹರಿತ್ವೇನ ಪೃಥಿವ್ಯಾದ್ಯಮಥಾಪಿ ವಾ ।**
**ಇಂದ್ರಿಯ ಪ್ರಾಣ ಜೀವಾದ್ಯಮಥವಾ ಯ ಉಪಾಸತೇ ।**
**ಮಿಥ್ಯೋಪಾಸ್ತಿಮತಾಂ ತೇಷಾಂ ನಿಷ್ಕೃತಿರ್ನ ಕದಾಚನ ।**

**ಅತಿದುಃಖೇ ಪತಂತ್ಯದ್ಧಾ ತಮಸ್ಯಂಧೇ ಪತಂಗವತ್ ।**
**ಇತ್ಯುಪಾಸನಾನಿರ್ಣಯೇ।**

**ಅನುವಾದ**—ವಾಗಾದಿ ಇಂದ್ರಿಯಗಳು ಜಡವಾಗಿದ್ದು ಪರಬ್ರಹ್ಮರೂಪವಲ್ಲದಿದ್ದರೂ ಹಾಗೆ ಉಪಾಸನೆ ಮಾಡಬಹುದು ಎಂದರೆ ಅದು ಮಿಥ್ಯೋಪಾಸನೆಯಾಗುವುದು. ಮಿಥ್ಯೋಪಾಸನೆ ಅನರ್ಥಕರ. 'ಪ್ರತಿಮೆ ಮೊದಲಾದವುಗಳನ್ನೂ, ಪೃಥಿವೀ ಮೊದಲಾದವುಗಳನ್ನೂ, ಇಂದ್ರಿಯ, ಪ್ರಾಣ, ಜೀವ ಮೊದಲಾದವರನ್ನೂ ಹರಿ ಎಂದು ಯಾರು ಉಪಾಸನೆ ಮಾಡುತ್ತಾರೋ ಅವರು ಮಿಥ್ಯೋಪಾಸಕರು. ಆ ಮಿಥ್ಯೋಪಾಸಕರಿಗೆ ಎಂದೂ ಪ್ರಾಯಶ್ಚಿತ್ತವಿಲ್ಲ. ಅಗ್ನಿಯಲ್ಲಿ ಪತಂಗವು ಬೀಳುವಂತೆ ಅವರು ದುಃಖಮಯವಾದ ಅಂಧಂತಮಸ್ಸಿನಲ್ಲಿ ಬೀಳುತ್ತಾರೆ' ಎಂದು ಉಪಾಸನಾ ನಿರ್ಣಯದಲ್ಲಿ ಹೇಳಿದೆ.

**ಭಾಷ್ಯ—ಸರ್ವೇಂದ್ರಿಯೇಷು ಯಾ ವಿಷ್ಣೋರುಪಾಸಾ ಯುಗಪತ್ ಸದಾ ।**
**ದೇವಾನಾಮೇವ ಯೋಗ್ಯಾ ಸಾ ತಯಾ ದೇವತ್ವಮಾಪ್ನುಯುಃ ।**
**ಸರ್ವೇ ದೇವಪದೇ ಯೋಗ್ಯಾಃ ಸಾಯುಜ್ಯಂ ಸ್ವೋತ್ತಮೇಷ್ವಥ ।**
**ಸಂಪ್ರಾಪ್ಯ ಬ್ರಹ್ಮಣಾ ಸಾರ್ಧಂ ಪ್ರಾಪ್ನುಯುಃ ಪುರುಷೋತ್ತಮಂ ।**
**ದುಹಂತಿ ಸರ್ವಭೋಗಾಂಶ್ಚ ತೇಭ್ಯೋಽನ್ಯೇ ಮುಕ್ತಿಗಾ ನರಾಃ ।**
**ಸ್ವೋತ್ತಮೇಭ್ಯಶ್ಚ ದೇವೇಭ್ಯಸ್ತೇ ಮುಕ್ತಾ ಹರಯೇ ಸದಾ ।ಇತಿ ಚ।**

**ಅನುವಾದ**—ಏಕಕಾಲದಲ್ಲಿ ಎಲ್ಲ ಇಂದ್ರಿಯಗಳಲ್ಲಿ ವಿಷ್ಣುವಿನ ಉಪಾಸನೆಗೆ ದೇವತೆಗಳು ಮಾತ್ರ ಅರ್ಹರು. ಆ ಉಪಾಸನೆಯಿಂದ ದೇವಪದವಿಗೆ ಯೋಗ್ಯರಾದವರೆಲ್ಲರೂ ದೇವತ್ವವನ್ನು ಹೊಂದುವರು. ಅನಂತರ ತಮಗಿಂತ ಉತ್ತಮರಾದ ದೇವತೆಗಳಲ್ಲಿ ಸಾಯುಜ್ಯವನ್ನು ಹೊಂದಿ ಚತುರ್ಮುಖ ಬ್ರಹ್ಮನ ಜೊತೆ ಪುರುಷೋತ್ತಮನಾದ ಶ್ರೀಹರಿಯನ್ನು ಹೊಂದುವರು. ಮುಕ್ತಿಯಲ್ಲಿ ಮನುಷ್ಯೋತ್ತಮರು ಈ ದೇವತೆಗಳಿಗೂ, ಈ ದೇವತೆಗಳು ತಮಗಿಂತ ಉತ್ತಮರಾದ ಮುಕ್ತದೇವತೆಗಳಿಗೂ, ಈ ಉತ್ತಮ ದೇವತೆಗಳು ಶ್ರೀಹರಿಗೂ ಎಲ್ಲಾ ಭೋಗ ಸಾಮಗ್ರಿಗಳನ್ನು ಅರ್ಪಿಸುವರು, ಎಂದೂ ಹೇಳಲಾಗಿದೆ.

**ಭಾಷ್ಯ—ಪ್ರವಿಶ್ಯ ದೇಹಂ ಯೋ ಭೋಗಃ ಸ್ವರೂಪವ್ಯತಿರೇಕತಃ ।**
**ಸಾಯುಜ್ಯಮಿತಿ ತಂ ಪ್ರಾಹುಃ ಸಂಯುಕ್ತತ್ವಾದ್ ವಿಶೇಷತಃ ।**
**ಇತಿ ಚ ।**

**ಅನುವಾದ**—ದೇವತೆಗಳ ದೇಹವನ್ನು ಪ್ರವೇಶಿಸಿ, ಅವರ ಸ್ವರೂಪಕ್ಕಿಂತ

ಬೇರೆಯಾಗಿಯೇ ಅವರಲ್ಲಿ ಇದ್ದು, ಅವರಿಂದ ಅನುಭವಿಸುವ ಭೋಗಕ್ಕೆ ಸಾಯುಜ್ಯ ಎಂದು ಹೇಳುತ್ತಾರೆ. ಆಗ ದೇವತೆಗಳ ಸ್ವರೂಪದೊಂದಿಗೆ ಅಭೇದ ಬಾರದಿದ್ದರೂ ವಿಶೇಷವಾದ ಸಂಯೋಗವಾಗುವುದರಿಂದ ಅದನ್ನು ಸಾಯುಜ್ಯ ಎಂದು ಹೇಳುತ್ತಾರೆ.

**ಭಾಷ್ಯ—ಇಂದ್ರಿಯೇಷು ಸ್ಥಿತಂ ವಿಷ್ಣುಮುಪಾಸೀತ ಕ್ರಮೇಣ ತು ।**
**ಸದಾ ದೇವಪದಾಯೋಗ್ಯಃ ಸ ಮಾನುಷಸುರೋ ಭವೇತ್ ।**
**ಮಾನುಷಾ ದೇವಲೋಕಸ್ಥಾಸ್ತೇ ಪ್ರೋಕ್ತಾಃ ಮಾನುಷಾಃ ಸುರಾಃ ।**
**ಮಾನುಷಾ ದೇವಸಾಯುಜ್ಯಂ ಯಾಂತ್ಯುಪಾಸನಯಾऽನಯಾ ।**
**ಇತಿ ಚ ।**

**ಅನುವಾದ**—ದೇವಪದವಿಗೆ ಅನರ್ಹನಾದವನು ಇಂದ್ರಿಯಗಳಲ್ಲಿರುವ ವಿಷ್ಣುವನ್ನು ಕ್ರಮವಾಗಿಯೇ ಯಾವಾಗಲೂ ಉಪಾಸನೆ ಮಾಡಬೇಕು, ಅಂತಹ ಉಪಾಸಕನು ದೇವಪದವಿ ಹೊಂದಿದರೂ ಮಾನುಷ ಸುರನೆನಿಸುವನು. ದೇವಲೋಕದಲ್ಲಿ ವಾಸಮಾಡುವ ಮನುಷ್ಯರಿಗೆ ಮಾನುಷ ಸುರರು ಎಂದು ಹೆಸರು. ಅವರು ಈ ಉಪಾಸನೆಯಿಂದ ದೇವತೆಗಳೊಡನೆ ಸಾಯುಜ್ಯವನ್ನು ಹೊಂದುವರು ಎಂದೂ ಹೇಳಲಾಗಿದೆ.

**ಭಾಷ್ಯ—ಋಷಭಾನ್ ಗಜಮಿಶ್ರಾಂಸ್ತು ಕ್ಷತ್ರಿಯೋ ಗುರುದಕ್ಷಿಣಾಂ ।**
**ವಿಪ್ರೋ ದದ್ಯಾತ್ ವೃಷಾನೇವ ವೈಶ್ಯೋ ಗಾಃ ಪ್ರತಿವಿದ್ಯಕಮ್ ।**
**ಇತಿ ಚ ಮಾನಸಂಹಿತಾಯಾಮ್ ।**

**ಅನುವಾದ**—ಕ್ಷತ್ರಿಯರು ಆನೆ ಮತ್ತು ಎತ್ತುಗಳನ್ನು, ಬ್ರಾಹ್ಮಣನು ಎತ್ತುಗಳನ್ನು, ವೈಶ್ಯನು ಹಸುಗಳನ್ನು ಪ್ರತಿವಿದ್ಯೆಗೂ ಗುರುದಕ್ಷಿಣೆಯಾಗಿ ಕೊಡಬೇಕು ಎಂದು ಮಾನಸಂಹಿತಾ ಎಂಬ ಗ್ರಂಥದಲ್ಲಿ ಹೇಳಿದ್ದಾರೆ.

**ಭಾಷ್ಯ—ಅನ್ಯಯಾ ವಿದ್ಯಯಾ ಮುಕ್ತಿಃ ಸುರಾಣಾಮನ್ಯಯಾ ನೃಣಾಮ್ ।**
**ತತ್ರಾಪಿ ಯೋಗ್ಯತಾಭೇದಾತ್ ಪ್ರತಿಭೇದಾ ಅವಾಂತರಾಃ ।**
**ಯಯಾ ಯಸ್ಯ ವಿಮುಕ್ತಿಃ ಸ್ಯಾತ್ ತದ್ದಾತಾ ಮುಖ್ಯತೋ ಗುರುಃ ।**
**ಏಕದೇಶಗುರುತ್ವಂ ಸ್ಯಾದನ್ಯವಿದ್ಯಾಪ್ರದಸ್ಯ ತು । ಇತಿ ಚ ।**

**ಅನುವಾದ**—ಯೋಗ್ಯತೆ ಬೇರೆ ಬೇರೆಯಾಗಿರುವುದರಿಂದ ದೇವತೆಗಳಿಗೆ ಒಂದು ವಿದ್ಯೆಯಿಂದ ಮುಕ್ತಿ, ಮನುಷ್ಯರಿಗೆ ಇನ್ನೊಂದು ವಿದ್ಯೆಯಿಂದ ಮುಕ್ತಿ. ದೇವತೆಗಳಲ್ಲಿಯೂ ಯೋಗ್ಯತೆ ಬೇರೆ ಬೇರೆಯಾಗಿರುವುದರಿಂದ ಅವರ ವಿದ್ಯೆಯಲ್ಲಿಯೂ ಅವಾಂತರ ಭೇದಗಳಿವೆ. ಯಾವ ವಿದ್ಯೆಯಿಂದ ಯಾರಿಗೆ ಮುಕ್ತಿಯಾಗುವುದೋ

ಅವನಿಗೆ ಆ ವಿದ್ಯೆಯನ್ನು ಕೊಡುವವನು ಮುಖ್ಯಗುರು. ಬೇರೆ ವಿದ್ಯೆಗಳನ್ನು ಕೊಡುವವನು ಅಮುಖ್ಯ ಗುರು, ಎಂದು ಹೇಳಲಾಗಿದೆ.

**ವಿವರಣೆ**—ಜಿತ್ವ ಮೊದಲಾದವರೂ ಯಾಜ್ಞವಲ್ಕ್ಯರೂ ಉಪದೇಶಕರು. ಆದರೆ ಇವರು ಎಲ್ಲರೂ ಎಲ್ಲರಿಗೂ ಮೋಕ್ಷವಿದ್ಯೆಯ ಉಪದೇಶಕರಲ್ಲ. ಯಾಜ್ಞವಲ್ಕ್ಯರು ಮಾತ್ರ ಜನಕನಿಗೆ ಮೋಕ್ಷವಿದ್ಯೆಯ ಉಪದೇಶ ಮಾಡುವ ಮುಖ್ಯಗುರು. ಉಳಿದವರು ಮನುಷ್ಯರಿಗೆ ಮೋಕ್ಷವಿದ್ಯೆ ಉಪದೇಶಿಸುವವರಾದ್ದರಿಂದ ಮುಖ್ಯ ಗುರುಗಳಾದರೂ ಜನಕನಿಗೆ ಅಮುಖ್ಯಗುರುಗಳು.

**ಪ್ರಾಣನಾಮಕ ಭಗವಂತನ ಉಪಾಸನೆ :**

**ಉಪನಿಷತ್—ಯದೇವ ತೇ ಕಶ್ಚಿದಬ್ರವೀತ್ ತಚ್ಛೃಣವಾಮೇತಿ । ಅಬ್ರವೀತ್ ಮ ಉದಂಕಃ ಶೌಲ್ಬಾಯನಃ ಪ್ರಾಣೋ ವೈ ಬ್ರಹ್ಮೇತಿ । ಯಥಾ ಮಾತೃಮಾನ್ ಪಿತೃಮಾನಾಚಾರ್ಯವಾನ್ ಬ್ರೂಯಾತ್ ತಥಾ ತಚ್ಛೌಲ್ಬಾಯನೋಽಬ್ರವೀತ್ ಪ್ರಾಣೋ ವೈ ಬ್ರಹ್ಮೇತಿ । ಅಪ್ರಾಣತೋ ಹಿ ಕಿಂ ಸ್ಯಾದಿತಿ । ಅಬ್ರವೀತ್ತು ತೇ ತಸ್ಯಾಯತನಂ ಪ್ರತಿಷ್ಠಾಮ್ ? ನ ಮೇಽಬ್ರವೀದಿತಿ । ಏಕಪಾದ್ ವಾ ಏತತ್ ಸಮ್ರಾಳಿತಿ । ಸ ವೈ ನೋ ಬ್ರೂಹಿ ಯಾಜ್ಞವಲ್ಕ್ಯ । ಪ್ರಾಣ ಏವಾಯತನಂ । ಆಕಾಶಃ ಪ್ರತಿಷ್ಠಾ । ಪ್ರಿಯಮಿತ್ಯೇನದುಪಾಸೀತ । ಕಾ ಪ್ರಿಯತಾ ಯಾಜ್ಞವಲ್ಕ್ಯ ?**

'ಇನ್ನು ಯಾರಾದರೂ ನಿನಗೆ ಉಪದೇಶಿಸಿದ್ದರೆ ಅದನ್ನು ಕೇಳುತ್ತೇನೆ ಹೇಳು' ಎಂದರು ಯಾಜ್ಞವಲ್ಕ್ಯರು. ಜನಕನು ಹೇಳಿದನು. ಶುಲ್ಬಾಯನರ ಮಗ ಉದಂಕನು 'ಬ್ರಹ್ಮನು ಸರ್ವರಿಗೂ ಚೇಷ್ಟಾಪ್ರದನಾದ್ದರಿಂದ ಪ್ರಾಣ ಎಂಬ ಹೆಸರಿನಿಂದ ಪ್ರಸಿದ್ಧ' ಎಂದು ನನಗೆ ಉಪದೇಶಿಸಿರುವನು. ಯಾಜ್ಞವಲ್ಕ್ಯರು ಹೇಳಿದರು, 'ಸರ್ವರಿಗೂ ಚೇಷ್ಟಾಪ್ರದನಾದ ಭಗವಂತನೆ ಪ್ರಾಣನಾಮಕನೆಂದು ಉದಂಕನು ಉಪದೇಶಿಸಿದುದು ತಾಯಿ ತಂದೆ ಮತ್ತು ಗುರುಗಳಿಂದ ಶಿಕ್ಷಣ ಪಡೆದವನು ಮಾತ್ರ ಉಪದೇಶಿಸಬಹುದಾದ ಉತ್ತಮ ಉಪದೇಶವಾಗಿದೆ. ಏಕೆಂದರೆ ಪ್ರಾಣನಾಮಕ ಭಗವಂತನ ಸನ್ನಿಧಾನವಿಲ್ಲದವನಿಂದ ಏನಾದೀತು? ಉಸಿರಾಟವಂಥ ಕಾರ್ಯವೂ ನಡೆಯಲಾರದು. ಆದರೆ ಉದಂಕರು ಆ ಪ್ರಾಣನಾಮಕ ಬ್ರಹ್ಮನ ಸ್ಥಾನ ಪ್ರತಿಮೆ ಮತ್ತು ಪ್ರಾಣಶಬ್ದಾರ್ಥಗಳ ಬಗ್ಗೆ ಹೇಳಿರುವರೇನು?' 'ನನಗೆ ಹೇಳಿಲ್ಲ'. ಹಾಗಾದರೆ ರಾಜನೇ! ಈ ಉಪದೇಶವೂ ಅಪೂರ್ಣ. 'ಯಾಜ್ಞವಲ್ಕ್ಯರೇ ! ನೀವೇ ನನಗೆ ದಯವಿಟ್ಟು ಉಪದೇಶಿಸಿ'. 'ಪ್ರಾಣ ಅಪಾನ ಮೊದಲಾದ ಪಂಚರೂಪವುಳ್ಳ ವಾಯುವೇ ಪ್ರಾಣನಾಮಕ ಬ್ರಹ್ಮನ ಸ್ಥಾನ. ಆಕಾಶನಾಮಕಳಾದ ರಮಾದೇವಿಯೇ ಅವನಿಗೆ ಪ್ರತಿಮೆ. ಈ ಪ್ರಾಣನಾಮಕ ಬ್ರಹ್ಮನನ್ನು 'ಪ್ರಿಯ' ಎಂದು ಉಪಾಸನೆ ಮಾಡಬೇಕು ಯಾಜ್ಞವಲ್ಕ್ಯರೇ! ಪ್ರಿಯ ಅಂದರೆ ಯಾವುದು?

ಉಪನಿಷತ್—ಪ್ರಾಣ ಏವ ಸಮ್ರಾಳ್ ಇತಿ ಹೋವಾಚ । ಪ್ರಾಣಸ್ಯ ವೈ ಸಮ್ರಾಟ್ ಕಾಮಾಯಾಯಾಜ್ಯಂ ಯಾಜಯತಿ । ಅಪ್ರತಿಗ್ರಾಹ್ಯಸ್ಯ ಪ್ರತಿಗೃಹ್ಣಾತಿ । ಅಪಿ ತತ್ರ ವಧಾಶಂಕಂ ಭವತಿ ಯಾಂ ದಿಶಮೇತಿ ಪ್ರಾಣಸ್ಯ ವೈ ಸಮ್ರಾಟ್ ಕಾಮಾಯ । ಪ್ರಾಣೋ ವೈ ಸಮ್ರಾಟ್ ಪರಮಂ ಬ್ರಹ್ಮ।ನೈನಂ ಪ್ರಾಣೋ ಜಹಾತಿ।ಸರ್ವಾಣ್ಯೇನಂ ಭೂತಾನ್ಯಭಿಕ್ಷರಂತಿ । ದೇವೋ ಭೂತ್ವಾ ದೇವಾನಪ್ಯೇತಿ ಯ ಏವಂ ವಿದ್ವಾನೇತದುಪಾಸ್ತೇ। ಹಸ್ತ್ಯೃಷಭಂ ಸಹಸ್ರಂ ದದಾಮೀತಿ ಹೋವಾಚ ಜನಕೋ ವೈದೇಹಃ । ಸ ಹೋವಾಚ ಯಾಜ್ಞವಲ್ಕ್ಯಃ ಪಿತಾ ಮೇಽಮನ್ಯತ ನಾನನುಶಿಷ್ಯ ಹರೇತೇತಿ ।

'ರಾಜನೇ ! ಪ್ರಾಣನಾಮಕ ಭಗವಂತನೇ ಪ್ರಿಯ. ಏಕೆಂದರೆ ಪ್ರಾಣನಾಮಕ ಹರಿಯ ಪ್ರೀತಿಗಾಗಿಯೇ ಜನರು ಭೋಗವನ್ನು ಹೊಂದುತ್ತಾರೆ. ಅಜ್ಞಜನರು ಈ ಭೋಗಕ್ಕಾಗಿಯೇ ಪ್ರಾಣನಾಮಕ ಹರಿಯ ಇಚ್ಛೆಯಿಂದ ಯಾರಿಂದ ಯಾಗವನ್ನು ಮಾಡಿಸಬಾರದೋ ಅವರಿಂದ ಯಾಗ ಮಾಡಿಸುತ್ತಾರೆ. ಯಾರಿಂದ ಏನು ದಾನವನ್ನು ತೆಗೆದುಕೊಳ್ಳಬಾರದೋ ಅವರಿಂದ ಆ ದಾನವನ್ನು ತೆಗೆದುಕೊಳ್ಳುತ್ತಾರೆ. ಕಳ್ಳತನವನ್ನೂ ಮಾಡುತ್ತಾರೆ. ಅದಕ್ಕಾಗಿ ಶ್ರೀಹರಿಯ ಇಚ್ಛೆಯಿಂದಲೇ ಎಲ್ಲಿ ಪ್ರಾಣಾಪಾಯ ಸಂಭವಿಸಬಹುದೋ ಅಂಥ ದಿಕ್ಕುಗಳಿಗೂ ಹೋಗುತ್ತಾರೆ. ರಾಜನೇ! ಪ್ರಾಣನಲ್ಲಿರುವ ಪರಬ್ರಹ್ಮನೇ ಮುಖ್ಯವಾಗಿ ಪ್ರಾಣ. ಯಾರು ಹೀಗೆ ತಿಳಿದು ಪರಬ್ರಹ್ಮನನ್ನು ಉಪಾಸನೆ ಮಾಡುವನೋ ಅವನನ್ನು ಪ್ರಾಣನಲ್ಲಿರುವ ಪ್ರಾಣನಾಮಕ ಪರಬ್ರಹ್ಮನು ಕೈಬಿಡುವುದಿಲ್ಲ. ಅವನು ದೇವತ್ವವನ್ನು ಹೊಂದಿ ಅನಂತರ ಉತ್ತಮ ದೇವತೆಗಳಲ್ಲಿ ಸಾಯುಜ್ಯವನ್ನು ಹೊಂದಿ ಚತುರ್ಮುಖ ಬ್ರಹ್ಮನ ಜೊತೆ ಶ್ವೇತದ್ವೀಪಾದಿ ಧಾಮತ್ರಯದಲ್ಲಿರುವ ಶ್ರೀಹರಿಯನ್ನು ಹೊಂದುತ್ತಾನೆ, ಅಲ್ಲಿ ತನಗಿಂತ ಕಿರಿಯರಾದ ಮುಕ್ತರು ಎಲ್ಲರೂ ಇವನ ಅಭೀಷ್ಟಗಳನ್ನು ನೆರವೇರಿಸುತ್ತಾರೆ'. ಹೀಗೆ ಯಾಜ್ಞವಲ್ಕ್ಯರು ಉಪದೇಶಿಸಿದಾಗ 'ಸಾವಿರ ಆನೆ ಎತ್ತುಗಳನ್ನು ಗುರುದಕ್ಷಿಣೆಯಾಗಿ ಕೊಡುತ್ತೇನೆ' ಎಂದು ವಿದೇಹರಾಜನಾದ ಜನಕನು ಹೇಳಿದನು. 'ಆದರೆ ನಾನಿನ್ನೂ ಉಪದೇಶಿಸಬೇಕಾದ್ದನ್ನು ಪೂರ್ಣವಾಗಿ ಉಪದೇಶಿಸಿಯೇ ಇಲ್ಲ. ಪೂರ್ಣವಾಗಿ ಉಪದೇಶಿಸದೆ ಗುರುದಕ್ಷಿಣೆಯನ್ನು ತೆಗೆದುಕೊಳ್ಳಬಾರದೆಂದು ನಮ್ಮ ತಂದೆಯವರ ಅಭಿಪ್ರಾಯವಿದೆ' ಎಂದು ಯಾಜ್ಞವಲ್ಕ್ಯರು ಹೇಳಿದರು.

ಭಾಷ್ಯ—ಪ್ರಾಣಸಂಸ್ಥಸ್ಯ ವೈ ವಿಷ್ಣೋಃ ಸಂಪ್ರೀತ್ಯೈ ಭೋಜನಂ ಭವೇತ್ ।
ತದಿಚ್ಛಯೈವ ಚೌರ್ಯಾದಿ ಕುರ್ಯುರಜ್ಞಾ ಅಪಿ ಧ್ರುವಮ್ ।

**ತಥಾಪಿ ತಂ ನ ಜಾನೀಯುಃ ಪ್ರಾಣಾತ್ಮಾನಂ ಜನಾರ್ದನಮ್ ।**

**ಇತಿ ಪ್ರವೃತ್ತೇ ।**

**ಅನುವಾದ**—ಪ್ರಾಣನಲ್ಲಿರುವ ವಿಷ್ಣುವಿಗೆ ಪ್ರೀತಿಕರವಾದ ಭೋಜನದ ಇಚ್ಛೆಯಿಂದಲೇ, ಅವನ ಇಚ್ಛೆಯಿಂದಲೇ ತಿಳಿದವರು ಭೋಜನ ಸಾಧನವನ್ನು ಸಂಪಾದಿಸುವರು. ಅಜ್ಞರೂ ಅಂತಹ ಭೋಜನದ ಇಚ್ಛೆಯಿಂದಲೇ ಕಳ್ಳತನ ಮೊದಲಾದುವನ್ನು ಅವನ ಇಚ್ಛೆಯಿಂದಲೇ ಮಾಡುವರು. ಆದರೂ ಪ್ರಾಣಸ್ವರೂಪನಾದ ಜನಾರ್ದನನನ್ನು ಅವರು ತಿಳಿದಿರುವುದಿಲ್ಲ ಎಂದು ಪ್ರವೃತ್ತ ಎಂಬ ಗ್ರಂಥದಲ್ಲಿ ಹೇಳಿದೆ.

**ಚಕ್ಷುರ್ನಾಮಕ ಭಗವಂತನ ಉಪಾಸನೆ :**

**ಉಪನಿಷತ್—ಯದೇವ ತೇ ಕಶ್ಚಿದಬ್ರವೀತ್ ತಚ್ಛೃಣವಾಮೇತಿ । ಅಬ್ರವೀತ್ ಮೇ ಬರ್ಕುರ್ವಾರ್ಷ್ಣಶ್ಚಕ್ಷುರ್ವೈ ಬ್ರಹ್ಮೇತಿ । ಯಥಾ ಮಾತೃಮಾನ್ ಪಿತೃಮಾನಾಚಾರ್ಯವಾನ್ ಬ್ರೂಯಾತ್ ತಥಾ ತದ್ ವಾರ್ಷ್ಣೋಽಬ್ರವೀತ್ ಚಕ್ಷುರ್ವೈ ಬ್ರಹ್ಮೇತಿ । ಅಪಶ್ಯತೋ ಹಿ ಕಿಂ ಸ್ಯಾದಿತಿ । ಅಬ್ರವಿತ್ತು ತೇ ತಸ್ಯಾಯತನಂ ಪ್ರತಿಷ್ಠಾಮ್ ? ನ ಮೇಽಬ್ರವೀದಿತಿ । ಏಕಪಾದ್ ವಾ ಏತತ್ ಸಮ್ರಾಳ್ ಇತಿ । ಸ ವೈ ನೋ ಬ್ರೂಹಿ ಯಾಜ್ಞವಲ್ಕ್ಯ । ಚಕ್ಷುರೇವಾಯತನಂ । ಆಕಾಶಃ ಪ್ರತಿಷ್ಠಾ । ಸತ್ಯಮಿತ್ಯೇನದುಪಾಸೀತ । ಕಾ ಸತ್ಯತಾ ಯಾಜ್ಞವಲ್ಕ್ಯ ?**

ಯಾಜ್ಞವಲ್ಕ್ಯರು ಹೇಳಿದರು 'ಇನ್ನೂ ನಿನಗೆ ಯಾರಾದರೂ ಉಪದೇಶಿಸಿದ್ದರೆ ಅದನ್ನೂ ಕೇಳುತ್ತೇನೆ ಹೇಳು'. ಜನಕನು ಹೇಳಿದನು, 'ವೃಷ್ಣನ ಮಗನಾದ ಬರ್ಕುವು ಬ್ರಹ್ಮನು ಚಕ್ಷುಸ್ ಎಂಬ ಹೆಸರಿನಿಂದ ಪ್ರಸಿದ್ಧ ಎಂದು ನನಗೆ ಉಪದೇಶಿಸಿರುವರು'. ಯಾಜ್ಞವಲ್ಕ್ಯರು ಹೇಳಿದರು 'ಸರ್ವರಿಗೂ ದೃಷ್ಟಿಶಕ್ತಿಪ್ರದನಾದ ಭಗವಂತನೇ ಚಕ್ಷುರ್ನಾಮಕನೆಂದು ಬರ್ಕು ಉಪದೇಶಿಸಿದುದು ತಾಯಿ ತಂದೆ ಮತ್ತು ಗುರುಗಳಿಂದ ಶಿಕ್ಷಣ ಪಡೆದವನು ಮಾತ್ರ ಉಪದೇಶಿಸಬಹುದಾದ ಉತ್ತಮ ಉಪದೇಶವಾಗಿದೆ. ಏಕೆಂದರೆ ಚಕ್ಷುರ್ನಾಮಕನಾದ ಆ ಭಗವಂತನ ಸನ್ನಿಧಾನವಿಲ್ಲದವನಿಂದ ಏನು ನೋಡಲಾದೀತು? ಆದರೆ ಬರ್ಕುವು ಆ ಚಕ್ಷುಸ್ ಎಂಬ ಹೆಸರಿನ ಭಗವದ್ರೂಪದ ಪ್ರತಿಮೆ ಸ್ಥಾನ ಮತ್ತು ಚಕ್ಷುಸ್ ಶಬ್ದಾರ್ಥಗಳ ಬಗ್ಗೆ ಹೇಳಿರುವರೇನು?' 'ನನಗೆ ಹೇಳಿಲ್ಲ'. ಹಾಗಾದರೆ ರಾಜನೇ! ಈ ಉಪದೇಶವೂ ಅಪೂರ್ಣ. ಯಾಜ್ಞವಲ್ಕ್ಯರೇ ! ನೀವೇ ನನಗೆ ದಯವಿಟ್ಟು ಉಪದೇಶಿಸಿರಿ. 'ಚಕ್ಷುರ್ನಾಮಕ ಭಗವಂತನಿಗೆ ಚಕ್ಷುಸ್ ಇಂದ್ರಿಯವೇ ಸ್ಥಾನ. ಆಕಾಶನಾಮಕಳಾದ ರಮಾದೇವಿಯೇ ಪ್ರತಿಮೆ. ಈ

ಚಕ್ಷುಸ್ ಎಂಬ ಹೆಸರಿನ ಬ್ರಹ್ಮನನ್ನು ಸತ್ಯ ಎಂದು ಉಪಾಸನೆ ಮಾಡಬೇಕು'. ಯಾಜ್ಞವಲ್ಕ್ಯರೆ !ಸತ್ಯ ಅಂದರೆ ಯಾವುದು?

**ಉಪನಿಷತ್—ಚಕ್ಷುರೇವ ಸಮ್ರಾಳ್ ಇತಿ ಹೋವಾಚ । ಚಕ್ಷುಷಾ ವೈ ಸಮ್ರಾಟ್ ಪಶ್ಯಂತಮಾಹುರದ್ರಾಕ್ಷೀರಿತಿ। ಸ ಆಹ ಅದ್ರಾಕ್ಷಮಿತಿ । ತತ್ ಸತ್ಯಂ ಭವತಿ। ಚಕ್ಷುರ್ವೈ ಸಮ್ರಾಟ್ ಪರಮಂ ಬ್ರಹ್ಮ । ನೈನಂ ಚಕ್ಷುರ್ಜಹಾತಿ । ಸರ್ವಾಣ್ಯೇನಂ ಭೂತಾನ್ಯಭಿಕ್ಷರಂತಿ ದೇವೋ ಭೂತ್ವಾ ದೇವಾನಪ್ಯೇತಿ ಯ ಏವಂ ವಿದ್ವಾನೇತದುಪಾಸ್ತೇ । ಹಸ್ತ್ಯೃಷಭಂ ಸಹಸ್ರಂ ದದಾಮೀತಿ ಹೋವಾಚ ಜನಕೋ ವೈದೇಹಃ। ಸ ಹೋವಾಚ ಯಾಜ್ಞವಲ್ಕ್ಯಃ ಪಿತಾ ಮೇಽಮನ್ಯತ ನಾನನುಶಿಷ್ಯ ಹರೇತೇತಿ ।**

ರಾಜನೇ! ಚಕ್ಷುಸ್ ಎಂಬ ಹೆಸರಿನ ಪರಬ್ರಹ್ಮನೇ ಸತ್ಯ. ಏಕೆಂದರೆ ಚಕ್ಷುರಿಂದ್ರಿಯದಲ್ಲಿರುವ ಜಾಗ್ರದವಸ್ಥಾನಿಯಾಮಕನಾದ ವಿಶ್ವನಾಮಕ ಭಗವದ್ರೂಪದ ಪ್ರೇರಣೆಯಿಂದ ಒಂದು ವಸ್ತುವನ್ನು ನೋಡುವವನಿಗೆ ಜನರು ಕೇಳುತ್ತಾರೆ, ನೀನು ನೋಡಿದೆಯಾ? ಎಂದು. ಅವನು, ಹೌದು ನೋಡಿದೆನು ಎಂದು ಹೇಳುತ್ತಾನೆ. ಹಾಗಾದರೆ ಆ ವಸ್ತು ಸತ್ಯ ಎಂದು ತೀರ್ಮಾನವಾಗುತ್ತದೆ. ಹೀಗೆ ಚಕ್ಷುರಿಂದ್ರಿಯ ಪ್ರವೃತ್ತಿಗೆ ಕಾರಣವಾದ ಚಕ್ಷುಸ್ ಎಂಬ ಹೆಸರಿನ ಭಗವದ್ರೂಪವೇ ವಸ್ತುಗಳ ಸತ್ಯತ್ವಕ್ಕೆ ಸಾಧಕವಾದ ಯಥಾರ್ಥಜ್ಞಾನ ಉಂಟುಮಾಡುವುದರಿಂದ ಸತ್ಯ ಎನಿಸಿದೆ. ರಾಜನೇ! ಚಕ್ಷುಸ್‌ನಲ್ಲಿರುವ ಪರಬ್ರಹ್ಮನೇ ಮುಖ್ಯವಾಗಿ ಚಕ್ಷುಸ್. ಯಾರು ಹೀಗೆ ತಿಳಿದು ಪರಬ್ರಹ್ಮನನ್ನು ಉಪಾಸನೆ ಮಾಡುವನೋ ಅವನನ್ನು ಚಕ್ಷುಸ್‌ನಲ್ಲಿರುವ ಚಕ್ಷುರ್ನಾಮಕ ವಿಶ್ವನು ಕೈ ಬಿಡುವುದಿಲ್ಲ. ಅವನು ದೇವತ್ವವನ್ನು ಹೊಂದಿ ಅನಂತರ ಉತ್ತಮ ದೇವತೆಗಳಲ್ಲಿ ಸಾಯುಜ್ಯವನ್ನು ಹೊಂದಿ ಚತುರ್ಮುಖ ಬ್ರಹ್ಮನ ಜೊತೆಗೆ ಶ್ರೀಹರಿಯನ್ನು ಪೊಂದುತ್ತಾನೆ. ಅಲ್ಲಿ ತನಗಿಂತ ಕಿರಿಯರಾದ ಮುಕ್ತರು ಎಲ್ಲರೂ ಇವನ ಅಭೀಷ್ಟಗಳನ್ನು ನೆರವೇರಿಸುತ್ತಾರೆ. ಹೀಗೆ ಯಾಜ್ಞವಲ್ಕ್ಯರು ಉಪದೇಶಿಸಿದಾಗ 'ಸಾವಿರ ಆನೆ ಎತ್ತುಗಳನ್ನು ಗುರುದಕ್ಷಿಣೆಯಾಗಿ ಕೊಡುತ್ತೇನೆ' ಎಂದು ವಿದೇಹ ರಾಜನಾದ ಜನಕನು ಹೇಳಿದನು. 'ಆದರೆ ನಾನಿನ್ನೂ ಉಪದೇಶಿಸಬೇಕಾದ್ದನ್ನು ಪೂರ್ಣವಾಗಿ ಉಪದೇಶಿಸಿಲ್ಲ. ಪೂರ್ಣವಾಗಿ ಉಪದೇಶಿಸದೆ ಗುರುದಕ್ಷಿಣೆಯನ್ನು ತೆಗೆದುಕೊಳ್ಳಬಾರದೆಂದು ನಮ್ಮ ತಂದೆಯವರ ಅಭಿಪ್ರಾಯ' ಎಂದು ಯಾಜ್ಞವಲ್ಕ್ಯರು ಹೇಳಿದರು.

**ಭಾಷ್ಯ—ಯಚ್ಚಕ್ಷುಷಿ ಸ್ಥಿತಂ ರೂಪಂ ವಿಷ್ಣೋಶ್ಚಕ್ಷುಸ್ತದುಚ್ಯತೇ ।**
**ಶಬ್ದಾದೇರಪ್ಯಪರೋಕ್ಷ್ಯೇ ತದ್ಧೇತುರ್ವಿಶ್ವನಾಮಕಂ ।**

ತದ್ಗತಸ್ಯ ತತೋ ವಿಷ್ಣೋಃ ಕಂಠಸ್ಥಾನಾಗಮೋ ಯದಾ ।
ತದಾ ಸ್ವಪ್ನೋ ಭವೇಜ್ಜಾಗ್ರದ್ದರ್ಶನಂ ನೈವ ಜಾಯತೇ ।
ಚಕ್ಷುರ್ನಿಮೀಲನಂ ಚ ಸ್ಯಾತ್ ಸರ್ವೇಂದ್ರಿಯಗುಣೈಃ ಸಹ ।
ಚಕ್ಷುರಾತ್ಮಾ ತತೋ ವಿಷ್ಣುಃ ಸತ್ಯಮಿತ್ಯಭಿಧೀಯತೇ । ಇತಿ ಚ ।

**ಅನುವಾದ**—ಜಾಗ್ರದವಸ್ಥೆಯಲ್ಲಿ ಕಣ್ಣಿನಲ್ಲಿರುವ ವಿಷ್ಣುವಿನ ವಿಶ್ವನಾಮಕ ರೂಪವು ಚಕ್ಷುಸ್ ಎಂದು ಹೇಳಲ್ಪಡುತ್ತದೆ. ರೂಪದಂತೆ ವಸ್ತು ಮೊದಲಾದವುಗಳ ಪ್ರತ್ಯಕ್ಷಜ್ಞಾನಕ್ಕೂ ಕಣ್ಣಿನಲ್ಲಿರುವ ಈ ವಿಶ್ವನಾಮಕ ಭಗವದ್ರೂಪವೇ ಕಾರಣ. ಆದ್ದರಿಂದ ಕಣ್ಣಿನಲ್ಲಿರುವ ವಿಶ್ವನು ಕಂಠಕ್ಕೆ ಬಂದಾಗ ನಿದ್ರೆಯು ಬರುವುದು. ಬಾಹ್ಯ ಪದಾರ್ಥಗಳ ಜ್ಞಾನ ಬರುವುದೇ ಇಲ್ಲ. ಏಕೆಂದರೆ ಆಗ ಎಲ್ಲ ಇಂದ್ರಿಯಗಳ ಜೊತೆ ಕಣ್ಣು ನಿಷ್ಕ್ರಿಯವಾಗಿ ಮುಚ್ಚಿಕೊಳ್ಳುತ್ತದೆ. ಬಾಹ್ಯಪದಾರ್ಥ ಸಂಬಂಧವೇ ಆಗುವುದಿಲ್ಲ. ಆದ್ದರಿಂದ ಯಥಾರ್ಥಜ್ಞಾನ ಸಾಧನ ಜಾಗ್ರದವಸ್ಥಾ ನಿಯಾಮಕ ಚಕ್ಷುರ್ನಾಮಕ ರೂಪವುಳ್ಳ ವಿಷ್ಣುವೇ ಸತ್ಯ ಎಂದು ಕೂಡ ಹೇಳಲಾಗಿದೆ.

**ಶ್ರೋತ್ರನಾಮಕ ಭಗವಂತನ ಉಪಾಸನೆ :**

**ಉಪನಿಷತ್—ಯದೇವ ತೇ ಕಶ್ಚಿದಬ್ರವೀತ್ ತಚ್ಛೃಣವಾಮೇತಿ। ಅಬ್ರವೀನ್ಮೇ ಗರ್ದಭೀ ವಿಪೀತೋ ಭಾರದ್ವಾಜಃ ಶ್ರೋತ್ರಂ ವೈ ಬ್ರಹ್ಮೇತಿ । ಯಥಾ ಮಾತೃಮಾನ್ ಪಿತೃಮಾನ್ ಆಚಾರ್ಯವಾನ್ ಬ್ರೂಯಾತ್ ತಥಾ ತದ್ ಭಾರದ್ವಾಜೋಽಬ್ರವೀತ್ ಶ್ರೋತ್ರಂ ವೈ ಬ್ರಹ್ಮೇತಿ । ಅಶೃಣ್ವತೋ ಹಿ ಕಿಂ ಸ್ಯಾದಿತಿ । ಅಬ್ರವೀತ್ತು ತೇ ತಸ್ಯಾಯತನಂ ಪ್ರತಿಷ್ಠಾಮ್ ? ನ ಮೇಽಬ್ರವೀತ್ ಇತಿ । ಏಕಪಾದ್ ವಾ ಏತತ್ ಸಮ್ರಾಳಿತಿ । ಸ ವೈ ನೋ ಬ್ರೂಹಿ ಯಾಜ್ಞವಲ್ಕ್ಯ । ಶ್ರೋತ್ರಮೇವಾಯತನಂ। ಆಕಾಶಃ ಪ್ರತಿಷ್ಠಾ। ಅನಂತ ಇತ್ಯೇನದುಪಾಸೀತ । ಕಾ ಅನಂತತಾ ಯಾಜ್ಞ-ವಲ್ಕ್ಯ ?**

ಇನ್ನೂ ಯಾರಾದರೂ ನಿನಗೆ ಉಪದೇಶಿಸಿದ್ದರೆ ಅದನ್ನು ಕೇಳುತ್ತೇನೆ ಹೇಳು ಎಂದರು ಯಾಜ್ಞವಲ್ಕ್ಯರು. ಜನಕನು ಹೇಳಿದನು. ಭಾರದ್ವಾಜನ ಮಗನಾದ ಗರ್ದಭೀಪೀತನ ವಿಪೀತನು, ಬ್ರಹ್ಮನು ಸರ್ವರಿಗೂ ಶ್ರವಣಶಕ್ತಿಪ್ರದನಾದ್ದರಿಂದ ಶ್ರೋತ್ರನಾಮದಿಂದ ಪ್ರಸಿದ್ಧ ಎಂದು ನನಗೆ ಉಪದೇಶಿಸಿರುವನು. ಯಾಜ್ಞವಲ್ಕ್ಯರು ಹೇಳಿದರು, ಸರ್ವರಿಗೂ ಶ್ರವಣಶಕ್ತಿ ಪ್ರದನಾದ ಭಗವಂತನೆ ಶ್ರೋತ್ರನಾಮಕನೆಂದು ವಿಪೀತನು ಉಪದೇಶಿಸಿದುದು ತಾಯಿ, ತಂದೆ ಮತ್ತು ಗುರುಗಳಿಂದ ಶಿಕ್ಷಣ ಪಡೆದವನು ಮಾತ್ರ ಉಪದೇಶಿಸಬಹುದಾದ ಉತ್ತಮ ಉಪದೇಶ. ಏಕೆಂದರೆ

ಶ್ರೋತ್ರನಾಮಕ ಭಗವದ್ರೂಪಸನ್ನಿಧಾನ ಯಾರ ಕಿವಿಯಲ್ಲಿ ಇಲ್ಲವೋ ಅಂತಹವನಿಂದ ಏನು ಶ್ರವಣ ಮಾಡಲಾದೀತು? ಆದರೆ ವಿಜಿತನು ಆ ಶ್ರೋತ್ರ ಎಂಬ ಹೆಸರಿನ ಭಗವದ್ರೂಪದ ಸ್ಥಾನ, ಪ್ರತಿಮೆ ಮತ್ತು ಶ್ರೋತ್ರಶಬ್ದಾರ್ಥಗಳ ಬಗ್ಗೆ ಹೇಳಿರುವ ದೇನು? ನನಗೆ ಹೇಳಿಲ್ಲ. ಹಾಗಾದರೆ ರಾಜನೇ! ಈ ಉಪದೇಶವೂ ಅಪೂರ್ಣ. ಯಾಜ್ಞವಲ್ಕ್ಯರೇ! ನೀವೇ ನನಗೆ ದಯವಿಟ್ಟು ಉಪದೇಶ ಮಾಡಿರಿ. 'ಶ್ರೋತ್ರ ನಾಮಕ ಹರಿಗೆ ಶ್ರೋತ್ರೇಂದ್ರಿಯವೇ ಸ್ಥಾನ. ಆಕಾಶನಾಮಕಳಾದ ರಮಾದೇವಿಯೇ ಪ್ರತಿಮೆ. ಈ ಶ್ರೋತ್ರ ಎಂಬ ಹೆಸರಿನ ಬ್ರಹ್ಮನನ್ನು ಅನಂತ ಎಂದು ಉಪಾಸನೆ ಮಾಡಬೇಕು'. ಯಾಜ್ಞವಲ್ಕ್ಯರೇ ! ಅನಂತ ಎಂದರೆ ಯಾವುದು ?

**ಉಪನಿಷತ್—ದಿಶ ಏವ ಸಮ್ರಾಳ್ ಇತಿ ಹೋವಾಚ । ತಸ್ಮಾದ್ ವೈ ಸಮ್ರಾಳ್ ಅಪಿ ಯಾಂ ಕಾಂ ಚ ದಿಶಂ ಗಚ್ಛತಿ ನೈವಾಸ್ಯಾ ಅಂತಂ ಗಚ್ಛತಿ। ಅನಂತಾ ಹಿ ದಿಶಃ । ದಿಶೋ ವೈ ಸಮ್ರಾಟ್ ಶ್ರೋತ್ರಮ್ । ಶ್ರೋತ್ರಂ ವೈ ಸಮ್ರಾಟ್ ಪರಮಂ ಬ್ರಹ್ಮ । ನೈನಂ ಶ್ರೋತ್ರಂ ಜಹಾತಿ । ಸರ್ವಾಣ್ಯೇನಂ ಭೂತಾನ್ಯಭಿಕ್ಷರಂತಿ । ದೇವೋ ಭೂತ್ವಾ ದೇವಾನಪ್ಯೇತಿ ಯ ಏವಂ ವಿದ್ವಾನೇತದುಪಾಸ್ತೇ । ಹಸ್ತ್ಯೃಷಭಂ ಸಹಸ್ರಂ ದದಾಮೀತಿ ಹೋವಾಚ ಜನಕೋ ವೈದೇಹಃ । ಸ ಹೋವಾಚ ಯಾಜ್ಞವಲ್ಕ್ಯಃ ಪಿತಾ ಮೇಽಮನ್ಯತ ನಾನನುಶಿಷ್ಯ ಹರೇತೇತಿ ।**

'ದಿಕ್ಕುಗಳಲ್ಲಿರುವ ದಿಶ್ ಎಂಬ ಹೆಸರಿನ ವಿಷ್ಣುವೇ ಅನಂತ. ಆದ್ದರಿಂದಲೇ ರಾಜನೇ ! ಅನಂತನ ಸನ್ನಿಧಾನಯುಕ್ತವಾದ ಯಾವ ದಿಕ್ಕಿಗೆ ಹೋದರೂ ಆ ದಿಕ್ಕಿನ ಕೊನೆಯನ್ನು ಯಾರೂ ತಲುಪುವುದಿಲ್ಲ. ಅವನ ಸನ್ನಿಧಾನದಿಂದ ದಿಕ್ಕುಗಳೇ ಅನಂತವೆಂದಮೇಲೆ ದಿಕ್ಕುಗಳಲ್ಲಿರುವ ಶ್ರೀಹರಿ ಅನಂತ ಎಂದು ಬೇರೇನು ಹೇಳಬೇಕು? ದಿಕ್ಕುಗಳಲ್ಲಿರುವ ಈ ಭಗವದ್ರೂಪವೇ, ರಾಜನೇ! ಶ್ರೋತ್ರದಲ್ಲಿರುವ ಭಗವದ್ರೂಪ. ಆದ್ದರಿಂದ ರಾಜನೇ!ಶ್ರೋತ್ರದಲ್ಲಿರುವ ಪರಬ್ರಹ್ಮನೇ ಮುಖ್ಯವಾಗಿ ಶ್ರೋತ್ರನಾಮಕ. ಯಾರು ಹೀಗೆ ತಿಳಿದು ಶ್ರೋತ್ರನಾಮಕ ಪರಬ್ರಹ್ಮನನ್ನು ಉಪಾಸನೆ ಮಾಡು ವನೋ ಅವನನ್ನು ಶ್ರೋತ್ರನಾಮಕ ಪರಬ್ರಹ್ಮ ಕೈಬಿಡುವುದಿಲ್ಲ. ಅವನು ದೇವತ್ವ ವನ್ನು ಹೊಂದಿ ಚತುರ್ಮುಖ ಬ್ರಹ್ಮನ ಜೊತೆ ಶ್ವೇತದ್ವೀಪಾದಿ ಧಾಮತ್ರಯದಲ್ಲಿ ರುವ ಶ್ರೀಹರಿಯನ್ನು ಹೊಂದುತ್ತಾನೆ. ಅಲ್ಲಿ ಅವನಿಗಿಂತಲೂ ಕಿರಿಯರಾದ ಮುಕ್ತರೆಲ್ಲರೂ ಅವನ ಅಭೀಷ್ಟಗಳನ್ನು ನೆರವೇರಿಸುತ್ತಾರೆ. ಹೀಗೆ ಯಾಜ್ಞ ವಲ್ಕ್ಯರು ಉಪದೇಶಿಸಿದಾಗ 'ಸಾವಿರ ಆನೆ ಎತ್ತುಗಳನ್ನು ಗುರುದಕ್ಷಿಣೆಯಾಗಿ ಕೊಡುತ್ತೇನೆ' ಎಂದು ವಿದೇಹ ರಾಜನಾದ ಜನಕನು ಹೇಳಿದನು, 'ಆದರೆ ನಾನಿನ್ನೂ ಉಪದೇಶಿಸಬೇಕಾದ್ದನ್ನು ಪೂರ್ಣವಾಗಿ ಉಪದೇಶಿಸಿಲ್ಲ. ಪೂರ್ಣ ಉಪದೇಶಿಸದೆ

ಗುರುದಕ್ಷಿಣೆಯನ್ನು ತೆಗೆದುಕೊಳ್ಳಬಾರದೆಂದು ನಮ್ಮ ತಂದೆಯ ಅಭಿಪ್ರಾಯವಿದೆ' ಎಂದು ಯಾಜ್ಞವಲ್ಕ್ಯರು ಹೇಳಿದರು.

**ಭಾಷ್ಯ—ಸರ್ವವ್ಯಾಪೀ ತು ಭಗವಾನನಂತ ಇತಿ ಕೀರ್ತಿತಃ ।**
**ದಿಙ್ನಾಮಾ ಸ ತು ವಿಜ್ಞೇಯೋ ದಿಕ್ಷುಸ್ಥೋ ನಿತ್ಯ ದೇಶನಾತ್ ।**
**ಇತಿ ಚ ।**

**ಅನುವಾದ**—ಸರ್ವವ್ಯಾಪಿಯಾದ ಭಗವಾನ್ ಶ್ರೀಹರಿಯು ಅನಂತ ಎನಿಸಿದ್ದಾನೆ. ದಿಕ್ಕುಗಳಲ್ಲಿರುವ ಅವನು ನಿತ್ಯವೂ ಭಕ್ತರುಗಳಿಗೆ ಅಭೀಷ್ಟಗಳನ್ನು ಕೊಡುವ್ಪದರಿಂದ ದಿಶ್ ಎಂಬ ಹೆಸರುಳ್ಳವನು ಎಂದೂ ಹೇಳಿದೆ.

**ಮನೋನಾಮಕ ಭಗವಂತನ ಉಪಾಸನೆ :**

ಉಪನಿಷತ್—**ಯದೇವ ತೇ ಕಶ್ಚಿದಬ್ರವೀತ್ ತಚ್ಛೃಣವಾಮೇತಿ। ಅಬ್ರವೀನ್ಮೇ ಸತ್ಯಕಾಮೋ ಜಾಬಾಲೋ ಮನೋ ವೈ ಬ್ರಹ್ಮೇತಿ । ಯಥಾ ಮಾತೃಮಾನ್ ಪಿತೃಮಾನ್ ಆಚಾರ್ಯವಾನ್ ಬ್ರೂಯಾತ್ ತಥಾ ತದ್ ಜಾಬಾಲೋಽಬ್ರವೀತ್ ಮನೋ ವೈ ಬ್ರಹ್ಮೇತಿ । ಅಮನಸೋ ಹಿ ಕಿಂ ಸ್ಯಾದಿತಿ । ಅಬ್ರವೀತ್ತು ತೇ ತಸ್ಯಾಯತನಂ ಪ್ರತಿಷ್ಠಾಮ್ ? ನ ಮೇಽಬ್ರವೀದಿತಿ । ಏಕಪಾದ್ ವಾ ಏತತ್ ಸಮ್ರಾಳಿತಿ । ಸ ವೈ ನೋ ಬ್ರೂಹಿ ಯಾಜ್ಞವಲ್ಕ್ಯ । ಮನ ಏವಾಯತನಂ । ಆಕಾಶಃ ಪ್ರತಿಷ್ಠಾ। ಆನಂದ ಇತ್ಯೇನದುಪಾಸೀತ । ಕಾ ಆನಂದತಾ ಯಾಜ್ಞವಲ್ಕ್ಯ?**

'ಇನ್ನೂ ನಿನಗೆ ಯಾರಾದರೂ ಉಪದೇಶಿಸಿದ್ದರೆ ಅದನ್ನೂ ಕೇಳುತ್ತೇನೆ ಹೇಳು' ಎಂದರು ಯಾಜ್ಞವಲ್ಕ್ಯರು. ಜನಕನು ಹೇಳಿದನು— ಜಾಬಾಲಿಯ ಮಗನಾದ ಸತ್ಯಕಾಮನು 'ಬ್ರಹ್ಮನು ಸರ್ವರಿಗೂ ಮನನಶಕ್ತಿಪ್ರದನಾದ್ದರಿಂದ ಮನಸ್ ಎಂದು ಪ್ರಸಿದ್ಧ' ಎಂದು ನನಗೆ ಉಪದೇಶಿಸಿರುವನು. ಯಾಜ್ಞವಲ್ಕ್ಯರು ಹೇಳಿದರು 'ಸರ್ವರಿಗೂ ಮನನಶಕ್ತಿಪ್ರದನಾದ ಭಗವಂತನೇ ಮನೋನಾಮಕನೆಂದು ಸತ್ಯಕಾಮ ಉಪದೇಶಿಸಿದುದು, ತಾಯಿ, ತಂದೆ ಮತ್ತು ಗುರುಗಳಿಂದ ಶಿಕ್ಷಣ ಪಡೆದವನು ಮಾತ್ರ ಉಪದೇಶಿಸಬಲ್ಲ ಉತ್ತಮ ಉಪದೇಶವೇ ಆಗಿದೆ. ಏಕೆಂದರೆ ಮನನಶಕ್ತಿಯನ್ನು ಕೊಡುವ ಮನಸ್ ಎಂಬ ಹೆಸರಿನ ಭಗವದ್ರೂಪ ಸನ್ನಿಧಾನವು ಯಾರ ಮನಸ್ಸಿನಲ್ಲಿ ಇಲ್ಲವೋ ಅಂತಹವನಿಂದ ಏನು ಮನನ ಮಾಡಲಾದೀತು? ಆದರೆ ಸತ್ಯಕಾಮ ಆ ಮನಸ್ ಎಂಬ ಹೆಸರಿನ ಭಗವದ್ರೂಪದ ಸ್ಥಾನ, ಪ್ರತಿಮೆ ಮತ್ತು ಮನಃ ಶಬ್ದಾರ್ಥಗಳ ಬಗ್ಗೆ ಹೇಳಿರುವರೇನು? ನನಗೆ ಹೇಳಿಲ್ಲ. ಹಾಗಾದರೆ ರಾಜನೇ! ಈ

ಉಪದೇಶವೂ ಅಪೂರ್ಣ. 'ಯಾಜ್ಞವಲ್ಕ್ಯರೇ, ನೀವೇ ನನಗೆ ದಯವಿಟ್ಟು ಉಪದೇಶಿಸಿರಿ'. ಮನೋನಾಮಕ ವಿಷ್ಣುವಿಗೆ ಮನಸ್ ಇಂದ್ರಿಯವೇ ಸ್ಥಾನ. ಆಕಾಶನಾಮಕಳಾದ ರಮಾದೇವಿಯೇ ಪ್ರತಿಷ್ಠೆ. ಈ ಮನಸ್ ಎಂಬ ಬ್ರಹ್ಮನನ್ನು ಆನಂದ ಎಂದು ಉಪಾಸನೆ ಮಾಡಬೇಕು. 'ಯಾಜ್ಞವಲ್ಕ್ಯರೇ! ಆನಂದ ಎಂದರೆ ಯಾವುದು?'

**ಉಪನಿಷತ್—ಮನ ಏವ ಸಮ್ರಾಳ್ ಇತಿ ಹೋವಾಚ। ಮನಸಾ ವೈ ಸಮ್ರಾಟ್ ಸ್ತ್ರಿಯಮಭಿಹಾರ್ಯತೇ। ತಸ್ಯಾಂ ಪ್ರತಿರೂಪಃ ಪುತ್ರೋ ಜಾಯತೇ। ಸ ಆನಂದಃ। ಮನೋ ವೈ ಸಮ್ರಾಟ್ ಪರಮಂ ಬ್ರಹ್ಮ। ನೈನಂ ಮನೋ ಜಹಾತಿ। ಸರ್ವಾಣ್ಯೇನಂ ಭೂತಾನ್ಯಭಿಕ್ಷರಂತಿ। ದೇವೋ ಭೂತ್ವಾ ದೇವಾನಪ್ಯೇತಿ ಯ ಏವಂ ವಿದ್ವಾನೇತದುಪಾಸ್ತೇ। ಹಸ್ತ್ಯೃಷಭಂ ಸಹಸ್ರಂ ದದಾಮೀತಿ ಹೋವಾಚ ಜನಕೋ ವೈದೇಹಃ। ಸ ಹೋವಾಚ ಯಾಜ್ಞವಲ್ಕ್ಯಃ ಪಿತಾ ಮೇಽಮನ್ಯತ ನಾನನುಶಿಷ್ಯ ಹರೇತೇತಿ।**

'ರಾಜನೇ! ಮನಸ್‌ನಲ್ಲಿ ಇರುವ ಮನಸ್ ಎಂಬ ಹೆಸರಿನ ವಿಷ್ಣುವೇ ಆನಂದ. ಏಕೆಂದರೆ ಮನೋನಾಮಕ ಭಗವದ್ರೂಪದ ಸನ್ನಿಧಾನವುಳ್ಳ ಮನಸ್ ಇಂದ್ರಿಯದಿಂದ ಪುರುಷನು ಸ್ತ್ರೀಯ ಬಳಿಗೆ ಬರುತ್ತಾನೆ. ಅವನಿಗೆ ಅವಳಲ್ಲಿ ಅನುರೂಪನಾದ ಮಗನು ಹುಟ್ಟುತ್ತಾನೆ. ಆ ಮಗನು ಆನಂದದಾಯಕನಾಗುತ್ತಾನೆ. ಹೀಗೆ ಯಾವ ಮನೋನಾಮಕ ಭಗವಂತನ ಸನ್ನಿಧಾನವುಳ್ಳ ಮನಸ್ಸಿನ ಪ್ರೇರಣೆಯಿಂದ ಹುಟ್ಟುವ ಮಗನು ಆನಂದದಾಯಕನಾಗುವನೋ, ಆ ಭಗವಂತನು ಆನಂದದಾಯಕನೆಂದು ಬೇರೇನು ಹೇಳಬೇಕು? ಆದ್ದರಿಂದ ಮನೋನಾಮಕನು ಪರಬ್ರಹ್ಮನೇ. ಹೀಗೆ ತಿಳಿದು ಉಪಾಸನೆ ಮಾಡುವವನನ್ನು ಮನೋನಾಮಕನು ಕೈ ಬಿಡುವುದಿಲ್ಲ. ಅವನು ದೇವತ್ವವನ್ನು ಹೊಂದಿ ಅನಂತರ ಉತ್ತಮ ದೇವತೆಗಳಲ್ಲಿ ಸಾಯುಜ್ಯವನ್ನು ಹೊಂದಿ ಚತುರ್ಮುಖನ ಜೊತೆ ಶ್ವೇತದ್ವೀಪಾದಿ ಧಾಮತ್ರಯದಲ್ಲಿರುವ ಶ್ರೀಹರಿಯನ್ನು ಹೊಂದುತ್ತಾನೆ. ಅಲ್ಲಿ ಅವನಿಗಿಂತ ಕಿರಿಯರಾದ ಮುಕ್ತರು ಎಲ್ಲರೂ ಅವನ ಅಭೀಷ್ಟಗಳನ್ನು ನೆರವೇರಿಸುತ್ತಾರೆ. ಹೀಗೆ ಯಾಜ್ಞವಲ್ಕ್ಯರು ಉಪದೇಶಿಸಿದಾಗ 'ಸಾವಿರ ಆನೆ ಎತ್ತುಗಳನ್ನು ಗುರುದಕ್ಷಿಣೆಯಾಗಿ ಕೊಡುತ್ತೇನೆ' ಎಂದು ವಿದೇಹ ರಾಜನಾದ ಜನಕನು ಹೇಳಿದನು. 'ಆದರೆ ನಾನಿನ್ನೂ ಉಪದೇಶಿಸಬೇಕಾದ್ದನ್ನು ಪೂರ್ಣವಾಗಿ ಉಪದೇಶಿಸಿಲ್ಲ. ಪೂರ್ಣವಾಗಿ ಉಪದೇಶಿಸದೆ ಗುರುದಕ್ಷಿಣೆಯನ್ನು ತೆಗೆದುಕೊಳ್ಳಬಾರದೆಂದು ನಮ್ಮ ತಂದೆಯ ಅಭಿಪ್ರಾಯವಿದೆ' ಎಂದು ಯಾಜ್ಞವಲ್ಕ್ಯರು ಹೇಳಿದರು.

**ಭಾಷ್ಯ—ಮನಃಸ್ಥಿತಸ್ಯ ಯದ್ ವಿಷ್ಣೋಃ ಸಂಬಂಧಾದೇವ ಕಾಮತಃ।**

**ಜಾತಃ ಸುತಃ ಸುಖೇ ಹೇತುಃ ಪರಾನಂದೋ ಹರಿಃ ಕಿಮು ।**

**ಇತಿ ಬ್ರಹ್ಮತರ್ಕೇ ।**

**ಅನುವಾದ**—ಮನೋನಾಮಕನು ಆನಂದರೂಪನೆಂದು ಹೇಳಿ, ಪುತ್ರನನ್ನು ಆನಂದರೂಪನೆಂದು ಉಪನಿಷತ್ತು ವರ್ಣಿಸುತ್ತಿದೆ. ಇದು ಅಸಂಗತ ಎಂಬ ಆಕ್ಷೇಪಕ್ಕೆ ಸಮಾಧಾನ– ಮನಸ್ಸಿನಲ್ಲಿರುವ ವಿಷ್ಣುವಿನ ಸಂಬಂಧದಿಂದ ಮತ್ತು ವಿಷ್ಣುವಿನ ಇಚ್ಛೆಯಿಂದ ಹುಟ್ಟಿದ ಮಗನೇ ಸುಖಕ್ಕೆ ಕಾರಣನಾಗುವಾಗ, ಪೂರ್ಣಾನಂದನಾದ ಹರಿಯು ಸುಖಕ್ಕೆ ಕಾರಣ ಎಂದು ಬೇರೆ ಹೇಳಬೇಕೇನು? ಎಂದು ಉಪನಿಷತ್ತು ಹೇಳುತ್ತಿದೆ ಆದ್ದರಿಂದ ಅಸಂಗತಿ ಇಲ್ಲ ಎಂದು ಬ್ರಹ್ಮತರ್ಕದಲ್ಲಿ ಹೇಳಿದೆ.

**ಹೃದಯನಾಮಕ ಭಗವಂತನ ಉಪಾಸನೆ :**

ಉಪನಿಷತ್—**ಯದೇವ ತೇ ಕಶ್ಚಿದಬ್ರವೀತ್ ತಚ್ಛೃಣವಾಮೇತಿ ।ಅಬ್ರವೀನ್ಮೇ ವಿದಗ್ಧಃ ಶಾಕಲ್ಯೋ ಹೃದಯಂ ವೈ ಬ್ರಹ್ಮೇತಿ । ಯಥಾ ಮಾತೃಮಾನ್ ಪಿತೃಮಾನ್ ಆಚಾರ್ಯವಾನ್ ಬ್ರೂಯಾತ್ ತಥಾ ತಚ್ಛಾಕಲ್ಯೋಽಬ್ರವೀದ್ ಹೃದಯಂ ವೈ ಬ್ರಹ್ಮೇತಿ । ಅಹೃದಯಸ್ಯ ಕಿಂ ಸ್ಯಾದಿತಿ । ಅಬ್ರವೀತ್ತು ತೇ ತಸ್ಯಾಯತನಂ ಪ್ರತಿಷ್ಠಾಮ್ ? ನ ಮೇಽಬ್ರವೀದಿತಿ । ಏಕಪಾದ್ ವಾ ಏತತ್ ಸಮ್ರಾಳಿತಿ । ಸ ವೈ ನೋ ಬ್ರೂಹಿ ಯಾಜ್ಞವಲ್ಕ್ಯ। ಹೃದಯಮೇವಾಯತನಂ। ಆಕಾಶಃ ಪ್ರತಿಷ್ಠಾ । ಸ್ಥಿತಿರಿತ್ಯೇನದುಪಾಸೀತ । ಕಾ ಸ್ಥಿತತಾ ಯಾಜ್ಞವಲ್ಕ್ಯ ?**

'ಇನ್ನೂ ನಿನಗೆ ಯಾರಾದರೂ ಉಪದೇಶಿಸಿದ್ದರೆ ಅದನ್ನೂ ಕೇಳುತ್ತೇವೆ ಹೇಳು' ಎಂದರು ಯಾಜ್ಞವಲ್ಕ್ಯರು. ಜನಕನು ಹೇಳಿದನು, ಶಕಲನ ಮಗನಾದ ವಿದಗ್ಧನು 'ಬ್ರಹ್ಮನು ಹೃದಯನಾಮಕ ಎಂದು ಪ್ರಸಿದ್ಧ' ಎಂದು ನನಗೆ ಉಪದೇಶಿಸಿರುವನು. ಯಾಜ್ಞವಲ್ಕ್ಯರು ಹೇಳಿದರು 'ಶ್ರೀಹರಿಯೇ ಹೃದಯನಾಮಕನೆಂದು ವಿದಗ್ಧನು ಉಪದೇಶಿಸಿದುದು ತಾಯಿ, ತಂದೆ ಮತ್ತು ಗುರುಗಳಿಂದ ಶಿಕ್ಷಣ ಪಡೆದವನು ಮಾತ್ರ ಉಪದೇಶಿಸಬಹುದಾದ ಉತ್ತಮ ಉಪದೇಶವಾಗಿದೆ. ಏಕೆಂದರೆ ಹೃದಯನಾಮಕ ಭಗವಂತನಿಲ್ಲದ ಜೀವನಿಂದ ಸುಷುಪ್ತ್ಯಾದಿ ಕಾರ್ಯವು ಏನಾದೀತು? ಆದರೆ ವಿದಗ್ಧನು ಆ ಹೃದಯ ಎಂಬ ಭಗವದ್ರೂಪದ ಸ್ಥಾನ ಪ್ರತಿಮೆ ಮತ್ತು ಹೃದಯ ಶಬ್ದಾರ್ಥ ಯಾವುದೆಂದು ಹೇಳಿರುವರೇನು? ನನಗೆ ಹೇಳಿಲ್ಲ. 'ಹಾಗಾದರೆ ರಾಜನೇ! ಈ ಉಪದೇಶವೂ ಅಪೂರ್ಣ' 'ಯಾಜ್ಞವಲ್ಕ್ಯರೇ ನೀವೇ ನನಗೆ ದಯವಿಟ್ಟು ಉಪದೇಶಿಸಿರಿ'. ಹೃದಯನಾಮಕನಾದ ವಿಷ್ಣುವಿಗೆ ಹೃದಯವೇ ಸ್ಥಾನ. ಆಕಾಶನಾಮಕಳಾದ ರಮಾದೇವಿಯೇ ಪ್ರತಿಮೆ. ಈ ಹೃದಯ ಎಂಬ ಹೆಸರಿನ

ಬ್ರಹ್ಮನನ್ನು ಸ್ಥಿತಿಕಾರಣ ಎಂದು ಉಪಾಸನೆ ಮಾಡಬೇಕು. ಯಾಜ್ಞವಲ್ಕ್ಯರೇ! ಸ್ಥಿತಿಕಾರಣ ಎಂದರೆ ಯಾವುದು?

**ಉಪನಿಷತ್— ಹೃದಯಮೇವ ಸಮ್ರಾಳಿತಿ ಹೋವಾಚ । ಹೃದಯಂ ವೈ ಸಮ್ರಾಟ್ ಸರ್ವೇಷಾಂ ಭೂತಾನಾಮಾಯತನಮ್ । ಹೃದಯಂ ವೈ ಸಮ್ರಾಟ್ ಸರ್ವೇಷಾಂ ಭೂತಾನಾಂ ಪ್ರತಿಷ್ಠಾ । ಹೃದಯೇ ಹ್ಯೇವ ಸಮ್ರಾಟ್ ಸರ್ವಾಣಿ ಭೂತಾನಿ ಪ್ರತಿಷ್ಠಿತಾನಿ ಭವಂತಿ । ಹೃದಯಂ ವೈ ಸಮ್ರಾಟ್ ಪರಮಂ ಬ್ರಹ್ಮ । ನೈನಂ ಹೃದಯಂ ಜಹಾತಿ।ಸರ್ವಾಣ್ಯೇನಂ ಭೂತಾನ್ಯಭಿಕ್ಷರಂತಿ। ದೇವೋ ಭೂತ್ವಾ ದೇವಾನಪ್ಯೇತಿ ಯ ಏವಂ ವಿದ್ವಾನ್ ಏತದುಪಾಸ್ತೇ । ಹಸ್ತ್ಯೃಷಭಂ ಸಹಸ್ರಂ ದದಾಮೀತಿ ಹೋವಾಚ ಜನಕೋ ವೈದೇಹಃ । ಸ ಹೋವಾಚ ಯಾಜ್ಞವಲ್ಕ್ಯಃ ಪಿತಾ ಮೇಽಮನ್ಯತ ನಾನನುಶಿಷ್ಯ ಹರೇತೇತಿ ।**

**ಇತಿ ಷಡಾಚಾರ್ಯ ಬ್ರಾಹ್ಮಣಂ ॥**

'ರಾಜನೇ! ಹೃದಯದಲ್ಲಿ ಪ್ರಾದೇಶ ಅಗ್ರೇಶ ಮೂಲೇಶ ಎಂದು ಮೂರು ರೂಪಗಳಿಂದ ಇರುವ ಹೃದಯ ಎಂಬ ಹೆಸರಿನ ವಿಷ್ಣುವೇ ಸ್ಥಿತಿಕಾರಣ. ಏಕೆಂದರೆ ರಾಜನೇ! ಹೃದಯವ್ಯಾಪಿಯಾದ ಪ್ರಾದೇಶರೂಪಿ ವಿಷ್ಣುವು ಎಲ್ಲ ಚೇತನಗಳಿಗೆ ಸ್ಥಾನವೆಂಬುದು ಪ್ರಸಿದ್ಧವೆ. ಮೂಲೇಶರೂಪಿ ಹೃದಯನು ಎಲ್ಲಾ ಚೇತನಗಳಿಗೆ ಸದಾ ಆಧಾರ. ಅಗ್ರೇಶರೂಪಿಯಾದ ಹೃದಯನಲ್ಲಿ ಎಲ್ಲ ಚೇತನಗಳೂ ವಿಶೇಷವಾಗಿ ನಿದ್ರಾವಸ್ಥೆಯಲ್ಲಿ ಆಶ್ರಯವನ್ನು ಪಡೆದಿರುತ್ತವೆ. ಆದ್ದರಿಂದ ಪರಬ್ರಹ್ಮನೇ ಹೃದಯ. ಯಾರು ಹೀಗೆ ತಿಳಿದು ಪರಬ್ರಹ್ಮನನ್ನು ಉಪಾಸನೆ ಮಾಡುವನೋ ಅವನನ್ನು ಹೃದಯನಾಮಕ ಪರಬ್ರಹ್ಮನು ಕೈ ಬಿಡುವುದಿಲ್ಲ. ಅವನು ದೇವತ್ವವನ್ನು ಹೊಂದುತ್ತಾನೆ. ಅನಂತರ ತನಗಿಂತ ಉತ್ತಮರಾದ ದೇವತೆಗಳಲ್ಲಿ ಸಾಯುಜ್ಯವನ್ನು ಹೊಂದಿ ಚತುರ್ಮುಖ ಬ್ರಹ್ಮನ ಜೊತೆಗೆ ಶ್ವೇತದ್ವೀಪಾದಿ ಧಾಮತ್ರಯಗತನಾದ ಶ್ರೀಹರಿಯನ್ನು ಹೊಂದುತ್ತಾನೆ. ಅಲ್ಲಿ ತನಗಿಂತ ಕಿರಿಯರಾದ ಮುಕ್ತರು ಎಲ್ಲರೂ ಅವನ ಅಭೀಷ್ಟಗಳನ್ನು ನೆರವೇರಿಸುತ್ತಾರೆ'. ಹೀಗೆ ಯಾಜ್ಞವಲ್ಕ್ಯರು ಉಪದೇಶಿಸಿದಾಗ 'ಸಾವಿರ ಆನೆ ಎತ್ತುಗಳನ್ನು ಗುರುದಕ್ಷಿಣೆಯಾಗಿ ಕೊಡುತ್ತೇನೆ' ಎಂದು ವಿದೇಹ ರಾಜನಾದ ಜನಕನು ಹೇಳಿದನು. 'ಆದರೆ ನಾನಿನ್ನೂ ಉಪದೇಶಿಸಬೇಕಾದ್ದನ್ನು ಪೂರ್ಣ ಉಪದೇಶಿಸಿಲ್ಲ. ಪೂರ್ಣ ಉಪದೇಶಿಸದೆ ಗುರುದಕ್ಷಿಣೆಯನ್ನು ತೆಗೆದುಕೊಳ್ಳಬಾರದೆಂದು ನಮ್ಮ ತಂದೆಯವರ ಅಭಿಪ್ರಾಯವಿದೆ' ಎಂದು ಯಾಜ್ಞವಲ್ಕ್ಯರು ಹೇಳಿದರು.

**ಭಾಷ್ಯ—ಸದಾ ಪ್ರತಿಷ್ಠಿತಾನಿ ಭವಂತಿ। ವಿಶೇಷತೋಽಪಿ ಪ್ರತಿಷ್ಠಿತಾನಿ ಸುಪ್ತೌ ।**

**ಅನುವಾದ**—ಚೇತನಗಳು ಹೃದಯನಾಮಕವಾದ ಒಂದು ಭಗವದ್ರೂಪದ ಆಧಾರವನ್ನು ಸದಾ ಹೊಂದಿರುತ್ತವೆ. ನಿದ್ರಾವಸ್ಥೆಯಲ್ಲಿ ವಿಶೇಷವಾಗಿ ಹೃದಯ ನಾಮಕವಾದ ಇನ್ನೊಂದು ಭಗವದ್ರೂಪದ ಆಧಾರವನ್ನು ಹೊಂದಿರುತ್ತವೆ.

**ವಿವರಣೆ**—'ಹೃದಯಂ ವೈ ಸಮ್ರಾಟ್ ಸರ್ವೇಷಾಂ ಭೂತಾನಾಂ ಪ್ರತಿಷ್ಠಾ' ಎಂಬಲ್ಲಿ ಜೀವರಿಗೆ ಆಧಾರವಾದ ಎರಡು ಭಗವದ್ರೂಪಗಳು ಹೇಳಲ್ಪಟ್ಟಿವೆ, ಎಂಬು ವನ್ನು ಉಪನಿಷತ್ತೇ 'ಹೃದಯೇ ಹ್ಯೇವ ಸಮ್ರಾಟ್ ಸರ್ವಾಣಿ ಭೂತಾನಿ ಪ್ರತಿಷ್ಠಿ ತಾನಿ ಭವಂತಿ' ಎಂಬಲ್ಲಿ ಸಮರ್ಥಿಸುತ್ತದೆ ಎಂದು ತೋರಿಸಲು 'ಸರ್ವಾಣಿ ಭೂತಾನಿ ಪ್ರತಿಷ್ಠಿತಾನಿ' ಎಂಬುದನ್ನು ಎರಡು ರೀತಿಯಿಂದ ಭಾಷ್ಯದಲ್ಲಿ ವ್ಯಾಖ್ಯಾನಿಸಲಾಗಿದೆ.

**ಭಾಷ್ಯ—ಹೃದಯೇ ಸರ್ವಶೋ ವ್ಯಾಪೀ ಪ್ರಾದೇಶಃ ಪುರುಷೋತ್ತಮಃ ।**
**ಜೀವಾನಾಂ ಸ್ಥಾನಮುದ್ದಿಷ್ಟಃ ಸರ್ವದೈವ ಸನಾತನಃ ।**
**ಹೃತ್ಕರ್ಣಿಕಾಮೂಲಗತಃ ಸ್ವಾಂಗುಷ್ಠಾಗ್ರ ಪ್ರಮಾಣಕಃ ।**
**ಮೂಲೇಶ ಇತಿ ನಾಮಾಸ್ಮಿನ್ ಸರ್ವೇ ಜೀವಾಃ ಪ್ರತಿಷ್ಠಿತಾಃ ।**
**ಅಂಗುಷ್ಠಮಾತ್ರೇ ಪುರುಷೇ ಕರ್ಣಿಕಾಗ್ರಸ್ಥಿತೇ ಹರೌ ।**
**ಪ್ರವಿಶಂತಿ ಸುಷುಪ್ತೌ ತು ಪ್ರಬುಧ್ಯಂತೇ ತತಸ್ತಥಾ ।**
**ಸೋಽಯಂ ತ್ರಿರೂಪೋ ಭಗವಾನ್ ಹೃದಯಾಖ್ಯಃ ಪ್ರಕೀರ್ತಿತಃ ।**
**ಇತಿ ಚ ।**

**ಸ್ಥಾನಮಾಯತನಂ ಪ್ರೋಕ್ತಂ ಪ್ರತಿಷ್ಠಾ ಧಾರಕಃ ಪುಮಾನ್ ।**
**ಇತಿ ಚ ।**

**ಇತಿ ಷಡಾಚಾರ್ಯಬ್ರಾಹ್ಮಣಂ ।।**

**ಅನುವಾದ**—'ಹೃದಯಂ ವೈ ಸಮ್ರಾಟ್ ಸರ್ವೇಷಾಂ ಭೂತಾನಾಮಾಯ ತನಂ' ಎಂದರೆ ಜೀವರ ಹೃದಯದಲ್ಲಿ ಪೂರ್ಣವಾಗಿ ವ್ಯಾಪಿಸಿರುವ ಪ್ರಾದೇಶ ಪರಿಮಾಣವುಳ್ಳ ಪ್ರಾದೇಶನಾಮಕನಾದ ಪುರುಷೋತ್ತಮನು ಜೀವರಿಗೆ ಸದಾ ಸ್ಥಾನ ನೆನಿಸಿದ್ದಾನೆ. ಹೃದಯಕಮಲದ ಮೊಗ್ಗಿನ ಬುಡದಲ್ಲಿ ಹೆಬ್ಬೆಟ್ಟಿನ ತುದಿಯಷ್ಟು ಪರಿಮಾಣದಿಂದಿರುವ ಭಗವದ್ರೂಪಕ್ಕೆ ಮೂಲೇಶ ಎಂದು ಹೆಸರು. ಇವನನ್ನು ಎಲ್ಲ ಜೀವರೂ ಯಾವಾಗಲೂ ಆಧರಿಸಿರುತ್ತಾರೆ. ಹೃದಯಕಮಲದ ಮೊಗ್ಗಿನ ತುದಿಯಲ್ಲಿ ಹೆಬ್ಬೆಟ್ಟಿನ ಪರಿಮಾಣದಿಂದಿರುವ ಅಗ್ರೇಶನಾಮಕ ಶ್ರೀಹರಿಯನ್ನು ಎಲ್ಲ ಜೀವರೂ ಗಾಢ ನಿದ್ರೆಯಲ್ಲಿ ಪ್ರವೇಶಿಸುತ್ತಾರೆ. ಅವನಿಂದಲೇ ಎಚ್ಚರಗೊಳ್ಳುತ್ತಾರೆ.

ಹೀಗೆ ಮೂರು ರೂಪಗಳುಳ್ಳ ಭಗವಂತನು ಹೃದಯ ಎಂಬ ಹೆಸರುಳ್ಳವನು ಎಂದೂ ಹೇಳಿದೆ.

ಸ್ಥಾನವು ಆಯತನ ಎನಿಸುತ್ತದೆ. ಧಾರಕಪ್ರರುಷನು ಪ್ರತಿಷ್ಠಾ ಎನಿಸುತ್ತಾನೆ ಎಂದೂ ಹೇಳಿದೆ.

ಇಲ್ಲಿಗೆ ಷಡಾಚಾರ್ಯಬ್ರಾಹ್ಮಣವು ಮುಗಿಯಿತು.

**ಯಾಜ್ಞವಲ್ಕ್ಯರಲ್ಲಿ ಜನಕ ಮಹಾರಾಜನ ಶಿಷ್ಯವೃತ್ತಿ :**

**ಉಪನಿಷತ್—ಜನಕೋ ಹ ವೈದೇಹಃ ಕೂರ್ಚಾದ್ ಉಪಾವಸರ್ಪನ್ ಉವಾಚ । ನಮಸ್ತೇಽಸ್ತು ಯಾಜ್ಞವಲ್ಕ್ಯ ಅನು ಮಾ ಶಾಧಿ ಇತಿ । ಸ ಹೋವಾಚ । ಯಥಾ ವೈ ಸಮ್ರಾಡ್ ಮಹಾಂತಮಧ್ವಾನಮ್ ಏಷ್ಯನ್ ರಥಂ ವಾ ನಾವಂ ವಾ ಸಮಾದದೀತ ಏವಮೇವ ಏತಾಭಿರುಪನಿಷದ್ಭಿಃ ಸಮಾಹಿತಾತ್ಮಾಽಸಿ । ಏವಂ ವೃಂದಾರಕ ಆಢ್ಯಃ ಸನ್ ಅಧೀತವೇದ ಉಕ್ತೋಪನಿಷತ್ಕ ಇತೋ ವಿಮುಚ್ಯಮಾನಃ ಕ್ವ ಗಮಿಷ್ಯಸಿ ಇತಿ ।ನಾಹಂ ತದ್ ಭಗವನ್ ವೇದ ಯತ್ರ ಗಮಿಷ್ಯಾಮಿ ಇತಿ । ಅಥ ವೈ ತೇಽಹಂ ತದ್ ವಕ್ಷ್ಯಾಮಿ ಯತ್ರ ಗಮಿಷ್ಯಸಿ ಇತಿ । ಬ್ರವೀತು ಭಗವಾನ್ ಇತಿ ।**

ವಿದೇಹರಾಜನಾದ ಜನಕನು ಸಿಂಹಾಸನದಿಂದ ಇಳಿದು ವಿಧಿಪೂರ್ವಕವಾಗಿ ಯಾಜ್ಞವಲ್ಕ್ಯರನ್ನು ಸಮೀಪಿಸಿ, 'ಯಾಜ್ಞವಲ್ಕ್ಯರೇ! ನಿಮಗೆ ನಮಸ್ಕಾರಗಳು. ನನಗೆ ಮೋಕ್ಷಸಾಧನ ತತ್ತ್ವಜ್ಞಾನವನ್ನು ಉಪದೇಶಿಸಿರಿ' ಎಂದು ಹೇಳಿದನು.ಅವರು ಹೇಳಿದರು 'ರಾಜನೇ!ದೀರ್ಘವಾದ ದಾರಿಯನ್ನು

**ಅನುವಾದ**—ರಾಜನು ತನಗೆ ಯೋಗ್ಯವಾದ ಪ್ರಮೇಯವನ್ನು ಶ್ರವಣ ಮಾಡಲು, ಸಿಂಹಾಸನದಿಂದ ಇಳಿದು ವಿಧಿಪೂರ್ವಕವಾಗಿ ಯಾಜ್ಞವಲ್ಕ್ಯರನ್ನು ಸಮೀಪಿಸಿ ಹೇಳಿದನು.

**ವಿವರಣೆ**—ಇಂದ್ರಿಯಗಳಲ್ಲಿ ಭಗವಂತನ ನಿಯಾಮಕತ್ವವು ರಾಜನಿಗೆ ವಿಶೇಷೋಪಾಸನಾಯೋಗ್ಯವಲ್ಲ; ಏಕೆಂದರೆ ಸರ್ವೇಂದ್ರಿಯಗಳಲ್ಲಿ ಭಗವಂತನ ಉಪಾಸನೆ ದೇವತೆಗಳೇ ಮಾಡಬೇಕಾದುದು. ಒಂದೊಂದು ಇಂದ್ರಿಯಗಳಲ್ಲಿ ಉಪಾಸನೆ ಮನುಷ್ಯರದು. ರಾಜನಿಗೆ ಉಪಾಸನಾಯೋಗ್ಯ ಪ್ರಮೇಯ ಬೇರೆ ಇದೆ. ಅದನ್ನು ತಿಳಿಯಲು ರಾಜ ಯಾಜ್ಞವಲ್ಕ್ಯರನ್ನು ಉಪಸತ್ತಿ ಮಾಡಿದ್ದಾನೆ.

**ಭಾಷ್ಯ—ಯತ್ ಸ್ವಾತ್ಮನಾ ಪ್ರಾಪ್ಯಂ ಮುಕ್ತೌ ತದುಪಾಸ್ಯೈವ ಮುಕ್ತಿ-ರ್ಭವತೀತ್ಯತಃ ಪ್ರಾಪ್ಯಂ ಪೃಚ್ಛತಿ ।**
**ವೃಂದ್ಯೈಃ ಪ್ರಾಪ್ಯತಮತ್ವಾತ್ತು ವೃಂದಾರಕ ಇತಿ ಸ್ಮೃತಃ ।**
**ಇತಿ ಚ ಪಾದ್ಮೇ ।**

**ಅನುವಾದ**-ಸಾಧಕನು ಮುಕ್ತಿಯಲ್ಲಿ ಯಾವ ಭಗವದ್ರೂಪವನ್ನು ಹೊಂದಲು ಯೋಗ್ಯನೋ ಆ ರೂಪವನ್ನು ಉಪಾಸನೆ ಮಾಡಿದರೆ ಮಾತ್ರ ಮುಕ್ತಿಯಾಗುತ್ತದೆ. ಆದ್ದರಿಂದ ಉಪಾಸನಾಯೋಗ್ಯ ಯಾವುದೆಂದು ಕೇಳದೆ ಮುಕ್ತಿಯಲ್ಲಿ ಹೊಂದುವ ಭಗವದ್ರೂಪ ಯಾವುದೆಂದು ಯಾಜ್ಞವಲ್ಕ್ಯರು ಜನಕನನ್ನು ಕೇಳಿದುದು ಅಸಂಗತವೇನಲ್ಲ. ವೃಂದಾರಕ ಎಂದರೆ ದೇವತೆಯೆಂಬುದು ರೂಢಿಯ ಅರ್ಥ. ಆದರೆ ಜನಕನು ದೇವತೆಯಲ್ಲ. ಆದ್ದರಿಂದ 'ಉಪನಿಷತ್ತಿನಲ್ಲಿ ವೃಂದಾರಕ ಶಬ್ದಕ್ಕೆ ಭೃತ್ಯವರ್ಗವನ್ನು ಅತಿಶಯವಾಗಿ ಹೊಂದಿರುವವನೆಂದರ್ಥ' ಎಂದು ಪದ್ಮಪುರಾಣದಲ್ಲಿ ಹೇಳಿದೆ.

**ಇಂದ್ರನಾಮಕ ಭಗವಂತನ ಉಪಾಸನೆ :**

**ಉಪನಿಷತ್—ಇಂಧೋ ಹ ವೈ ನಾಮೈಷ ಯೋಽಯಂ ದಕ್ಷಿಣೇಽಕ್ಷನ್ ಪುರುಷಃ । ತಂ ವಾ ಏತಮಿಂಧಂ ಸಂತಮಿಂದ್ರ ಇತ್ಯಾಚಕ್ಷತೇ ಪರೋಕ್ಷೇಣೈವ । ಪರೋಕ್ಷಪ್ರಿಯಾ ಇವ ಹಿ ದೇವಾಃ ಪ್ರತ್ಯಕ್ಷದ್ವಿಷಃ ।**

ಎಲ್ಲರ ಬಲಗಣ್ಣಿನಲ್ಲಿರುವ ಇಂದ್ರನೆಂಬ ಪರಮಪುರುಷನೇ ನಿನ್ನಂಥ ರಾಜರು ಮುಕ್ತಿಯಲ್ಲಿ ಹೊಂದುವ ಭಗವದ್ರೂಪ. ಪ್ರಕಾಶಮಾನನಾದ್ದರಿಂದ ಇಂಧ ಎಂದು ಪ್ರಸಿದ್ಧವಾಗಿರುವ ಈ ಭಗವದ್ರೂಪವನ್ನು ದೇವತೆಗಳು ಇಂದ್ರ ಎಂಬ ಅಪ್ರಸಿದ್ಧವಾದ ಹೆಸರಿನಿಂದಲೇ ಕರೆಯುತ್ತಾರೆ. ಏಕೆಂದರೆ ಅಸುರರು ತಿಳಿಯಬಾರದೆಂಬ

ಉದ್ದೇಶದಿಂದ ದೇವತೆಗಳು ಸಾಮಾನ್ಯವಾಗಿ ಅಪ್ರಸಿದ್ಧವಾದ ಹೆಸರಿನಿಂದಲೇ ಭಗವದ್ರೂಪಗಳ ಉಪದೇಶವನ್ನು ಇಷ್ಟಪಡುವರು. ಪ್ರಸಿದ್ಧನಾಮಗಳಿಂದ ಉಪದೇಶಿಸುವುದನ್ನು ಇಷ್ಟಪಡುವುದಿಲ್ಲ.

**ಉಪನಿಷತ್—ಅಥೈತದ್ ವಾಮೇಽಕ್ಷಿಣಿ ಪುರುಷರೂಪಮ್ ಏಷಾಸ್ಯ ಪತ್ನೀ ವಿರಾಟ್ । ತಯೋರೇಷ ಸಂಸ್ತಾವೋ ಯ ಏಷೋಽಂತರ್ಹೃದಯ ಆಕಾಶಃ । ಅಥ ಏನಯೋರೇತದನ್ನಂ ಯ ಏಷೋಽಂತರ್ಹೃದಯೇ ಲೋಹಿತಪಿಂಡಃ । ಅಥ ಏನಯೋರೇತತ್ ಪ್ರಾವರಣಂ ಯದೇ- ತದಂತರ್ಹೃದಯೇ ಜಾಲಕಮಿವ । ಅಥ ಏನಯೋರೇಷಾ ಸೃತಿಃ ಸಂಚರಣೀ ಯಾ ಏಷಾ ಹೃದಯಾದೂರ್ಧ್ವಾ ನಾಡ್ಯುಚ್ಚರತಿ । ಯಥಾ ಕೇಶಃ ಸಹಸ್ರಧಾ ಭಿನ್ನ ಏವಮಸ್ಯ ಏತಾ ಹಿತಾ ನಾಮ ನಾಡ್ಯಃ ಅಂತರ್ಹೃದಯೇ ಪ್ರತಿಷ್ಠಿತಾ ಭವಂತಿ । ಏತಾಭಿರ್ವಾ ಏತದಾಸ್ರವತಿ । ತಸ್ಮಾದೇಷ ಪ್ರವಿವಿಕ್ತಾಹಾರತರ ಇವೈವ ಭವತ್ಯಸ್ಮಾಚ್ಛಾರೀರಾ- ದಾತ್ಮನಃ ।**

ಈ ಎಡಗಣ್ಣಿನಲ್ಲಿರುವ ಪುರುಷಾಕಾರದ ಪ್ರತಿಮೆ ವಿರಾಟ್‌ನಾಮಕಳಾದ ಲಕ್ಷ್ಮೀದೇವಿ. ಬಲಗಣ್ಣಿನಲ್ಲಿರುವ ಪರಮಾತ್ಮನ ಪತ್ನಿ. ಕಿವಿ ಮುಚ್ಚಿಕೊಂಡಾಗ ಸರ್ವ ಜೀವರಿಗೂ ಕೇಳಿಬರುವಂತೆ ಹೃದಯದಲ್ಲಿ ಪ್ರಾಣನು ಮಾಡುವ ಸ್ತುತಿಯೇ ಈ ವಿರಾಟ್ ಇಂದ್ರರ ಸ್ತುತಿ. ಹೃದಯದಲ್ಲಿರುವ ಕೆಂಪಾದ ಹೃದಯಕಮಲವೇ ಇವರಿಬ್ಬರಿಗೆ ಅನ್ನ ಉಣ್ಣುವ ಸ್ಥಾನ. ಹೃದಯದಲ್ಲಿ ಮಾಲೆಯಂತೆ ಇರುವ ವಪೆಯು ಇವರಿಬ್ಬರಿಗೆ ವಸ್ತ್ರ. ಹೃದಯದ ಮೇಲೆ ಮೇಲ್ಮುಖವಾಗಿ ಬ್ರಹ್ಮರಂಧ್ರದವರೆಗೆ ಸಾಗುವ ನಾಡಿಯು ಇವರಿಬ್ಬರ ಸಂಚಾರ ಮಾರ್ಗ. ಒಂದು ಕೂದಲು ಸಾವಿರವಾಗಿ ವಿಭಾಗ ಹೊಂದಿದಂತೆ ಸೂಕ್ಷ್ಮವಾಗಿ ಜೀವಾತ್ಮನ ಹೃದಯದೊಳಗೆ ಹಿತಾ ಎಂಬ ಹೆಸರಿನ ಸಾವಿರ ನಾಡಿಗಳು ಹರಡಿಕೊಂಡಿವೆ. ಜೀವನು ಉಣ್ಣುವ ಆಹಾರದಲ್ಲಿ ಜೀವನಿಗೆ ಅಗೋಚರವಾದ ಗಂಧರಸಾದಿ ಸಾರಭಾಗವು ಈ ನಾಡಿಗಳಿಂದ ಹರಿದುಬರುತ್ತದೆ. ಇದನ್ನು ಪರಮಾತ್ಮನು ಹೃದಯಕಮಲದಲ್ಲಿದ್ದು ಉಣ್ಣುತ್ತಾನೆ. ಅವತಾರ ರೂಪಗಳಲ್ಲಿ ಸ್ಥೂಲ ಆಹಾರ ಉಂಡರೂ, ಬೇರೆ ರೂಪಗಳಲ್ಲಿ ಸೂಕ್ಷ್ಮ ಆಹಾರವನ್ನೇ ಉಣ್ಣುವುದರಿಂದ ಪರಮಾತ್ಮನು ಸಾಮಾನ್ಯವಾಗಿ ಜೀವರಿಗಿಂತ ವಿಲಕ್ಷಣವಾದ ಆಹಾರವುಳ್ಳವನು.

**ಭಾಷ್ಯ—ರಾಜ್ಞಾಂ ಹೃದಯಸಂಸ್ಥೋ ಯ ಇಂದ್ರೋ ನಾಮ ಜನಾರ್ದನಃ ।**
**ಸ ಇಂದ್ರೇ ಚ ಯಮೇ ಚೈವ ಸ ಪ್ರಾಪ್ಯೋ ಮುಕ್ತರಾಜಭಿಃ ।**
**ತಸ್ಮಾತ್ತೇಷಾಮುಪಾಸ್ಯಃ ಸಃ ವಿರಾಣ್ ನಾಮ ತದಾಶ್ರಯಾ ।**

ಶ್ರೀಸ್ತಯೋಃ ಸ್ತುತಿರೇಷಾ ಹಿ ಪ್ರಾಣೇನ ಕ್ರಿಯತೇ ಸದಾ ।
ಕರ್ಣೌ ಪಿಧಾಯ ಯಾ ಜ್ಞೇಯಾ ಸರ್ವವೇದಾತ್ಮಿಕಾ ಹಿ ಸಾ ।
ಕಾಶನಾತ್ ಸರ್ವಜೀವಾನಾಮಾಕಾಶ ಇತಿ ಸಾ ಸ್ತುತಿಃ ।
ಜಾಗ್ರತಾಂ ಸರ್ವಜೀವಾನಾಂ ಸ ವಿಷ್ಣುರ್ದಕ್ಷಿಣಾಕ್ಷಿಗಃ ।

**ಅನುವಾದ**—ರಾಜರ ಹೃದಯದಲ್ಲಿ ಯಾವ ಇಂದ್ರ ಎಂಬ ಹರಿಯು ಇರುವನೋ ಅವನೇ ಇಂದ್ರನಲ್ಲಿ ಮತ್ತು ಯಮನಲ್ಲಿ ಇರುವವನು. ಮುಕ್ತ ರಾಜರು ಹೊಂದಬೇಕಾದ ಭಗವದ್ರೂಪ ಇದೇ. ಹೀಗೆ ರಾಜರು ಮುಕ್ತಿಯಲ್ಲಿ ಹೊಂದಬೇಕಾದ ಭಗವಂತನ ರೂಪವಾದುದರಿಂದ ಇಂಧನು ರಾಜರಿಂದ ಉಪಾಸಿಸಲ್ಪಡಬೇಕು. ಈ ಇಂಧನನ್ನು ಆಶ್ರಯಿಸಿರುವ ವಿರಾಟ್ ಎನ್ನುವವಳು ಲಕ್ಷ್ಮೀದೇವಿ. ಹೃದಯದಲ್ಲಿ ಪ್ರಾಣನು ಸದಾ ಮಾಡುವ ಸ್ತುತಿಯೇ ಇವರ ಸ್ತುತಿ. ಎರಡು ಕಿವಿಗಳನ್ನು ಮುಚ್ಚಿದಾಗ ಇದನ್ನು ತಿಳಿಯಬಹುದು. ಇದು ಸಮಗ್ರ ವೇದಾರ್ಥಗರ್ಭಿತವೇ ಆಗಿದೆ. ಎಲ್ಲ ಜೀವರಿಗೂ ಇದು ಗೋಚರವಾಗುವುದರಿಂದ ಇದಕ್ಕೆ ಆಕಾಶ ಎಂದು ಹೆಸರು. ಅಂತರುಪಾಸನಾಯೋಗ್ಯರಾದ ರಾಜರು ತಮ್ಮ ಹೃದಯದೊಳಗೆ ಉಪಾಸನೆ ಮಾಡಬೇಕಾಗಿರುವ ಈ ಭಗವದ್ರೂಪವೇ ಜಾಗ್ರದವಸ್ಥೆಯಲ್ಲಿ ಎಲ್ಲ ಜೀವರ ಬಲಗಣ್ಣಿನಲ್ಲಿರುವುದರಿಂದ, ಉಪನಿಷತ್ತಿನಲ್ಲಿ ಬಲಗಣ್ಣಿನಲ್ಲಿರುವ ರೂಪವೇ ರಾಜರಿಗೆ ಉಪಾಸ್ಯ ಎಂದಿದೆ.

**ಉಪನಿಷತ್—ತಸ್ಯ ಪ್ರಾಚೀ ದಿಕ್ ಪ್ರಾಂಚಃ ಪ್ರಾಣಾಃ । ದಕ್ಷಿಣಾ ದಿಕ್ ದಕ್ಷಿಣಾಃ ಪ್ರಾಣಾಃ । ಪ್ರತೀಚೀ ದಿಕ್ ಪ್ರತ್ಯಂಚಃ ಪ್ರಾಣಾಃ । ಉದೀಚೀ ದಿಕ್ ಉದಂಚಃ ಪ್ರಾಣಾಃ । ಊರ್ಧ್ವಾ ದಿಕ್ ಊರ್ಧ್ವಾಃ ಪ್ರಾಣಾಃ । ಅವಾಚೀ ದಿಕ್ ಅವಾಂಚಃ ಪ್ರಾಣಾಃ । ಸರ್ವಾ ದಿಶಃ ಸರ್ವೇ ಪ್ರಾಣಾಃ । ಸ ಏಷ ನೇತಿ । ನೇತಿ । ಆತ್ಮಾ ಅಗೃಹ್ಯೋ ನ ಹಿ ಗೃಹ್ಯತೇ । ಅಶೀರ್ಯೋ ನ ಹಿ ಶೀರ್ಯತೇ । ಅಸಂಗೋ ನ ಹಿ ಸಜ್ಜತೇ। ಅಸಿತೋ ನ ವ್ಯಥತೇ ।ನ ರಿಷ್ಯತಿ। ಅಭಯಂ ವೈ ಜನಕ ಪ್ರಾಪ್ತೋಽಸೀತಿ ಹೋವಾಚ ಯಾಜ್ಞವಲ್ಕ್ಯಃ । ಸ ಹೋವಾಚ ಜನಕೋ ವೈದೇಹಃ । ಅಭಯಂ ತ್ವಾಗಚ್ಛತಾದ್ ಯಾಜ್ಞವಲ್ಕ್ಯ ಯೋ ನೋ ಭಗವನ್ ಅಭಯಂ ವೇದಯಸೇ । ನಮಸ್ತೇಽಸ್ತು । ಇಮೇ ವಿದೇಹಾಃ । ಅಯಮಹಮಸ್ಮಿ ।**

**ಇತಿ ಕೂರ್ಚ ಬ್ರಾಹ್ಮಣಮ್ ॥**

'ಪೂರ್ವದಿಕ್ಕಿನಲ್ಲಿರುವ ಪ್ರಾಣ ಎಂಬ ಹೆಸರಿನ ಇಂದ್ರ, ಅಗ್ನಿ ಮತ್ತು ಅವರ

ಪತ್ನಿಯರು ಆ ಇಂಧನಾಮಕ ವಿಷ್ಣುವಿಗೆ ಪೂರ್ವದಿಕ್‌ನಲ್ಲಿ ಸೇವಕರು. ದಕ್ಷಿಣ ದಿಕ್ಕಿನಲ್ಲಿರುವ ಪ್ರಾಣ ಎಂಬ ಹೆಸರಿನ ಯಮ ನಿರ್ಋತಿ ಮತ್ತು ಅವರ ಪತ್ನಿಯರು ದಕ್ಷಿಣ ದಿಕ್ಕಿನಲ್ಲಿ ಸೇವಕರು. ಪಶ್ಚಿಮ ದಿಕ್ಕಿನಲ್ಲಿರುವ ಪ್ರಾಣ ಎಂಬ ಹೆಸರಿನ ವರುಣ ವಾಯು ಮತ್ತು ಅವರ ಪತ್ನಿಯರು ಪಶ್ಚಿಮ ದಿಕ್ಕಿನಲ್ಲಿ ಸೇವಕರು. ಉತ್ತರ ದಿಕ್ಕಿನಲ್ಲಿರುವ ಪ್ರಾಣ ಎಂಬ ಹೆಸರಿನ ಸೋಮ ಈಶಾನ ಮತ್ತು ಅವರ ಪತ್ನಿಯರು ಉತ್ತರದಿಕ್ಕಿನಲ್ಲಿ ಸೇವಕರು. ಊರ್ಧ್ವದಿಕ್ಕಿನಲ್ಲಿರುವ ಪ್ರಾಣ ಎಂಬ ಹೆಸರಿನ ಚತುರ್ಮುಖ ಮುಖ್ಯಪ್ರಾಣ ಮತ್ತು ಅವರ ಪತ್ನಿಯರು ಊರ್ಧ್ವದಿಕ್ಕಿನಲ್ಲಿ ಸೇವಕರು. ಕೆಳ ದಿಕ್ಕಿನಲ್ಲಿರುವ ಪ್ರಾಣ ಎಂಬ ಹೆಸರಿನ ಶೇಷ ಕಾಮ ಮತ್ತು ಅವರ ಪತ್ನಿಯರು ಕೆಳ ದಿಕ್ಕಿನಲ್ಲಿ ಸೇವಕರು. ಹೀಗೆ ಎಲ್ಲ ದಿಕ್‌ಗಳಲ್ಲಿರುವ ಪ್ರಾಣ ಎಂಬ ಹೆಸರಿನ ಇಂದ್ರಾದಿ ಸಕಲದೇವತೆಗಳು ಎಲ್ಲ ದಿಕ್ಕುಗಳಲ್ಲಿ ಇವನಿಗೆ ಸೇವಕರು. ಈ ವಿಷ್ಣುವು ಶ್ರೀದೇವಿಯಂತೆಯೂ ಅಲ್ಲ. ಬ್ರಹ್ಮಾದಿಗಳಂತೆಯೂ ಅಲ್ಲ. ಏಕೆಂದರೆ ಇವನು ಸಂಪೂರ್ಣವಾಗಿ ತಿಳಿಯಲ್ಪಡುವುದಿಲ್ಲ. ಏಕೆಂದರೆ ಸಂಪೂರ್ಣವಾಗಿ ತಿಳಿಯಲ್ಪಡುತ್ತಾನೆ ಎಂಬ ವಿಷಯದಲ್ಲಿ ಪ್ರಮಾಣವಿಲ್ಲ. ಕಾಲದಿಂದ ಅಥವಾ ಬೇರೆ ಕಾರಣಗಳಿಂದ ಹಿಂಸೆಗೊಳಗಾಗದವನು. ಏಕೆಂದರೆ ಹಿಂಸೆಗೊಳಗಾಗುತ್ತಾನೆ ಎಂಬ ವಿಷಯದಲ್ಲಿ ಪ್ರಮಾಣವಿಲ್ಲ. ಪ್ರಪಂಚದಲ್ಲಿ ವ್ಯಾಪಿಸಿದ್ದರೂ ಪ್ರಪಂಚದ ದೋಷಗಳ ಲೇಪವಿಲ್ಲದವನು. ಏಕೆಂದರೆ ದೋಷಲೇಪವಿದೆ ಎಂಬ ವಿಷಯದಲ್ಲಿ ಪ್ರಮಾಣವಿಲ್ಲ. ದುಃಖವಿಲ್ಲದವನು. ಏಕೆಂದರೆ ದುಃಖವಿದೆ, ನಾಶವಿದೆ ಎಂಬ ವಿಷಯದಲ್ಲಿ ಪ್ರಮಾಣವಿಲ್ಲ. ಜನಕ! ನೀನು ಮುಕ್ತರಿಗೆ ಸದಾ ಅಭಯಪ್ರದನಾದ ಈ ಶ್ರೀಹರಿಯನ್ನು ನಿಶ್ಚಿತವಾಗಿ ಮುಕ್ತಿಯಲ್ಲಿ ಹೊಂದುವಿ ಎಂದು ಯಾಜ್ಞವಲ್ಕ್ಯರು ಹೇಳಿದರು. ವಿದೇಹರಾಜ ಜನಕನು ಹೇಳಿದನು 'ಪೂಜ್ಯ ಯಾಜ್ಞವಲ್ಕ್ಯರೇ, ಹೀಗೆ ಮುಕ್ತರಿಗೆ ಸದಾ ಅಭಯಪ್ರದನಾದ ಪರಮಾತ್ಮ ರೂಪವನ್ನು ಉಪದೇಶಿಸಿರುವ ನಿಮಗೆ ಆ ಅಭಯಪ್ರದನಾದ ಶ್ರೀಹರಿಯೇ ತೃಪ್ತಿ ಉಂಟು ಮಾಡಲಿ. ನಾವೇನೂ ಪ್ರತ್ಯುಪಕಾರ ಮಾಡಲಾರೆವು. ನಿಮಗೆ ನಮಸ್ಕಾರಗಳನ್ನು ಮಾತ್ರ ಅರ್ಪಿಸುತ್ತೇನೆ. ಇನ್ನೇನು ಕೊಡಲಿ? ನನ್ನ ಈ ಇಡೀ ವಿದೇಹರಾಜ್ಯ ನಿಮ್ಮದು. ನಾನು ನಿಮ್ಮ ದಾಸ.

**ಭಾಷ್ಯ—ತಸ್ಯ ಪೂರ್ವದಿಶೀಂದ್ರಾಗ್ನೀ ಸಭಾರ್ಯೌ ಸಂಪ್ರತಿಷ್ಠಿತೌ ।**
**ಯಮರಾಕ್ಷಸೌ ದಕ್ಷಿಣಸ್ಯಾಂ ವರುಣೋ ವಾಯುರೇವ ಚ ।**
**ಪಶ್ಚಿಮಸ್ಯಾಂ ಉತ್ತರಸ್ಯಾಂ ಸೋಮೇಶಾನೌ ಪ್ರತಿಷ್ಠಿತೌ ।**
**ಬ್ರಹ್ಮಾ ಪ್ರಧಾನವಾಯುಶ್ಚ ತಥೋರ್ಧ್ವಾಯಾಂ ದಿಶಿ ಸ್ಥಿತೌ ।**
**ಅಧರಾಯಾಂ ಶೇಷಕಾಮೌ ಸಭಾರ್ಯಾಃ ಸರ್ವ ಏವ ಚ ।**
**ಏಕೈಕಸ್ಯಾಂ ಹಿ ಚತ್ವಾರೋ ನೇತೃತ್ವಾತ್ ಪ್ರಾಣನಾಮಕಾಃ ।**

ಇಂದ್ರಿಯಾಭಿಮುಕೇಶ್ಚೈವ ಪ್ರಾಣಾ ಇತ್ಯೇವ ಶಬ್ದಿತಾಃ ।

**ಅನುವಾದ**—ಅವನಿಗೆ ಪೂರ್ವದಿಕ್ಕಿನಲ್ಲಿ ಇಂದ್ರ ಅಗ್ನಿಗಳೂ ಅವರ ಪತ್ನಿಯರೂ ಸೇವಕರಾಗಿದ್ದಾರೆ. ದಕ್ಷಿಣದಲ್ಲಿ ಪತ್ನೀ ಸಹಿತರಾದ ಯಮ ನಿರ್ಋತಿಗಳು, ಪಶ್ಚಿಮದಲ್ಲಿ ಪತ್ನೀ ಸಹಿತರಾದ ಸೋಮ ಈಶಾನರು, ಊರ್ಧ್ವದಿಕ್ಕಿನಲ್ಲಿ ಪತ್ನೀ ಸಹಿತರಾದ ಬ್ರಹ್ಮ, ವಾಯುಗಳು, ಕೆಳ ದಿಕ್ಕಿನಲ್ಲಿ ಪತ್ನೀ ಸಹಿತರಾದ ಶೇಷ ಕಾಮರು, ಹೀಗೆ ಪ್ರತಿಯೊಂದು ದಿಕ್ಕಿನಲ್ಲಿ ನಾಲ್ವರಂತೆ ಸೇವಕರಾಗಿದ್ದಾರೆ. ಅವರೆಲ್ಲರೂ ಜೀವರಿಗೆ ಪ್ರವರ್ತಕರಾದ್ದರಿಂದಲೂ ಇಂದ್ರಿಯಾಭಿಮಾನಿಗಳಾದುದರಿಂದಲೂ ಪ್ರಾಣ ಎಂಬ ಹೆಸರುಳ್ಳವರು.

**ಭಾಷ್ಯ**—ತ್ವತ್ಪ್ರಸಾದಾದ್ ಯದಭಯಮಸ್ಮಾಕಂ ಪ್ರಾಪ್ತಂ ತದೇವ ತವ ತೃಪ್ತಯೇಽಸ್ತು । ನಾನ್ಯದ್ ವಯಂ ಪ್ರತ್ಯುಪಕರ್ತುಂ ಶಕ್ನುಮ ಇತ್ಯರ್ಥಃ। 'ಸ ಭಗವಾನ್ ಸ್ವಕೃತೇನ ತುಷ್ಯೇತ್' ಇತಿವತ್। ಇಂಧೋ ದೀಪ್ತಃ ।

**ಅನುವಾದ**—ಆತ್ಮಾರಾಮರಾದ ಯಾಜ್ಞವಲ್ಕ್ಯರಂಥ ಮುನಿಗಳಿಗೆ ಪರಮಾತ್ಮ ದರ್ಶನದಿಂದಲೇ ತೃಪ್ತಿ. ಆದರೂ ನಿಮ್ಮ ಅನುಗ್ರಹದಿಂದ ನಮಗೆ ಲಭಿಸಿರುವ ಮುಕ್ತಾಭಯಪ್ರದನಾದ ಪರಮಾತ್ಮನೇ ನಿಮಗೆ ತೃಪ್ತಿ ಉಂಟುಮಾಡಲಿ ಎನ್ನುತ್ತಿದ್ದಾನೆ ಜನಕ ಮಹಾರಾಜ. ಇದಕ್ಕೆ ಪ್ರತ್ಯುಪಕಾರವನ್ನು ಮಾಡಲು ನಾವು ಸಮರ್ಥರಲ್ಲ ಎಂದು ಅರ್ಥ. ಇದಕ್ಕೆ ಉದಾಹರಣೆ–'ಆ ಭಗವಂತನು ತಾನು ನನ್ನಲ್ಲಿ ನಿಂತು ಮಾಡಿದ ಕರ್ಮದಿಂದ ತಾನೆ ತೃಪ್ತನಾಗಲಿ' ಎಂಬ ಮಾತಿಗೆ ನಿತ್ಯತೃಪ್ತನಾದ ಭಗವಂತನಿಗೆ ನಾವೇನೂ ಪ್ರತ್ಯುಪಕಾರ ಮಾಡಲಾರೆವು ಎಂಬ ಅಭಿಪ್ರಾಯ ಸ್ಪಷ್ಟ. ಉಪನಿಷತ್ತಿನಲ್ಲಿ ಇಂಧ ಎಂದರೆ ಉಜ್ವಲ ಎಂದು ಅರ್ಥ.

**ಭಾಷ್ಯ**—ಜೀವಭೋಗಸ್ಯ ಭೋಕ್ತೇಶೋ ಜೀವಸ್ತದ್ಭೋಗ ಭುಙ್ ನ ತು ।
ವಿವಿಕ್ತಭುಗಿವಾತೋಽಸೌ ಭಗವಾನ್ ಪುರುಷೋತ್ತಮಃ ।
ಇತಿ ಪಾದ್ಮೇ ।

॥ ಇತಿ ಕೂರ್ಚ ಬ್ರಾಹ್ಮಣಮ್ ॥

**ಅನುವಾದ**—ಹರಿಯು ಜೀವರು ಅನುಭವಿಸುವ ವಸ್ತುಗಳನ್ನು ಅನುಭವಿಸುತ್ತಾನೆ. ಆದರೂ ಹರಿಯು ಅನುಭವಿಸುವುದನ್ನು ಜೀವನು ಅನುಭವಿಸುವುದಿಲ್ಲ. ಆದ್ದರಿಂದ ಪುರುಷೋತ್ತಮನಾದ ಹರಿಯು ಪ್ರವಿವಿಕ್ತಾಹಾರತರ ಇವ ಎಂದು ಉಪನಿಷತ್ತಿನಲ್ಲಿ ಹೇಳಿದೆ ಎಂದು ಪದ್ಮಪುರಾಣದಲ್ಲಿದೆ.

**ವಿವರಣೆ**—ಜೀವರ ಭೋಗಕ್ಕಿಂತ ಹರಿಯ ಭೋಗ ವಿಲಕ್ಷಣ ಅಗಿರುತ್ತದೆ,

ಎಂದು ಹೇಳಲು 'ವಿವಿಕ್ತಭುಕ್' ಎಂಬ ಪದವೇ ಸಾಕು. ಅದರ ಜೊತೆಗೆ ಪ್ರಯೋಗಿಸಲ್ಪಟ್ಟಿರುವ ಇವ ಶಬ್ದವು, ಇದು ಸಾಮಾನ್ಯ ನಿಯಮ ಎಂದು ತಿಳಿಸುತ್ತದೆ. ಅಂದರೆ ಅವತಾರಗಳಲ್ಲಿ ಜೀವರು ಅನುಭವಿಸುವ ಸ್ಥೂಲ ವಸ್ತುಗಳನ್ನೇ ತಾನೂ ಅನುಭವಿಸುತ್ತಾನೆ ಎಂದು ಅರ್ಥ. ವಸ್ತುತಃ ಶರೀರದಲ್ಲಿ ಜೀವನೊಡನಿರುವ ಪರಮಾತ್ಮನು,

ಶ್ರೋತ್ರಂ ಚಕ್ಷುಃ ಸ್ಪರ್ಶನಂ ಚ ರಸನಂ ಘ್ರಾಣಮೇವ ಚ ।
ಅಧಿಷ್ಠಾಯ ಮನಶ್ಚಾಯಂ ವಿಷಯಾನುಪಸೇವತೇ ॥

ಎಂಬ ಗೀತಾವಚನಾನುಸಾರ ಜೀವಭೋಗ್ಯ ಅನ್ನವನ್ನೂ ಉಣ್ಣುತ್ತಾನೆ. ಅದರೂ ಆ ಅನ್ನದಲ್ಲಿರುವ ಜೀವಾಗೋಚರವಾದ ಸಾರಭಾಗವನ್ನೂ ಬಿಡದೆ ಪರಮಾತ್ಮನು ಅನುಭವಿಸುವುದರಿಂದ, ಆ ಭಾಗ ಜೀವನಿಗೆ ಆಹಾರವಲ್ಲದಿರುವುದರಿಂದ ಪರಮಾತ್ಮ ಪ್ರವಿವಿಕ್ತಾಹಾರತರ ಇವ ಎನಿಸಿದ್ದಾನೆ.

ಇಲ್ಲಿಗೆ ಕೂರ್ಚ ಬ್ರಾಹ್ಮಣವು ಮುಗಿಯಿತು.

**ಅವಸ್ಥಾತ್ರಯ ಸ್ವರ್ಗ ಮುಕ್ತಿಗಳಲ್ಲಿ ಭಗವಂತನೇ ಜ್ಞಾನಕಾರಣ:**

**ಉಪನಿಷತ್**—**ಜನಕಂ ಹ ವೈದೇಹಂ ಯಾಜ್ಞವಲ್ಕ್ಯೋ ಜಗಾಮ ಸಮೇನೇನ ವದಿಷ್ಯ ಇತಿ।ಅಥ ಹ ಯಜ್ಜನಕಶ್ಚ ವೈದೇಹೋ ಯಾಜ್ಞವಲ್ಕ್ಯಶ್ಚಾಗ್ನಿಹೋತ್ರೇ ಸಮುದಾತೇ ತಸ್ಮೈ ಹ ಯಾಜ್ಞವಲ್ಕ್ಯೋ ವರಂ ದದೌ । ಸ ಹ ಕಾಮಪ್ರಶ್ನಮೇವ ವರಂ ವವ್ರೇ । ತಂ ಹಾಸ್ಮೈ ದದೌ । ತಂ ಹ ಸಮ್ರಾಳ್ ಏವ ಪೂರ್ವಃ ಪಪ್ರಚ್ಛ ।**

ಒಂದು ದಿನ ಯಾಜ್ಞವಲ್ಕ್ಯರು ವಿದೇಹರಾಜ ಜನಕನ ಜೊತೆಗೆ ತತ್ತ್ವವಿಚಾರ ಮಾಡುವೆನು ಎಂದು ಸಂಕಲ್ಪಿಸಿ ಅವನ ಬಳಿಗೆ ತಾವೇ ಹೋದರು. ಏಕೆಂದರೆ ಹಿಂದೆ ಜನಕ ಮತ್ತು ಯಾಜ್ಞವಲ್ಕ್ಯರು ಅಗ್ನಿಹೋತ್ರ ಹೋಮಶಾಲೆಯಲ್ಲಿ ಮಾತನಾಡಿಕೊಂಡಿದ್ದರು. ಆಗ, ತನ್ನ ಆಹ್ವಾನವನ್ನು ನಿರೀಕ್ಷಿಸದೆ ಯಾಜ್ಞವಲ್ಕ್ಯರು ತಾವೇ ತನ್ನ ಬಳಿಗೆ ಬರಬೇಕೆಂದು ಜನಕನು ಪ್ರಾರ್ಥಿಸಿದ್ದನು. ಯಾಜ್ಞವಲ್ಕ್ಯರು ಹಾಗೇ ಆಗಲೆಂದು ವರವನ್ನೂ ಕೊಟ್ಟಿದ್ದರು. ಅವನು ತನಗೆ ಇಷ್ಟವಾದ ಪ್ರಶ್ನೆಯನ್ನು ನಿಃಸಂಕೋಚವಾಗಿ ಕೇಳಲು ಅನುಮತಿಯನ್ನು ಬೇಡಿದ್ದನು. ಅವನಿಗೆ ಆ ವರವನ್ನೂ ಯಾಜ್ಞವಲ್ಕ್ಯರು ಕೊಟ್ಟಿದ್ದರು. ಆದ್ದರಿಂದ ಯಾಜ್ಞವಲ್ಕ್ಯರು 'ಬೇಕಾದ ಪ್ರಶ್ನೆ ಕೇಳು' ಎಂದು ಹೇಳುವ ಮೊದಲು ರಾಜನೇ ಉತ್ಸುಕತೆಯಿಂದ ಪ್ರಶ್ನೆಯನ್ನು ಕೇಳಿದನು.

**ಭಾಷ್ಯ**—**ಯಾಜ್ಞವಲ್ಕ್ಯೋ ವರಂ ದತ್ವಾ ರಾಜ್ಞಾ ಸಂವಾದಕಾಮುಕಃ ।**

**ವೈದೇಹನಗರಂ ಪ್ರಾಯಾತ್ ಸಂತೋ ಯಚ್ಛಾಸ್ತ್ರಲೋಲುಪಾಃ ।**
**ಇತಿ ಸ್ಕಾಂದೇ ।**

**ಅನುವಾದ**—ಆಹ್ವಾನವಿಲ್ಲದಿದ್ದರೂ ನಿನ್ನ ಬಳಿಗೆ ಆಗಾಗ ಬಂದು ಕಾಣುವೆನೆಂದು ಜನಕನಿಗೆ ಯಾಜ್ಞವಲ್ಕ್ಯರು ವರವನ್ನು ಕೊಟ್ಟಮೇಲೆ ಒಂದು ದಿನ ರಾಜನ ಜೊತೆ ಸಂವಾದ ಮಾಡಬೇಕೆಂದು ಬಯಸಿ ವಿದೇಹರಾಜನ ನಗರಕ್ಕೆ ಹೋದರು. ಏಕೆಂದರೆ ಸಜ್ಜನರು ಶಾಸ್ತ್ರವಿಚಾರದಲ್ಲಿ ಬಹಳ ಆಸಕ್ತಿವುಳ್ಳವರು ಎಂದು ಸ್ಕಾಂದ ಪುರಾಣದಲ್ಲಿ ಹೇಳಿದೆ.

**ಭಾಷ್ಯ—ತಥಾಪಿ ಸಮ್ರಾಳೇವ ಪೂರ್ವಂ ಪಪ್ರಚ್ಛ ।**

**ಅನುವಾದ**—ನಿನಗೆ ಬೇಕಾದ ಪ್ರಶ್ನೆ ಕೇಳೆಂದು ಯಾಜ್ಞವಲ್ಕ್ಯರು ಹೇಳಿದ ಬಳಿಕವೇ ಜನಕನು ಕೇಳಬೇಕಾಗಿದ್ದಿತು. ಆದರೂ ಅವರು ಹಾಗೆ ಹೇಳುವ ಮೊದಲೇ ಉತ್ಸುಕತೆಯಿಂದ ರಾಜನು ಪ್ರಶ್ನೆ ಕೇಳಿದನು ಎಂಬುದು ಸಮ್ರಾಡೇವ ಪೂರ್ವಃ ಪಪ್ರಚ್ಛ ಎಂಬುದರ ಅಭಿಪ್ರಾಯ.

**ಉಪನಿಷತ್—ಯಾಜ್ಞವಲ್ಕ್ಯ ಕಿಂಜ್ಯೋತಿರಯಂ ಪುರುಷ ಇತಿ । ಆದಿತ್ಯ ಜ್ಯೋತಿಃ ಸಮ್ರಾಳ್ ಇತಿ ಹೋವಾಚ । ಆದಿತ್ಯೇನೈವಾಯಂ ಜ್ಯೋತಿಷಾಽಸ್ತೇ। ಪಲ್ಯಯತೇ । ಕರ್ಮ ಕುರುತೇ। ವಿಪಲ್ಯೇತೀತಿ । ಏವಮೇವೈತದ್ ಯಾಜ್ಞವಲ್ಕ್ಯ ।**

'ಯಾಜ್ಞವಲ್ಕ್ಯರೇ, ಈ ಸಂಸಾರಿ ಜೀವನಿಗೆ ಜ್ಞಾನಸಾಧನ ಯಾವುದು?' ಯಾಜ್ಞವಲ್ಕ್ಯರು ಹೇಳಿದರು, 'ರಾಜನೇ, ಸೂರ್ಯನೇ ಮುಖ್ಯವಾಗಿ ಜ್ಞಾನಸಾಧನ. ಈ ಸಂಸಾರಿಜೀವನು ತನಗೆ ಜ್ಞಾನಸಾಧನವಾದ ಈ ಆದಿತ್ಯನ ಸಹಾಯದಿಂದಲೇ ಬೇಕಾದ ಕಡೆ ಕುಳಿತುಕೊಳ್ಳುತ್ತಾನೆ. ಬೇಕಾದ ಕಡೆ ಹೋಗುತ್ತಾನೆ. ಕೆಲಸಗಳನ್ನು ಮಾಡುತ್ತಾನೆ. ಹಿಂದಿರುಗಿ ಬರುತ್ತಾನೆ. ಆದ್ದರಿಂದ ಆದಿತ್ಯನೇ ಜ್ಞಾನಸಾಧನ !' ಜನಕನು ಹೇಳಿದ, 'ಯಾಜ್ಞವಲ್ಕ್ಯರೇ! ಇದು ಸರಿ'.

**ಉಪನಿಷತ್—ಅಸ್ತಮಿತ ಆದಿತ್ಯೇ ಯಾಜ್ಞವಲ್ಕ್ಯ ಕಿಂಜ್ಯೋತಿರೇವಾಯಂ ಪುರುಷ ಇತಿ । ಚಂದ್ರಮಾ ಏವಾಸ್ಯ ಜ್ಯೋತಿರ್ಭವತೀತಿ । ಚಂದ್ರಮಸೈವಾಯಂ ಜ್ಯೋತಿಷಾ ಆಸ್ತೇ। ಪಲ್ಯಯತೇ। ಕರ್ಮ ಕುರುತೇ।ವಿಪಲ್ಯೇತಿ ಇತಿ । ಏವಮೇವ ಏತದ್ ಯಾಜ್ಞವಲ್ಕ್ಯ ।**

'ಯಾಜ್ಞವಲ್ಕ್ಯರೇ! ಆದಿತ್ಯನು ಅಸ್ತಮಿಸಿದಾಗ ಸಂಸಾರಿ ಜೀವನ ಜ್ಞಾನಸಾಧನ ಯಾವುದು?' 'ಚಂದ್ರನೇ ಇವನಿಗೆ ಮುಖ್ಯವಾಗಿ ಜ್ಞಾನಸಾಧನ. ಜ್ಞಾನ

ಸಾಧನನಾದ ಚಂದ್ರನಿಂದಲೇ ಈ ಜೀವನು ಬೇಕಾದ ಕಡೆ ಕುಳಿತುಕೊಳ್ಳುತ್ತಾನೆ. ಬೇಕಾದಕಡೆ ಹೋಗುತ್ತಾನೆ, ಕೆಲಸಗಳನ್ನು ಮಾಡುತ್ತಾನೆ, ಹಿಂದಿರುಗಿ ಬರುತ್ತಾನೆ. ಆದ್ದರಿಂದ ಚಂದ್ರನೇ ಜ್ಞಾನ ಸಾಧನ'. 'ಯಾಜ್ಞವಲ್ಕ್ಯರೇ! ಇದು ಸರಿ'.

**ಉಪನಿಷತ್—ಅಸ್ತಮಿತ ಆದಿತ್ಯೇ ಯಾಜ್ಞವಲ್ಕ್ಯ ಚಂದ್ರಮಸ್ಯಸ್ತಮಿತೇ ಕಿಂಜ್ಯೋತಿರೇವಾಯಂ ಪುರುಷ ಇತಿ । ಅಗ್ನಿರೇವಾಸ್ಯ ಜ್ಯೋತಿರ್ಭವತೀತಿ । ಅಗ್ನಿನೈವಾಯಂ ಜ್ಯೋತಿಷಾ ಆಸ್ತೇ । ಪಲ್ಯಯತೇ । ಕರ್ಮ ಕುರುತೇ । ವಿಪಲ್ಯೇತೀತಿ । ಏವಮೇವೈತದ್ ಯಾಜ್ಞವಲ್ಕ್ಯ ।**

'ಯಾಜ್ಞವಲ್ಕ್ಯರೇ! ಸೂರ್ಯನು ಅಸ್ತಮಿಸಿದಾಗ, ಚಂದ್ರನು ಅಸ್ತವಾದಾಗ ಈ ಸಂಸಾರಿ ಜೀವನ ಜ್ಞಾನಸಾಧನ ಯಾವುದು?' ಅಗ್ನಿಯು ಆಗ ಇವನಿಗೆ ಮುಖ್ಯವಾಗಿ ಜ್ಞಾನಸಾಧನ. ಜ್ಞಾನಸಾಧನನಾದ ಅಗ್ನಿಯಿಂದಲೇ ಈ ಜೀವನು ಬೇಕಾದ ಕಡೆ ಕುಳಿತುಕೊಳ್ಳುತ್ತಾನೆ. ಬೇಕಾದಕಡೆ ಹೋಗುತ್ತಾನೆ. ಕೆಲಸಗಳನ್ನು ಮಾಡುತ್ತಾನೆ. ಹಿಂದಿರುಗಿ ಬರುತ್ತಾನೆ. ಆದ್ದರಿಂದ ಅಗ್ನಿಯೇ ಜ್ಞಾನಸಾಧನ. 'ಯಾಜ್ಞವಲ್ಕ್ಯರೆ! ಇದು ಸರಿ'.

**ಉಪನಿಷತ್—ಅಸ್ತಮಿತ ಆದಿತ್ಯೇ ಯಾಜ್ಞವಲ್ಕ್ಯ ಚಂದ್ರಮಸ್ಯಸ್ತಮಿತೇ ಶಾಂತೇ ಅಗ್ನೌ ಕಿಂಜ್ಯೋತಿರೇವಾಯಂ ಪುರುಷ ಇತಿ । ವಾಗೇವಾಸ್ಯ ಜ್ಯೋತಿರ್ಭವತೀತಿ। ವಾಚೈವಾಯಂ ಜ್ಯೋತಿಷಾ ಆಸ್ತೇ। ಪಲ್ಯಯತೇ। ಕರ್ಮಕುರುತೇ । ವಿಪಲ್ಯೇತೀತಿ । ತಸ್ಮಾದ್ ವೈ ಸಮ್ರಾಳ್ ಅಪಿ ಯತ್ರ ಸ್ವಃ ಪಾಣಿರ್ನ ವಿನಿರ್ಜ್ಞಾಯತೇಽಥ ಯತ್ರ ವಾಗುಚ್ಚರತಿ ಉಪೈವ ತತ್ರ ಹ್ಯೇತೀತಿ । ಏವಮೇವೈತದ್ ಯಾಜ್ಞವಲ್ಕ್ಯ ।**

'ಯಾಜ್ಞವಲ್ಕ್ಯರೇ! ಸೂರ್ಯನು ಅಸ್ತನಾದಾಗ, ಚಂದ್ರನು ಅಸ್ತನಾದಾಗ, ಅಗ್ನಿಯು ಆರಿದಾಗ ಈ ಸಂಸಾರಿಜೀವನ ಜ್ಞಾನಸಾಧನ ಯಾವುದು?' 'ಆಗ ಮಾತೇ ಇವನಿಗೆ ಮುಖ್ಯವಾಗಿ ಜ್ಞಾನಸಾಧನ. ಜ್ಞಾನಸಾಧನವಾದ ಮಾತಿನ ಸಹಾಯದಿಂದಲೇ ಇವನು ಬೇಕಾದ ಕಡೆ ಕುಳಿತುಕೊಳ್ಳುತ್ತಾನೆ, ಬೇಕಾದಕಡೆ ಹೋಗುತ್ತಾನೆ, ಕೆಲಸಗಳನ್ನು ಮಾಡುತ್ತಾನೆ, ಹಿಂದಿರುಗಿ ಬರುತ್ತಾನೆ. ಆದ್ದರಿಂದ ರಾಜನೇ! ಎಲ್ಲಿ ತನ್ನ ಕೈಯೂ ಸ್ಪಷ್ಟವಾಗಿ ಕಾಣಿಸುವುದಿಲ್ಲವೋ ಅಂತಹ ಕತ್ತಲಿನ ಸ್ಥಳದಲ್ಲಿ ಜನರು ಮಾತು ಕೇಳಿ ಬರುವ ಕಡೆಗೇ ಹೋಗುತ್ತಾರೆ. ಆದ್ದರಿಂದ ಮಾತೇ ಜ್ಞಾನಸಾಧನ'. 'ಯಾಜ್ಞವಲ್ಕ್ಯರೆ! ಇದು ಸರಿ'.

**ಉಪನಿಷತ್—ಅಸ್ತಮಿತ ಆದಿತ್ಯೇ ಯಾಜ್ಞವಲ್ಕ್ಯ ಚಂದ್ರಮಸ್ಯಸ್ತಮಿತೇ**

**ಶಾಂತೇ ಅಗ್ನೌ ಶಾಂತಾಯಾಂ ವಾಚಿ ಕಿಂಜ್ಯೋತಿರೇವಾಯಂ ಪುರುಷ ಇತಿ । ಆತ್ಮೈವಾಸ್ಯ ಜ್ಯೋತಿರ್ಭವತೀತಿ । ಆತ್ಮನೈವಾಯಂ ಜ್ಯೋತಿಷಾ ಆಸ್ತೇ ಪಲ್ಯಯತೇ। ಕರ್ಮ ಕುರುತೇ। ವಿಪಲ್ಯೇತೀತಿ ।**

'ಯಾಜ್ಞವಲ್ಕ್ಯರೇ, ಸೂರ್ಯನು ಅಸ್ತನಾದಾಗ, ಚಂದ್ರನು ಅಸ್ತನಾದಾಗ' ಅಗ್ನಿಯು ಆರಿದಾಗ, ಮಾತೂ ಇಲ್ಲದಾದಾಗ ಸುಷುಪ್ತ್ಯಾದಿ ಅವಸ್ಥೆಗಳಲ್ಲಿ ಈ ಸಂಸಾರಿಜೀವನ ಜ್ಞಾನಸಾಧನ ಯಾವುದು?' 'ಆಗ ಪರಮಾತ್ಮನೇ ಇವನಿಗೆ ಮುಖ್ಯವಾಗಿ ಜ್ಞಾನಸಾಧನ. ಪರಮಾತ್ಮನ ಸಹಾಯದಿಂದಲೇ ಇವನು ಬೇಕಾದ ಕಡೆ ಕುಳಿತುಕೊಳ್ಳುತ್ತಾನೆ, ಬೇಕಾದ ಕಡೆ ಹೋಗುತ್ತಾನೆ, ಕೆಲಸಗಳನ್ನು ಮಾಡುತ್ತಾನೆ, ಹಿಂದಿರುಗಿ ಬರುತ್ತಾನೆ'.

**ಭಾಷ್ಯ—ಆತ್ಮಾ ಭಗವಾನೇವಾಸ್ಯ ಜ್ಯೋತಿಃ ।**
**ಭಾವೇಽಭಾವೇಽಪಿ ಸೂರ್ಯಾದೇರ್ಜೀವಾನಾಂ ವಿಷ್ಣುರೇವ ಹಿ ।**
**ಜ್ಯೋತಿಸ್ತಥಾಽಪ್ಯಭಾವೇ ತು ತಜ್ಜ್ಞೇಯಂ ಹಿ ವಿಶೇಷತಃ ।**
**ಅಸ್ವಾತಂತ್ರ್ಯಾತ್ತು ಜೀವಸ್ಯ ದ್ಯೋತಯನ್ ಬುದ್ಧಿಮಸ್ಯ ಸಃ ।**
**ಪ್ರವರ್ತಯತಿ ಸರ್ವೇಶಸ್ತಮಸ್ಯಪಿ ಜನಾರ್ದನಃ । ಇತಿ ಚ ।**

**ಅನುವಾದ**—'ಆತ್ಮೈವಾಸ್ಯ ಜ್ಯೋತಿಃ' ಎನ್ನುವುದಕ್ಕೆ ಆತ್ಮಾ ಎಂದರೆ ಪರಮಾತ್ಮನಾದ ಶ್ರೀಹರಿಯೇ ಈ ಸಂಸಾರಿಜೀವನಿಗೆ ಜ್ಞಾನಪ್ರದ ಎಂದು ಅರ್ಥ. ಏಕೆಂದರೆ ಸೂರ್ಯ ಮೊದಲಾದವರು ಇದ್ದರೂ, ಇಲ್ಲದಿದ್ದರೂ ಜೀವರಿಗೆ ವಿಷ್ಣುವೇ ಮುಖ್ಯವಾಗಿ ಜ್ಞಾನಪ್ರದ. ಆದರೂ ಅವರು ಇಲ್ಲದಿದ್ದಾಗ ವಿಷ್ಣುವು ಜ್ಞಾನಪ್ರದ ಎಂಬ ವಿಷಯವನ್ನು ವಿಶೇಷವಾಗಿ ತಿಳಿಯಬಹುದು. ಜೀವನು ಅಸ್ವತಂತ್ರನಾದುದರಿಂದ ಸರ್ವೇಶ್ವರನಾದ ಜನಾರ್ದನನು ಅಂಧಂತಮಸ್ಸಿನಲ್ಲಿಯೂ ಕೂಡ ಜೀವನ ಬುದ್ಧಿಗೆ ವಿಷಯಗ್ರಹಣ ಶಕ್ತಿಯನ್ನು ಕೊಡುತ್ತಾ ಅವನನ್ನು ಕ್ರಿಯಾಶೀಲನನ್ನಾಗಿಸುತ್ತಾನೆ' ಎಂದೂ ಹೇಳಲಾಗಿದೆ.

**ಉಪನಿಷತ್—ಕತಮ ಆತ್ಮಾ ಇತಿ। ಯೋಽಯಂ ವಿಜ್ಞಾನಮಯಃ ಪ್ರಾಣೇಷು ಹೃದ್ಯಂತರ್ಜ್ಯೋತಿಃ ಪುರುಷಃ । ಸ ಸಮಾನಃ ಸನ್ ಉಭೌ ಲೋಕೌ ಅನುಸಂಚರತಿ । ಧ್ಯಾಯತೀವ । ಲೇಲಾಯತೀವ । ಸ ಹಿ ಸ್ವಪ್ನೋ ಭೂತ್ವೇಮಂ ಲೋಕಮತಿಕ್ರಾಮತಿ ಮೃತ್ಯೋಃ ರೂಪಾಣಿ ।**

'ಆತ್ಮ ಎಂದರೆ ಯಾರು?' 'ಯಾರು ಪೂರ್ಣಜ್ಞಾನಸ್ವರೂಪನೋ ಇಂದ್ರಿಯಗಳ ಮತ್ತು ಹೃದಯದ ಒಳಗೆ ಇದ್ದು ಜೀವನ ಬುದ್ಧಿಗೆ ಪ್ರೇರಣೆ ಕೊಡುವನೋ,

ಷಡ್ಗುಣಪೂರ್ಣನೋ ಅವನು ಆತ್ಮ. ಅವನು ವಿಕಾರರಹಿತನಾದ್ದರಿಂದ ಏಕಪ್ರಕಾರನಾಗಿದ್ದು ಜೀವನನ್ನು ಭೂಲೋಕ-ಸ್ವರ್ಗ ಲೋಕಗಳಿಗೂ, ಜಾಗ್ರದವಸ್ಥೆ-ಸುಷುಪ್ತ್ಯವಸ್ಥೆಗಳಿಗೂ ಒಯ್ಯುತ್ತ ಸಂಚರಿಸುತ್ತಾನೆ. ಜೀವನಿಂದ ಅಲ್ಪ ವಿಷಯ ಪದಾರ್ಥಗಳ ಆಲೋಚನೆ ಮಾಡಿಸುವ ಸ್ವಾತಂತ್ರ್ಯ ಅವನದು. ಜೀವನಿಂದ ವಿಷಯ ಸುಖವನ್ನು ಸ್ವಲ್ಪವೇ ಸ್ವೀಕರಿಸುವಂತೆಯೂ ಮಾಡುತ್ತಾನೆ. ಜೀವನಿಗೆ ನಿದ್ದೆ ಉಂಟು ಮಾಡಿ, ಬಹು ಪಾಪ ಕಾರ್ಯಕ್ಕೆ ಕಾರಣವಾದ ಜಾಗ್ರದವಸ್ಥೆಯನ್ನು ತಪ್ಪಿಸುತ್ತಾನೆ. ಜೀವನನ್ನು ಅಂತರಿಕ್ಷಕ್ಕೊಯ್ದು ಪಾಪಕರ್ಮಯುಕ್ತವಾದ ಭೂಲೋಕದಿಂದ ಪಾರು ಮಾಡುತ್ತಾನೆ.

**ಭಾಷ್ಯ–ಸ್ವಾತಂತ್ರ್ಯಾದ್ ಧ್ಯಾಯತೀವಾಸೌ ಧ್ಯಾಯಯನ್ ಜೀವಮಂಜಸಾ।**
**ಗೃಹ್ಣಾತೀವ ಗ್ರಾಹಯನ್ ಸ ಜೀವಂ ಸರ್ವೇಶ್ವರೇಶ್ವರಃ ।**
**ಸದಾ ವಿಜ್ಞಾನಪೂರ್ಣೋಽಸೌ ಸಮಾನೋಽಸೌ ಸದಾ ಸಮಃ ।**
**ಅವಿಕಾರಾತ್ ಸಮಾನಃ ಸನ್ ಜೀವಮಾದಾಯ ಸಂಚರೇತ್ ।**
**ಉಭೌ ಲೋಕೌ ಸ್ವಾಪಕತ್ವಾತ್ ಭೂತ್ವಾಽಸೌ ಸ್ವಪ್ನನಾಮಕಃ ।**
**ಇಮಂ ಲೋಕಂ ಜಾಗ್ರದಾಖ್ಯಂ ಮೃತ್ಯುರೂಪಾತ್ಮಕಂ ಸದಾ ।**
**ಬಹುಪಾಪೈಕಹೇತುತ್ವಾತ್ ತಾರಯೇತ್ ಸ್ವಪ್ನಮಾನಯನ್ ।**
**ಇಮಂ ಲೋಕಂ ಚ ಭೂದಾಖ್ಯಂ ತಾರಯಿತ್ವಾಂತರಿಕ್ಷಗಮ್ ।**
**ಜೀವಂ ಕುರ್ಯಾನ್ಮೃತೌ ವಿಷ್ಣುಃ ಭೂಲೋಕಃ ಕ್ಷಿಪ್ರಮೃತ್ಯುಮಾನ್ ।**
**ಬಹವೋ ಮೃತ್ಯವಶ್ಚಾತ್ರ ಮೃತ್ಯೋಃ ರೂಪಾಣ್ಯತಸ್ತ್ವಯಂ ।**
**ಪಾಪಹೇತುತ್ವತಶ್ಚಾಯಂ ಭೂಲೋಕೋ ಮೃತ್ಯುರೂಪಕಃ ।**
**ಜಾಗ್ರಚ್ಚ ಪೃಥಿವೀ ಚೈವ ದ್ಯೌಃ ಸುಷುಪ್ತಿಸ್ತಥೈವ ಚ ।**
**ಸ್ವಪ್ನಶ್ಚೈವಾಂತರಿಕ್ಷಂ ಚ ಜ್ಞೇಯಾ ಅನ್ಯೋನ್ಯ ನಾಮಕಾಃ ।**
**ತದ್ವ್ಯಭಿಪ್ರಾಯಿಕಾ ತಸ್ಮಾದುಭೌ ಲೋಕಾವಿತಿ ಶ್ರುತಿಃ ।**

**ಅನುವಾದ**—ಜೀವನಿಂದ ಚೆನ್ನಾಗಿ ಆಲೋಚನೆ ಮಾಡಿಸುವ ಪರಮಾತ್ಮನು, ಅವನ ಧ್ಯಾನವು ತನ್ನ ಅಧೀನವಾದುದರಿಂದ ತಾನೇ ಧ್ಯಾನ ಮಾಡುವಂತಿದ್ದಾನೆ ಎಂದು ಉಪನಿಷತ್ತು ಹೇಳಿದೆ. ಪ್ರಭುಗಳಿಗೆಲ್ಲರ ಪ್ರಭುವಾದ ಪರಮಾತ್ಮನು ಜೀವರು ವಿಷಯಪದಾರ್ಥಗಳನ್ನು ಸ್ವೀಕರಿಸುವಂತೆ ಮಾಡುವುದರಿಂದ ತಾನೇ ಸ್ವೀಕರಿಸುವಂತೆ ಇದ್ದಾನೆ ಎಂದೂ ಉಪನಿಷತ್ತು ಹೇಳಿದೆ. ವಿಜ್ಞಾನಮಯ ಎಂದರೆ ಜೀವನಲ್ಲ. ಯಾವಾಗಲೂ ವಿಶೇಷಜ್ಞಾನದಿಂದ ಪೂರ್ಣನಾದ ಪರಮಾತ್ಮ. ನಿರ್ವಿಕಾರನಾಗಿ ಯಾವಾಗಲೂ ಒಂದೇ ರೀತಿ ಇರುವ ಇವನೇ ಸಮಾನ. ಹೀಗೆ ಸಮಾನನಾದ ಪರಮಾತ್ಮನು ಜೀವನನ್ನು ಕರೆದುಕೊಂಡು ಎರಡು ಲೋಕಗಳಲ್ಲಿ ಸಂಚರಿಸುವನು.

ನಿದ್ರಾಪ್ರದನಾದುದರಿಂದ ಸ್ವಪ್ನನಾಮಕನಾದ ಇವನೇ ಜೀವನಿಗೆ ನಿದ್ರೆಯನ್ನು ತಂದುಕೊಟ್ಟು ಯಾವಾಗಲೂ ಬಹಳ ಪಾಪಕ್ಕೆ ಕಾರಣವಾದ, ಮೃತ್ಯುರೂಪವಾದ ಜಾಗ್ರದವಸ್ಥೆಯಿಂದ ದಾಟಿಸುವನು. ಜೀವನನ್ನು ಅವನಿಗೆ ಮರಣ ಉಂಟಾದಾಗ ಅಂತರಿಕ್ಷಕ್ಕೊಯ್ದು, ಭೂಲೋಕದಿಂದ ವಿಷ್ಣುವು ದಾಟಿಸುವನು. ಭೂಲೋಕದಲ್ಲಿ ಬೇಗನೆ ಮರಣ ಉಂಟಾಗುವುದು. ಆದ್ದರಿಂದ ಅದು ಮೃತ್ಯುರೂಪವೆನಿಸಿದೆ. ಇಲ್ಲಿ ಮೃತ್ಯುಕಾರಣಗಳು ಬಹಳ. ಆದ್ದರಿಂದ ಮೃತ್ಯೋಃ ರೂಪಾಣಿ ಎಂದು ಉಪನಿಷತ್ತಿನಲ್ಲಿ ಬಹುವಚನ ಪ್ರಯೋಗ. ಈ ಭೂಲೋಕವು ಪಾಪಕಾರಣವಾದುದರಿಂದಲೂ ಮೃತ್ಯುರೂಪವೆನಿಸಿದೆ. ಉಪನಿಷತ್ತಿನಲ್ಲಿ ಲೋಕವಾಚಕವು ಅವಸ್ಥಾವಾಚಕವೂ ಆಗುತ್ತದೆ. ಅವಸ್ಥಾವಾಚಕವು ಲೋಕವಾಚಕವೂ ಆಗುತ್ತವೆ. ಜಾಗ್ರತ್-ಪೃಥಿವೀ, ದಿವ್-ಸುಷುಪ್ತಿ, ಸ್ವಪ್ನ-ಅಂತರಿಕ್ಷ ಈ ಶಬ್ದಗಳು ಉಪನಿಷತ್ತಿನಲ್ಲಿ ಪರಸ್ಪರ ಪರ್ಯಾಯ ಪದಗಳು ಎಂದೂ ತಿಳಿಯಬೇಕು. ಆದ್ದರಿಂದ ಉಭೌ ಲೋಕೌ ಎಂಬ ಉಪನಿಷದ್ವಾಕ್ಯವು ಲೋಕ, ಅವಸ್ಥಾ ಎಂದು ಎರಡು ಅರ್ಥವುಳ್ಳದ್ದು.

**ಉಪನಿಷತ್—ಸ ವಾ ಅಯಂ ಪುರುಷೋ ಜಾಯಮಾನಃ ಶರೀರಮಭಿಸಂಪದ್ಯಮಾನಃ ಪಾಪ್ಮಭಿಃ ಸಂ ಸೃಜ್ಯತೇ । ಸ ಉತ್ಕ್ರಾಮನ್ ಮ್ರಿಯಮಾಣಃ ಪಾಪ್ಮನೋ ವಿ ಜಹಾತಿ ।**

ಈ ಪರಿಯು ಜೀವನನ್ನು ಹುಟ್ಟಿಸಿ, ಅಂದರೆ ಅವನಿಗೆ ಶರೀರ ಸಂಬಂಧ ಉಂಟುಮಾಡಿ, ಪಾಪಕರ್ಮಗಳನ್ನು ಅವನಿಂದ ಮಾಡಿಸುತ್ತಾನೆ. ಫಲಕೊಡುವುದಕ್ಕಾಗಿ ಅವನ ಆ ಪಾಪಗಳನ್ನು ತಾನು ಎತ್ತಿಕೊಳ್ಳುತ್ತಾನೆ. ಜೀವನಿಗೆ ಮರಣ ಉಂಟುಮಾಡಿ, ಅಂದರೆ ಮುಕ್ತಿಯನ್ನು ಕೊಟ್ಟು ಅವನ ಪಾಪಗಳನ್ನು ನಿಷ್ಫಲಗೊಳಿಸುತ್ತಾನೆ

ಸಂಸಾರಿಜೀವನು ಹುಟ್ಟಿ, ಅಂದರೆ ಶರೀರ ಸಂಬಂಧವನ್ನು ಪಡೆದು ಪಾಪ ಸಂಬಂಧವನ್ನು ಹೊಂದುತ್ತಾನೆ. ಮರಣಹೊಂದಿ, ಅಂದರೆ ಮೋಕ್ಷ ಪಡೆದು ಪಾಪಗಳನ್ನು ಬಿಡುತ್ತಾನೆ.

**ಭಾಷ್ಯ—ಸವಾ ಅಯಂ ಜಾಯಮಾನ ಇತಿ ಚ ದ್ವ್ಯಾಶ್ರಯಾ ಶ್ರುತಿಃ ।**
**ಯಸ್ಯ ಜ್ಯೋತಿರಯಂ ವಿಷ್ಣುಃ ಸ ಪರಾಮೃಶ್ಯತೇ ತಥಾ ।**
**ಯದಾ ತು ಭಗವಾನುಕ್ತಸ್ತದಾ ಸ್ವಾತಂತ್ರ್ಯತೋ ವಿಭುಃ ।**
**ಮ್ರಿಯಮಾಣೋ ಜಾಯಮಾನ ಇತ್ಯುಕ್ತಸ್ತನ್ನಿಯಾಮಕಃ ।**
**ಫಲದಾನಾಯ ಪಾಪಾನಾಂ ಗ್ರಹಃ ಸಂಸರ್ಗ ಉಚ್ಯತೇ ।**
**ಮೋಕ್ಷದಾನೇ ಫಲಾದಾನಾದ್ ವಿಜಹಾತೀತಿ ಚೋಚ್ಯತೇ।**
**ಜೀವೋಽಪಿ ಮುಕ್ತಿಕಾಲೇ ತು ಹಾತಾ ಪಾಪಸ್ಯ ಕಥ್ಯತೇ ।**

**ಅನುವಾದ**—ಸ ವಾ ಅಯಂ ಜಾಯಮಾನಃ ಎಂಬ ಮಂತ್ರವು ಪರಮಾತ್ಮ, ಜೀವ ಇಬ್ಬರಿಗೂ ಅನ್ವಯಿಸುತ್ತದೆ. ಜೀವಾರ್ಥದಲ್ಲಿ ವಿಷ್ಣುವು ಯಾರಿಗೆ ಜ್ಞಾನ ಪ್ರದನೋ ಅವನು ಈ ಮಂತ್ರದ ಪುರುಷಶಬ್ದದಿಂದ ಉಕ್ತನಾಗುತ್ತಾನೆ. ಪರಮಾತ್ಮಾರ್ಥದಲ್ಲಿ ಅವನು ಸ್ವತಂತ್ರನಾದ್ದರಿಂದ ಜೀವನ ಜನನ ಮುಕ್ತಿಗಳಿಗೆ ನಿಯಾಮಕನಾದ ಅವನು ಮ್ರಿಯಮಾಣ, ಜಾಯಮಾನ ಎಂದು ಹೇಳಲ್ಪಟ್ಟಿದ್ದಾನೆ. ಪಾಪಗಳ ಫಲವನ್ನು ಕೊಡುವುದಕ್ಕಾಗಿ ಶ್ರೀಹರಿ ಅವನ್ನು ಪರಿಗಣಿಸುವುದನ್ನೇ ಉಪನಿಷತ್ತು ಪಾಪಸಂಸರ್ಗ ಎಂದಿದೆ. ಮೋಕ್ಷವನ್ನು ಕೊಟ್ಟಾಗ ಹರಿ ಜೀವನಿಗೆ ಅವನ ಪಾಪಗಳಿಗೆ ಫಲವನ್ನು ಕೊಡುವುದಿಲ್ಲವಾದ್ದರಿಂದ ಪಾಪವನ್ನು ಬಿಡುತ್ತಾನೆ ಎಂದೂ ಹೇಳಿದೆ. ಜೀವಾರ್ಥದಲ್ಲಿ, ಜೀವನು ಮುಕ್ತಿಯನ್ನು ಪಡೆಯುವಾಗ ಪಾಪಗಳನ್ನು ಬಿಡುತ್ತಾನೆ ಎಂದೂ ಹೇಳಿದೆ.

**ಉಪನಿಷತ್—ತಸ್ಯ ವಾ ಏತಸ್ಯ ಪುರುಷಸ್ಯ ದ್ವೇ ಏವ ಸ್ಥಾನೇ ಭವತಃ ಇದಂ ಚ ಪರಲೋಕಸ್ಥಾನಂ ಚ । ಸಂಧ್ಯಂ ತೃತೀಯಂ ಸ್ವಪ್ನಸ್ಥಾನಂ । ತಸ್ಮಿನ್ ಸಂಧ್ಯೇ ಸ್ಥಾನೇ ತಿಷ್ಠನ್ ಏತೇ ಉಭೇ ಸ್ಥಾನೇ ಪಶ್ಯತೀದಂ ಚ ಪರಲೋಕಸ್ಥಾನಂ ಚ । ಅಥ ಯಥಾಕ್ರಮೋಽಯಂ ಪರಲೋಕಸ್ಥಾನೇ ಭವತಿ ತಮಾಕ್ರಮಮಾಕ್ರಮ್ಯ ಉಭಯಾನ್ ಪಾಪ್ಮನ ಆನಂದಾಂಶ್ಚ ಪಶ್ಯತಿ । ಸ ಯತ್ರ ಪ್ರಸ್ವಪಿತಿ ಅಸ್ಯ ಲೋಕಸ್ಯ ಸರ್ವಾವತೋ ಮಾತ್ರಾಮುಪಾದಾಯ ಸ್ವಯಂ ವಿಹತ್ಯ ಸ್ವಯಂ ನಿರ್ಮಾಯ ಸ್ವೇನ ಭಾಸಾ ಸ್ವೇನ ಜ್ಯೋತಿಷಾ ಪ್ರ ಸ್ವಪಿತಿ । ಅತ್ರಾಯಂ ಪುರುಷಃ ಸ್ವಯಂಜ್ಯೋತಿರ್ಭವತಿ ।**

ಈ ಪರಮಾತ್ಮನಿಗೆ ಎರಡೇ ಸ್ಥಾನಗಳು, ಭೂಲೋಕ ಮತ್ತು ಸ್ವರ್ಗ. ಜಾಗ್ರತ್ ಮತ್ತು ಸುಷುಪ್ತಿ. ಸಂಸಾರ ಮತ್ತು ಮೋಕ್ಷ. ಮೂರನೆಯದಾದ ಅಂತರಿಕ್ಷವು, ಭೂಲೋಕ–ಸ್ವರ್ಗಗಳ ಸಂಧಿಯಲ್ಲಿಯೂ, ಸ್ವಪ್ನವು ಜಾಗ್ರತ್–ಸುಷುಪ್ತಿಗಳ ಸಂಧಿಯಲ್ಲಿಯೂ, ಜೀವನ್ಮುಕ್ತಿಯು ಸಂಸಾರ ಮತ್ತು ಮೋಕ್ಷಸಂಧಿಯಲ್ಲಿಯೂ ಬರುವುದರಿಂದಪ್ರತ್ಯೇಕ ಹೇಳಿಲ್ಲ. ಶ್ರೀಹರಿಯು ಅಂತರಿಕ್ಷವೆಂಬ ಸಂಧಿಸ್ಥಾನದಲ್ಲಿ ನಿಂತು ಭೂಲೋಕ–ಸ್ವರ್ಗ ಲೋಕಗಳನ್ನೂ, ಸ್ವಪ್ನವೆಂಬ ಸಂಧಿಸ್ಥಾನದಲ್ಲಿ ನಿಂತು ಜಾಗ್ರತ್–ಸುಷುಪ್ತಿಗಳನ್ನೂ ಜೀವನ್ಮುಕ್ತಿ ಎಂಬ ಸಂಧಿ ಸ್ಥಾನದಲ್ಲಿ ನಿಂತು ಸಂಸಾರ ಮೋಕ್ಷಗಳನ್ನೂ ನೋಡುತ್ತಾನೆ. ಜಾಗ್ರತ್ ಸ್ಥಾನದಿಂದ ಸುಷುಪ್ತಿ ಸ್ಥಾನಕ್ಕೆ ಹೋಗುವಾಗ ಮಾರ್ಗದಲ್ಲಿ ಸ್ವಪ್ನಸ್ಥಾನದಲ್ಲಿ ನಿಂತು, ಜೀವನು ಜಾಗ್ರದವಸ್ಥೆಯಲ್ಲಿ ಮಾಡುವ ಪಾಪ ಕರ್ಮಗಳ ಫಲವಾದ ದುಃಖಗಳನ್ನೂ ಸುಷುಪ್ತಿಯಲ್ಲಿ ಜೀವನು ಅನುಭವಿಸುವ ಸ್ವರೂಪಾನಂದಗಳನ್ನೂ ನೋಡುತ್ತಾನೆ. ಈ ಲೋಕದಿಂದ ಪರಲೋಕಕ್ಕೆ ಹೋಗು

ವಾಗ ಮಾರ್ಗದಲ್ಲಿ ಅಂತರಿಕ್ಷ ಸ್ಥಾನದಲ್ಲಿ ನಿಂತು, ಜೀವನು ಈ ಲೋಕದಲ್ಲಿ ಮಾಡುವ ಪಾಪಕರ್ಮಗಳ ಫಲವಾದ ದುಃಖಗಳನ್ನೂ, ಸ್ವರ್ಗದ ಸುಖಗಳನ್ನೂ ನೋಡುತ್ತಾನೆ. ಸಂಸಾರದಿಂದ ಮೋಕ್ಷಕ್ಕೆ ಹೋಗುವಾಗ ಮಾರ್ಗದಲ್ಲಿ ಜೀವನ್ಮುಕ್ತಿಯಲ್ಲಿ ನಿಂತು ಸಂಸಾರದಲ್ಲಿರುವ ಪಾಪ ಫಲವಾದ ದುಃಖಗಳನ್ನೂ ಮೋಕ್ಷದ ಸ್ವರೂಪಾನಂದವನ್ನೂ ನೋಡುತ್ತಾನೆ. ಶ್ರೀಹರಿಯು ಯಾವಾಗ ಈ ಜೀವನ ಎಲ್ಲ ಜ್ಞಾನವನ್ನು ಮತ್ತು ಇಂದ್ರಿಯಶಕ್ತಿಯನ್ನು ತನ್ನೊಳಗೇ ತೆಗೆದುಕೊಂಡು, ತಾನೇ ಅವನನ್ನು ಬಾಹ್ಯಕ್ರಿಯಾರಹಿತನನ್ನಾಗಿಸಿ, ತಾನೇ ಸ್ವಪ್ನದಲ್ಲಿ ವಾಸನಾಮಯವಾದ ಪದಾರ್ಥಗಳನ್ನೂ ನಿರ್ಮಿಸಿ ತನ್ನ ಸ್ವರೂಪವೇ ಆದ ಬಾಹ್ಯಪ್ರಕಾಶದಿಂದ ಮತ್ತು ಅಂತರಂಗ ಪ್ರಕಾಶದಿಂದ ಜೀವನಿಗೆ ನಿದ್ರೆ ಉಂಟುಮಾಡುತ್ತಾನೋ ಯಾವಾಗ ಜೀವನ ಎಲ್ಲ ಜ್ಞಾನವನ್ನೂ, ಇಂದ್ರಿಯಾಭಿಮಾನಿ ದೇವತೆಗಳನ್ನೂ ಸೆಳೆದುಕೊಂಡು ತಾನೇ ಅವನನ್ನು ಭೂಲೋಕ ವ್ಯಾಪಾರ ರಹಿತನನ್ನಾಗಿ ಮಾಡಿ, ಅಂತರಿಕ್ಷ ಅಥವಾ ಸ್ವರ್ಗದಲ್ಲಿ ಅವನಿಗೆ ಭೋಗಪದಾರ್ಥಗಳನ್ನು ನಿರ್ಮಿಸಿ ತನ್ನ ಬಾಹ್ಯ ಅಂತರಂಗ ಪ್ರಕಾಶಗಳಿಂದ ಅವನಿಗೆ ಅಂತರಿಕ್ಷ–ಸ್ವರ್ಗಸುಖಗಳನ್ನು ನೀಡುವನೋ ಮತ್ತು ಯಾವಾಗ ಜೀವನ ಎಲ್ಲ ಜ್ಞಾನಗಳನ್ನೂ ಇಂದ್ರಿಯಾಭಿಮಾನಿದೇವತೆಗಳನ್ನು ಸೆಳೆದುಕೊಂಡು ತಾನೆ ಅವನನ್ನು ಸಾಂಸಾರಿಕ ವ್ಯಾಪಾರ ರಹಿತನನ್ನಾಗಿ ಮಾಡಿ ಮುಕ್ತಿಯಲ್ಲಿ ಭೋಗ ಪದಾರ್ಥಗಳನ್ನು ನಿರ್ಮಿಸಿ ತನ್ನ ಪ್ರಕಾಶಗಳಿಂದ ಅವನಿಗೆ ಮೋಕ್ಷ ಸುಖ ನೀಡುವನೋ ಆಗ ಶ್ರೀಹರಿಯೇ ಜೀವನಿಗೆ ಜ್ಞಾನಪ್ರದನಾಗುತ್ತಾನೆ.

**ಭಗವಂತನಿಂದ ಸ್ವಪ್ನ ಸ್ವರ್ಗ ಅಂತರಿಕ್ಷ ಮೋಕ್ಷಗಳಲ್ಲಿ ಪದಾರ್ಥ ಸೃಷ್ಟಿ :**

**ಉಪನಿಷತ್—ನ ತತ್ರ ರಥಾ ನ ರಥಯೋಗಾ ನ ಪಂಥಾನೋ ಭವಂತಿ । ಅಥ ರಥಾನ್ ರಥಯೋಗಾನ್ ಪಥಃ ಸೃಜತೇ । ನ ತತ್ರಾನಂದಾ ಮುದಃ ಪ್ರಮುದೋ ಭವಂತಿ । ಅಥಾನಂದಾನ್ ಮುದಃ ಪ್ರಮುದಃ ಸೃಜತೇ। ನ ತತ್ರ ವೇಶಾಂತಾಃ ಪುಷ್ಕರಿಣ್ಯಃ ಸ್ರವಂತ್ಯೋ ಭವಂತಿ । ಅಥ ವೇಶಾಂತಾನ್ ಪುಷ್ಕರಿಣ್ಯಃ ಸ್ರವಂತ್ಯಃ ಸೃಜತೇ । ಸ ಹಿ ಕರ್ತಾ ।**

ಸ್ವಪ್ನದಲ್ಲಿಯೂ, ಅಂತರಿಕ್ಷ ಸ್ವರ್ಗಗಳಲ್ಲಿಯೂ, ಮುಕ್ತಿಯಲ್ಲಿಯೂ ಮೊದಲಿಗೆ ರಥಗಳು ಇರುವುದಿಲ್ಲ. ಕುದುರೆಗಳಿರುವುದಿಲ್ಲ. ಮಾರ್ಗಗಳಿರುವುದಿಲ್ಲ. ತತ್ಕಾಲದಲ್ಲಿ ಜೀವಕರ್ಮಾನುಸಾರ ರಥಗಳನ್ನೂ, ಕುದುರೆಗಳನ್ನೂ, ಮಾರ್ಗಗಳನ್ನೂ ಶ್ರೀಹರಿಯು ಸೃಷ್ಟಿಸುತ್ತಾನೆ. ಅಲ್ಲಿ ಮೊದಲಿಗೆ ಸ್ವರೂಪ ಸುಖವಾಗಲೀ, ಭೋಗಸಾಮಗ್ರಿಗಳಿಂದ ಲಭಿಸುವ ಸಾಮಾನ್ಯ ಸುಖಗಳಾಗಲೀ, ಅಂತಹ ಉತ್ಕೃಷ್ಟ ಸುಖಗಳಾಗಲೀ ಇರುವುದಿಲ್ಲ. ತತ್ಕಾಲದಲ್ಲಿ ಆ ಸ್ವರೂಪಸುಖಗಳನ್ನೂ, ಭೋಗಸಾಮಗ್ರಿಗಳಿಂದ ಹುಟ್ಟಿದ ಸಾಮಾನ್ಯ ಸುಖವನ್ನೂ, ಅಂತಹ ಉತ್ಕೃಷ್ಟ ಸುಖವನ್ನೂ ಸೃಷ್ಟಿ ಮಾಡುತ್ತಾನೆ.

ಅಲ್ಲಿ ಮೊದಲಿಗೆ ವೇಶ್ಮಾಗ್ರಪಗಳು, ಸರೋವರಗಳು ನದಿಗಳು ಇರುವುದಿಲ್ಲ. ತತ್ಕಾಲ ದಲ್ಲಿ ವೇಶ್ಮಾಗ್ರಹಗಳನ್ನೂ, ಸರೋವರಗಳನ್ನೂ, ನದಿಗಳನ್ನೂ ಸೃಷ್ಟಿಸುತ್ತಾನೆ. ಇಷ್ಟೇ ಅಲ್ಲ. ಎಲ್ಲಕ್ಕೂ ಶ್ರೀಹರಿಯು ಕರ್ತಾ ಎನ್ನುವುದು ಪ್ರಮಾಣಸಿದ್ಧ.

**ಸ್ವರ್ಗ ಸುಪ್ತಿ ಪರಲೋಕ ಶಬ್ದಗಳು ಸಮಾನಾರ್ಥಕಗಳು, ಮುಕ್ತಿವಾಚಕಗಳು:**

**ಭಾಷ್ಯ—ಸ್ವರ್ಗಃ ಸುಷುಪ್ತಿರಿತ್ಯಾಖ್ಯಾ ಮುಕ್ತೇರಪಿ ಯತಃ ಸಮಾ ।**
**ಪರಲೋಕೋ ಯತೋ ಮುಖ್ಯೋ ಮುಕ್ತಿರೇವ ನ ಚಾಪರಃ ।**
**ಅತೋ ದ್ಯುಸುಪ್ತಿಮೋಕ್ಷಾಣಾಮಭಿಪ್ರಾಯಾದಿದಂ ವಚಃ ।**
**ಸುಪ್ತಿರಿತ್ಯಾದಿಕಂ ಸ್ವೇತಿ ವಿಷ್ಣೋರಾಖ್ಯಾ ಸುಖತ್ವತಃ ।**

**ಅನುವಾದ**—ಸ್ವರ್ಗ ಸುಷುಪ್ತಿ ಎಂಬ ಹೆಸರುಗಳು, ಪ್ರತಿಯೊಂದೂ ಸ್ವರ್ಗ-ಸುಷುಪ್ತಿಗಳಿಗೆ ಮಾತ್ರವಲ್ಲದೆ ಮುಕ್ತಿಗೂ ಅನ್ವಯಿಸುತ್ತದೆ. ಹಾಗೆಯೇ ಪರಲೋಕ ಶಬ್ದವೂ ಸ್ವರ್ಗ-ಸುಷುಪ್ತಿಗಳನ್ನು ಹೇಳುವಂತೆ ಮುಕ್ತಿಯನ್ನೂ ಹೇಳುತ್ತದೆ.ಏಕೆಂದರೆ ಮುಕ್ತಿಯೇ ಮುಖ್ಯವಾದ ಪರಲೋಕ. ಸ್ವರ್ಗ-ಸುಷುಪ್ತಿಗಳು ಅಮುಖ್ಯವಾಗಿ ಪರಲೋಕ. ಆದ್ದರಿಂದ ಸುಪ್ತಿಃ ಎಂದು ಮೊದಲಾದ ವಚನಗಳು ಒಂದೊಂದೂ ಸ್ವರ್ಗ, ಸುಷುಪ್ತಿ ಮತ್ತು ಮೋಕ್ಷ ಎಂಬ ಮೂರು ಅರ್ಥಗಳನ್ನು ಹೇಳುವ ಅಭಿಪ್ರಾಯದಿಂದ ಮಂತ್ರಗಳಲ್ಲಿ ಪ್ರಯೋಗಿಸಲ್ಪಟ್ಟಿವೆ. ಸ್ವರ್ಗ, ಸ್ವಾಪ ಶಬ್ದಗಳು ಮುಕ್ತಿವಾಚಕಗಳು. ಹೇಗೆಂದರೆ ಆ ಶಬ್ದಗಳಲ್ಲಿರುವ ಸ್ವರ್, ಸ್ವ ಶಬ್ದಗಳು ಸುಖ ವಾಚಕಗಳಾಗಿದ್ದು ವಿಷ್ಣುವು ಸುಖಸ್ವರೂಪನಾದುದರಿಂದ ಅವು ಅವನ ಹೆಸರುಗಳು. ಸುಖಸ್ವರೂಪಿಯಾದ ಶ್ರೀಹರಿಯನ್ನು ಹೊಂದುವ ಸ್ಥಾನವಾದ ಮುಕ್ತಿಯು ಇಲ್ಲಿ ಸ್ವರ್ಗ, ಸ್ವಾಪ ಎನಿಸಿವೆ.

**ಭಾಷ್ಯ—ಪುನರಾಗಮನಂ ನಾಮ ಮುಕ್ತಾನಾಮಪಿ ವಿದ್ಯತೇ ।**
**ಪ್ರಲಯೇಽನುಪ್ರವಿಶ್ಯೈನಂ ಭಗವಂತಂ ಜನಾರ್ದನಮ್ ।**
**ಸ್ಥಿತ್ವಾ ಜ್ಞಾನಾವಿಲೋಪೇನ ನಿರ್ಗಚ್ಛಂತಿ ಪುನಸ್ತತಃ ।**
**ನ ಚ ಜ್ಞಾನಸುಖಾದೀನಾಂ ತೇಷಾಂ ಸೃಷ್ಟೌ ಲಯೇಽಪಿ ವಾ ।**
**ವಿಶೇಷಃ ಕಶ್ಚಿದಂತಶ್ಚ ಬಹಿಶ್ಚೈವ ರಮಂತಿ ತೇ ।**

**ಅನುವಾದ**—ಮುಕ್ತರಿಗೂ ಪುನರಾಗಮನವಿದೆ. ಏಕೆಂದರೆ ಅವರು ಪ್ರಲಯ ಕಾಲದಲ್ಲಿ ಷಡ್ಗುಣಸಂಪನ್ನನಾದ ಜನಾರ್ದನನನ್ನು ಪ್ರವೇಶಿಸಿ ಜ್ಞಾನ-ಸುಖಗಳಿಗೆ ವ್ಯತ್ಯಯವಿಲ್ಲದೆಯೆ ಇರುತ್ತಾರೆ. ಅನಂತರ ಸೃಷ್ಟಿಕಾಲದಲ್ಲಿ ಅವನಿಂದ ಹೊರಗೆ ಬರುತ್ತಾರೆ, ಮುಕ್ತಿಲೋಕಕ್ಕೆ ಹೊರತು ಸಂಸ್ಕಾರಕಲ್ಲ. ಸೃಷ್ಟಿಯಲ್ಲಿ ಹೊರಗೂ

ಪ್ರಲಯದಲ್ಲಿ ಒಳಗೂ ಅವರಿಗೆ ತಮ್ಮ ಜ್ಞಾನ ಸುಖ ಮೊದಲಾದವುಗಳಲ್ಲಿ ಯಾವ ವ್ಯತ್ಯಾಸವೂ ಆಗುವುದಿಲ್ಲ. ಪ್ರಲಯಕಾಲದಲ್ಲಿ ಒಳಗೂ ಸೃಷ್ಟಿಕಾಲದಲ್ಲಿ ಹೊರಗೂ ಸುಖವಾಗಿಯೇ ಇರುತ್ತಾರೆ.

**ಭಾಷ್ಯ—ಸ್ವಾಪಯತ್ಯೇನಮಿತಿ ಸ ಸ್ವಪಿತೀತ್ಯುಚ್ಯತೇ ಹರಿಃ ।**
**ಆನಂದಪಾಪಲೋಕಾದೇರ್ದರ್ಶನಂ ಸ್ವಪ್ನಸುಪ್ತಯೋಃ ।**
**ಅಪಿ ವಿಷ್ಣೋಃ ಸದೈವಾಸ್ತಿ ನ ಜೀವಸ್ಯ ಕಥಂಚನ ।**
**ಅತ್ರಾಯಂ ಭಗವಾನ್ವಿಷ್ಣುರ್ಜೀವಸ್ಯ ಸ್ವಯಮೇವ ತು ।**
**ಜ್ಯೋತಿರ್ವಿಶೇಷತೋ ಭೂಯಾನ್ನೈವಾನ್ಯಜ್ಜ್ಯೋತಿರತ್ರ ಯತ್ ।**
**ನ ಹಿ ಜೀವಃ ಸ್ವಯಂ ದ್ರಷ್ಟುಂ ಸುಪ್ತಃ ಶಕ್ನೋತಿ ಹಿ ಧ್ರುವಂ ।**
**ಅತಃ ಸ ನೈವ ಜೀವೋಽಯಂ ಸರ್ವಂ ಪಶ್ಯತಿ ಸೂಕ್ಷ್ಮದೃಕ್ ।**

**ಅನುವಾದ**—ಶ್ರೀಹರಿಯು ಜೀವನಿಗೆ ನಿದ್ರೆ ಬರುವಂತೆ ಮಾಡುತ್ತಾನೆ. ಆದ್ದರಿಂದ ಶ್ರೀಹರಿ ನಿದ್ದೆ ಮಾಡುತ್ತಾನೆ ಎಂದು ವ್ಯವಹಾರವಿದೆ. ಆನಂದ–ದುಃಖ, ಭೂಲೋಕ–ಸ್ವರ್ಗ, ಜಾಗ್ರತ್-ಸುಷುಪ್ತಿ, ಸಂಸಾರ–ಮುಕ್ತಿ ಇವೆಲ್ಲವುಗಳ ದರ್ಶನವು ಸ್ವಪ್ನ–ಸುಷುಪ್ತಿಸ್ಥಾನಗಳಲ್ಲಿರುವ ವಿಷ್ಣುವಿಗೆ ಮಾತ್ರ ಯಾವಾಗಲೂ ಇದೆ. ಜೀವನಿಗೆ ಇಲ್ಲವೇ ಇಲ್ಲ. ಅತ್ರೈವಾಸ್ಯ ಜ್ಯೋತಿಃ ಎಂದರೆ ಜೀವನು ತನಗೆ ತಾನೇ ಜ್ಞಾನಪ್ರದ ಎಂದರ್ಥವಲ್ಲ. ಸುಷುಪ್ತಿ ಸ್ಥಿತಿಯಲ್ಲಿ ಜೀವನಿಗೆ ವಿಶೇಷವಾಗಿ ವಿಷ್ಣು ಒಬ್ಬನೇ ಜ್ಞಾನಪ್ರದ. ಬೇರೆ ಯಾರೂ ಅಲ್ಲ. ಏಕೆಂದರೆ ಸುಷುಪ್ತಿಯಲ್ಲಿರುವ ಅಥವಾ ಸ್ವಪ್ನದಲ್ಲಿರುವ ಜೀವನಿಗೆ ಸ್ವತಃ ನೋಡುವ ಸಾಮರ್ಥ್ಯ ಇಲ್ಲವೇ ಇಲ್ಲ. ಅದ್ದರಿಂದ ನೋಡುವವನು ಜೀವನಲ್ಲ. ಸೂಕ್ಷ್ಮದರ್ಶಿಯಾದ ಶ್ರೀಹರಿಯೇ ಎಲ್ಲವನ್ನೂ ನೋಡುತ್ತಾನೆ.

**ಭಾಷ್ಯ—ಸ್ವಪ್ನೇಽಂತರಿಕ್ಷೇ ಸ್ವರ್ಗೇ ವಾ ನ ರಥಾದ್ಯಾಃ ಪುರಾ ಸ್ಥಿತಾಃ ।**
**ತದೈವ ತತ್ಕರ್ಮಯೋಗ್ಯಾನ್ ನಿರ್ಮಿಮೀತೇ ಹರಿಃ ಸ್ವಯಮ್ ।**
**ಇತ್ಯಾದಿ ಮಹಾಮೀಮಾಂಸಾಯಾಂ ।**

**ಅನುವಾದ**—ನ ತತ್ರ ರಥಾಃ ಎಂಬ ವಾಕ್ಯ ಸ್ವಪ್ನಮಾತ್ರ ಪರವಲ್ಲ. ಏಕೆಂದರೆ 'ಸ್ವಪ್ನದಲ್ಲಿ ಅಂತರಿಕ್ಷದಲ್ಲಿ ಅಥವಾ ಸ್ವರ್ಗದಲ್ಲಿ ರಥ ಇತ್ಯಾದಿಗಳು ಮೊದಲು ಇರಲಿಲ್ಲ. ಆಗಲೇ ಅಂದರೆ, ಜೀವನನ್ನು ಆ ಸ್ಥಾನಗಳಿಗೆ ಕರೆದುಕೊಂಡು ಹೋದ ಸಮಯದಲ್ಲೇ ಶ್ರೀಹರಿಯು ಜೀವನ ಕರ್ಮಗಳಿಗೆ ಅನುಗುಣವಾಗಿ ರಥ ಮೊದ

ಲಾದವುಗಳನ್ನು ನಿರ್ಮಿಸುತ್ತಾನೆ' ಎಂದು ಮುಂತಾಗಿ ಮಹಾಮೀಮಾಂಸೆಯಲ್ಲಿ ಹೇಳಿದೆ.

**ಸ್ವಾಪ್ನ ಸೃಷ್ಟಿಕರ್ತ ಜೀವನಲ್ಲ :**

**ಭಾಷ್ಯ—ಜೀವಪಕ್ಷೇ ಪ್ರಸಿದ್ಧತ್ವಾತ್ ಕತಮ ಆತ್ಮೇತಿ ಪ್ರಶ್ನೋ ನ ಯುಕ್ತಃ। ನ ಚ ಜೀವಃ ಸಮಾನಃ ಸನ್ನುಭೌ ಲೋಕೌ ಸಂಚರತಿ। ಸುಖದುಃಖ ವಿಶೇಷವತ್ತ್ವಾತ್।**

**ಅನುವಾದ**—ಆತ್ಮೈವಾಸ್ಯ ಜ್ಯೋತಿಃ ಎಂಬಲ್ಲಿ ಆತ್ಮಾ ಎಂಬ ಪದಕ್ಕೆ ಜೀವ ಎಂದು ಅರ್ಥವನ್ನು ಇಟ್ಟುಕೊಂಡರೆ ಮುಂದೆ'ಕತಮ ಆತ್ಮಾ' ಆತ್ಮಾ ಎಂದರೆ ಯಾರು ಎಂಬ ಪ್ರಶ್ನೆಯು ಯುಕ್ತವಾಗುವುದಿಲ್ಲ. ಏಕೆಂದರೆ ಜೀವನು 'ನಾನು' ಎನ್ನುವ ಪ್ರತ್ಯಕ್ಷದಿಂದ ಎಲ್ಲರಿಗೂ ಸಿದ್ಧನಾಗಿದ್ದಾನೆ. ಅದಲ್ಲದೆ ಜೀವನು ಸಮಾನನಾಗಿ ಅಂದರೆ ವಿಕಾರರಹಿತನಾಗಿ ಜಾಗ್ರತ್, ಸುಷುಪ್ತಿ, ಭೂಲೋಕ, ಸ್ವರ್ಗಗಳಲ್ಲಿ ಸಂಚರಿಸುವುದಿಲ್ಲ. ಅವನಿಗೆ ಅಲ್ಲಿ ಸಂಚರಿಸುವಾಗ ಸುಖದುಃಖಗಳಲ್ಲಿ ವ್ಯತ್ಯಾಸವಿದೆ.

**ಭಾಷ್ಯ—ನ ಚ ಸುಖದುಃಖಾದೇರ್ಮಿಥ್ಯಾತ್ವೇ ಕಿಂಚಿನ್ಮಾನಮ್। "ಯಾಥಾತಥ್ಯತೋಽರ್ಥಾನ್ ವ್ಯದಧಾಚ್ಛಾಶ್ವತೀಭ್ಯಃ ಸಮಾಭ್ಯಃ।" 'ಅಸತ್ಯಮಪ್ರತಿಷ್ಠಂ ತೇ ಜಗದಾಹುರನೀಶ್ವರಮ್।' 'ವೈಧರ್ಮ್ಯಾಚ್ಚ ನ ಸ್ವಪ್ನಾದಿವತ್' ಇತ್ಯಾದಿ ವಚನವಿರುದ್ಧತ್ವಾಚ್ಚ।**

**ಅನುವಾದ**—'ಸುಖ ದುಃಖಗಳಲ್ಲಿ ವ್ಯತ್ಯಾಸ ಕಂಡುಬಂದರೂ ಅದು ಮಿಥ್ಯಾ' ಎನ್ನುವ ಆಕ್ಷೇಪ ಸರಿಯಲ್ಲ. ಸುಖ ದುಃಖ ಇತ್ಯಾದಿಗಳು ಮಿಥ್ಯಾ ಎನ್ನುವ ವಿಷಯದಲ್ಲಿ ಯಾವ ಪ್ರಮಾಣವೂ ಇಲ್ಲ. ಪ್ರಮಾಣ ವಿರುದ್ಧವೇ ಆಗಿದೆ–'ಅನಂತಕಾಲಗಳಲ್ಲಿ ಸತ್ಯವಾದ ವಸ್ತುಗಳನ್ನು ಪರಮಾತ್ಮನು ಸೃಷ್ಟಿಸಿದನು'. 'ಮಾಯಾವಾದಿಗಳು ಜಗತ್ತನ್ನು ಅಸತ್ಯವೆಂದೂ, ಆಧಾರರಹಿತವೆಂದೂ, ಈಶ್ವರ ರಹಿತವೆಂದೂ ಹೇಳುತ್ತಾರೆ'. ▪ಅಬಾಧಿತವಿದ್ದು ಸ್ವಪ್ನಕ್ಕಿಂತ ವಿರುದ್ಧಧರ್ಮವನ್ನು ಹೊಂದಿರುವುದರಿಂದ ಪ್ರಪಂಚದ ಅನುಭವ ಸ್ವಪ್ನ ಮೊದಲಾದವುಗಳಂತೆ ಭ್ರಾಂತಿ ಅಲ್ಲ', ಎಂದು ಮೊದಲಾದ ಭಗವದ್ವಾಕ್ಯಗಳ ವಿರೋಧವು ಇರುವುದರಿಂದ ಸುಖ ದುಃಖಗಳು ಮಿಥ್ಯೆ ಅಲ್ಲ.

**ಭಾಷ್ಯ—ನ ಚೈತನ್ನಾಸೀದಸ್ತಿ ಭವಿಷ್ಯತೀತ್ಯನುಭವಃ ಕದಾಚಿತ್ ಭವಿಷ್ಯತೀತ್ಯತ್ರ ಕಿಂಚಿನ್ಮಾನಂ। ಕಿಂಚಿತ್ಕಾಲಸ್ಥಿರತ್ವಮಾತ್ರಸ್ಯ ಶೂನ್ಯವಾದಿನಾಮಪಿ ಸಿದ್ಧತ್ವಾದ್ 'ವೈಧರ್ಮ್ಯಾಚ್ಚ ನ ಸ್ವಪ್ನಾದಿವತ್' ಇತ್ಯಾದಿ**

**ವಚನಂ ವ್ಯರ್ಥಂ ಸ್ಯಾತ್ । ಅತೋ ನ ಕದಾಚಿದಸ್ಯ ನಾಸೀದಸ್ತಿ ಭವಿಷ್ಯತೀತ್ಯನುಭವೋ ಭವಿಷ್ಯತೀತ್ಯಭಿಪ್ರಾಯೇಣೈವ ತದ್ ವಚನಮ್। ನ ಚ ತಥಾऽನುಭವೇ ಶೂನ್ಯಸ್ಯ ಅನಿರ್ವಚನೀಯಸ್ಯ ಚ ಕಶ್ಚಿದ್ ವಿಶೇಷಃ ।**

**ಅನುವಾದ**—ಈ ಜಗತ್ತು ಹಿಂದೆ ಇರಲಿಲ್ಲ, ಈಗ ಇಲ್ಲ, ಮುಂದೆ ಇರುವುದಿಲ್ಲ ಎಂಬ ಅನುಭವವು ಮುಂದೆ ಬ್ರಹ್ಮಜ್ಞಾನ ಬಂದ ಕಾಲದಲ್ಲಿ ಉಂಟಾಗುತ್ತದೆ ಎಂಬ ವಿಷಯದಲ್ಲಿ ಏನೂ ಪ್ರಮಾಣವಿಲ್ಲ. 'ಸ್ವಾಪ್ನ ಪ್ರಪಂಚವು ಸ್ವಲ್ಪ ಕಾಲವೂ ಸ್ಥಿರವಲ್ಲ ಜಗತ್ತು ಸ್ವಲ್ಪ ಕಾಲ ಸ್ಥಿರವಾಗಿರುತ್ತದೆ' ಎನ್ನುವುದೇ ಸೂತ್ರೋಕ್ತವಾದ ಸ್ವಪ್ನ ವೈಲಕ್ಷಣ್ಯ ಎನ್ನುವುದಾದರೆ ಇದು ಶೂನ್ಯವಾದಿಗಳಿಗೂ ಸಮ್ಮತವಾಗಿರುವುದರಿಂದ 'ವೈಧರ್ಮ್ಯಾಚ್ಚ ನ ಸ್ವಪ್ನಾದಿವತ್' ಮೊದಲಾದ ಸೂತ್ರಗಳು ವ್ಯರ್ಥವಾಗುವುವು. ಅವುಗಳಿಂದ ಶೂನ್ಯವಾದ ನಿರಾಕರಣೆಯಾಗಲಾರದು. ಆದ್ದರಿಂದ ಈ ಜಗತ್ತು ಸ್ವಾಪ್ನ ಪ್ರಪಂಚದಂತೆ 'ಹಿಂದೆ ಇರಲಿಲ್ಲ, ಈಗ ಇಲ್ಲ, ಮುಂದೆ ಇರುವುದಿಲ್ಲ' ಎಂಬ ಅನುಭವವು ಎಂದೂ ಉಂಟಾಗುವುದಿಲ್ಲ ಎಂಬ ಅಭಿಪ್ರಾಯದಿಂದಲೇ ಆ ಸೂತ್ರಗಳು ಪ್ರವೃತ್ತವಾಗಿವೆ ಎನ್ನಬೇಕು. ಅನಿರ್ವಚನೀಯವಾದಿಯು ಶೂನ್ಯವಾದಿಯಂತೆಯೆ ಜಗತ್ತು ಇರಲಿಲ್ಲ, ಇಲ್ಲ ಮತ್ತು ಮುಂದೆ ಇರುವುದಿಲ್ಲ ಎಂಬ ಅನುಭವವನ್ನು ಅಂಗೀಕರಿಸಿದರೆ ಶೂನ್ಯ ಮತ್ತು ಅನಿರ್ವಚನೀಯಗಳಿಗೆ ಏನೂ ವ್ಯತ್ಯಾಸವೇ ಇಲ್ಲವೆಂದಾಗುತ್ತದೆ.

**ಭಾಷ್ಯ**—**ನ ಚ ಶೂನ್ಯವಾದಿನಾಂ ತದ್ವಾದಿನಾಂ ಚ ಕಶ್ಚಿದ್ವಿಶೇಷೋ ಮೋಕ್ಷೇ । ನ ಚ ನಿತ್ಯಜ್ಞಾನಸ್ವರೂಪಮಸ್ತೀತಿ ವಚನೇನ ಕಶ್ಚಿದ್ವಿಶೇಷಃ । ಜ್ಞೇಯಾಭಾವೇ ಜ್ಞಾನಸ್ಯಾಪ್ಯಭಾವಾತ್ । ನ ಹಿ ಜ್ಞೇಯರಹಿತಂ ಜ್ಞಾನಂ ನಾಮಾಸ್ತೀತ್ಯತ್ರ ಕಿಂಚಿನ್ಮಾನಂ ।**

**ಅನುವಾದ**—ಶೂನ್ಯವಾದವನ್ನು ನಿರಾಕರಿಸುವ ಸೂತ್ರಗಳು ಮಾಯಾವಾದವನ್ನು ನಿರಾಕರಿಸಬಹುದು. ಏಕೆಂದರೆ ಶೂನ್ಯವಾದಿಗಳಿಗೆ ಮತ್ತು ಅನಿರ್ವಚನೀಯವಾದಿಗಳಿಗೆ ಪ್ರಧಾನಫಲವಾದ ಮೋಕ್ಷದಲ್ಲಿ ಯಾವ ವ್ಯತ್ಯಾಸವೂ ಇಲ್ಲ. ಅನಿರ್ವಚನೀಯವಾದಿಗಳು ಮೋಕ್ಷದಲ್ಲಿ ನಿತ್ಯಜ್ಞಾನಸ್ವರೂಪನಾದ ಬ್ರಹ್ಮನು ಇದ್ದಾನೆ ಎಂದು ಹೇಳಿದ ಮಾತ್ರಕ್ಕೆ ಉಭಯವಾದಿಗಳ ನಡುವೆ ವ್ಯತ್ಯಾಸ ಉಂಟಾಗುವುದಿಲ್ಲ. ಏಕೆಂದರೆ ಮೋಕ್ಷದಲ್ಲಿ ಜ್ಞಾನಕ್ಕೆ ವಿಷಯವು ಇಲ್ಲದಿದ್ದರೆ ಜ್ಞಾನವೂ ಇರುವುದಿಲ್ಲ. ಜ್ಞೇಯವಿಲ್ಲದ ಜ್ಞಾನವು ಇದೆ ಎಂಬ ವಿಷಯದಲ್ಲಿ ಯಾವ ಪ್ರಮಾಣವೂ ಇಲ್ಲ. ಆದ್ದರಿಂದ ಶೂನ್ಯವನ್ನೇ ಒಪ್ಪಿದಂತಾಯಿತು.

**ಭಾಷ್ಯ—ನ ಚ ಸ್ವವಿಷಯಂ ತದಿತಿ ತೇಷಾಂ ಪಕ್ಷಃ । ತದಾ ಕರ್ತೃಕರ್ಮ-ವಿರೋಧ ಇತಿ ಹಿ ತೇಷಾಂ ವಚನಮ್ । ನ ಚ ಜಾನಾತೀತ್ಯಾದಿ ಕರ್ತೃತ್ವಂ ಜ್ಞಾನಸ್ಯ ತೈರಂಗೀಕ್ರಿಯತೇ। ನಿರ್ವಿಶೇಷತ್ವಾಂಗೀಕಾರಾತ್ । ಅತಃ ಶೂನ್ಯವಾದಿನ ಏವ ತೇಽಪಿ ।**

**ಅನುವಾದ**—ಮಾಯಾವಾದದಲ್ಲಿ ಬ್ರಹ್ಮನಿಗೆ ಸ್ವಪ್ರಕಾಶತ್ವವನ್ನಂಗೀಕರಿಸಿದ್ದರೂ ಮೋಕ್ಷದಲ್ಲಿ ಬ್ರಹ್ಮಜ್ಞಾನಕ್ಕೆ ಬ್ರಹ್ಮನೇ ವಿಷಯ ಎಂಬುದು ಅವರ ಪಕ್ಷವಲ್ಲ. ಸ್ವಪ್ರಕಾಶವೆಂದರೆ ಪರಪ್ರಕಾಶ್ಯ ಅಲ್ಲ ಎಂದಿಷ್ಟೇ ಅರ್ಥ. ಜ್ಞಾನ ಸ್ವರೂಪನಾದ ಬ್ರಹ್ಮನು ತನಗೆ ತಾನೇ ವಿಷಯನಾದರೆ ಜ್ಞಾನಕರ್ತೃ ಮತ್ತು ಕರ್ಮ ಒಬ್ಬನೇ ಆಗುತ್ತಾನೆ. ಒಬ್ಬನೇ ಕರ್ತೃ ಕರ್ಮ ಆಗುವುದು ವಿರುದ್ಧ ಎಂದು ಅದ್ವೈತಿಗಳೇ ಹೇಳುತ್ತಾರೆ. ಹೀಗೆ ಬ್ರಹ್ಮಜ್ಞಾನಕ್ಕೆ ವಿಷಯವಿಲ್ಲ. ಕರ್ತೃವೂ ಇಲ್ಲ. ಏಕೆಂದರೆ ತಿಳಿಯುತ್ತಾನೆ, ಅನುಭವಿಸುತ್ತಾನೆ ಎಂದು ಮುಂತಾಗಿ ವ್ಯವಹಾರಸಿದ್ಧವಾದ ಜ್ಞಾನ ಕರ್ತೃತ್ವವನ್ನು ಬ್ರಹ್ಮಸ್ವರೂಪಭೂತವಾದ ಜ್ಞಾನಕ್ಕೆ ಅವರು ಒಪ್ಪಿಲ್ಲ. ಜ್ಞಾನಕರ್ತೃತ್ವವೆಂದರೆ ಜ್ಞಾನಾಶ್ರಯತ್ವ. ಬ್ರಹ್ಮನನ್ನು ಅವರು ನಿರ್ವಿಶೇಷನೆಂದು ಅಂಗೀಕರಿಸಿರುವುದರಿಂದ, ನಿರ್ವಿಶೇಷ ಬ್ರಹ್ಮನಿಗೆ ಜ್ಞಾನಾಶ್ರಯತ್ವವು ಕೂಡಲಾರದು. ಹೀಗೆ ವಿಷಯವೂ ಕರ್ತೃವೂ ಇಲ್ಲದ ಜ್ಞಾನ ಜ್ಞಾನವೇ ಅಲ್ಲ. ಶೂನ್ಯವೇ ಸರಿ. ಆದ್ದರಿಂದ ಮಾಯಾವಾದಿಗಳು ಕೂಡ ಶೂನ್ಯವಾದಿಗಳೇ.

**ಭಾಷ್ಯ—ಸ್ವಪ್ನೋ ಭೂತ್ವಾ ಸ್ವಾಪಕೋ ಭೂತ್ವಾ । ನ ಹಿ ಜೀವೋಽಪಿ ಸ್ವಪ್ನ ಏವ ಭವತಿ । ಸ್ವಾಪಂ ನಯತೀತಿ ಸ್ವಪ್ನ ಇತಿ ಚ ವ್ಯುತ್ಪತ್ತಿಃ ।**

**ಅನುವಾದ**—ಸ್ವಪ್ನೋ ಭೂತ್ವಾ ಎಂದರೆ ಸ್ವಾಪ ಉಂಟುಮಾಡುವವನಾಗಿ ಎಂದರ್ಥ. ಆದ್ದರಿಂದ ಈ ವಾಕ್ಯವು ಪರಮಾತ್ಮ ಪರವಾಗುವುದಕ್ಕೆ ಬಾಧಕವಿಲ್ಲ. ಜೀವಪರವೇ ಎನ್ನುವುದಾದರೆ ಜೀವನೂ ಕೂಡ ಸ್ವಪ್ನವೇ ಆಗುವುದಿಲ್ಲವಷ್ಟೆ? ಸ್ವಾಪಂ ನಯತಿ, ಸ್ವಾಪವನ್ನು ಉಂಟುಮಾಡುತ್ತಾನೆ ಎಂಬ ಸ್ವಪ್ನಶಬ್ದದ ವಿವರಣೆಯೂ ಪರಮಾತ್ಮನ ಪರವಾಗಿ ಸಂಗತವಾಗುತ್ತದೆ. ಆದ್ದರಿಂದ ಪರಮಾತ್ಮ ಪರವಾಗಿ ಅರ್ಥೈಸುವುದು ಕ್ಲಿಷ್ಟವೆಂದೂ, ಜೀವ ಪರವಾಗಿ ಅರ್ಥೈಸುವುದು ಸುಲಭವೆಂದೂ ಹೇಳುವಂತಿಲ್ಲ.

**ಭಾಷ್ಯ—ಜಾಯಮಾನೋ, ಮ್ರಿಯಮಾಣಃ, ಪ್ರಸ್ವಪಿತೀತ್ಯಾದಿ ತು 'ಕೃತ್ವಾ ವಿವಾಹಂ ತು ಕುರುಪ್ರವೀರಾಃ' 'ತದೇತನ್ಮೇ ವಿಜಾನೀಹಿ ಯಥಾಽಹಂ ಮಂದಧೀರ್ಹರೇ । ಸುಖಂ ಬುದ್ಧ್ಯೇಯ ದುಃಖೋಘಂ ಯೋಷಾ ಭವದನುಗ್ರಹಾತ್'' 'ಜಜ್ಞೇ ಬಹುಜ್ಞಂ ಪರಮಾಭ್ಯುದಾರಂ' 'ದೃಷ್ಟ್ವಾ-**

**ಕ್ಷ್ಣುಷೋ ನಾಸ್ತಿ ಜಿಹ್ವಾ' ಇತ್ಯಾದಿವದಂತರ್ಣೀತಣಿಚ್ಕ್ವೇನ ಭವತಿ । 'ಸ್ವಾತಂತ್ರ್ಯ ಸ್ನೇಹಯೋರಂತರ್ಣೀತಣಿಚ್' ಇತಿ ಹಿ ಸೂತ್ರಮ್ ।**

**ಅನುವಾದ**—ಹುಟ್ಟುತ್ತಾನೆ, ಸಾಯುತ್ತಾನೆ, ನಿದ್ದೆಮಾಡುತ್ತಾನೆ ಎಂದು ಮೊದಲಾದ ಪ್ರಯೋಗಗಳು ತಾನೇ ಹುಟ್ಟುತ್ತಾನೆ ಸಾಯುತ್ತಾನೆ ಎಂದು ಮುಂತಾದ ಅರ್ಥದಲ್ಲಿಲ್ಲ. 'ಕುರುವೀರರು ವಿವಾಹವನ್ನು ಮಾಡಿ' 'ಹರಿಯೇ! ಮಂದಮತಿಯಾದ ಸ್ತ್ರೀಯಾದ ನಾನು ನಿಮ್ಮ ಅನುಗ್ರಹದಿಂದ ಸುಖವಾಗಿ ತಿಳಿಯುವಂತೆ, ತಿಳಿಯಲು ಕಷ್ಟವಾದ ಈ ವಿಷಯವನ್ನು ನೀನು ತಿಳಿ'. 'ಬಹಳ ತಿಳಿದವನೂ ಬಹಳ ಶ್ರೇಷ್ಠನೂ ಆದವನನ್ನು ಹುಟ್ಟಿದನು' 'ನೋಡುವ ಕಣ್ಣಿಗೆ ನಾಲಿಗೆ ಇಲ್ಲ' ಎಂದು ಮೊದಲಾದ ಪ್ರಯೋಗಗಳಂತೆ ಆಯಾ ಕ್ರಿಯೆಯ ಪ್ರೇರಣೆ ಎಂಬ ಅರ್ಥವನ್ನು ಕೊಡುವ ಣಿಚ್ ಪ್ರತ್ಯಯವನ್ನು ಪರೋಕ್ಷವಾಗಿ ಒಳಗೊಂಡಿರುವುದರಿಂದ ಸಮಂಜಸವೆನಿಸುತ್ತದೆ. ಆದ್ದರಿಂದ ಹುಟ್ಟುವುದೆಂದರೆ ಹುಟ್ಟಿಸುವುದು ಎಂದು ಮುಂತಾಗಿ ಅರ್ಥಗ್ರಹಿಸಬೇಕು. 'ಸ್ವಾತಂತ್ರ್ಯ ಮತ್ತು ಸ್ನೇಹಗಳನ್ನು ಹೇಳುವ ಅಭಿಪ್ರಾಯವಿದ್ದಾಗ ಣಿಚ್ ಪ್ರತ್ಯಯವನ್ನು ಪ್ರತ್ಯಕ್ಷವಾಗಿ ಪ್ರಯೋಗಿಸುವುದಿಲ್ಲ. ಪರೋಕ್ಷವಾಗಿ ಇಟ್ಟುಕೊಳ್ಳಬೇಕು' ಎಂದು ವ್ಯಾಕರಣ ಸೂತ್ರವು ಹೇಳಿದೆ. ಏಕೆಂದರೆ ತನ್ನ ಅಧೀನನಾದವನೂ ತನ್ನ ಸ್ನೇಹಪಾತ್ರನೂ ಮಾಡಿದ ಕ್ರಿಯೆ ಎಲ್ಲವೂ ತಾನೇ ಮಾಡಿದ್ದೆಂದು ವ್ಯವಹಾರ. ಅದು ಕ್ರಿಯಾಸ್ವಾತಂತ್ರ್ಯವನ್ನೂ ಸ್ನೇಹವನ್ನೂ ತೋರಿಸುವುದರಿಂದ ಸಾರ್ಥಕವಾಗುತ್ತದೆ.

## ಸ್ವಪ್ನ ಸುಷುಪ್ತಿಗಳಲ್ಲಿ ಜೀವನು ಪರಮಾತ್ಮನಾಗುವುದಿಲ್ಲ :

**ಭಾಷ್ಯ—ಕಥಂ ಅನ್ಯಥಾ 'ಸ್ವಯಂ ವಿಹತ್ಯ ಸ್ವಯಂ ನಿರ್ಮಾಯ' 'ಸ್ರವಂತ್ಯಃ ಸೃಜತೇ ಸ ಹಿ ಕರ್ತಾ' 'ಸ್ವಪ್ನೇನ ಶಾರೀರಮಭಿಪ್ರಹತ್ಯಾಸುಪ್ತಃ ಸುಪ್ತಾನಭಿಚಾಕಶೀತಿ' ಇತ್ಯಾದಿ ಯುಜ್ಯತೇ ?**

**ಅನುವಾದ**—ಆತ್ಮಾ ಮತ್ತು ಪುರುಷ ಎಂಬ ಪದಗಳು ಜೀವಪರವಾದರೆ 'ಸ್ವಪ್ನದಲ್ಲಿ ತಾನೇ ಜೀವನನ್ನು ಬಾಹ್ಯಕ್ರಿಯಾರಹಿತನನ್ನಾಗಿಸಿ ವಾಸನಾಮಯ ಪದಾರ್ಥಗಳನ್ನು ನಿರ್ಮಿಸಿ', 'ನದಿಗಳನ್ನು ನಿರ್ಮಿಸುತ್ತಾನೆ, ಅವನು ಸರ್ವಕರ್ತಾ' 'ಸುಷುಪ್ತಿಯನ್ನು ಜೀವನಿಗೆ ಕೊಟ್ಟು ಸ್ವತಃ ಸುಷುಪ್ತಿರಹಿತನಾಗಿ ಸುಪ್ತರನ್ನು ನೋಡುತ್ತಾನೆ' ಎಂದು ಮೊದಲಾದ ವಾಕ್ಯಗಳು ಹೇಗೆ ಉಪಪನ್ನವಾಗುತ್ತವೆ? ಜೀವನಿಗೆ ಜೀವನನ್ನು ಬಾಹ್ಯ ವ್ಯಾಪಾರರಹಿತನನ್ನಾಗಿಸುವ, ವಾಸನಾಮಯ ಪದಾರ್ಥಗಳನ್ನು ನಿರ್ಮಿಸುವ, ನದಿಗಳನ್ನು ನಿರ್ಮಿಸುವ ಶಕ್ತಿ ಇಲ್ಲ. ಅವನು ಸರ್ವಕರ್ತನಲ್ಲ. ಜೀವನಿಗೆ ಸುಷುಪ್ತಿಯನ್ನು ಕೊಡಲಾರ.

**ಭಾಷ್ಯ—ಉಕ್ತಾರ್ಥೇ ಚ ಸ್ವಪ್ನೇನ ಶಾರೀರಮಿತ್ಯಾದಿ ಜೀವೇಶ್ವರಭೇದ-ಮಂತ್ರಾಃ ಉಕ್ತಾಃ ಪ್ರಮಾಣತ್ವೇನ । ಈಶ್ವರೋ ಜೀವಸ್ಯ ಭಯಾನಿ ಪಶ್ಯನ್ ಜಕ್ಷದಿವ ಅಹಸದಿವ ।**

**ಅನುವಾದ**-ವಸ್ತುತಃ ಪರಮಾತ್ಮನೆ ಸ್ವಪ್ನಾದಿಕರ್ತನಾದರೂ ಜೀವಪರಮಾತ್ಮರೊಳಗೆ ಭೇದವಿಲ್ಲದ್ದರಿಂದ ಜೀವನೂ ಸ್ವಪ್ನಾದಿಕರ್ತನೆಂದು ಏಕೆ ಹೇಳಬಾರದು ಎಂದರೆ, ಹಿಂದೆ ಹೇಳಿದ ಜೀವೇಶ್ವರ ಭೇದ ವಿಷಯದಲ್ಲಿ ಸ್ವಪ್ನೇನ ಶಾರೀರಂ ಎಂದು ಮೊದಲಾದ ಜೀವೇಶ್ವರ ಭೇದವನ್ನು ಬೋಧಿಸುವ ಮಂತ್ರಗಳೇ ಪ್ರಮಾಣವಾಗಿ ಹೇಳಲ್ಪಟ್ಟಿವೆ. ಆದ್ದರಿಂದ ಆಪಾತತಃ ಜೀವಪರವೆಂದು ಕಾಣುವ ವಾಕ್ಯಗಳನ್ನೂ ಪರಮಾತ್ಮಪರವೆಂದೇ ಗ್ರಹಿಸಬೇಕು. 'ಜಕ್ಷದುತೇವಾಪಿ ಭಯಾನಿ ಪಶ್ಯನ್' ಎಂಬ ವಾಕ್ಯವೂ ಜೀವಪರವಲ್ಲ, ಪರಮಾತ್ಮಪರ. ಈಶ್ವರನು ಜೀವನ ಭಯಗಳನ್ನು ಕಂಡು ನಕ್ಕಂತೆ ತೋರಿಕೊಂಡನು ಎಂದರ್ಥ.

**ಭಾಷ್ಯ-'ಪ್ರಾಜ್ಞೇನಾತ್ಮನಾ ಸಂಪರಿಷ್ವಕ್ತಃ' 'ಪ್ರಾಜ್ಞೇನಾತ್ಮನಾಽನ್ವಾರೂಢಃ' ಇತ್ಯಾದಿಷು ಚಾಭ್ಯಾಸೇನ ಸರ್ವತ್ರ ಭೇದ ಏವ ನಿರ್ದಿಶ್ಯತೇ। 'ಸುಷುಪ್ತ್ಯುತ್ಕ್ರಾಂತ್ಯೋರ್ಭೇದೇನ' ಇತಿ ನಿರ್ಣಯಾತ್ಮಕಂ ಭಗವದ್ವಚನಂ ।**

**ಅನುವಾದ**—'ಸ್ವಪ್ನೇನ ಶಾರೀರಂ' ಎಂದು ಮುಂತಾದ ವಾಕ್ಯಗಳಲ್ಲಿ ಭೇದ ಪ್ರತಿಪಾದನೆ ಇದೆ ಮಾತ್ರವಲ್ಲ, ಅದರಲ್ಲಿ ತಾತ್ಪರ್ಯವೂ ಶ್ರುತಿಗೆ ಇದೆ. ಏಕೆಂದರೆ 'ಜೀವನು ಪ್ರಾಜ್ಞಾತ್ಮನಿಂದ ಆಲಿಂಗಿತನಾಗಿ', 'ಜೀವನು ಪ್ರಾಜ್ಞಾತ್ಮನನ್ನು ಹೊತ್ತುಕೊಂಡು' ಎಂದು ಮುಂತಾಗಿ ಎಲ್ಲ ಕಡೆ ಜೀವಪರಮಾತ್ಮರ ಭೇದವೇ ಪುನಃ ಪುನಃ ನಿರ್ದೇಶಿಸಲ್ಪಟ್ಟಿದೆ. 'ಸುಷುಪ್ತಿ ಹಾಗೂ ಉತ್ಕ್ರಮಣ ಸಂದರ್ಭಗಳಲ್ಲಿ ಜೀವ-ಪರಮಾತ್ಮರಿಗೆ ಭೇದವನ್ನೇ ಹೇಳಿದ್ದರಿಂದ ಜೀವನೆ ಪರಮಾತ್ಮನಲ್ಲ' ಎಂದು ಜೀವಪರಮಾತ್ಮರ ಭೇದವನ್ನು ವೇದವ್ಯಾಸರೂ ಬ್ರಹ್ಮಸೂತ್ರದಲ್ಲಿ ನಿರ್ಣಯಾತ್ಮಕವಾಗಿ ಹೇಳಿದ್ದಾರೆ.

**ಭಾಷ್ಯ—ನ ಚಾವಸ್ಥಾಭೇದೇನ ಜೀವಭೇದೋ ವ್ಯಾವಹಾರಿಕೋಽಪ್ಯಸ್ತೀ-ತ್ಯತ್ರ ಕಿಂಚಿನ್ಮಾನಂ। ನ ಹಿ ಜಾಗ್ರತ್ ಸ್ವಪ್ನಸ್ಥಶ್ಚ ದ್ವಾವಿತ್ಯಜ್ಞಪ್ರಯೋ-ಗೋಽಪಿ ಕಶ್ಚಿದಸ್ತಿ ಲೌಕಿಕಃ । ನ ಚ ಭ್ರಮಸ್ತಾದೃಶಃ । ತಸ್ಮಾದ್ ಭಗವಾನೇವಾತ್ರೋಚ್ಯತೇ ಸರ್ವಕರ್ತೃತ್ವೇನ ।**

**ಅನುವಾದ**—'ಜಾಗ್ರದವಸ್ಥೆಯಲ್ಲಿರುವ ಜೀವನು ಸುಷುಪ್ತ್ಯವಸ್ಥೆಯಲ್ಲಿರುವ ಅದೇ ಜೀವನಿಗಿಂತ ಬೇರೆ ಎಂದು ಅವಸ್ಥಾಭೇದ ಪ್ರಯುಕ್ತ ಜೀವ-ಜೀವ ಭೇದವೇ

ಉಕ್ತವಾಗಿದೆ. ಹೊರತು ಜೀವೇಶ್ವರ ಭೇದವಲ್ಲ' ಎನ್ನುವುದೂ ಅಸಂಗತ. ಏಕೆಂದರೆ ಅವಸ್ಥಾ ಭೇದ ಪ್ರಯುಕ್ತ ಜೀವ ಜೀವ ಭೇದವು ವ್ಯಾವಹಾರಿಕವಾಗಿಯಾದರೂ ಇದೆ ಎನ್ನುವಲ್ಲಿ ಏನೂ ಪ್ರಮಾಣವಿಲ್ಲ. ಇನ್ನು ಪಾರಮಾರ್ಥಿಕ ಭೇದವೆಲ್ಲಿ? ಅಂತಹ ಭೇದ ವಿದ್ದಿದ್ದರೆ 'ಈಗ ಎಚ್ಚರವಿರುವ ಹಿಂದೆ ನಿದ್ರೆ ಮಾಡಿದ್ದ ಜೀವರು ಬೇರೆಯೇ ಇದ್ದರು' ಎಂಬ ಪ್ರಯೋಗ, 'ದ್ವಾಸುಪರ್ಣಾ' ಎಂದು ಮೊದಲಾದವುಗಳಂತೆ ವೇದದಲ್ಲಿರಬೇಕಾಗಿತ್ತು. ವೈದಿಕ ಪ್ರಯೋಗವಿಲ್ಲದಿದ್ದರೂ ಲೌಕಿಕ ಪ್ರಯೋಗವಾದರೂ ಇರಬೇಕಾಗಿತ್ತು. ಕೊನೆಯಪಕ್ಷ ಲೋಕದಲ್ಲಿ ಜ್ಞಾನಿಗಳ ಪ್ರಯೋಗವಿಲ್ಲದಿದ್ದರೂ, ಅಜ್ಞಾನಿಗಳ ಪ್ರಯೋಗವಾದರೂ ಇರಬೇಕಿತ್ತು. ಆದರೆ ಯಾವುದೂ ಇಲ್ಲ. ಯಾವ ಲೌಕಿಕ ಮನುಷ್ಯನಿಗೂ ಅಂತಹ ಭ್ರಮೆಯೂ ಇಲ್ಲ. ಇಷ್ಟರವರೆಗೆ ಮಲಗಿ ಕನಸು ಕಂಡವನೂ ಈಗ ಎಚ್ಚೆತ್ತವನೂ ನಾನೇ ಎಂಬ ಅನುಭವವೂ ಇದೆ. ಆದ್ದರಿಂದ ಪ್ರಕೃತ ಮಂತ್ರಗಳಲ್ಲಿ ಸರ್ವಕರ್ತೃ ಎಂದು ಹೇಳಿದ ಜ್ಯೋತಿಯು ಭಗವಂತನೇ ಹೊರತು ಜೀವನಲ್ಲ.

**ಭಾಷ್ಯ—ವೇಶಾಂತಾಃ ವೇಶ್ಯಾಗೃಹಾಃ । ಸುಷುಪ್ತಿಮೋಕ್ಷೋಭಯವಿವಕ್ಷಯೈವ ತದ್ವಚನಮಿತಿ ಭಗವತಾಪ್ಯುಕ್ತಂ 'ಸ್ವಾಪ್ಯಯ ಸಂಪತ್ತ್ಯೋರನ್ಯತರಾಪೇಕ್ಷಮಾವಿಷ್ಕೃತಂ ಹಿ' ಇತಿ । ಉಭಯಾಪೇಕ್ಷಮಿತ್ಯುಕ್ತೇ ಮೋಕ್ಷಸ್ಥಸುಪ್ತಿರಿತ್ಯಪಿ ಮಂದಸ್ಯಾಽಶಂಕಾ ಸ್ಯಾದತೋ ಮೋಕ್ಷೇ ಸುಪ್ತಿರೇವ ನಾಸ್ತೀತಿ ಜ್ಞಾಪಯಿತುಮನ್ಯತರಾಪೇಕ್ಷಮಿತ್ಯುಕ್ತವಾನ್ । ನತ್ವನ್ಯತರ ಏವಾರ್ಥ ಇತಿ । ಜ್ಞಾನೇ ವಿಕಲ್ಪಾಯೋಗಾತ್ । ಅತೋಽವಸ್ಥಾಶ್ಚ ಲೋಕಾಶ್ಚ ಸರ್ವೇ ವಿವಕ್ಷಿತಾಃ ।**

**ಅನುವಾದ**—ವೇಶಾಂತ ಎಂದರೆ ಕೊಳ ಎಂಬ ಪರಕೀಯರ ವ್ಯಾಖ್ಯಾನ ಸರಿಯಲ್ಲ. ವೇಶ್ಯಾಗೃಹವೆಂದರ್ಥ. ಸುಷುಪ್ತಿ ಮತ್ತು ಮೋಕ್ಷ ಇವೆರಡನ್ನು ಹೇಳುವ ಅಭಿಪ್ರಾಯವು 'ಇದಂ ಚ ಪರಲೋಕಸ್ಥಾನಂ ಚ' ಎಂಬ ವಚನಕ್ಕೆ ಇದೆ ಎಂದು 'ಅತೋ ದ್ಯು ಸುಪ್ತಿ ಮೋಕ್ಷಾಣಾಂ' ಎಂಬ ಹಿಂದೆ ಹೇಳಿದ ಮಹಾಮೀಮಾಂಸಾ ವಚನದಲ್ಲಿ ಸ್ಪಷ್ಟಪಡಿಸಲಾಗಿದೆ. ಭಗವಾನ್ ವೇದವ್ಯಾಸರೂ ಕೂಡ ಈ ಅಭಿಪ್ರಾಯವನ್ನೇ "ಸ್ವಾಪ್ಯಯ ಸಂಪತ್ತ್ಯೋರನ್ಯತರಾಪೇಕ್ಷಮಾವಿಷ್ಕೃತಂ ಹಿ" ಅಂದರೆ 'ತೀರ್ಣೋ ಹಿ ತದಾ ಸರ್ವಾನ್ ಲೋಕಾನ್ ಹೃದಯಸ್ಯ ಭವತಿ' ಎಂಬ ವಾಕ್ಯವು ಮುಕ್ತಿ, ಸುಪ್ತಿಗಳೆರಡನ್ನೇ ಹೇಳುತ್ತದೆ ಹೊರತು ಸ್ವರ್ಗವನ್ನಲ್ಲ. ಇದು ವಾಕ್ಯದಲ್ಲಿ ಸ್ಪಷ್ಟ ಕಾಣಿಸುತ್ತದೆ'. ಎಂದು ಬ್ರಹ್ಮಸೂತ್ರದಲ್ಲಿ ಹೇಳಿದ್ದಾರೆ. ಈ ಸೂತ್ರದಲ್ಲಿ ಮುಕ್ತಿ ಸುಪ್ತಿಗಳೆರಡು ಎಂಬ ಅಭಿಪ್ರಾಯಕ್ಕೆ 'ಸ್ವಾಪ್ಯಯ ಸಂಪತ್ತ್ಯಪೇಕ್ಷಂ' ಎಂದಿರಬೇಕಾಗಿತ್ತು. ಅನ್ಯತರಾಪೇಕ್ಷಂ ಎಂದಲ್ಲ. ಆದರೂ ಸ್ವಾಪ್ಯಯಸಂಪತ್ತ್ಯಪೇಕ್ಷಂ ಎಂದೇ

ಹೇಳಿದ್ದರೆ ಮೋಕ್ಷ ಮತ್ತು ಮೋಕ್ಷದಲ್ಲಿ ಉಂಟಾಗುವ ಸುಷುಪ್ತಿ ಈ ಎರಡು ವಿವಕ್ಷಿತ ಎಂದು ಮಂದಮತಿಗಳಿಗೆ ಸಂಶಯವುಂಟಾಗುತ್ತಿತ್ತು. ಆದ್ದರಿಂದ ಈ ಸಂಶಯ ಬಾರದಿರಲೆಂದೂ, ಅಜ್ಞಾನ ನಿವೃತ್ತಿರೂಪವಾದ ಮೋಕ್ಷದಲ್ಲಿ ಅಜ್ಞಾನ ಕಾರ್ಯವಾದ ಸುಷುಪ್ತಿ ಎಂಬುದೇ ಇಲ್ಲ ಎಂದು ತಿಳಿಸುವುದಕ್ಕಾಗಿಯೂ ಅನ್ಯತರಾಪೇಕ್ಷಮ್ ಎಂದು ಸೂತ್ರಕಾರರು ಹೇಳಿದ್ದಾರೆ ಹೊರತು ಮುಕ್ತಿ-ಸುಷುಪ್ತಿಗಳೆರಡರಲ್ಲಿ ಯಾವುದಾದರೊಂದು ವಿವಕ್ಷಿತ ಎಂಬ ಅಭಿಪ್ರಾಯದಿಂದಲ್ಲ. ಯಾವುದಾದರೊಂದು ವಿವಕ್ಷಿತವಾಗಿದ್ದರೆ ಅದು ಯಾವುದು ಎಂದು ನಿಶ್ಚಿತವಾಗಿ ಹೇಳಬೇಕಿತ್ತು. 'ಅನ್ಯತರ' ಯಾವುದಾದೊಂದು ಎಂದು ಸಂದಿಗ್ಧವಾಗಿ ಸೂತ್ರದಲ್ಲಿ ಹೇಳಬಾರದು. ಏಕೆಂದರೆ, ವಿವಕ್ಷಿತವಾದ ವಸ್ತು ಯಾವುದಾದರೂ ಒಂದೇ ಬಗೆಯಾಗಿರುತ್ತದೆ, ಅನೇಕ ಬಗೆಯಾಗಿರುವುದಿಲ್ಲ. ಆದ್ದರಿಂದ ತೀರ್ಣೋ ಹಿ ಎಂಬ ವಾಕ್ಯದಲ್ಲಿ ಸುಪ್ತಿ ಮೋಕ್ಷವೆರಡೂ ವಿವಕ್ಷಿತವೇ. ಆದ್ದರಿಂದ ಈ ಪ್ರಕರಣದಲ್ಲಿ ಸುಷುಪ್ತ್ಯಾದ್ಯವಸ್ಥೆಗಳೂ, ಪೃಥಿವ್ಯಾದಿ ಸರ್ವಲೋಕಗಳೂ, ಮೋಕ್ಷವೂ ಪ್ರತಿಪಾದ್ಯವೆಂದು ವಿವಕ್ಷಿತವಾಗಿವೆ.

**ಭಾಷ್ಯ–ಸರ್ವಾವತಃ ಆ ಸಮಂತಾತ್ ಸರ್ವವತಃ ಸರ್ವಜ್ಞಾನಾನ್ಯುಪಾದಾಯ।**
**ಬಾಹ್ಯಪ್ರಕಾಶೋ ಭೇತ್ಯುಕ್ತೋ ಜ್ಯೋತಿರಾಂತರ ಉಚ್ಯತೇ ।**
**ಸುಖಂ ಸ್ವರೂಪಭೂತಂ ಯದಾನಂದ ಇತಿ ಕಥ್ಯತೇ ।**
**ಮುನ್ನಾಮ ವಿಷಯೋತ್ಥಂ ಯತ್ಪ್ರಕೃಷ್ಟವಿಷಯಾತ್ ಪ್ರಮುತ್।**
**ಇತಿ ಚ ।**

**ಅನುವಾದ**—ಸರ್ವಾವತಃ ಎಂದರೆ ಸಮಗ್ರವಾಗಿ ಎಲ್ಲವನ್ನೂ ವಿಷಯೀಕರಿಸುವ ಎಲ್ಲ ಜ್ಞಾನಗಳನ್ನೂ ತನ್ನೊಳಗೆ ತೆಗೆದುಕೊಂಡು ಎಂದರ್ಥ. ಸ್ವೇನ ಭಾಸಾ, ಸ್ವೇನ ಜ್ಯೋತಿಷಾ ಎಂಬಲ್ಲಿ ಪುನರುಕ್ತಿಯಿಲ್ಲ. ಏಕೆಂದರೆ 'ಬಾಹ್ಯಜ್ಞಾನವು ಭಾ ಎಂದೂ, ಒಳಗಿನ ಜ್ಞಾನವು ಜ್ಯೋತಿ ಎಂದೂ ಹೇಳಲ್ಪಟ್ಟಿದೆ. ಆನಂದ, ಮುದ್, ಪ್ರಮುದ್ ಎಂಬ ಶಬ್ದಗಳಲ್ಲಿಯೂ ಪುನರುಕ್ತಿ ಇಲ್ಲ. ಸ್ವರೂಪಸುಖವು ಆನಂದ ಎಂದು ಹೇಳಲ್ಪಡುತ್ತದೆ. ವಿಷಯ ಪದಾರ್ಥಗಳಿಂದ ಉಂಟಾದ ಸುಖಕ್ಕೆ ಮುದ್ ಎಂದು ಹೆಸರು. ಉತ್ಕೃಷ್ಟ ವಿಷಯಗಳಿಂದ ಉಂಟಾದ ಸುಖಕ್ಕೆ ಪ್ರಮುದ್ ಎಂದು ಹೆಸರು' ಎಂದೂ ಹೇಳಿದೆ.

**ಮಂತ್ರಗಳಲ್ಲಿ ಭಗವಂತನ ಜ್ಞಾನಕಾರಣತ್ವ :**

**ಉಪನಿಷತ್—ತದೇತೇ ಶ್ಲೋಕಾ ಭವಂತಿ।**

**ಸ್ವಪ್ನೇನ ಶಾರೀರಮಭಿ ಪ್ರಹತ್ಯಾಸುಪ್ತಃ ಸುಪ್ತಾನಭಿಚಾಕಶೀತಿ ।**
**ಶುಕ್ರಮಾದಾಯ ಪುನರೇತಿ ಸ್ಥಾನಂ ಹಿರಣ್ಮಯಃ ಪುರುಷ ಏಕಹಂಸಃ ।**

ಪರಮಾತ್ಮನೇ ಜೀವನಿಗೆ ಜಾಗ್ರದಾದಿ ಅವಸ್ಥೆಗಳಲ್ಲಿಯೂ, ಮುಕ್ತಿಯಲ್ಲಿಯೂ ಪ್ರವರ್ತಕನೆಂಬುದನ್ನು ಮುಂದಿನ ಮಂತ್ರಗಳು ಹೇಳುತ್ತವೆ—ಬಂಗಾರದ ಬಣ್ಣದವನೂ, ಮುಖ್ಯ ಹಂಸರೂಪನೂ, ಷಡ್ಗುಣಪೂರ್ಣನೂ ಆದ ಪರಮಾತ್ಮನು ಜೀವನಿಗೆ ಸುಷುಪ್ತ್ಯವಸ್ಥೆಯನ್ನು ಕೊಟ್ಟು ತಾನು ಸುಪ್ತಿರಹಿತನಾಗಿ ಸುಪ್ತರನ್ನು ನೋಡುತ್ತಿರುತ್ತಾನೆ. ಬಳಿಕ ಆ ಜೀವನನ್ನು ತನ್ನ ಜೊತೆಗೆ ಕರೆದುಕೊಂಡು ಪುನಃ ಜಾಗ್ರದವಸ್ಥೆಯ ಸ್ಥಾನಕ್ಕೆ ಬರುತ್ತಾನೆ. ಜೀವನಿಗೆ ಅವನ ಪುಣ್ಯಫಲವಾಗಿ ಸ್ವರ್ಗವನ್ನಿತ್ತು ತಾನು ಸ್ವಕರ್ಮನಿರ್ಮಿತ ಸ್ವರ್ಗರಹಿತನಾಗಿ ಸ್ವರ್ಗವಾಸಿಗಳನ್ನು ನೋಡುತ್ತಿರುತ್ತಾನೆ. ಬಳಿಕ ಜೀವನ ಪುಣ್ಯ ತೀರಿದಾಗ ಅವನನ್ನು ಜೊತೆಗೆ ಕರೆದುಕೊಂಡು ಭೂಲೋಕಕ್ಕೆ ಬರುತ್ತಾನೆ. ಜೀವನಿಗೆ ಅವನ ಸಾಧನ ಪೂರ್ತಿಯಾದಾಗ ಮೋಕ್ಷವನ್ನಿತ್ತು ತಾನು ಸಂಸಾರಬಂಧ ಮೋಚನರೂಪವಾದ ಮುಕ್ತಿಯಿಂದ ರಹಿತನಾಗಿ ಅಂಥ ಮುಕ್ತಿಯಲ್ಲಿರುವ ಜೀವರನ್ನು ನೋಡುತ್ತಿರುತ್ತಾನೆ ಬಳಿಕ ಬೇರೆ ಸೃಜ್ಯ ಜೀವರನ್ನು ತನ್ನ ಜೊತೆಗೆ ಕರೆದುಕೊಂಡು ಸೃಷ್ಟಿಸ್ಥಾನಕ್ಕೆ ಬರುತ್ತಾನೆ.

**ಭಾಷ್ಯ—ಶುಕ್ರಂ ಜೀವಮಾದಾಯ ।**

**'ಶೋಕೇನ ರತ್ಯಾ ಯುಕ್ತತ್ವಾತ್ ಶುಕ್ರೋ ಜೀವ ಉದಾಹೃತಃ ।'**
**ಇತಿ ಚ ।**

**ರತ್ಯಾನಂದೌ ಪೂರ್ಣನಿತ್ಯೌ ಹಿತೌ ತೇನ ಹಿರಣ್ಮಯಃ ।**
**ಸ್ವರ್ಣವರ್ಣತಯಾ ವಾಽಪಿ ವಾಸುದೇವೋ ಹಿರಣ್ಮಯಃ ।**
**ಪ್ರಧಾನ ಹಂಸರೂಪತ್ವಾದೇಕಹಂಸ ಇತೀರಿತಃ । ಇತಿ ಚ ।**

**ಅನುವಾದ**—ಶುಕ್ರಮಾದಾಯ ಎಂದರೆ ಪರಮಾತ್ಮನು ಜೀವನನ್ನು ಕರೆದುಕೊಂಡು ಎಂದರ್ಥ. ಶುಕ್ ಶೋಕವನ್ನೂ, ರ ಸುಖವನ್ನೂ ಹೊಂದಿರುವುದರಿಂದ ಜೀವನಿಗೆ ಶುಕ್ರ ಎಂಬ ಹೆಸರಿದೆ ಎಂದೂ ಹೇಳಿದೆ. ಪೂರ್ಣವೂ ನಿತ್ಯವೂ ಆದ ರತಿ ಮತ್ತು ಆನಂದಗಳು ಪರಮಾತ್ಮನಲ್ಲಿ ಇವೆ. ಆದ್ದರಿಂದ ಅವನಿಗೆ ಹಿರಣ್ಮಯ ಎಂದು ಹೆಸರು. ಬಂಗಾರದ ಬಣ್ಣವುಳ್ಳವನಾದ್ದರಿಂದಲೂ ವಾಸುದೇವನಿಗೆ ಹಿರಣ್ಮಯ ಎಂದು ಹೆಸರು. ಶ್ರೇಷ್ಠಹಂಸರೂಪನಾದುದರಿಂದ ಏಕಹಂಸ ಎಂದು ಹೇಳಲ್ಪಟ್ಟಿದ್ದಾನೆ.

**ವಿವರಣೆ**—ವಾಯುದೇವರಿಗೂ ಒಂದು ಹಂಸರೂಪವಿದೆ. ಇಲ್ಲಿ ಪ್ರಸ್ತುತವಾಗಿರುವುದು ಪರಮಾತ್ಮನದೆ ಆದ ಬೇರೆ ಹಂಸರೂಪ ಎಂದು ತಿಳಿಸುವುದಕ್ಕಾಗಿ ಪ್ರಧಾನಹಂಸ ಎಂದು ಹೇಳಲಾಗಿದೆ.

**ಉಪನಿಷತ್—ಪ್ರಾಣೇನ ರಕ್ಷನ್ನವರಂ ಕುಲಾಯಂ**
**ಬಹಿಷ್ಕುಲಾಯಾದಮೃತಶ್ಚರಿತ್ವಾ ।**
**ಸ ಈಯತೇಽಮೃತೋ ಯತ್ರ ಕಾಮಂ**
**ಹಿರಣ್ಮಯಃ ಪುರುಷ ಏಕಹಂಸಃ ॥**

ಹಿರಣ್ಮಯನೂ, ಪೂರ್ಣಷಡ್ಗುಣನೂ, ಶ್ರೇಷ್ಠ ಹಂಸರೂಪನೂ, ಅಮೃತನೂ ಆದ ಪರಮಾತ್ಮನು ಕೆಲವೊಮ್ಮೆ ಮುಖ್ಯಪ್ರಾಣನಿಂದ ಮತ್ತು ಜೀವರ ಒಂದು ಅಂಶದಿಂದ ಕರ್ಮ ನಿರ್ಮಿತವಾದ ನಿಕೃಷ್ಟವಾದ ಅವರ ಸ್ಥೂಲ ಶರೀರವನ್ನು ರಕ್ಷಣೆ ಮಾಡಿಸುತ್ತಾ, ಜೀವನ ಇನ್ನೊಂದು ಅಂಶವನ್ನು ಶರೀರದ ಹೊರಗೆ ಕರೆದುಕೊಂಡು ಹೋಗಿ ಅಲ್ಲಿ ಸ್ವಪ್ನದರ್ಶನ ಮಾಡಿಸಿ ನೋಡುತ್ತಾನೆ. ಪುನಃ ಜೀವನ ಆ ಅಂಶವನ್ನು ಶರೀರದೊಳಗೆ ಕರೆದುಕೊಂಡು ಬರುತ್ತಾನೆ. ಎಲ್ಲಿ ವಿಷಯ ಪದಾರ್ಥಗಳು ಇವೆಯೋ ಅಲ್ಲಿ ಅವುಗಳ ಜ್ಞಾನವನ್ನು ಅಸ್ವತಂತ್ರನಾದ ಜೀವನು ಹೊಂದಬೇಕಾದರೆ ಸ್ವತಂತ್ರನಾದ ಇನ್ನೊಬ್ಬನು ಇರಲೇಬೇಕೆಂದು ಊಹೆಯಿಂದ ಸ್ವತಂತ್ರನಾದ ಶ್ರೀಹರಿಯು ತಿಳಿಯಲ್ಪಡುತ್ತಾನೆ.

**ಭಾಷ್ಯ—ಅಂಶೇನ ಜೀವಮಾದಾಯ ಕ್ವಚಿದೀಶೋ ಬಹಿರ್ನಯೇತ್ ।**
**ಸ್ವಪ್ನೇಷು ಫಲ್ಗುನಂ ಯದ್ವತ್ ಕೃಷ್ಣಃ ಕೈಲಾಸಮಾನಯತ್ ।**
**ವಾಸನಾರೂಪಕಾನ್ ಪ್ರಾಯಸ್ತ್ವಂತರೇವ ಪ್ರದರ್ಶಯೇತ್ ।**
**ಅತೋ ಬಹಿಷ್ಕುಲಾಯಾದಿತ್ಯಪಿ ವಾಙ್ ನ ವಿರುಧ್ಯತೇ । ಇತಿ ಚ ।**

**ಅನುವಾದ**—ಪರಮಾತ್ಮನು ಕೆಲವು ಸಂದರ್ಭಗಳಲ್ಲಿ ಸ್ವಪ್ನದಲ್ಲಿ ದೇವ ಋಷ್ಯಾದಿ ಉತ್ತಮ ಜೀವನನ್ನು ಒಂದು ಅಂಶದಿಂದ ಶರೀರದಿಂದ ಹೊರಗೆ ಕರೆದೊಯ್ಯುವನು, ಕೃಷ್ಣನು ಅರ್ಜುನನನ್ನು ಸ್ವಪ್ನದಲ್ಲಿ ಕೈಲಾಸಕ್ಕೆ ಕರೆದೊಯ್ದಂತೆ. ಸಾಮಾನ್ಯವಾಗಿ ವಾಸನಾಮಯವಾದ ಪದಾರ್ಥಗಳನ್ನು ಒಳಗೇ ತೋರಿಸುವನು. ಆದ್ದರಿಂದ ಶರೀರದ ಹೊರಗೆ ಎನ್ನುವ ಮಾತು ವಿರುದ್ಧವಲ್ಲ ಎಂದೂ ಹೇಳಿದೆ.

**ಉಪನಿಷತ್—ಸ್ವಪ್ನಾಂತ ಉಚ್ಚಾವಚಮೀಯಮಾನೋ**
**ರೂಪಾಣಿ ದೇವಃ ಕುರುತೇ ಬಹೂನಿ।**
**ಉತೇವ ಸ್ತ್ರೀಭಿಃ ಸಹ ಮೋದಮಾನೋ**
**ಜಕ್ಷದುತೇವಾಪಿ ಭಯಾನಿ ಪಶ್ಯನ್ ॥**

ದೇವನು ಸ್ವಪ್ನಸ್ಥಾನದಲ್ಲಿ ವಾಸನಾಮಯವಾದ ಆನೆ ಇರುವೆಗಳಂಥ ದೊಡ್ಡ ಸಣ್ಣ ವಸ್ತುಗಳನ್ನು ಪ್ರವೇಶಮಾಡಿ, ತನಗೆ ಬಹುರೂಪಗಳನ್ನು ಉಂಟು ಮಾಡು

ತ್ತಾನೆ. ಲಕ್ಷ್ಮೀ ರೂಪರಾದ ಸ್ತ್ರೀಯರ ಜೊತೆಗೆ ಸಂತೋಷ ಪಡುವವನಂತೆ ಕಾಣು ತ್ತಾನೆ. ಜೀವಾತ್ಮರ ಭಯವನ್ನು ನೋಡಿ ನಗುತ್ತಿರುವವನಂತೆಯೂ ಇರುತ್ತಾನೆ.

**ಭಾಷ್ಯ—ಉಚ್ಚಾವಚೇಷು ರೂಪೇಷು ಪ್ರವಿಶನ್ ಪುರುಷೋತ್ತಮಃ ।**
**ಬಹುರೂಪತ್ವಮಾಯಾತಿ ಸ್ವಪ್ನೇ ಸ ಜಗತಃ ಪ್ರಭುಃ । ಇತಿ ಚ ।**
**ನೋದರೂಪತ್ವತೋ ವಿಷ್ಣೋಃ ಸ್ತ್ರೀಭಿರ್ಮೋದೋ ವಿಡಂಬನಮ್ ।**

**ಅನುವಾದ**—ಜಗತ್ಪ್ರಭುವಾದ ಪುರುಷೋತ್ತಮನು ಸ್ವಪ್ನದಲ್ಲಿ ದೊಡ್ಡ ಸಣ್ಣ ವಸ್ತುಗಳಲ್ಲಿ ಪ್ರವೇಶಿಸಿ ಬಹುರೂಪಗಳನ್ನು ಹೊಂದುತ್ತಾನೆ ಎಂದೂ ಹೇಳಿದೆ. ವಿಷ್ಣು ಸುಖರೂಪನಾದುದರಿಂದ ಸ್ತ್ರೀಯರ ಜೊತೆಯಲ್ಲಿ ಸುಖಿಪಡುವುದು ಬರೀ ವಿಡಂಬನೆ.

**ಉಪನಿಷತ್—ಆರಾಮಮಸ್ಯ ಪಶ್ಯಂತಿ ನ ತಂ ಪಶ್ಯತಿ ಕಶ್ಚನ ಇತಿ । ತಂ ನಾಯತಂ ಬೋಧಯೇದಿತ್ಯಾಹುಃ । ದುರ್ಭಿಷಜ್ಯಂ ಹಾಸ್ಮೈ ಭವತಿ ಯಮೇಷ ನ ಪ್ರತಿಪದ್ಯತೇ । ಅಥೋ ಖಲ್ವಾಹುರ್ಜಾಗರಿತದೇಶ ಏವಾಸ್ಯೈಷ ಇತಿ । ಯಾನಿ ಹ್ಯೇವ ಜಾಗ್ರತ್ ಪಶ್ಯತಿ ತಾನಿ ಸುಪ್ತ ಇತಿ । ಅತ್ರಾಯಂ ಪುರುಷಃ ಸ್ವಯಂಜ್ಯೋತಿರ್ಭವತಿ । 'ಸೋಽಹಂ ಭಗವತೇ ಸಹಸ್ರಂ ದದಾಮಿ । ಅತ ಊರ್ಧ್ವಂ ವಿಮೋಕ್ಷಾಯ ಬ್ರೂಹೀ'ತಿ ।**

ಸ್ವಪ್ನದಲ್ಲಿ ಜೀವಾತ್ಮನು ಪರಮಾತ್ಮನಿಂದ ನಿರ್ಮಿಸಲ್ಪಟ್ಟ ವಾಸನಾಮಯ ವಸ್ತುಗಳನ್ನು ನೋಡುತ್ತಾನೆ. ಆ ಪರಮಾತ್ಮನನ್ನು ಯಾರೂ ನೋಡುವುದಿಲ್ಲ. ಜ್ಞಾನಕ್ಕಾಗಿ ಪ್ರಯತ್ನ ಮಾಡದ ಅಯೋಗ್ಯನಿಗೆ ಪರಮಾತ್ಮನ ಬಗ್ಗೆ ಉಪದೇಶ ಮಾಡಬಾರದೆಂದು ಜ್ಞಾನಿಗಳು ಹೇಳುತ್ತಾರೆ. ಏಕೆಂದರೆ ಪರಮಾತ್ಮನು ಯಾರಿಗೆ ತನ್ನ ಜ್ಞಾನವನ್ನು ಕೊಡುವುದಿಲ್ಲವೋ ಅವನ ದುರ್ಗತಿಗೆ ಪರಿಹಾರವೇ ಇಲ್ಲ ಎಂಬುದು ಪ್ರಸಿದ್ಧ. ಜೀವಾತ್ಮನ ಸ್ವಪ್ನ ಸುಷುಪ್ತಿ ಕಾಲವೂ ಕೂಡ ಪರಮಾತ್ಮನ ಎಚ್ಚರಿಕೆಯ ಕಾಲವೇ ಎಂದು ಜ್ಞಾನಿಗಳು ಹೇಳುತ್ತಾರೆ. ಏಕೆಂದರೆ ಜೀವಾತ್ಮರ ಎಚ್ಚರದ ಕಾಲದಲ್ಲಿ ಯಾವ ವಸ್ತು ಸಂಗತಿಗಳನ್ನು ನೋಡುತ್ತಾನೋ ಅದೆಲ್ಲವನ್ನೂ ಅವರ ಸ್ವಪ್ನ ಸುಷುಪ್ತಿ ಕಾಲಗಳಲ್ಲಿಯೂ ನೋಡುತ್ತಾನೆ. ಏಕೆಂದರೆ ಸ್ವತಃ ಸರ್ವಜ್ಞ ನಾಗಿದ್ದು ಜೀವಾತ್ಮರ ಈ ಅವಸ್ಥೆಗಳಲ್ಲಿಯೂ ಸ್ವಯಂಜ್ಯೋತಿ, ಅಂದರೆ ಜ್ಞಾನ ರೂಪನೇ ಆಗಿರುತ್ತಾನೆ. ಹೀಗೆ ಯಾಜ್ಞವಲ್ಕ್ಯರು ಉಪದೇಶಿಸಿದರು. 'ಪೂಜ್ಯ ರಾದ ತಮಗೆ ಸಾವಿರ ಆನೆ ಎತ್ತುಗಳನ್ನು ಗುರುದಕ್ಷಿಣೆಯನ್ನಾಗಿ ಕೊಡುತ್ತೇನೆ. ಇನ್ನು ಮುಂದೆಯೂ ಉತ್ತಮ ಮೋಕ್ಷಕ್ಕಾಗಿ ಹೆಚ್ಚಿನ ವಿಷಯಗಳನ್ನು ಉಪದೇಶಿಸಿರಿ' ಎಂದು ರಾಜನು ಯಾಜ್ಞವಲ್ಕ್ಯರನ್ನು ಪ್ರಾರ್ಥಿಸಿದನು.

**ಭಾಷ್ಯ—ಜೀವಸ್ಯ ಮೃತಿಕಾಲೇ ಚ ಸ್ವಪ್ನಕಾಲೇ ಚ ಕೇಶವಃ ।**
**ಏವಂವಿಧಾನಿ ಕರ್ಮಾಣಿ ಕುರ್ವಾಣೋಽಪಿ ನ ದೃಶ್ಯತೇ ।**
**ತಥಾ ಜಾಗರಿತೇ ಸುಪ್ತೌ ಮುಕ್ತೈರೇವ ತು ದೃಶ್ಯತೇ ।**

**ಅನುವಾದ**—ಜೀವಾತ್ಮರ ಮರಣಕಾಲದಲ್ಲಿಯೂ, ಸ್ವಪ್ನಕಾಲದಲ್ಲಿಯೂ, ಜಾಗ್ರತ್ತಿನಲ್ಲಿಯೂ, ಸುಪ್ತಿಯಲ್ಲಿಯೂ ಇಂತಹ ಕರ್ಮಗಳನ್ನು ಮಾಡುತ್ತಿದ್ದರೂ ಶ್ರೀಹರಿಯು ಅವರಿಗೆ ಗೋಚರನಾಗುವುದಿಲ್ಲ. ಮುಕ್ತರಿಗೆ ಮಾತ್ರ ಗೋಚರನಾಗುತ್ತಾನೆ.

**ಭಾಷ್ಯ—ತಥಾಪಿ ನಾಯತೇಭ್ಯಸ್ತಂ ಜ್ಞಾನೀ ಬ್ರೂಯಾದ್ ಜನಾರ್ದನಂ ।**
**ಯಸ್ಯ ಗೋಚರತಾಂ ವಿಷ್ಣುಃ ಕದಾಚಿನ್ನ ಪ್ರಪದ್ಯತೇ ।**
**ತಸ್ಯಾಯತಸ್ಯ ಪಾಪಸ್ಯ ಭೇಷಜಂ ನ ಹಿ ವಿದ್ಯತೇ ।**

**ಅನುವಾದ**—ಆದರೂ ಜ್ಞಾನಕ್ಕಾಗಿ ಪ್ರಯತ್ನ ಮಾಡದ ಅಯೋಗ್ಯ ಜೀವನಿಗೆ ಜ್ಞಾನಿಯು ಶ್ರೀಹರಿಯ ಬಗ್ಗೆ ಉಪದೇಶ ಮಾಡಬಾರದು. ವಿಷ್ಣು ಯಾರಿಗೆ ಒಮ್ಮೆಯಾದರೂ ತನ್ನ ಜ್ಞಾನವನ್ನು ಕೊಡುವುದಿಲ್ಲವೋ ಅಂತಹ ಪ್ರಯತ್ನ ಮಾಡದ ಪಾಪಿಗೆ ಅಜ್ಞಾನವನ್ನು ಪರಿಹರಿಸುವ ಔಷಧಿಯೇ ಇಲ್ಲ.

**ಭಾಷ್ಯ—ಸುಪ್ತಿಕಾಲೋಽಪ್ಯಯಂ ವಿಷ್ಣೋಃ ಸದಾ ಜಾಗರಿತಾತ್ಮಕಃ ।**
**ಯಾನಿ ಜಾಗರಿತೇ ಪಶ್ಯೇತ್ ತಾನಿ ಸುಪ್ತೇಽಪಿ ಪಶ್ಯತಿ ।**
**ನಿತ್ಯಜ್ಞಾನ ಸ್ವರೂಪತ್ವಾತ್ ಭಗವಾನ್ ಪುರುಷೋತ್ತಮಃ ।**

**ಅನುವಾದ**—ಷಡ್ಗುಣಸಂಪನ್ನನಾದ ವಿಷ್ಣು ನಿತ್ಯಜ್ಞಾನಸ್ವರೂಪನಾದುದರಿಂದ ಜೀವಾತ್ಮರ ಸ್ವಪ್ನ ಸುಷುಪ್ತಿಕಾಲವೂ ಅವನ ಜಾಗ್ರತ್ ಕಾಲವೇ ಆಗಿದೆ. ಜೀವಾತ್ಮನು ಜಾಗ್ರತ್ ಕಾಲದಲ್ಲಿ ಯಾವುದನ್ನು ನೋಡುವನೋ ಅದನ್ನು ಅವನ ಸ್ವಪ್ನ ಸುಷುಪ್ತಿ ಕಾಲದಲ್ಲಿಯೂ ಪರಮಾತ್ಮನು ನೋಡುತ್ತಾನೆ.

**ಭಾಷ್ಯ—ನಿತ್ಯಾನನ್ಯಪ್ರಕಾಶತ್ವೇಽಪ್ಯನ್ಯಜ್ಯೋತಿರ್ಯದಾ ಭವೇತ್ ।**
**ತದಾ ಸ್ಯಾತ್ ಸಂಶಯೋಽಜ್ಞಾನಾಮಿತ್ಯತ್ರೇತಿ ವಿಶೇಷಣಂ। ಇತಿ ಚ।**

**ಅನುವಾದ**—ಜೀವಾತ್ಮನಿಗೆ ಸರ್ವಕಾಲದಲ್ಲೂ ವಿಷ್ಣು ಒಬ್ಬನೇ ಸ್ವತಂತ್ರ ಜ್ಞಾನದಾತ. ಆದ್ದರಿಂದ ಸ್ವಪ್ನ ಸುಷುಪ್ತಿಗಳಲ್ಲಿ ಜ್ಞಾನದಾತ ಎಂದು ವಿಶೇಷವಾಗಿ ಹೇಳಬೇಕಿಲ್ಲ. ಆದರೆ ಬೇರೆ ಸಮಯದಲ್ಲಿ ಆದಿತ್ಯ ಮೊದಲಾದವರು ಜ್ಞಾನದಾತರಾಗಿರುತ್ತಾರೆ. ಆಗ ಸ್ವತಂತ್ರ ಜ್ಞಾನದಾತ ವಿಷ್ಣುವೆಂಬುದರ ಅಜ್ಞಾನವಾಗಲಿ, ಸ್ವತಂತ್ರಜ್ಞಾನದಾತ ವಿಷ್ಣುವೋ ಅಥವಾ ಆದಿತ್ಯಾದಿಗಳೋ ಎಂಬ

ಸಂಶಯವಾಗಲಿ, ಆದಿತ್ಯಾದಿಗಳೇ ಸ್ವತಂತ್ರ ಜ್ಞಾನದಾತರೆಂಬ ಭ್ರಮೆಯಾಗಲೀ ಅಜ್ಞಾನಿಗಳಿಗೆ ಉಂಟಾಗಬಹುದು. 'ಅತ್ರ'' ಸ್ವಪ್ನ ಸುಷುಪ್ತಿಗಳಲ್ಲಿ' ಎಂದು ವಿಶೇಷಣ ಕೊಟ್ಟು ಹೇಳಿರುವುದರಿಂದ ಆ ಕಾಲಗಳಲ್ಲಿ ಬೇರೆ ಜ್ಞಾನದಾತರೆ ಇಲ್ಲದಿರುವುದರಿಂದ ವಿಷ್ಣು ಒಬ್ಬನೇ ಎಲ್ಲ ಕಾಲದಲ್ಲಿಯೂ ಸ್ವತಂತ್ರ ಜ್ಞಾನದಾತ ಎಂದು ಅರ್ಥವಾಗುತ್ತದೆ. ಆದ್ದರಿಂದ ವಿಶೇಷಣವು ಸಾರ್ಥಕ ಎಂದೂ ಹೇಳಲಾಗಿದೆ.

**ಭಾಷ್ಯ—ಜೀವಸ್ಯಾಪಿ ಸ್ವಪ್ನಾವಸ್ಥಾಯಾಂ ಜಾಗರಿತತ್ವೇಽಸ್ಯೇತಿ ವಿಶೇಷಣಂ ವ್ಯರ್ಥವ್‌। ಪೂರ್ವೋಕ್ತಮಪಿ ಮೋಕ್ಷಾಯೈವ ಭವತಿ। ಅತ ಊರ್ಧ್ವಂ ವಿಶಿಷ್ಟ ಮೋಕ್ಷಾಯ ಬ್ರೂಹಿ ।**

**ಸ್ವಯೋಗ್ಯಭಗವದ್ದೃಷ್ಟೇಃ ಸರ್ವೈರ್ಮುಕ್ತಿರವಾಪ್ಯತೇ ।**
**ಪುನರ್ಜ್ಞಾನಾಂತರಾಧಿಕ್ಯಾತ್ ಸುಖಾಧಿಕ್ಯಂ ವಿಮೋಕ್ಷಗಂ ।**
**ಇತಿ ಬ್ರಹ್ಮತರ್ಕೇ ।**

**ಸ್ವಪ್ನಸುಷುಪ್ತ್ಯುಭಯಾಭಿಪ್ರಾಯೇಣ 'ತಾನಿ ಸುಪ್ತೇ' ಇತ್ಯುಕ್ತಮ್ ।**

**ಅನುವಾದ**—ಸ್ವಪ್ನದಲ್ಲಿ ಪರಮಾತ್ಮನಂತೆ ಜೀವನೂ ಎಚ್ಚರವಾಗಿದ್ದರೆ 'ಜಾಗರಿತದೇಶ ಏವಾಸ್ಯೈಷಃ' ಈ ಜೀವನಿಗೆ ಇದು ಜಾಗ್ರತ್ಕಾಲ ಎಂದು ಪರಮಾತ್ಮ ವ್ಯಾವರ್ತಕವಾದ ವಿಶೇಷಣವು ವ್ಯರ್ಥವಾದೀತು. ಜೀವನು ಎಚ್ಚರವಾಗಿಲ್ಲ ಎಂಬ ನಮ್ಮ ಪಕ್ಷದಲ್ಲಿ ಜೀವವ್ಯಾವರ್ತಕವಾಗಿ 'ಅಸ್ಯ' ಪರಮಾತ್ಮನಿಗೆ ಎಂಬ ವಿಶೇಷಣ ಸಾರ್ಥಕ. ಹಿಂದೆ ಹೇಳಲ್ಪಟ್ಟ ವಿಷಯಗಳೆಲ್ಲ ಮೋಕ್ಷಸಾಧನವೇ. ಆದರೆ, ವಿಮೋಕ್ಷಾಯ ಅಂದರೆ ಉತ್ತಮ ಮೋಕ್ಷಕ್ಕಾಗಿ ಹೆಚ್ಚಿನ ವಿಷಯವನ್ನು ಉಪದೇಶಿಸಿರಿ ಎಂಬುದು ಅತ ಊರ್ಧ್ವಂ ವಿಮೋಕ್ಷಾಯ ಬ್ರೂಹಿ ಎಂಬ ವಾಕ್ಯದ ಅಭಿಪ್ರಾಯ. ಎಲ್ಲರೂ ತಮಗೆ ಯೋಗ್ಯವಾದ ಭಗವದ್ರೂಪದ ಸಾಕ್ಷಾತ್ಕಾರದಿಂದ ಮೋಕ್ಷವನ್ನು ಪಡೆಯುತ್ತಾರೆ. ಮತ್ತೆ ಇನ್ನೂ ಹೆಚ್ಚು ಜ್ಞಾನದಿಂದ ಹೆಚ್ಚು ಸುಖವು ಮೋಕ್ಷದಲ್ಲಿ ಲಭಿಸುತ್ತದೆ. ಇದೇ ವಿಮೋಕ್ಷ ಅಂದರೆ ಉತ್ತಮ ಮೋಕ್ಷ ಎಂದು ಬ್ರಹ್ಮತರ್ಕದಲ್ಲಿ ಹೇಳಿದೆ. ಯಾನಿ ಹ್ಯೇವ ಜಾಗ್ರತ್ ಪಶ್ಯತಿ ತಾನಿ ಸುಪ್ತೇ ಎಂಬಲ್ಲಿ ಸುಪ್ತಪದಕ್ಕೆ ಸ್ವಪ್ನ ಮತ್ತು ಸುಷುಪ್ತಿಗಳೆರಡೂ ವಿವಕ್ಷಿತವಾಗಿವೆ. ಇಲ್ಲದಿದ್ದರೆ ಸುಪ್ತಿಕಾಲ ಮಾತ್ರವೇ ಪರಮಾತ್ಮನಿಗೆ ಜಾಗ್ರತ್ಕಾಲ ಎಂದಾದೀತು.

**ಉಪನಿಷತ್–ಸ ವಾ ಏಷ ಏತಸ್ಮಿನ್ ಸಂಪ್ರಸಾದೇ ರತ್ವಾ ಚರಿತ್ವಾ ದೃಷ್ಟ್ವೈವ ಪುಣ್ಯಂ ಚ ಪಾಪಂ ಚ ಪುನಃ ಪ್ರತಿನ್ಯಾಯಂ ಪ್ರತಿಯೋನಿ ಆದ್ರವತಿ ಸ್ವಪ್ನಾಯೈವ । ಸ ಯತ್ ತತ್ರ ಕಿಂಚಿತ್ ಪಶ್ಯತಿ ಅನನ್ವಾಗತಸ್ತೇನ**

**ಭವತಿ । ಅಸಂಗೋ ಹ್ಯಯಂ ಪುರುಷ ಇತಿ । ಏವಂ ಏವೈತದ್ ಯಾಜ್ಞವಲ್ಕ್ಯ । ಸೋಽಹಂ ಭಗವತೇ ಸಹಸ್ರಂ ದದಾಮಿ । ಅತ ಊರ್ಧ್ವಂ ವಿಮೋಕ್ಷಾಯೈವ ಬ್ರೂಹೀತಿ ।**

ಈ ಪರಮಾತ್ಮನೇ ಜೀವಾತ್ಮನ ಸುಷುಪ್ತಿಕಾಲದಲ್ಲಿ ವಿಹರಿಸಿ ಅವನ ಪುಣ್ಯ-ಪಾಪಗಳನ್ನು ಕೇವಲ ನೋಡುತ್ತಾ ಸಂಚರಿಸಿ ಪುನಃ ಪ್ರತಿಬಾರಿಯೂ ಪ್ರತಿಯೊಬ್ಬ ಜೀವನಿಗೂ ಸ್ವಪ್ನವುಂಟುಮಾಡುವುದಕ್ಕಾಗಿ ಸ್ವಪ್ನಸ್ಥಾನಕ್ಕೆ ಹೋಗುತ್ತಾನೆ. ಪರಮಾತ್ಮನು ಸುಷುಪ್ತಿ ಕಾಲದಲ್ಲಿ ಜೀವನ ಯಾವ ಪುಣ್ಯ ಪಾಪಗಳನ್ನು ನೋಡುತ್ತಾನೋ ಅವುಗಳ ಫಲಲೇಪವು ಅವನಿಗೆ ಆಗುವುದಿಲ್ಲ. ಅವನು ಅಸಂಗ. ಜೀವನ ಪಾಪ ಕರ್ಮದ ಫಲ ಸಂಸರ್ಗ ಅವನಿಗಿಲ್ಲ. ಜನಕನು ಹೇಳಿದನು 'ಯಾಜ್ಞವಲ್ಕ್ಯರೇ ನೀವು ಹೇಳಿದ್ದು ಸರಿ. ನಾನು ಪೂಜ್ಯರಾದ ನಿಮಗೆ ಸಹಸ್ರ ಆನೆ ಎತ್ತುಗಳನ್ನು ಗುರುದಕ್ಷಿಣೆಯಾಗಿ ಕೊಡುತ್ತೇನೆ. ಇನ್ನೂ ಹೆಚ್ಚಿನ ವಿಷಯವನ್ನು ಉತ್ತಮ ಮೋಕ್ಷಕ್ಕಾಗಿ ಹೇಳಿರಿ'.

**ಭಾಷ್ಯ—ತತ್ರ ಸುಷುಪ್ತಿ ಮಾತ್ರಾಭಿಪ್ರಾಯೇಣ ಸ ವಾ ಏಷ ಏತಸ್ಮಿನ್ ಸಂಪ್ರಸಾದೇ ಇತ್ಯಾಹ ।**

**ಯತ್ರೋಭಯವಿವಕ್ಷಾ ಸ್ಯಾತ್ ಪರಾಮರ್ಶಸ್ತದೋಭಯೋಃ ।**
**ಏಕಸ್ಯಾಪಿ ಭವೇನ್ನೈಕವಿವಕ್ಷಾಯಾಂ ಕ್ವಚಿದ್ ದ್ವಯೋಃ ।**
**ಇತಿ ಶಬ್ದನಿರ್ಣಯೇ ।**

**ಅನುವಾದ**—ಯಾನಿ ಹ್ಯೇವ ಜಾಗ್ರತ್ ಪಶ್ಯತಿ ಎಂಬಲ್ಲಿ ಸ್ವಪ್ನ ಸುಷುಪ್ತಿಗಳೆರಡೂ ಪ್ರಸ್ತುತವಾಗಿದ್ದರೂ ಸ ವಾ ಏಷ ಏತಸ್ಮಿನ್ ಸಂಪ್ರಸಾದೇ ರತ್ವಾ ಎಂಬಲ್ಲಿ ಸಂಪ್ರಸಾದ ಪದದಿಂದ ಎರಡನ್ನೂ ಗ್ರಹಿಸಲು ಬಾಧಕವಿದೆ. ಸಂಪ್ರಸಾದೇ ರತ್ವಾ ಸ್ವಪ್ನಾಯೈ ವಾ ದ್ರವತಿ, ಸುಷ್ತಿಯಲ್ಲಿ ವಿಹರಿಸಿ, ಸ್ವಪ್ನಸ್ಥಾನಕ್ಕೆ ಬರುತ್ತಾನೆ ಎಂದು ಹೇಳುವಾಗ ಸುಷ್ತಿಯ ಜೊತೆಗೆ ಸ್ವಪ್ನವನ್ನು ಗ್ರಹಿಸಲಾಗದು. ಆದರಿಂದ ಕೇವಲ ಸುಷುಪ್ತಿಕಾಲದಲ್ಲಿ ಎಂಬ ಅಭಿಪ್ರಾಯವೇ ಸ ವಾ ಏಷ ಏತಸ್ಮಿನ್ ಸಂಪ್ರಸಾದೇ ಎಂಬ ವಾಕ್ಯಕ್ಕೆ ಇದೆ ಎನ್ನಬೇಕು. 'ಎಲ್ಲಿ ಪ್ರಸ್ತುತವಾದ ಎರಡು ವಿಷಯಗಳನ್ನು ಹೇಳಲು ಬಾಧಕವಿಲ್ಲದುದರಿಂದ ಎರಡನ್ನೂ ಹೇಳುವ ವಿವಕ್ಷೆ ಇರುತ್ತದೆಯೋ ಅಲ್ಲಿ ಎರಡನ್ನೂ ಗ್ರಹಿಸಬೇಕು. ಎರಡನ್ನೂ ಗ್ರಹಿಸಲು ಬಾಧಕವಿರುವುದರಿಂದ ಒಂದನ್ನೇ ಹೇಳುವ ವಿವಕ್ಷೆ ಇರುವಾಗ ಒಂದನ್ನೇ ಗ್ರಹಿಸಬೇಕು. ಒಂದನ್ನೇ ಹೇಳುವ ವಿವಕ್ಷೆ ಇದ್ದಾಗ ಎರಡನ್ನು ಗ್ರಹಿಸಲೇಬಾರದು ಎಂದು ಶಬ್ದನಿರ್ಣಯದಲ್ಲಿ ಹೇಳಲಾಗಿದೆ.

**ಉಪನಿಷತ್—ಸ ವಾ ಏಷ ಏತಸ್ಮಿನ್ ಸ್ವಪ್ನಾಂತೇ ರತ್ವಾ ಚರಿತ್ವಾ ದೃಷ್ಟ್ವೈವ**

**ಪುಣ್ಯಂ ಚ ಪಾಪಂ ಚ ಪುನಃ ಪ್ರತಿನ್ಯಾಯಂ ಪ್ರತಿಯೋನ್ಯಾದ್ರವತಿ ಬುದ್ಧಾಂತಾಯ್ಯೆವ । ಸ ಯತ್ ತತ್ರ ಕಿಂಚಿತ್ ಪಶ್ಯತಿ ಅನನ್ವಾಗತಸ್ತೇನ ಭವತಿ । ಅಸಂಗೋ ಹ್ಯಯಂ ಪುರುಷ ಇತಿ । ಏವಂ ಏವೈತದ್ ಯಾಜ್ಞವಲ್ಕ್ಯ । ಸೋಽಹಂ ಭಗವತೇ ಸಹಸ್ರಂ ದದಾಮಿ । ಅತ ಊರ್ಧ್ವಂ ವಿಮೋಕ್ಷಾಯ್ಯೆವ ಬ್ರೂಹೀತಿ ।**

ಈ ಪರಮಾತ್ಮನೇ ಜೀವಾತ್ಮನ ಸ್ವಪ್ನಸ್ಥಾನದಲ್ಲಿ ವಿಹರಿಸಿ, ಅವನ ಪುಣ್ಯ ಪಾಪಗಳನ್ನು ಕೇವಲ ನೋಡುತ್ತ ಸಂಚರಿಸಿ ಪುನಃ ಪ್ರತಿ ಬಾರಿಯೂ ಪ್ರತಿಯೊಬ್ಬ ಜೀವನಿಗೂ ಎಚ್ಚರ ಉಂಟುಮಾಡುವುದಕ್ಕಾಗಿ ಜಾಗ್ರತ್ ಸ್ಥಾನಕ್ಕೆ ಹೋಗುತ್ತಾನೆ. ಪರಮಾತ್ಮನು ಸ್ವಪ್ನಕಾಲದಲ್ಲಿ ಜೀವನ ಯಾವ ಪುಣ್ಯ ಪಾಪಗಳನ್ನು ನೋಡುತ್ತಾನೋ ಅವುಗಳ ಫಲಲೇಪವು ಅವನಿಗೆ ಆಗುವುದಿಲ್ಲ. ಏಕೆಂದರೆ ಅವನು ಅಸಂಗ, ಜೀವ ಕೃತಪಾಪ ಫಲ ಸಂಸರ್ಗವಿಲ್ಲದವ. ಜನಕನು ಹೇಳಿದನು 'ಯಾಜ್ಞವಲ್ಕ್ಯರೇ, ನೀವು ಹೇಳಿದ್ದು ಸರಿ. ನಾನು ಪೂಜ್ಯರಾದ ನಿಮಗೆ ಸಹಸ್ರ ಆನೆ ಎತ್ತುಗಳನ್ನು ಗುರುದಕ್ಷಿಣೆಯಾಗಿ ಕೊಡುತ್ತೇನೆ. ಇನ್ನೂ ಹೆಚ್ಚಿನ ವಿಷಯವನ್ನು ಉತ್ತಮ ಮೋಕ್ಷಕ್ಕಾಗಿ ಹೇಳಿರಿ'.

**ಭಾಷ್ಯ—ಸ್ವಪ್ನಾಖ್ಯೋಽಂತಃ ಸ್ಥಾನಂ ಸ್ವಪ್ನಾಂತಮ್ ।**

**'ಅಂತಃ ಸ್ಥಾನಂ ಸ್ಥಲಂ ವಾಸಃ ಪ್ರದೇಶ ಇತಿ ಚೋಚ್ಯತೇ ।' ಇತಿ ಚ। ಸ್ವಪ್ನಾಂತಂ ಚ ಬುದ್ಧಾಂತಂ ಚ ಇತ್ಯತ್ರಾಪಿ ಸ್ವಪ್ನಾಂತ ಶಬ್ದಃ ಸ್ವಪ್ನ ಸುಷುಪ್ತ್ಯುಭಯಾಭಿಪ್ರಾಯೇಣ ।**

**ಅನುವಾದ**—'ಸ್ವಪ್ನ' ಸ್ವಪ್ನ ಎಂಬ 'ಅಂತ' ಸ್ಥಾನವೇ ಸ್ವಪ್ನಾಂತ. 'ಅಂತ, ಸ್ಥಾನ, ಸ್ಥಲ, ವಾಸ, ಪ್ರದೇಶ ಇವುಗಳೆಲ್ಲವೂ ಸ್ಥಾನವಾಚಕಗಳು' ಎಂದು ಶಬ್ದ ನಿರ್ಣಯದಲ್ಲಿ ಹೇಳಲ್ಪಟ್ಟಿದೆ. ಸ್ವಪ್ನಾಂತಂ ಚ ಬುದ್ಧಾಂತಂ ಚ ಎನ್ನುವಲ್ಲಿಯೂ ಸ್ವಪ್ನಾಂತ ಶಬ್ದವು ಸ್ವಪ್ನ ಸುಷುಪ್ತಿಗಳೆರಡನ್ನೂ ಹೇಳುವ ಅಭಿಪ್ರಾಯವುಳ್ಳದ್ದು.

**ಉಪನಿಷತ್—ಸ ವಾ ಏಷ ಏತಸ್ಮಿನ್ ಬುದ್ಧಾಂತೇ ರತ್ವಾ ಚರಿತ್ವಾ ದೃಷ್ಟ್ವೈವ ಪುಣ್ಯಂ ಚ ಪಾಪಂ ಚ ಪುನಃ ಪ್ರತಿನ್ಯಾಯಂ ಪ್ರತಿಯೋನ್ಯಾ ದ್ರವತಿ ಸ್ವಪ್ನಾಂತಾಯ್ಯೆವ । ತದ್ ಯಥಾ ಮಹಾಮತ್ಸ್ಯ ಉಭೇ ಕೂಲೇ ಅನು ಸಂಚರತಿ ಪೂರ್ವಂ ಚಾಪರಂ ಚ ಏವಮೇವಾಯಂ ಪುರುಷ ಏತಾವುಭಾವನು ಸಂಚರತಿ ಸ್ವಪ್ನಾಂತಂ ಚ ಬುದ್ಧಾಂತಂ ಚ ।**

ಈ ಪರಮಾತ್ಮನೇ ಜೀವಾತ್ಮನ ಜಾಗ್ರತ್ ಸ್ಥಾನದಲ್ಲಿ ವಿಹರಿಸಿ, ಅವನ ಪುಣ್ಯ

ಪಾಪಗಳನ್ನು ಕೇವಲ ನೋಡುತ್ತಾ ಸಂಚರಿಸಿ ಪ್ರತಿ ಬಾರಿಯೂ ಪ್ರತಿಯೊಬ್ಬ ಜೀವನಿಗೂ ಸುಷುಪ್ತಿ ಉಂಟುಮಾಡುವುದಕ್ಕಾಗಿ ಸುಷುಪ್ತಿಸ್ಥಾನಕ್ಕೆ ಹೋಗುತ್ತಾನೆ. ದೊಡ್ಡ ಮೀನು ನದಿಯ ಎಡ ಬಲ ಎಂದು ಎರಡೂ ದಡಗಳಲ್ಲಿ ಹೇಗೆ ಸಂಚರಿಸುವುದೋ ಅಂತೆಯೇ ಈ ಪರಮಾತ್ಮನು ಸ್ವಪ್ನ ಸುಷುಪ್ತಿಗಳೆಂದೂ, ಎಚ್ಚರವೆಂದೂ ಎರಡು ಸ್ಥಾನಗಳಲ್ಲಿ ನಿರ್ಲಿಪ್ತನಾಗಿ ಸಂಚರಿಸುತ್ತಾನೆ.

**ಭಾಷ್ಯ—ಶುಭಾಶುಭಂ ತು ದೃಷ್ಟ್ವೈವ ಸ್ವಪ್ನೇ ಜಾಗರಿತೇಽಪಿ ಚ |**
**ಅಸಂಸ್ಪೃಷ್ಟಃ ಸದಾ ದುಃಖೈಶ್ಚರತೀಶಃ ಪುನಃ ಪುನಃ |**
**ಸ್ವಪ್ನಸುಪ್ತ್ಯಾತ್ಮಕಂ ಕೂಲಮೇಕಂ ಬುದ್ಧ್ಯಾತ್ಮಕಂ ಪರಮ್ |**
**ಮಹಾಮತ್ಸ್ಯ ಇವಾಸಂಗೀ ಚರತ್ಯೇಕೋ ಜನಾರ್ದನಃ |**

**ಅನುವಾದ**—ಪರಮಾತ್ಮನು ಸ್ವಪ್ನ ಸುಷುಪ್ತಿ ಮತ್ತು ಜಾಗ್ರತ್ ಸ್ಥಿತಿಗಳಲ್ಲಿ ಜೀವರ ಪುಣ್ಯ ಪಾಪಗಳನ್ನು ನೋಡುತ್ತಾ ಎಂದೂ ದುಃಖಿಗಳ ಸಂಪರ್ಕರಹಿತನಾಗಿ ಸ್ವಪ್ನ ಸುಷುಪ್ತಿ ಎಂಬ ಒಂದು ದಡದಲ್ಲಿಯೂ, ಎಚ್ಚರ ಎಂಬ ಇನ್ನೊಂದು ದಡದಲ್ಲೂ ದೊಡ್ಡ ಮೀನಿನಂತೆ ಸಂಗ ರಹಿತನಾಗಿ ಒಬ್ಬನೇ ಪುನಃ ಪುನಃ ಸಂಚರಿಸುತ್ತಾನೆ.

**ಸುಷುಪ್ತಿ-ಮುಕ್ತಿಗಳಲ್ಲಿ ದುಃಖವಿಲ್ಲ :**

**ಉಪನಿಷತ್—ತದ್ಯಥಾಽಸ್ಮಿನ್ನಾಕಾಶೇ ಶ್ಯೇನೋ ವಾ ಸುಪರ್ಣೋ ವಾ ವಿಪರಿಪತ್ಯ ಶ್ರಾಂತಃ ಸಂಹತ್ಯ ಪಕ್ಷೌ ಸಂಲಯಾಯೈವ ಧ್ರಿಯತೇ ಏವ-ಮೇವಾಯಂ ಪುರುಷ ಏತಸ್ಮಾ ಅಂತಾಯ ಧಾವತಿ ಯತ್ರ ಸುಪ್ತೋ ನ ಕಂಚನ ಕಾಮಂ ಕಾಮಯತೇ ನ ಕಂಚನ ಸ್ವಪ್ನಂ ಪಶ್ಯತಿ |**

ಗಿಡುಗ ಅಥವಾ ಪದ್ದು ಆಕಾಶದಲ್ಲಿ ಅಲೆದು ಬಳಲಿ ರೆಕ್ಕೆಗಳನ್ನು ಮಡಿಸಿ ಶ್ರಮ ಪರಿಹಾರಸ್ಥಾನವಾದ ತನ್ನ ಗೂಡಿಗೆ ಹೋಗುತ್ತದೆ. ಅಂತೆಯೇ ಈ ಜೀವಾತ್ಮನು ಜಾಗರ ಸ್ವಪ್ನಗಳಲ್ಲಿ ತಿರುಗಿ ಆಯಾಸಗೊಂಡು, ಆಯಾಸಪರಿಹಾರಕ್ಕಾಗಿ ಎಲ್ಲಿ ಆನಂದರೂಪನಾದ ವಿಷ್ಣುವನ್ನು ಹೊಂದಿ ಯಾವ ವಿಷಯ ಪದಾರ್ಥವನ್ನೂ ಬಯಸುವುದಿಲ್ಲವೋ, ಸ್ವಪ್ನದಂಥ ಯಾವ ಭ್ರಮಕ್ಕೂ ಒಳಗಾಗುವುದಿಲ್ಲವೋ ಅಂಥ ಸುಪ್ತಿ ಸ್ಥಾನದ ಕಡೆಗೆ ಧಾವಿಸುತ್ತಾನೆ.

ಅಜ್ಞಾನರೂಪ ಸುಪ್ತಿಯಲ್ಲಿಯೇ ವಿಷ್ಣುಪ್ರಾಪ್ತಿ ಪ್ರಯುಕ್ತವಾಗಿ ದುಃಖವಿಲ್ಲವೆಂದಮೇಲೆ ಜ್ಞಾನದಿಂದ ವಿಷ್ಣುವನ್ನು ಹೊಂದುವ ಮುಕ್ತಿಯಲ್ಲಿ ದುಃಖವಿರಬಹುದೆ? ಆದ್ದರಿಂದ ಸಂಸಾರದಲ್ಲಿ ತಿರುಗಿ ಬಳಲಿದ ಜೀವನು ಆಯಾಸ ಪರಿಹಾರಕ್ಕಾಗಿ ಆನಂದರೂಪನಾದ ವಿಷ್ಣುವಿರುವ ಮೋಕ್ಷದ ಕಡೆಗೂ ಧಾವಿಸುತ್ತಾನೆ.

**ಭಾಷ್ಯ—ಯಂ ವಿಷ್ಣುಂ ಶ್ಯೇನವಚ್ಛ್ರಾಂತೋ ಜೀವೋ ಜಾಗರಿತೇ ಭ್ರಮನ್।**
**ಸ್ವಪ್ನೇ ಚ ಸುಪ್ತಾವಭ್ಯೇತಿ ಸಂಶ್ರಾಂತಃ ಸದ್ಗೃಹಂ ಯಥಾ ।**
**ಸ್ವಿತ್ಯಾನಂದಃ ಪರೋ ವಿಷ್ಣುಸ್ತಮಾಪ್ತಃ ಸುಪ್ತ ಉಚ್ಯತೇ ।**
**ಸಂಪ್ರಾಪ್ಯ ತಮಯಂ ಜೀವಃ ಕಾಮಯೇನ್ನೈವ ಕಿಂಚನ।**
**ನ ಚ ಸ್ವಪ್ನಸಮಭ್ರಾಂತಿಜ್ಞಾನಂ ಯಾತಿ ಕದಾಚನ ।**
**ಸುಷುಪ್ತೌ ಚ ಕಿಮು ಜ್ಞಾನಾನ್ಮುಕ್ತೌ ಪ್ರಾಪ್ತೋ ಜನಾರ್ದನಂ ।**

**ಅನುವಾದ**—ಆಕಾಶದಲ್ಲಿ ಸಂಚರಿಸಿ ದಣಿದ ಗಿಡುಗನು ಗೂಡಿಗೆ ಮರಳು ವಂತೆ ಜಾಗ್ರತ್ ಸ್ವಪ್ನಗಳಲ್ಲಿ ಅಲೆದು ದಣಿದ ಜೀವನು ಸುಷುಪ್ತಿಯಲ್ಲಿ ವಿಷ್ಣುವನ್ನು ಹೊಂದುತ್ತಾನೆ. ಸು ಎಂದರೆ ಆನಂದರೂಪನಾದ ಸರ್ವೋತ್ತಮನಾದ ವಿಷ್ಣು. ಅವನನ್ನು ಪ್ತ ಹೊಂದಿದವನು ಸುಪ್ತ. ವಿಷ್ಣುವನ್ನು ಹೊಂದಿದ ಜೀವನು ಯಾವ ಭೋಗ ಪದಾರ್ಥವನ್ನೂ ಬಯಸುವುದಿಲ್ಲ. ಸ್ವಪ್ನ ಸಮವಾದ ಭ್ರಾಂತಿಯನ್ನೂ ಹೊಂದುವುದಿಲ್ಲ. ಅಜ್ಞಾನದಿಂದ ಸುಷುಪ್ತಿಯಲ್ಲಿ ವಿಷ್ಣು ಪ್ರಾಪ್ತಿಯಾದರೂ ದುಃಖ ವಿಲ್ಲವೆಂದ ಮೇಲೆ, ಜ್ಞಾನದಿಂದ ಜನಾರ್ದನನನ್ನು ಹೊಂದಿದವನು ಮುಕ್ತಿಯಲ್ಲಿ ದುಃಖವನ್ನೂ, ಭ್ರಾಂತಿಯನ್ನೂ ಹೊಂದುವುದಿಲ್ಲವೆಂದು ಬೇರೆ ಹೇಳಬೇಕೆ ?

**ಉಪನಿಷತ್—ತಾ ವಾ ಅಸ್ಯೈತಾ ಹಿತಾ ನಾಮ ನಾಡ್ಯೋ ಯಥಾ ಕೇಶಃ ಸಹಸ್ರಧಾ ಭಿನ್ನಸ್ತಾವತಾಽಣಿಮ್ನಾ ತಿಷ್ಠಂತಿ।ಶುಕ್ಲಸ್ಯ ನೀಲಸ್ಯ ಪಿಂಗಲಸ್ಯ ಹರಿತಸ್ಯ ಲೋಹಿತಸ್ಯ ಪೂರ್ಣಾಃ। ಅಥ ಯತ್ರೈನಂ ಘ್ನಂತೀವ । ಜಿನಂತೀವ । ಹಸ್ತೀವ। ವಿಚ್ಛಾಯಯತಿ । ಗರ್ತಮಿವ ಪತತಿ । ಯದೇವ ಜಾಗ್ರದ್ ಭಯಂ ಪಶ್ಯತಿ ತದತ್ರಾವಿದ್ಯಯಾ ಮನ್ಯತೇ । ಅಥ ಯತ್ರ ದೇವ ಇವ ರಾಜೇವಾಹಮೇವೇದಂ ಸರ್ವೋಽಸ್ಮೀತಿ ಮನ್ಯತೇ। ಸೋಽಸ್ಯ ಪರಮೋ ಲೋಕಃ ।**

ಈ ಜೀವಾತ್ಮನ ಶರೀರದಲ್ಲಿ ಹಿತಾ ಎಂಬ ನಾಡಿಗಳು ಸಾವಿರ ಭಾಗವಾಗಿ ಸೀಳಿದ ಕೇಶದಂತೆ ಸೂಕ್ಷ್ಮವಾಗಿ ವ್ಯಾಪಿಸಿವೆ. ಬಿಳಿ, ನೀಲ, ಕಂದು, ಹಸಿರು, ಕೆಂಪು ಬಣ್ಣದ ಭಗವದ್ರೂಪಗಳು ಈ ನಾಡಿಗಳಲ್ಲಿ ಸನ್ನಿಹಿತವಾಗಿರುವುದರಿಂದ ಹಿತಾ ಎನಿಸಿವೆ. ಸುಷುಮ್ನಾನಾಡಿ ಇವುಗಳಲ್ಲಿ ಒಂದು. ಇಲ್ಲಿ ಜೀವನು ಬಂದಾಗ ಸುಷುಪ್ತಿಯನ್ನು ಹೊಂದುತ್ತಾನೆ. ಕಂಠದಲ್ಲಿರುವ ನಾಡಿಗಳಲ್ಲಿ ಜೀವನು ಬಂದಾಗ ಸ್ವಪ್ನದಲ್ಲಿ ಬೇರೆಯವರು ತನ್ನನ್ನು ಕೊಲ್ಲುವಂತೆಯೂ, ಹೊಡೆಯುವಂತೆಯೂ ಕಾಣುತ್ತಾನೆ. ಕೆಲವೊಮ್ಮೆ ತಾನೇ ಆನೆಯೆಂದು ತಿಳಿಯುತ್ತಾನೆ. ಯಾರೋ ತನ್ನನ್ನು ಭಯಪಡಿಸಿ

ಕಾಂತಿಹೀನನನ್ನಾಗಿ ಮಾಡುತ್ತಿರುವಂತೆಯೂ, ತಾನು ಹಳ್ಳಕ್ಕೆ ಬೀಳುವಂತೆಯೂ ತಿಳಿಯುತ್ತಾನೆ. ಭಯಂಕರ ಸ್ವಾಪ್ನ ವಸ್ತುಗಳನ್ನು ಜಾಗ್ರತ್ ಕಾಲದ ಪದಾರ್ಥಗಳಂತೆಯೇ ನೋಡುತ್ತಾನೆ. ಈ ಸ್ವಪ್ನದರ್ಶನದಲ್ಲಿ ಜೀವನಿಗೆ ಏನೂ ಸ್ವಾತಂತ್ರ್ಯವಿಲ್ಲ. ಎಲ್ಲವನ್ನೂ ಪರಮಾತ್ಮನು ಕೊಟ್ಟ ಜ್ಞಾನದಿಂದಲೇ ತಿಳಿಯುತ್ತಾನೆ. ಸುಷುಪ್ತಿಯಲ್ಲಿ ಮತ್ತು ಮುಕ್ತಿಯಲ್ಲಿ ತನ್ನನ್ನು ದೇವನಂತೆ, ರಾಜನಂತೆ ಯೋಗ್ಯತಾನುಗುಣವಾಗಿ ಪೂರ್ಣನೆಂದು ತಿಳಿಯುತ್ತಾನೆ. ಆದ್ದರಿಂದ ಅವನು ಯಾವ ಭೋಗಪದಾರ್ಥವನ್ನೂ ಬಯಸುವುದಿಲ್ಲ. ಈ ಸುಪ್ತಿ-ಮುಕ್ತಿಗಳೇ ಪರಮಾತ್ಮನ ಶ್ರೇಷ್ಠ ಸ್ಥಾನ.

**ಭಾಷ್ಯ—ನಿಹಿತೋ ಭಗವಾನ್ ಯತ್ರ ಹಿತಾ ನಾಡ್ಯಃ ಪ್ರಕೀರ್ತಿತಾಃ ।**
**ನಾನಾವರ್ಣೋ ಹರಿಸ್ತಾಸು ನಾನಾರೂಪೀ ವ್ಯವಸ್ಥಿತಃ ।**
**ತಾಸಾಂ ಮಧ್ಯೇ ಸುಷುಮ್ನಾ ಚ ತತ್ರ ಸುಪ್ತಿಂ ವ್ರಜತ್ಯಯಮ್ ।**
**ತಾ ಏವ ಕಂಠದೇಶಸ್ಥಾ ಜೀವಸ್ತತ್ರ ವ್ಯವಸ್ಥಿತಃ ।**
**ಸ್ವಪ್ನಾನ್ ಪಶ್ಯತಿ ಜಾಗ್ರದ್ವದ್ ಭಯಂ ಚ ಪ್ರತಿಪದ್ಯತೇ ।**
**ಅ ಇತ್ಯಾದಿಶ್ಯತೇ ವಿಷ್ಣುರವಿದ್ಯಾ ತನ್ನಿರೀಕ್ಷಣಮ್ ।**
**ತೇನ ಸ್ವಪ್ನಾನಯಂ ಪಶ್ಯೇಜ್ಜೀವೋ ಜಾಗರಿತಂ ತಥಾ ।**
**ಇತ್ಯಾದಿ ಮಹಾಮೀಮಾಂಸಾಯಾಂ ।**

**ಅನುವಾದ**—ಶರೀರನಾಡಿಗಳಲ್ಲಿ ಭಗವಂತನು ಸನ್ನಿಹಿತನಾಗಿರುವುದರಿಂದ ಅವುಗಳಿಗೆ ಹಿತಾ ಎಂದು ಹೆಸರು. ಆ ನಾಡಿಗಳಲ್ಲಿ ಶ್ರೀಹರಿ ಶುಕ್ಲಾದಿ ನಾನಾ ವರ್ಣವುಳ್ಳ ವಾಸುದೇವಾದಿ ನಾನಾ ರೂಪನಾಗಿ ಇರುತ್ತಾನೆ. ಅವುಗಳಲ್ಲಿ ಸುಷುಮ್ನಾ ನಾಡಿಯೂ ಒಂದು. ಈ ನಾಡಿಯಲ್ಲಿ ಜೀವನು ಸುಷುಪ್ತಿಯನ್ನು ಹೊಂದುತ್ತಾನೆ. ಕಂಠದಲ್ಲಿಯೂ ಅದೇ ನಾಡಿಗಳಿರುತ್ತವೆ. ಅವುಗಳಲ್ಲಿದ್ದು ಜೀವನು ಸ್ವಪ್ನವನ್ನು ಕಾಣುತ್ತಾನೆ. ಎಚ್ಚರದಲ್ಲಿ ಕಾಣುವ ವಸ್ತುಗಳಂತೆ ಭಯಂಕರ ಸ್ವಾಪ್ನ ವಸ್ತುಗಳನ್ನು ಕಾಣುತ್ತಾನೆ. 'ಅ' ಎಂದರೆ ವಿಷ್ಣು. ಆದ್ದರಿಂದ ಅವಿದ್ಯಾ ಎಂದರೆ ವಿಷ್ಣುವಿನ ನಿರೀಕ್ಷಣಕ್ರಿಯೆ. ಅದರಿಂದಲೇ ಜೀವನು ಸ್ವಪ್ನ ಪದಾರ್ಥಗಳನ್ನೂ, ಜಾಗ್ರತ್ ಕಾಲದ ಪದಾರ್ಥಗಳನ್ನೂ ನೋಡುತ್ತಾನೆ ಎಂದು ಮಹಾಮೀಮಾಂಸೆ ಎಂಬ ಗ್ರಂಥದಲ್ಲಿ ಹೇಳಲಾಗಿದೆ.

**ಭಾಷ್ಯ—ಜಿನಂತೀವ ತಾಡಯಂತೀವ । ವಿಚ್ಛಾಯಯತಿ ಭಯೇನ ವಿಚ್ಛಾಯಂ ಕರೋತಿ । ಅಹಮೇವೇದಂ ಸರ್ವೋಽಸ್ಮಿ ಸ್ವಯೋಗ್ಯತಾಪೇಕ್ಷಯಾ ಪೂರ್ಣೋಽಸ್ಮಿ । ವಿಷಯಭೋಗಾನನ್ವಿತ ಸ್ವರೂಪಾನಂದೇನೇತ್ಯೇವಶಬ್ದಃ ।**

**ಅನುವಾದ**—ಜನಂತೀವ ಎಂದರೆ ಹೊಡೆಯುತ್ತಿರುವವರಂತೆ. ವಿಭ್ರಾಯಯತಿ ಎಂದರೆ ಭಯದಿಂದ ಕಾಂತಿಗುಂದಿದವನನ್ನಾಗಿಸುತ್ತಾನೆ ಎಂದರ್ಥ. ಅಹಮೇವೇದಂ ಸರ್ವೋಽಸ್ಮಿ ಎಂದರೆ ತನ್ನ ಯೋಗ್ಯತೆಗೆ ಅನುಗುಣವಾಗಿ ನಾನೊಬ್ಬನೇ ಪೂರ್ಣನಾಗಿದ್ದೇನೆ ಎಂದರ್ಥ. ವಿಷಯ ಪದಾರ್ಥಗಳ ಭೋಗದಿಂದ ಲಭಿಸುವ ಸುಖವನ್ನು ಬಿಟ್ಟು ಕೇವಲ ಸ್ವರೂಪಾನಂದದಿಂದಲೇ ನಾನು ಪೂರ್ಣ ಎಂದುಕೊಳ್ಳುತ್ತಾನೆ ಮುಕ್ತ. ಈ ಅಭಿಪ್ರಾಯವನ್ನು ತಿಳಿಸುವುದಕ್ಕಾಗಿ ಉಪನಿಷತ್ತಿನಲ್ಲಿ ಅಹಮೇವ ನಾನೇ ಎಂದು ಹೇಳಿದೆ. ಹೊರತು ನಾನೊಬ್ಬನೇ ಪೂರ್ಣ ಎಂದು ಅಭಿಪ್ರಾಯವಲ್ಲ. ಏಕೆಂದರೆ ಎಲ್ಲ ಮುಕ್ತರೂ ಯೋಗ್ಯತೆಗೆ ಅನುಗುಣವಾಗಿ ಪೂರ್ಣರಾಗಿರುವುದರಿಂದ ತಾನೊಬ್ಬನೆ ಪೂರ್ಣ ಎಂಬ ಭಾವನೆಯು ಯಾವ ಮುಕ್ತನಿಗೂ ಬರುವಂತಿಲ್ಲ.

**'ಅಹಮೇವೇದಂ ಸರ್ವೋಽಸ್ಮಿ' ಶ್ರುತ್ಯರ್ಥ :**

**ಭಾಷ್ಯ—ಇದಮಿತಿ ಪೂರ್ಣತ್ವ ವಿಶೇಷಣಮ್ 'ಅಜಾನತಾ ಮಹಿಮಾನಂ ತವೇದಮ್' ಇತಿವತ್ । ಸ್ವಪೂರ್ಣತಾಮಾಪರೋಕ್ಷ್ಯೇಣಾನುಭೂಯ ಇದಂ ಪೂರ್ಣೋಽಸ್ಮೀತಿ ಮನ್ಯತೇ ।**

**ಕ್ವಚಿತ್ ತದ್ಭಾವಶೇಷಃ ಸ್ಯಾತ್ ಕ್ರಿಯಾಶೇಷಃ ಕ್ವಚಿದ್ ಭವೇತ್ ।**
**ಕ್ವಚಿತ್ ಪದಾರ್ಥಶೇಷಃ ಸ್ಯಾದಿದಮಾದಿಸ್ತ್ರಿಧಾ ಸ್ಮೃತಃ ।**
**ಇತಿ ಶಬ್ದನಿರ್ಣಯೇ ।**

**ಅನುವಾದ**—ಇದಂ ಸರ್ವೋಽಸ್ಮಿ ಎಂಬಲ್ಲಿ ಇದಂ ಶಬ್ದವು ಸರ್ವಶಬ್ದಾರ್ಥವಾದ ಪೂರ್ಣನಿಗೆ ವಿಶೇಷಣವಲ್ಲ. ಹಾಗಿದ್ದರೆ ಪುಲ್ಲಿಂಗವಿರಬೇಕಾಗಿತ್ತು. ಪೂರ್ಣತ್ವಕ್ಕೆ ವಿಶೇಷಣ. ಆದ್ದರಿಂದ ನಪುಂಸಕಲಿಂಗ. ಇದಕ್ಕೆ ಉದಾಹರಣೆ 'ಅಜಾನತಾ ಮಹಿಮಾನಂ ತವೇದಂ' ಎಂಬ ಭಗವದ್ಗೀತೆಯ ಪ್ರಯೋಗದಲ್ಲಿ 'ಇದಂ' ಪದವು ಮಹಿಮ ಶಬ್ದಾರ್ಥವಾದ ಮಹಿಮೆಗೆ ವಿಶೇಷಣವಾಗದೆ, ಮಹಿಮತ್ವ ವಿಶೇಷಣವಾಗಿದ್ದು ನಪುಂಸಕಲಿಂಗದಲ್ಲಿದೆ. ತನ್ನ ಪೂರ್ಣತ್ವದಲ್ಲಿ ತನ್ನ ಯೋಗ್ಯತಾನುಗುಣತ್ವವು ಪೂರ್ವೋಕ್ತವಾಗಿಲ್ಲದಿದ್ದರೂ ಅದನ್ನು ಪ್ರತ್ಯಕ್ಷತಃ ಅನುಭವಿಸಿ 'ಇದಂ ಪೂರ್ಣೋಽಸ್ಮಿ' ತನ್ನ ಯೋಗ್ಯತಾನುಗುಣವಾದ ಈ ಪೂರ್ಣತ್ವವು ನನಗೆ ಲಭಿಸಿದೆ ಎಂದು ಮುಕ್ತನು ತಿಳಿಯುತ್ತಾನೆ. 'ಇದಂ ಮೊದಲಾದ ಶಬ್ದ ಕೆಲವು ಕಡೆ ಧರ್ಮಿಯಲ್ಲಿರುವ ಧರ್ಮಕ್ಕೆ ವಿಶೇಷಣವಾಗುವುದು, ಕೆಲವು ಕಡೆ ಕ್ರಿಯೆಗೆ ವಿಶೇಷಣವಾಗುವುದು. ಕೆಲವು ಕಡೆ ಧರ್ಮಿಗೇ ವಿಶೇಷಣವಾಗುವುದು. ಹೀಗೆ ಇದಂ ಮೊದಲಾದ ಶಬ್ದಗಳು ಮೂರುವಿಧ' ಎಂದು ಶಬ್ದನಿರ್ಣಯ ಕೋಶದಲ್ಲಿ ಹೇಳಿದೆ.

**ಭಾಷ್ಯ—ನಹಿ ರಾಜಾ ದೇವೋ ವಾ ಸರ್ವಜಗದ್ ಭವತಿ ।**

**ಅನುವಾದ**—'ಇದಂ ಸರ್ವೋಽಸ್ಮಿ ಎಂಬುದಕ್ಕೆ 'ನಾನೇ ಇಡೀ ಪ್ರಪಂಚವಾಗಿದ್ದೇನೆ' ಎಂದು ಏಕೆ ವ್ಯಾಖ್ಯಾನ ಮಾಡಬಾರದು?' ಎಂದರೆ, ಇದು ದೃಷ್ಟಾಂತಕ್ಕೆ ಅನನುಗುಣವಾಗುತ್ತದೆ. ದೃಷ್ಟಾಂತವಾಗಿ 'ದೇವ ಇವ', 'ರಾಜಾ ಇವ' ಎಂದು ಹೇಳಲಾಗಿದೆ. ರಾಜನಾಗಲಿ, ದೇವನಾಗಲಿ ಇಡೀ ಪ್ರಪಂಚವಾಗುವುದಿಲ್ಲ ತಾನೆ? 'ಯೋಗ್ಯತಾನುಗುಣವಾಗಿ ಪೂರ್ಣನಾಗಿದ್ದೇನೆ' ಎಂಬ ವ್ಯಾಖ್ಯಾನವು ದೃಷ್ಟಾಂತಕ್ಕೆ ಅನುಗುಣವಾಗಿದೆ. ರಾಜರಾಗಲಿ, ದೇವತೆಗಳಾಗಲಿ ಅವರ ಯೋಗ್ಯತಾನುಗುಣವಾಗಿ ಪೂರ್ಣರಾಗಿರುತ್ತಾರೆ.

**ಭಾಷ್ಯ—ರಾಜ್ಞೋ ಭೋಗಾಪೇಕ್ಷಯಾ ಪೂರ್ತಿರ್ಭವತೀತಿ ದೇವದೃಷ್ಟಾಂತಃ। ಪ್ರತ್ಯಕ್ಷದರ್ಶನಾರ್ಥಂ ರಾಜದೃಷ್ಟಾಂತಃ ।**

**ಅನುವಾದ**–ರಾಜನಿಗೆ ವಿಷಯ ಪದಾರ್ಥಗಳ ಭೋಗದಿಂದಲೇ ಪೂರ್ಣತೆಯು ಉಂಟಾಗುತ್ತದೆ. ಮುಕ್ತಜೀವನಿಗೆ ದೇವನಂತೆ ಸ್ವರೂಪಾನಂದದಿಂದ ಪೂರ್ಣತೆ. ಆದ್ದರಿಂದ ಸ್ವರೂಪಾನಂದದಿಂದ ಪೂರ್ಣತೆಯನ್ನು ಹೊಂದುವುದಕ್ಕೆ ದೇವ ದೃಷ್ಟಾಂತ. ಆದರೆ ಅದು ಪ್ರತ್ಯಕ್ಷವಲ್ಲ. ಪ್ರತ್ಯಕ್ಷದರ್ಶನಕ್ಕಾಗಿ ಪೂರ್ಣತ್ವದಲ್ಲಿ ರಾಜದೃಷ್ಟಾಂತವನ್ನೂ ಉಪನಿಷತ್ತು ಹೇಳಿದೆ.

**ಭಾಷ್ಯ—ಸ್ವಯೋಗ್ಯಪೂರ್ತೇಃ ಸ್ವಾತಂತ್ರ್ಯಾದ್ ರಾಜ್ಞೋ ದೇವಗಣಸ್ಯ ಚ । ಸರ್ವಭಾವಸ್ತಥಾ ಮೋಕ್ಷೇ ನ ತು ಸರ್ವಸ್ವರೂಪತಃ ।**

**ಇತಿ ಬ್ರಹ್ಮತರ್ಕೇ ।**

**ಅನುವಾದ**—ತಮ್ಮ ಯೋಗ್ಯತಾನುಗುಣವಾದ ಪೂರ್ತಿಗೆ ಶ್ರೀಹರಿಯು ಕೊಟ್ಟ ಸ್ವಾತಂತ್ರ್ಯವಿರುವುದರಿಂದ ರಾಜರಿಗೆ ಮತ್ತು ದೇವಸಮೂಹಕ್ಕೆ ಹೇಗೆ ಸರ್ವಭಾವವೋ ಹಾಗೆಯೇ ಮುಕ್ತರಿಗೂ ಮೋಕ್ಷದಲ್ಲಿ ಸರ್ವಭಾವ ಹೊರತು ಸರ್ವ ವಸ್ತುಗಳ ಸ್ವರೂಪರಾಗುವುದರಿಂದ ಅಲ್ಲ ಎಂದು ಬ್ರಹ್ಮತರ್ಕದಲ್ಲಿ ಹೇಳಿದೆ.

**ಉಪನಿಷತ್—ತದ್ವಾ ಅಸ್ಯೈತದತಿಚ್ಛಂದಾ ಅಪಹತಪಾಪ್ಮಾಭಯಂ ರೂಪಂ । ತದ್ ಯಥಾ ಪ್ರಿಯಯಾ ಸ್ತ್ರಿಯಾ ಸಂಪರಿಷ್ವಕ್ತೋ ನ ಬಾಹ್ಯಂ ಕಿಂಚನ ವೇದ ನಾಂತರವ್ ಏವಮೇವಾಯಂ ಪುರುಷಃ ಪ್ರಾಜ್ಞೇನಾತ್ಮನಾ ಸಂಪರಿಷ್ವಕ್ತೋ ನ ಬಾಹ್ಯಂ ಕಿಂಚನ ವೇದ ನಾಂತರವ್ । ತದ್ ವಾ ಅಸ್ಯೈತದಾಪ್ತಕಾಮಮಾತ್ಮಕಾಮಮಕಾಮಂ ರೂಪಂ ಶೋಕಾಂತರವ್ ।**

ಮುಕ್ತಗಮ್ಯವಾದ ಶ್ರೀಹರಿಯ ರೂಪವು ವೇದಗಳ ಪ್ರವೃತ್ತಿಗೆ ಮೀರಿದೆ. ಪಾಪ ರಹಿತವಾಗಿದೆ. ಭಯರಹಿತವಾಗಿದೆ. ಪ್ರೇಯಸಿಯಿಂದ ಆಲಿಂಗಿತನಾದ ಪ್ರಿಯಕರನು ಹೇಗೆ ಹೊರಗಿನ ಪ್ರಾಪಂಚಿಕ ಘಟನೆಗಳನ್ನಾಗಲೀ ಒಳಗಿನ ದುಃಖಾದಿ ಭಾವಗಳನ್ನಾಗಲೀ ತಿಳಿಯುವುದಿಲ್ಲವೋ ಹಾಗೆಯೇ ಈ ಜೀವಾತ್ಮನು ಸುಷುಪ್ತಿಯಲ್ಲೂ ಮೋಕ್ಷದಲ್ಲೂ ಸರ್ವಜ್ಞನಾದ ಪರಮಾತ್ಮನಿಂದ ಆಲಿಂಗಿತನಾಗಿ ಹೊರಗಿನ ಅಥವಾ ಒಳಗಿನ ಯಾವುದೇ ಸಂಗತಿಯನ್ನು ತಿಳಿಯುವುದಿಲ್ಲ. ಪೂರ್ಣತೆಯನ್ನೇ ಅನುಭವಿಸುತ್ತಾನೆ. ಶ್ರೀಹರಿಯ ಈ ರೂಪವು ಬಯಸಿದುದನ್ನೆಲ್ಲ ಪಡೆದಿದೆ. ಕೇವಲ ತನ್ನನ್ನೇ ತಾನು ಬಯಸುತ್ತದೆ ಹೊರತು ಬಾಹ್ಯವಸ್ತುಗಳನ್ನು ಬಯಸುವುದಿಲ್ಲ. ದುಃಖರಹಿತ ಸುಖಸ್ವರೂಪವಾಗಿದೆ.

**ಭಾಷ್ಯ—ಛಂದಸಾಮುಪ್ಯವಾಚ್ಯತ್ವಾದತಿಚ್ಛಂದಾ ಹರಿಃ ಸ್ಮೃತಃ ।**
**ತೇನಾಶ್ಲಿಷ್ಟೋ ಹ್ಯಯಂ ಜೀವಃ ಸುಪ್ತೋ ಮುಕ್ತೋಽಥವಾ ಭವೇತ್**
**ವಿಷ್ಣೋ ರೂಪಂ ಹಿ ಯನ್ನಿತ್ಯಮಭಯಂ ಪಾಪವರ್ಜಿತಮ್ ।**
**ಆಪ್ತಕಾಮಂ ಚ ಪೂರ್ಣತ್ವಾದ್ ಆತ್ಮಕಾಮಂ ಸುಖತ್ವತಃ ।**
**ಶೋಕಂ ವಿನಾ ಸುರಮಣಾಚ್ಛೋಕಾಂತರಮಿತೀರಿತಮ್ ।**

**ಅನುವಾದ**—ಪೂರ್ಣವಾಗಿ ಪ್ರತಿಪಾದನೆ ಮಾಡುವುದು ವೇದದ ಸಾಮರ್ಥ್ಯಕ್ಕೂ ಮೀರಿರುವುದರಿಂದ ಶ್ರೀಹರಿಯು ಅತಿಚ್ಛಂದನೆನಿಸಿದ್ದಾನೆ. ಸುಪ್ತ ಅಥವಾ ಮುಕ್ತ ಜೀವನು ಇವನಿಂದ ಆಲಿಂಗಿತನಾಗುತ್ತಾನೆ. ವಿಷ್ಣುವಿನ ರೂಪವು ಯಾವಾಗಲೂ ಭಯರಹಿತವೂ, ಪಾಪರಹಿತವೂ ಆಗಿದೆ. ಆವನು ಪೂರ್ಣನಾದುದರಿಂದ ಆಪ್ತಕಾಮ ಅಂದರೆ ಬಯಸಿದ್ದನ್ನೆಲ್ಲ ಹೊಂದಿರುತ್ತಾನೆ, ಇನ್ನು ಹೊಂದಬೇಕಾದುದು ಏನೂ ಇಲ್ಲ. ಸುಖಸ್ವರೂಪನಾದ್ದರಿಂದ ಆತ್ಮಕಾಮ ಅಂದರೆ ತನ್ನನ್ನೇ ತಾನು ಬಯಸುತ್ತಾನೆ. ಶೋಕರಹಿತನಾಗಿ ಸುಖವನ್ನನುಭವಿಸುವುದರಿಂದ ಶೋಕಾಂತರನೆನಿಸಿದ್ದಾನೆ.

**ಉಪನಿಷತ್—ಅತ್ರ ಪಿತಾಽಪಿತಾ ಭವತಿ । ಮಾತಾಽಮಾತಾ । ಲೋಕಾ ಅಲೋಕಾಃ। ದೇವಾ ಅದೇವಾಃ। ವೇದಾ ಅವೇದಾಃ। ಅತ್ರ ಸ್ತೇನೋಽಸ್ತೇನೋ ಭವತಿ। ಭ್ರೂಣಹಾಽಭ್ರೂಣಹಾ । ಚಂಡಾಲೋಽಚಂಡಾಲಃ । ಪೌಲ್ಕಸೋಽಪೌಲ್ಕಸಃ। ಶ್ರಮಣೋಽಶ್ರಮಣಃ । ತಾಪಸೋಽತಾಪಸಃ । ಅನನ್ವಾಗತಂ ಪುಣ್ಯೇನ। ಅನನ್ವಾಗತಂ ಪಾಪೇನ । ತೀರ್ಣೋ ಹಿ ತದಾ ಸರ್ವಾನ್ ಶೋಕಾನ್ ಹೃದಯಸ್ಯ ಭವತಿ ।**

ಸುಷುಪ್ತಿಯಲ್ಲಿಯೂ, ಮುಕ್ತಿಯಲ್ಲಿಯೂ ಹಿಂದೆ ತಂದೆಯಾಗಿದ್ದವನು ಈಗ ತಂದೆಯಲ್ಲ. ಹಿಂದೆ ತಾಯಿಯಾಗಿದ್ದವಳು ಈಗ ತಾಯಿಯಲ್ಲ. ಲೋಕಗಳ

ಅಭಿಮಾನಿಯಾಗಿದ್ದವರು ಲೋಕಾಭಿಮಾನಿಗಳಲ್ಲ. ದೇವಪದಾಧಿಕಾರಿಗಳಾಗಿದ್ದವರು ದೇವಪದಾಧಿಕಾರಿಗಳಲ್ಲ. ವೇದಾಭಿಮಾನಿಗಳಾಗಿದ್ದವರು ವೇದಾಭಿಮಾನಿಗಳಲ್ಲ. ಕಳ್ಳನಾಗಿದ್ದವನು ಕಳ್ಳನಲ್ಲ. ಭ್ರೂಣಹಂತಕನಾಗಿದ್ದವನು ಭ್ರೂಣಹಂತಕನಲ್ಲ. ಚಂಡಾಲನಾಗಿದ್ದವನು ಚಂಡಾಲನಲ್ಲ. ಕಿರಾತನಾಗಿದ್ದವನು ಕಿರಾತನಲ್ಲ. ಸನ್ಯಾಸಿಯಾಗಿದ್ದವನು ಸಂನ್ಯಾಸಿಯಲ್ಲ. ತಪಸ್ವಿಯಾಗಿದ್ದವನು ತಪಸ್ವಿಯಲ್ಲ. ಇಲ್ಲಿ ಪರಮಾತ್ಮನಿಂದ ಆಲಿಂಗಿಸಲ್ಪಟ್ಟವನು ಅನಿಷ್ಟ ಪುಣ್ಯಫಲದ ಲೇಪವಿಲ್ಲದವನು. ಪಾಪಫಲದ ಲೇಪವಿಲ್ಲದವನು. ವಿಷ್ಣುಪ್ರಾಪ್ತಿಯಿಂದಾಗಿ ಸರ್ವಶೋಕಗಳನ್ನು ದಾಟಿದವನಾಗಿರುತ್ತಾನೆ.

**ಭಾಷ್ಯ—ತೇನಾಽಶ್ಲಿಷ್ಟಃ ಸ್ವಪುತ್ರಾಣಾಂ ದಾಯಾದಾನಾಂ ನ ವೈ ಪಿತಾ ।**
**ತೇಷಾಂ ದುಃಖಾದದುಃಖಿತ್ವಾನ್ನ ಮಾತಾ ಲೋಕಮಾನ್ಯಪಿ ।**
**ಅಲೋಕಮಾನಾನ್ನೋ ಲೋಕೋ ದೇವೋಽಪಿ ಸ್ವಾಧಿಕಾರತಃ ।**
**ವರ್ಷಣಾದೇರ್ವ್ಯುತ್ಥಿತತ್ವಾನ್ನ ದೇವೋ ವೇದಮಾನ್ಯಪಿ ।**
**ಅವೇದಮಾನಾನ್ನೋ ವೇದಃ ಪಾಪೀ ಪಾಪಫಲಾಪ್ಯಯಾತ್ ।**
**ಅಪಾಪಃ ಶ್ರಮಣಶ್ಚಾಪಿ ಯತಿಧರ್ಮಾತ್ ಸಮುತ್ಥಿತೇಃ ।**
**ಅಯತಿಸ್ತಾಪಸಶ್ಚೈವಂ ಅನಿಷ್ಟಂ ಪುಣ್ಯಮುಪ್ಯಮುಂ ।**
**ನಾನ್ವೇತ್ಯೇವಂವಿಧೋ ಮುಕ್ತೋ ವಿಷ್ಣೋಃ ಸಂಪ್ರಾಪ್ತಿಮಾತ್ರತಃ ।**

**ಅನುವಾದ**—ಸುಪ್ತಿಯಲ್ಲಾಗಲೀ, ಮುಕ್ತಿಯಲ್ಲಾಗಲೀ ಜೀವನು ಹರಿಯಿಂದ ಆಲಿಂಗಿಸಲ್ಪಟ್ಟಾಗ ಹಿಂದೆ ತಂದೆಯಾಗಿದ್ದವನು ಆಸ್ತಿಯ ಹಕ್ಕುದಾರರಾದ ತನ್ನ ಮಕ್ಕಳಿಗೆ ಈಗ ತಂದೆಯಾಗುವುದಿಲ್ಲ. ಹಿಂದೆ ತಾಯಿಯಾಗಿದ್ದವಳು ಆ ಮಕ್ಕಳ ದುಃಖದಿಂದ ಅವಳಿಗೆ ಈಗ ದುಃಖವಾಗದಿರುವುದರಿಂದ ತಾಯಿಯಲ್ಲ.ಲೋಕಾಭಿಮಾನಿಯು ಲೋಕಾಭಿಮಾನರಹಿತನಾಗುವುದರಿಂದ ಲೋಕನೆನಿಸುವುದಿಲ್ಲ. ದೇವತೆಯೂ ಕೂಡ ಮಳೆಸುರಿಸುವುದು ಮೊದಲಾದ ತನ್ನ ಅಧಿಕಾರ ರಹಿತನಾದುದರಿಂದ ದೇವತೆಯಲ್ಲ. ವೇದಾಭಿಮಾನಿಯೂ ಕೂಡಾ ವೇದಾಭಿಮಾನರಹಿತನಾದುದರಿಂದ ವೇದನಲ್ಲ. ಪಾಪಿಯು ಪಾಪಫಲವು ನಾಶವಾಗುವುದರಿಂದ ಪಾಪಿಯಲ್ಲ. ಯತಿಗಳು ಯತಿಧರ್ಮದ ವಿಧಿಗಳ ಬಂಧನಕ್ಕೆ ಒಳಪಡದವರಾದುದರಿಂದ ಯತಿಗಳಲ್ಲ. ತಪಸ್ವಿಯೂ ಇದೇ ಕಾರಣದಿಂದ ತಪಸ್ವಿಯಲ್ಲ. ಈ ವಿಧನಾದ ಮುಕ್ತನು ವಿಷ್ಣುಪ್ರಾಪ್ತಿಯಿಂದಲೇ ಅನಿಷ್ಟ ಪುಣ್ಯಗಳ ಫಲವನ್ನು ಹೊಂದುವುದಿಲ್ಲ.

**ಉಪನಿಷತ್—ಯದ್ ವೈ ತನ್ನ ಪಶ್ಯತಿ । ಪಶ್ಯನ್ ವೈ ತನ್ನ ಪಶ್ಯತಿ । ನ ಹಿ ದ್ರಷ್ಟುರ್ದೃಷ್ಟೇರ್ವಿಪರಿಲೋಪೋ ವಿದ್ಯತೇ। ಅವಿನಾಶಿತ್ವಾತ್ । ನ ತು ತದ್ ದ್ವಿತೀಯಮಸ್ತಿ ತತೋಽನ್ಯದ್ ವಿಭಕ್ತಂ ಯತ್ ಪಶ್ಯೇತ್ ।**

ಬ್ರಹ್ಮನು ಸರ್ವಜ್ಞನಾಗಿದ್ದು ಎಲ್ಲವನ್ನೂ ನೋಡುವುದರಿಂದ ಅವನು ಯಾವ ವಸ್ತುವನ್ನು ನೋಡುವುದಿಲ್ಲವೋ ಅದು ಇಲ್ಲವೇ ಇಲ್ಲ. ಆದ್ದರಿಂದ ಬ್ರಹ್ಮನಿಗೆ ಭಿನ್ನವಾದ ಸಮವಾದ ವಸ್ತು ಇಲ್ಲವೇ ಇಲ್ಲ. ಏಕೆಂದರೆ ಬ್ರಹ್ಮನು ಅಂಥ ವಸ್ತುವನ್ನು ನೋಡುವುದಿಲ್ಲ. ಸರ್ವಜ್ಞನಾದ ಬ್ರಹ್ಮನ ಚಕ್ಷುರಿಂದ್ರಿಯಜನ್ಯಜ್ಞಾನಕ್ಕೆ ಲೋಪವಿಲ್ಲ ಅಂದರೆ ಅದು ಸುಳ್ಳಾಗುವುದಿಲ್ಲ. ಏಕೆಂದರೆ ಅದು ದೋಷರಹಿತವಾಗಿದೆ, ಅಬಾಧಿತವಾಗಿದೆ. ಮತ್ತು ಬ್ರಹ್ಮನು ನೋಡಿದ ವಸ್ತುವಿಗೆ ಭಿನ್ನವಾದ ಅಥವಾ ವಿರುದ್ಧವಾದ ವಸ್ತುವನ್ನು ನೋಡುವ ಬ್ರಹ್ಮಭಿನ್ನನಾದ ಜ್ಞಾನಿಯೂ ಇಲ್ಲ.

**ಭಾಷ್ಯ—ಯತ್ ತನ್ನ ವಿಷ್ಣುಃ ಪಶ್ಯೇತ ಪಶ್ಯನ್ ವೈ ತನ್ನ ಪಶ್ಯತಿ ।**
**ನಿತ್ಯಜ್ಞಾನಸ್ವರೂಪತ್ವಾತ್ ತತ್ಸಮಂ ನಾನ್ಯದಿಷ್ಯತೇ । ಇತಿ ಚ ।**

**ಅನುವಾದ**—ವಿಷ್ಣುವು ಯಾವುದನ್ನು ನೋಡುವುದಿಲ್ಲವೋ ಅದು ಇಲ್ಲವೇ ಇಲ್ಲ. ಅವನು ನಿತ್ಯನಿರ್ದುಷ್ಟ ಅಬಾಧ್ಯಜ್ಞಾನರೂಪನಾದ್ದರಿಂದ ಸರ್ವಜ್ಞನಾಗಿದ್ದೂ ತನಗೆ ಸಮಾನವಾದ ಭಿನ್ನವಾದ ವಸ್ತುವನ್ನು ನೋಡುತ್ತಿಲ್ಲವೆಂದಮೇಲೆ, ಅದು ಇಲ್ಲವೇ ಇಲ್ಲ ಎಂಬುದು ಸ್ವತಃ ಸಿದ್ಧ ಎಂದೂ ಬ್ರಹ್ಮತರ್ಕದಲ್ಲಿ ಹೇಳಲಾಗಿದೆ.

**ಭಾಷ್ಯ—ಯತ್ಕಿಂಚಿದ್ ವಸ್ತು ಭಗವತಾ ನ ದೃಷ್ಟಂ ತನ್ನಾಸ್ತ್ಯೇವ । ವಿದ್ಯಮಾನಂ ಸರ್ವಂ ಪಶ್ಯತ್ಯೇವ । ನ ಹಿ ದ್ವಿತೀಯೋ ದ್ರಷ್ಟಾ ಯೋ ವಿಭಕ್ತತ್ವೇನ ಜಗತ್ ಪಶ್ಯತಿ । ತದ್ವಿರೋಧೇನ ಪಶ್ಯತ್ಯಭ್ರಾಂತಃ । ತದ್-ದೃಷ್ಟಾದನ್ಯದ್ವಾ । ನಾನ್ಯೋಽತೋಽಸ್ತಿ ದ್ರಷ್ಟಾ ಇತ್ಯಾದಿಶ್ರುತೇಃ ।**

**ಅನುವಾದ**—ಭಗವಂತನು ನೋಡದ ಯಾವ ವಸ್ತುವೂ ಇಲ್ಲವೇ ಇಲ್ಲ. ಏಕೆಂದರೆ ಇರುವುದೆಲ್ಲವನ್ನೂ ಅವನು ನೋಡಿಯೇ ನೋಡುತ್ತಾನೆ. ಭ್ರಾಂತಿರಹಿತನಾಗಿದ್ದೂ ಶ್ರೀಹರಿಯ ಜ್ಞಾನಕ್ಕೆ ವಿರುದ್ಧವಾಗಿ ಪ್ರಪಂಚವನ್ನು ನೋಡುವವನು ಇನ್ನೊಬ್ಬನು ಇಲ್ಲವೇ ಇಲ್ಲ. ಮತ್ತು ಶ್ರೀಹರಿಯು ನೋಡದ ವಸ್ತುವನ್ನು ನೋಡುವವನೂ ಇಲ್ಲ. ಏಕೆಂದರೆ 'ಶ್ರೀಹರಿಯು ನೋಡುವುದಕ್ಕೆ ವಿರುದ್ಧವಾಗಿ ನೋಡುವವನೂ, ಅವನು ನೋಡದಿರುವುದನ್ನು ನೋಡುವವನೂ ಬೇರೆ ಯಾರೂ ಇಲ್ಲ' ಎಂದು ಮುಂತಾಗಿ ಶ್ರುತಿಗಳು ಈ ವಿಷಯದಲ್ಲಿ ಪ್ರಮಾಣ.

**ಭಾಷ್ಯ—ಯತ್ತದ್ ದೃಷ್ಟಂ ಭಗವತಾ ತದೇವಾಸ್ತಿ ನ ಚಾಪರಂ ।**
**ನ ಹ್ಯನ್ಯೋ ವಿದ್ಯತೇ ದ್ರಷ್ಟಾ ಯಃ ಪಶ್ಯೇತ್ ತದದರ್ಶಿತಂ ।**
**ಬ್ರಹ್ಮಾದಿರಪಿ ಯೋ ದ್ರಷ್ಟಾ ಪಶ್ಯೇತ್ ತಸ್ಯ ಪ್ರಸಾದತಃ ।**
**ತದದೃಷ್ಟಂ ಕುತಃ ಪಶ್ಯೇದ್ ಅತಃ ಕೋ ವಾ ವಿರೋಧತಃ । ಇತಿ ಚ।**

**ಅನುವಾದ**—ಶ್ರೀಹರಿಯು ನೋಡುವ ವಸ್ತು ಮಾತ್ರವೇ ಅಸ್ತಿತ್ವದಲ್ಲಿರುತ್ತದೆ ಹೊರತು ಬೇರೆ ಇಲ್ಲ. ಅವನು ನೋಡುವುದಕ್ಕೆ ವಿರುದ್ಧವಾಗಿ ನೋಡುವವರೂ, ಅವನು ನೋಡದ ವಸ್ತುವನ್ನು ನೋಡುವವರೂ ಬೇರೆಯಾರೂ ಇಲ್ಲ. ಎಲ್ಲವನ್ನೂ ನೋಡುವ ಚತುರ್ಮುಖಾದಿಗಳೂ ಕೂಡ ಶ್ರೀಹರಿಯ ಅನುಗ್ರಹದಿಂದಲೇ ನೋಡುವರು. ಆದ್ದರಿಂದ ಶ್ರೀಹರಿಯು ನೋಡದ ವಸ್ತುವನ್ನು ಯಾರು ತಾನೆ ಹೇಗೆ ನೋಡುವರು? ಎಂದೂ ಬ್ರಹ್ಮತರ್ಕದಲ್ಲಿ ಹೇಳಿದೆ.

**ಭಾಷ್ಯ—ಯದವತಾರಾದಿಕಂ ದ್ವೈತತ್ವೇನ ನ ಪಶ್ಯತಿ ನ ತು ತತ್ ತತೋ ದ್ವಿತೀಯಂ। ನಿತ್ಯ ಜ್ಞಾನತ್ವಾತ್। ಭ್ರಮಾಭಾವಾತ್ । ಯದ್ ವಿಭಕ್ತ-ತ್ವೇನ ವಿಷ್ಣುಃ ಪಶ್ಯತಿ ತತ್ ತತೋಽನ್ಯದಸ್ತಿ ಚೇತಿ ಚ । ಯಸ್ಮಾದ್ ವಿಷ್ಣುರ್ವಿಶ್ವಂ ವಿಭಕ್ತತ್ವೇನೈವ ಪಶ್ಯತಿ ತಸ್ಮಾತ್ ತದನ್ಯದಸ್ತ್ಯೇವ ।**

**ಅನುವಾದ**—'ಯತ್ ದ್ವೈ ತನ್ನ ಪಶ್ಯತಿ' ಎಂದು ಪದವಿಭಾಗ ಮಾಡಿ ಮೇಲೆ ಹೇಳಿದಂತೆ ಅರ್ಥಗ್ರಹಿಸುವುದರ ಜೊತೆಗೆ 'ಯತ್ ದ್ವೈತಂ ನ ಪಶ್ಯತಿ' ಎಂದು ಪದ ವಿಭಾಗ ಮಾಡಿ ಮುಂದೆ ಹೇಳುವಂತೆಯೂ ಅರ್ಥಗ್ರಹಿಸಬೇಕು– 'ಶ್ರೀಹರಿಯು ತನ್ನ ಅವತಾರ ರೂಪ ಗುಣ ಕರ್ಮಾದಿಗಳನ್ನು ತನ್ನಿಂದಲೂ ಪರಸ್ಪರವಾಗಿಯೂ ಬೇರೆಯಾಗಿ ತಿಳಿಯುವುದಿಲ್ಲ. ಆದ್ದರಿಂದ ಅವುಗಳು ಅವನಿಂದ ಭಿನ್ನವಲ್ಲ. ಏಕೆಂದರೆ ಶ್ರೀಹರಿಯು ನಿರ್ದುಷ್ಟ ಅಬಾಧಿತಜ್ಞಾನವುಳ್ಳವನಾದ್ದರಿಂದ ಭ್ರಮರಹಿತನಾಗಿದ್ದಾನೆ. ಅವನು ಯಾವುದನ್ನು ತನ್ನಿಂದ ಭಿನ್ನ ಎಂದು ಕಾಣುವನೋ ಅದು ಅವನಿಂದ ಭಿನ್ನವಾಗಿರುತ್ತದೆ. ಪ್ರಪಂಚವನ್ನು ತನ್ನಿಂದ ಭಿನ್ನವಾಗಿಯೇ ಕಾಣುವುದರಿಂದ ಅದು ಅವನಿಂದ ಭಿನ್ನವಾಗಿ ಇದ್ದೇ ಇದೆ'.

**ಭಾಷ್ಯ—ನ ಚ ಜಗದಭಾವೋಽತ್ರ ಉಚ್ಯತೇ । ಅನ್ಯದ್ ವಿಭಕ್ತಮಿತಿ ವಿಶೇಷಣ ವೈಯರ್ಥ್ಯಾತ್ ।**

**ಅನುವಾದ**—ಈ ಶ್ರುತಿಯಲ್ಲಿ ಪ್ರಪಂಚಾಭಾವವನ್ನೇ ಹೇಳಿದೆಯೆಂದು ವ್ಯಾಖ್ಯಾನಿಸುವುದು ಸರಿಯಲ್ಲ. ಏಕೆಂದರೆ 'ನ ತು ತದ್ ದ್ವಿತೀಯಮಸ್ತಿ ತತೋಽನ್ಯದ್ ವಿಭಕ್ತಂ ಯತ್ ಪಶ್ಯೇತ್' ಎಂಬ ವಾಕ್ಯದಲ್ಲಿ 'ಯತ್ ಪಶ್ಯೇತ್ ತತ್ ದ್ವಿತೀಯಂ ನಾಸ್ತಿ' ಎಂದೋ 'ವಿಭಕ್ತಂ ಯತ್ ಪಶ್ಯೇತ್ ತತ್ ನಾಸ್ತಿ' ಎಂದೋ ಹೇಳಲು ಬರುತ್ತಿರುವಾಗ 'ಅನ್ಯದ್' ಮತ್ತು 'ವಿಭಕ್ತ' ಎಂಬ ಎರಡು ವಿಶೇಷಣಗಳನ್ನು ಹೇಳಿರುವುದು ವ್ಯರ್ಥವಾಗುತ್ತದೆ.

**ಭಾಷ್ಯ—ನ ಚ ಭ್ರಾಂತಿಕಲ್ಪಿತಂ ಜಗದಿತ್ಯತ್ರ ಕಿಂಚಿನ್ಮಾನಂ ।**

**ಅಸತ್ಯಮಪ್ರತಿಷ್ಠಂ ತೇ ಜಗದಾಹುರನೀಶ್ವರಮ್ ।**
**ಇತ್ಯಾದಿ ನಿಂದನಾಚ್ಚ ।**

**ಅನುವಾದ**—ಸುಷುಪ್ತಿಯಲ್ಲಿ ಭ್ರಾಂತಿ ಇಲ್ಲದುದರಿಂದ ಭ್ರಾಂತಿಕಲ್ಪಿತವಾದ ಪ್ರಪಂಚವು ಆಗ ಇರುವುದಿಲ್ಲ ಎಂದು ಪ್ರತ್ಯರ್ಥವನ್ನು ಹೇಳುವುದು ಸರಿಯಲ್ಲ. ಪ್ರಪಂಚವು ಭ್ರಾಂತಿಕಲ್ಪಿತ ಎಂಬ ವಿಷಯದಲ್ಲಿ ಏನೂ ಪ್ರಮಾಣವಿಲ್ಲ. ಭ್ರಾಂತಿ ಕಲ್ಪಿತ ಎನ್ನುವ ಪಕ್ಷದಲ್ಲಿ ಜಗತ್ತು ಅಸತ್ಯವೆಂದಾಗುತ್ತದೆ. ಆಗ 'ಜಗತ್ತು ಅಸತ್ಯ ಅಪ್ರತಿಷ್ಠ ಅನೀಶ್ವರವೆಂದು ಅಸುರ ಸ್ವಭಾವದವರು ಹೇಳುತ್ತಾರೆ' ಇತ್ಯಾದಿ ಗೀತಾ ವಾಕ್ಯಗಳಲ್ಲಿ ನಿಂದೆ ಮಾಡಿರುವುದು ಯುಕ್ತವಾಗಲಾರದು.

**ಉಪನಿಷತ್—ಯದ್ ವೈ ತನ್ನ ಜಿಘ್ರತಿ । ಜಿಘ್ರನ್ ವೈ ತನ್ನ ಜಿಘ್ರತಿ। ನಹಿ ಘ್ರಾತುರ್ಘ್ರಾತೇರ್ವಿಪರಿಲೋಪೋ ವಿದ್ಯತೇ ಅವಿನಾಶಿತ್ವಾತ್ । ನ ತು ತದ್ ದ್ವಿತೀಯಮಸ್ತಿ ತತೋಽನ್ಯದ್ ವಿಭಕ್ತಂ ಯತ್ ಜಿಘ್ರೇತ್ ।**

ಪರಬ್ರಹ್ಮನು ಯಾವ ಗಂಧವನ್ನು ಆಘ್ರಾಣಿಸುವುದಿಲ್ಲವೋ ಅಂಥ ಗಂಧ ಇಲ್ಲವೇ ಇಲ್ಲ. ಬ್ರಹ್ಮನು ತನಗಿಂತ ಭಿನ್ನವಾದ ಸಮಾನವಾದ ಗಂಧವನ್ನು ಆಘ್ರಾಣಿ ಸುವುದಿಲ್ಲ. ಎಲ್ಲ ಗಂಧವನ್ನೂ ಆಘ್ರಾಣಿಸುವ ಬ್ರಹ್ಮನು ಆಘ್ರಾಣಿಸಲಿಲ್ಲವೆಂದರೆ ಅಂಥ ಗಂಧವು ಇಲ್ಲವೇ ಇಲ್ಲ. ಬ್ರಹ್ಮನ ಘ್ರಾಣೇಂದ್ರಿಯ ಜನ್ಯಜ್ಞಾನಕ್ಕೆ ಲೋಪ ವೆಂದೂ ಇಲ್ಲ. ಅಂದರೆ ಅದು ಎಂದೂ ಸುಳ್ಳಾಗುವುದಿಲ್ಲ. ಏಕೆಂದರೆ ಅದು ನಿರ್ದೋಷ ಮತ್ತು ಅಬಾಧಿತ. ಮತ್ತು ಬ್ರಹ್ಮನು ಆಘ್ರಾಣಿಸಿದ ಗಂಧಕ್ಕೆ ಭಿನ್ನವಾದ ಅಥವಾ ವಿರುದ್ಧವಾದ ಗಂಧವನ್ನು ಆಘ್ರಾಣಿಸುವ ಜ್ಞಾನಿಯಾದ ವ್ಯಕ್ತಿ ಬೇರೆ ಯಾರೂ ಇರುವುದೂ ಇಲ್ಲ.

**ಉಪನಿಷತ್–ಯದ್ ವೈ ತನ್ನ ರಸಯತೇ । ರಸಯನ್ ವೈ ತನ್ನ ರಸಯತೇ। ನ ಹಿ ರಸಯಿತೂ ರಸಯತೇರ್ವಿಪರಿಲೋಪೋ ವಿದ್ಯತೇ ಅವಿನಾಶಿತ್ವಾತ್। ನ ತು ತದ್ ದ್ವಿತೀಯಮಸ್ತಿ ತತೋಽನ್ಯದ್ ವಿಭಕ್ತಂ ಯತ್ ರಸಯೇತ್।**

ಪರಬ್ರಹ್ಮನು ಯಾವುದನ್ನು ರುಚಿ ನೋಡುವುದಿಲ್ಲವೋ ಅಂಥ ರಸ ಇಲ್ಲವೇ ಇಲ್ಲ. ಬ್ರಹ್ಮನು ತನಗಿಂತ ಭಿನ್ನವಾದ ಅವನಿಗೆ ಸಮವಾದ ರಸವನ್ನು ಸವಿಯುವು ದಿಲ್ಲ. ಎಲ್ಲ ರಸವನ್ನು ಸವಿಯುವ ಬ್ರಹ್ಮನು ಸವಿಯಲಿಲ್ಲವೆಂದರೆ ಅಂಥ ರಸವು ಇಲ್ಲವೇ ಇಲ್ಲ. ಬ್ರಹ್ಮನ ರಸನೇಂದ್ರಿಯಜನ್ಯಜ್ಞಾನಕ್ಕೆ ಲೋಪವೆಂದೂ ಇಲ್ಲ. ಅಂದರೆ ಅದು ಎಂದೂ ಅಯಥಾರ್ಥವಲ್ಲ. ಏಕೆಂದರೆ ಅದು ದೋಷರಹಿತ ಮತ್ತು

ಅಬಾಧಿತ. ಮತ್ತು ಬ್ರಹ್ಮನು ಸವಿಯುವ ರಸಕ್ಕೆ ಭಿನ್ನವಾದ ಅಥವಾ ವಿರುದ್ಧವಾದ ರಸವನ್ನು ರುಚಿ ನೋಡುವ ಬೇರೆ ವ್ಯಕ್ತಿ ಯಾರೂ ಇರುವುದೂ ಇಲ್ಲ.

**ಉಪನಿಷತ್—ಯದ್ ವೈ ತನ್ನ ವದತಿ । ವದನ್ ವೈ ತನ್ನ ವದತಿ । ನ ಹಿ ವಕ್ತುರ್ವಕ್ತೇರ್ವಿಪರಿಲೋಪೋ ವಿದ್ಯತೇ ಅವಿನಾಶಿತ್ವಾತ್ । ನ ತು ತದ್ ದ್ವಿತೀಯಮಸ್ತಿ । ತತೋಽನ್ಯದ್ ವಿಭಕ್ತಂ ಯದ್ ವದೇತ್ ।**

ಪರಬ್ರಹ್ಮನು ಯಾವುದನ್ನು ಕುರಿತು ಮಾತನಾಡುವುದಿಲ್ಲವೋ ಅದು ಇಲ್ಲವೇ ಇಲ್ಲ. ಬ್ರಹ್ಮನು ತನಗಿಂತ ಭಿನ್ನವಾದ, ಅವನಿಗೆ ಸಮಾನವಾದ ವಸ್ತುವನ್ನು ವರ್ಣಿಸುವುದಿಲ್ಲ. ಎಲ್ಲ ವಸ್ತುಗಳನ್ನೂ ವರ್ಣಿಸುವ ಬ್ರಹ್ಮನು ವರ್ಣಿಸಲಿಲ್ಲವೆಂದರೆ ಅಂಥ ವಸ್ತು ಇಲ್ಲವೇ ಇಲ್ಲ. ಬ್ರಹ್ಮನ ವಾಗಿಂದ್ರಿಯ ವ್ಯಾಪಾರವೆಂದೂ ಸುಳ್ಳಾಗುವುದಿಲ್ಲ. ಏಕೆಂದರೆ ಅದು ದೋಷರಹಿತ ಮತ್ತು ಅಬಾಧಿತ. ಮತ್ತು ಬ್ರಹ್ಮನು ವರ್ಣಿಸಿದ ರೀತಿಗೆ ಭಿನ್ನವಾದ ಅಥವಾ ವಿರುದ್ಧವಾದ ರೀತಿಯಲ್ಲಿ ವಸ್ತುವನ್ನು ವರ್ಣಿಸುವ ಜ್ಞಾನಿಯಾದ ಬೇರೆ ವ್ಯಕ್ತಿ ಯಾರೂ ಇರುವುದೂ ಇಲ್ಲ.

**ಉಪನಿಷತ್—ಯದ್ ವೈ ತನ್ನ ಶೃಣೋತಿ। ಶೃಣ್ವನ್ ವೈ ತನ್ನ ಶೃಣೋತಿ । ನ ಹಿ ಶ್ರೋತುಃ ಶ್ರುತೇರ್ವಿಪರಿಲೋಪೋ ವಿದ್ಯತೇ ಅವಿನಾಶಿತ್ವಾತ್ । ನ ತು ತದ್ ದ್ವಿತೀಯಮಸ್ತಿ ತತೋಽನ್ಯದ್ ವಿಭಕ್ತಂ ಯತ್ ಶೃಣುಯಾತ್ ।**

ಪರಬ್ರಹ್ಮನು ಯಾವುದನ್ನು ಶ್ರವಣ ಮಾಡುವುದಿಲ್ಲವೋ ಅಂಥ ಶಬ್ದ ಇಲ್ಲವೇ ಇಲ್ಲ. ಬ್ರಹ್ಮನು ತನಗಿಂತ ಭಿನ್ನವಾದ ಅವನಿಗೆ ಸಮನಾದ ಶಬ್ದವನ್ನು ಕೇಳಲೆ ಇಲ್ಲವೆಂದರೆ ಅಂಥ ಶಬ್ದ ಇಲ್ಲವೇ ಇಲ್ಲ. ಬ್ರಹ್ಮನ ಶ್ರವಣೇಂದ್ರಿಯಜನ್ಯಜ್ಞಾನಕ್ಕೆ ಲೋಪವೆಂದೂ ಇಲ್ಲ. ಅಂದರೆ ಅದು ಅಯಥಾರ್ಥವಾಗುವುದೇ ಇಲ್ಲ. ಏಕೆಂದರೆ ಅದು ದೋಷರಹಿತ ಮತ್ತು ಅಬಾಧಿತ. ಮತ್ತು ಬ್ರಹ್ಮನು ಶ್ರವಣ ಮಾಡಿದ ಶಬ್ದಕ್ಕೆ ಭಿನ್ನವಾದ ಅಥವಾ ಅದಕ್ಕೆ ವಿರುದ್ಧವಾದ ಶಬ್ದವನ್ನು ಶ್ರವಣ ಮಾಡುವ ಜ್ಞಾನಿಯಾದ ವ್ಯಕ್ತಿ ಬೇರೆ ಯಾರೂ ಇರುವುದೂ ಇಲ್ಲ.

**ಉಪನಿಷತ್—ಯದ್ ವೈ ತನ್ನ ಮನುತೇ । ಮನ್ವಾನೋ ವೈ ತನ್ನ ಮನುತೇ । ನ ಹಿ ಮಂತುರ್ಮತೇರ್ವಿಪರಿಲೋಪೋ ವಿದ್ಯತೇ ಅವಿನಾಶಿತ್ವಾತ್।ನ ತು ತದ್ ದ್ವಿತೀಯಮಸ್ತಿ ತತೋಽನ್ಯದ್ ವಿಭಕ್ತಂ ಯತ್ ಮನ್ವೀತ।**

ಯಾವುದು ಪರಬ್ರಹ್ಮನ ಮನಸ್ಸಿಗೆ ಗೋಚರವಾಗುವುದಿಲ್ಲವೋ ಅಂಥ ವಸ್ತು ಇಲ್ಲವೇ ಇಲ್ಲ. ಬ್ರಹ್ಮನು ತನಗಿಂತ ಭಿನ್ನವಾದ ಸಮಾನವಾದ ವಸ್ತುವನ್ನು ಮನಸ್ಸಿ

ನಿಂದ ಗ್ರಹಿಸುವುದಿಲ್ಲವೆಂದರೆ ಅಂಥ ವಸ್ತು ಇಲ್ಲವೆ ಇಲ್ಲ. ಬ್ರಹ್ಮನ ಮನೋಜನ್ಯ ಜ್ಞಾನಕ್ಕೆ ಲೋಪವೆಂದೂ ಇಲ್ಲ. ಅಂದರೆ ಅದು ಅಯಥಾರ್ಥವಾಗುವುದೇ ಇಲ್ಲ. ಏಕೆಂದರೆ ಅದು ದೋಷರಹಿತ ಮತ್ತು ಅಬಾಧಿತ. ಮತ್ತು ಬ್ರಹ್ಮನ ಮನಸ್ಸಿಗೆ ಗೋಚರವಾದ ವಸ್ತುವಿಗೆ ಭಿನ್ನವಾದ ಅಥವಾ ವಿರುದ್ಧವಾದ ವಸ್ತುವನ್ನು ಮನಸ್ಸಿನಿಂದ ಗ್ರಹಿಸುವ ಬೇರೆ ಯಾವ ಜ್ಞಾನಿಯೂ ಇರುವುದೂ ಇಲ್ಲ.

**ಉಪನಿಷತ್—ಯದ್ ವೈ ತನ್ನ ಸ್ಪೃಶತಿ। ಸ್ಪೃಶನ್ ವೈ ತನ್ನ ಸ್ಪೃಶತಿ। ನ ಹಿ ಸ್ಪ್ರಷ್ಟುಃ ಸ್ಪೃಷ್ಟೇರ್ವಿಪರಿಲೋಪೋ ವಿದ್ಯತೇ ಅವಿನಾಶಿತ್ವಾತ್ । ನ ತು ತದ್ ದ್ವಿತೀಯಮಸ್ತಿ ತತೋಽನ್ಯದ್ ವಿಭಕ್ತಂ ಯತ್ ಸ್ಪೃಶೇತ್ ।**

ಪರಬ್ರಹ್ಮನು ಯಾವುದನ್ನು ಸ್ಪರ್ಶಿಸುವುದಿಲ್ಲವೋ ಅಂಥ ಸ್ಪರ್ಶ ಇಲ್ಲವೇ ಇಲ್ಲ. ಬ್ರಹ್ಮನು ತನಗಿಂತ ಭಿನ್ನವಾದ ಸಮಾನವಾದ ಸ್ಪರ್ಶವನ್ನು ತಿಳಿಯುವುದಿಲ್ಲವೆಂದರೆ ಅಂಥ ಸ್ಪರ್ಶ ಇಲ್ಲವೇ ಇಲ್ಲ. ಬ್ರಹ್ಮನ ತ್ವಗಿಂದ್ರಿಯಜನ್ಯಜ್ಞಾನಕ್ಕೆ ಲೋಪವೆಂದೂ ಇಲ್ಲ. ಅಂದರೆ ಅದು ಅಯಥಾರ್ಥವಾಗುವುದಿಲ್ಲ. ಏಕೆಂದರೆ ಅದು ದೋಷರಹಿತ ಮತ್ತು ಅಬಾಧಿತ. ಮತ್ತು ಬ್ರಹ್ಮನು ಸ್ಪರ್ಶಿಸಿದ ವಸ್ತುವಿಗೆ ಭಿನ್ನವಾದ ಅಥವಾ ವಿರುದ್ಧವಾದ ವಸ್ತುವನ್ನು ಸ್ಪರ್ಶಿಸುವ ಬೇರೆ ಜ್ಞಾನಿ ಯಾರೂ ಇರುವುದೂ ಇಲ್ಲ.

**ಉಪನಿಷತ್—ಯದ್ ವೈ ತನ್ನ ವಿಜಾನಾತಿ।ವಿಜಾನನ್ ವೈ ತನ್ನ ವಿಜಾನಾತಿ। ನ ಹಿ ವಿಜ್ಞಾತುರ್ವಿಜ್ಞಾತೇರ್ವಿಪರಿಲೋಪೋ ವಿದ್ಯತೇ ಅವಿನಾಶಿತ್ವಾತ್। ನ ತು ತದ್ ದ್ವಿತೀಯಮಸ್ತಿ ತತೋಽನ್ಯದ್ ವಿಭಕ್ತಂ ಯದ್ ವಿಜಾನೀಯಾತ್।**

ಪರಬ್ರಹ್ಮನು ಯಾವುದನ್ನು ಬುದ್ಧಿಯಿಂದ ಗ್ರಹಿಸುವುದಿಲ್ಲವೋ ಅದು ಇಲ್ಲವೇ ಇಲ್ಲ. ಬ್ರಹ್ಮನು ತನಗಿಂತ ಭಿನ್ನವಾದ ಸಮನಾದ ವಸ್ತುವನ್ನು ಬುದ್ಧಿಯಿಂದ ಗ್ರಹಿಸುವುದಿಲ್ಲವೆಂದರೆ ಅಂಥ ವಸ್ತು ಇಲ್ಲವೆ ಇಲ್ಲ. ಬ್ರಹ್ಮನ ಬುದ್ಧೀಂದ್ರಿಯಜನ್ಯ ಜ್ಞಾನಕ್ಕೆ ಲೋಪವೆಂದೂ ಇಲ್ಲ. ಅಂದರೆ ಅದು ಅಯಥಾರ್ಥವಾಗುವುದೇ ಇಲ್ಲ. ಏಕೆಂದರೆ ಅದು ದೋಷರಹಿತ ಮತ್ತು ಅಬಾಧಿತ. ಮತ್ತು ಅವನು ತಿಳಿದ ವಸ್ತುವಿಗಿಂತ ಭಿನ್ನವಾದ ಅಥವಾ ವಿರುದ್ಧವಾದ ವಸ್ತುವನ್ನು ಬುದ್ಧಿಯಿಂದ ತಿಳಿಯುವ ಬೇರೆ ಜ್ಞಾನಿ ಯಾರೂ ಇರುವುದೂ ಇಲ್ಲ.

**ಪರಮಾತ್ಮನೊಬ್ಬನೆ ಸರ್ವಜ್ಞ :**

**ಉಪನಿಷತ್—ಯತ್ರ ವಾ ಅನ್ಯದಿವ ಸ್ಯಾತ್ ತತ್ರ ಅನ್ಯೋಽನ್ಯತ್ ಪಶ್ಯೇತ್। ಅನ್ಯೋಽನ್ಯದ್ ಜಿಘ್ರೇತ್।ಅನ್ಯೋಽನ್ಯದ್ ರಸಯೇತ್।ಅನ್ಯೋಽನ್ಯದ್**

**ವದೇತ್ । ಅನ್ಯೋಽನ್ಯತ್ ಶೃಣುಯಾತ್ । ಅನ್ಯೋಽನ್ಯನ್ಮನ್ವೀತ । ಅನ್ಯೋಽನ್ಯತ್ ಸ್ಪೃಶೇತ್ । ಅನ್ಯೋಽನ್ಯದ್ ವಿಜಾನೀಯಾತ್ ।**

ಬ್ರಹ್ಮಭಿನ್ನನಾದ ಯಾವುದೇ ಚೇತನ ಅಲ್ಪ ಸ್ವಾತಂತ್ರ್ಯವನ್ನಾದರೂ ಹೊಂದಿದ್ದರೆ ಆಗ ಆ ಚೇತನನು ಬ್ರಹ್ಮನು ನೋಡಿರದ ವಸ್ತುವನ್ನು ನೋಡುತ್ತಿದ್ದನು, ಆಘ್ರಾಣಿಸಿರದ ವಸ್ತುವನ್ನು ಆಘ್ರಾಣಿಸುತ್ತಿದ್ದನು, ಸವಿಯದಿರುವುದನ್ನು ಸವಿಯುತ್ತಿದ್ದನು, ವರ್ಣಿಸದಿದ್ದುದನ್ನು ವರ್ಣಿಸುತ್ತಿದ್ದನು, ಕೇಳದಿದ್ದುದನ್ನು ಕೇಳುತ್ತಿದ್ದನು, ಮನಸ್ಸಿನಿಂದ ಗ್ರಹಿಸದಿದ್ದುದನ್ನು ಗ್ರಹಿಸುತ್ತಿದ್ದನು, ಸ್ಪರ್ಶಿಸದಿದ್ದುದನ್ನು ಸ್ಪರ್ಶಿಸುತ್ತಿದ್ದನು, ಬುದ್ಧಿಯಿಂದ ತಿಳಿಯದಿದ್ದುದನ್ನು ತಿಳಿಯುತ್ತಿದ್ದನು.

**ಉಪನಿಷತ್—ಸಲಿಲ ಏಕೋ ದ್ರಷ್ಟಾಽದ್ವೈತೋ ಭವತಿ । ಏಷ ಬ್ರಹ್ಮಲೋಕಃ ಸಮ್ರಾಡಿತಿ ಹೈನಮನುಶಶಾಸ ಯಾಜ್ಞವಲ್ಕ್ಯಃ । ಏಷಾಽಸ್ಯ ಪರಮಾ ಗತಿಃ । ಏಷಾಽಸ್ಯ ಪರಮಾ ಸಂಪತ್ । ಏಷೋಽಸ್ಯ ಪರಮೋಲೋಕಃ । ಏಷೋಽಸ್ಯ ಪರಮ ಆನಂದಃ । ಏತಸ್ಯೈವಾನಂದಸ್ಯಾನ್ಯಾನಿ ಭೂತಾನಿ ಮಾತ್ರಾಮುಪಜೀವಂತಿ ।**

ಸಮಾನರಹಿತನೂ ವಿರೋಧಿ ದ್ವಿತೀಯರಹಿತನೂ ಆದ ವಿಷ್ಣು ಒಬ್ಬನೇ ಎಲ್ಲವನ್ನೂ ನೋಡುತ್ತಾ ಚೇತನ ಪ್ರಕೃತಿರೂಪವಾದ ನೀರಿನಲ್ಲಿ ಇರುತ್ತಾನೆ. ರಾಜನೆ! ಇವನು ಒಬ್ಬನೇ ಪೂರ್ಣಜ್ಞಾನಸ್ವರೂಪನು ಎಂದು ಯಾಜ್ಞವಲ್ಕರು ಜನಕನಿಗೆ ಉಪದೇಶಿಸಿದರು. ವಿಷ್ಣುವಿನ ವ್ಯಾಪ್ತಿ ಎಲ್ಲ ದೇಶ ಎಲ್ಲ ಕಾಲಗಳಲ್ಲೂ ಇರುವಂಥಹುದು. ಇವನ ಸಂಪತ್ತು ಪೂರ್ಣ. ಇವನ ಜ್ಞಾನವು ಪೂರ್ಣ. ಇವನ ಆನಂದವು ಪೂರ್ಣ. ಬೇರೆ ಮುಕ್ತಚೇತನರು ಇವನ ಆನಂದದ ಒಂದು ಸಣ್ಣ ಅಂಶದಷ್ಟು ಆನಂದವನ್ನು ಅನುಭವಿಸುತ್ತಾರೆ.

**ಭಾಷ್ಯ—ದ್ರಷ್ಟ್ರಂತರ ನಿಷೇಧೇನ ತಸ್ಯೈವ ಸರ್ವದ್ರಷ್ಟೃತ್ವಮೇವ ಚ 'ಯತ್ರ ವಾ ಅನ್ಯದಿವ ಸ್ಯಾದಿ'ತ್ಯಾದಿನೋಪಸಂಹ್ರೀಯತೇ ।**

**ಅನುವಾದ**—ಭಗವಂತನು ತಿಳಿದ ವಸ್ತುವಿಗಿಂತ ಬೇರೆಯಾದ ವಸ್ತುವನ್ನು ತಿಳಿಯುವ ಬೇರೆ ಜ್ಞಾನಿ ಇಲ್ಲವೆಂದು ಹೇಳಿ, ಭಗವಂತನೇ ಸರ್ವಜ್ಞ ಎಂಬುದನ್ನು 'ಯತ್ರ ವಾ ಅನ್ಯದಿವ ಸ್ಯಾತ್' ಎಂದು ಮೊದಲಾದ ವಾಕ್ಯಗಳಿಂದ ಉಪಸಂಹರಿಸಲಾಗುತ್ತದೆ.

**ಭಾಷ್ಯ—ಅನ್ಯಥಾ "ಅನ್ಯೋಽನ್ಯತ್ ಪಶ್ಯೇತ್" ಇತ್ಯಾದಿಕಮನರ್ಥಕಮ್ । ನ ಹ್ಯೇಕಸ್ಯಾನ್ಯತ್ವೇ ಅನ್ಯಸ್ಯಾನನ್ಯತ್ವಂ ಭವತಿ । ಅತೋ ದ್ವಿತೀಯಾನ್ಯ-**

**ಶಬ್ದೋ ವ್ಯರ್ಥ ಏವ ಸ್ಯಾತ್। ನ ಚ ತತ್ಪಕ್ಷೇ ದೃಶ್ಯತ್ವಾದಿಕಮಾತ್ಮನೋ ವಿದ್ಯತೇ ।**

**ಅನುವಾದ**—ಸುಷುಪ್ತಿಯಲ್ಲಿ ಅವಿದ್ಯೆ ಇಲ್ಲದಿರುವುದರಿಂದ ಅವಿದ್ಯಾಕಲ್ಪಿತವಾದ ಜಗತ್ತೂ ಇರುವುದಿಲ್ಲವೆಂದು 'ಯತ್ರ ವಾ ಅನ್ಯದಿವ ಸ್ಯಾತ್' ಇತ್ಯಾದಿ ವಾಕ್ಯಕ್ಕೆ ಅರ್ಥವನ್ನು ಕಲ್ಪಿಸುವುದಾದರೆ 'ಅನ್ಯಃ ಅನ್ಯತ್ ಪಶ್ಯೇತ್' ಎಂದು ಎರಡೂ 'ಅನ್ಯ' ಪದಗಳು ವ್ಯರ್ಥವಾಗುವುವು. ವಿಷಯವು ಜ್ಞಾತೃವಿನಿಂದ ಭಿನ್ನವಾದರೆ ಜ್ಞಾತೃವು ವಿಷಯದಿಂದ ಅಭಿನ್ನನಾಗುವುದಿಲ್ಲ. ಆದ್ದರಿಂದ 'ಅನ್ಯಃ ಪಶ್ಯೇತ್' ಎಂದು ಮೊದಲನೇ ಅನ್ಯಪದ ಬೇಡ. ಅದನ್ನು ಸ್ಪಷ್ಟತೆಗಾಗಿ ಇಟ್ಟುಕೊಂಡರೂ ಎರಡನೆಯ ಅನ್ಯತ್ ಪದವು ವ್ಯರ್ಥವೇ ಆಗುವುದು. ಏಕೆಂದರೆ 'ಯತ್ರ ವಾ ಅನ್ಯದಿವ ಸ್ಯಾತ್' ಎಂದುವಿಷಯವನ್ನು ಅನ್ಯಪದದಿಂದ ಹೇಳಿಯಾಗಿದೆ. ಮಾಯಾವಾದಿಗಳ ಪಕ್ಷದಲ್ಲಿ ಆತ್ಮನಿಗೆ ದೃಶ್ಯತ್ವ ಮೊದಲಾದವುಗಳು ಇಲ್ಲ.

**ವಿವರಣೆ**—'ಯತ್ರ ವಾ ಅನ್ಯದಿವ ಸ್ಯಾತ್ ತತ್ರ ಪಶ್ಯೇತ್ ಎಂದಿಷ್ಟೇ ಹೇಳಿದರೆ ಅವಿದ್ಯೆ ಇಲ್ಲದ ಸುಷುಪ್ತಿಕಾಲದಲ್ಲಿ ಆತ್ಮನಿಗೆ ಯಾವ ಜ್ಞಾನವೂ ಇಲ್ಲವೆಂದಾಗುತ್ತದೆ. ಆದರೆ ಆಗ ಆತ್ಮನಿಗೆ ತನ್ನ ಜ್ಞಾನವಿರುತ್ತದೆ. ಆದ್ದರಿಂದ ಅವಿದ್ಯೆ ಇದ್ದಾಗ ಆತ್ಮನಿಗಿಂತ ಭಿನ್ನವಸ್ತುಗಳ ಜ್ಞಾನವಿದೆ. ಅವಿದ್ಯೆ ಇಲ್ಲದಿರುವಾಗ ಆ ಭಿನ್ನವಸ್ತುಗಳ ಜ್ಞಾನವಿಲ್ಲ ಎಂದು ಹೇಳುವುದಕ್ಕಾಗಿ ಎರಡನೆಯ ಅನ್ಯತ್ ಪದವು ಸಾರ್ಥಕ'- ಎಂದು ಮಾಯಾವಾದಿಗಳು ಹೇಳುತ್ತಾರೆ. ಆದರೆ ಅವರ ಪ್ರಕಾರ ಆತ್ಮನಿಗೆ ದೃಶ್ಯತ್ವವಿಲ್ಲ. ಆತ್ಮನು ಯಾರ ಜ್ಞಾನಕ್ಕೂ ಗೋಚರನಲ್ಲ. ತನ್ನ ಜ್ಞಾನಕ್ಕೆ ಹೇಗೆ ಗೋಚರನಾಗುವನು? ಆದ್ದರಿಂದ ಅನ್ಯತ್ಎಂಬ ಪದವು ವ್ಯರ್ಥವೇ ಸರಿ.

**ಭಾಷ್ಯ—ತಸ್ಮಾದ್ ಯತ್ರ ಕಿಂಚಿದಪಿ ಸ್ವಾತಂತ್ರ್ಯಮನ್ಯಸ್ಯ ಭವತಿ ತತ್ರೈವ ಭಗವತೋಽನ್ಯಃ ಪುರುಷೋ ಭಗವದ್ದೃಷ್ಟಾದನ್ಯತ್ ಪಶ್ಯತೀತ್ಯಾದಿ ಯುಜ್ಯತೇ । ತದೇವ ನಾಸ್ತಿ । ಅತಃ ನಾನ್ಯೋಽನ್ಯತ್ ಪಶ್ಯೇದಿತ್ಯರ್ಥಃ ।**

**ಅನುವಾದ**—ಹೀಗೆ ಪರಕೀಯರ ವ್ಯಾಖ್ಯಾನವು ಅಯುಕ್ತವಾಗುವುದರಿಂದ ನಾವು ಹೇಳುವಂತೆ 'ಹರಿಭಿನ್ನಚೇತನನಿಗೆ ಸ್ವಲ್ಪವಾದರೂ ಸ್ವಾತಂತ್ರ್ಯವು ಇರುವುದಾದರೆ ಆಗ ಮಾತ್ರ ಹರಿಗಿಂತ ಭಿನ್ನನಾದ ಪುರುಷನು ಹರಿಯು ನೋಡಿದ ವಸ್ತುವಿಗಿಂತ ಭಿನ್ನವಾದ ಅಥವಾ ವಿರುದ್ಧವಾದ ವಸ್ತುವನ್ನು ನೋಡುತ್ತಾನೆ ಎಂದು ಮುಂತಾದುದು ಯುಕ್ತವಾದೀತು. ಆದರೆ ಅಂತಹ ಸ್ವಾತಂತ್ರ್ಯವು ಇಲ್ಲವೆ ಇಲ್ಲ. ಆದ್ದರಿಂದ ಹರಿಗಿಂತ ಭಿನ್ನನಾದ ಪುರುಷನು ಹರಿಯು ನೋಡಿದ ವಸ್ತುವಿಗಿಂತ

ಭಿನ್ನವಾದ ಅಥವಾ ವಿರುದ್ಧವಾದ ವಸ್ತುವನ್ನು ನೋಡುವುದಿಲ್ಲ'ಎಂದೇ ಅರ್ಥವನ್ನು ಹೇಳಬೇಕು.

**ಭಾಷ್ಯ**—**ಅನ್ಯದಿವೇತೀವಶಬ್ದೋಽಲ್ಪಸ್ವಾತಂತ್ರ್ಯಾರ್ಥೇ । ರಾಜ್ಞಃ ಪೃಥಗಿವ ಭೃತ್ಯ ಇತಿವತ್ ।**
**ಉಪಮಾರ್ಥೇ ತಥಾಽಲ್ಪತ್ವೇಽಪೀವಶಬ್ದಃ ಪ್ರಯುಜ್ಯತೇ ।**
**ಇತಿ ಚ ಶಬ್ದನಿರ್ಣಯೇ ।**

**ಸ್ವರೂಪಭೇದೇ ಸ್ವಾತಂತ್ರ್ಯೇ ವಿರೋಧೇ ಚ ವಿಲಕ್ಷಣೇ ।**
**ಅನ್ಯಶಬ್ದಶ್ಚತುರ್ಷ್ವೇಷು ಪ್ರಯೋಕ್ತವ್ಯೋ ಮುನೀಷಿಭಿಃ । ಇತಿ ಚ ।**
**ಅನನ್ಯಾಃ ಸರ್ವ ಏವೈತೇ ಯೋಧಾಃ ಕುಂತೀಸುತಾದಪಿ ।**
**ಇತಿ ಪ್ರಯೋಗಾಚ್ಚ ।**
**ದಶರಾತ್ರ್ಯಭುಕ್ತಮಿವ ನ ಸಮ್ಯಕ್ ಸ್ವಲ್ಪಭೋಜನಾದ್। ಇತಿ ಚ।**

**ಅನುವಾದ**—'ಅನ್ಯದಿವ' ಎಂಬಲ್ಲಿ ಇವಶಬ್ದಯುಕ್ತವಾದ ಅನ್ಯಶಬ್ದವು 'ಅಲ್ಪಸ್ವಾತಂತ್ರ್ಯ' ಎಂಬ ಅರ್ಥದಲ್ಲಿದೆ. 'ರಾಜ್ಞಃಪೃಥಗಿವ' ಎಂಬ ಪ್ರಯೋಗದಂತೆ. 'ಪೃಥಗಿವ' ಶಬ್ದಕ್ಕೆ ಅಲ್ಪ ಸ್ವಾತಂತ್ರ್ಯವುಳ್ಳವನು ಎಂದರ್ಥ. ಭೃತ್ಯನು ರಾಜನ ಅಧೀನನೇ ಆಗಿದ್ದು ಅಲ್ಪ ಮಾತ್ರ ಸ್ವಾತಂತ್ರ್ಯವುಳ್ಳವನಾಗಿದ್ದಾನೆ ಎಂಬುದು ಈ ವಾಕ್ಯದ ಅರ್ಥ. ಸದೃಶ ಎಂಬ ಅರ್ಥದಲ್ಲಿಯೂ ಅಲ್ಪ ಎಂಬ ಅರ್ಥದಲ್ಲಿಯೂ ಇವ ಶಬ್ದವು ಪ್ರಯೋಗಿಸಲ್ಪಡುತ್ತದೆ ಎಂದು ಶಬ್ದನಿರ್ಣಯದಲ್ಲಿ ಹೇಳಿದೆ. ಸ್ವರೂಪಭೇದ, ಸ್ವಾತಂತ್ರ್ಯ, ವಿರೋಧ ಮತ್ತು ವಿಲಕ್ಷಣತ್ವ ಈ ನಾಲ್ಕು ಅರ್ಥಗಳಲ್ಲಿ ಅನ್ಯಶಬ್ದವನ್ನು ಜ್ಞಾನಿಗಳು ಪ್ರಯೋಗಿಸಬೇಕು ಎಂದೂ ಶಬ್ದನಿರ್ಣಯದಲ್ಲಿ ಹೇಳಿದೆ. ಸ್ವಾತಂತ್ರ್ಯ ಎಂಬ ಅರ್ಥದಲ್ಲಿ ಅನ್ಯಶಬ್ದಕ್ಕೆ 'ಈ ಯೋಧರೂ ಕೂಡ ಕುಂತೀಸುತನಿಂದ ಅನ್ಯರಲ್ಲ' ಎಂಬ ಪ್ರಯೋಗವೂ ಇದೆ. 'ಹತ್ತು ದಿನ ಊಟ ಮಾಡಿಯೇ ಇಲ್ಲವೆಂಬಂತೆ, ಏಕೆಂದರೆ ಸರಿಯಾಗಿ ಉಂಡಿಲ್ಲ, ಸ್ವಲ್ಪವೇ ಊಟ' ಎಂದು ಮುಂತಾಗಿಯೂ ಪ್ರಯೋಗಗಳಿರುವುದರಿಂದ ಇವಶಬ್ದವು ಅಲ್ಪ ಎಂಬ ಅರ್ಥವುಳ್ಳದ್ದು.

**ಭಾಷ್ಯ**—**ಪ್ರಕೃತೇಃ ಪುರುಷಾಣಾಂ ಚ ನಾಣುಮಾತ್ರಮಪಿ ಕ್ವಚಿದ್ ।**
**ಸ್ವಾತಂತ್ರ್ಯಂ ವಿಷ್ಣುನಾ ಸರ್ವೇ ನಿಯತಾಃ ಸರ್ವದೈವ ಹಿ ।**
**ತದದೃಷ್ಟಂ ತತಃ ಕೋ ಹಿ ಪಶ್ಯೇತ್ ಕಿಂ ವಾಪಿ ತದ್ ಭವೇತ್ ।**
**ಇತಿ ಮಹಾಮೀಮಾಂಸಾಯಾಂ ।**

**ಅನುವಾದ**—ಲಕ್ಷ್ಮೀದೇವಿಗೆ ಮತ್ತು ಚತುರ್ಮುಖಾದಿ ಚೇತನರಿಗೆ ಯಾವುದೇ

ವಿಷಯದಲ್ಲಿ ಅಣುಮಾತ್ರ ಸ್ವಾತಂತ್ರ್ಯವೂ ಇಲ್ಲ. ಎಲ್ಲರೂ ಎಲ್ಲ ಕಾಲದಲ್ಲೂ ವಿಷ್ಣು ವಿನಿಂದ ನಿಯಂತ್ರಿಸಲ್ಪಟ್ಟಿದ್ದಾರೆ. ಆದ್ದರಿಂದ ಯಾರು ತಾನೆ ಅವನು ನೋಡದ ವಸ್ತುವನ್ನು ನೋಡಿಯಾನು! ಅಂತಹ ವಸ್ತು ಯಾವುದು ಇದ್ದೀತು! ಎಂದು ಮಹಾ ಮೀಮಾಂಸೆಯಲ್ಲಿ ಹೇಳಿದೆ.

**ಭಾಷ್ಯ—ಅಭೇದೇನ ಸ್ವಾವತಾರಾನ್ ಜೀವಾಜೀವಂ ತು ಭೇದತಃ ।**
**ಯದಭ್ರಮೋ ಹರಿರ್ವೇತ್ತಿ ಸ ತದನ್ಯಚ್ಚ ತದ್ದ್ವಯಂ । ಇತಿ ಚ ।**

**ಅನುವಾದ**—ಭ್ರಮರಹಿತನಾದ ಹರಿಯು ತನ್ನ ಅವತಾರ ರೂಪಗಳನ್ನು ತನ್ನಿಂದ ಅಭಿನ್ನವೆಂದು ತಿಳಿಯುತ್ತಾನೆ. ಆದ್ದರಿಂದ ಅವು ಅಭಿನ್ನಗಳೆ. ಜೀವ ಜಡಗಳನ್ನು ಪರಸ್ಪರ ಮತ್ತು ತನ್ನಿಂದ ಭಿನ್ನವೆಂದೂ ತಿಳಿಯುತ್ತಾನೆ. ಆದ್ದರಿಂದ ಜೀವಜಡಗಳು ಪರಸ್ಪರ ಮತ್ತು ಅವನಿಂದ ಭಿನ್ನವಾಗಿವೆ ಎಂದೂ ಮಹಾಮೀಮಾಂಸೆ ಯಲ್ಲಿ ಹೇಳಿದೆ.

**ಭಾಷ್ಯ—ಅನ್ಯದಪ್ಯಸ್ವಾತಂತ್ರ್ಯೇಣಾನ್ಯವತ್ ಸ್ಥಿತಂ ಯಸ್ಮಿನ್ ಪಕ್ಷೇಽಸ್ತಿ ತತ್ರೈವಾಸ್ಯ ದರ್ಶನಾದಿ ವ್ಯವಹಾರೋ ಯುಜ್ಯತೇ । ಸಪ್ತಮ ರಸಾದಿ ದರ್ಶನಾಭಾವಾದಿತಿ ಚ ।**

**ಅನುವಾದ**—ಸ್ವತಃ ಭಿನ್ನವಾಗಿದ್ದರೂ ಅಸ್ವತಂತ್ರವಾದುದರಿಂದ 'ಅನ್ಯದಿವ' ಎನಿಸುವ ಪ್ರಪಂಚವು ಯಾವ ಪಕ್ಷದಲ್ಲಿ ಸತ್ಯವಾಗಿದೆಯೋ ಆ ಪಕ್ಷದಲ್ಲಿ ಮಾತ್ರ 'ಬ್ರಹ್ಮಭಿನ್ನನು ಬ್ರಹ್ಮಭಿನ್ನವಾದ ಪ್ರಪಂಚವನ್ನು ನೋಡುತ್ತಾನೆ' ಎಂದು ಮೊದ ಲಾದ ವ್ಯವಹಾರವು ಯುಕ್ತವಾಗುತ್ತದೆ, ಹೊರತು ಭಿನ್ನ ಪ್ರಪಂಚವೇ ಇಲ್ಲವೆನ್ನುವ ಪಕ್ಷದಲ್ಲಿ ಅಲ್ಲ. ಭಿನ್ನ ಪ್ರಪಂಚ ವಾಸ್ತವವಾಗಿಲ್ಲದಿದ್ದರೂ ದರ್ಶನಾದಿ ವ್ಯವಹಾರ ಕೂಡಬಹುದೆನ್ನುವುದು ಸರಿಯಲ್ಲ. ಏಕೆಂದರೆ ಸಪ್ತಮರಸ ಮೊದಲಾದವುಗಳ ದರ್ಶನ ವಿಲ್ಲ. ಅದರಿಂದ ಸುಖಾನುಭವವೂ ಆಗುವುದಿಲ್ಲ— ಹೀಗೂ ಉಪನಿಷತ್ತಿಗೆ ಅರ್ಥ ಗ್ರಹಿಸಬೇಕು.

**ವಿವರಣೆ**—ಭಿನ್ನ ಜಗತ್ತು ಇಲ್ಲದಿದ್ದರೆ ಅದರ ದರ್ಶನ ವ್ಯವಹಾರ ಇತ್ಯಾದಿ ಗಳು ಏಕೆ ಸಾಧ್ಯವಾಗಬಾರದು? ಈ ಪ್ರಶ್ನೆಗೆ ಸಮಾಧಾನ— ಇಲ್ಲದ ಜಗತ್ತಿನ ದರ್ಶನ ವ್ಯವಹಾರ ಆಗಬಹುದಾದರೆ ಲೋಕದಲ್ಲಿ ಷಡ್ರಸಗಳು ಪ್ರಸಿದ್ಧ: ಸಪ್ತಮರಸವೆಂಬು ದಿಲ್ಲ. ಆ ಇಲ್ಲದ ಸಪ್ತಮರಸದ ಅನುಭವ, ಅದರಿಂದ ಸುಖವುಂಟಾಗಬೇಕಾಗುತ್ತದೆ. ಇದು ಲೋಕದಲ್ಲಿ ಇಲ್ಲ. ಅಂತೆಯೇ ಇಲ್ಲದ ಜಗತ್ತಿನ ದರ್ಶನ ವ್ಯವಹಾರಗಳು

ಸಾಧ್ಯವಲ್ಲ. ದರ್ಶನ ವ್ಯವಹಾರಗಳಿರುವುದರಿಂದ ಜಗತ್ತು ಇದೆ ಎನ್ನುವುದೇ ತತೋಽನ್ಯದ್ ವಿಭಕ್ತಂ ಯತ್ ಪಶ್ಯೇತ್ ಎಂಬ ವಾಕ್ಯದ ಅಭಿಪ್ರಾಯ.

**ಭಾಷ್ಯ—ಸರ್ವೇಂದ್ರಿಯೋಪಭೋಗೋಽಪಿ ವಿಷ್ಣೋಃ ಸ್ವಾತ್ಮನಿ ವಿದ್ಯತೇ ।**

**ಅನುವಾದ**—ವಿಷ್ಣುವು ತನ್ನ ಎಲ್ಲ ಇಂದ್ರಿಯಗಳಿಂದಲೂ ಭಿನ್ನ ವಿಷಯ ಗಳನ್ನು ಮಾತ್ರವಲ್ಲದೆ ಸ್ವರೂಪಸುಖವನ್ನೂ ಕೂಡ ಅನುಭವಿಸುತ್ತಾನೆ.

**ವಿವರಣೆ**—'ಭಿನ್ನವಾದ ಪ್ರಪಂಚವು ಇದ್ದರೆ ಭಿನ್ನನಾದ ಹರಿಯು ಅದನ್ನು ನೋಡಿಯಾನು. ಇದು ಉಪನಿಷತ್ತಿಗೆ ಭಾಷ್ಯಾಭಿಮತವಾದ ಇನ್ನೊಂದು ಅರ್ಥ. ಈ ಅರ್ಥವಲ್ಲಿ ಎರಡನೆ ಅನ್ಯತ್ ಪದವು ವ್ಯರ್ಥ. ನೋಡುವವನು ಭಿನ್ನನಾದರೆ ನೋಡುವ ವಸ್ತು ಭಿನ್ನವೇ ಆಗಿರಬೇಕು ತಾನೆ?' ಈ ಆಕ್ಷೇಪಕ್ಕೆ ಸಮಾಧಾನ ಹೀಗೆ– ಎರಡನೆಯ ಅನ್ಯತ್ ಪದವಿಲ್ಲದಿದ್ದರೆ 'ಯತ್ರ ಅನ್ಯದಿವ ಸ್ಯಾತ್ ತತ್ರ ಅನ್ಯಃ ಪಶ್ಯೇತ್' ಭಿನ್ನಪ್ರಪಂಚವು ಇದ್ದರೆ, ಭಿನ್ನನಾದ ಒಬ್ಬನು ನೋಡಿಯಾನು. ಇಲ್ಲ ದಿದ್ದರೆ ನೋಡುವುದಿಲ್ಲ ಎಂದು ಅರ್ಥವಾದೀತು. ಆದರೆ ಇದು ಸರಿಯಲ್ಲ. ಏಕೆಂದರೆ ಭಿನ್ನ ವಿಷಯಗಳಿಲ್ಲದಿದ್ದರೂ ಸ್ವರೂಪಸುಖವನ್ನು ಹರಿಯು ಅನುಭವಿಸು ತ್ತಾನೆ. ಆದ್ದರಿಂದ ಭಿನ್ನಪ್ರಪಂಚವಿಲ್ಲದಿದ್ದರೆ ಭಿನ್ನವಿಷಯಗಳ ದರ್ಶನ ಇತ್ಯಾದಿ ಗಳು ಯುಕ್ತವಾಗಲಾರವು' ಎಂದೇ ಹೇಳಬೇಕು. ಅದಕ್ಕೆ ಎರಡನೆ ಅನ್ಯತ್ ಪದವು ಆವಶ್ಯಕ.

**ಜಗತ್ತು ಅಸತ್ಯವಲ್ಲ :**

**ಭಾಷ್ಯ—ಯದಿ ಜಗದೇವ ನ ಸ್ಯಾತ್ ತದಾ ಕಥಂ ಮೋಕ್ಷೇಽಪ್ಯನ್ಯಾನಿ ಭೂತಾನಿ ಮಾತ್ರಾಮುಪಜೀವಂತೀತಿ ಯುಜ್ಯತೇ । ಮೋಕ್ಷ ಪ್ರಕರಣಂ ಚೈತತ್। 'ಸ್ವಾಪ್ಯಯ ಸಂಪತ್ತ್ಯೋರನ್ಯತರಾಪೇಕ್ಷಮ್ ಆವಿಷ್ಕೃತಂ ಹಿ'। ಇತಿ ಭಗವದ್ವಚನಮ್ ।**

**ಅನುವಾದ**—ಭಿನ್ನವಾದ ಪ್ರಪಂಚ ಇಲ್ಲಿ ಎಂದು ವ್ಯಾಖ್ಯಾನಿಸುವ ಪಕ್ಷದಲ್ಲಿ ಭಿನ್ನವಾದ ಪ್ರಪಂಚವೇ ಇಲ್ಲದಿದ್ದರೆ ಮೋಕ್ಷದಲ್ಲಾದರೂ ಬೇರೆ ಜೀವರು ಹರಿಯ ಆನಂದದ ಒಂದು ಅಂಶದಷ್ಟು ಆನಂದವನ್ನು ಅನುಭವಿಸುತ್ತಾರೆ ಎಂಬುದು ಹೇಗೆ ಯುಕ್ತವಾಗುತ್ತದೆ? ಇದು ಮೋಕ್ಷಕ್ಕೆ ಸಂಬಂಧಿಸಿದುದಲ್ಲ ಎನ್ನಬಾರದು. ಇದು ಸುಷುಪ್ತಿ ಮೋಕ್ಷಗಳೆರಡರ ಪ್ರಕರಣವೇ ಆಗಿದೆ. ಏಕೆಂದರೆ 'ಸ್ವಾಪ್ಯಯ ಸಂಪತ್ತ್ಯೋ ರನ್ಯತರಾಪೇಕ್ಷಮಾವಿಷ್ಕೃತಂ ಹಿ' ಎಂದು ಭಗವಾನ್ ವೇದವ್ಯಾಸರ ಬ್ರಹ್ಮಸೂತ್ರವು ಇದನ್ನು ನಿರ್ಣಯಿಸಿದೆ.

ಭಾಷ್ಯ—ಯದಾ ಹಿ ಸಲಿಲತ್ವೇನ ಪ್ರಕೃತಿರ್ವ್ಯಾಪ್ಯ ತಿಷ್ಠತಿ ।
ತದಾ ತಸ್ಯಾಂ ಪರೋ ವಿಷ್ಣುರೇಕೋ ದ್ರಷ್ಟಾ ವ್ಯವಸ್ಥಿತಃ ।
ಅವಿರೋಧಾದದ್ವಿತೀಯ ಏಕೋಽಸೌ ಸಮವರ್ಜನಾತ್ ।
ಬೃಹಜ್ಜ್ಞಾನೋ ಬ್ರಹ್ಮಲೋಕಃ ಸದೈವ ಪುರುಷೋತ್ತಮಃ ।
ಸರ್ವಗತ್ವಾದಸ್ಯ ಗತಿಃ ಪರಾ ವಿಷ್ಣೋಃ ಸದೈವ ಹಿ ।
ಪೂರ್ಣೈಶ್ವರ್ಯಾದಸ್ಯ ಸಂಪತ್ ಪರಮಾ ಸಂಪ್ರಕೀರ್ತಿತಾ ।
ಸಾರ್ವಜ್ಞ್ಯಾತ್ ಪರಮೋ ಲೋಕೋ ವಿಷ್ಣೋರಾನಂದ ಏವ ಚ ।
ಸ್ವಾತಂತ್ರ್ಯಾತ್ ಪರಮೋ ಜ್ಞೇಯಃ ಸ ಹಿ ಪೂರ್ಣಃ ಸದೋದಿತಃ ।
ಪ್ರತಿಬಿಂಬರೂಪವಿಪ್ಲುಟ್ಕಾಂಸ್ತದಾನಂದಸ್ಯ ಚಾಖಿಲಾಃ ।
ಮುಕ್ತಾ ಬ್ರಹ್ಮಾದಯೋಽಶ್ನಂತಿ ತಾರತಮ್ಯೇನ ನಿತ್ಯದಾ ।

ಸಲೀಲಃ ಸಲಿಲ ಇತಿ ವಾ ।

**ಅನುವಾದ**—ಪ್ರಳಯಕಾಲದಲ್ಲಿ ಚೇತನ ಪ್ರಕೃತಿಯು ನೀರಿನ ರೂಪದಿಂದ ವ್ಯಾಪ್ತವಾಗಿರುವಾಗ ಸರ್ವೋತ್ತಮನಾದ ವಿಷ್ಣು ಒಬ್ಬನೇ ನೋಡುತ್ತಾ ಇರುತ್ತಾನೆ ಇವನು ವಿರೋಧಿರಹಿತನಾದುದರಿಂದ ಅದ್ವಿತೀಯ ಸಮರಹಿತನಾದುದರಿಂದ ಏಕ. ಸದಾ ಪೂರ್ಣಜ್ಞಾನ ರೂಪನಾದುದರಿಂದ ಬ್ರಹ್ಮಲೋಕ. ಈ ವಿಷ್ಣುವಿನ ವ್ಯಾಪ್ತಿಯು ಸದಾ ಸಾರ್ವತ್ರಿಕವಾದುದರಿಂದ ಅದು ಪರಮ. ಪೂರ್ಣೈಶ್ವರ್ಯವುಳ್ಳವನಾದ್ದರಿಂದ ಅವನ ಸಂಪತ್ತು ಪರಮ. ಸರ್ವಜ್ಞನಾದುದರಿಂದ ಅವನ ಜ್ಞಾನವು ಪರಮ. ಅವನು ಸ್ವತಂತ್ರನಾದ್ದರಿಂದ ಅವನ ಆನಂದವು ಸದಾ ವ್ಯಕ್ತವಾಗಿದ್ದು ಪೂರ್ಣವಾದುದರಿಂದ ಅದು ಪರಮ ಎಂದು ತಿಳಿಯಬೇಕು. ಮುಕ್ತರಾದ ಚತುರ್ಮುಖ ಬ್ರಹ್ಮ ಮೊದಲಾದವರು ಎಲ್ಲರೂ ಯಾವಾಗಲೂ ತಾರತಮ್ಯದಿಂದ ಅವನ ಆನಂದದ ಚಿಕ್ಕ ಅಂಶಕ್ಕೆ ಪ್ರತಿರೂಪಗಳಾಗಿರುವ ಸ್ವರೂಪಾನಂದವನ್ನು ಅನುಭವಿಸುತ್ತಾರೆ.

ಸಲಿಲ ಏಕೋ ದ್ರಷ್ಟಾ ಎಂಬಲ್ಲಿ ಸಲಿಲಶಬ್ದ ಪ್ರಥಮಾವಿಭಕ್ತ್ಯಂತವೆಂದಿಟ್ಟುಕೊಂಡರೆ, 'ಲೀಲೆಯಿಂದ ಕೂಡಿದ ಹರಿ' ಎಂದೂ ಅರ್ಥವನ್ನು ಗ್ರಹಿಸಬಹುದು. ಸಲೀಲವೆಂಬುದೇ ಸಲಿಲ ಎಂದಾಗಿದೆ.

**ಮುಕ್ತರ ಆನಂದತಾರತಮ್ಯ :**

**ಉಪನಿಷತ್**—ಸ ಯೋ ಹ ವೈ ಮನುಷ್ಯಾಣಾಂ ರಾದ್ಧಃ ಸಮೃದ್ಧೋ ಭವತಿ
ಅನ್ಯೇಷಾಮಧಿಪತಿಃ ಸರ್ವೈರ್ಮಾನುಷ್ಯಕೈರ್ಭೋಗೈಃ ಸಂಪನ್ನತಮಃ

**ಸ ಮನುಷ್ಯಾಣಾಂ ಪರಮ ಆನಂದಃ । ಅಥ ಯೇ ಶತಂ ಮನುಷ್ಯಾಣಾಮಾನಂದಾಃ ಸ ಏಕಃ ಪಿತೃಣಾಂ ಜಿತಲೋಕಾನಾಮಾನಂದಃ । ಅಥ ಯೇ ಶತಂ ಪಿತೃಣಾಂ ಜಿತಲೋಕಾನಾಮಾನಂದಾಃ ಸ ಏಕೋ ಗಂಧರ್ವಲೋಕ ಆನಂದಃ । ಅಥ ಯೇ ಶತಂ ಗಂಧರ್ವಲೋಕ ಆನಂದಾಃ ಸ ಏಕಃ ಕರ್ಮದೇವಾನಾಮಾನಂದೋ ಯೇ ಕರ್ಮಣಾ ದೇವತ್ವಮಭಿ ಸಂಪದ್ಯಂತೇ।ಅಥ ಯೇ ಶತಂ ಕರ್ಮದೇವಾನಾಮಾನಂದಾಃ ಸ ಏಕ ಅಜಾನದೇವಾನಾಮಾನಂದೋ ಯಶ್ಚ ಶ್ರೋತ್ರಿಯೋಽವೃಜಿನೋಽಕಾಮಹತಃ । ಅಥ ಯೇ ಶತಮಾಜಾನದೇವಾನಾಮಾನಂದಾಃ ಸ ಏಕಃ ಪ್ರಜಾಪತಿಲೋಕ ಆನಂದೋ ಯಶ್ಚ ಶ್ರೋತ್ರಿಯೋಽವೃಜಿನೋಽಕಾಮಹತಃ । ಅಥ ಯೇ ಶತಂ ಪ್ರಜಾಪತಿಲೋಕ ಆನಂದಾಃ ಸ ಏಕೋ ಬ್ರಹ್ಮಲೋಕ ಆನಂದೋ ಯಶ್ಚ ಶ್ರೋತ್ರಿಯೋಽವೃಜಿನೋಽಕಾಮಹತಃ । ಅಥೈಷ ಏವ ಪರಮ ಆನಂದ ಏಷ ಬ್ರಹ್ಮಲೋಕಃ ಸಮ್ರಾಡಿತಿ ಹೋವಾಚ ಯಾಜ್ಞವಲ್ಕ್ಯಃ । 'ಸೋಽಹಂ ಭಗವತೇ ಸಹಸ್ರಂ ದದಾಮಿ।ಅತ ಊರ್ಧ್ವಂ ವಿಮೋಕ್ಷಾಯೈವ ಬ್ರೂಹೀ'ತಿ। ಅತ್ರ ಹ ಯಾಜ್ಞವಲ್ಕ್ಯೋ ಬಿಭಯಾಂಚಕಾರ ಮೇಧಾವೀ ರಾಜಾ ಸರ್ವೇಭ್ಯೋ ಮಾಂ ತೇಭ್ಯ ಉದರೌತ್ಸೀದಿತಿ ।**

ಮನುಷ್ಯ ಚಕ್ರವರ್ತಿಗಳ ನಡುವೆ ಯಾರು ಪೂರ್ಣಸಾಧನೆಯನ್ನು ಮಾಡಿ ಪೂರ್ಣಮುಕ್ತಿಯನ್ನು ಹೊಂದಿರುವನೋ,ತನ್ನ ರಾಜ್ಯದಲ್ಲಿ ಜ್ಞಾನೋಪದೇಶಮಾಡಿದ ಪ್ರಯುಕ್ತ ಬೇರೆ ಮುಕ್ತರಿಗೆ ಅಧಿಪತಿಯಾಗಿರುವನೋ ಮತ್ತು ಮನುಷ್ಯನಾಗಿದ್ದಾಗ ಅಪರೋಕ್ಷ ಜ್ಞಾನಾನಂತರ ಮಾಡಿದ ಸತ್ಕರ್ಮಗಳ ಫಲವಾದ ಭೋಗಗಳನ್ನು ಮೋಕ್ಷದಲ್ಲಿ ಪೂರ್ಣವಾಗಿ ಪಡೆದಿರುವನೋ ಅವನ ಅಭಿವ್ಯಕ್ತ ಸ್ವರೂಪಾನಂದವು ಚಕ್ರವರ್ತಿಗಳ ಆನಂದದ ಪರಮಾವಧಿಯೆನಿಸುತ್ತದೆ. ಚಕ್ರವರ್ತಿಗಳ ಈ ಆನಂದದ ಹತ್ತು ಲಕ್ಷಪಟ್ಟು ಹೆಚ್ಚು ಆನಂದವು ಮುಕ್ತರಾದ ಪಿತೃಗಳ ಒಂದು ಆನಂದ. ಮುಕ್ತ ಪಿತೃಗಳ ಆನಂದದ ನೂರುಪಟ್ಟು ಹೆಚ್ಚು ಆನಂದವು ಮುಕ್ತರಾದ ಶ್ರೇಷ್ಠ ಗಂಧರ್ವರ ಒಂದು ಆನಂದ. ಮುಕ್ತರಾದ ಶ್ರೇಷ್ಠ ಗಂಧರ್ವರ ಆನಂದದ ನೂರುಪಟ್ಟು ಹೆಚ್ಚು ಆನಂದವು ಕರ್ಮದಿಂದ ದೇವಪದವಿಯನ್ನು ಹೊಂದಿದ ಕರ್ಮದೇವತೆಗಳ ಒಂದು ಆನಂದ. ಕರ್ಮದೇವತೆಗಳ ಆನಂದದ ನೂರುಪಟ್ಟು ಹೆಚ್ಚು ಆನಂದವು ಇಂದ್ರಾದಿ ದೇವತೆಗಳ ಒಂದು ಆನಂದ. ಈ ದೇವತೆಗಳು ವೇದಾಧ್ಯಯನದ ಪೂರ್ಣಫಲವನ್ನು ಹೊಂದಿದವರು, ದುಃಖರಹಿತರು ಮತ್ತು ವಿಫಲವಾಗದ ಆಸೆಯುಳ್ಳವರು. ಈ ದೇವತೆಗಳ ಆನಂದದ ಹತ್ತುಸಾವಿರ ಪಟ್ಟು ಹೆಚ್ಚು ಆನಂದವು ವೇದಾಧ್ಯಯನದ ಪೂರ್ಣಫಲವನ್ನು ಹೊಂದಿದ, ದುಃಖರಹಿತರಾದ, ವಿಫಲವಾಗದ ಆಸೆಯುಳ್ಳ ಮುಕ್ತ

ಶೇಷ ಗರುಡರ ಒಂದು ಆನಂದ. ಮುಕ್ತ ಶೇಷ ಗರುಡರ ಆನಂದದ ಹತ್ತುಸಾವಿರ ಪಟ್ಟು ಹೆಚ್ಚು ಆನಂದವು ವೇದಾಧ್ಯಯನದ ಪೂರ್ಣಫಲವನ್ನು ಹೊಂದಿದ, ದುಃಖ ರಹಿತರಾದ, ವಿಫಲವಾಗದ ಆಸೆಯುಳ್ಳ ಮುಕ್ತ ಬ್ರಹ್ಮರ ಒಂದು ಆನಂದ. ರಾಜನೇ! ಈ ಬ್ರಹ್ಮಾದಿಗಳೆಲ್ಲರೂ ಹರಿಯ ಆನಂದದ ಒಂದು ಅಲ್ಪಾಂಶ ಆನಂದವುಳ್ಳವರಾದ್ದರಿಂದ ಹರಿಯೊಬ್ಬನೇ ಪರಿಪೂರ್ಣಾನಂದವುಳ್ಳವನು. ಇವನೊಬ್ಬನೇ ಪರಿಪೂರ್ಣ ಜ್ಞಾನವುಳ್ಳವನು, ಎಂದು ಯಾಜ್ಞವಲ್ಕ್ಯರು ಹೇಳಿದರು 'ನಾನು ಪೂಜ್ಯರಾದ ತಮಗೆ ಸಹಸ್ರ ಗೋವುಗಳ ಗುರುದಕ್ಷಿಣೆಯನ್ನು ಕೊಡುವೆನು. ಉತ್ತಮ ಮೋಕ್ಷಕ್ಕಾಗಿ ಇನ್ನೂ ಹೆಚ್ಚಿನ ವಿಷಯವನ್ನು ಹೇಳಿರಿ' ಎಂದು ರಾಜನು ಕೇಳಿದನು. ಮೇಧಾವಿಯಾದ ರಾಜನು ತನ್ನ ಈ ಪ್ರಶ್ನೆಯಿಂದ ಅಶ್ವಲ ಮೊದಲಾದ ಎಲ್ಲರಿಗಿಂತಲೂ ಹೆಚ್ಚು ನಿರ್ಬಂಧವನ್ನು ನನಗೆ ಉಂಟುಮಾಡಿದ್ದಾನೆ ಎಂದು ಆಲೋಚಿಸಿ ಯಾಜ್ಞವಲ್ಕ್ಯರು ಹೆದರಿದರು.

**ಭಾಷ್ಯ—ಅನ್ಯೇಭ್ಯಸ್ತು ವಿಮುಕ್ತೇಭ್ಯ ಆನಂದಶ್ಚಕ್ರವರ್ತಿನಾಂ ।**
**ಮುಕ್ತಾನಾಂ ಹಿ ಶತೋದ್ರಿಕ್ತಃ ಪಿತೄಣಾಂ ತೇಭ್ಯ ಏವ ಚ ।**
**ತೇಭ್ಯೋಽಪ್ಯೃಷೀಣಾಂ ಮುಕ್ತಾನಾಂ ಕರ್ಮದೇವಾಭಿಧಾಯಿನಾಂ ।**
**ತೇಭ್ಯಶ್ಚ ಮುಕ್ತದೇವಾನಾಂ ತೇಭ್ಯಶ್ಶೋಮಾಪತೇಸ್ತಥಾ ।**
**ತಸ್ಮಾಚ್ಚ ಬ್ರಹ್ಮಣಸ್ತ್ವೇವಂ ಮುಕ್ತಸ್ಯ ಗರುಡಾದಪಿ ।**
**ಏಷ ಏವ ತತೋ ವಿಷ್ಣುಃ ಪೂರ್ಣಾನಂದಃ ಪ್ರಕೀರ್ತಿತಃ ।**
**ಯಸ್ಯ ಬ್ರಹ್ಮಾಽಪಿ ಮುಕ್ತಃ ಸನ್ ವಿಪ್ರುಣ್ಮಾತ್ರಂ ಸಮಶ್ನುತೇ ।**
**ಇತಿ ಚ ।**

**ಅನುವಾದ**—ಬೇರೆ ಮುಕ್ತಮನುಷ್ಯೋತ್ತಮರ ಆನಂದಕ್ಕಿಂತ ಮುಕ್ತ ಚಕ್ರವರ್ತಿಗಳ ಆನಂದವು ನೂರುಪಟ್ಟು ಹೆಚ್ಚು. ಅವರ ಆನಂದಕ್ಕಿಂತ ಹತ್ತುಲಕ್ಷ ಪಟ್ಟು ಹೆಚ್ಚು ಪಿತೃಗಳ ಆನಂದ. ಅವರಿಗಿಂತ ನೂರುಪಟ್ಟು ಹೆಚ್ಚು ಮುಕ್ತ ಋಷಿಗಳ ಆನಂದ. ಅವರಿಗಿಂತ ಕರ್ಮದೇವತೆಗಳ ಆನಂದ ನೂರುಪಟ್ಟು ಹೆಚ್ಚು. ಅವರಿಗಿಂತ ಮುಕ್ತರಾದ ಇಂದ್ರಾದಿ ದೇವತೆಗಳ ಆನಂದ ನೂರುಪಟ್ಟು ಹೆಚ್ಚು. ಅವರಿಗಿಂತ ಶಿವನ ಅಂದರೆ ಶೇಷನ ಆನಂದ ಹತ್ತುಸಾವಿರಪಟ್ಟು ಹೆಚ್ಚು. ಮುಕ್ತ ಶೇಷ ಗರುಡರಿಗಿಂತಲೂ ಮುಕ್ತ ಚತುರ್ಮುಖ ಬ್ರಹ್ಮನಿಗೆ ಹತ್ತುಸಾವಿರ ಪಟ್ಟು ಹೆಚ್ಚು ಆನಂದ. ಆದರೆ ವಿಷ್ಣು ಒಬ್ಬನೇ ಪೂರ್ಣಾನಂದ. ಏಕೆಂದರೆ ಚತುರ್ಮುಖನೂ ಕೂಡ ಮುಕ್ತನಾಗಿ ವಿಷ್ಣುವಿನ ಆನಂದದ ಅಲ್ಪಾಂಶದಷ್ಟು ಮಾತ್ರ ಸ್ವರೂಪಾನಂದವನ್ನು ಅನುಭವಿಸುತ್ತಾನೆ, ಎಂದೂ ಹೇಳಿದೆ.

**ಭಾಷ್ಯ—ರಾದ್ಧೋ ಮುಕ್ತಃ । ಮನುಷ್ಯಾಣಾಂ ಯೋಗ್ಯತಯಾ ಸ್ವಸಮೇಭ್ಯಃ ಪ್ರಯತ್ನಾಧಿಕ್ಯಾದಾಧಿಕ್ಯಂ ಮುಕ್ತೌ ಪ್ರಾಪ್ತುಂ ಶಕ್ಯತ ಇತ್ಯತಃ 'ಸಮೃದ್ಧ' ಇತ್ಯುಕ್ತಂ। ಯಾವತ್ ಸಾಧಯಿತುಂ ಶಕ್ಯತೇ ತಾವತ್ಸಾಧನೈಃ ಸಂಪೂರ್ಣತ್ವೇನ ಮುಕ್ತ ಇತ್ಯರ್ಥಃ ।**

**ಅನುವಾದ**—ರಾದ್ಧ ಅಂದರೆ ಮುಕ್ತ. ಮನುಷ್ಯೋತ್ತಮರೂ ಚಕ್ರವರ್ತಿಗಳೂ ಜ್ಞಾನಾನಂತರದ ಅಧಿಕ ಪ್ರಯತ್ನದಿಂದ ಯೋಗ್ಯತೆಯಲ್ಲಿ ತಮಗೆ ಸಮರಾದವರಿಗಿಂತ ಆಧಿಕ್ಯವನ್ನು ಮುಕ್ತಿಯಲ್ಲಿ ಪಡೆಯಲು ಸಾಧ್ಯವಿದೆ. ಅವರು ಸಮೃದ್ಧರೆನಿಸುತ್ತಾರೆ. ಆದ್ದರಿಂದ ಸಮೃದ್ಧ ಎಂದು ಹೇಳಿದೆ. ಎಷ್ಟು ಸಾಧನೆ ಮಾಡಲು ಸಾಧ್ಯವೋ ಅಷ್ಟು ಸಾಧನೆಗಳನ್ನು ಮಾಡಿ ಪೂರ್ಣ ಮುಕ್ತನಾದವನು ಎಂದು ಅರ್ಥ.

**ಭಾಷ್ಯ—ಸ್ವರಾಷ್ಟ್ರೇ ಜ್ಞಾನೋಪದೇಷ್ಟೃತ್ವಾನ್ಮುಕ್ತಾವಪಿ ತೇಷಾಂ ಅಧಿಪತಿಃ । ಜ್ಞಾನಪೂರ್ವಕತ್ವೇನ ಮನುಷ್ಯತ್ವೇ ದಾನಾದಿಕಂ ಕೃತ್ವಾ ತತ್ಫಲೈರಪಿ ಭೋಗೈರ್ಮುಕ್ತೌ ಸಂಪನ್ನತಮಃ । 'ನ ಹಾಸ್ಯ ಕರ್ಮ ಕ್ಷೀಯತೇ' ಇತಿ ಶ್ರುತೇಃ । ಅನ್ಯಥಾ ರಾದ್ಧ ಇತಿ ವಿಶೇಷಣಂ ವ್ಯರ್ಥಂ ಭವತಿ ।**

**ಅನುವಾದ**—ಸಂಸಾರಕಾಲದಲ್ಲಿ ತನ್ನ ರಾಷ್ಟ್ರದಲ್ಲಿ ಚಕ್ರವರ್ತಿಯು ಯಾರಿಗೆ ಜ್ಞಾನೋಪದೇಶ ಮಾಡಿರುತ್ತಾನೆಯೋ ಅವರಿಗೆ ಮುಕ್ತ ಚಕ್ರವರ್ತಿಯು ಮುಕ್ತಿಯಲ್ಲೂ ಅಧಿಪತಿಯಾಗಿರುತ್ತಾನೆ. ಮಾನುಷ್ಯಕ ಭೋಗಗಳಿಂದ ಸಂಪನ್ನತಮನೆಂದರೆ, ಸಂಸಾರ ಸ್ಥಿತಿಯಲ್ಲಿ ಅಪರೋಕ್ಷ ಜ್ಞಾನಾನಂತರ ಮಾಡಿದ ದಾನಾದಿ ಸತ್ಕರ್ಮಗಳ ಫಲವಾದ ಭೋಗಗಳಿಂದ ಮುಕ್ತಿಯಲ್ಲಿ ಸಂಪನ್ನತಮ ಎಂದರ್ಥ. 'ಅಪರೋಕ್ಷ ಜ್ಞಾನಿಯ ಕರ್ಮವು ನಾಶವಾಗುವುದಿಲ್ಲ' ಎಂದು ಶ್ರುತಿಯು ಹೇಳುವುದರಿಂದ ಜ್ಞಾನೋತ್ತರ ಕರ್ಮಫಲವು ಮುಕ್ತಿಯಲ್ಲಿ ಲಭಿಸುವುದು ಸಿದ್ಧವಾಗುತ್ತದೆ. ಇಲ್ಲಿ ಉಪನಿಷತ್ತಿಗೆ ಮುಕ್ತರನ್ನು ವರ್ಣಿಸುವ ಅಭಿಪ್ರಾಯವಿಲ್ಲದಿದ್ದರೆ 'ರಾದ್ಧಃ' ಎಂಬ ಪದವು ವ್ಯರ್ಥವಾಗುತ್ತದೆ, ಸಮೃದ್ಧ ಪದವೂ ವ್ಯರ್ಥವಾಗುತ್ತದೆ.

**ಭಾಷ್ಯ–'ಸ ಮನುಷ್ಯಾಣಾಂ ಪರಮ ಆನಂದ' ಇತಿ ಸ್ವರೂಪಾನಂದಶ್ಚಾತ್ರ ಉಚ್ಯತೇ । ನ ಹ್ಯಮುಕ್ತಾನಾಂ ಸ್ವರೂಪಾನಂದಾವಿರ್ಭಾವೋಽಸ್ತಿ ।**

**ಭುಜ್ಯತೇ ಸ್ವಸುಖಂ ಮುಕ್ತೈರಾಭಾಸೋಽನ್ಯೈಸ್ತತೋಽಪರಃ ।**

**ಇತಿ ಚ ।**

**ಜಿತಲೋಕಾ ಇತ್ಯಪಿ ಮುಕ್ತಾ ಏವೋಚ್ಯಂತೇ ।**

**ಅನುವಾದ**—'ತಮ ಮನುಷ್ಯ ಚಕ್ರವರ್ತಿಗಳ ಅಧಿಕಾನಂತ ಸ್ವರೂಪಾನಂದ' ಎಂದು ಸ್ವರೂಪಾನಂದವನ್ನು ಹೇಳಿದ್ದರಿಂದಲೂ ಇದು ಮುಕ್ತಪ್ರಕರಣ, ಮುಕ್ತರಾದವರಿಗೆ ಸ್ವರೂಪಾನಂದಾವಿರ್ಭಾವ ಇಲ್ಲ. 'ಮುಕ್ತರಿಂದ ಸ್ವರೂಪಾನಂದ ಅನುಭವಿಸಲ್ಪಡುತ್ತದೆ. ಸಂಸಾರಿಗಳಿಂದ ಅದರಂತೆಯೇ ಕಾಣುವ ವೈಷಯಿಕಾನಂದವು ಅನುಭವಿಸಲ್ಪಡುತ್ತದೆ' ಎಂದು ಪ್ರಮಾಣವಿದೆ. ಜಿತಲೋಕರೆಂದರೆ ಬ್ರಹ್ಮಜ್ಞಾನವನ್ನು ಪಡೆದವರು, ಈ ಪದವೂ ಮುಕ್ತರನ್ನೇ ವರ್ಣಿಸುತ್ತದೆ.

**ವಿವರಣೆ**—'ಜಿತಲೋಕ' ಎಂದರೆ ಜ್ಞಾನವನ್ನು ಹೊಂದಿದವರು ಎಂದು ಮಾತ್ರವೇ ಅರ್ಥವಲ್ಲ, ಏಕೆಂದರೆ ಎಲ್ಲ ಚೇತನರೂ ಜ್ಞಾನವನ್ನು ಹೊಂದುವವರೇ. ಆದ್ದರಿಂದ ಈ ಪದವನ್ನು ಹೇಳುವ ಆವಶ್ಯಕತೆಯೇ ಇರುವುದಿಲ್ಲ. ಆ ಪದವು ಸಾರ್ಥಕವಾಗಬೇಕಾದರೆ ಅದನ್ನು ವಿಶೇಷಾರ್ಥ ಅಂದರೆ, ಬ್ರಹ್ಮಜ್ಞಾನವನ್ನು ಪಡೆದವರು, ಮುಕ್ತರು ಎಂಬ ಅರ್ಥದಲ್ಲಿ ಗ್ರಹಿಸಬೇಕು.

**ಭಾಷ್ಯ—'ಗಂಧರ್ವಲೋಕೇ' ಗಂಧರ್ವಾಣಾಂ ಬ್ರಹ್ಮಜ್ಞಾನೇ ಮುಕ್ತಾ-ವಿತ್ಯರ್ಥಃ । ತದಾ ಹಿ ಬ್ರಹ್ಮಜ್ಞಾನಂ ಸದೋದಿತಮವತಿಷ್ಠತೇ । 'ಏಷ ಬ್ರಹ್ಮಲೋಕಃ ಸಮ್ರಾಳಿ'ತ್ಯಾದಿಷು ಜ್ಞಾನಸ್ಯೈವ ಲೋಕಶಬ್ದೋದಿ-ತತ್ವಾತ್ ।**

**ಅನುವಾದ**—ಗಂಧರ್ವಲೋಕೇ ಎಂದರೆ ಗಂಧರ್ವರ ಬ್ರಹ್ಮಜ್ಞಾನ ಇರುವ ಅವಸ್ಥೆಯಲ್ಲಿ ಅಂದರೆ ಮುಕ್ತಿಯಲ್ಲಿ ಎಂದು ಅರ್ಥ. ಮುಕ್ತಿಯಲ್ಲಿಯೇ ಬ್ರಹ್ಮಜ್ಞಾನವು ಸದಾ ವ್ಯಕ್ತವಾಗಿರುತ್ತದೆ. ಲೋಕ ಎಂದರೆ ಪ್ರಸಿದ್ಧವಾದ ಲೋಕ ಎಂಬ ಅರ್ಥ ಗ್ರಹಿಸಬಾರದು ಏಕೆಂದರೆ 'ಏಷ ಬ್ರಹ್ಮಲೋಕಃ ಸಮ್ರಾಳ್' ಎಂದು ಮೊದಲಾದ ವಾಕ್ಯಗಳಲ್ಲಿ ಲೋಕಶಬ್ದದಿಂದ ಜ್ಞಾನವೇ ಉಕ್ತವಾಗಿದೆ.

**ವಿವರಣೆ**—ಬ್ರಹ್ಮಜ್ಞಾನವಿರುವ ಅವಸ್ಥೆಯಲ್ಲಿ ಎಂದರೆ ಮುಕ್ತಿಯಲ್ಲಿ ಎಂದೇ ಏಕೆ ಅರ್ಥವಾಗಬೇಕು? ಎಂದರೆ ಮುಕ್ತಿಗಿಂತ ಮೊದಲು ಜೀವನ್ಮುಕ್ತ್ಯವಸ್ಥೆಯಲ್ಲಿ ಬ್ರಹ್ಮಜ್ಞಾನವು ಇದ್ದರೂ ಅದು ಆಗಾಗ್ಗೆ ತಿರೋಭಾವವನ್ನು ಹೊಂದುತ್ತದೆ. ಮುಕ್ತಿಯಲ್ಲಿ ಸದಾ ವ್ಯಕ್ತವಾಗಿರುತ್ತದೆ. ಆದ್ದರಿಂದ ಬ್ರಹ್ಮಜ್ಞಾನ ಎಂಬ ಪದದ ಮುಖ್ಯಾರ್ಥ ಮುಕ್ತಿಯೇ ಆಗುತ್ತದೆ. ಮುಖ್ಯಾರ್ಥವನ್ನೇ ಗ್ರಹಿಸುವುದು ನ್ಯಾಯ. 'ಏಷ ಬ್ರಹ್ಮಲೋಕಃ ಸಮ್ರಾಟ್', 'ಏಷೋಽಸ್ಯ ಪರಮೋ ಲೋಕಃ' ಈ ವಾಕ್ಯಗಳಲ್ಲಿ ಲೋಕಶಬ್ದಕ್ಕೆ ಜ್ಞಾನ ಎಂದೇ ಅರ್ಥ ಎನ್ನುವುದರಲ್ಲಿ ವಿವಾದವಿಲ್ಲ. ಇತರ ಭಾಷ್ಯಕಾರರೂ 'ಲೋಕನಾಲ್ಲೋಕೋ ಜ್ಯೋತೀರೂಪಂ ಬ್ರಹ್ಮ' ಎಂದು ಮುಂತಾಗಿ ಹೀಗೆಯೇ ವ್ಯಾಖ್ಯಾನ ಮಾಡಿದ್ದಾರೆ. ಆದ್ದರಿಂದ 'ಗಂಧರ್ವಲೋಕ' ಎಂಬಲ್ಲಿಯೂ ಲೋಕಶಬ್ದಕ್ಕೆ ಜ್ಞಾನ ಎಂಬ ಅರ್ಥವೇ ಯುಕ್ತ.

**ಭಾಷ್ಯ**—'ಯಶ್ಚ ಶ್ರೋತ್ರಿಯ' ಇತಿ ವಚನಂ ತೇಷಾಮಾಜಾನಾದೀನಾಮಪಿ ಮುಕ್ತಾನಾಮೇವಾಯಂ ನಿಯಮೇನಾನಂದಶತಗುಣೋದ್ರೇಕಃ । ಅನ್ಯದಾ ತು ಕದಾಚಿದ್ಭವತಿ ಕದಾಚಿದ್ ವ್ಯಾಕುಲತಯಾ ನ ಭವತೀತಿ ದರ್ಶಯಿತುಂ । ಚಶಬ್ದಸ್ತು ಶ್ರೋತ್ರಿಯತ್ವಾವೃಜಿನತ್ವಾಕಾಮಹತತ್ವಾ-ದೀನಾಂ ಗುಣಾನಾಂ ಮುಕ್ತೌ ಸಮುಚ್ಚಯಾರ್ಥಃ ।

**ಅನುವಾದ**—ಮುಕ್ತರಾಗಿರುವಾಗ ಮಾತ್ರ ಆಜಾನದೇವತೆಗಳು ಮೊದಲಾದವರಿಗೆ ನೂರುಪಟ್ಟು ಹೆಚ್ಚು ಆನಂದಾನುಭವವು ತಪ್ಪದೆ ಆಗುತ್ತದೆ. ಮುಕ್ತಿಗಿಂತ ಮೊದಲು ಕೆಲವು ವೇಳೆ ಇಂತಹ ಆನಂದಾನುಭವ ಇರುತ್ತದೆ. ಕೆಲವು ವೇಳೆ ಪ್ರಾರಬ್ಧ ಭೋಗಕಾಲದಲ್ಲಿ ಕಲುಷಿತ ಮನಃಸ್ಥಿತಿಯಿಂದಾಗಿ ಅದು ಇರುವುದಿಲ್ಲ ಎಂದು ತೋರಿಸಲು 'ಯಶ್ಚ ಶ್ರೋತ್ರಿಯೋಽವೃಜಿನೋಽಕಾಮಹತಃ' ಎಂಬ ವಚನವು ಮಂತ್ರದಲ್ಲಿದೆ. ಚ ಶಬ್ದವು ವ್ಯರ್ಥವಲ್ಲ. ಮುಕ್ತಿಯಲ್ಲಿ ಶ್ರೋತ್ರಿಯತ್ವ, ಅವೃಜಿನತ್ವ, ಅಕಾಮಹತತ್ವ ಈ ಮೂರೂ ಗುಣಗಳು ಇರುತ್ತವೆ ಎಂದು ಅದು ಹೇಳುತ್ತದೆ.

**ಭಾಷ್ಯ**—ಮುಕ್ತಸ್ಯೈವೇತೇ ಗುಣಾ ಭವಂತೀತಿ ಮುಕ್ತಸ್ವೀಕಾರಾರ್ಥಂ 'ಯ' ಇತಿ ವಿಶೇಷಣಮ್ ।

**ಅನುವಾದ**—ಶ್ರೋತ್ರಿಯತ್ವ ಮೊದಲಾದ ಗುಣಗಳು ಮುಕ್ತರಿಗೆ ಮಾತ್ರ ಸದಾ ಇರುತ್ತವೆ. ಆದ್ದರಿಂದ ಆ ಗುಣಗಳನ್ನು ಹೊಂದಿದ ಆಜಾನಜದೇವತೆಗಳೆಂದರೆ ಮುಕ್ತರಾದ ಆ ದೇವತೆಗಳನ್ನು ಮಾತ್ರ ಗ್ರಹಿಸಬೇಕು ಎಂದು ವಸ್ತುಸ್ಥಿತಿಯನ್ನು ತಿಳಿಸುವುದಕ್ಕಾಗಿ 'ಶ್ರೋತ್ರಿಯಃ' ಇತ್ಯಾದಿ ಪದಗಳಿಗೆ 'ಯಃ' ಎಂಬ ವಿಶೇಷಣವು ಇದೆ.

**ಭಾಷ್ಯ**—ಸರ್ವಂ ಶ್ರುತಿಫಲಂ ಮುಕ್ತೈಃ ಪ್ರಾಪ್ಯಂ ನಾನ್ಯೇನ ಕೇನಚಿತ್ ।
ಅತಸ್ತು ಶ್ರೋತ್ರಿಯೋ ಮುಕ್ತೋ ಹ್ಯನ್ಯಃ ಶ್ರೋತ್ರಿಯಕೋ ಭವೇತ್ ।

ಅದುಃಖತ್ವಂ ಚ ತಸ್ಯೈವ ಕಾಮ್ಯೈರಹತತಾ ತಥಾ ।
ಯಃ ಕಾಮಿತಂ ನ ಪ್ರಾಪ್ನೋತಿ ಸ ಕಾಮಹತ ಉಚ್ಯತೇ ।
ಕಾಮ್ಯಾಪ್ರಾಪ್ತೇಶ್ಚ ಪಾಪಾಚ್ಚ ಕಾಮಾತ್ ಕಾಮಹತಃ ಸ್ಮೃತಃ ।
ಉಭಯಸ್ಯಾಪ್ಯಭಾವೇನ ಮುಕ್ತೋಽಕಾಮಹತೋ ಮತಃ ।
ಇತಿ ಚ ।

**ಅನುವಾದ**—ವೇದಾಧ್ಯಯನದ ಫಲವಾದ ಮುಕ್ತಿ ಮತ್ತು ಮೋಕ್ಷಾನಂದ

ಗಳನ್ನು ಸಮಗ್ರವಾಗಿ ಮುಕ್ತರು ಮಾತ್ರ ಹೊಂದುತ್ತಾರೆ. ಬೇರೆಯವರು ಹೊಂದಲು ಸಾಧ್ಯವಿಲ್ಲ. ಆದ್ದರಿಂದ ಶ್ರೋತ್ರಿಯ, ವೇದಾಧ್ಯಯನ ಸಂಪನ್ನನೆಂದರೆ ಮುಖ್ಯವಾಗಿ ಮುಕ್ತನೇ. ಅಮುಕ್ತನು ಮುಖ್ಯವಾಗಿ ಶ್ರೋತ್ರಿಯನೆನಿಸುವುದಿಲ್ಲ, ಶ್ರೋತ್ರಿಯಕನೆನಿಸುತ್ತಾನೆ. ದುಃಖವಿಲ್ಲದಿರುವುದೂ, ಕಾಮನೆಗಳಿಂದ ಒಳಲದಿರುವುದೂ ಮುಕ್ತನಲ್ಲಿ ಮಾತ್ರ ಕಂಡುಬರುತ್ತದೆ. ಏಕೆಂದರೆ ಯಾರು ಬಯಸಿದುದನ್ನು ಪಡೆಯುವುದಿಲ್ಲವೋ ಅವನು ಕಾಮನೆಗಳಿಂದ ಒಳಲುತ್ತಾನೆ. ಮತ್ತು ಸಿದ್ಧವಾದ ಕಾಮನೆವುಳ್ಳವನೂ ಕಾಮನೆಗಳಿಂದ ಒಳಲುವವನು ಎಂದು ಪ್ರಸಿದ್ಧಿ ಇದೆ. ಇವೆರಡೂ ಇಲ್ಲದಿರುವುದರಿಂದ ಮುಕ್ತನು ಕಾಮನೆಗಳಿಂದ ಒಳಲದವನು ಎಂದು ಶಾಸ್ತ್ರಗಳಲ್ಲಿ ಪ್ರಸಿದ್ಧನಾಗಿದ್ದಾನೆ.

**ಭಾಷ್ಯ—ಆಜಾನದೇವಾ ಇಂದ್ರಾದ್ಯಾ ಜಾತೇಭ್ಯಸ್ತೇ ವರಾ ಯತಃ । ಇತಿ ಚ ।**

**ಅನುವಾದ**—ಆಜಾನದೇವತೆಗಳೆಂದರೆ ಇಲ್ಲಿ ಕರ್ಮದೇವತೆಗಳಿಗಿಂತ ಕೆಳಗಿನವ ರಾದ ಆಜಾನದೇವತೆಗಳಲ್ಲ. 'ಜಾತ' ಹುಟ್ಟಿದ ಎಲ್ಲ ದೇವತೆಗಳಿಗಿಂತ 'ಆ' ಶ್ರೇಷ್ಠ ರಾದುದರಿಂದ ಇಂದ್ರಾದಿದೇವತೆಗಳೇ ಆಜಾನದೇವತೆಗಳು ಎಂದಿಟ್ಟುಕೊಳ್ಳಬೇಕು.

**ಭಾಷ್ಯ—ಪ್ರಜಾಪತಿಲೋಕ ಇತ್ಯುಕ್ತೇನೈವ ಮುಕ್ತಪ್ರಜಾಪತಿ ಸಿದ್ಧಾವಪಿ ಮುಕ್ತಸ್ಯೈವ ಪ್ರಜಾಪತೇರ್ಬ್ರಹ್ಮಣಶ್ಚಾಯಂ ವಿಶೇಷ ಇತಿ ಸ್ವರೂಪ ಕಥನಾರ್ಥಂ 'ಯಶ್ಚ ಶ್ರೋತ್ರಿಯ' ಇತ್ಯಾದಿ । ಅನುಪಚರಿತ ಶ್ರೋತ್ರಿಯಾದಿತ್ವಮಿತಿ ಜ್ಞಾಪಯಿತುಮಭ್ಯಾಸಃ । ಸರ್ವೇಷಾಮಪಿ ಮುಕ್ತಾನಾಂ ನಿಯಮೇನ ತದಸ್ತೀತಿ ಜ್ಞಾಪಯಿತುಂ ಚ ।**

**ಅನುವಾದ**—'ಪ್ರಜಾಪತಿ ಲೋಕೇ' 'ಬ್ರಹ್ಮಲೋಕೇ' ಎಂದು ಲೋಕಶಬ್ದ ವನ್ನು ಹೇಳಿದ್ದರಿಂದಲೇ ಮುಕ್ತ ಪ್ರಜಾಪತಿ ಮತ್ತು ಮುಕ್ತ ಬ್ರಹ್ಮ ಎಂಬ ಅರ್ಥವು ದೊರಕಿದರೂ ಕೂಡ ಮುಕ್ತಪ್ರಜಾಪತಿ ಮತ್ತು ಮುಕ್ತ ಬ್ರಹ್ಮರಿಗೆ ಮಾತ್ರ ಶ್ರೋತ್ರಿ ಯತ್ವ ಮೊದಲಾದ ವಿಶೇಷ ಗುಣಗಳಿರುತ್ತವೆ ಎಂದು ವಸ್ತುಸ್ಥಿತಿಯನ್ನು ತಿಳಿಸುವುದ ಕ್ಕಾಗಿ 'ಯಶ್ಚ ಶ್ರೋತ್ರಿಯಃ' ಎಂದು ಮೊದಲಾದ ವಿಶೇಷಣಗಳಿವೆ. 'ಶ್ರೋತ್ರಿಯತ್ವ' ಮೊದಲಾದ ಗುಣಗಳು ಇಲ್ಲಿ ಔಪಚಾರಿಕವಾಗಿ ಹೇಳಿಲ್ಲ. ಮುಖ್ಯವಾದ ಶ್ರೋತ್ರಿ ಯತ್ವಾದಿಗಳೇ ವಿವಕ್ಷಿತ ಎಂದು ತಿಳಿಸುವುದಕ್ಕಾಗಿ 'ಯಶ್ಚ ಶ್ರೋತ್ರಿಯಃ' ಇತ್ಯಾದಿ ವಿಶೇಷಣಗಳು ಪುನಃ ಪುನಃ ಹೇಳಲ್ಪಟ್ಟಿವೆ. ಮತ್ತು ಎಲ್ಲ ಮುಕ್ತರಿಗೂ ಈ ಅರ್ಹತೆ ಗಳು ಇದ್ದೇ ಇರುತ್ತವೆ, ಒಬ್ಬಿಬ್ಬರಿಗಲ್ಲ ಎಂದು ತಿಳಿಸುವುದಕ್ಕಾಗಿಯೂ ಈ ವಿಶೇಷಣ ಗಳು ಪುನಃ ಪುನಃ ಹೇಳಲ್ಪಟ್ಟಿವೆ.

**ಭಾಷ್ಯ—ಪ್ರಜಾಸ್ತು ಪಶುಶಬ್ದೋಕ್ತಾಃ ಪಶುಪಸ್ತು ಪ್ರಜಾಪತಿಃ । ಇತಿ ಚ ।**

**ಅನುವಾದ**—ಪ್ರಜಾಪತಿ ಎಂದರೆ ಇಲ್ಲಿ ಶಿವನೆ ವಿವಕ್ಷಿತ. ಏಕೆಂದರೆ ಪ್ರಜಾ ಎಂದರೆ ಪಶು. ಆದ್ದರಿಂದ ಪಶುಪತಿ ಎಂದು ಪ್ರಸಿದ್ಧನಾದ ಶಿವನೆ ಪ್ರಜಾಪತಿ.

**ಭಾಷ್ಯ—'ಅಥ'ಶಬ್ದಾದ್'ಏಷ ಬ್ರಹ್ಮಲೋಕ' ಇತಿ ವಿಶೇಷಣಾಚ್ಚ ದ್ವಿತೀಯ ಬ್ರಹ್ಮಲೋಕ ಶಬ್ದೇನ ಪರಬ್ರಹ್ಮೈವೋಚ್ಯತೇ । ಅನ್ಯಥಾ 'ಏಷ ಏವ ಪರಮ ಆನಂದಃ' ಇತ್ಯುಕ್ತ್ವಾ ಪುನರೇಷ ಇತಿ ಶಬ್ದೋಽನರ್ಥಕಃ ಸ್ಯಾತ್ । ತಸ್ಯೈವ 'ಬ್ರಹ್ಮಲೋಕ' ಶಬ್ದೇನ ಪೂರ್ವಮುಭ್ಯಾಸಾಚ್ಚ ।**

**ಅನುವಾದ**—ಅಥಶಬ್ದವಿರುವುದರಿಂದ ಮತ್ತು 'ಏಷ ಬ್ರಹ್ಮಲೋಕಃ' ಎಂದು ವಿಶೇಷಣ ಕೊಟ್ಟಿರುವುದರಿಂದ ಎರಡನೆಯ ಬ್ರಹ್ಮಲೋಕ ಶಬ್ದಕ್ಕೆ ಪರಬ್ರಹ್ಮ ಎಂದೇ ಅರ್ಥ. ಹೀಗೆ ಅರ್ಥವಲ್ಲದಿದ್ದರೆ 'ಏಷ ಏವ ಪರಮ ಆನಂದಃ' ಎಂದು ಹೇಳಿದ ನಂತರ ಪುನಃ 'ಏಷ ಬ್ರಹ್ಮಲೋಕಃ' ಎಂದು ಏಷಃ ಎಂಬ ಪದವು ವ್ಯರ್ಥವಾಗುವುದು. ಪರಬ್ರಹ್ಮನನ್ನೇ ಬ್ರಹ್ಮಲೋಕಶಬ್ದದಿಂದ ಹಿಂದೆ ಮತ್ತು ಮುಂದೆ ಅನೇಕ ಸಲ ಹೇಳಿರುವುದರಿಂದಲೂ ಬ್ರಹ್ಮಲೋಕ ಅಂದರೆ ಪರಬ್ರಹ್ಮ ಎಂದೇ ಅರ್ಥ.

**ವಿವರಣೆ**—ಆನಂದ ತಾರತಮ್ಯದ ನಿರೂಪಣೆಯಲ್ಲಿ 'ಸ ಏಕೋ ಬ್ರಹ್ಮಲೋಕೇ ಆನಂದಃ' ಎಂಬ ವಾಕ್ಯದ ಅನಂತರದ ಅಥಶಬ್ದ ಮತ್ತು ಅದರ ಮುಂದೆ 'ಏಷ ಬ್ರಹ್ಮ ಲೋಕಃ' ಎಂಬಲ್ಲಿ ಬರುವ 'ಏಷಃ' ಎಂಬ ವಿಶೇಷಣಗಳಿಂದ ಎರಡನೇ ಬ್ರಹ್ಮ ಲೋಕಶಬ್ದ ಪರಮಾತ್ಮ ಪರವೆಂದು ಸಿದ್ಧವಾಗುತ್ತದೆ. ಅದು ಹಿಂದಿನ ವಾಕ್ಯದಲ್ಲಿ ಪ್ರಸ್ತುತನಾದ ಚತುರ್ಮುಖ ಬ್ರಹ್ಮನನ್ನೇ ಪ್ರಸ್ತಾಪಿಸುವುದಾದರೆ ಪ್ರಕರಣ ಭೇದ ವನ್ನು ಸೂಚಿಸುವ ಅಥ ಶಬ್ದವು ವ್ಯರ್ಥವಾಗುವುದು ಮತ್ತು 'ಏಷಃ' ಈ ಚತು ರ್ಮುಖನೆ 'ಬ್ರಹ್ಮಲೋಕಃ' ಚತುರ್ಮುಖ ಎಂದು ಹೇಳುವುದು ಅನರ್ಥಕವಾಗು ವುದು. 'ಏಷ ಏವ ಪರಮಾನಂದಃ' ಎಂಬಲ್ಲಿರುವ ಏಷಃ ಎಂಬ ಪದದಿಂದಲೇ ಪ್ರಸ್ತುತನಾದ ಚತುರ್ಮುಖ ಬ್ರಹ್ಮ ಎಂಬ ಅರ್ಥವು ಲಭಿಸುವುದರಿಂದ 'ಏಷ ಬ್ರಹ್ಮ ಲೋಕಃ' ಎಂದು ಅನಂತರ ಬರುವ 'ಏಷಃ' ಎಂಬ ಪದವೂ ವ್ಯರ್ಥವಾಗುವುದು. 'ಸಲಿಲ ಏಕೋ ದ್ರಷ್ಟಾ' ಎಂದು ಮೊದಲಾದ ಹಿಂದಿನ ಮಂತ್ರದಲ್ಲಿ ಮತ್ತು 'ವಿಪಾಪೋ ವಿರಜೋಽವಿಚಿಕಿತ್ಸೋ' ಎಂದು ಮುಂದಿನ ಬ್ರಾಹ್ಮಣದಲ್ಲಿ ಹೀಗೆ ಎರಡು ಸಲ ಬ್ರಹ್ಮಲೋಕಶಬ್ದದಿಂದ ಪರಬ್ರಹ್ಮನೇ ಹೇಳಲ್ಪಟ್ಟಿರುವುದರಿಂದಲೂ ಇಲ್ಲಿ ಬ್ರಹ್ಮ ಲೋಕಶಬ್ದ ಪರಮಾತ್ಮನ ಪರವೆ.

**ಭಾಷ್ಯ—ನ ಚ ತೈತ್ತಿರೀಯಾದಿ ಶ್ರುತಿವಿರೋಧಃ । ಶತಶಬ್ದಸ್ಯ ಅಯುತೇ ದಶಲಕ್ಷಾದಾವಪಿ ಸಮತ್ವಾತ್ । ಅತಶ್ಚಕ್ರವರ್ತಿಭ್ಯೋ ಮನುಷ್ಯ**

**ಗಂಧರ್ವಾಃ ಶತಾಧಿಕಾಃ । ದೇವಗಂಧರ್ವಾ ಅಯುತಾಧಿಕಾಃ । ಪಿತರೋ ದಶಲಕ್ಷಾಧಿಕಾಃ ಇತ್ಯವಿರೋಧಃ ।**

**ಅನುವಾದ**—ತೈತ್ತಿರೀಯ ಮೊದಲಾದ ಶ್ರುತಿಗಳ ವಿರೋಧವಿಲ್ಲ. ಏಕೆಂದರೆ ಶತಶಬ್ದಕ್ಕೆ ಹತ್ತುಸಾವಿರ, ಹತ್ತುಲಕ್ಷ ಮೊದಲಾದ ಅರ್ಥಗಳಲ್ಲಿಯೂ ಪ್ರಯೋಗವಿದೆ. ಆದ್ದರಿಂದ ಚಕ್ರವರ್ತಿಗಳಿಗಿಂತ ಮನುಷ್ಯಗಂಧರ್ವರು ನೂರುಪಟ್ಟು ಹೆಚ್ಚು ಆನಂದವುಳ್ಳವರು. ದೇವಗಂಧರ್ವರು ಹತ್ತುಸಾವಿರಪಟ್ಟು ಹೆಚ್ಚು ಆನಂದವುಳ್ಳವರು. ಪಿತೃಗಳು ಹತ್ತುಲಕ್ಷಪಟ್ಟು ಹೆಚ್ಚು ಆನಂದವುಳ್ಳವರು. ಆದ್ದರಿಂದ ವಿರೋಧವಿಲ್ಲ.

**ವಿವರಣೆ**—ತೈತ್ತಿರೀಯ ಮೊದಲಾದ ಶ್ರುತಿಗಳಲ್ಲಿ ಚಕ್ರವರ್ತಿಗಳ ಆನಂದಕ್ಕಿಂತ ಮನುಷ್ಯ ಗಂಧರ್ವರ ಆನಂದ, ಅವರಿಗಿಂತ ದೇವಗಂಧರ್ವರ ಆನಂದ, ಅವರಿಗಿಂತ ಪಿತೃಗಳ ಆನಂದವು ಶತಪಟ್ಟು ಹೆಚ್ಚು ಎಂದು ಹೇಳಲಾಗಿದೆ. ಕೆಲವು ಕಡೆ ಚಕ್ರವರ್ತಿಗಳ ಆನಂದಕ್ಕಿಂತ ದೇವಗಂಧರ್ವರ ಆನಂದವು ಶತಪಟ್ಟು ಹೆಚ್ಚು ಎಂದು ಹೇಳಲಾಗಿದೆ. ಪ್ರಕೃತ ಮಂತ್ರದಲ್ಲಿ ಚಕ್ರವರ್ತಿಗಳ ಆನಂದಕ್ಕಿಂತ ಪಿತೃಗಳ ಆನಂದವು ಶತಪಟ್ಟು ಹೆಚ್ಚು ಎಂದು ಹೇಳಲಾಗಿದೆ. ಆದ್ದರಿಂದ ಪ್ರಕೃತಮಂತ್ರಕ್ಕೆ ತೈತ್ತಿರೀಯ ಮೊದಲಾದ ಶ್ರುತಿಗಳ ವಿರೋಧವಿದೆ. ವಿರೋಧ ಪರಿಹಾರ ಹೀಗೆ– ಚಕ್ರವರ್ತಿಗಳ ಆನಂದಕ್ಕಿಂತ ದೇವಗಂಧರ್ವರ ಆನಂದ ಶತಪಟ್ಟು ಹೆಚ್ಚು ಎಂದು ಹೇಳಿದಾಗ ಶತ ಎಂದರೆ ಹತ್ತುಸಾವಿರ ಎಂದರ್ಥ. ಪಿತೃಗಳ ಆನಂದ ಶತಪಟ್ಟು ಹೆಚ್ಚು ಎಂದು ಹೇಳಿದಾಗ ಶತ ಎಂದರೆ ಹತ್ತುಲಕ್ಷ ಎಂದು ಅರ್ಥ. ಮನುಷ್ಯ ಗಂಧರ್ವರ ಆನಂದ ಶತಪಟ್ಟು ಹೆಚ್ಚು ಎಂದು ಹೇಳಿದಾಗ ಶತ ಎಂದರೆ ನೂರು ಎಂದು ಅರ್ಥ.

**ಭಾಷ್ಯ—ಉತ್ತಮಗಂಧರ್ವಾಪೇಕ್ಷಯಾ ಪಿತೃಭ್ಯೋ ಗಂಧರ್ವಾಣಾಂ ಆಧಿಕ್ಯಂ ಚ ಯುಜ್ಯತೇ ।**

**ಅನುವಾದ**—'ಪಿತೃಗಳಿಗಿಂತ ಗಂಧರ್ವರು ಅಧಿಕ' ಎಂಬ ಮಾತು ಗಂಧರ್ವ ಶಬ್ದದಿಂದ ಉತ್ತಮ ಗಂಧರ್ವರನ್ನಿಟ್ಟುಕೊಂಡಾಗ ಯುಕ್ತವಾಗುತ್ತದೆ.

**ವಿವರಣೆ**—ತೈತ್ತಿರೀಯ ಮೊದಲಾದ ಶ್ರುತಿಗಳಲ್ಲಿ ಪಿತೃಗಳು ಗಂಧರ್ವರಿಗಿಂತ ಅಧಿಕ ಎಂದು ಹೇಳಲಾಗಿದೆ. ಪ್ರಕೃತಮಂತ್ರದಲ್ಲಿ ಪಿತೃಗಳಿಗಿಂತ ಗಂಧರ್ವರು ಅಧಿಕ ಎಂದು ಹೇಳಲಾಗಿದೆ. ಇದು ಪರಸ್ಪರ ವಿರುದ್ಧ. ಈ ಆಕ್ಷೇಪಕ್ಕೆ ಉತ್ತರ– ಇಲ್ಲಿ ಗಂಧರ್ವರೆಂದರೆ ಸಾಮಾನ್ಯ ಗಂಧರ್ವರಲ್ಲ. ತುಂಬುರು ಮೊದಲಾದ ಉತ್ತಮ ಗಂಧರ್ವರು. ಆಜಾನಜದೇವತೆಗಳಿಗೆ ಇವರು ಸಮರಾದುದರಿಂದ ಪಿತೃಗಳಿಗಿಂತ ಉತ್ತಮರು ಎಂದು.

**ಭಾಷ್ಯ—ಆಜಾನದೇವೇಭ್ಯೋ ಜಾತಾ ಆಜಾನಜಾ ಇತ್ಯತಸ್ತತ್ರಾಪ್ಯವಿರೋಧಃ।**

**ಅನುವಾದ**—ಆಜಾನದೇವತೆಗಳಿಂದ ಹುಟ್ಟಿದವರು ಆಜಾನಜರು. ಆದ್ದರಿಂದ ಆ ವಿಷಯದಲ್ಲಿ ಕೂಡ ವಿರೋಧವಿಲ್ಲ.

**ವಿವರಣೆ**—ಪ್ರಕೃತಮಂತ್ರದಲ್ಲಿ ಆಜಾನದೇವತೆಗಳು ಕರ್ಮದೇವತೆಗಳಿಗಿಂತ ಉತ್ತಮರು ಎಂದು ಹೇಳಲಾಗಿದೆ. ತೈತ್ತಿರೀಯ ಮೊದಲಾದ ಶ್ರುತಿಗಳಲ್ಲಿ ಕರ್ಮದೇವತೆಗಳಿಗಿಂತ ಕೆಳಗಿನವರು ಎಂದು ಹೇಳಲಾಗಿದೆ. ಆದ್ದರಿಂದ ಪರಸ್ಪರ ವಿರೋಧ ಎಂಬ ಆಕ್ಷೇಪಕ್ಕೆ ಉತ್ತರ- ತೈತ್ತಿರೀಯ ಮೊದಲಾದ ಶ್ರುತಿಗಳಲ್ಲಿ 'ಆಜಾನಜದೇವ' ಎಂದು ಪಾಠವಿದೆ. ಪ್ರಕೃತಮಂತ್ರದಲ್ಲಿ 'ಆಜಾನ' ಎಂದು ಪಾಠವಿದೆ. ಹುಟ್ಟಿದ ಎಲ್ಲ ದೇವರಿಗಿಂತ ಶ್ರೇಷ್ಠರಾದ ಇಂದ್ರಾದಿ ದೇವತೆಗಳು ಕರ್ಮದೇವತೆಗಳಿಗಿಂತ ಉತ್ತಮರು ಎಂದು ಈ ಪಾಠದ ಅರ್ಥ. ತೈತ್ತಿರೀಯ ಮೊದಲಾದ ಶ್ರುತಿಗಳಲ್ಲಿ ಹೇಳಲ್ಪಟ್ಟಿರುವ ಆಜಾನಜರು ಇಂದ್ರಾದಿ ಆಜಾನ ದೇವತೆಗಳಿಂದ, ಜ ಹುಟ್ಟಿದವರು. ಇವರು ಕರ್ಮದೇವತೆಗಳಿಗಿಂತ ಅಧಮರು. ಆದ್ದರಿಂದ ಪರಸ್ಪರ ವಿರೋಧವಿಲ್ಲ.

**ಭಾಷ್ಯ—'ಯತ್ರಾಜಾನಜಾ' ಇತ್ಯೇವೋಪರಿ ಪಾಠಃ ತತ್ರಾಜಾನೇಭ್ಯೋ ಬ್ರಹ್ಮಾದಿಭ್ಯೋ ಜಾತಾ ಇತಿ ಭವತಿ ।**

**ಅನುವಾದ**—ಯಾವ ಶ್ರುತಿವಾಕ್ಯದಲ್ಲಿ ಕರ್ಮದೇವತೆಗಳನ್ನು ಹೇಳಿದ ಅನಂತರ 'ಆಜಾನಜ' ಎಂದು ಪಾಠವಿದೆಯೋ ಅಲ್ಲಿ ಕೂಡ ಆಜಾನರಾದ ಬ್ರಹ್ಮಾದಿ ದೇವತೆಗಳಿಂದ 'ಜ' ಹುಟ್ಟಿದವರು ಇಂದ್ರಾದಿಗಳು ಎಂದು ಅರ್ಥವು ಸಮಂಜಸ ವಾಗುತ್ತದೆ.

**ವಿವರಣೆ**—ಕರ್ಮದೇವತೆಗಳನ್ನು ಹೇಳಿದ ನಂತರ ಆಜಾನಜದೇವತೆಗಳನ್ನು ಶ್ರುತಿಯಲ್ಲಿ ಹೇಳಿದರೆ,ಅಲ್ಲಿ ಆಜಾನಜರು ಕರ್ಮದೇವತೆಗಳಿಗಿಂತ ಉತ್ತಮರು ಎಂದು ಹೇಳಿದಂತಾಗುತ್ತದೆ. ಆಗ ತೈತ್ತಿರೀಯ ಶ್ರುತಿ ವಿರೋಧ ಎಂಬ ಆಕ್ಷೇಪಕ್ಕೆ ಉತ್ತರ– ಅಂತಹ ವಾಕ್ಯಗಳಲ್ಲಿ ಆಜಾನಜ ಎಂದರೆ ಆಜಾನರಾದ ಬ್ರಹ್ಮಾದಿದೇವತೆಗಳಿಂದ 'ಜ' ಹುಟ್ಟಿದವರು ಎಂದು ಅರ್ಥ. ಅಂತಹ ಆಜಾನಜರು ಇಂದ್ರಾದಿದೇವತೆಗಳು. ಅವರು ಕರ್ಮದೇವತೆಗಳಿಗಿಂತ ಉತ್ತಮರು ಎಂದು ಅರ್ಥವಾಗುತ್ತದೆ. ಆಗ ತೈತ್ತಿರೀಯ ಶ್ರುತಿವಿರೋಧವಿಲ್ಲ.

**ಭಾಷ್ಯ—ಇಂದ್ರಬೃಹಸ್ಪತ್ಯಾದೀನಾಂ ವಿಶೇಷಸ್ತು ವಿಶೇಷವಚನತ್ವಾದತ್ರಾಪ್ಯಂಗೀಕರ್ತವ್ಯ ಏವ ।**

**ಅನುವಾದ**- ಇಂದ್ರ, ಬೃಹಸ್ಪತಿ ಮೊದಲಾದವರಿಗೆ ತಾರತಮ್ಯವನ್ನು ಹೇಳುವ

ವಾಕ್ಯವು ವಿಶೇಷವಾಕ್ಯ. ಆದ್ದರಿಂದ ಅದಕ್ಕನುಗುಣವಾಗಿ ಪ್ರಕೃತಮಂತ್ರದಲ್ಲಿ ಕೂಡ ಅವರುಗಳಿಗೆ ತಾರತಮ್ಯವನ್ನು ಅಂಗೀಕರಿಸಲೇಬೇಕು.

**ವಿವರಣೆ**—ತೈತ್ತಿರೀಯ ಮೊದಲಾದ ಶ್ರುತಿಗಳಲ್ಲಿ ದೇವತೆಗಳಿಗಿಂತ ಇಂದ್ರನಿಗೆ ಇಂದ್ರನಿಗಿಂತ ಬೃಹಸ್ಪತಿಗೆ, ಅವನಿಗಿಂತ ಪ್ರಜಾಪತಿಗೆ ನೂರುಪಟ್ಟು ಹೆಚ್ಚು ಆನಂದ ವನ್ನು ಹೇಳಲಾಗಿದೆ. ಪ್ರಕೃತ ಮಂತ್ರದಲ್ಲಿ ಆಜಾನದೇವತೆಗಳಿಗಿಂತಲೇ ಪ್ರಜಾಪತಿಗೆ ನೂರುಪಟ್ಟು ಹೆಚ್ಚು ಆನಂದವನ್ನು ಹೇಳಲಾಗಿದೆ. ಆದ್ದರಿಂದ ಇಂದ್ರ, ಬೃಹಸ್ಪತಿ ಮೊದಲಾದವರಿಗೆ ತಾರತಮ್ಯ ಇಲ್ಲವೋ ಎಂದರೆ, ಇದೆ. ತಾರತಮ್ಯವನ್ನು ಹೇಳುವ ಶ್ರುತಿ ವಿಶೇಷಶ್ರುತಿ, ಹೇಳದ ಶ್ರುತಿ ಸಾಮಾನ್ಯಶ್ರುತಿ. ಸಾಮಾನ್ಯಶ್ರುತಿಗಿಂತ ವಿಶೇಷಶ್ರುತಿ ಪ್ರಬಲ. ಆದ್ದರಿಂದ ತೈತ್ತಿರೀಯ ಶ್ರುತಿಗೆ ಅನುಗುಣವಾಗಿ ಪ್ರಕೃತ ಮಂತ್ರದಲ್ಲಿ ಕೂಡ ಆ ದೇವತೆಗಳಿಗೆ ತಾರತಮ್ಯವನ್ನು ಅಂಗೀಕರಿಸಬೇಕು.

**ಭಾಷ್ಯ—ಸಾಮಾನ್ಯಧರ್ಮೋ ಬಲವಾನ್ ಧರ್ಮಾದ್ ವೈಶೇಷಿಕಾದ್ ಯಥಾ ।**
**ಬಲವದ್ ವಿಶೇಷವಚನಂ ಸಾಮಾನ್ಯವಚನಾತ್ ತಥಾ । ಇತಿ ಚ ।**

**ಅನುವಾದ**—ಜಪ, ಉಪದೇಶ ಮೊದಲಾದ ಬ್ರಾಹ್ಮಣಾದಿ ವರ್ಣಗಳಿಗೆ ಪ್ರತ್ಯೇಕವಾಗಿ ವಿಹಿತವಾದ ವಿಶೇಷ ಧರ್ಮಕ್ಕಿಂತ, ಭಕ್ತಿ ಮೊದಲಾದ ಸರ್ವವರ್ಣ ಸಾಧಾರಣವಾದ ಸಾಮಾನ್ಯ ಧರ್ಮಗಳು ಹೇಗೆ ಹೆಚ್ಚು ಪ್ರಬಲವೋ ಹಾಗೆ, ಸಾಮಾನ್ಯ ವಚನಕ್ಕಿಂತ ವಿಶೇಷ ವಚನವು ಹೆಚ್ಚು ಪ್ರಬಲ ಎಂದು ಕೂಡ ವಚನವಿದೆ. ಆದ್ದರಿಂದ ವಿಶೇಷ ವಚನಾನುಸಾರವಾಗಿ ಸಾಮಾನ್ಯವಚನದ ಅರ್ಥ ಗ್ರಹಿಸಬೇಕಾಗುತ್ತದೆ.

**ಭಾಷ್ಯ—ನೃಪಾ ಮನುಷ್ಯಗಂಧರ್ವಾ ದೇವಾಶ್ಚ ಪಿತರಸ್ತಥಾ ।**
**ದೇವೈಃ ಸಹಿತ ಗಂಧರ್ವಾ ಋಷಯೋ ದೇವತಾಸ್ತಥಾ ।**
**ಇಂದ್ರೋ ಬೃಹಸ್ಪತಿಶ್ಚೈವ ಪ್ರಧಾನೇಂದ್ರಃ ಪುರಂದರಃ ।**
**ರುದ್ರೋ ಬ್ರಹ್ಮೇತಿ ಕ್ರಮಶೋ ಮುಕ್ತಾಃ ಶತಗುಣೋತ್ತರಾಃ ।**
**ಇತಿ ಚ ।**

**ಅನುವಾದ**—ಚಕ್ರವರ್ತಿಗಳು, ಮನುಷ್ಯಗಂಧರ್ವರು, ದೇವಗಂಧರ್ವರು, ಪಿತೃಗಳು, ಆಜಾನಜದೇವತೆಗಳು ಮತ್ತು ಅವರಿಗೆ ಸಮಾನರಾದ ಶ್ರೇಷ್ಠ ಗಂಧರ್ವರು ಶ್ರೇಷ್ಠ ಋಷಿಗಳು ಮತ್ತು ಅವರಿಗೆ ಸಮಾನರಾದ ದೇವತೆಗಳು, ಇಂದ್ರನಾಮಕನಾದ ಬೃಹಸ್ಪತಿ, ಬೃಹಸ್ಪತಿನಾಮಕನಾದ ಪುರಂದರನೆಂಬ ಪ್ರಧಾನ ಇಂದ್ರ, ರುದ್ರ ಮತ್ತು ಚತುರ್ಮುಖ ಬ್ರಹ್ಮ ಇವರೆಲ್ಲರೂ ಕ್ರಮವಾಗಿ ಮುಕ್ತಿಯಲ್ಲಿ ನೂರುಪಟ್ಟು ಹೆಚ್ಚು ಗುಣವುಳ್ಳವರು ಎಂದು ಕೂಡ ಹೇಳಿದೆ.

**ಭಾಷ್ಯ**—ಅತಿಪ್ರಯತ್ನತೋ ಯಾವತ್ ಪ್ರಾಪ್ತುಂ ಶಕ್ಯಂ ವಿಮುಕ್ತಿಗಂ ।
ಸುಖಾದ್ಯಂ ತಸ್ಯ ಸಂಪ್ರಾಪ್ತ್ಯೈ ಜ್ಞಾನಶ್ರೇಣ್ಯಃ ಕ್ರಮಾತ್ ಸ್ಮೃತಾಃ
ಏಕಾಂ ಶ್ರೇಣೀಂ ಪ್ರವಿಜ್ಞಾಯ ತದುತ್ಕೃಷ್ಟಾಂ ಚ ತದ್ವರಾಂ ।
ಕ್ರಮೇಣೈವ ವಿಜಿಜ್ಞಾಸುಃ ಜನಕಃ ಪೃಚ್ಛತಿ ಸ್ಮ ಹ ।
ಪುನಃ ಪುನರ್ವಿಮೋಕ್ಷಾಯ ಬ್ರೂಹೀತ್ಯದ್ಧಾ ವರಾತ್ ಪುರಾ ।
ಇತಿ ಚ ।

**ಅನುವಾದ**—ಉತ್ತಮ ಮೋಕ್ಷಕ್ಕಾಗಿ ಉಪದೇಶ ನೀಡಿರೆಂದು ಒಮ್ಮೆ ಕೇಳಿದರೂ ಸಾಕಾಗಿತ್ತು. ಆದರೂ ಬಹಳ ಪ್ರಯತ್ನದಿಂದ ಮುಕ್ತಿಸುಖವನ್ನು ಎಷ್ಟು ಪಡೆಯಲು ಸಾಧ್ಯವೋ ಅಷ್ಟನ್ನು ಪಡೆಯುವುದಕ್ಕಾಗಿ ಜ್ಞಾನದ ಬೇರೆ ಬೇರೆ ಶ್ರೇಣಿಗಳು ಕ್ರಮವಾಗಿ ನಿರೂಪಿಸಲ್ಪಟ್ಟಿವೆ. ಜನಕನು ಒಂದು ಶ್ರೇಣಿಯನ್ನು ತಿಳಿದು ಅದಕ್ಕಿಂತ ಉತ್ಕೃಷ್ಟವಾದ ಮತ್ತು ಶ್ರೇಷ್ಠವಾದ ಇನ್ನೊಂದು ಶ್ರೇಣಿಯನ್ನು ಕ್ರಮವಾಗಿ ತಿಳಿಯಲು ಬಯಸಿ, ಯಾಜ್ಞವಲ್ಕ್ಯರು ಹಿಂದೆ ವರ ಕೊಟ್ಟಿದ್ದರಿಂದ, ಉತ್ತಮ ಮೋಕ್ಷಕ್ಕಾಗಿ ಉಪದೇಶಿಸಿರಿ ಎಂದು ಮತ್ತೆ ಮತ್ತೆ ಕೇಳಿದನು.

**ಭಾಷ್ಯ**—ರಹಸ್ಯಮಸ್ಯಾಯೋಗ್ಯಂ ಚ ಯದಿ ಮಾಮೇಷ ಪೃಚ್ಛತಿ ।
ದತ್ತೋ ಮಯಾ ವರೋಽಸ್ಯೇತಿ ವಕ್ತವ್ಯಂ ಮೇ ಭವಿಷ್ಯತಿ ।
ಇತಿ ಭೀತೋಽಭವದ್ ರಾಜ್ಞೋ ಯಾಜ್ಞವಲ್ಕ್ಯಃ ಸುಮೇಧಯಾ ।
ಇತಿ ಬ್ರಹ್ಮಾಂಡೇ ।

**ಅನುವಾದ**—ರಹಸ್ಯವಾದ ಮತ್ತು ರಾಜನಿಗೆ ತಿಳಿಯಲು ಯೋಗ್ಯವಲ್ಲದ ವಿಷಯದ ಬಗ್ಗೆ ರಾಜನು ನನ್ನನ್ನು ಕೇಳಿದರೆ, ನಾನು ವರ ಕೊಟ್ಟಿರುವುದರಿಂದ ಹೇಳಲೇಬೇಕಾಗುತ್ತದೆ,ಎಂದು ರಾಜನ ಬುದ್ಧಿಮತ್ತೆಗೆ ಯಾಜ್ಞವಲ್ಕ್ಯರು ಹೆದರಿದರೇ ಹೊರತು ತನ್ನ ಅಸಾಮರ್ಥ್ಯದಿಂದ ಭೀತರಾದರೆಂದಲ್ಲ.

**ಭಾಷ್ಯ**—ತೇಭ್ಯ ಅಶ್ವಲಾದಿಭ್ಯಃ ।

**ಅನುವಾದ**—'ಸರ್ವೇಭ್ಯೋ ಮಾಂ ತೇಭ್ಯ ಉದಪಾತ್ಸೀತ್'ಎಂಬಲ್ಲಿ'ತೇಭ್ಯಃ' ಎಂದರೆ ಪೂರ್ವಾಧ್ಯಾಯದಲ್ಲಿ ಪ್ರಶ್ನಕರ್ತರಾಗಿ ಪ್ರಸ್ತುತರಾದ ಅಶ್ವಲ ಮೊದಲಾದವರಿಗಿಂತ ಎಂದರ್ಥ.

**ಪರಮಾತ್ಮನೇ ಅವಸ್ಥಾತ್ರಯ ನಿಯಾಮಕ :**

**ಉಪನಿಷತ್**—ಸ ವಾ ಏಷ ಏತಸ್ಮಿನ್ ಸ್ವಪ್ನಾಂತೇ ರತ್ವಾ ಚರಿತ್ವಾ ದೃಷ್ಟ್ವೈವ

**ಪುಣ್ಯಂ ಚ ಪಾಪಂ ಚ ಪುನಃ ಪ್ರತಿನ್ಯಾಯಂ ಪ್ರತಿಯೋನ್ಯಾದ್ರವತಿ ಬುದ್ಧಾಂತಾಯೈವ ।**

ಈ ಪರಮಾತ್ಮನೇ ಸ್ವಪ್ನ ಮತ್ತು ಸುಷುಪ್ತಿ ಸ್ಥಾನದಲ್ಲಿ ವಿಹರಿಸಿ ಅವನ ಪುಣ್ಯ ಪಾಪಗಳನ್ನು ಕೇವಲ ನೋಡುತ್ತಾ ಸಂಚರಿಸಿ ಪುನಃ ಆಯಾಕಾಲದಲ್ಲಿ ಪ್ರತಿಯೊಬ್ಬ ಜೀವನಿಗೆ ಎಚ್ಚರವುಂಟುಮಾಡುವುದಕ್ಕಾಗಿ ಜಾಗ್ರತ್‌ಸ್ಥಾನಕ್ಕೆ ಹೋಗುತ್ತಾನೆ.

**ಭಾಷ್ಯ—ಸರ್ವದಾ ಜೀವಮಾದಾಯ ನಿಯಮಾದ್ ವಿಷ್ಣುರೇವ ಹಿ ।**
**ಜಾಗ್ರದಾದಿಷು ಸಂಯಾತಿ ನಾನ್ಯಥಾ ತು ಕಥಂಚನ ।**
**ಏನಂ ನಿಯಮವಿಜ್ಞಪ್ತ್ಯೈ ಜೀವಾಸ್ವಾತಂತ್ರ್ಯವಿತ್ತಯೇ ।**
**ಪರಿವೃತ್ತಿಮವಸ್ಥಾಸು ಸಾಭ್ಯಾಸಾ ವಕ್ತಿ ಹಿ ಶ್ರುತಿಃ ।**

**ಇತಿ ನಿರ್ಣಯೇ ।**

**ಅತಸ್ತಾತ್ಪರ್ಯಾರ್ಥಂ ಪುನರ್ವಚನಮ್ ।**

**ಅನುವಾದ**—ವಿಷ್ಣು ಒಬ್ಬನೇ ಯಾವಾಗಲೂ ತಪ್ಪದೆ ಜೀವನನ್ನು ಕರೆದು ಕೊಂಡು ಜಾಗ್ರದಾದಿ ಸ್ಥಾನಗಳಿಗೆ ಹೋಗುತ್ತಾನೆ. ಬೇರೆ ರೀತಿ ಜಾಗ್ರದಾದಿ ಅವಸ್ಥೆಗಳು ಆಗುವುದೇ ಇಲ್ಲ. ಈ ನಿಯಮವನ್ನು ತಿಳಿಸುವುದಕ್ಕಾಗಿ ಮತ್ತು ಜೀವರ ಅಸ್ವಾತಂತ್ರ್ಯವನ್ನು ತಿಳಿಸುವುದಕ್ಕಾಗಿ ಜಾಗ್ರದಾದಿ ಸ್ಥಾನಗಳಲ್ಲಿ ವಿಷ್ಣುವಿನ ಸಂಚಾರ ವನ್ನು ಶ್ರುತಿಯು ಹಿಂದೆ ಒಮ್ಮೆ ಹೇಳಿದ್ದರೂ ಪುನಃ ಹೇಳುತ್ತದೆ, ಎಂದು ನಿರ್ಣಯ ಎಂಬ ಗ್ರಂಥದಲ್ಲಿ ಹೇಳಿದೆ. ಆದ್ದರಿಂದ ಇದೇ ಶ್ರುತಿಯ ತಾತ್ಪರ್ಯ ಎಂದು ತಿಳಿ ಸುವುದಕ್ಕಾಗಿ ಶ್ರುತಿಯು ಹೇಳಿದ್ದನ್ನೇ ಪುನಃ ಹೇಳಿದ.

**ಉಪನಿಷತ್-ತದ್ ಯಥಾಽನಃ ಸುಸಮಾಹಿತಮುತ್ಸರ್ಜದ್ ಯಾಯಾದೇವ-ಮೇವಾಯಂ ಶಾರೀರ ಆತ್ಮಾ ಪ್ರಾಜ್ಞೇನ ಆತ್ಮನಾನ್ವಾರೂಢ ಉತ್ಸರ್ಜದ್ ಯಾತಿ ಯತ್ರೈತದೂರ್ಧ್ವೋಚ್ಛ್ವಾಸೀ ಭವತಿ ।**

ಸಾರಥಿಯೊಬ್ಬನ ನಿಯಂತ್ರಣದಲ್ಲಿರುವ ಬಂಡಿಯು ಸಂಚಾರಮಾಡುತ್ತಾ ಒಂದೊಂದೇ ಗ್ರಾಮವನ್ನು ಕ್ರಮವಾಗಿ ಬಿಟ್ಟು ಹೋಗುವಂತೆ ಶರೀರಾಭಿಮಾನಿ ಯಾದ ಜೀವನು ಯಾವಾಗ ಮರಣಕಾಲದ ಊರ್ಧ್ವಶ್ವಾಸ ಬಿಡಲು ತೊಡಗುವನೋ ಆಗ ಪರಮಾತ್ಮನ ನಿಯಂತ್ರಣಕ್ಕೊಳಪಟ್ಟು ಶರೀರವನ್ನು ಬಿಟ್ಟು ಹೋಗುತ್ತಾನೆ. ಆದ್ದರಿಂದ ಪರಮಾತ್ಮನೇ ಜೀವನ ಮರಣಾವಸ್ಥೆಗೂ ನಿಯಾಮಕ.

**ಭಾಷ್ಯ—ಗ್ರಾಮಾದಿಕಂ ಉತ್ಸರ್ಜದ್ ಯಾಯಾತ್ ।**

**ಯಥಾ ಗ್ರಾಮಂ ಪರಿತ್ಯಜ್ಯ ಯಾತ್ಯನಃ ಪ್ರಮಧಿಷ್ಠಿತಂ ।**
**ಏವಂ ದೇಹಂ ಪರಿತ್ಯಜ್ಯ ವಿಷ್ಣುನಾಽಧಿಷ್ಠಿತಃ ಪುಮಾನ್ ।**

**ಇತಿ ಚ ।**

**ಅನುವಾದ**—ಉಪನಿಷತ್ತಿನಲ್ಲಿ 'ಉತ್ಸರ್ಜತ್ ಯಾಯಾತ್' ಎಂದರೆ ಒಂದು ಗ್ರಾಮವನ್ನು ಬಿಟ್ಟು ಇನ್ನೊಂದು ಗ್ರಾಮಕ್ಕೆ ಹೋಗುವುದು' ಎಂದರ್ಥ. ಸಾರಥಿಯ ನಿಯಂತ್ರಣಕ್ಕೊಳಪಟ್ಟ ಬಂಡಿಯು ಸಂಚಾರ ಮಾಡುತ್ತ ಒಂದೊಂದೇ ಗ್ರಾಮವನ್ನು ಬಿಟ್ಟು ಹೋಗುವಂತೆ ವಿಷ್ಣುವಿನ ನಿಯಂತ್ರಣಕ್ಕೊಳಪಟ್ಟ ಜೀವನು ದೇಹವನ್ನು ಬಿಟ್ಟು ಹೋಗುತ್ತಾನೆ ಎಂದು ಕೂಡ ನಿರ್ಣಯದಲ್ಲಿ ಹೇಳಲ್ಪಟ್ಟಿದೆ.

**ಉಪನಿಷತ್—ಸ ಯತ್ರಾಯಮಣಿಮಾನಂ ನ್ಯೇತಿ ಜರಯಾವೋಪತಪತಾ ವಾಣಿಮಾನಂ ನಿಗಚ್ಛತಿ । ತದ್ಯಥಾಮ್ರಂ ವಾ ಔದುಂಬರಂ ವಾ ಪಿಪ್ಪಲಂ ವಾ ಬಂಧನಾತ್ ಪ್ರಮುಚ್ಯತ ಏವಮೇವಾಯಂ ಪುರುಷ ಏಭ್ಯೋಽಂಗೇಭ್ಯಃ ಸಂಪ್ರಮುಚ್ಯ ಪುನಃ ಪ್ರತಿನ್ಯಾಯಂ ಪ್ರತಿಯೋನ್ಯಾ ದ್ರವತಿ ಪ್ರಾಣಾಯೈವ ।**

ಮರಣಾವಸ್ಥೆಗೆ ಮಾತ್ರವಲ್ಲ, ಮುಕ್ತ್ಯವಸ್ಥೆಗೂ ಜೀವನನ್ನು ಒಯ್ಯುವವ ಪರಮಾತ್ಮ. ಜೀವರು ಯಾವಾಗ ಭಗವತ್ಪ್ರಾಪ್ತಿರೂಪ ಮುಕ್ತಿಯನ್ನು ಹೊಂದಲು ಬಯಸುವರೋ ಆಗ ಎಳೆಯ ಮಾವಿನಕಾಯಿ, ಬಲಿತ ಅತ್ತಿಕಾಯಿ, ಚೆನ್ನಾಗಿ ಹ್ಣಾಗಿದ ಅಶ್ವತ್ಥದ ಹಣ್ಣು ಇವು ತೊಟ್ಟಿನಿಂದ ಕೆಳಗೆ ಬೀಳುವಂತೆ, ಕಲಿಯುಗದ ಜ್ಞಾನಿಗಳು ಬಾಲ್ಯದಲ್ಲಿ ತ್ರೇತಾ ದ್ವಾಪರಗಳ ಜ್ಞಾನಿಗಳು ನಡುವಯಸ್ಸಿನಲ್ಲಿ ರೋಗಾದಿಗಳಿಂದ ಶರೀರವನ್ನು ಬಿಡುತ್ತಾರೆ. ಕೃತಯುಗದ ಜ್ಞಾನಿಗಳು ಮುದಿತನದಿಂದ ಶರೀರವನ್ನು ಬಿಡುತ್ತಾರೆ. ಆಗ ಪರಮಾತ್ಮನ ನಿಯಂತ್ರಣಕ್ಕೊಳಪಟ್ಟೇ ಅವರು ಶರೀರವನ್ನು ಬಿಡುತ್ತಾರೆ. ಬಳಿಕ ಅರ್ಚಿರಾದಿ ಮಾರ್ಗದಲ್ಲಿ ಪುನಃ ವಾಯುದೇವರನ್ನು ತಲುಪಿ ಅವರ ಮೂಲಕ ಭಗವಂತನನ್ನು ಹೊಂದುತ್ತಾರೆ.

**ಭಾಷ್ಯ—ಅಣಿಮಾನಂ ಭಗವಂತಂ । 'ಸ ಯ ಏಷೋಽಣಿಮಾ' 'ತೇಜಃ ಪರಸ್ಯಾಂ ದೇವತಾಯಾಮ್' ಇತಿ ಹಿ ಶ್ರುತಿಃ । ಉಪತಪತಾ ರೋಗಾದಿನಾ ।**

**ಅನುವಾದ**—ಅಣಿಮಾನಂ ಎಂದರೆ ಸೂಕ್ಷ್ಮನಾದ ಭಗವಂತನನ್ನು ಎಂದರ್ಥ. 'ಸ ಯ ಏಷೋಽಣಿಮಾ' ಎಂದು ಭಗವಂತ ಎಂಬ ಅರ್ಥದಲ್ಲಿ ಅಣಿಮಶಬ್ದ ಪ್ರಯೋಗವಿದೆ. ಈ ಶ್ರುತಿಯಲ್ಲಿಯೂ ಅಣಿಮಾ ಶಬ್ದದಿಂದ ಜೀವನನ್ನು ಗ್ರಹಿಸ

ಬಾರದು. ಏಕೆಂದರೆ 'ತೇಜಃ ಪರಸ್ಯಾಂ ದೇವತಾಯಾಂ' ಎಂದು ಶ್ರುತಿಯಲ್ಲಿ ಹಿಂದೆ ಪ್ರಕೃತವಾದ ಪರ ದೇವತೆಯನ್ನೇ 'ಏಷಃ ಅಣಿಮಾ' ಎಂಬಲ್ಲಿ ಗ್ರಹಿಸುವುದು ಯುಕ್ತ. ಉಪತಪತಃ ಎಂದರೆ ರೋಗ ಮೊದಲಾದವುಗಳಿಂದ ಎಂದರ್ಥ.

**ಭಾಷ್ಯ—ಆಮ್ರಂ ಬಾಲ್ಯೇಽಪಿ ಪತತಿ ಪರಿಣಾಮೇ ಹ್ಯುದುಂಬರಂ ।**
**ಸಮ್ಯಕ್ ಪಾಕೇ ತಥಾಶ್ವತ್ಥಫಲಂ ಜೀವಮೃತಿಸ್ತಥಾ ।**
**ಕಲಾವಾಮ್ರೋಪಮಾ ಜೀವಾಸ್ತ್ರೇತಾಸ್ವೌದುಂಬರೋಪಮಾಃ ।**
**ಕೃತೇಽಶ್ವತ್ಥಸಮಾಶ್ಚೈವ ಯಾಂತಿ ಬ್ರಹ್ಮವಶಾಃ ಸದಾ ।**
**ಇತಿ ಪಾದ್ಮೇ ।**

**ಅನುವಾದ**—ಮಾವಿನಕಾಯಿ ಎಳಸಾಗಿರುವಾಗಲೂ ಬೀಳುತ್ತದೆ. ಅತ್ತಿಕಾಯಿ ಬಲಿತಾಗ ಬೀಳುತ್ತದೆ. ಅಶ್ವತ್ಥಫಲವು ಚೆನ್ನಾಗಿ ಹಣ್ಣಾದ ನಂತರ ಬೀಳುತ್ತದೆ. ಅಂತೆಯೇ ಜೀವರ ಮರಣದಲ್ಲಿಯೂ ವ್ಯತ್ಯಾಸವಿದೆ. ಜೀವರು ಕಲಿಯುಗದಲ್ಲಿ ಮಾವಿನಕಾಯಿಯಂತೆ ಎಳವೆಯಲ್ಲಿಯೂ ಮರಣ ಹೊಂದುತ್ತಾರೆ. ತ್ರೇತಾಯುಗದಲ್ಲಿ ಅತ್ತಿಕಾಯಿಯಂತೆ ನಡುವಯಸ್ಸಿನಲ್ಲಿ ಮತ್ತು ಕೃತಯುಗದಲ್ಲಿ ಅಶ್ವತ್ಥಫಲದಂತೆ ಮುಪ್ಪಿನಲ್ಲಿ ಮರಣ ಹೊಂದುತ್ತಾರೆ. ಯಾವಾಗಲೂ ಪರಮಾತ್ಮನ ನಿಯಂತ್ರಣಕ್ಕೊಳಪಟ್ಟೇ ಶರೀರತ್ಯಾಗ ಮಾಡುತ್ತಾರೆ ಎಂದು ಪಾದ್ಮಪುರಾಣದಲ್ಲಿ ಹೇಳಿದೆ.

**ಭಾಷ್ಯ—ಪ್ರಾಣಾಯ್ಯೈವ –**
**ವಾಯುಮೇವಾಽದ್ರವತ್ಯೇಷ ಜೀವೋ ಮೋಕ್ಷಾಯ ತತ್ತ್ವವಿತ್ ।**
**ತದನುಜ್ಞಯೈವ ಜ್ಞಾನಿತ್ವಮತಸ್ತಂ ಪುನರಾವ್ರಜೇತ್ ।**
**ಸರ್ವೇಽಪಿ ವಾಯುಮಾಸಾದ್ಯ ಜಾಯಸ್ವ ಜ್ಞಾನವಮಾಪ್ನುಹಿ ।**
**ಇತಿ ತಸ್ಯ ವರಾದೇವ ಜಾಯಂತೇ ಜ್ಞಾನಿನೋಽಖಿಲಾಃ ।**
**ಪುನಸ್ತಂ ಪ್ರಾಪ್ಯ ಮುಕ್ತಿಂ ಚ ಪ್ರಾಪ್ನುಯುಸ್ತದನುಜ್ಞಯಾ ।**
**ಇತಿ ಪ್ರವೃತ್ತೇ ।**

**ಅನುವಾದ**—ಪ್ರಾಣಾಯ್ಯೈವ ಎಂಬ ಮಂತ್ರಭಾಗದ ವ್ಯಾಖ್ಯಾನ ಹೀಗೆ– ತತ್ತ್ವಜ್ಞಾನಿಯಾದ ಜೀವನು ಮೋಕ್ಷವನ್ನು ಹೊಂದುವುದಕ್ಕಾಗಿ ಅರ್ಚಿರಾದಿ ಮಾರ್ಗದಲ್ಲಿ ವಾಯುದೇವರ ಸಮೀಪಕ್ಕೆ ಹೋಗುತ್ತಾನೆ. ಹಿಂದೆ ಅವನ ಅನುಗ್ರಹದಿಂದಲೇ ಜ್ಞಾನಿಯಾದುದರಿಂದ ಈಗ ಪುನಃ ಅವನ ಬಳಿಯೇ ಹೋಗುತ್ತಾನೆ. ಹೀಗೆ ಎಲ್ಲರೂ ಮೊದಲಿಗೆ ಭಕ್ತಿಯಿಂದ ವಾಯುದೇವರನ್ನು ಆಶ್ರಯಿಸಿ 'ಜ್ಞಾನವನ್ನು ಕೊಡು' ಎಂದು ಅವರು ನೀಡುವ ವರದಿಂದಲೇ ಜ್ಞಾನಿಗಳಾಗುತ್ತಾರೆ. ಮತ್ತೆ

ಅರ್ಚಿರಾದಿ ಮಾರ್ಗದಲ್ಲಿ ಆ ವಾಯುದೇವರನ್ನು ತಲುಪಿ ಅವರ ಅನುಗ್ರಹದಿಂದ ಮುಕ್ತಿಯನ್ನು ಪಡೆಯುವರು ಎಂದು ಪ್ರವೃತ್ತಗ್ರಂಥದಲ್ಲಿದೆ.

**ಭಗವಂತನಿಗೆ ಅರ್ಚಿರಾದಿ ಮಾರ್ಗದಲ್ಲಿ ರಾಜೋಪಚಾರ :**

**ಉಪನಿಷತ್—ತದ್ ಯಥಾ ರಾಜಾನಮಾಯಾಂತಮುಗ್ರಾಃ ಪ್ರತ್ಯೇನಸಃ ಸೂತಗ್ರಾಮಣ್ಯೋಽನ್ನೈಃ ಪಾನೈರಾವಸಥೈಃ ಪ್ರತಿಕಲ್ಪಂತೇ ಅಯಮಾಯಾತ್ಯಯಮಾಗಚ್ಛತೀತ್ಯೇವಂ ಹೈವಂವಿದಂ ಸರ್ವಾಣಿ ಭೂತಾನಿ ಪ್ರತಿಕಲ್ಪಂತ ಇದಂ ಬ್ರಹ್ಮಾಽಯಾತೀದಮಾಗಚ್ಛತೀತಿ ।**

ಧ್ವಜವು ಬರುತ್ತಿದೆ,ಆದ್ದರಿಂದ ರಾಜನು ಬರುತ್ತಿದ್ದಾನೆ ಎಂದು ತಿಳಿದು ಪ್ರಧಾನ ಅಂಗರಕ್ಷಕರು, ಯೋಧರು, ಸೂತರು ಮತ್ತು ಸಾಮಂತ ರಾಜರು ಬರುತ್ತಿರುವ ರಾಜನಿಗಾಗಿ ಅನ್ನಪಾನ ವಸತಿಗಳಿಂದ ಹೇಗೆ ಸತ್ಕರಿಸುವರೋ ಹಾಗೆಯೇ ಹಿಂದೆ ಹೇಳಿದ ರೀತಿಯಲ್ಲಿ ಪರಬ್ರಹ್ಮನನ್ನು ಅಪರೋಕ್ಷವಾಗಿ ನೋಡಿದ ಜ್ಞಾನಿಯು ಬರುವುದನ್ನು ನೋಡಿ, ಅರ್ಚಿರಾದಿ ಮಾರ್ಗದ ದೇವತೆಗಳೆಲ್ಲರೂ ಸತ್ಕಾರವನ್ನೇರ್ಪಡಿಸುತ್ತಾರೆ– ಮುಕ್ತಜೀವನು ಬರುತ್ತಿದ್ದಾನೆ, ಆದ್ದರಿಂದ ಜೊತೆಗೆ ಪರಮಾತ್ಮನೂ ಬರುತ್ತಿದ್ದಾನೆ ಎಂದು.

**ಭಾಷ್ಯ—'ಇದಂ ಮುಕ್ತಜೀವಸ್ವರೂಪಮಾಯಾತಿ ಅತೋಽನೇನ ಸಹೇದಂ ಪರಂ ಬ್ರಹ್ಮಾಯಾತೀ'ತಿ ಪರಬ್ರಹ್ಮಣಃ ಪೂಜಾರ್ಥಂ ಪ್ರತಿಕಲ್ಪಂತೇ ಯಥಾ ರಾಜ್ಞೋ ಧ್ವಜಾದಿಕಂ ದೃಷ್ಟ್ವಾ 'ಅಯಂ ಧ್ವಜ ಆಗಚ್ಛತಿ ತಸ್ಮಾದ್ ರಾಜಾಽಽಯಾತೀ'ತಿ ಪೂಜಾಂ ಪ್ರತಿಕಲ್ಪಂತೇ ತದ್ವತ್ ।**

**ಅನುವಾದ**—'ಮುಕ್ತಜೀವನು ಬರುತ್ತಿದ್ದಾನೆ. ಆದ್ದರಿಂದ ಜೊತೆಗೆ ಪರಬ್ರಹ್ಮನೂ ಬರುತ್ತಿದ್ದಾನೆ' ಎಂದು ದೇವತೆಗಳು ಪರಬ್ರಹ್ಮನ ಪೂಜೆಗಾಗಿ ಏರ್ಪಾಡು ಮಾಡುತ್ತಾರೆ. ರಾಜನ ಧ್ವಜ ಮೊದಲಾದವುಗಳನ್ನು ನೋಡಿ, 'ಧ್ವಜವು ಬರುತ್ತಿದೆ ಆದ್ದರಿಂದ ರಾಜನು ಬರುತ್ತಿದ್ದಾನೆ' ಎಂದು ಪೂಜೆಯನ್ನು ಏರ್ಪಡಿಸುವಂತೆ.

**ಭಾಷ್ಯ—ಅನ್ಯಥಾ 'ಇದಂ ಬ್ರಹ್ಮಾಽಯಾತೀದಮಾಗಚ್ಛತಿ' ಇತಿ ದ್ವಿರುಕ್ತಿರ್ವ್ಯರ್ಥಾ ಸ್ಯಾತ್। ವೀಪ್ಸಾತ್ವೇ ತ್ವಯಮಾಯಾತೀತ್ಯೇಕ ಪ್ರಕಾರೇಣ ಶಬ್ದಾಭ್ಯಾಸಃ ಸ್ಯಾತ್ ।**

**ಅನುವಾದ**—'ಇದಂ ಬ್ರಹ್ಮಾಯಾತೀದಮಾಗಚ್ಛತಿ' ಈ ಪದಗಳಿಗೆ ಹೀಗೆ ವ್ಯಾಖ್ಯಾನ ಮಾಡದಿದ್ದರೆ 'ಇದಂ ಬ್ರಹ್ಮ ಆಯಾತಿ' 'ಇದಂ ಆಗಚ್ಛತಿ' ಎಂಬ

ಸಮಾನಾರ್ಥಕವಾದ ದ್ವಿರುಕ್ತಿಯು ವ್ಯರ್ಥವಾಗುವುದು. ಇದು ಆದರಾರ್ಥವಾಗಿ ವೀಪ್ಸಾ ಎಂದು ಪರಿಗಣಿಸುವುದಾದರೆ, 'ಇದಂ ಬ್ರಹ್ಮಾಯಾತಿ ಇದಂ ಬ್ರಹ್ಮಾಯಾತಿ' ಎಂದೊ 'ಅಯಮಾಯಾತಿ ಅಯಮಾಯಾತಿ' ಎಂದೊ ಒಂದೇ ವಿಧವಾಗಿ ಪುನರುಕ್ತಿಯು ಇರಬೇಕಿತ್ತು. 'ಇದಂ ಬ್ರಹ್ಮಾಯಾತಿ, ಇದಮಾಗಚ್ಛತಿ' ಎಂದೂ 'ಅಯಮಾಯಾತಿ ಅಯಮಾಗಚ್ಛತಿ' ಎಂದೂ ಬೇರೆ ಬೇರೆ ಶಬ್ದಗಳಿಂದ ದ್ವಿರುಕ್ತಿ ಮಾಡಿರುವುದರಿಂದ ಇದು ವೀಪ್ಸೆಯಲ್ಲ. 'ಬ್ರಹ್ಮಸ್ವರೂಪನಾದ ಜೀವನು ಬರುತ್ತಾನೆ' ಎಂದು ಎರಡು ಬಾರಿ ಆದರದಿಂದ ಹೇಳಿದೆ ಎಂದು ಗ್ರಹಿಸುವ ಪಕ್ಷದಲ್ಲಿ ಬೇರೆ ಬೇರೆ ಶಬ್ದಗಳಿಂದ ಎರಡು ಬಾರಿ ಹೇಳಿದುದು ಯುಕ್ತವಾಗಲಾರದು. ಒಂದೇ ಬಗೆಯ ದ್ವಿರುಕ್ತಿಯೇ ಆದರಾರ್ಥವಾದ ವೀಪ್ಸೆ ಎನಿಸುತ್ತದೆ. ಆದ್ದರಿಂದ ಪರಕೀಯರ ವ್ಯಾಖ್ಯಾನದಲ್ಲಿ ದ್ವಿರುಕ್ತಿ ವ್ಯರ್ಥ.

**ಭಾಷ್ಯ—ಏಕಪ್ರಕಾರ ಶಬ್ದಾನಾಮಭ್ಯಾಸಸ್ತ್ವಾದರಾರ್ಥಕಃ ।**
**ಸ್ವರವರ್ಣಾದಿ ಮಾತ್ರಂ ವಾಪ್ಯನ್ಯಥಾ ಚೇತ್ ತದಾಽಪರಃ ।**
**ಅರ್ಥಃ ಸ್ಯಾದೇಷ ನಿಯಮೋ ವಾಕ್ಯೇ ವೀಪ್ಸಾ ಪದೇ ತಥಾ ।**
**ಪ್ರಾತಿಸ್ವಿಕಾರ್ಥೇಽಪಿ ಭವೇದಭ್ಯಾಸೇ ವಾ ತಥಾ ಸ್ಥಿತೇ ।**
**ಇತಿ ಶಬ್ದನಿರ್ಣಯೇ ।**

**ಅನುವಾದ**—ವಾಕ್ಯಗಳಲ್ಲಿ ಮತ್ತು ವೀಪ್ಸಾ ಪದಗಳಲ್ಲಿ ಒಂದೇ ವಿಧವಾದ ಶಬ್ದಗಳ ಪುನರುಕ್ತಿಯು ಮಾತ್ರ ಪ್ರತಿಪಾದ್ಯವಿಷಯದ ಬಗ್ಗೆ ಆದರವನ್ನು ತೋರಿಸುತ್ತದೆ. ಸ್ವರ, ವರ್ಣ ಅಥವಾ ಪದದಲ್ಲಿ ಸ್ವಲ್ಪ ಬದಲಾವಣೆ ಇದ್ದರೂ ಆಗ ಬೇರೆ ಅಭಿಪ್ರಾಯವಿರುವುದು. ಆದರವನ್ನು ತೋರಿಸುವ ಅಭಿಪ್ರಾಯವಿರುವುದಿಲ್ಲ. ಪ್ರತ್ಯೇಕವಾಗಿ ಬೇರೆ ಬೇರೆ ಅರ್ಥಗಳುಳ್ಳ ವಾಕ್ಯಗಳ ಪುನರುಕ್ತಿಯಲ್ಲಿಯೂ ಹೀಗೇ ನಿಯಮವಿರುತ್ತದೆ ಎಂದು ಶಬ್ದನಿರ್ಣಯ ಎಂಬ ಗ್ರಂಥದಲ್ಲಿ ಹೇಳಿದೆ.

**ಭಾಷ್ಯ—ನ ಚ ಕುತ್ರಚಿದಾದರಾರ್ಥೇ ದ್ವಿರೂಪಪ್ರಯೋಗೋ ದೃಷ್ಟೋಽನಂತರಿತಃ ।**

**ಅನುವಾದ**—ಆದರದ ಅಭಿಪ್ರಾಯವಿದ್ದಲ್ಲಿ ಏಕಕಾಲದಲ್ಲಿ ಜೊತೆ ಜೊತೆಯಾಗಿ ಎರಡು ಬಗೆಯ ಪದಪ್ರಯೋಗವು ಲೋಕದಲ್ಲಿ ಎಲ್ಲೂ ಕಂಡುಬಂದಿಲ್ಲ. 'ಮೈತ್ರಃ ಆಯಾತು', 'ಮೈತ್ರಃ ಆಗಚ್ಛತು' ಎಂದು ಆದರದಿಂದ ಬೇರೆ ಬೇರೆ ಕಾಲಗಳಲ್ಲಿ ಮಾತ್ರ ಬೇರೆ ಬೇರೆ ಬಗೆಯಿಂದ ಪ್ರಯೋಗಿಸುವುದುಂಟು.

**ಭಾಷ್ಯ**—**ಯದಾ ಮುಕ್ತೋ ವ್ರಜತ್ಯೂರ್ಧ್ವಂ ತದಾ ತತ್ಸಹಿತೋ ಹರಿಃ ।**
**ನಿಯಮಾದ್ ದೃಶ್ಯತೇ ದೇವೈರಮುಕ್ತೇ ನಿಯಮೋ ನ ತು ।**
**ಯಥಾ ಧ್ವಜಾದಿಕಂ ದೃಷ್ಟ್ವಾ ಪೂಜಾಂ ರಾಜ್ಞಃ ಪ್ರಕುರ್ವತೇ ।**
**ಏವಂ ವಿಮುಕ್ತಿಗಂ ದೃಷ್ಟ್ವಾ ವಿಷ್ಣೋಃ ಪೂಜಾಂ ಪ್ರಕುರ್ವತೇ ।**
**ಇತಿ ತತ್ತ್ವನಿರ್ಣಯೇ ।**

**ಅನುವಾದ**—'ಮುಕ್ತನು ಊರ್ಧ್ವಲೋಕಕ್ಕೆ ಹೋಗುವಾಗ ಅವನ ಜೊತೆ ಇರುವ ಹರಿಯನ್ನು ದೇವತೆಗಳು ತಪ್ಪದೆ ನೋಡುತ್ತಾರೆ. ಅಮುಕ್ತ ಜೀವನು ಹೋಗುವಾಗ ಆ ನಿಯಮವಿಲ್ಲ. ಆದ್ದರಿಂದ ಇದು ಮುಕ್ತಪರ. ಧ್ವಜ ಮೊದಲಾದವು ಬರುತ್ತಿರುವುದನ್ನು ನೋಡಿ ರಾಜ ಬರುತ್ತಿರುವನೆಂದು ತಿಳಿದು ಭೃತ್ಯರು ರಾಜನಿಗೆ ಪೂಜೆಯನ್ನು ಏರ್ಪಡಿಸುವಂತೆ ಮುಕ್ತಿ ಹೊಂದುತ್ತಿರುವ ಜೀವನನ್ನು ನೋಡಿ ದೇವತೆಗಳು ವಿಷ್ಣುವಿನ ಆಗಮನವನ್ನು ತಿಳಿದು ವಿಷ್ಣುವಿನ ಪೂಜೆಯನ್ನು ಮಾಡುತ್ತಾರೆ' ಎಂದು ತತ್ತ್ವನಿರ್ಣಯ ಎಂಬ ಗ್ರಂಥದಲ್ಲಿ ಹೇಳಲಾಗಿದೆ.

**ಭಾಷ್ಯ**–**'ತಸ್ಮಾದಣಿಮಾನಂ ನ್ಯೇತೀ'ತ್ಯಾದಿನಾ ಜೀವಗತಂ ಬ್ರಹ್ಮೈವೋಚ್ಯತೇ। ಜೀವೋಪತಾಪಾದಿ ತು ನೈವ ।**

**ಅನುವಾದ**—'ಇದಂ ಬ್ರಹ್ಮಾಯಾತಿ'ಎಂಬ ಉತ್ತರ ವಾಕ್ಯದಲ್ಲಿ 'ಈ ಬ್ರಹ್ಮ' ಎಂದಿರುವುದರಿಂದ, 'ಅಣಿಮಾನಂ ನ್ಯೇತಿ' ಎಂಬ ಪೂರ್ವವಾಕ್ಯದಲ್ಲಿ ಬ್ರಹ್ಮನೇ ಪ್ರಸ್ತುತನಾಗಿರಬೇಕು. ಆದ್ದರಿಂದ ಜೀವಾಂತರ್ಗತನಾಗಿದ್ದು ಸೂಕ್ಷ್ಮನಾದ ಬ್ರಹ್ಮನೆ ಅಣಿಮ ಶಬ್ದೋಕ್ತನಾಗಿದ್ದಾನೆ. ಬ್ರಹ್ಮನು ಜೀವಾಂತರ್ಗತನಾಗಿದ್ದರೂ ಅಚಿಂತ್ಯಶಕ್ತಿವುಳ್ಳವನಾದ್ದರಿಂದ ಜೀವನಿಗೆ ಉಂಟಾಗುವ ರೋಗ ಇತ್ಯಾದಿಗಳು ಬ್ರಹ್ಮನಿಗೆ ಉಂಟಾಗುವುದಿಲ್ಲ.

**ಉಪನಿಷತ್**—**ತದ್ಯಥಾ ರಾಜಾನಂ ಪ್ರಯಿಯಾಸಂತಮುಗ್ರಾಃ ಪ್ರತ್ಯೇನಸಃ ಸೂತಗ್ರಾಮಣ್ಯೋಽಭಿ ಸಮಾಯಂತಿ ಏವಮೇವೇಮಮಾತ್ಮಾನಮ್ ಅಂತಕಾಲೇ ಸರ್ವೇ ಪ್ರಾಣಾ ಅಭಿ ಸಮಾಯಂತಿ ಯತ್ರೈ-ತದೂರ್ಧ್ವೋಚ್ಛ್ವಾಸೀ ಭವತಿ ।**

**॥ ಇತಿ ಜ್ಯೋತಿರ್ಬ್ರಾಹ್ಮಣಂ ॥**

**ಅನುವಾದ**—ರಾಜನು ಹೊರಟಾಗ ಜೊತೆಗೆ ಅವನ ಪ್ರಧಾನ ಅಂಗರಕ್ಷಕರೂ ಯೋಧರೂ, ಸೂತರೂ, ಸೇನಾಪಾಲಕರೂ ಹೊರಟು ಬರುವಂತೆ, ಮುಕ್ತನು ಮರಣದ ಊರ್ಧ್ವಶ್ವಾಸ ಬಿಡಲು ತೊಡಗಿದಾಗ ಅವನನ್ನು ಕರೆದುಕೊಂಡು ಹೊರಟ

ಪರಮಾತ್ಮನ ಜೊತೆಗೆ ಎಲ್ಲ ಇಂದ್ರಿಯಾಭಿಮಾನಿದೇವತೆಗಳೂ ಹೊರಟು ಬರುತ್ತಾರೆ.

**ಭಾಷ್ಯ—ಜೀವಮಾದಾಯ ಗಚ್ಛಂತಮನುಯಾಂತಿ ದಿವೌಕಸಃ ।**
**ಪ್ರಾಣಾಭಿಮಾನಿನೋ ವಿಷ್ಣುಂ ನೃಪಂ ಪರಿಜನಾ ಯಥಾ। ಇತಿ ಚ ।**

**ಅನುವಾದ**—ವಿಷ್ಣು ಜೀವರನ್ನು ಕರೆದುಕೊಂಡು ಹೋಗುವಾಗ ಅವನ ಜೊತೆಗೆ ಇಂದ್ರಿಯಾಭಿಮಾನಿದೇವತೆಗಳೂ ಹೋಗುತ್ತಾರೆ, ರಾಜನ ಜೊತೆಗೆ ಅವನ ಭೃತ್ಯರು ಹೋಗುವಂತೆ ಎಂದು ಕೂಡ ಹೇಳಿದೆ.

**ಭಾಷ್ಯ-ಉಗ್ರಾಸ್ತು ಶ್ರೇಣಯಃ ಪ್ರೋಕ್ತಾ ಯೋಧಾಃ ಪ್ರತ್ಯೇನಸಃ ಸ್ಮೃತಾಃ ।**
**ಗ್ರಾಮಣ್ಯಸ್ತು ಚಮೂಪಾಲಾಸ್ತೇ ಸರ್ವೇ ದ್ವಿವಿಧಾ ಮತಾಃ ।**
**ರಾಜ್ಞಾ ಸಹ ಸ್ಥಿತಾಶ್ಚೈವ ತಥಾ ಜನಪದೇ ಸ್ಥಿತಾಃ ।**
**ತೇ ಸರ್ವೇಽಪಿ ನಿಯಂತವ್ಯಾಃ ಶ್ರೇಣಿಭಿರ್ದ್ವಿವಿಧೈಃ ಸದಾ ।**
**ಇತಿ ರಾಜನೀತೌ ।**

**ಅನುವಾದ**—ಉಗ್ರರೆಂದರೆ ಪ್ರಧಾನ ಅಂಗರಕ್ಷಕರು. ಪ್ರತ್ಯೇನಸರೆಂದರೆ ಯೋಧರು. ಗ್ರಾಮಣಿಗಳೆಂದರೆ ಸೇನಾಪಾಲಕರು. ಅವರೆಲ್ಲರೂ ಎರಡುವಿಧ, ರಾಜನ ಜೊತೆ ಇರುವವರು ಮತ್ತು ರಾಜ್ಯಗಳಲ್ಲಿ ಇರುವವರು. ಅವರೆಲ್ಲರೂ ಎರಡು ವಿಧದ ಅಂಗರಕ್ಷಕರಿಂದ ನಿಯಂತ್ರಿಸಲ್ಪಡಬೇಕು ಎಂದು ರಾಜನೀತಿಯು ಹೇಳುತ್ತದೆ.

**ಭಾಷ್ಯ—ಅನುಯಾಂತಿ ಶರೀರಸ್ಥಾ ಅಭಿಯಾಂತಿ ಸ್ವಲೋಕಗಾಃ ।**
**ಮುಕ್ತಮಾದಾಯ ಗಚ್ಛಂತಂ ವಿಷ್ಣುಂ ಸರ್ವೇ ದಿವೌಕಸಃ ।**
**ಇತಿ ಅಧ್ಯಾತ್ಮೇ ।**

**|| ಇತಿ ಜ್ಯೋತಿರ್ಬ್ರಾಹ್ಮಣಂ ||**

**ಅನುವಾದ**—ಶರೀರದಲ್ಲಿರುವ ಎಲ್ಲ ದೇವತೆಗಳು ಮುಕ್ತನನ್ನು ಕರೆದುಕೊಂಡು ಹೋಗುವ ವಿಷ್ಣುವನ್ನು ಹಿಂಬಾಲಿಸುತ್ತ ಹೋಗುತ್ತಾರೆ. ತಮ್ಮ ತಮ್ಮ ಲೋಕದಲ್ಲಿ ಅದೇ ದೇವತೆಗಳು ಅವನನ್ನು ಸ್ವಾಗತಿಸುತ್ತಾರೆ ಎಂದು ಅಧ್ಯಾತ್ಮ ಎಂಬ ಗ್ರಂಥದಲ್ಲಿ ಹೇಳಿದೆ.

ಜ್ಯೋತಿರ್ಬ್ರಾಹ್ಮಣವು ಮುಗಿಯಿತು.

**ಮರಣಕಾಲದ ಮೋಹಾವಸ್ಥೆ :**

**ಉಪನಿಷತ್—ಸ ಯತ್ರಾಯಮಾತ್ಮಾ ಬಲ್ಯಂ ನ್ಯೇತ್ಯ ಸಂಮೋಹಮಿವ ನ್ಯೇತಿ ಅಥೈನಮೇತೇ ಪ್ರಾಣಾ ಅಭಿಸಮಾಯಂತಿ । ಸ ಏತಾಸ್ತೇಜೋಮಾತ್ರಾಃ**

**ಸಮಭ್ಯಾದದಾನೋ ಹೃದಯಮೇವಾನ್ವವಕ್ರಾಮತಿ । ಸ ಯತ್ರೈಷಃ ಚಾಕ್ಷುಷಃ ಪುರುಷಃ ಪರಾಕ್ ಪರ್ಯಾವರ್ತತೇ ಅಥಾರೂಪಜ್ಞೋ ಭವತಿ ।**

ಮುಕ್ತನಾಗುತ್ತಿರುವ ಜೀವನು ಅಂತ್ಯಮರಣಪೂರ್ವದ ಮೋಹಾವಸ್ಥೆಯನ್ನು ಹೊಂದಿ ವಿಷ್ಣುವನ್ನು ಹೊಂದುವಾಗ ತಮ್ಮ ತಮ್ಮ ಲೋಕಗಳಲ್ಲಿರುವ ತೇಜೋರೂಪರಾದ ದೇವತೆಗಳು ವಿಷ್ಣುವಿನ ಬಳಿ ಬರುತ್ತಾರೆ. ಬಲಕಣ್ಣಿನಲ್ಲಿರುವ ವಿಷ್ಣುವು ತೇಜೋರೂಪಿಗಳಾದ ಈ ದೇವತೆಗಳನ್ನು ಕರೆದುಕೊಂಡು ಹೃದಯಕ್ಕೆ ಹೋಗುತ್ತಾನೆ. ಬಲಗಣ್ಣಿನಲ್ಲಿರುವ ಅವನು ಹೀಗೆ ಹೃದಯದ ಕಡೆಗೆ ಹೊರಟಾಗ ಜೀವಾತ್ಮನು ಜ್ಞಾನ ರಹಿತನಾಗಿರುತ್ತಾನೆ.

**ಭಾಷ್ಯ—ಸರ್ವೇಷಾಂ ಬಲಕಾರಿತ್ವಾದ್ ಬಲ್ಯೋ ವಿಷ್ಣುಃ ಪ್ರಕೀರ್ತಿತಃ ।**
**ತಂ ಯದಾ ಪ್ರಾಪ್ಯ ಜೀವಾತ್ಮಾ ಮೃತೇಃ ಪೂರ್ವಂ ವಿಮುಗ್ಧತಾಂ ।**
**ಯಾತಿ ವಿಷ್ಣುಂ ತದಾ ದೇವಾ ಯಾಂತಿ ತೇಜಃಸ್ವರೂಪಿಣಃ ।**
**ತಾನಾದಾಯ ಹರಿಶ್ಚಕ್ಷುಃಸ್ಥಾನಾದ್ಧೃದಯಮಾವ್ರಜೇತ್ ।**
**ತದಾ ನ ಕಿಂಚಿಜ್ಜಾನಾತಿ ಜೀವೋ ಬ್ರಹ್ಮಸಮಾಶ್ರಿತಃ । ಇತಿ ಚ ।**

**ಅನುವಾದ**—ವಿಷ್ಣುವು ಸರ್ವರಿಗೂ ಬಲವುಂಟು ಮಾಡುವವನಾದುದರಿಂದ ಬಲ್ಯ ಎನಿಸಿದ್ದಾನೆ. ಜೀವನು ಯಾವಾಗ ಅವನನ್ನು ಹೊಂದಿ ಮರಣ ಪೂರ್ವದ ಮೋಹಾವಸ್ಥೆಯನ್ನು ಹೊಂದುತ್ತಾನೋ ಆಗ ತೇಜಃಸ್ವರೂಪಿಗಳಾದ ದೇವತೆಗಳು ವಿಷ್ಣುವಿನ ಬಳಿಗೆ ಹೋಗುತ್ತಾರೆ. ಹರಿಯು ಅವರನ್ನು ಕರೆದುಕೊಂಡು ಕಣ್ಣಿನಿಂದ ಹೃದಯಕ್ಕೆ ಹೋಗುವಾಗ ಅವನನ್ನು ಆಶ್ರಯಿಸಿರುವ ಜೀವನು ಏನನ್ನೂ ತಿಳಿಯುವುದಿಲ್ಲ ಎಂದು ಕೂಡ ಹೇಳಿದೆ.

**ಭಾಷ್ಯ—ಏನಂ ಬಲ್ಯಮಭಿ ಸಮಾಯಂತಿ । ಪರಾಕ್ ಸ್ಥಿತಶ್ಚಾಕ್ಷುಷೋ ಭಗವಾನ್ ಪ್ರತ್ಯಕ್ ಪರಾವರ್ತತೇ ।**
**'ಇಂಧೋ ಹ ವೈ ನಾಮೈಷ ಯೋಽಯಂ ದಕ್ಷಿಣೇಽಕ್ಷನ್ ಪುರುಷಃ ।'**
**ಇತ್ಯಾದಿ ಶ್ರುತೇಃ ।**

**ಅನುವಾದ**—'ಏನಂ' ಎಂದರೆ ಜೀವನನ್ನು ಎಂದರ್ಥವಲ್ಲ. ಏಕೆಂದರೆ ಜೀವನ ಬಳಿಗೆ ದೇವತೆಗಳು ಬರುವುದಿಲ್ಲ. ಆದ್ದರಿಂದ ಬಲವನ್ನು ಕೊಡುವ ಈ ವಿಷ್ಣುವನ್ನು ದೇವತೆಗಳು ಬಂದು ಸೇರುತ್ತಾರೆ ಎಂದರ್ಥ. 'ಪರಾಕ್ ಪರ್ಯಾವರ್ತತೇ' ಎನ್ನುವುದೂ ಜೀವಪರವಲ್ಲ– ಪರಾಕ್‌ಸ್ಥಿತಃ—ಬಹಿರ್ಮುಖಿಯಾಗಿರುವ, ಕಣ್ಣಿನಲ್ಲಿರುವ ಭಗವಂತನು, ಪ್ರತ್ಯಕ್ ಪರಾವರ್ತತೇ—ಅಂತರ್ಮುಖಿಯಾಗುತ್ತಾನೆ, ಹೃದಯದ ಕಡೆಗೆ ಹೊರಡುತ್ತಾನೆ ಎಂದು ಅರ್ಥೈಸಬೇಕು.

“ಬಲಗಣ್ಣಿನಲ್ಲಿರುವ ಭಗವಂತನೇ 'ಇಂಧ' ಎನಿಸಿದ್ದಾನೆ” ಎಂದು ಹೇಳುವ ಶ್ರುತಿಗಳಿಂದ ಹರಿಯು ಬಲಗಣ್ಣಿನಲ್ಲಿರುತ್ತಾನೆಂದು ತಿಳಿಯುತ್ತದೆ.

**ಉಪನಿಷತ್—ಏಕೀಭವತಿ ನ ಪಶ್ಯತೀತ್ಯಾಹುಃ । ಏಕೀಭವತಿ ನ ಜಿಘ್ರತೀತ್ಯಾಹುಃ । ಏಕೀಭವತಿ ನ ರಸಯತ ಇತ್ಯಾಹುಃ । ಏಕೀಭವತಿ ನ ವದತೀತ್ಯಾಹುಃ । ಏಕೀಭವತಿ ನ ಶೃಣೋತೀತ್ಯಾಹುಃ । ಏಕೀಭವತಿ ನ ಮನುತ ಇತ್ಯಾಹುಃ । ಏಕೀಭವತಿ ನ ಸ್ಪೃಶತೀತ್ಯಾಹುಃ । ಏಕೀಭವತಿ ನ ವಿಜಾನಾತೀತ್ಯಾಹುಃ । ತಸ್ಯ ಹೈತಸ್ಯ ಹೃದಯಸ್ಯಾಗ್ರಂ ಪ್ರದ್ಯೋತತೇ । ತೇನ ಪ್ರದ್ಯೋತೇನೈಷ ಆತ್ಮಾ ನಿಷ್ಕ್ರಾಮತಿ ಚಕ್ಷುಷೋ ವಾ ಮೂರ್ಧ್ನೋ ವಾ ಅನ್ಯೇಭ್ಯೋ ವಾ ಶರೀರದೇಶೇಭ್ಯಃ । ತಮುತ್ಕ್ರಾಮಂತಂ ಪ್ರಾಣೋಽನೂತ್ಕ್ರಾಮತಿ । ಪ್ರಾಣಮನೂತ್ಕ್ರಾಮಂತಂ ಸರ್ವೇ ಪ್ರಾಣಾ ಅನೂತ್ಕ್ರಾಮಂತಿ । ಸವಿಜ್ಞಾನೋ ಭವತಿ । ಸ ವಿಜ್ಞಾನಮೇವಾನ್ವವಕ್ರಾಮತಿ । ತಂ ವಿದ್ಯಾಕರ್ಮಣೀ ಸಮನ್ವಾರಭೇತೇ । ಪೂರ್ವಪ್ರಜ್ಞಾ ಚ ।**

ಜೀವ ಪರಮಾತ್ಮರು ವಿಶೇಷವಾಗಿ ಹೃದಯದಲ್ಲಿರುವವರು. ಅವರ ಅಂಶಗಳು ಬಲಗಣ್ಣಿನಲ್ಲಿರುತ್ತವೆ. ಈ ಅಂಶಗಳು ಹೃದಯದಲ್ಲಿರುವ ಮೂಲರೂಪದೊಂದಿಗೆ ಒಂದಾದಾಗ ಜೀವನು ಏನೂ ನೋಡುವುದಿಲ್ಲ ಎಂದು ಹೇಳುತ್ತಾರೆ ಬಲ್ಲವರು. ಘ್ರಾಣದಲ್ಲಿರುವ ಜೀವಾಂಶ ಪರಮಾತ್ಮಾಂಶಗಳು ಹೃದಯದಲ್ಲಿರುವ ಮೂಲರೂಪದೊಡನೆ ಒಂದಾದಾಗ ಜೀವನು ಯಾವ ಗಂಧವನ್ನೂ ತಿಳಿಯುವುದಿಲ್ಲ ಎಂದು ಹೇಳುತ್ತಾರೆ. ರಸನೆಯಲ್ಲಿರುವ ಜೀವಾಂಶ ಪರಮಾತ್ಮಾಂಶಗಳು ಹೃದಯದಲ್ಲಿರುವ ಮೂಲರೂಪದೊಡನೆ ಒಂದಾದಾಗ ಜೀವನು ಯಾವ ರುಚಿಯನ್ನೂ ತಿಳಿಯುವುದಿಲ್ಲ ಎಂದು ಹೇಳುತ್ತಾರೆ. ವಾಕ್ಕಿನಲ್ಲಿರುವ ಜೀವಾಂಶ ಪರಮಾತ್ಮಾಂಶಗಳು ಹೃದಯದಲ್ಲಿರುವ ಮೂಲರೂಪದೊಡನೆ ಒಂದಾದಾಗ ಜೀವನು ಏನೂ ಮಾತನಾಡುವುದಿಲ್ಲ ಎಂದು ಹೇಳುತ್ತಾರೆ. ಶ್ರೋತ್ರದಲ್ಲಿರುವ ಜೀವಾಂಶ ಪರಮಾತ್ಮಾಂಶಗಳು ಹೃದಯದಲ್ಲಿರುವ ಮೂಲರೂಪದೊಡನೆ ಒಂದಾದಾಗ ಜೀವನು ಏನೂ ಕೇಳುವುದಿಲ್ಲ ಎಂದು ಹೇಳುತ್ತಾರೆ. ಮನಸ್ಸಿನಲ್ಲಿರುವ ಜೀವಾಂಶ ಪರಮಾತ್ಮಾಂಶಗಳು ಹೃದಯದಲ್ಲಿರುವ ಮೂಲರೂಪದೊಡನೆ ಒಂದಾದಾಗ ಜೀವನು ಮನಸ್ಸಿನಿಂದ ಏನೂ ತಿಳಿಯುವುದಿಲ್ಲ ಎಂದು ಹೇಳುತ್ತಾರೆ. ತ್ವಗಿಂದ್ರಿಯದಲ್ಲಿರುವ ಜೀವಾಂಶ ಪರಮಾತ್ಮಾಂಶಗಳು ಹೃದಯದಲ್ಲಿರುವ ಮೂಲರೂಪದೊಡನೆ ಒಂದಾದಾಗ ಜೀವನು ಏನೂ ಸ್ಪರ್ಶಿಸುವುದಿಲ್ಲ ಎಂದು ಹೇಳುತ್ತಾರೆ. ಬುದ್ಧಿಯಲ್ಲಿರುವ ಜೀವಾಂಶ ಪರಮಾತ್ಮಾಂಶಗಳು ಹೃದಯದಲ್ಲಿರುವ ಮೂಲರೂಪದೊಡನೆ

ಒಂದಾದಾಗ ಜೀವನು ಬುದ್ಧಿಯಿಂದ ಏನನ್ನೂ ತಿಳಿಯುವುದಿಲ್ಲ ಎಂದು ಹೇಳುತ್ತಾರೆ. ಪರಮಾತ್ಮನನ್ನು ಹೊಂದಿ ಅಂತ್ಯಮರಣಕಾಲದಲ್ಲಿ ಮೋಹಾವಸ್ಥೆ ಹೊಂದಿದ ಜೀವರ ಹೃದಯದ ತುದಿಯು ಪರಮಾತ್ಮ ಸ್ವರೂಪಪ್ರಕಾಶದಿಂದ ಬೆಳಗುತ್ತದೆ. ಹೀಗೆ ಬೆಳಗುವ ದಾರಿಯ ಮೂಲಕ ಪರಮಾತ್ಮನು ಜೀವನನ್ನು ಕರೆದುಕೊಂಡು ಕಣ್ಣಿನಿಂದ, ತಲೆಯಿಂದ ಅಥವಾ ಬೇರೆ ಶರೀರಭಾಗದಿಂದ ಹೊರಗೆ ಹೋಗುತ್ತಾನೆ. ಪರಮಾತ್ಮನು ಹೊರಗೆ ಹೋಗುವಾಗ ಜೊತೆಗೆ ಮುಖ್ಯಪ್ರಾಣನೂ ಹೊರಗೆ ಹೋಗುತ್ತಾನೆ. ಎಲ್ಲ ಇಂದ್ರಿಯಾಭಿಮಾನಿದೇವತೆಗಳೂ ಹೊರಗೆ ಹೋಗುತ್ತಾರೆ. ಆಗ ಪರಮಾತ್ಮನು ಜೀವನಿಂದೊಡಗೂಡಿ ಇರುತ್ತಾನೆ. ಜೀವನ ಮೇಲೆ ಏರಿ ಕುಳಿತು ಹೋಗುತ್ತಾನೆ. ಆವನ ಜೊತೆಗೆ ಜೀವನ ವಿದ್ಯೆಗೆ ಅಭಿಮಾನಿಗಳಾದ ಬ್ರಹ್ಮ ವಾಯುಗಳೂ, ಕರ್ಮಾಭಿಮಾನಿ ಗರುಡನೂ, ಯೋಗ್ಯತೆಯ ಅಭಿಮಾನಿಯಾದ ಲಕ್ಷ್ಮೀದೇವಿಯೂ ಹೋಗುತ್ತಾರೆ.

**ಭಾಷ್ಯ—ಹೃದಯೇ ಸಂಸ್ಥಿತೋ ಜೀವೋ ವಿಶೇಷೇಣ ಹರಿಸ್ತಥಾ ।**
**ಚಕ್ಷುರಾದಿಷು ರೂಪಾಣಿ ಜಾಗ್ರತ್ಕಾಲೇ ತಯೋಃ ಸದಾ ।**
**ಬಹೂನಿ ಸಂತಿ ತಾನ್ಯೇವ ಯದ್ಯೈಕೀಭಾವಮಾಪ್ನುಯುಃ ।**
**ಹೃದಯಸ್ಥೇನ ರೂಪೇಣ ತದಾ ಜೀವೋ ನ ಕಿಂಚನ ।**
**ಜಾನಾತೀತಿ ವಿದುಃ ಪ್ರಾಜ್ಞಾಸ್ತದಾ ವಿಷ್ಣೋಃ ಸ್ವತೇಜಸಾ ।**
**ದ್ಯೋತತೇ ಹೃದಯಾಗ್ರಂ ಚ ತೇನ ದ್ವಾರೇಣ ಕೇಶವಃ ।**
**ನಿಷ್ಕ್ರಾಮೇಜ್ಜೀವಮಾದಾಯ ಪ್ರಾಣ ಏನಮನುವ್ರಜೇತ್ ।**
**ಪ್ರಾಣಮನ್ಯೇ ತಥಾ ದೇವಾ ವಿದ್ಯಾ ಕರ್ಮ ಚ ಯೋಗ್ಯತಾ ।**
**ಇತಿ ಮಹಾಮೀಮಾಂಸಾಯಾಂ ।**

**ಅನುವಾದ**—ಜೀವನೂ ಹರಿಯೂ ವಿಶೇಷವಾಗಿ ಹೃದಯದಲ್ಲಿರುತ್ತಾರೆ. ಜಾಗ್ರದವಸ್ಥೆಯಲ್ಲಿ ಆವರ ರೂಪಗಳು ಕಣ್ಣು ಮೊದಲಾದ ಇಂದ್ರಿಯಗಳಲ್ಲಿ ಅನೇಕ ಇರುತ್ತವೆ. ಆ ರೂಪಗಳು ಹೃದಯದಲ್ಲಿರುವ ರೂಪದೊಂದಿಗೆ ಸೇರಿದಾಗ ಜೀವನು ಏನನ್ನೂ ತಿಳಿಯುವುದಿಲ್ಲ ಎಂದು ಪ್ರಾಜ್ಞರು ಹೇಳುತ್ತಾರೆ. ಆಗ ವಿಷ್ಣುವಿನ ಸ್ವರೂಪಪ್ರಕಾಶದಿಂದ ಹೃದಯದ ತುದಿಯು ಬೆಳಗುತ್ತದೆ. ಆ ದಾರಿಯಿಂದ ಪರಮಾತ್ಮನು ಜೀವನನ್ನು ಕರೆದುಕೊಂಡು ಹೊರಗೆ ಹೋಗುವನು. ಆಗ ಮುಖ್ಯಪ್ರಾಣನು ಇವನನ್ನು ಅನುಸರಿಸುವನು. ಮುಖ್ಯಪ್ರಾಣನನ್ನು ಬೇರೆ ಇಂದ್ರಿಯಾಭಿಮಾನಿ ದೇವತೆಗಳು ಅನುಸರಿಸುವರು. ವಿದ್ಯಾ ಕರ್ಮಗಳ ಅಭಿಮಾನಿ ದೇವತೆಗಳೂ ಯೋಗ್ಯತಾಭಿಮಾನಿ ದೇವತೆಯೂ ಹೊರಡುವರು ಎಂದು ಮಹಾಮೀಮಾಂಸೆಯಲ್ಲಿ ಹೇಳಲಾಗಿದೆ.

ಭಾಷ್ಯ—ಕರ್ಮಾಭಿಮಾನೀ ಗರುಡೋ ಬ್ರಹ್ಮಾ ಜ್ಞಾನಾಭಿಮಾನವಾನ್ ।
ಪೂರ್ವಪ್ರಜ್ಞಾ ಯೋಗ್ಯತಾ ಸ್ಯಾದ್ ರಮಾ ತದಭಿಮಾನಿನೀ ।
ಏತೇಽಪಿ ವಿಷ್ಣುಂ ಗಚ್ಛಂತಮನುಯಾಂತಿ ಸದೈವ ಹಿ ।
ವಾಯುರ್ಜ್ಞಾನಾತ್ಮಕಶ್ಚೈವ ಪ್ರಾಣಾತ್ಮಕ ಇತಿ ದ್ವಿಧಾ ।
ಅನುಯಾತಿ ಹೃಷೀಕೇಶಂ ಸರ್ವೈರ್ದೇವೈಃ ಸಮನ್ವಿತಃ । ಇತಿ ಚ ।

**ಅನುವಾದ**—ಗರುಡ ಕರ್ಮಾಭಿಮಾನಿ, ಚತುರ್ಮುಖ ಬ್ರಹ್ಮ ಮತ್ತು ವಾಯು ಜ್ಞಾನಾಭಿಮಾನಿಗಳು. ಪೂರ್ವಪ್ರಜ್ಞಾ ಎಂದರೆ ಯೋಗ್ಯತೆ. ರಮಾ ದೇವಿಯು ಅದರ ಅಭಿಮಾನಿನಿ. ವಿಷ್ಣು ಜೀವನನ್ನು ಕರೆದುಕೊಂಡು ಹೋಗುವಾಗ ಜೊತೆಗೆ ಈ ದೇವತೆಗಳೂ ಹೋಗುತ್ತಾರೆ. ಆದರೂ 'ವಿದ್ಯಾಕರ್ಮಣೀ ಸಮನ್ವಾರಭೇತೇ' 'ಪ್ರಾಣೋಽನೂತ್ಕ್ರಾಮತಿ' ಎಂದುದು ಪುನರುಕ್ತಿಯಲ್ಲ. ಜ್ಞಾನ ರೂಪ ಮತ್ತು ಬಲರೂಪ ಎಂದು ಎರಡುರೂಪದ ವಾಯುದೇವರು ಎಲ್ಲ ದೇವತೆಗಳ ಜೊತೆಗೆ ಪರಮಾತ್ಮನನ್ನು ಅನುಸರಿಸಿ ಹೋಗುತ್ತಾರೆ ಎಂಬುದು ಉಪನಿಷತ್ತಿನ ಅಭಿಪ್ರಾಯ ಎಂದು ಕೂಡ ಮಹಾಮೀಮಾಂಸೆಯಲ್ಲಿ ಹೇಳಿದೆ.

**ಉತ್ಕ್ರಮಣ ದ್ವಾರಗಳು :**

ಭಾಷ್ಯ—ದೇವಲೋಕೇ ಚಿರಂ ರತ್ವಾ ಯಸ್ತು ಮುಕ್ತಿಂ ವ್ರಜಿಷ್ಯತಿ ।
ಸ ತು ತದ್ದೇವತಾದ್ವಾರೇಣೋತ್ಕ್ರಾಮತಿ ನ ಸಂಶಯಃ ।
ವಿಷ್ಣೋರ್ಲೋಕಂ ಪರಂ ಗಚ್ಛನ್ನುತ್ಕ್ರಾಮೇನ್ಮೂರ್ಧ್ನ ಏವ ತು ।
ತಥೈವ ಬ್ರಹ್ಮಣೋ ಲೋಕಂ ಸುಷುಮ್ನಾಯಾ ವಿಭೇದತಃ ।
ಇತ್ಯಧ್ಯಾತ್ಮೇ ।

**ಅನುವಾದ**—ಯಾವ ಜೀವನು ಆದಿತ್ಯಾದಿ ದೇವತೆಯ ಲೋಕದಲ್ಲಿ ಬಹುಕಾಲ ವಿಹರಿಸಿ ಮುಕ್ತಿಯನ್ನು ಹೊಂದಬೇಕಾಗಿದೆಯೋ ಅವನು ಆದಿತ್ಯಾದಿ ದೇವತೆಯಿಂದ ಅಭಿಮನ್ಯಮಾನವಾದ ಚಕ್ಷುರಾದಿ ದ್ವಾರದ ಮೂಲಕ ಶರೀರದಿಂದ ಹೊರಕ್ಕೆ ಹೋಗುತ್ತಾನೆ. ಸಂಶಯವಿಲ್ಲ. ನೇರವಾಗಿ ವಿಷ್ಣುಲೋಕಕ್ಕೇ ಹೋಗುವವನು ಸುಷುಮ್ನಾನಾಡಿಯ ಮೂಲಕ ತಲೆಯಿಂದ ಹೊರಹೋಗುವನು. ಬ್ರಹ್ಮಲೋಕಕ್ಕೆ ಹೋಗುವವನೂ ಕೂಡ ಸುಷುಮ್ನಾನಾಡಿಯ ಇನ್ನೊಂದು ದಾರಿಯ ಮೂಲಕ ತಲೆಯಿಂದಲೇ ಹೊರಹೋಗುವನು ಎಂದು ಅಧ್ಯಾತ್ಮ ಎಂಬ ಗ್ರಂಥದಲ್ಲಿ ಹೇಳಿದೆ.

ಭಾಷ್ಯ—'ಸವಿಜ್ಞಾನೋ ಭವತಿ' ಜೀವೇನ ಸಹಿತೋ ಭವತಿ । ಸ ವಿಜ್ಞಾನಂ

**ಜೀವನೋವಾನ್ವವಕ್ರಾಮತಿ । ಜೀವಮಾರುಹ್ಯ ಗಚ್ಛತಿ ಭಗವಾನ್ । 'ಪ್ರಾಜ್ಞೇನಾಽತ್ಮನಾಽನ್ವಾರೂಢ' ಇತಿ ಹ್ಯುಕ್ತಂ।**

**ಅನುವಾದ**—'ಸವಿಜ್ಞಾನೋ ಭವತಿ' ಎಂದರೆ ಪರಮಾತ್ಮನು ಜೀವನ ಜೊತೆ ಇರುತ್ತಾನೆಂದರ್ಥ. ಆದರೆ 'ಸ ವಿಜ್ಞಾನಂ ಏವ ಅನ್ವವಕ್ರಾಮತಿ' ಎಂಬಲ್ಲಿ ಸ ವಿಜ್ಞಾನಂ ಎಂಬುದು ಒಂದೇ ಪದವಲ್ಲ. 'ಸಃ ವಿಜ್ಞಾನಂ ಏವ ಅನ್ವವಕ್ರಾಮತಿ' ಎಂದು ಪದವಿಭಾಗ ಮಾಡಬೇಕು. ಸಃ—ಆ ಪರಮಾತ್ಮನು, ವಿಜ್ಞಾನಂ ಏವ—ಜೀವನನ್ನೇ, ಅನ್ವವಕ್ರಾಮತಿ—ಏರಿ ಹೋಗುತ್ತಾನೆ ಎಂದರ್ಥ. ಪರಮಾತ್ಮನು ಜೀವನ ಮೇಲೇರಿ ಸಂಚರಿಸುವುದು 'ಪ್ರಾಜ್ಞರೂಪಿ ಪರಮಾತ್ಮನಿಂದ ಏರಲ್ಪಟ್ಟ ಜೀವನು' ಎಂದು ಶ್ರುತಿಯಲ್ಲಿ ಉಕ್ತವಾಗಿಯೇ ಇದೆ.

**ಭಾಷ್ಯ—'ಯೋ ವಿಜ್ಞಾನೇ ತಿಷ್ಠನ್' 'ಯ ಆತ್ಮನಿ ತಿಷ್ಠನ್' ಇತ್ಯುಭಯೋ-ರ್ಜೀವಾಭಿಪ್ರಾಯೇಣ ಹಿ ಪಾಠಃ । 'ಶಾರೀರಶ್ಚೋಭಯೇಽಪಿ ಹಿ ಭೇದೇನೈನಮಧೀಯತೇ' ಇತಿ ಭಗವದ್ವಚನಮ್ ।**

**ವಿಜ್ಞಾನಾತ್ಮಾ ಸಹ ದೇವೈಶ್ಚ ಸರ್ವೈಃ ।**
**ಪ್ರಾಣಾ ಭೂತಾನಿ ಸಂಪ್ರತಿಷ್ಠಂತಿ ಯತ್ರ । ಇತಿ ಚ ।**

**ಅನುವಾದ**—'ಯಾರು ವಿಜ್ಞಾನದಲ್ಲಿದ್ದು' 'ಯಾರು ಆತ್ಮದಲ್ಲಿದ್ದು' ಎಂದು ಎರಡೂ ಮಂತ್ರಗಳಲ್ಲಿ ವಿಜ್ಞಾನ ಮತ್ತು ಆತ್ಮ ಶಬ್ದಗಳನ್ನು ಜೀವ ಎಂಬರ್ಥದಲ್ಲಿ ಪ್ರಯೋಗಿಸಲಾಗಿದೆ. "ಜೀವನು ಅಂತರ್ಯಾಮಿಯಲ್ಲ. ಏಕೆಂದರೆ ಕಾಣ್ವ, ಮಾಧ್ಯಂದಿನ ಎಂಬ ಎರಡೂ ಶಾಖೆಗಳು 'ವಿಜ್ಞಾನೇ ತಿಷ್ಠನ್' 'ಆತ್ಮನಿ ತಿಷ್ಠನ್' ಎಂದು ಜೀವನನ್ನು ಅಂತರ್ಯಾಮಿಗಿಂತ ಭಿನ್ನನೆಂದೆ ವರ್ಣಿಸಿವೆ" ಎಂಬ ವೇದವ್ಯಾಸರ ಬ್ರಹ್ಮಸೂತ್ರವೂ ಈ ಅರ್ಥವನ್ನೇ ಹೇಳುತ್ತದೆ. 'ವಿಜ್ಞಾನಸ್ವರೂಪನಾದ ಜೀವನೂ ಇಂದ್ರಿಯಗಳೂ, ಪಂಚಭೂತಗಳೂ ಅಭಿಮಾನಿದೇವತೆಗಳೊಂದಿಗೆ ಯಾರಲ್ಲಿ ಆಶ್ರಿತರಾಗಿರುವರೋ'ಎನ್ನುವ ಷಟ್ಪ್ರಶ್ನೋಪನಿಷತ್ತಿನ ಮಂತ್ರವೂ ಕೂಡ ವಿಜ್ಞಾನ ಶಬ್ದಕ್ಕೆ ಜೀವ ಎಂಬ ಅರ್ಥವನ್ನು ದೃಢಪಡಿಸುತ್ತದೆ.

**ವಿವರಣೆ**—'ವಿಜ್ಞಾನಮೇವಾನ್ವವಕ್ರಾಮತಿ' ಎಂಬಲ್ಲಿರುವ ವಿಜ್ಞಾನ ಶಬ್ದಕ್ಕೆ ಜೀವ ಎಂದು ಅರ್ಥ. ಏಕೆಂದರೆ 'ಯೋ ವಿಜ್ಞಾನೇ ತಿಷ್ಠನ್' ಎಂಬ ಕಾಣ್ವ ಶಾಖೆಯ ವಾಕ್ಯದಲ್ಲಿ ಆ ಶಬ್ದಕ್ಕೆ ಜೀವ ಎಂಬ ಅರ್ಥದಲ್ಲಿ ಪ್ರಯೋಗವಿದೆ. ಇಲ್ಲಿ ಯಾದರೂ ಜೀವ ಎಂದೇ ಅರ್ಥವೇಕೆಂದರೆ 'ಯ ಆತ್ಮನಿ ತಿಷ್ಠನ್' ಎಂಬ ಮಾಧ್ಯಂದಿನ ಶಾಖೆಯ ವಾಕ್ಯದಲ್ಲಿ ಜೀವಾರ್ಥದಲ್ಲಿ ಆತ್ಮಶಬ್ದವಿದೆ. ಆದ್ದರಿಂದ

ಅದರ ಸಮಾನಾರ್ಥದ ಈ ಕಾಣ್ವಶಾಖೆಯ ವಾಕ್ಯದಲ್ಲಿ ವಿಜ್ಞಾನಶಬ್ದ ಜೀವಾರ್ಥವೇ ಇರಬೇಕಾಗುತ್ತದೆ.

**ಮರಣ ಭಗವಂತನ ಅಧೀನ :**

**ಭಾಷ್ಯ**—**ಏಷ ಆತ್ಮಾ ನಿಷ್ಕ್ರಾಮತೀತಿ ಜೀವಾಂಗೀಕಾರೇ 'ಶರೀರಂ ನಿಹತ್ಯಾ-ವಿದ್ಯಾಂ ಗಮಯಿತ್ವಾನ್ಯನ್ನವತರಂ ಕಲ್ಯಾಣತರಂ ರೂಪಂ ಕುರುತೇ' ಇತ್ಯಾದಿಕಮಯುಕ್ತಂ ಸ್ಯಾತ್ । ನ ಹಿ ಜೀವಃ ಶರೀರಂ ನಿಹಂತಿ, ಅವಿದ್ಯಾಂ ಗಮಯತಿ, ರೂಪಾಂತರಂ ವಾ ಕರೋತಿ । ನ ಚ ಸರ್ವಮಯತ್ವಂ ಜೀವಸ್ಯ । ಬ್ರಹ್ಮೇತಿ ವಿಶೇಷಣಾಚ್ಚ ।**

**ಅನುವಾದ**—'ಏಷ ಆತ್ಮಾ ನಿಷ್ಕ್ರಾಮತಿ' ಎಂಬಲ್ಲಿ ಮಾತ್ರ ಆತ್ಮ ಎಂಬ ಪದಕ್ಕೆ ಜೀವ ಎಂದು ಅರ್ಥವನ್ನು ಅಂಗೀಕರಿಸಿದರೆ 'ಶರೀರಂ ನಿಹತ್ಯಾವಿದ್ಯಾಂ ಗಮಯಿತ್ವಾನ್ಯನ್ನವತರಂ ಕಲ್ಯಾಣತರಂ ರೂಪಂ ಕುರುತೇ' ಈ ಮೊದಲಾದ ಮಂತ್ರಗಳು ಅಯುಕ್ತವಾಗುವವು. ಏಕೆಂದರೆ ಈ ಮಂತ್ರಗಳು 'ಏಷ ಆತ್ಮಾ ನಿಷ್ಕ್ರಾಮತಿ' ಎಂಬಲ್ಲಿ ಪ್ರಸ್ತುತವಾಗಿರುವ ಆತ್ಮನು ಶರೀರವನ್ನು ನಾಶ ಮಾಡುತ್ತಾನೆ, ಅವಿದ್ಯೆಯನ್ನು ಪರಿಹರಿಸುತ್ತಾನೆ, ಬೇರೆ ರೂಪವನ್ನು ಉಂಟುಮಾಡುತ್ತಾನೆ ಎಂದು ಹೇಳುತ್ತವೆ. ಜೀವನು ಈ ಕಾರ್ಯಗಳನ್ನು ಮಾಡಲಾರ. ಹೀಗೆ ಜೀವನಿಂದ ಮಾಡಲಾಗದ ಕಾರ್ಯಗಳನ್ನು ಹೇಳುವ ಮಂತ್ರಗಳು ಅಯುಕ್ತವಾಗುವವು. ಆದ್ದರಿಂದ ಆತ್ಮ ಎಂಬ ಪದಕ್ಕೆ ಜೀವ ಎಂದು ಅರ್ಥವಲ್ಲ, ಪರಮಾತ್ಮ ಎಂದೇ ಅರ್ಥ. 'ಧರ್ಮಮಯೋಽಧರ್ಮಮಯಃ ಸರ್ವಮಯಃ' ಎಂದು ಹೇಳಿದ ಸರ್ವಮಯತ್ವ ಅಂದರೆ ಸರ್ವೋತ್ತಮತ್ವ ಜೀವನಿಗೆ ಕೂಡುವುದಿಲ್ಲ. 'ಸ ವಾ ಅಯಮಾತ್ಮಾ ಬ್ರಹ್ಮ' ಎಂದು ಆತ್ಮನಿಗೆ ಬ್ರಹ್ಮ ಎಂಬ ವಿಶೇಷಣವಿದೆ. ಇದೂ ಜೀವನಿಗೆ ಅನ್ವಯವಾಗುವುದಿಲ್ಲ. ಆದ್ದರಿಂದಲೂ ಆತ್ಮಾ ಎಂಬ ಪದಕ್ಕೆ ಇಲ್ಲಿ ಜೀವ ಎಂದು ಅರ್ಥವಲ್ಲ.

**ಉಪನಿಷತ್**—**ತದ್ ಯಥಾ ತೃಣಜಲೂಕಾ ತೃಣಸ್ಯಾಂತಂ ಗತ್ವಾ ಅನ್ಯ-ಮಾಕ್ರಮಮಾಕ್ರಮ್ಯ ಆತ್ಮಾನಮುಪಸಂಹರತಿ ಏವಮೇವಾಯ-ಮಾತ್ಮೇದಂ ಶರೀರಂ ನಿಹತ್ಯಾವಿದ್ಯಾಂ ಗಮಯಿತ್ವಾನ್ಯಮಾಕ್ರಮ-ಮಾಕ್ರಮ್ಯಾತ್ಮಾನಮುಪಸಂಹರತಿ ।**

ಹುಲ್ಲುಹುಳವು ಒಂದು ಹುಲ್ಲಿನ ಕೊನೆಗೆ ಹೋಗಿ ಇನ್ನೊಂದು ಹುಲ್ಲನ್ನು ತಲುಪಿ ತನ್ನನ್ನು ಹಿಂದಿನ ಹುಲ್ಲಿನಿಂದ ಬಿಡಿಸಿಕೊಳ್ಳುತ್ತದೆ. ಹೀಗೆಯೇ ಪರಮಾತ್ಮನು ಜೀವಾತ್ಮನ ಅವಿದ್ಯೆಯನ್ನು ಪರಿಹರಿಸಿ ಸ್ಥೂಲ ಶರೀರವನ್ನು ನಾಶಮಾಡಿ, ಜೀವನ

ಸೂಕ್ಷ್ಮಶರೀರವನ್ನು ಹಿಡಿದು ಮೊದಲಿನ ಸ್ಥೂಲ ಶರೀರದಿಂದ ತನ್ನನ್ನು ಬಿಡಿಸಿಕೊಳ್ಳುತ್ತಾನೆ.

**ಭಾಷ್ಯ—ಯಥಾ ತೃಣಜಲೂಕೈವಂ ಭಗವಾನ್ ಪುರುಷೋತ್ತಮಃ ।**
**ಜೀವಸ್ಯ ಸೂಕ್ಷ್ಮರೂಪಂ ತು ಪ್ರಾಪ್ಯ ಸ್ಥೂಲಂ ಪರಿತ್ಯಜೇತ್ ।**
**ಇದಂ ಶರೀರಂ ಭೂತೇಷು ವಿಲಾಪಯತಿ ಕೇಶವಃ ।**
**ಅವಿದ್ಯಾಂ ಚೈವ ಜೀವಸ್ಯ ಗಮಯೇತ್ ಜ್ಞಾನಸರ್ಜನಾತ್ ।**

**ಅನುವಾದ**—ಭಗವಾನ್ ಪುರುಷೋತ್ತಮನು ಹುಲ್ಲುಹುಳಗಳಂತೆ ಜೀವನ ಸೂಕ್ಷ್ಮದೇಹವನ್ನು ಹಿಡಿದು ಸ್ಥೂಲದೇಹವನ್ನು ಬಿಡುತ್ತಾನೆ. ಜೀವರ ಸ್ಥೂಲ ಶರೀರವನ್ನು ಪಂಚಭೂತಗಳಲ್ಲಿ ಲಯ ಹೊಂದಿಸುತ್ತಾನೆ. ಜ್ಞಾನವನ್ನು ಕೊಟ್ಟು ಅವನ ಅಜ್ಞಾನವನ್ನು ಪರಿಹರಿಸುತ್ತಾನೆ.

**ಯೋಗ್ಯರಿಗೆ ಮಾತ್ರ ಮುಕ್ತಿ :**

**ಉಪನಿಷತ್—ತದ್ ಯಥಾ ಪೇಶಸ್ಕಾರೀ ಪೇಶಸೋ ಮಾತ್ರಾಮುಪಾದಾಯ ಅನ್ಯನ್ನವತರಂ ಕಲ್ಯಾಣತರಂ ರೂಪಂ ತನುತ ಏವಮೇವಾಯ- ಮಾತ್ಮೇದಂ ಶರೀರಂ ನಿಹತ್ಯ ಅವಿದ್ಯಾಂ ಗಮಯಿತ್ವಾ ಅನ್ಯನ್ನವತರಂ ಕಲ್ಯಾಣತರಂ ರೂಪಂ ಕುರುತೇ ಪಿತ್ರ್ಯಂ ವಾ ಗಾಂಧರ್ವಂ ವಾ ದೈವಂ ವಾ ಪ್ರಾಜಾಪತ್ಯಂ ವಾ ಬ್ರಾಹ್ಮಂ ವಾನ್ಯೇಷಾಂ ವಾ ಭೂತಾನಾಮ್ ।**

ಅಕ್ಕಸಾಲಿಗನು ಸ್ವಲ್ಪ ಬಂಗಾರವನ್ನು ತೆಗೆದುಕೊಂಡು ಅದರ ಕೊಳೆಯನ್ನು ತೆಗೆದು ಅದಕ್ಕೆ ಹೊಸದಾದ ಆಭರಣಗಳ ರೂಪವನ್ನು ಕೊಡುವಂತೆ ಪರಮಾತ್ಮನು ಜೀವಾತ್ಮನ ಸ್ಥೂಲಶರೀರವನ್ನು ನಾಶಮಾಡಿ, ಅವಿದ್ಯೆಯನ್ನು ಪರಿಹರಿಸಿ, ಸಂಸಾರದಲ್ಲಿ ಅನುಭವಕ್ಕೆ ಬಾರದಿದ್ದ, ಅತ್ಯಂತ ಹೊಸದಾದ, ಮಂಗಳಕರವಾದ, ಅವರವರಿಗೆ ಯೋಗ್ಯವಾದ ಸ್ವರೂಪಶರೀರವನ್ನು– ಪಿತೃಗಳಿಗೆ ಪಿತೃರೂಪವನ್ನು, ಗಂಧರ್ವರಿಗೆ ಗಾಂಧರ್ವರೂಪವನ್ನು, ದೇವತೆಗಳಿಗೆ ದೇವರೂಪವನ್ನೂ, ಶೇಷನಿಗೆ ಶೇಷರೂಪವನ್ನೂ, ಚತುರ್ಮುಖನಿಗೆ ಚತುರ್ಮುಖರೂಪವನ್ನೂ ಮನುಷ್ಯೋತ್ತಮ ಮೊದಲಾದವರಿಗೆ ಅವರವರಿಗೆ ಯೋಗ್ಯವಾದ ರೂಪವನ್ನೂ ಉಂಟುಮಾಡುತ್ತಾನೆ.

**ವಿವರಣೆ**—ಅಕ್ಕಸಾಲಿಗನು ಬಂಗಾರದಿಂದ ಮಾತ್ರ ಬಂಗಾರದ ಬಳೆ ಇತ್ಯಾದಿಗಳನ್ನು ಮಾಡುತ್ತಾನೆ. ಬೇರೆ ಯಾವುದೋ ವಸ್ತುವಿನಿಂದ ಅಲ್ಲ. ಅಂತೆಯೇ ಪರಮಾತ್ಮನು ಕೇವಲ ಮುಕ್ತಿಯೋಗ್ಯ ಜೀವರಿಗೆ ಅವಿದ್ಯೆಯನ್ನು ಪರಿಹರಿಸಿ ಅವರ

ಯೋಗ್ಯತೆಗೆ ಅನುಗುಣವಾದ ಸ್ವರೂಪ ಶರೀರವನ್ನು ಪ್ರಕಟಪಡಿಸುತ್ತಾನೆ ಹೊರತು ಅಯೋಗ್ಯರಿಗೆ ಎಂದೂ ಇಲ್ಲ.

**ಭಾಷ್ಯ—ಸ್ವರ್ಣಕಾರೋ ಯಥಾ ಸ್ವರ್ಣಮಲಮಗ್ನೌ ನಿಹತ್ಯ ಚ**
**ಶುದ್ಧೇನ ತೇನ ಚಾತ್ಮೇಷ್ಟಂ ಕುರುತೇ ರೂಪಮಂಜಸಾ ।**
**ಏವಂ ಸ ಭಗವಾನ್ ವಿಷ್ಣುರ್ಜೀವಸ್ವರ್ಣಸ್ಯ ಯನ್ಮಲಮ್ ।**
**ಅವಿದ್ಯಾಕಾಮಕರ್ಮಾದ್ಯಮಾತ್ಮಾಗ್ನೌ ನಾಶ್ಯ ಸರ್ವಕೃತ್ ।**
**ಸ್ವೇಚ್ಛಯಾ ಕುರುತೇ ರೂಪಂ ಯದ್ ಯೋಗ್ಯಂ ತಸ್ಯ ಮುಕ್ತಿಗಂ ।**

**ಅನುವಾದ**—ಅಕ್ಕಸಾಲಿಗನು ಬಂಗಾರದ ಕೊಳೆಯನ್ನು ಅಗ್ನಿಯಲ್ಲಿ ನಾಶ ಮಾಡಿ ಶುದ್ಧ ಬಂಗಾರದಿಂದ ತನಗೆ ಇಷ್ಟವಾದ ಆಕಾರವನ್ನು ಮಾಡುತ್ತಾನೆ. ಅಂತೆಯೇ ಸರ್ವಕರ್ತೃವಾದ ಭಗವಾನ್ ವಿಷ್ಣುವು ಜೀವಾತ್ಮನೆಂಬ ಬಂಗಾರದ ಅವಿದ್ಯೆ, ಕಾಮ, ಕರ್ಮ ಮೊದಲಾದ ಕೊಳೆಯನ್ನು ಆತ್ಮಜ್ಞಾನವೆಂಬ ಅಗ್ನಿಯಲ್ಲಿ ನಾಶಮಾಡಿ ತನ್ನ ಇಚ್ಛೆಯಿಂದ, ಅಂದರೆ ಅನಾಯಾಸವಾಗಿ ಅವರವರಿಗೆ ಯೋಗ್ಯವಾದ ಮುಕ್ತಿಯಲ್ಲಿರುವ ಸ್ವರೂಪ ಶರೀರವನ್ನು ಪ್ರಕಟಪಡಿಸುತ್ತಾನೆ.

**ಭಾಷ್ಯ—ಪಿತೃಜೀವಸ್ಯ ಪಿತ್ರ್ಯಂ ಸ ಗಾಂಧರ್ವಂ ತಸ್ಯ ಚೈವ ಹಿ ।**
**ದೈವಂ ತು ದೇವಜೀವಸ್ಯ ಪ್ರಾಜಾಪತ್ಯಂ ಪ್ರಜಾಪತೇಃ ।**
**ಬ್ರಹ್ಮಣೋ ಬ್ರಾಹ್ಮಮೇವೇತಿ ನಿತ್ಯಾನಂದ ಸ್ವರೂಪಕಂ ।**
**ನ ಯೋಗ್ಯತಾಂ ವಿನಾ ಕ್ವಾಪಿ ಪೂರ್ವಪ್ರಜ್ಞಾ ಶ್ರುತೇಃ ಕ್ವಚಿತ್ ।**

**ಅನುವಾದ**—ವಿಷ್ಣುವು ಪಿತೃಜೀವನಿಗೆ ಪಿತೃಶರೀರವನ್ನೂ, ಗಂಧರ್ವ ಜೀವನಿಗೆ ಗಾಂಧರ್ವಶರೀರವನ್ನೂ, ದೇವಜೀವನಿಗೆ ದೈವಶರೀರವನ್ನೂ, ಶೇಷಜೀವನಿಗೆ ಶೇಷಶರೀರವನ್ನೂ, ಚತುರ್ಮುಖ ಬ್ರಹ್ಮನಿಗೆ ಚತುರ್ಮುಖ ಬ್ರಹ್ಮಶರೀರವನ್ನೂ ಪ್ರಕಟಪಡಿಸುತ್ತಾನೆ. ಇವರೆಲ್ಲರ ಶರೀರವೂ ನಿತ್ಯಾನಂದಮಯವಾಗಿರುತ್ತದೆ. ಹೀಗೆ ಯೋಗ್ಯತೆಗೆ ಅನುಗುಣವಾಗಿಯೇ ಶರೀರಗಳನ್ನು ಪ್ರಕಟಪಡಿಸುತ್ತಾನೆ. ಯೋಗ್ಯತೆಯನ್ನು ಪರಿಗಣಿಸದೆ ಯಾವ ಶರೀರವನ್ನೂ ಪ್ರಕಟಪಡಿಸುವುದಿಲ್ಲ. ಏಕೆಂದರೆ, 'ತಂ ವಿದ್ಯಾಕರ್ಮಣೀ ಸಮಾರಭೇತೇ ಪೂರ್ವಪ್ರಜ್ಞಾ ಚ' ಎಂಬ ಶ್ರುತಿಯಲ್ಲಿ, ಜೀವನ ಸ್ವರೂಪ ಯೋಗ್ಯತೆ ಬಿಟ್ಟು ಹೋಗುವುದಿಲ್ಲ ಎಂದೇ ಹೇಳಿದೆ.

**ಭಾಷ್ಯ—ಯದಾ ಮುಕ್ತೋ ಭವೇದ್ ಬ್ರಹ್ಮಾ ತದಾ ಬ್ರಹ್ಮಾ ಸ ಮುಚ್ಯತೇ।**
**ಏವಂ ಪ್ರಜಾಪತಿಶ್ಚೈವ ತಥೈವಾನ್ಯೋಽಪಿ ಸರ್ವಶಃ ।**

**ಭಾಷ್ಯ—ಅಲ್ಪಂ ತೇಜಸ್ತಥೈವಾಲ್ಪಂ ಜೀವರೂಪಂ ಹಿ ಸಂಸೃತೌ ।**
**ತಥೈವ ಸುಮಹತ್ತೇಜಃ ಕರೋತಿ ಭಗವಾನ್ ಮಹತ್ ।**
**ಅತೋ ನವತರಂ ಚೈತದ್ ಬ್ರಹ್ಮಾದೀನಾಂ ಕರೋತ್ಯಜಃ ।**

**ಅನುವಾದ**—ನವತರತ್ವವನ್ನು ಇನ್ನೊಂದು ಬಗೆಯಿಂದಲೂ ಮುಕ್ತರ ಶರೀರಕ್ಕೆ ಕೂಡಿಸಬಹುದು. ಸಂಸಾರಾವಸ್ಥೆಯಲ್ಲಿ ಅಲ್ಪ ತೇಜಸ್ಸು ಮತ್ತು ಅಲ್ಪ ಪರಿಮಾಣವುಳ್ಳ ಜೀವನ ಶರೀರವನ್ನು ಮುಕ್ತಿಯಲ್ಲಿ ಬಹಳ ತೇಜಸ್ಸುಳ್ಳದ್ದನ್ನಾಗಿಯೂ, ದೊಡ್ಡ ಪರಿಮಾಣವುಳ್ಳದ್ದನ್ನಾಗಿಯೂ ಶ್ರೀಹರಿಯು ಮಾಡುತ್ತಾನೆ. ಆದ್ದರಿಂದ ಶ್ರೀಹರಿಯು ಬ್ರಹ್ಮಾದಿಗಳ ಸ್ವರೂಪವನ್ನು ನವತರವನ್ನಾಗಿ ಮಾಡುತ್ತಾನೆ ಎಂದು ಉಪನಿಷತ್ತುಗಳು ಹೇಳುತ್ತವೆ.

**ಭಾಷ್ಯ—ಅನ್ಯೇಷಾಂ ವಾ ಭೂತಾನಾಂ ಮನುಷ್ಯಾದೀನಾಮ್ । ನಾಸುರಾ-ದೀನಾಂ ಭವಿಷ್ಯತೀತಿ ಚ ।**

**ಅನುವಾದ**—'ಅನ್ಯೇಷಾಂ ವಾ ಭೂತಾನಾಂ' ಎಂಬಲ್ಲಿ ಭೂತಾನಾಂ ಎಂದರೆ ಚಕ್ರವರ್ತಿ ಮೊದಲಾದವರ ಎಂದೇ ಅರ್ಥ. ಏಕೆಂದರೆ ಅಸುರ ಮೊದಲಾದವರ ರೂಪವು ಕಲ್ಯಾಣತರ ಆಗುವುದಿಲ್ಲ ಎಂದು ಪ್ರಮಾಣವು ಹೇಳುತ್ತದೆ.

**ವಿವರಣೆ**—ಹಿಂದಿನ ಬ್ರಾಹ್ಮಣದಲ್ಲಿ 'ಸ ಮನುಷ್ಯಾಣಾಂ ಪರಮ ಆನಂದಃ' ಎಂದು ಮುಕ್ತಚಕ್ರವರ್ತಿಗಳು ಹೇಳಲ್ಪಟ್ಟಿದ್ದಾರೆ. ಇಲ್ಲಿ ಅವರನ್ನು ಹೇಳಿಲ್ಲ. ಆದ್ದರಿಂದ ಅಲ್ಲಿ ಹೇಳಿದ ಮುಕ್ತರ ಬಗ್ಗೆಯೇ ಇಲ್ಲಿ ಹೇಳಿದೆ ಎಂಬ ವಿಚಾರವು ಸರಿಯಲ್ಲ. ಈ ಆಕ್ಷೇಪಕ್ಕೆ ಸಮಾಧಾನ–ಹಿಂದಿನ ಬ್ರಾಹ್ಮಣದಲ್ಲಿ 'ಮನುಷ್ಯಾಣಾಂ'ಎಂದು ಹೇಳಿದ ಮುಕ್ತ ಚಕ್ರವರ್ತಿಗಳೇ 'ಅನ್ಯೇಷಾಂ ಭೂತಾನಾಂ' ಎಂಬುದರ ಅರ್ಥ.

**ಜೀವತಾರತಮ್ಯ ಬಂಗಾರ ತಾರತಮ್ಯದಂತೆ :**

**ಭಾಷ್ಯ—ಮಯಂ ತು ಮಾನುಷಂ ಸ್ವರ್ಣಂ ಪೀತಂ ಗಾಂಧರ್ವಮೇವ ಚ ।**
**ಇಂದ್ರಗೋಪನಿಭಂ ನಾಮ್ನಾ ಜಾಂಬೂನದಮಿತಿ ಸ್ಮೃತಂ ।**
**ದೈವಂ ಚಾಮೀಕರಂ ನಾಮ ಪ್ರೋದ್ಯದಾದಿತ್ಯ ಸನ್ನಿಭಮ್ ।**
**ನೈಜೋ ವಿಶೇಷಃ ಸ್ವರ್ಣಾನಾಮೇತೇಷಾಂ ಸರ್ವದೈವ ಚ ।**
**ನಾಗ್ನ್ಯಾದಿನಾಪಿ ಸಮತಾಂ ಯಾಂತಿ ತಾನಿ ಕಥಂಚನ ।**
**ಏವಂ ಮಾನುಷಗಂಧರ್ವಪಿತೃದೇವಾಃ ಪ್ರಜಾಪತಿಃ ।**
**ಬ್ರಹ್ಮೇತಿ ಕ್ರಮಶೋ ಜೀವಾ ವಿಶಿಷ್ಟಾ ಉತ್ತರೋತ್ತರಂ ।**

**ಸ್ವಭಾವೇನೈವ ಮುಕ್ತಾನಾಂ ಸ್ವಭಾವೋ ವ್ಯಕ್ತಿಮಾವ್ರಜೇತ್ ।**
**ಇತ್ಯಾದಿ ಚ ।**

**ಅನುವಾದ**—ಮನುಷ್ಯರ ಬಂಗಾರ 'ಮಾಯ' ಎನಿಸಿದ್ದು, ಹಳದಿ ಬಣ್ಣವುಳ್ಳದ್ದು. ಗಂಧರ್ವರ ಬಂಗಾರ ಇಂದ್ರಗೋಪ ಎಂಬ ಕ್ರಿಮಿಯ ಬಣ್ಣಕ್ಕೆ ಸದೃಶ, 'ಜಾಂಬೂನದ' ಎಂದು ಪ್ರಸಿದ್ಧ. ದೇವತೆಗಳ ಬಂಗಾರ 'ಚಾಮೀಕರ' ಉದಯಿಸುತ್ತಿರುವ ಸೂರ್ಯನಿಗೆ ಸದೃಶ. ಬಂಗಾರಗಳಲ್ಲಿ ಈ ಭೇದ ಸ್ವಾಭಾವಿಕ ಮತ್ತು ಶಾಶ್ವತ. ಅಗ್ನಿ, ಔಷಧಿಗಳಿಂದಲೂ ಈ ಬಂಗಾರಗಳು ಸಾಮ್ಯವನ್ನು ಹೊಂದುವುದಿಲ್ಲ. ಹೀಗೆಯೇ ಮನುಷ್ಯ, ಗಂಧರ್ವ, ಪಿತೃ, ದೇವ, ಶೇಷ, ಬ್ರಹ್ಮ ಎಂದು ಜೀವರು ಕ್ರಮವಾಗಿ ಉತ್ತಮರು. ಈ ತಾರತಮ್ಯ ಸ್ವಾಭಾವಿಕ. ಮುಕ್ತಜೀವರಲ್ಲಿ ಈ ಸ್ವಭಾವವು ಅಭಿವ್ಯಕ್ತಿಯನ್ನು ಹೊಂದುತ್ತದೆ, ಎಂದು ಮೊದಲಾದುದು ಪ್ರಮಾಣಸಿದ್ಧ. ಆದ್ದರಿಂದ ಮುಕ್ತ ಜೀವಸ್ವರೂಪಗಳನ್ನು ಬಂಗಾರದ ದೃಷ್ಟಾಂತದಿಂದ ವರ್ಣಿಸಿರುವುದು ಯುಕ್ತವೆ.

**ಭಾಷ್ಯ—'ಸ ಯತ್ರಾಯಮಣಿಮಾನಂ ನ್ಯೇತಿ' 'ತಸ್ಯ ಹೈತಸ್ಯ ಹೃದಯಸ್ಯಾಗ್ರಂ ಪ್ರದ್ಯೋತತೇ' 'ತೇನ ಧೀರಾ ಅಪಿಯಂತಿ ಬ್ರಹ್ಮವಿದಃ ಸ್ವರ್ಗಂ ಲೋಕಮಿತ ಊರ್ಧ್ವಾ ವಿಮುಕ್ತಾಃ' 'ತೇನೈತಿ ಬ್ರಹ್ಮವಿತ್ ಪುಣ್ಯಕೃತ್ ತೈಜಸಶ್ಚ' ಇತ್ಯೇವಮಾದೇಶ್ಚ ಮುಕ್ತವಿಷಯಮೇವೈತತ್ ।**

**ಅನುವಾದ**—ಇದು ಮುಕ್ತಪ್ರಕರಣ. ಇಲ್ಲಿ ಹೇಳಿದ ದೇವಾದಿಗಳು ಮುಕ್ತರು. ಏಕೆಂದರೆ ಪ್ರಕರಣದ ಆದಿಯಲ್ಲಿ 'ಸ ಯತ್ರಾಯಮಣಿಮಾನಂ ನ್ಯೇತಿ' ಎಂದು ಭಗವತ್ಪ್ರಾಪ್ತಿಯನ್ನೂ, ಮುಂದೆ 'ತಸ್ಯ ಹೈತಸ್ಯ ಹೃದಯಸ್ಯಾಗ್ರಂ' ಎಂದು ಹೃದಯದ ಕೊನೆಭಾಗ ಬೆಳಗುವುದನ್ನೂ ಹೇಳಿ ಅದರ ಸಮರ್ಥನೆಗಾಗಿ 'ತೇನ ಧೀರಾ ಅಪಿಯಂತಿ ಬ್ರಹ್ಮವಿದಃ ಸ್ವರ್ಗಂ ಲೋಕಮಿತ ಊರ್ಧ್ವಾ ವಿಮುಕ್ತಾಃ' 'ತೇನೈತಿ ಬ್ರಹ್ಮವಿತ್ ಪುಣ್ಯಕೃತ್ ತೈಜಸಶ್ಚ' ಮೊದಲಾದ ಋಕ್ಕುಗಳನ್ನೂ ಉದಾಹರಿಸಲಾಗಿದೆ.

**ಭಾಷ್ಯ—ಮುಕ್ತವಿಷಯತ್ವೇನ ಚೈತತ್ ಪ್ರಕರಣಂ ಸೂಚಯಾಮಾಸ ಭಗವಾನ್– 'ತದೋಕೋಽಗ್ರಜ್ವಲನಂ ತತ್ಪ್ರಕಾಶಿತದ್ವಾರೋ ವಿದ್ಯಾಸಾಮರ್ಥ್ಯಾತ್' ಇತ್ಯಾದಿನಾ ।**

**ಅನುವಾದ**—ಈ ಪ್ರಕರಣವು ಮುಕ್ತರನ್ನು ವರ್ಣಿಸುವ ಪ್ರಕರಣ ಎಂದು ಬ್ರಹ್ಮಸೂತ್ರಕಾರರೇ 'ಹೃದಯದ ಕೊನೆಭಾಗ ಬೆಳಗುತ್ತದೆ. ಬೆಳಗುವ ಆ ದ್ವಾರ

ದಿಂದ ಜ್ಞಾನಿ, ಶರೀರದಿಂದ ಉತ್ಕ್ರಮಿಸುತ್ತಾನೆ. ಇದು ಪರಮಾತ್ಮ ಸಾಕ್ಷಾತ್ಕಾರದ ಸಾಮರ್ಥ್ಯದಿಂದ ಸಾಧ್ಯವಾಗುತ್ತದೆ' ಎಂದು ಮೊದಲಾದ ಸೂತ್ರಗಳಿಂದ ಸೂಚಿಸಿದ್ದಾರೆ.

**ನಿರ್ಗುಣಮುಕ್ತಿ ಎಂಬುದು ಇಲ್ಲ :**

**ಭಾಷ್ಯ—ನ ಚಾನ್ಯ ಮುಕ್ತಿರಸ್ತೀತ್ಯತ್ರ ಕಿಂಚಿನ್ಮಾನಮ್ ।**
**'ಸೋಽಶ್ನುತೇ ಸರ್ವಾನ್ ಕಾಮಾನ್ ಸಹ ಬ್ರಹ್ಮಣಾ ವಿಪಶ್ಚಿತಾ' 'ಏತಮಾನಂದಮಯಮಾತ್ಮಾನಮುಪಸಂಕ್ರಮ್ಯ । ಇಮಾನ್ ಲೋಕಾನ್ ಕಾಮಾನ್ನೀ ಕಾಮರೂಪ್ಯನುಸಂಚರನ್' 'ಋಚಾಂ ತ್ವಃ ಪೋಷಮಾಸ್ತೇ ಪುಪುಷ್ವಾನ್ ಗಾಯತ್ರಂ ತ್ವೋ ಗಾಯತಿ ಶಕ್ವರೀಷು ।'**

**ಅನುವಾದ**—'ತದೋಕೋಽಗ್ರಜ್ವಲನಂ' ಎಂದು ಮುಂತಾದ ಸೂತ್ರಗಳು ಮುಕ್ತ ವಿಷಯವಾಗಿದ್ದರೂ ಅದು ಸಗುಣಮುಕ್ತಿ, ನಿರ್ಗುಣಮುಕ್ತಿಯಲ್ಲ. ಏಕೆಂದರೆ ಉತ್ಕ್ರಮಣ, ಅರ್ಚಿರಾದಿ ಮಾರ್ಗ ಭೋಗಗಳನ್ನು ಅವು ಹೇಳುತ್ತಿವೆ. ಇವು ನಿರ್ಗುಣಮುಕ್ತಿಯಲ್ಲಿ ಇಲ್ಲ. ಆದ್ದರಿಂದ ಈ ಪ್ರಕರಣ ನಿರ್ಗುಣ ಮುಕ್ತಿಯಲ್ಲ ಎಂಬ ಆಕ್ಷೇಪಕ್ಕೆ ಸಮಾಧಾನ– ಸಗುಣಮುಕ್ತಿಗಿಂತ ಬೇರೆಯಾದ ನಿರ್ಗುಣಮುಕ್ತಿ ಎಂಬುದೊಂದು ಇಲ್ಲ. ಅಂಥ ಮುಕ್ತಿ ಇದೆ ಎನ್ನಲು ಏನೂ ಪ್ರಮಾಣವಿಲ್ಲ. ಮಾತ್ರವಲ್ಲ ಪ್ರಮಾಣವಿರೋಧವೆ ಇದೆ. 'ಮುಕ್ತನು ಸರ್ವಜ್ಞನಾದ ಪರಮಾತ್ಮನ ಜೊತೆಗೆ ಎಲ್ಲ ಭೋಗಗಳನ್ನೂ ಅನುಭವಿಸುವನು.' 'ಆನಂದಮಯ ಪರಮಾತ್ಮನನ್ನು ಹೊಂದಿ ತನಗೆ ಇಷ್ಟವಾದ ಲೋಕಗಳಲ್ಲಿ ಇಷ್ಟವಾದ ರೂಪತಳೆದು ವಿಹಾರ ಮಾಡುವನು' ಎಂದು ತೈತ್ತಿರೀಯ ಉಪನಿಷತ್ತಿನಲ್ಲಿ ಹೇಳಿದೆ. 'ಒಬ್ಬ ಮುಕ್ತಬ್ರಹ್ಮನು ಋಗ್ವೇದ ಮಂತ್ರಗಳನ್ನು ಹೇಳುತ್ತಾನೆ. ಇನ್ನೊಬ್ಬ ಶಕ್ವರೀ ಋಕ್ಕುಗಳಲ್ಲಿ ಗಾಯತ್ರಸಾಮವನ್ನು ಹಾಡುತ್ತಾನೆ' ಎಂದೂ ಋಗ್ವೇದದಲ್ಲಿ ಹೇಳಿದೆ.

**ಭಾಷ್ಯ—'ಪರಂಜ್ಯೋತಿರುಪಸಂಪದ್ಯ ಸ್ವೇನರೂಪೇಣಾಭಿ ನಿಷ್ಪದ್ಯತೇ । ಏಷ ಆತ್ಮೇತಿ ಹೋವಾಚ ।' 'ಸ ತತ್ರ ಪರ್ಯೇತಿ ಜಕ್ಷನ್ ಕ್ರೀಡನ್ ರಮಮಾಣಃ ।' 'ಸ ಯ ಏವಂವಿದ್ ಏವಂ ಪಶ್ಯನ್ ಏವಂ ಮನ್ವಾನಃ ತಸ್ಯ ಸರ್ವೇಷು ಲೋಕೇಷು ಕಾಮಚಾರೋ ಭವತಿ ।' 'ಸ ಏಕಧಾ ಭವತಿ ತ್ರಿಧಾ ಭವತಿ ಪಂಚಧಾ ಸಪ್ತಧಾ ಪುನಶ್ಚೈಕಾದಶ ಸ್ಮೃತಃ ।' 'ನ ಹಾಸ್ಯ ಕರ್ಮ ಕ್ಷೀಯತೇ ಅಸ್ಮಾದ್ಧ್ಯೇವಾತ್ಮನೋ ಯದ್ಯತ್ ಕಾಮಯತೇ ತತ್ತತ್ ಸಜತೇ ।'**

**ಅನುವಾದ**—'ಜ್ಞಾನಿಯು ಉತ್ಕ್ರಮಿಸಿ ಪರಂಜ್ಯೋತಿಯನ್ನು ಹೊಂದಿ ತನ್ನ ಸ್ವರೂಪಾನಂದದ ಪ್ರಾದುರ್ಭಾವ ಹೊಂದುತ್ತಾನೆ. ಈ ಪರಂಜ್ಯೋತಿ ಜೀವನಲ್ಲ, ಪರಮಾತ್ಮ ಎಂದು ಲಕ್ಷ್ಮೀದೇವಿ ಹೇಳಿದ್ದಾಳೆ', 'ಜ್ಞಾನಿಯು ಮುಕ್ತಿಯಲ್ಲಿ ಇಷ್ಟವಾದ ಭೋಗಗಳನ್ನು ಉಣ್ಣುತ್ತ ವಿಹರಿಸುತ್ತ ನಲಿಯುತ್ತ', 'ಪರಮಾತ್ಮನನ್ನು ಹೀಗೆ ತಿಳಿದು ಧ್ಯಾನಮಾಡಿ ಸಾಕ್ಷಾತ್ಕರಿಸಿಕೊಳ್ಳುವವನಿಗೆ ಎಲ್ಲ ಲೋಕಗಳಲ್ಲಿಯೂ ಸ್ವೇಚ್ಛಾನುಸಾರ ಸಂಚರಿಸುವ ಅವಕಾಶ ಲಭಿಸುತ್ತದೆ', 'ಮುಕ್ತನು ತನ್ನ ಇಚ್ಛಾನುಸಾರ ಒಂದು ಮೂರು ಐದು ಏಳು ಹನ್ನೊಂದು ಎಂದು ಮುಂತಾಗಿ ಅನೇಕ ರೂಪಗಳನ್ನು ಧರಿಸಬಲ್ಲ', 'ಜ್ಞಾನೋತ್ತರ ಕರ್ಮವು ನಶಿಸುವುದಿಲ್ಲ. ಆದರಿಂದ ಜ್ಞಾನಿಯು ಮೋಕ್ಷದಲ್ಲಿ ಪರಮಾತ್ಮನ ಅನುಗ್ರಹದಿಂದಲೆ ಬಯಸಿದುದನ್ನೆಲ್ಲಾ ನಿರ್ಮಿಸಿಕೊಳ್ಳುತ್ತಾನೆ' ಎಂದು ಛಾಂದೋಗ್ಯೋಪನಿಷತ್ತು ಹೇಳಿದೆ.

**ಭಾಷ್ಯ**—**'ಯಥೋದಕಂ ಶುದ್ಧೇ ಶುದ್ಧಮಾಸಿಕ್ತಂ ತಾದೃಗೇವ ಭವತಿ |**
**ಏವಂಮುನೇರ್ವಿಜಾನತ ಆತ್ಮಾ ಭವತಿ ಗೌತಮ |'**
**'ತದಾ ವಿದ್ವಾನ್ ಪುಣ್ಯ ಪಾಪೇ ವಿಧೂಯ**
**ನಿರಂಜನಃ ಪರಮಂ ಸಾಮ್ಯಮುಪೈತಿ |'**
**'ಪರಂ ಭೂಯಃ ಪ್ರವಕ್ಷ್ಯಾಮಿ ಜ್ಞಾನಾನಾಂ ಜ್ಞಾನಮುತ್ತಮಂ |**
**ಯಜ್ಜ್ಞಾತ್ವಾ ಮುನಯಃ ಸರ್ವೇ ಪರಾಂ ಸಿದ್ಧಿಮಿತೋ ಗತಾಃ |**
**ಇದಂ ಜ್ಞಾನ ಮುಪಾಶ್ರಿತ್ಯ ಮಮ ಸಾಧರ್ಮ್ಯಮಾಗತಾಃ |**
**ಸರ್ಗೇಽಪಿ ನೋಪಜಾಯಂತೇ ಪ್ರಲಯೇ ನ ವ್ಯಥಂತಿ ಚ |'**

**ಅನುವಾದ**—'ನಚಿಕೇತನೇ, ಶುದ್ಧ ಜಲಕ್ಕೆ ಶುದ್ಧ ಜಲ ಸೇರಿಸಿದರೆ ಸೇರಿಸಿದ ನೀರು ಮೊದಲಿದ್ದ ನೀರಿನಂತೆಯೇ ಆಗುತ್ತದೆ. ಮೊದಲಿನ ನೀರೇ ಆಗುವುದಿಲ್ಲ, ಹಾಗೆಯೇ ಜ್ಞಾನಿಗಳಾದ ಋಷಿಗಳಿಗೆ ಸ್ವಾಮಿಯಾದ ಮುಕ್ತ ಚತುರ್ಮುಖಬ್ರಹ್ಮನೂ ಕೂಡ ಪರಮಾತ್ಮನನ್ನು ಹೊಂದಿ ಪರಮಾತ್ಮನಂತೆ ಆಗುತ್ತಾನೆ ಹೊರತು ಪರಮಾತ್ಮನಾಗುವುದಿಲ್ಲ. ಇನ್ನು ಉಳಿದ ಜೀವರ ಪಾಡೇನು!' ಎಂದು ಕಾಠಕೋಪನಿಷತ್ತು ಹೇಳಿದೆ. 'ಪರಮಾತ್ಮಾಪರೋಕ್ಷ ಲಭಿಸಿದಾಗ ಜ್ಞಾನಿಯು ಅನಿಷ್ಟ, ಅಪ್ರಾರಬ್ಧ ಪುಣ್ಯ ಪಾಪಗಳನ್ನು ನಾಶಪಡಿಸಿಕೊಂಡು ಮುಂದೆ ಎಂದೂ ಪಾಪಲೇಪರಹಿತನಾಗಿ ಪರಮಾತ್ಮನ ಪರಮಸಾಮ್ಯವನ್ನು ಅಂದರೆ, ಅಭಿವ್ಯಕ್ತಸ್ವರೂಪಾನಂದಾನುಭವವನ್ನು ಹೊಂದುತ್ತಾನೆ' ಎಂದು ಆಥರ್ವಣೋಪನಿಷತ್ತು ಹೇಳಿದೆ. 'ಅತ್ಯುತ್ತಮ ಪ್ರಮೇಯವಾದ ಇನ್ನೊಂದು ವಿಷಯವನ್ನು ಹೇಳುತ್ತೇನೆ. ಅದನ್ನು ತಿಳಿದು ಜ್ಞಾನಿಗಳೆಲ್ಲ ಈ ಸಂಸಾರದಿಂದ ಮೋಕ್ಷ ಪಡೆದಿದ್ದಾರೆ. ಈ ಜ್ಞಾನವನ್ನು ಸಂಪಾದಿಸಿ ನನ್ನ ಸಾರೂಪ್ಯವನ್ನು ಪಡೆದವರು ಸೃಷ್ಟಿಕಾಲದಲ್ಲಿ ಹುಟ್ಟುವುದಿಲ್ಲ, ಲಯಕಾಲದಲ್ಲಿ ವ್ಯಥೆಪಡುವುದೂ ಇಲ್ಲ' ಎಂದು ಭಗವದ್ಗೀತೆಯಲ್ಲಿ ಹೇಳಿದೆ.

ಭಾಷ್ಯ—ನ ವರ್ತತೇ ಯತ್ರ ರಜಸ್ತಮಸ್ತಯೋಃ
ಸತ್ತ್ವಂ ಚ ಮಿಶ್ರಂ ನ ಚ ಕಾಲವಿಕ್ರಮಃ ।
ನ ಯತ್ರ ಮಾಯಾ ಕಿಮುತಾಪರೇ ಹರೇ-
ರನುವ್ರತಾ ಯತ್ರ ಸುರಾಸುರಾರ್ಚಿತಾಃ ।
ಶ್ಯಾಮಾವದಾತಾಃ ಶತಪತ್ರಲೋಚನಾಃ
ಪಿಶಂಗವಸ್ತ್ರಾಃ ಸುರುಚಃ ಸುಪೇಶಸಃ ।
ಇತ್ಯಾದಿ ಶ್ರುತಿಸ್ಮೃತೀತಿಹಾಸಪುರಾಣೇಷು ತೇಷಾಂ ನಿರ್ಗುಣಮುಕ್ತಿವಿಷಯತ್ವೇನ ಪ್ರಸಿದ್ಧೇಷ್ವೇವ ಸ್ಥಲೇಷು ಮುಕ್ತ್ಯನಂತರಂ ಭೋಗೋಕ್ತೇಶ್ಚ ।

**ಅನುವಾದ**—'ವೈಕುಂಠದಲ್ಲಿ ರಜಸ್ಸು, ತಮಸ್ಸು, ರಜಸ್ತಮೋ ಮಿಶ್ರಿತವಾದ ಸತ್ತ್ವ, ಕಾಲಪ್ರಯುಕ್ತ ವಿಕಾರಗಳಾವುವೂ ಇಲ್ಲ. ಪ್ರಕೃತಿಯೇ ಇಲ್ಲವೆಂದ ಮೇಲೆ ಪ್ರಕೃತಿ ನಿರ್ಮಿತವಾದುದು ಏನೂ ಇರಲು ಶಕ್ಯವಿಲ್ಲ. ಅಲ್ಲಿರುವ ಮುಕ್ತರೆಲ್ಲ ಹರಿಯ ಸೇವಕರು, ದೇವಾಸುರವಂದ್ಯರು, ಕಪ್ಪು ಬಿಳುಪು ಬಣ್ಣದವರು, ಕಮಲದಂತೆ ಕಣ್ಣುಳ್ಳವರು, ಪೀತಾಂಬರ ಉಟ್ಟವರು, ಒಳ್ಳೆಯ ಕಾಂತಿಯುಳ್ಳವರು. ಸುಂದರ ಶರೀರಿಗಳು' ಎಂದು ಭಾಗವತದಲ್ಲಿ ಹೇಳಿದೆ. ಇವೇ ಮೊದಲಾದ ನಿರ್ಗುಣಮುಕ್ತಿಯನ್ನು ಪ್ರತಿಪಾದಿಸುವ ವಾಕ್ಯಗಳೆಂದು ಅದ್ವೈತಿಗಳಿಗೆ ಸಮ್ಮತವಾಗಿರುವ ಶ್ರುತಿ ಸ್ಮೃತಿ ಇತಿಹಾಸ ಪುರಾಣವಾಕ್ಯಗಳಲ್ಲಿ ಮುಕ್ತಿ ಆದ ನಂತರ ಭೋಗವನ್ನು ವರ್ಣಿಸಿರುವುದರಿಂದ ಮುಕ್ತಿ ಎಂದರೆ ಸಗುಣ ಮುಕ್ತಿಯೆ ಹೊರತು ನಿರ್ಗುಣಮುಕ್ತಿ ಎಂದು ಇನ್ನೊಂದು ಮುಕ್ತಿ ಇಲ್ಲ.

**ಮುಕ್ತರಿಗೆ ಶರೀರ ಉಂಟು :**

ಭಾಷ್ಯ—ಅಶರೀರಾಕ್ರಿಯಾ ಗೌಣದೇಹಾದೇಸ್ತೇ ಹ್ಯಭಾವತಃ ।
ಚಿದಾನಂದ ಶರೀರಾದೇಃ ಸದೇಹಾದ್ಯಾ ವಿಮೋಕ್ಷಿಣಃ ।
ಅನಿಂದ್ರಿಯಾ ಅನಾಹಾರಾ ಅನಿಷ್ಯಂದಾಃ ಸುಗಂಧಿನಃ। ಇತ್ಯಾದೇಶ್ಚ।

**ಅನುವಾದ**—ಮುಕ್ತರು ಸತ್ತ್ವ ರಜಸ್ ತಮೋಮಯವಾದ ದೇಹ ಮತ್ತು ಕ್ರಿಯಾರಹಿತರಾದುದರಿಂದ ಶರೀರರಹಿತರು ಕ್ರಿಯಾರಹಿತರು ಎಂದು ಹೇಳಲ್ಪಡುತ್ತಾರೆ. ಜ್ಞಾನಾನಂದಮಯವಾದ ಶರೀರವಿರುವುದರಿಂದ ಶರೀರವುಳ್ಳವರು ಕ್ರಿಯೆಯುಳ್ಳವರು ಎಂದೂ ಹೇಳಲ್ಪಡುತ್ತಾರೆ. ಆದ್ದರಿಂದ 'ಶ್ಯಾಮಾವದಾತಾಃ ಶತಪತ್ರ

ಲೋಚನಾಃ' ಎಂದು ಮುಕ್ತನಿಗೆ ಹೇಳಿದ ಶರೀರ, ಮತ್ತು 'ಜಕ್ಷನ್ ಕ್ರೀಡನ್ ರಮಮಾಣಃ'ಎಂದು ಹೇಳಿದ ಕ್ರಿಯೆ, 'ಅಶರೀರಂ ವಾವ ಸಂತಂ' ಎಂದು ಶರೀರಾಭಾವವನ್ನು ಹೇಳುವ ಛಾಂದೋಗ್ಯವಾಕ್ಯಕ್ಕೆ ವಿರುದ್ಧ ಎಂದು ತಿಳಿಯಬಾರದು. ಮುಕ್ತರಿಗೆ ಸರ್ವಥಾ ಶರೀರವಿಲ್ಲವೆಂದೊಪ್ಪಿದರೆ 'ಇಂದ್ರಿಯರಹಿತರು, ಆಹಾರರಹಿತರು ಮತ್ತು ಮಲಾದಿಗಳ ಹರಿಯುವಿಕೆ ಇಲ್ಲದವರು ಆಗಿದ್ದರೂ ಮುಕ್ತರು ಸುಗಂಧ ವಸ್ತುಗಳನ್ನು ಭೋಗಿಸುವರು' ಎಂದು ಮೊದಲಾದ ಪ್ರಮಾಣಗಳಿರುವುದರಿಂದ ಅವುಗಳ ವಿರೋಧ ಉಂಟಾಗುವುದು,

**ಉಪನಿಷತ್—ಸ ವಾ ಅಯಮಾತ್ಮಾ ಬ್ರಹ್ಮ ವಿಜ್ಞಾನಮಯೋ ಮನೋಮಯಃ ಪ್ರಾಣಮಯಶ್ಚಕ್ಷುರ್ಮಯಃ ಶ್ರೋತ್ರಮಯಃ ಪೃಥಿವೀಮಯ ಆಪೋಮಯೋ ವಾಯುಮಯ ಆಕಾಶಮಯಸ್ತೇಜೋಮಯೋಽತೇಜೋಮಯಃ ಕಾಮಮಯೋಽಕಾಮಮಯಃ ಕ್ರೋಧಮಯೋಽಕ್ರೋಧಮಯಃ ಧರ್ಮಮಯೋಽಧರ್ಮಮಯಃ ಸರ್ವಮಯಃ। ತದ್ ಯದ್ ಏತದ್ ಇದಂಮಯೋಽದೋಮಯ ಇತಿ । ಯಥಾಕಾರೀ ಯಥಾಚಾರೀ ತಥಾ ಭವತಿ । ಸಾಧುಕಾರೀ ಸಾಧುರ್ಭವತಿ । ಪಾಪಕಾರೀ ಪಾಪೋ ಭವತಿ । ಪುಣ್ಯಃ ಪುಣ್ಯೇನ ಕರ್ಮಣಾ ಭವತಿ ಪಾಪಃ ಪಾಪೇನ । ಅಥೋ ಖಲ್ವಾಹುಃ ಕಾಮಮಯ ಏವಾಯಂ ಪುರುಷ ಇತಿ। ಸ ಯಥಾಕಾಮೋ ಭವತಿ ತತ್ಕ್ರತುರ್ಭವತಿ । ಯತ್ಕ್ರತುರ್ಭವತಿ ತತ್ಕರ್ಮ ಕುರುತೇ । ಯತ್ಕರ್ಮ ಕುರುತೇ ತದಭಿಸಂಪದ್ಯತೇ ।**

ಹೀಗೆ ಮುಕ್ತಿಯೋಗ್ಯರಿಗೆ ಮುಕ್ತಿಯನ್ನು ಕೊಡುವ ಹರಿಯು ದೂರದಲ್ಲಿದ್ದಾನೆ, ಹತ್ತಿರದಲ್ಲಿದ್ದಾನೆ, ವ್ಯಾಪ್ತನಾಗಿದ್ದಾನೆ. ಅವನು ಗುಣಪರಿಪೂರ್ಣ. ಜ್ಞಾನಸ್ವರೂಪ, ಬುದ್ಧಿತತ್ತ್ವ ಸ್ವರೂಪನಲ್ಲ. ಸರ್ವಮಂತ್ರಸ್ವರೂಪ, ಮನಸ್ತತ್ತ್ವಸ್ವರೂಪನಲ್ಲ. ಬಲಪೂರ್ಣಸ್ವರೂಪ, ಅಹಂಕಾರಜನ್ಯ ಪ್ರಾಣತತ್ತ್ವ ಸ್ವರೂಪನಲ್ಲ. ಸರ್ವದ್ರಷ್ಟೃಸ್ವರೂಪ, ಚಕ್ಷುಸ್ತತ್ತ್ವ ಸ್ವರೂಪನಲ್ಲ. ಸರ್ವಶ್ರೋತೃಸ್ವರೂಪ, ಶ್ರೋತ್ರತತ್ತ್ವಸ್ವರೂಪನಲ್ಲ. ಸರ್ವಾಧಾರ ಮತ್ತು ಸುಗಂಧಸ್ವರೂಪ, ಪಾರ್ಥಿವ ಗಂಧಮಯನಲ್ಲ. ಸರ್ವತೃಪ್ತಿಕರ, ಜಲಾತ್ಮಕನಲ್ಲ. ಸರ್ವಕರ್ತೃಸ್ವರೂಪ, ವಾಯ್ವಾತ್ಮಕನಲ್ಲ. ಅವಕಾಶಪ್ರದ, ಆಕಾಶಾತ್ಮಕನಲ್ಲ. ತೇಜಃ ಸ್ವರೂಪ, ಅಗ್ನಿರೂಪನಲ್ಲ. ಸೃಷ್ಟಿ ಮೊದಲಾದವುಗಳ ಇಚ್ಛಾಸ್ವರೂಪ, ಪ್ರಾಕೃತ ಇಚ್ಛಾರಹಿತ. ಸರ್ವದುಷ್ಟ ವಿರೋಧಿ, ಜೀವಾತ್ಮರ ಕ್ರೋಧದಂತಹ ಕ್ರೋಧವಿಲ್ಲದವ. ಆನಂದಾದಿ ಧರ್ಮಸ್ವರೂಪ, ಪ್ರಾಕೃತ ಧರ್ಮರಹಿತ. ಸರ್ವೋತ್ತಮ, ಸರ್ವಾತ್ಮಕನಲ್ಲ. ಭೂತ ವರ್ತಮಾನ ಕಾಲಗಳಲ್ಲಿ ಏಕಪ್ರಕಾರ. ಬ್ರಹ್ಮಾಂಡದ ಒಳಗೆ ಹೊರಗೆ ಏಕಪ್ರಕಾರ. ವರ್ತಮಾನ

ಭವಿಷ್ಯತ್ ಕಾಲಗಳಲ್ಲಿ ಏಕಪ್ರಕಾರ. ವರ್ತಮಾನ ಜಗತ್ತಿಗೆ ಪ್ರಧಾನ. ವರ್ತಮಾನ ಸ್ವರೂಪ. ಭೂತ ಭವಿಷ್ಯತ್ ಕಾಲದ ಜಗತ್ತಿಗೆ ಪ್ರಧಾನ. ಭೂತ ಭವಿಷ್ಯತ್ ಸ್ವರೂಪ. ಪರಮಾತ್ಮನು ಹೀಗೆ ಮಹಾಮಹಿಮನಾದ್ದರಿಂದ ಆತನು ಜೀವಾತ್ಮನಿಂದ ಹೇಗೆ ಕರ್ಮವನ್ನು ಮಾಡಿಸುತ್ತಾನೋ, ಹೇಗೆ ಆಚಾರವನ್ನು ಮಾಡಿಸುತ್ತಾನೋ ಹಾಗೆ ಜೀವಾತ್ಮನು ಕರ್ಮವನ್ನು ಮಾಡುತ್ತಾನೆ ಮತ್ತು ಆಚಾರವನ್ನು ಮಾಡುತ್ತಾನೆ. ಪುಣ್ಯವಂತನನ್ನಾಗಿ ಮಾಡಿದರೆ ಪುಣ್ಯವಂತನಾಗುತ್ತಾನೆ. ಪಾಪಿಯನ್ನಾಗಿ ಮಾಡಿದರೆ ಪಾಪಿಯಾಗುತ್ತಾನೆ. ಆದರೆ ಪುಣ್ಯ ಪಾಪ ಕರ್ಮಗಳು ವ್ಯರ್ಥವೇನಲ್ಲ. ಪರಮಾತ್ಮ ಪ್ರೇರಿತ ಪುಣ್ಯ ಕರ್ಮದಿಂದಲೇ ಪುಣ್ಯವಂತನಾಗುತ್ತಾನೆ. ಪರಮಾತ್ಮ ಪ್ರೇರಿತ ಪಾಪ ಕರ್ಮದಿಂದಲೇ ಪಾಪಿಯಾಗುತ್ತಾನೆ. ಆದ್ದರಿಂದಲೇ ಜ್ಞಾನಿಗಳು ಜೀವಾತ್ಮನನ್ನು ಕಾಮಮಯ ಎಂದರೆ, ಈಶ್ವರೇಚ್ಛಾಧೀನ ಎಂದು ಹೇಳುತ್ತಾರೆ. ಪರಮಾತ್ಮನು ಬಯಸಿದಂತೆಯೇ ಜೀವಾತ್ಮನಿಗೆ ಇಚ್ಛೆ ಉಂಟಾಗುತ್ತದೆ. ಅಂತಹ ಇಚ್ಛೆಗೆ ಅನುಗುಣವಾಗಿ ಕರ್ಮವನ್ನು ಮಾಡುತ್ತಾನೆ. ಯಾವ ಕರ್ಮವನ್ನು ಮಾಡುತ್ತಾನೋ ಅದಕ್ಕೆ ತಕ್ಕ ಫಲವನ್ನು ಹೊಂದುತ್ತಾನೆ.

**ಭಾಷ್ಯ—ಮಯಟ್ ಪ್ರಾಚುರ್ಯೇ ಸ್ವರೂಪೇ ಚ ।**

**ಅನುವಾದ**—ಮಂತ್ರದಲ್ಲಿ ವಿಜ್ಞಾನಮಯ ಮೊದಲಾದ ಪದಗಳಲ್ಲಿರುವ ಮಯಟ್ ಪ್ರತ್ಯಯಕ್ಕೆ ಪೂರ್ಣ ಮತ್ತು ಸ್ವರೂಪ ಎಂದು ಎರಡು ಅರ್ಥ.

**ಭಾಷ್ಯ—ಆತ್ಮಾಽಯಮಾತತತ್ವಾದ್ಧಿ ಬ್ರಹ್ಮ ಪೂರ್ಣಗುಣತ್ವತಃ ।**
**ದೂರಸ್ಥತ್ವಾತ್ ಸ ಇತ್ಯುಕ್ತಃ ಸಮೀಪಸ್ಥೋ ಹ್ಯಯಂ ಸ್ಮೃತಃ ।**
**ಪೂರ್ಣಜ್ಞಾನ ಸ್ವರೂಪತ್ವಾದ್ ವಿಜ್ಞಾನಮಯ ಈರ್ಯತೇ ।**
**ಸರ್ವಮಂತ್ರಸ್ವರೂಪತ್ವಾತ್ ಸ ಏವೋಕ್ತೋ ಮನೋಮಯಃ ।**
**ಬಲಪೂರ್ಣಸ್ವರೂಪತ್ವಾತ್ ಸ ಪ್ರಾಣಮಯ ಈರಿತಃ ।**
**ಸರ್ವದ್ರಷ್ಟೃಸ್ವರೂಪತ್ವಾತ್ ಚಕ್ಷುರ್ಮಯ ಇತೀರ್ಯತೇ ।**
**ಸರ್ವಶ್ರೋತೃಸ್ವರೂಪತ್ವಾತ್ ಸ ಶ್ರೋತ್ರಮಯ ಈರಿತಃ ।**
**ಸರ್ವಾಧಾರಾತ್ ಸುಗಂಧತ್ವಾತ್ ಪೃಥಿವೀಮಯ ಉಚ್ಯತೇ ।**
**ಸರ್ವತೃಪ್ತಿಕರತ್ವಾಚ್ಚ ವಿಷ್ಣುರಾಪೋಮಯಃ ಸ್ಮೃತಃ ।**
**ಸರ್ವಕರ್ತೃಸ್ವರೂಪತ್ವಾತ್ ಶ್ರುತೋ ವಾಯುಮಯೋ ಹರಿಃ ।**
**ಅವಕಾಶಪ್ರದಾತೃತ್ವಾತ್ ಆಕಾಶಮಯ ಈರ್ಯತೇ ।**
**ಪೂರ್ಣತೇಜಃಸ್ವರೂಪತ್ವಾತ್ ತೇಜೋಮಯ ಉದಾಹೃತಃ ।**
**ಸೃಷ್ಟ್ಯಾದೀಚ್ಛಾಸ್ವರೂಪತ್ವಾತ್ ಸ್ಮೃತಃ ಕಾಮಮಯೋ ಹರಿಃ ।**

ಸರ್ವದುಷ್ಟಪ್ರತೀಪತ್ವಾತ್ ಸ ಹಿ ಕ್ರೋಧಮಯೋ ಮತಃ ।
ಸುಖಾದಿಧರ್ಮರೂಪತ್ವಾತ್ ಜ್ಞೇಯೋ ಧರ್ಮಮಯಃ ಪ್ರಭುಃ ।

**ಅನುವಾದ**—ಪರಮಾತ್ಮನು ವ್ಯಾಪ್ತನಾದುದರಿಂದ ಆತ್ಮಾ ಎನಿಸುತ್ತಾನೆ. ಗುಣಪೂರ್ಣನಾದುದರಿಂದ ಬ್ರಹ್ಮ. ದೂರ ಇರುವುದರಿಂದ ಸಃ. ಹತ್ತಿರ ಇರುವು ದರಿಂದ ಅಯಂ. ಪೂರ್ಣಜ್ಞಾನ ಸ್ವರೂಪನಾದುದರಿಂದ ವಿಜ್ಞಾನಮಯ. ಎಲ್ಲ ವನ್ನೂ ತಿಳಿಯುವ ಸ್ವರೂಪನಾದುದರಿಂದ ಮನೋಮಯ. ಪೂರ್ಣಬಲ ಸ್ವರೂಪನಾದುದರಿಂದ ಪ್ರಾಣಮಯ. ಎಲ್ಲವನ್ನೂ ನೋಡುವ ಸ್ವರೂಪನಾದುದ ರಿಂದ ಚಕ್ಷುರ್ಮಯ. ಎಲ್ಲವನ್ನೂ ಕೇಳುವ ಸ್ವರೂಪನಾದುದರಿಂದ ಶ್ರೋತ್ರ ಮಯ. ಸರ್ವಾಧಾರನೂ ಸುಗಂಧಸ್ವರೂಪನೂ ಆದ್ದರಿಂದ ಪೃಥಿವೀಮಯ. ಎಲ್ಲರಿಗೂ ತೃಪ್ತಿಕರನಾದುದರಿಂದ ಆಪೋಮಯ. ಸರ್ವಕರ್ತೃಸ್ವರೂಪನಾದುದ ರಿಂದ ವಾಯುಮಯ. ಅವಕಾಶ ಪ್ರದನಾದುದರಿಂದ ಆಕಾಶಮಯ. ಪೂರ್ಣ ತೇಜಃ ಸ್ವರೂಪನಾದುದರಿಂದ ತೇಜೋಮಯ. ಸೃಷ್ಟಿ ಮೊದಲಾದ ಇಚ್ಛೆಯೂ ಅವನ ಸ್ವರೂಪವಾದ್ದರಿಂದ ಕಾಮಮಯ. ಎಲ್ಲ ದುಷ್ಟರ ವಿರೋಧಿಯಾದ್ದರಿಂದ ಕ್ರೋಧಮಯ. ಸುಖ ಮೊದಲಾದ ಧರ್ಮಗಳು ಅವನ ಸ್ವರೂಪವೇ ಆದ್ದರಿಂದ ಧರ್ಮಮಯ.

**ಭಾಷ್ಯ**—ಅಪ್ರಾಕೃತಸ್ವರೂಪತ್ವಾದನೇತನ್ಮಯ ಏವ ಚ ।
ಅಪಾರ್ಥಿವೋ ಹರೇರ್ಗಂಧೋ ನ ತೃಪ್ತಿಶ್ಚಾಪ್ಯಬಾತ್ಮಿಕಾ ।
ನಾಗ್ನೇಯಂ ತಸ್ಯ ತೇಜೋಽಪಿ ನ ಚ ವಾಯುರ್ಬಲಂ ಹರೇಃ ।
ಶ್ರೋತ್ರಾದ್ಯಾ ನಾಸ್ಯ ಚಾಽಕಾಶೋ ಮನಸ್ತತ್ತ್ವಂ ನ ತನ್ಮನಃ ।
ಬುದ್ಧಿತತ್ತ್ವಂ ನ ತದ್ಬುದ್ಧಿರ್ನಾಹಮಸ್ಯಾಹಮುಚ್ಯತೇ ।
ಮಹದಾತ್ಮಕಂ ನ ತಚ್ಚಿತ್ತಂ ಪ್ರಕೃತಿರ್ನಾಸ್ಯ ಚೇತನಾ ।
ಪ್ರಕೃತ್ಯಾದಿಗುಣಾ ಯಸ್ಮಾತ್ ತದ್ಗುಣಪ್ರತಿಬಿಂಬಕಾಃ ।
ಅತಃ ಸರ್ವಮಯೋ ವಿಷ್ಣುಃ ಸರ್ವಾದ್ಯತ್ವಾದತನ್ಮಯಃ ।
ಚಿದಾನಂದಾತ್ಮಕಾಸ್ತಸ್ಯ ಗುಣಾಃ ಸರ್ವಗುಣಾತ್ಮಕಾಃ ।
ಸರ್ವದಾಽತಃ ಸರ್ವವೈಲಕ್ಷಣ್ಯಮೇಷಾಂ ಪ್ರಕೀರ್ತಿತಮ್ ।
ಕ್ರೋಧಃ ಕ್ಷಮಾತ್ಮಕೋ ಯಸ್ಯ ಚಿಂದಾನಂದಾತ್ಮಕಸ್ತಥಾ ।
ಅನ್ಯಕ್ರೋಧಸಮಃ ಕ್ರೋಧಃ ತಸ್ಯ ವಿಷ್ಣೋಃ ಕಥಂ ಭವೇತ್ ।
ಏವಂ ಸರ್ವಗುಣಾಸ್ತಸ್ಯ ಸರ್ವೇಭ್ಯೋಽಪಿ ವಿಲಕ್ಷಣಾಃ ।
ಪೂರ್ವಪ್ರಜ್ಞಾನುಸಾರೇಣ ವಿಮುಕ್ತಸ್ತಮುಪೇಷ್ಯತಿ ।
ಅನಾದಿಕಾಲಸಂಬದ್ಧಾ ಯಾ ಪ್ರಜ್ಞಾ ವಿಷ್ಣುಸಂಶ್ರಯಾ ।

**ಪೂರ್ವಪ್ರಜ್ಞೇತಿ ಸಾ ಪ್ರೋಕ್ತಾ ಬ್ರಹ್ಮಾದೇಸ್ತಾರತಮ್ಯತಃ ।**
**ಇತ್ಯಾದಿ ಚ ಮಹಾಮೀಮಾಂಸಾಯಾಂ ।**

**ಅನುವಾದ**—ಅಪ್ರಾಕೃತ ಸ್ವರೂಪನಾದುದರಿಂದ ಅವಿಜ್ಞಾನಮಯ ಇತ್ಯಾದಿ ಯಾಗಿಯೂ ಪ್ರಸಿದ್ಧನಾಗಿದ್ದಾನೆ.ಹರಿಯ ಗಂಧ ಪಾರ್ಥಿವವಲ್ಲ.ಆದ್ದರಿಂದ ಅಪೃಥಿವೀ ಮಯ. ತೃಪ್ತಿ ನೀರಿನಿಂದ ಉಂಟಾದದ್ದಲ್ಲ. ಆದ್ದರಿಂದ ಅಪೋಮಯನಲ್ಲ. ಅವನ ತೇಜಸ್ಸು ಅಗ್ನಿಜನ್ಯವಲ್ಲ. ಆದ್ದರಿಂದ ಅತೇಜೋಮಯ. ಅವನ ಬಲ ವಾಯು ಜನ್ಯವಲ್ಲ. ಆದ್ದರಿಂದ ಅವಾಯುಮಯ. ಅವನ ಶ್ರೋತ್ರ ಚಕ್ಷುಷ್ ಪ್ರಾಣಗಳು ಆಯಾಯ ತತ್ತ್ವಸ್ವರೂಪವಲ್ಲ. ಆದ್ದರಿಂದ ಅಶ್ರೋತ್ರಮಯ. ಅಚಕ್ಷುರ್ಮಯ ಮತ್ತು ಅಪ್ರಾಣಮಯ. ಅವನ ಶ್ರೋತ್ರಾದಿಗಳು ಆಕಾಶತತ್ತ್ವ ಸ್ವರೂಪವಲ್ಲ, ಆದ್ದರಿಂದ ಅನಾಕಾಶಮಯ. ಅವನ ಮನಸ್ಸು ಮನಸ್ತತ್ತ್ವಸ್ವರೂಪವಲ್ಲ, ಆದ್ದರಿಂದ ಅಮನೋಮಯ. ಅವನ ಬುದ್ಧಿಯು ಬುದ್ಧಿತತ್ತ್ವ ಸ್ವರೂಪವಲ್ಲ. ಅವನ ಅಹಂಕಾರ ಅಹಂಕಾರತತ್ತ್ವಸ್ವರೂಪವಲ್ಲ. ಅವನ ಚಿತ್ತ ಮಹತ್ತತ್ತ್ವ ಸ್ವರೂಪವಲ್ಲ. ಅವನ ಚೇತನಾ ಪ್ರಕೃತಿಸ್ವರೂಪವಲ್ಲ. ರಮಾ ಮೊದಲಾದ ಎಲ್ಲರ ಗುಣವೂ ವಿಷ್ಣುವಿನ ಪ್ರತಿಬಿಂಬಗಳು. ಆದ್ದರಿಂದ ವಿಷ್ಣುವು ಸರ್ವಮಯ. ಎಲ್ಲರಿಗೂ ಮೂಲಾಧಾರನಾದ್ದರಿಂದ ಅವನು ಅವರಿಂದ ಅಭಿನ್ನನಲ್ಲ. ಆದ್ದರಿಂದ ಅಸರ್ವಮಯ. ಅವನ ಗುಣಗಳು ಸರ್ವದಾ ಚಿದಾನಂದಾತ್ಮಕ ಮತ್ತು ಸರ್ವಗುಣ ಸ್ವರೂಪ. ಆದ್ದರಿಂದ ಸರ್ವವಿಲಕ್ಷಣ ಎಂದೂ 'ಅಸರ್ವಮಯ' ಎಂಬ ಪದದಿಂದ ವರ್ಣಿಸಲ್ಪಟ್ಟಿವೆ. ಅವನ ಕ್ರೋಧ ಕ್ಷಮಾತ್ಮಕ ಮತ್ತು ಚಿದಾನಂದಾತ್ಮಕ. ಆದ್ದರಿಂದ ಜೀವರ ಕ್ರೋಧಕ್ಕೆ ಸದೃಶವಾದ ಕ್ರೋಧವು ಅವನಿಗೆ ಹೇಗೆ ತಾನೆ ಇದ್ದೀತು? ಆದ್ದರಿಂದಲೇ ಅವನು ಅಕ್ರೋಧಮಯ. ಹೀಗೆ ಅವನ ಎಲ್ಲ ಗುಣಗಳು ಜೀವಾತ್ಮರೆಲ್ಲರ ಗುಣಗಳಿಂದ ವಿಲಕ್ಷಣವಾಗಿವೆ. ಜೀವಾತ್ಮನು ಪೂರ್ವಪ್ರಜ್ಞೆಗೆ ಅನುಗುಣವಾಗಿ ಮುಕ್ತಿಯನ್ನು ಪಡೆದು ಇಂತಹ ವಿಷ್ಣುವನ್ನು ಪೊಂದುತ್ತಾನೆ. ಬ್ರಹ್ಮಾದಿ ಜೀವರಲ್ಲಿ ಅನಾದಿಕಾಲದಿಂದ ತಾರತಮ್ಯದಿಂದ ಇರುವ ವಿಷ್ಣುಜ್ಞಾನಕ್ಕೇ ಪೂರ್ವಪ್ರಜ್ಞಾ ಎಂದು ಹೆಸರು ಎಂದು ಮುಂತಾಗಿಯೂ ಮಹಾಮೀಮಾಂಸಾ ಎಂಬ ಗ್ರಂಥದಲ್ಲಿ ಹೇಳಲಾಗಿದೆ.

**ಭಾಷ್ಯ**—**ವರ್ತಮಾನಂ ಯತೋ ವಿಷ್ಣೋರ್ವಶೇ ತಸ್ಮಾದಿದಂಮಯಃ ।**
**ಅತೀತನಾಗತಂ ಯಸ್ಮಾತ್ ತದ್ವಶೇಽತೋ ಹ್ಯದೋಮಯಃ ।**
**ಪ್ರಾಧಾನ್ಯೇ ಚ ಮಯಟ್ ಪ್ರೋಕ್ತಃ ಸ್ವರೂಪೇ ಚ ಯತೋ ಭವೇತ್**
**ಇದಂರೂಪೋಽಪ್ಯದೋರೂಪಸ್ತತೋ ನಿತ್ಯತ್ವತೋ ಹರಿಃ ।**
**ಅಸ್ಯ ತಸ್ಯ ಪ್ರಧಾನಶ್ಚ ನಿತ್ಯಪೂರ್ಣಬಲತ್ವತಃ । ಇತ್ಯಾದಿ ಚ ।**

**ಅನುವಾದ**—ವರ್ತಮಾನ ಪ್ರಪಂಚವು ವಿಷ್ಣುವಶವಾಗಿದೆ. ಆದ್ದರಿಂದ ಅವನು ಇದಂಮಯ. ಭೂತ ಭವಿಷ್ಯತ್ ಕಾಲಗಳ ಪ್ರಪಂಚವೂ ಅವನ ವಶವೇ ಆಗಿರುವುದರಿಂದ ಅವನು ಅದೋಮಯ. ಮಯಟ್ ಪ್ರತ್ಯಯವು ಪ್ರಾಧಾನ್ಯ ಮತ್ತು ಸ್ವರೂಪ ಎಂಬ ಅರ್ಥವುಳ್ಳದೆಂದು ವ್ಯಾಕರಣಶಾಸ್ತ್ರದಲ್ಲಿ ಹೇಳಲಾಗಿದೆ. ಹರಿಯು ನಿತ್ಯವೂ ಪೂರ್ಣವೂ ಆದ ಬಲವುಳ್ಳವನಾದ್ದರಿಂದ ವರ್ತಮಾನ ಮತ್ತು ಭೂತ ಭವಿಷ್ಯತ್ಕಾಲದ ಪ್ರಪಂಚಕ್ಕೆ ಪ್ರಧಾನನಾಗಿದ್ದಾನೆ, ಅಂದರೆ ಒಡೆಯನಾಗಿದ್ದಾನೆ. ಆದ್ದರಿಂದ ಇದಂಮಯ, ಅದೋಮಯನೆನಿಸಿದ್ದಾನೆ. ಅನಾದಿನಿತ್ಯನಾದ್ದರಿಂದ ವರ್ತಮಾನಕಾಲದಲ್ಲಿರುವವನಾಗಿದ್ದು ಇದಂಮಯ ಎಂದೂ, ಭೂತ ಭವಿಷ್ಯತ್ ಕಾಲಗಳಲ್ಲಿರುವವನಾದ್ದರಿಂದ ಅದೋಮಯ ಎಂದೂ ಹೇಳಲ್ಪಡುತ್ತಾನೆ.

**ಭಾಷ್ಯ—ಯಥಾ ಪೂರ್ವಂ ತಥೇದಾನೀಮಿತಿ ವಿಷ್ಣುಸ್ತದುಚ್ಯತೇ ।**
**ಯಥಾ ಬಾಹ್ಯೇ ತಥೈವಾಂತೇ ತತೋ ಯದಿತಿ ಚೋಚ್ಯತೇ ।**
**ಯಥೇದಾನೀಂ ತಥಾ ನಿತ್ಯಂ ಯಸ್ಮಾದೇಷ ಭವಿಷ್ಯತಿ ।**
**ಅತ ಏತದಿತಿ ಪ್ರೋಕ್ತೋ ವಾಸುದೇವೋ ಜಗತ್ಪತಿಃ ।**

**ಅನುವಾದ**—ವಿಷ್ಣು ಹಿಂದೆ ಇದ್ದಂತೆ ಈಗಲೂ ಇದ್ದಾನೆ. ಆದ್ದರಿಂದ ಅವನಿಗೆ ತದ್ ಎಂದು ಹೆಸರು. ಬ್ರಹ್ಮಾಂಡದ ಮತ್ತು ಶರೀರದ ಹೊರಗೆ ಹೇಗೋ ಹಾಗೆಯೇ ಅವುಗಳ ಒಳಗೂ ಇದ್ದಾನೆ. ಆದ್ದರಿಂದ ಅವನಿಗೆ ಯದ್ ಎಂದು ಹೆಸರು. ಈಗ ಇರುವಂತೆಯೇ ಯಾವಾಗಲೂ ಅಂದರೆ ಭೂತ ಭವಿಷ್ಯತ್‌ಕಾಲಗಳಲ್ಲಿಯೂ ಇರುತ್ತಾನೆ. ಆದ್ದರಿಂದ ಜಗತ್ಪತಿಯಾದ ವಾಸುದೇವನಿಗೆ ಏತತ್ ಎಂದು ಹೆಸರು.

**ಪುಣ್ಯ ಪಾಪಗಳನ್ನು ಮಾಡಿಸುವವನು ಪರಮಾತ್ಮ :**

**ಭಾಷ್ಯ—ಸ ಯಥಾ ಕರೋತಿ ಪುರುಷಂ ತಥೈವಾಯಂ ಭವಿಷ್ಯತಿ ।**
**ಸಾಧುರ್ಭವತಿ ಸಾಧುಂ ಚೇತ್ ಕರೋತಿ ಪುರುಷೋತ್ತಮಃ ।**
**ಪಾಪೋ ಭವತಿ ಪಾಪಂ ಚೇತ್ ಸ ಕರೋತಿ ಜನಾರ್ದನಃ ।**
**ತತ್ಪ್ರೇರಿತೇನ ಪುಣ್ಯೇನ ಪುಣ್ಯೋ ಭವತಿ ಮಾನವಃ ।**
**ತತ್ಪ್ರೇರಿತೇನ ಪಾಪೇನ ತಥಾ ಪಾಪಃ ಪುಮಾನ್ ಭವೇತ್ ।**
**ಆಹುಶ್ಚ ತತ್ಕಾಮಾಧೀನಂ ಜೀವಮೇನಂ ಸದೈವ ಹಿ ।**
**ತತ್ಕಾಮಾದಸ್ಯ ಕಾಮಃ ಸ್ಯಾತ್ ಯಥಾ ಕಾಮಸ್ತಥಾ ಭವೇತ್ ।**
**ಕಾಮಾನುಸಾರಿಣೀ ನಿಷ್ಠಾ ಕರ್ಮ ನಿಷ್ಠಾನುಸಾರತಃ ।**
**ಫಲಂ ಕರ್ಮಾನುಸಾರೇಣ ವಿಷ್ಣೋಃ ಕಾಮಮಯಸ್ತತಃ ।**

**ಜೀವೋಽಯಂ ಸರ್ವದೈವ ಸ್ಯಾನ್ನಾನ್ಯಥಾ ತು ಕಥಂಚನ ।**
**ಇತ್ಯಾದಿ ಚ ।**

**ಅನುವಾದ**—ಹರಿಯು ಜೀವನನ್ನು ಹೇಗೆ ಮಾಡುವನೋ ಹಾಗೆಯೇ ಆಗುತ್ತಾನೆ. ಅಂದರೆ ಪುಣ್ಯವಂತನನ್ನಾಗಿ ಮಾಡಿದರೆ ಪುಣ್ಯವಂತನಾಗುತ್ತಾನೆ. ಪಾಪಿಯನ್ನಾಗಿ ಮಾಡಿದರೆ ಪಾಪಿಯಾಗುತ್ತಾನೆ. ಪುಣ್ಯ ಪಾಪ ಕರ್ಮಗಳು ವ್ಯರ್ಥವೂ ಅಲ್ಲ, ಸ್ವತಂತ್ರವೂ ಅಲ್ಲ. ಆವನ ಪ್ರೇರಣೆಯಿಂದಾಗುವ ಪುಣ್ಯ ಕರ್ಮದಿಂದ ಪುಣ್ಯವಂತನಾಗುತ್ತಾನೆ. ಅವನ ಪ್ರೇರಣೆಯಿಂದಾಗುವ ಪಾಪಕರ್ಮದಿಂದ ಪಾಪಿಯಾಗುತ್ತಾನೆ. ಹೀಗೆ ಜೀವಾತ್ಮನು ಯಾವಾಗಲೂ ಪರಮಾತ್ಮನ ಇಚ್ಛೆಗೆ ಅಧೀನನೆಂದು ಜ್ಞಾನಿಗಳು ಹೇಳುತ್ತಾರೆ. ಪರಮಾತ್ಮನ ಇಚ್ಛೆಯಂತೆ ಜೀವಾತ್ಮನಿಗೆ ಇಚ್ಛೆ ಹುಟ್ಟುತ್ತದೆ. ಅಂತಹ ಇಚ್ಛೆಗೆ ಅನುಗುಣವಾಗಿ ನಿಷ್ಠೆಯುಂಟಾಗುತ್ತದೆ. ನಿಷ್ಠೆಗೆ ಅನುಗುಣವಾಗಿ ಕರ್ಮವನ್ನು ಮಾಡುತ್ತಾನೆ. ಕರ್ಮಾನುಗುಣವಾಗಿ ಫಲವು ಲಭಿಸುತ್ತದೆ. ಆದ್ದರಿಂದ ಜೀವಾತ್ಮನು ಕಾಮಮಯ,ಯಾವಾಗಲೂ ವಿಷ್ಣುವಿನ ಇಚ್ಛೆಗೆ ಅಧೀನನು, ಎಂದೂ ಸ್ವತಂತ್ರನಾಗಿರುವುದಿಲ್ಲ.

**ಜೀವೇಶ್ವರಾಭೇದ ಸರ್ವಪ್ರಮಾಣ ವಿರುದ್ಧ :**

**ಭಾಷ್ಯ–ಜೀವೇಶ್ವರಾಭೇದಾಂಗೀಕಾರೇ 'ಸುಷುಪ್ತ್ಯುತ್ಕ್ರಾಂತ್ಯೋರ್ಭೇದೇನ' ಇತಿ ಸೂತ್ರವಿರೋಧಃ । 'ಪ್ರಾಜ್ಞೇನಾಽತ್ಮನಾಽನ್ವಾರೂಢಃ' 'ಪ್ರಾಜ್ಞೇ–ನಾತ್ಮನಾ ಸಂಪರಿಷ್ವಕ್ತಃ' ಇತ್ಯಾದಿ ಶ್ರುತಿವಿರೋಧಶ್ಚ ।**

**ಅನುವಾದ**–ಜೀವೇಶ್ವರರಿಗೆ ಅಭೇದವನ್ನು ಅಂಗೀಕರಿಸಿದರೆ,'ಸುಷುಪ್ತಿ ಮತ್ತು ಉತ್ಕ್ರಾಂತಿ ಪ್ರಕರಣಗಳಲ್ಲಿ ಜೀವೇಶ್ವರರಿಗೆ ಭೇದವನ್ನು ಹೇಳಿದ್ದರಿಂದ ಅಭೇದವಿಲ್ಲ' ಎಂಬ ಬ್ರಹ್ಮಸೂತ್ರದ ವಿರೋಧವುಂಟಾಗುತ್ತದೆ. 'ಸರ್ವಜ್ಞ ಪರಮಾತ್ಮನನ್ನು ಹೊತ್ತ ಜೀವನು ಶರೀರವನ್ನು ಬಿಟ್ಟು ಹೋಗುತ್ತಾನೆ'. 'ಸರ್ವಜ್ಞ ಪರಮಾತ್ಮನಿಂದ ಆಲಿಂಗಿತನಾದ ಜೀವನು ಏನೂ ತಿಳಿಯುವುದಿಲ್ಲ' ಎಂದು ಮೊದಲಾದ ಶ್ರುತಿ ವಿರೋಧವೂ ಉಂಟಾಗುತ್ತದೆ.

**ವಿವರಣೆ**—'ಸ ವಾ ಅಯಮಾತ್ಮಾ' ಎನ್ನುವ ಪ್ರಕೃತ ಮಂತ್ರ ಈಶ್ವರಪರವಾಗಿರುವಂತೆ ಜೀವಪರವೂ ಆಗಬಹುದು. ಬ್ರಹ್ಮ ಎಂಬ ವಿಶೇಷಣ, ಜೀವನೇ ಬ್ರಹ್ಮನಾದುದರಿಂದ ಜೀವನಿಗೂ ಅನ್ವಯವಾಗಬಹುದು. ಆದ್ದರಿಂದ ಈ ಮಂತ್ರವು ಜೀವಪರ ಎಂದು ಏಕೆ ಹೇಳಬಾರದು? ಈ ಪ್ರಶ್ನೆ ಸರಿಯಲ್ಲ. ಇದೇ ಉಪನಿಷತ್ತು ಸುಷುಪ್ತಿ ಮತ್ತು ಉತ್ಕ್ರಾಂತಿಗಳನ್ನು ವರ್ಣಿಸುವಲ್ಲಿ ಜೀವೇಶ್ವರರಿಗೆ ಭೇದವನ್ನೇ ವರ್ಣಿಸಿದೆ ಎಂದು ಬ್ರಹ್ಮಸೂತ್ರಕಾರರು ಹೇಳಿದ್ದಾರೆ. ಸೂತ್ರಕಾರರು ಇಲ್ಲಿ ವಿಚಾರಿ

ಸಿರುವ 'ಪ್ರಾಜ್ಞೇನಾತ್ಮನಾ' ಎಂಬ ಮುಂತಾದ ಶ್ರುತಿಗಳೂ ಜೀವೇಶ್ವರಾಭೇದ ವಿರೋಧಿಯಾಗಿವೆ. ಆದ್ದರಿಂದ ಜೀವೇಶ್ವರಾಭೇದವು ಸರಿಯಲ್ಲ.

**ಭಾಷ್ಯ—ನ ಚ ವ್ಯಾವಹಾರಿಕಭೇದೋ ನಾಮ ಕಶ್ಚಿದಸ್ತೀತ್ಯತ್ರ ಕಿಂಚಿನ್ಮಾನಂ। ಭ್ರಾಂತಿಭೇದತ್ವೇ ಶ್ರುತಿಸಿದ್ಧತ್ವಮೇವ ನ ಸ್ಯಾತ್ । ನ ಹಿ ನಿರ್ದೋಷ ಶ್ರುತಿವಾಕ್ಯಸಿದ್ಧಂ ಭ್ರಾಂತಮಿತಿ ಯುಕ್ತಮ್ । ಉನ್ಮತ್ತವಾಕ್ಯವತ್ ಸರ್ವವೇದಸ್ಯ ಅಪ್ರಾಮಾಣ್ಯಪ್ರಸಕ್ತೇಃ । ನ ಚ ಸ್ವವಿಷಯಸ್ಯ ಭ್ರಮತ್ವಾದನ್ಯದಪ್ರಾಮಾಣ್ಯಂ ನಾಮ ಕಿಂಚಿತ್ । ತನ್ಮತೇ ಹಿ ಉನ್ಮತ್ತವಾಕ್ಯವಿಷಯಸ್ಯಾಪ್ಯನಿರ್ವಚನೀಯತ್ವಮೇವ ।**

**ಅನುವಾದ**—ವ್ಯಾವಹಾರಿಕಭೇದವೆಂಬುದಿದೆ ಎನ್ನಲು ಏನೂ ಪ್ರಮಾಣವಿಲ್ಲ. ಭೇದವು ಭ್ರಾಂತಿಯಿಂದ ಸಿದ್ಧವಾಗುತ್ತದೆ ಎನ್ನುವುದೂ ಸರಿಯಲ್ಲ. ಏಕೆಂದರೆ ಶ್ರುತಿಯು ಹೇಳಿರುವ ಜೀವೇಶ್ವರ ಭೇದವು ಭ್ರಾಂತಿಸಿದ್ಧವಲ್ಲ. ಭ್ರಾಂತಿಸಿದ್ಧವಾದದ್ದು ಶ್ರುತಿಸಿದ್ಧ ಎನಿಸಲಾರದು. ದೋಷರಹಿತವಾದ ಶ್ರುತಿವಾಕ್ಯಗಳಿಂದ ಸಿದ್ಧವಾದ ಪ್ರಮೇಯವು ಭ್ರಾಂತಿಸಿದ್ಧ ಎನ್ನುವುದು ಯುಕ್ತವಲ್ಲ. ವೇದವಾಕ್ಯಗಳಿಂದ ಸಿದ್ಧವಾದ ಪ್ರಮೇಯವು ಭ್ರಾಂತಿಸಿದ್ಧವಾಗಿರಬಹುದಾದರೆ ಇಡೀ ವೇದವು ಹುಚ್ಚನ ಮಾತಿನಂತೆ ಅಪ್ರಮಾಣವಾಗಬೇಕಾಗುತ್ತದೆ. ಏಕೆಂದರೆ ತನ್ನಿಂದ ಪ್ರತಿಪಾದ್ಯವಾದ ವಿಷಯ ಭ್ರಾಂತಿ ಸಿದ್ಧವೆನಿಸುವುದೇ ಅಪ್ರಾಮಾಣ್ಯ. ಅದಕ್ಕಿಂತ ಬೇರೆ ಅಪ್ರಾಮಾಣ್ಯವೆಂಬುದೊಂದು ಇಲ್ಲ. ಅವನ ಮತದಲ್ಲಿ ಉನ್ಮತ್ತವಾಕ್ಯ ಪ್ರತಿಪಾದ್ಯವಾದ ಪ್ರಮೇಯವೂ ಕೂಡ ಅನಿರ್ವಚನೀಯವೇ ಆಗಿದೆ.

**ವಿವರಣೆ**—'ಅದ್ವೈತಮತದಲ್ಲಿ ಪ್ರಮಾಣ ಎರಡು ವಿಧ– ತತ್ತ್ವಾವೇದಕ ಪ್ರಮಾಣ, ಅತತ್ತ್ವಾವೇದಕ ಪ್ರಮಾಣ. ಪಾರಮಾರ್ಥಿಕವಾದ ಜೀವ–ಬ್ರಹ್ಮರ ಅಭೇದವನ್ನು ಬೋಧಿಸುವ ವಾಕ್ಯಗಳು ತತ್ತ್ವಾವೇದಕ. ಭ್ರಾಂತಿಸಿದ್ಧವಾದ ಅಪಾರಮಾರ್ಥಿಕವಾದ ಅನಿರ್ವಚನೀಯಭೇದವನ್ನು ಬೋಧಿಸುವ ವಾಕ್ಯಗಳು ಅತತ್ತ್ವಾವೇದಕ. ಜೀವ-ಬ್ರಹ್ಮರ ಭೇದವು ಅನಿರ್ವಚನೀಯ. ಅದನ್ನು ಬೋಧಿಸುವ ಶ್ರುತಿಸೂತ್ರಗಳು ಅತತ್ತ್ವಾವೇದಕ ಪ್ರಮಾಣ, ಅಪ್ರಮಾಣವಲ್ಲ. ಆದ್ದರಿಂದ ಅಪ್ರಾಮಾಣ್ಯದ ಆಪಾದನೆ ಸರಿಯಾಗಿಲ್ಲ' ಎಂದರೆ ಇದು ಸರಿಯಲ್ಲ. ಅವರ ಮತದಲ್ಲಿ ಉನ್ಮತ್ತವಾಕ್ಯ ಪ್ರತಿಪಾದ್ಯವೂ ಅನಿರ್ವಚನೀಯವಾದ್ದರಿಂದ ಅದೂ ಅತತ್ತ್ವಾವೇದಕಪ್ರಮಾಣವೆನಿಸಬೇಕಾದೀತು. ಇದನ್ನು ಅವರು ಒಪ್ಪಿಲ್ಲ. ಆದ್ದರಿಂದ ಉನ್ಮತ್ತವಾಕ್ಯ ಪ್ರತಿಪಾದ್ಯ ಪ್ರಮೇಯವು ಅನಿರ್ವಚನೀಯವಾದರೂ, ಭ್ರಾಂತಿಸಿದ್ಧವಾದ್ದರಿಂದ ಉನ್ಮತ್ತವಾಕ್ಯವು ಅಪ್ರಮಾಣವಾಗಿರುವಂತೆ, ಅನಿರ್ವಚನೀಯವಾದ

ಭ್ರಾಂತಿಸಿದ್ಧ ಭೇದವನ್ನು ಪ್ರತಿಪಾದಿಸುವ ಶ್ರುತಿ–ಸೂತ್ರಗಳೂ ಅಪ್ರಮಾಣವಾಗ ಬೇಕಾಗುತ್ತದೆ ಎಂಬ ಆಪಾದನೆಯು ಯುಕ್ತವಾಗಿದೆ.

**ಜೀವೇಶ್ವರಭೇದ ಅಸತ್ಯವಲ್ಲ :**

**ಭಾಷ್ಯ**—**'ಸತ್ಯಃ ಸೋ ಅಸ್ಯ ಮಹಿಮಾ ಗೃಣೇ ಶವಃ' 'ತ ಏತೇ ಸತ್ಯಾಃ ಕಾಮಾಃ' ಇತ್ಯಾದಿ ಶ್ರುತಿಭಿಃ ಭಗವದ್ಗುಣಾನಾಂ ಸತ್ಯತ್ವಮೇವ ಜ್ಞಾಯತೇ।'ಸತ್ಯಮೇನಮನು ವಿಶ್ವೇ ಮದಂತಿ ರಾತಿಂ ದೇವಸ್ಯ ಗೃಣತೋ ಮಘೋನಃ' ಇತಿ ಸರ್ವಜೀವಾನಾಂ ಭಗವದನುಜೀವನಂ ಚ ಸತ್ಯಮಿತ್ಯೇವೋಚ್ಯತೇ । ತದಾ ಕಥಂ ಜೀವೇಶಭೇದಸ್ಯಾಸತ್ಯತಾ ?**

**ಅನುವಾದ**—'ಪರಮಾತ್ಮನ ಮಹಿಮೆ ಎಲ್ಲವೂ ಸತ್ಯ. ಸುಖಲಾಭಕ್ಕಾಗಿ ಯಜ್ಞಗಳಲ್ಲಿ ಅದನ್ನು ಸ್ತುತಿಸುವೆ', 'ಪರಮಾತ್ಮನ ಇಚ್ಛೆಗಳೆಲ್ಲವೂ ಸತ್ಯ' ಎಂದು ಮೊದಲಾದ ಶ್ರುತಿಗಳಿಂದ ಭಗವಂತನ ಗುಣಗಳ ಸತ್ಯತ್ವವೇ ತಿಳಿದು ಬರುತ್ತದೆ. 'ಸ್ತುತಿಸುವ ಇಂದ್ರನಿಗೆ ಅಭೀಷ್ಟದಾಯಕನಾದ ಹರಿಯನ್ನು ಎಲ್ಲ ಜೀವರೂ ಆಶ್ರಯಿಸಿದ್ದಾರೆ ಎಂಬುದು ಸತ್ಯ' ಎಂಬ ಶ್ರುತಿಯು ಎಲ್ಲ ಜೀವರೂ ಭಗವಂತನನ್ನು ಅವಲಂಬಿಸಿ ಬದುಕುವುದನ್ನು ಸತ್ಯ ಎಂದು ಹೇಳುತ್ತದೆ. ಹೀಗೆ ಪರಮಾತ್ಮ-ಜೀವಾತ್ಮರೊಳಗೆ ಸ್ವಾತಂತ್ರ್ಯ ಪಾರತಂತ್ರ್ಯರೂಪ ವಿರುದ್ಧ ಧರ್ಮಗಳು ಸತ್ಯವಾಗಿರುವುದರಿಂದ ಜೀವೇಶಭೇದ ಅಸತ್ಯವೆನಿಸುವುದು ಹೇಗೆ?

**ಭಾಷ್ಯ**—**ನ ಚ ಸರ್ವವಿಥ್ಯರ್ಥಕ್ರಿಯಾಸಿದ್ಧಸ್ಯ ಕುತ್ರಚಿದ್ ಬಾಧೋ ದೃಷ್ಟಃ। 'ನ ಹಾಸ್ಯ ಕರ್ಮ ಕ್ಷೀಯತೇ' 'ಅಸ್ಮಾದ್ಧ್ಯೇವಾತ್ಮನೋ ಯದ್ಯತ್ ಕಾಮಯತೇ ತತ್ತತ್ ಸೃಜತೇ' ಇತಿ ಮುಕ್ತ್ಯನಂತರಮಪಿ ತದಧೀನತ್ವಪ್ರತೀತೇಶ್ಚ ನ ಭೇದಸ್ಯಾಸತ್ಯತಾ । ನ ಹಿ ಸಂಸಾರಾವಸ್ಥಾಯಾಮಕ್ಷೀಣಕರ್ಮತಾ ಭವತಿ । ನ ಚ ಮುಖ್ಯಾರ್ಥಂ ಪರಿತ್ಯಜ್ಯಾಮುಖ್ಯೋ ಯುಕ್ತಃ। ಅತಃ ಸತ್ಯ ಏವ ಭೇದಃ ।**

**ಅನುವಾದ**—ಶ್ರುತ್ಯಾದಿಗಳಿಂದ ಪರಮಾತ್ಮನು ಸರ್ವಜ್ಞನೆಂದೂ, ತಾನು ಅಲ್ಪಜ್ಞನೆಂದೂ ಅರಿತ ಎಲ್ಲರಿಗೂ ತಾನು ಪರಮಾತ್ಮನಿಂದ ಭಿನ್ನನೆಂಬುದು ಅನುಭವಸಿದ್ಧವಾಗಿದೆ. ಈ ಜೀವೇಶಭೇದ ಸಂಸಾರ ಮೋಚಕವೂ ಆ ದೆ. ಹೀಗೆ ಸರ್ವಾನುಭವ ಸಿದ್ಧವೂ ಕಾರ್ಯಕಾರಿಯೂ ಆದ ಪ್ರಮೇಯವು ಪ್ರಮಾಣಬಾಧಿತವಾಗುವುದು ಎಲ್ಲೂ ಕಂಡಿಲ್ಲ. ಆದ್ದರಿಂದ ಅಸತ್ಯವಲ್ಲ. 'ಜ್ಞಾನೋತ್ತರ ಕರ್ಮದ ಫಲಕ್ಕೆ ಅವಸಾನವಿಲ್ಲ'. 'ಪರಮಾತ್ಮನ ಅನುಗ್ರಹದಿಂದ ಆ ಕರ್ಮದ ಫಲವಾಗಿ

ತಾನು ಬಯಸಿದುದನ್ನೆಲ್ಲ ಮುಕ್ತನು ನಿರ್ಮಿಸಿಕೊಳ್ಳುತ್ತಾನೆ' ಎಂದು ಮುಕ್ತಿಯ ಅನಂತರವೂ ಮುಕ್ತನಿಗೆ ಪರಮಾತ್ಮಾಧೀನತೆ ಕಂಡುಬರುವುದರಿಂದ ಭೇದ ಅಸತ್ಯವಲ್ಲ. ಕರ್ಮಫಲ ಅನಂತವಾಗಿರುವುದು ಸಂಸಾರಾವಸ್ಥೆಯಲ್ಲಿ ಇಲ್ಲವೆ ಇಲ್ಲ. ಸಂಸಾರದಲ್ಲಿಯೂ ಕೆಲವು ಕರ್ಮಗಳ ಫಲ ದೀರ್ಘಕಾಲ ಅನುಭವಕ್ಕೆ ಬರುತ್ತದೆ ಎಂದು ಅಮುಖ್ಯಾರ್ಥವನ್ನು ಗ್ರಹಿಸುವುದು, ಕರ್ಮಫಲ ಅನಂತವೆಂಬ ಮುಖ್ಯಾರ್ಥ ಸಂಭವ ವಿರುವಾಗ ಅಯುಕ್ತ. ಆದ್ದರಿಂದ 'ನ ಹಾಸ್ಯ ಕರ್ಮ ಕ್ಷೀಯತೇ' ಎಂಬ ಶ್ರುತಿಗಳು ಮುಕ್ತ್ಯವಸ್ಥೆಯಲ್ಲಿ ಪರಮಾತ್ಮಾಧೀನತ್ವವನ್ನು ಹೇಳುತ್ತವೆ. ಆದ್ದರಿಂದಲೂ ಜೀವೇಶಭೇದ ಸತ್ಯ. ಅಸತ್ಯವಲ್ಲ.

**ಭಾಷ್ಯ—ಸ ಭಗವಾನ್ ಯಥಾಕಾರೀ ಯಥಾ ಕಾರಯತಿ ಯಥಾಚಾರೀ ಯಥಾ ಚಾರಯತಿ ತಥಾ ಭವತಿ । ಸ ಭಗವಾನ್ ಯಥಾಕಾಮೋ ಭವತಿ ತಥಾಕಾಮೋ ಜೀವೋ ಭವತಿ । ಇತ್ಥಂ ಕಾಮೋಽಸ್ಯ ಭೂಯಾದಿತಿ ಭಗವದಿಚ್ಛಾವಶಾದಸ್ಯ ಕಾಮೋ ಭವತೀತ್ಯರ್ಥಃ । ಕ್ರತುರಿತೀತ್ಥಂ ಕರಿಷ್ಯಾಮ್ಯೇವೇತಿ ನಿಶ್ಚಯರೂಪಃ ಕಾಮಃ । ಸ ಭಗವದಿಚ್ಛಯಾ ಹಿ ಭವತಿ । 'ಕಾಮೇನ ಮೇ ಕಾಮ ಆಗಾತ್' ಇತಿ ಚ ಶ್ರುತಿಃ ।**

**ಅನುವಾದ**-ಆ ಭಗವಂತನು ಯಥಾಕಾರೀ ಅಂದರೆ ಹೇಗೆ ತಾನು ಕರ್ಮ ಮಾಡು ವನೋ ಎಂದರ್ಥವಲ್ಲ. ಜೀವನಿಂದ ಹೇಗೆ ಕರ್ಮ ಮಾಡಿಸುತ್ತಾನೋ ಎಂದರ್ಥ. ಯಥಾಚಾರೀ ಎಂದರೂ ಹೇಗೆ ಆಚಾರ ಮಾಡುವನೋ ಎಂದರ್ಥವಲ್ಲ. ಜೀವನಿಂದ ಹೇಗೆ ಆಚಾರವನ್ನು ಮಾಡಿಸುತ್ತಾನೋ ಹಾಗೆ ಜೀವನು ಆಗುತ್ತಾನೆ. ಪರಮಾತ್ಮನು ಯಾವ ಇಚ್ಛೆಯುಳ್ಳವನಾಗುತ್ತಾನೋ ಜೀವನು ಅದೇ ಇಚ್ಛೆಯುಳ್ಳವನಾಗುತ್ತಾನೆ. ಅಂದರೆ ಪರಮಾತ್ಮನಂತೆ ಜಗತ್ಸೃಷ್ಟ್ಯಾದಿ ಇಚ್ಛೆಯಲ್ಲ, 'ಇವನಿಗೆ ಹೀಗೆ ಇಚ್ಛೆ ಉಂಟಾಗಲಿ' ಎಂಬ ಭಗವಂತನ ಇಚ್ಛೆಗೆ ಅನುಗುಣವಾಗಿ ಜೀವನಿಗೆ ಇಚ್ಛೆಯುಂಟಾಗು ತ್ತದೆ ಎಂದರ್ಥ. ಕ್ರತು ಎಂದರೆ ಜ್ಞಾನ ಇಲ್ಲಿ ವಿವಕ್ಷಿತವಲ್ಲ. 'ಹೀಗೆ ಮಾಡಿಯೇ ಮಾಡುತ್ತೇನೆ' ಎಂಬ ನಿಶ್ಚಯಾತ್ಮಕ ಕಾಮ. ಈ ಕಾಮವು ಭಗವಂತನ ಇಚ್ಛೆ ಯಿಂದಲೇ ಆಗುತ್ತದೆ. 'ಭಗವಂತನ ಇಚ್ಛಾನುಸಾರ ನನಗೆ ಇಚ್ಛೆಯು ಬರಲಿ' ಎಂಬ ಶ್ರುತಿಯೂ ಇದನ್ನು ಸಮರ್ಥಿಸುತ್ತದೆ.

**ಇಚ್ಛಾನುಸಾರಿ ಕರ್ಮ, ಕರ್ಮಾನುಸಾರಿ ಫಲ :**

**ಉಪನಿಷತ್—ತದೇಷ ಶ್ಲೋಕೋ ಭವತಿ—**

**ತದೇವ ಸಕ್ತಃ ಸಹ ಕರ್ಮಣೈತಿ**

ಲಿಂಗಂ ಮನೋ ಯತ್ರ ನಿಷಕ್ತಮಸ್ಯ ।
ಪ್ರಾಪ್ಯಾಂತಂ ಕರ್ಮಣಸ್ತಸ್ಯ ಯತ್ಕಿಂಚೇಹ ಕರೋತ್ಯಯಂ ।
ತಸ್ಮಾಲ್ಲೋಕಾತ್ ಪುನರೇತ್ಯಸ್ಮೈ ಲೋಕಾಯ ಕರ್ಮಣೇ ।
ಇತಿ ನು ಕಾಮಯಮಾನಃ । ಅಥಾಕಾಮಯಮಾನಃ । ಯೋಽಕಾಮೋ ನಿಷ್ಕಾಮ ಆಪ್ತಕಾಮ ಆತ್ಮಕಾಮೋ ನ ತಸ್ಯ ಪ್ರಾಣಾ ಉತ್ಕ್ರಾಮಂತಿ। ಬ್ರಹ್ಮೈವ ಸನ್ ಬ್ರಹ್ಮಾಪ್ಯೇತಿ ।

ಜೀವನಿಗೆ ಇಚ್ಛಾನುಸಾರ ಕರ್ಮ, ಕರ್ಮಾನುಸಾರ ಫಲ ಎಂಬ ವಿಷಯದಲ್ಲಿ ಈ ಶ್ಲೋಕದ ಅನುಮತಿ ಇದೆ– 'ಶರೀರಧಾರಿಯಾದ ಜೀವನ ಶರೀರ ಮತ್ತು ಮನಸ್ಸು ಯಾವ ಫಲದಲ್ಲಿ ಆಸಕ್ತಿಯನ್ನು ಹೊಂದಿದೆಯೋ ಆ ಫಲವನ್ನು ಅದಕ್ಕೆ ಸಾಧನವಾದ ಕರ್ಮದ ಜೊತೆಗೆ ಜೀವನು ಹೊಂದುತ್ತಾನೆ. ಜೀವನು ಈ ಲೋಕದಲ್ಲಿ ಯಾವ ಕರ್ಮವನ್ನು ಮಾಡುತ್ತಾನೋ ಆ ಕರ್ಮದ ಫಲವನ್ನು ಸ್ವರ್ಗಾದಿ ಲೋಕಗಳಲ್ಲಿ ಅದು ಮುಗಿಯುವವರೆಗೆ ಅನುಭವಿಸಿ ಆ ಲೋಕದಿಂದ ಈ ಲೋಕಕ್ಕೆ ಪುನಃ ಕರ್ಮ ಮಾಡುವುದಕ್ಕಾಗಿ ಬರುತ್ತಾನೆ'.

ಫಲಕಾಮನಾದ ಸಂಸಾರಿಯ ಬಗ್ಗೆ ನಿರೂಪಣೆ ಇದು. ಇನ್ನು ಮುಕ್ತನ ಬಗ್ಗೆ ನಿರೂಪಣೆ–ಯಾರು ಅಕಾರವಾಚ್ಯನಾದ ವಿಷ್ಣುವಿನ ಬಗ್ಗೆಯೇ ಬಯಕೆ ಉಳ್ಳವನೋ, ಅಯೋಗ್ಯಕಾಮನಾರಹಿತನೋ, ಭಗವಂತನ ಕಾಮನೆಗೆ ಅನುಗುಣವಾಗಿ ಕಾಮನೆ ಉಳ್ಳವನೋ, ಆಪ್ತಕಾಮನೋ, ಚಿದಾನಂದಾತ್ಮಕವಾದ ತನ್ನ ಸ್ವರೂಪವನ್ನೇ ಬಯಸುವನೋ ಅವನಿಗೆ ಮುಕ್ತಿಯಲ್ಲಿ ಎಂದೂ ಪ್ರಾಣಗಳು ಶರೀರದಿಂದ ತೊಲಗುವುದಿಲ್ಲ, ಅಂದರೆ ಮರಣವಿಲ್ಲ. ಮುಕ್ತನು ಜೀವನಾಗಿದ್ದೇ ಪ್ರತಿಪ್ರಲಯದಲ್ಲೂ ಪರಬ್ರಹ್ಮನನ್ನು ಹೊಂದುತ್ತಾನೆ.

ಭಾಷ್ಯ—ಅಯೋಗ್ಯಕಾಮರಾಹಿತ್ಯಾನ್ಮುಕ್ತೋ ನಿಷ್ಕಾಮ ಉಚ್ಯತೇ ।
ಅ ಇತ್ಯುಕ್ತಃ ಪರೋ ವಿಷ್ಣುಸ್ತತ್ಕಾಮೋಽಕಾಮ ಈರಿತಃ ।
ತಥಾಽಕಾಮಯಮಾನಃ ಸ ಯೋಗ್ಯಕಾಮಸ್ಯ ಚಾಪಿ ತು ।
ಕಾದಾಚಿತ್ಕಸಮುದ್ಭೂತೇರ್ಭಗವತ್ಕಾಮನಾಂ ವಿನಾ ।
ಕಾಮಿತಸ್ಯಾಖಿಲಸ್ಯಾಪ್ತೇಃ ಆಪ್ತಕಾಮಶ್ಚ ಮುಕ್ತಿಗಃ ।
ಚಿದಾನಂದಾತ್ಮಕಂ ರೂಪಂ ಕಾಮತ್ವೇನ ಭವಿಷ್ಯತಿ ।
ಯತಸ್ತೇನೈವಾಽತ್ಮಕಾಮ ಇತಿ ಮುಕ್ತೋಽಭಿಧೀಯತೇ ।
ಮುಕ್ತಸ್ಯ ನ ಪುನಃ ಪ್ರಾಣಾ ಉತ್ಕ್ರಾಮಂತಿ ಕದಾಚನ ।
ಜೀವೋಽಪಿ ಬ್ರಹ್ಮಶಬ್ದೋಕ್ತೋ ಜಡಾದ್ ಗುಣಬೃಹತ್ತ್ವತಃ ।
ಪ್ರಾಪ್ನೋತಿ ಪರಮಂ ಬ್ರಹ್ಮ ಪ್ರಲಯೇ ಪ್ರಲಯೇ ಸದಾ ।

ಅನ್ಯದಾ ಸ್ವೇಚ್ಛಯಾ ವಿಷ್ಣೋಃ ಸ್ವರೂಪಾದ್ ಬಹಿರೇಷ್ಯತಿ ।
ಸ್ವೇಚ್ಛಯಾಂತರ್ಬಹಿಶ್ಚೈವಂ ರಮತೇ ಮುಕ್ತ ಆತ್ಮವಾನ್ ।

ಇತ್ಯಾದಿ ಚ ।

ನ ಚಾಮುಕ್ತಸ್ಯ ಕಥಂಚಿದಾಪ್ತಕಾಮತಾ ಮುಖ್ಯತಃ ।

**ಅನುವಾದ**—ಮುಕ್ತನು ಅಯೋಗ್ಯಕಾಮನಾರಹಿತನಾದ್ದರಿಂದ ನಿಷ್ಕಾಮ ಎನಿಸುತ್ತಾನೆ. 'ಅ' ಎಂದರೆ ಸರ್ವೋತ್ತಮನಾದ ವಿಷ್ಣು. ಅವನ ಬಗ್ಗೆ ಇಚ್ಛೆ ಉಳ್ಳವನು 'ಅಕಾಮ'. ಹಾಗೆಯೇ ಯೋಗ್ಯ ಇಚ್ಛೆಯೂ ಕೂಡ ಒಮ್ಮೊಮ್ಮೆ ಮಾತ್ರ ಹುಟ್ಟುವುದರಿಂದ, ಭಗವಂತನ ಇಚ್ಛೆಯಿಲ್ಲದೆ ಅದೂ ಹುಟ್ಟದಿರುವುದರಿಂದ ಮುಕ್ತರು ಅಕಾಮಯಮಾನರೆನಿಸಿದ್ದಾರೆ. ಮುಕ್ತನು ತನಗೆ ಇಷ್ಟವಾದುದೆಲ್ಲವನ್ನೂ ಪಡೆಯುವುದರಿಂದ ಆಪ್ತಕಾಮ. ಮುಕ್ತರಿಗೆ ತಮ್ಮ ಸ್ವರೂಪವೇ ಚಿದಾನಂದಾತ್ಮಕವಾದ್ದರಿಂದ ಅವರಿಗೆ ಅದು ಕಾಮ್ಯವಾಗಿದೆ. ಆದ್ದರಿಂದ ಅವರು ಆತ್ಮಕಾಮರು. ಮುಕ್ತರ ಪ್ರಾಣಗಳು ಎಂದೂ ಶರೀರದಿಂದ ಹೊರ ಹೋಗುವುದಿಲ್ಲ. ಜೀವನು ಕೂಡ ಜಡಕ್ಕಿಂತ ಹೆಚ್ಚು ಗುಣಗಳಿಂದ ಪೂರ್ಣನಾಗಿರುವುದರಿಂದ ಬ್ರಹ್ಮ ಎನಿಸುತ್ತಾನೆ. ಜೀವನಾಗಿದ್ದೇ ಪ್ರತಿಪ್ರಲಯದಲ್ಲೂ ಪರಬ್ರಹ್ಮನನ್ನು ಹೊಂದುತ್ತಾನೆ. ಬೇರೆ ಕಾಲದಲ್ಲಿ ಸ್ವೇಚ್ಛೆಯಿಂದ ವಿಷ್ಣುವಿನಿಂದ ಹೊರಬರುತ್ತಾನೆ. ಅಥವಾ ಸ್ವೇಚ್ಛೆಯಿಂದಲೇ ಒಳಗೆ ಅಥವಾ ಹೊರಗೆ ವಿಹರಿಸುತ್ತಾನೆ ಎಂದೂ ಹೇಳಿದೆ. ಆಪ್ತಕಾಮ ಶಬ್ದದ ಮುಖ್ಯಾರ್ಥವು ಅಮುಕ್ತನಿಗೆ ಯಾವುದೇ ರೀತಿಯಿಂದಲೂ ಅನ್ವಯವಾಗುವುದಿಲ್ಲ.

**ಬ್ರಹ್ಮೈವ ಸನ್ ಬ್ರಹ್ಮಾಪ್ಯೇತಿ ಎಂಬ ಶ್ರುತ್ಯರ್ಥ :**

**ಭಾಷ್ಯ**-ಬ್ರಹ್ಮಾಪ್ಯೇತೀತಿ ವಚನಾತ್ ಪೂರ್ವಬ್ರಹ್ಮಶಬ್ದೋ ಜೀವವಾಚ್ಯೇವ । ಯದ್ಯಜ್ಞಾನನಾಶಾತ್ ಪರಿಜ್ಞಾನಮಾತ್ರಂ ತದಾ ಸ್ವಸ್ಯ ಬ್ರಹ್ಮತಾಂ ವಿಜಾನಾತೀತ್ಯೇವ ಸ್ಯಾತ್ । ನ ತು ಬ್ರಹ್ಮಾಪ್ಯೇತೀತಿ । ನ ಹಿ ರಾಜಪುತ್ರಃ ಪೂರ್ವಮಾತ್ಮಾನಮಜಾನನ್ ಪಶ್ಚಾದ್ ರಾಜಪುತ್ರ ಇತಿ ವಿಜ್ಞಾಯ ರಾಜಪುತ್ರಮಪ್ಯೇತೀತ್ಯುಚ್ಯತೇ । ಕಿಂ ತು ರಾಜಪುತ್ರತ್ವೇನ ಆತ್ಮಾನಂ ವ್ಯಜಾನಾದಿತ್ಯೇವೋಚ್ಯತೇ । ವಿಸ್ಮೃತ ಕಂಠಮಣಿರಪಿ ವಿಜ್ಞಾತ ಇತ್ಯೇವೋಚ್ಯತೇ । ನ ತು ಪ್ರಾಪ್ತ ಇತಿ । ಅತಃ ಪೂರ್ವ ಬ್ರಹ್ಮಶಬ್ದೋ ಜೀವವಾಚ್ಯೇವ ।

**ಅನುವಾದ**—ಮಂತ್ರದಲ್ಲಿ ಬ್ರಹ್ಮಾಪ್ಯೇತಿ ಎಂಬ ವಚನವಿರುವುದರಿಂದ 'ಬ್ರಹ್ಮೈವ ಸನ್' ಎಂಬಲ್ಲಿ ಬರುವ ಮೊದಲನೆಯ ಬ್ರಹ್ಮಶಬ್ದಕ್ಕೆ ಜೀವ ಎಂದೇ

ಅರ್ಥ. ಅಜ್ಞಾನ ನಾಶದಿಂದ 'ತಾನು ಬ್ರಹ್ಮ' ಎಂಬ ಪರಿಜ್ಞಾನ ಉಂಟಾಗುವುದು ಮಾತ್ರವೆ ಜೀವನ ಬ್ರಹ್ಮಪ್ರಾಪ್ತಿ ಎಂದು 'ಬ್ರಹ್ಮೈವ ಸನ್ ಬ್ರಹ್ಮಾಪ್ಯೇತಿ' ಎಂಬ ಮಾತಿನ ಅರ್ಥವಾಗಿದ್ದರೆ ಆಗ 'ಸ್ವಸ್ಯ ಬ್ರಹ್ಮತಾಂ ವಿಜಾನಾತಿ', 'ತನ್ನ ಬ್ರಹ್ಮತ್ವವನ್ನು ತಿಳಿಯುತ್ತಾನೆ' ಎಂದೇ ವಾಕ್ಯವು ಇರಬೇಕಾಗುತ್ತಿತ್ತು. 'ಬ್ರಹ್ಮಾಪ್ಯೇತಿ' 'ಬ್ರಹ್ಮನನ್ನು ಹೊಂದುತ್ತಾನೆ' ಎಂದಲ್ಲ. ಮೊದಲು ತನ್ನನ್ನು ರಾಜಪುತ್ರ ಎಂದು ತಿಳಿಯದಿದ್ದ ರಾಜಪುತ್ರನು ಅನಂತರ ಹಾಗೆ ತಿಳಿದುಕೊಂಡರೆ 'ರಾಜಪುತ್ರಮಪ್ಯೇತಿ, ರಾಜಪುತ್ರ ನನ್ನು ಹೊಂದುತ್ತಾನೆ' ಎಂದು ಯಾರೂ ಹೇಳುವುದಿಲ್ಲ. ಆದರೆ 'ತನ್ನನ್ನು ರಾಜ ಪುತ್ರ ಎಂದು ತಿಳಿದುಕೊಂಡನು' ಎಂದೇ ಹೇಳುತ್ತಾರೆ. ತನ್ನ ಕುತ್ತಿಗೆಯಲ್ಲಿ ಮಣಿ ಇರುವುದನ್ನು ಮರೆತಿದ್ದವನು ಪುನಃ ತಿಳಿದಾಗ 'ಕಂಠಮಣಿ ನೆನಪಾಯಿತು' ಎಂದೇ ಹೇಳುತ್ತಾನೆ, 'ಸಿಕ್ಕಿತು' ಎನ್ನುವುದಿಲ್ಲ. ಆದ್ದರಿಂದ ಮೊದಲನೆಯ ಬ್ರಹ್ಮಶಬ್ದಕ್ಕೆ ಜೀವ ಎಂದೇ ಅರ್ಥ.

**ಮುಕ್ತಿ ಮರಣರಹಿತ :**

**ಉಪನಿಷತ್—ತದೇಷ ಶ್ಲೋಕೋ ಭವತಿ—**

**ಯದಾ ಸರ್ವೇ ಪ್ರಮುಚ್ಯಂತೇ ಕಾಮಾ ಯೇऽಸ್ಯ ಹೃದಿ ಶ್ರಿತಾಃ ।**
**ಅಥ ಮರ್ತ್ಯೋऽಮೃತೋ ಭವತ್ಯತ್ರ ಬ್ರಹ್ಮ ಸಮಶ್ನುತೇ । ಇತಿ ।**

**ತದ್ಯಥಾऽಹಿನಿರ್ಲ್ವಯನೀ ವಲ್ಮೀಕೇ ಮೃತಾ ಪ್ರತ್ಯಸ್ತಾ ಶಯೀತೈವ-ಮೇವೇದಂ ಶರೀರಂ ಶೇತೇ । ಅಥಾಯಮಶರೀರಃ। ಅಮೃತಃ ಪ್ರಾಣೋ ಬ್ರಹ್ಮೈವ ತೇಜ ಏವ । ಸೋऽಹಂ ಭಗವತೇ ಸಹಸ್ರಂ . ದದಾಮೀತಿ ಹೋವಾಚ ಜನಕೋ ವೈದೇಹಃ ।**

ಮುಕ್ತನಿಗೆ ಮರಣವಿಲ್ಲ ಎಂಬ ವಿಷಯದಲ್ಲಿ ಈ ಶ್ಲೋಕದ ಸಮ್ಮತಿ ಇದೆ– 'ಈ ಜೀವಾತ್ಮನ ಅಂತಃಕರಣದಲ್ಲಿರುವ ಕಾಮನೆಗಳೆಲ್ಲವೂ ಯಾವಾಗ ಪೂರ್ಣವಾಗಿ ನಾಶವಾಗುತ್ತವೋ ಆಗ ಅವನು ಮುಕ್ತನಾಗುತ್ತಾನೆ. ಮೊದಲು ಮರಣವುಳ್ಳವ ನಾಗಿದ್ದವನು ಮುಕ್ತಿಯ ನಂತರ ಮರಣರಹಿತನಾಗುತ್ತಾನೆ. ಪ್ರಲಯದಲ್ಲಿ ಬ್ರಹ್ಮ ನನ್ನು ಹೊಂದುತ್ತಾನೆ'. ಹಾವಿನ ಪೊರೆಯು ಹುತ್ತದಲ್ಲಿ ಪರಿತ್ಯಕ್ತವಾಗಿ ಬಿದ್ದಿರು ವಂತೆ ಈ ಶರೀರವು ಜ್ಞಾನಿಯಿಂದ ಪರಿತ್ಯಕ್ತವಾಗಿ ಬಿದ್ದಿರುತ್ತದೆ. ಅನಂತರವೇ ಜ್ಞಾನಿಯು ಅಶರೀರನಾಗುತ್ತಾನೆ. ಪ್ರಾಣನಾಮಕನಾದ ಪರಬ್ರಹ್ಮ ಮತ್ತು ಲಕ್ಷ್ಮೀದೇವಿ ಈ ಇಬ್ಬರೂ ಎಂದೂ ಮರಣವಿಲ್ಲದವರು, ನಿತ್ಯಮುಕ್ತರು. ಹೀಗೆ ಶ್ರವಣಮಾಡಿದ ವಿದೇಹರಾಜ ಜನಕನು ಪೂಜ್ಯರಾದ ಯಾಜ್ಞವಲ್ಕ್ಯರಿಗೆ ಸಾವಿರ ಗೋವುಗಳ ಗುರುದಕ್ಷಿಣೆಯನ್ನು ಕೊಡುವುದಾಗಿ ಹೇಳಿದನು.

**ಭಾಷ್ಯ**—'ಅಥ ಮರ್ತ್ಯೋಽಮೃತೋ ಭವತಿ' ಅಥ ಮುಕ್ತ್ಯನಂತರಂ, ನ ಕದಾಚಿನ್ಮೃತಿರಸ್ಯ ಭವಿಷ್ಯತೀತ್ಯರ್ಥಃ । ಮುಕ್ತ ಏವ ಪರೇ ಬ್ರಹ್ಮಣೀಚ್ಛಯಾ ಪ್ರವಿಶತಿ ನಿಸ್ಸರತಿ ಚ । ದರ್ಶನಾದೀನ್ ಬ್ರಹ್ಮಣೋ ಭೋಗಾಂಶ್ಚ ಕರೋತಿ । ಸ್ವರೂಪಭೂತಾಃ ಕಾಮಾ ಮುಕ್ತಾನಾಂ ಭವಂತೀತ್ಯತೋ 'ಹೃದಿ ಶ್ರಿತಾ' ಇತಿ ವಿಶೇಷಣಮ್ । ಹೃದಯಸ್ಯೈವ ಮೋಚನಾತ್ ತತ್ಸ್ಥಾಃ ಕಾಮಾ ಮುಕ್ತಾನಾಂ ಅಪಗಚ್ಛಂತೀತಿ ಯುಕ್ತಮೇವ । ನ ಹ್ಯಮುಕ್ತಸ್ಯ ಕದಾಚಿತ್ ಸರ್ವೇ ಕಾಮಾ ಮುಚ್ಯಂತೇ । ಸುಪ್ತ್ಯಾದಾವಪ್ಯಭಿಭವ ಏವ । ವಾಸನಾಯಾ ವಿದ್ಯಮಾನತ್ವಾತ್ । ವಾಸನಾಯಾ ಹಿ ಪುನರುದ್ಭವಃ ।

**ಅನುವಾದ**—'ಅಥ ಮರ್ತ್ಯೋಽಮೃತೋ ಭವತಿ' ಎಂದರೆ ಮುಕ್ತಿಯ ನಂತರ ಜೀವಾತ್ಮನಿಗೆ ಎಂದೂ ಮರಣ ಉಂಟಾಗುವುದಿಲ್ಲ ಎಂದು ಅರ್ಥ. ಮುಕ್ತನು ಮಾತ್ರ ಪರಬ್ರಹ್ಮನಲ್ಲಿ ಸ್ವೇಚ್ಛೆಯಿಂದ ಪ್ರವೇಶಿಸುತ್ತಾನೆ ಮತ್ತು ಹೊರಬರುತ್ತಾನೆ. ಬ್ರಹ್ಮನ ದರ್ಶನ ಮೊದಲಾದ ಭೋಗಗಳನ್ನೂ ಅನುಭವಿಸುತ್ತಾನೆ. ಮುಕ್ತರಿಗೆ ತಮ್ಮ ಸ್ವರೂಪಭೂತವಾದ ಕಾಮನೆಗಳು ಇದ್ದೇ ಇರುತ್ತವೆ. ಆದ್ದರಿಂದ ಮಂತ್ರದಲ್ಲಿ 'ಹೃದಿ ಶ್ರಿತಾಃ' 'ಅಂತಃಕರಣದಲ್ಲಿರುವ ಕಾಮನೆಗಳು' ಎಂದು ವಿಶೇಷಣಕೊಟ್ಟು ಹೇಳಿದೆ. ಅಂತಃಕರಣವೇ ನಾಶವಾಗುವುದರಿಂದ ಅದರಲ್ಲಿರುವ ಕಾಮನೆಗಳೂ ನಾಶವಾಗುತ್ತವೆ ಎನ್ನುವುದು ಯುಕ್ತವೇ ಆಗಿದೆ. ಅಮುಕ್ತರ ಸರ್ವಕಾಮನೆಗಳೂ ಯಾವ ಕಾಲದಲ್ಲೂ ನಿಃಶೇಷವಾಗಿ ನಾಶವಾಗುವುದಿಲ್ಲ. ಗಾಢನಿದ್ರಾವಸ್ಥೆಯಲ್ಲಿ ಕೂಡ ಅವುಗಳು ಕೇವಲ ಅವ್ಯಕ್ತವಾಗಿರುತ್ತವೆ, ನಾಶವಾಗಿರುವುದಿಲ್ಲ. ಸೂಕ್ಷ್ಮರೂಪದಿಂದ ಇದ್ದೇ ಇರುವುದರಿಂದ ಆ ಸೂಕ್ಷ್ಮರೂಪದಿಂದಲೇ ಕಾಮನೆಗಳು ಪುನಃ ಉದ್ಭವವಾಗುತ್ತವೆ. ಆದ್ದರಿಂದ ಅಂತಃಕರಣದಲ್ಲಿರುವ ಕಾಮನೆಗಳನ್ನು ನಿಃಶೇಷವಾಗಿ ನಾಶಮಾಡಿಕೊಂಡಿರುವ ಮುಕ್ತನೆ 'ಅಕಾಮಯಮಾನ' ಹೊರತು ಅಮುಕ್ತನಲ್ಲ.

**ಭಾಷ್ಯ**—ಯಾವದ್ ವಿಮುಚ್ಯೇತ್ ಪುರುಷಸ್ತಾವತ್ ಕಾಮಾ ಹೃದಿ ಶ್ರಿತಾಃ ।
ಚಿತ್ತಾಭಾವಾದ್ ವಿಮುಕ್ತಸ್ಯ ಸ್ಯುಃ ಕಾಮಾಸ್ತದ್ಗತಾಃ ಕುತಃ ।
ಸ್ವರೂಪಭೂತ ಚಿತ್ತೇನ ಕಾಮಾದ್ಯಾಃ ಸ್ಯುಃ ಸುಖಾತ್ಮಕಾಃ ।
ದುಃಖಾತ್ಮಕಾಃ ಪ್ರಾಕೃತಾ ವಾ ಮುಕ್ತಾನಾಂ ನ ಕಥಂಚನ ।
ಇತಿ ಬ್ರಹ್ಮತರ್ಕೇ ।

**ಅನುವಾದ**—ಜೀವಾತ್ಮನು ಮುಕ್ತಿ ಹೊಂದುವವರೆಗೆ ಅವನ ಅಂತಃಕರಣದಲ್ಲಿ

ಕಾಮನೆಗಳಿರುತ್ತವೆ. ಮುಕ್ತನಿಗೆ ಅಂತಃಕರಣವಿಲ್ಲದಿರುವುದರಿಂದ ಅಂತಃಕರಣದಲ್ಲಿರುವ ಕಾಮನೆಗಳು ಅವರಿಗೆ ಇರಲು ಹೇಗೆ ಸಾಧ್ಯ? ತನ್ನ ಸ್ವರೂಪಭೂತವಾದ ಮನಸ್ಸಿನಿಂದ ಸುಖಸ್ವರೂಪದ ಕಾಮನೆಗಳು ಮುಕ್ತನಿಗೆ ಉದಿಸುತ್ತವೆ. ಹೊರತು, ದುಃಖಾತ್ಮಕವಾದ ಮತ್ತು ಪ್ರಾಕೃತವಾದ ಕಾಮನೆಗಳು ಮುಕ್ತನಿಗೆ ಸರ್ವಥಾ ಇರುವುದಿಲ್ಲ ಎಂದು ಬ್ರಹ್ಮತರ್ಕದಲ್ಲಿ ಹೇಳಲಾಗಿದೆ.

**ಭಾಷ್ಯ—ಅಯಂ ಜೀವಃ ಅಥ ಮುಕ್ತ್ಯನಂತರಮೇವಾಶರೀರೋ ಭವತಿ । ಅಮೃತಃ ಕದಾऽಪಿ ನ ಮೃತಃ ಪ್ರಾಣಾಖ್ಯಂ ಪರಬ್ರಹ್ಮೈವ । 'ಕತಮ ಏಕೋ ದೇವ ಇತಿ । ಪ್ರಾಣ ಇತಿ । ಸ ಬ್ರಹ್ಮ ತ್ಯದಿತ್ಯಾಚಕ್ಷತೇ' ಇತ್ಯಾದಿ ಶ್ರುತೇಃ । ತೇಜ ಏವ ಚ । ತೇಜ ಇತಿ ಶ್ರೀಃ ।**

**ಅನುವಾದ**—ಅಯಂ– ಜೀವನು, ಅಥ– ಮುಕ್ತಿ ಹೊಂದಿದ ಅನಂತರವೇ, ಅಶರೀರಃ– ಶರೀರ ರಹಿತನಾಗುತ್ತಾನೆ. ಅಮೃತಃ-ಎಂದೂ ಮರಣ ಹೊಂದದವನು ಪ್ರಾಣನಾಮಕನಾದ ಪರಬ್ರಹ್ಮನೇ. 'ಸರ್ವೋತ್ತಮದೇವತೆ ಯಾರು ಎಂದರೆ ಪ್ರಾಣನೆ. ಅವನನ್ನೇ ಬ್ರಹ್ಮ ಎನ್ನುತ್ತಾರೆ' ಎಂದು ಮೊದಲಾದ ಶ್ರುತಿಗಳಿಂದ ಪ್ರಾಣ ಎಂದರೆ ಪರಬ್ರಹ್ಮ ಎಂದು ಸಿದ್ಧವಾಗುತ್ತದೆ. 'ತೇಜ ಏವ' ಎಂದರೆ ಪರಮಾತ್ಮನನ್ನು ಬಿಟ್ಟು ಉಳಿದವರಲ್ಲಿ ಲಕ್ಷ್ಮೀದೇವಿ ಮಾತ್ರ ಎಂದೂ ಮರಣ ಹೊಂದದವಳು ಎಂದರ್ಥ. ತೇಜಸ್ಸೆಂದರೆ ಲಕ್ಷ್ಮೀದೇವಿ.

**ಭಾಷ್ಯ—ಅನ್ಯೇಷಾಮಮೃತತ್ವಂ ತು ಭವೇದ್ ವಿಷ್ಣೋಃ ಪ್ರಸಾದತಃ ।**
**ನಿತ್ಯಾಮೃತಃ ಸ ಭಗವಾನ್ ಶ್ರೀಶ್ಚ ನಾನ್ಯಃ ಕಥಂಚನ ।**
**ಇತಿ ನಾರದೀಯೇ ।**

**ಪ್ರಾಣಸ್ತು ಭಗವಾನ್ ವಿಷ್ಣುಃ ಸರ್ವನೇತೃತ್ವತೋ ವಿಭುಃ ।**
**ತೇಜಸ್ತು ಸರ್ವತೇಜಸ್ತ್ವಾತ್ ಶ್ರೀರೇವ ಸಮುದಾಹೃತಾ । ಇತಿ ಚ ।**

**ಅನುವಾದ**—ವಿಷ್ಣುವನ್ನು ಬಿಟ್ಟು ಎಲ್ಲರಿಗೂ ಅಮೃತತ್ವವು ವಿಷ್ಣುವಿನ ಪ್ರಸಾದದಿಂದ ಲಭಿಸುತ್ತದೆ. ಭಗವಾನ್ ವಿಷ್ಣು ಮತ್ತು ಲಕ್ಷ್ಮೀದೇವಿ ಈ ಇಬ್ಬರು ಮಾತ್ರ ನಿತ್ಯ ಅಮೃತರು. ಬೇರೆ ಯಾರೂ ಯಾವುದೇ ರೀತಿಯಿಂದ ನಿತ್ಯ ಅಮೃತರಲ್ಲ ಎಂದು ನಾರದೀಯ ಪುರಾಣದಲ್ಲಿ ಹೇಳಿದೆ. ಪ್ರಾಣ ಎಂದರೆ ಮುಖ್ಯವಾಗಿ ವಿಭುವಾದ ಭಗವಾನ್ ವಿಷ್ಣು. ಏಕೆಂದರೆ ಅವನು ಎಲ್ಲರನ್ನೂ ಪ್ರೇರಿಸುವವನು. ತೇಜಸ್ ಎಂದರೆ ಮುಖ್ಯವಾಗಿ ಲಕ್ಷ್ಮೀದೇವಿ. ಏಕೆಂದರೆ ಅವಳು ಎಲ್ಲರ ತೇಜಸ್ಸಿಗೂ ಮೂಲಕಾರಣವಾದ ತೇಜೋರೂಪಳು ಎಂದೂ ನಾರದೀಯ ಪುರಾಣದಲ್ಲಿ ಹೇಳಿದೆ.

**ಪರಮಾತ್ಮನೇ ಮುಕ್ತಿದಾಯಕ :**

**ಉಪನಿಷತ್—ತದೇತೇ ಶ್ಲೋಕಾ ಭವಂತಿ—**

**ಅಣುಃ ಪಂಥಾ ವಿತತಃ ಪುರಾಣೋ**
**ಮಾಂ ಸ್ಪೃಷ್ಟೋಽನುವಿತ್ತೋ ಮಯೈವ ।**
**ತೇನ ಧೀರಾ ಅಪಿಯಂತಿ ಬ್ರಹ್ಮವಿದಃ**
**ಸ್ವರ್ಗಂ ಲೋಕಮಿತ ಊರ್ಧ್ವೋ ವಿಮುಕ್ತಾಃ ।**

ಭಗವಂತನು ಮೋಕ್ಷವನ್ನು ಕೊಡುವವನು ಎಂದು ಮುಂತಾದ ವಿಷಯದಲ್ಲಿ ಈ ಶ್ಲೋಕಗಳು ಪ್ರಮಾಣವಾಗಿವೆ– ಪರಮಾತ್ಮ ಅಣು. ಅನ್ಯರಿಗೆ ಸುಖವನ್ನು ಹೊಂದಲು ದಾರಿ. ವ್ಯಾಪ್ತನೂ, ಅನಾದಿಯೂ, ಲಕ್ಷ್ಮಿಗೆ ಆಶ್ರಯನೂ ಆಗಿದ್ದಾನೆ. ಅವನನ್ನು ಲಕ್ಷ್ಮಿಯಿಂದ ಮಾತ್ರ ತಿಳಿಯಲು ಸಾಧ್ಯ. ಸರ್ವೋತ್ತಮನಾದ ಆ ಪರಮಾತ್ಮನ ಅನುಗ್ರಹದಿಂದ ಬ್ರಹ್ಮಜ್ಞಾನಿಗಳು ಸಂಸಾರದಿಂದ ವಿಮುಕ್ತರಾಗಿ ಸ್ವರೂಪಸುಖಜ್ಞಾನಗಳ ಅಭಿವ್ಯಕ್ತಿಸ್ಥಾನವಾದ ವೈಕುಂಠಾದಿ ಲೋಕವನ್ನು ಹೊಂದುತ್ತಾರೆ.

**ಭಾಷ್ಯ—ತತ್ಪ್ರಾಪ್ತೇಃ ಸುಖಹೇತುತ್ವಾತ್ ಪಂಥಾ ಇತಿ ಹರಿಃ ಶ್ರುತಃ ।**
**ಅಣುಶ್ಚ ವಿತತಶ್ಚಾಸೌ ಯತೋಽಂತರ್ಬಹಿರೇವ ಚ ।**
**ಶ್ರಿಯಾ ಸ್ಪೃಷ್ಟಃ ಶ್ರೀಪತಿತ್ವಾದನುವಿತ್ತಸ್ತಯೈವ ಚ ।**
**ತಸ್ಯ ಪ್ರಸಾದಾತ್ ಸಂಯಾಂತಿ ತಲ್ಲೋಕಂ ಸರ್ವಮೋಕ್ಷಿಣಃ ।**
**ಊರ್ಧ್ವಃ ಸ ಭಗವಾನ್ ಸರ್ವವಿಶಿಷ್ಟೋ ಯತ್ ಸದೈವ ಹಿ ।**

**ಅನುವಾದ**—ಶ್ರೀ ಹರಿಯ ಪ್ರಾಪ್ತಿಯು ಸುಖಕ್ಕೆ ಕಾರಣರೂಪವಾದ್ದರಿಂದ ಹರಿಯು ಪಂಥಾ ಎಂದು ಪ್ರಸಿದ್ಧ. ಅವನು ಎಲ್ಲಕ್ಕೂ ಒಳಗೆ ಇರುವುದರಿಂದ ಅಣು. ಹೊರಗೆ ಇರುವುದರಿಂದ ವಿತತ. ಅವನು ಲಕ್ಷ್ಮೀಪತಿಯಾದುದರಿಂದ ಅವಳಿಂದ ಆಶ್ರಿತ. ಅವಳಿಂದಲೇ ಪೂರ್ಣವಾಗಿ ತಿಳಿಯಲ್ಪಟ್ಟವನು. ಮುಕ್ತರೆಲ್ಲರೂ ಅವನ ಅನುಗ್ರಹದಿಂದಲೇ ಅವನ ಲೋಕಕ್ಕೆ ಹೋಗುತ್ತಾರೆ. ಆ ಭಗವಂತನು ಯಾವಾಗಲೂ ಎಲ್ಲರಿಗಿಂತಲೂ ಉತ್ತಮನಾದ್ದರಿಂದ ಊರ್ಧ್ವನೆನಿಸಿದ್ದಾನೆ.

**ಉಪನಿಷತ್—ತಸ್ಮಿಂಶ್ಶುಕ್ಲಮುತ ನೀಲಮಾಹುಃ**
**ಪಿಂಗಲಂ ಹರಿತಂ ಲೋಹಿತಂ ಚ ।**
**ಏಷ ಪಂಥಾ ಬ್ರಹ್ಮಣಾ ಹಾನುವಿತ್ತ–**
**ಸ್ತೇನೈತಿ ಬ್ರಹ್ಮವಿತ್ ಪುಣ್ಯಕೃತ್ ತೈಜಸಶ್ಚ ।**

ಆ ಹರಿಗೆ ಶುಕ್ಲವರ್ಣದ ವಾಸುದೇವ, ನೀಲವರ್ಣದ ಅನಿರುದ್ಧ, ಹಳದಿಗೆಂಪು ಬಣ್ಣದ ಸಂಕರ್ಷಣ, ಹಸಿರು ಬಣ್ಣದ ಪ್ರದ್ಯುಮ್ನ ಮತ್ತು ಕೆಂಪು ಬಣ್ಣದ ನಾರಾಯಣ ಎಂದು ಐದು ರೂಪಗಳು ಇವೆ ಎಂದು ಹೇಳುತ್ತಾರೆ. ಈ ಪಂಚರೂಪನಾದ ಹರಿಯು ಜೀವರಿಗೆ ಸುಖಕಾರಣವಾದ ತನ್ನ ಪ್ರಾಪ್ತಿಗೆ ತಾನೇ ದಾರಿಯಾದ್ದರಿಂದ ಪಂಥಾ ಎಂದು ಪ್ರಸಿದ್ಧ, ಚತುರ್ಮುಖ ಬ್ರಹ್ಮನಿಂದ ತಿಳಿಯಲ್ಪಟ್ಟವನು. ಪರಬ್ರಹ್ಮನನ್ನೂ ಲಕ್ಷ್ಮಿಯನ್ನೂ ತಿಳಿದು ಪುಣ್ಯಕರ್ಮವನ್ನು ಮಾಡುವ ಜೀವನು ಭಗವಂತನ ಅನುಗ್ರಹದಿಂದಲೇ ಸ್ವರೂಪಜ್ಞಾನ ಸುಖಗಳ ಅಭಿವ್ಯಕ್ತಿಸ್ಥಾನವಾದ ಲೋಕವನ್ನು ಹೊಂದುತ್ತಾನೆ.

**ಭಾಷ್ಯ—ರೂಪಮಾಹುಃ ಪಂಚವಿಧಂ ತಸ್ಯ ವಿಷ್ಣೋರ್ಮಹಾತ್ಮನಃ ।**
**ಶುಕ್ಲಂ ತು ವಾಸುದೇವಾಖ್ಯಮನಿರುದ್ಧಂ ಸುನೀಲಕಮ್ ।**
**ಸಾಂಕರ್ಷಣಂ ಪಿಂಗಲಂ ಚ ಪ್ರಾದ್ಯುಮ್ನಂ ಹರಿತಂ ಸ್ಮೃತಮ್ ।**
**ನಾರಾಯಣಂ ಲೋಹಿತಂ ಸ್ಯಾತ್ ಪಂಚರೂಪಾಣ್ಯಜೇ ಹರೌ ।**
**ಪಂಚಭೇದವಿಭಿನ್ನೋ ಯಸ್ತ್ವಭಿನ್ನೋಽಪಿ ಸ್ವರೂಪತಃ ।**
**ಸ ಪಂಥಾ ಬ್ರಹ್ಮಣಾ ಜ್ಞಾತಃ ಪದ್ಮಜೇನೈವ ಸಂತತಮ್ ।**
**ಪರಬ್ರಹ್ಮಸ್ವರೂಪಜ್ಞೋ ಮಹಾತೇಜಾಃಶ್ರಿಯಸ್ತಥಾ ।**
**ಸಮ್ಯಕ್ ಸ್ವರೂಪವಿಜ್ಞಾನಾತ್ ತೈಜಸತ್ವೇನ ಕೀರ್ತಿತಃ ।**
**ಭಗವತ್ಕರ್ಮಕರ್ತೃತ್ವಾತ್ ಪುಣ್ಯಕೃಚ್ಚಾಭಿಧೀಯತೇ ।**
**ಏವಂವಿಧೋಽಪಿ ತಸ್ಯೈವ ಪ್ರಸಾದಾದ್ ಯಾತಿ ತಾಂ ಗತಿಂ ।**
**ಅತಃ ಪಂಥಾಃ ಸಮುದ್ದಿಷ್ಟೋ ಭಗವಾನ್ ಕೇಶವಃ ಸ್ವಯಮ್ ।**
**ಸ್ವಗತಾಖಿಲಭೇದೇನ ವಿಹೀನೋಽಪಿ ಸ ಸರ್ವದಾ ।**
**ಸರ್ವೇಷಾಂ ವ್ಯವಹಾರಾಣಾಂ ಭೇದೋತ್ಥಾನಾಂ ಸ ಈಶ್ವರಃ ।**
**ಅಭಿನ್ನೋಽಪಿ ಹ್ಯತೋ ಭಿನ್ನಃ ಪಂಚಭೇದಾದಿನಾಮೃಷಾ ।**

**ಅನುವಾದ**—ಶುಕ್ಲವರ್ಣದ ವಾಸುದೇವ, ನೀಲವರ್ಣದ ಅನಿರುದ್ಧ, ಪಿಂಗಲ ವರ್ಣದ ಸಂಕರ್ಷಣ, ಹರಿತವರ್ಣದ ಪ್ರದ್ಯುಮ್ನ, ಲೋಹಿತ ವರ್ಣದ ನಾರಾಯಣ ಎಂದು ಶ್ರೀಹರಿಗೆ ಐದು ರೂಪಗಳು ಎನ್ನುತ್ತಾರೆ ಜ್ಞಾನಿಗಳು. ಸ್ವರೂಪತಃ ಅಭಿನ್ನನಾದರೂ ಪಂಚರೂಪನಾಗಿರುವ ಆ ವಿಷ್ಣುವು ಪಂಥಾ ಎನಿಸಿದ್ದಾನೆ. ನಾಭಿಕಮಲದಿಂದ ಹುಟ್ಟಿದ ಬ್ರಹ್ಮನಿಂದ ಯಾವಾಗಲೂ ತಿಳಿಯಲ್ಪಟ್ಟಿದ್ದಾನೆ. ಜ್ಞಾನಿಯು ಪರಬ್ರಹ್ಮಸ್ವರೂಪವನ್ನು ತಿಳಿಯುವುದರಿಂದ ಬ್ರಹ್ಮವಿತ್ ಎನಿಸುತ್ತಾನೆ. ಮಹಾ

ತೇಜೋ ರೂಪಳಾದ ಲಕ್ಷ್ಮೀದೇವಿಯನ್ನು ಚೆನ್ನಾಗಿ ತಿಳಿಯುವುದರಿಂದ ತೈಜಸನೆನಿಸುತ್ತಾನೆ. ಶ್ರೀಹರಿಗೆ ಪ್ರೀತಿಯಾಗುವಂತಹ ಕರ್ಮ ಮಾಡುವುದರಿಂದ ಪುಣ್ಯಕೃತ್ ಎನಿಸುತ್ತಾನೆ. ಇಂತಹ ಸಾಧಕನೂ ಕೂಡ ಹರಿಯ ಅನುಗ್ರಹದಿಂದಲೇ ಮುಕ್ತಿಯನ್ನು ಹೊಂದುತ್ತಾನೆ. ಆದ್ದರಿಂದಲೇ ಭಗವಾನ್ ಕೇಶವನು ಮುಖ್ಯವೃತ್ತಿಯಿಂದ ಪಂಥಾ ಎನಿಸಿದ್ದಾನೆ. ಅವನು ತನ್ನಲ್ಲಿರುವ ಗುಣ ರೂಪ ಅವಯವ ಮೊದಲಾದವುಗಳಿಂದ ಭಿನ್ನನಲ್ಲದಿದ್ದರೂ ಭೇದದಿಂದ ಉಂಟಾಗುವ ಸಕಲ ವ್ಯವಹಾರಗಳನ್ನೂ ನಿರ್ವಹಿಸಲು ಸಮರ್ಥನಾಗಿದ್ದಾನೆ. ಆದ್ದರಿಂದಲೇ ಸ್ವರೂಪತಃ ಅಭಿನ್ನನಾಗಿದ್ದರೂ ಪಂಚರೂಪನೆನಿಸಿದ್ದಾನೆ. ಇದು ಸತ್ಯ.

**ಮಿಥ್ಯಾಜ್ಞಾನವನ್ನು ನಿಂದಿಸಬೇಕು :**

**ಉಪನಿಷತ್**—**ಅಂಧಂತಮಃ ಪ್ರವಿಶಂತಿ ಯೇಽವಿದ್ಯಾಮುಪಾಸತೇ ।**
**ತತೋ ಭೂಯ ಇವ ತೇ ತಮೋ ಯ ಉ ವಿದ್ಯಾಯಾಂ ರತಾಃ ।**

ಯಾರು ತಪ್ಪಾಗಿ ತಿಳಿದು ಉಪಾಸನೆ ಮಾಡುತ್ತಾರೋ ಅವರು ಅಂಧಂತಮಸ್ಸಿಗೆ ಹೋಗುತ್ತಾರೆ. ಆದರೆ ಯಾರು ತತ್ತ್ವಜ್ಞಾನದಲ್ಲಿ ಮಾತ್ರ ನಿರತರಾಗಿ ಮಿಥ್ಯಾ ಜ್ಞಾನದ ಖಂಡನೆಯನ್ನು ಮಾಡುವುದಿಲ್ಲವೋ ಅವರು ಇನ್ನೂ ಹೆಚ್ಚು ಉಗ್ರವಾಗಿರುವ ತಮಸ್ಸಿಗೆ ಹೋಗುತ್ತಾರೆ.

**ಭಾಷ್ಯ**—**ಅನ್ಯಥೋಪಾಸಕಾ ಯೇಽಸ್ಯ ತೇ ಯಾಂತಿ ಹ್ಯಧರಂ ತಮಃ ।**
**ತತಃ ಕಿಂಚಿದ್ವಿಶೇಷೇಣ ದುಜ್ಞಾನಸ್ಯಾವಿನಿಂದಕಾಃ ।**
**ಸಮ್ಯಗಾಚಾರ್ಯವಚನಮವಜ್ಞಾಯ ವಿರೋಧಿನಿ ।**
**ಸತ್ತ್ವಬುದ್ಧಿಂ ಯತಃ ಕುರ್ಯುರತಸ್ತೇಽಧಿಕಪಾಪಿನಃ ।**
**ಅಪ್ರಾಪ್ತತ್ಯಾಗಿನಃ ಪ್ರಾಪ್ತನಿಷ್ಠಾಹೀನೋ ಹಿ ದೋಷವಾನ್ ।**

**ಅನುವಾದ**—ಯಾರು ಅನ್ಯಥಾ ಉಪಾಸನೆಯನ್ನು ಮಾಡುತ್ತಾರೋ ಅವರು ಕೆಳಗಿನ ತಮಸ್ಸಿಗೆ ಹೋಗುತ್ತಾರೆ. ಆದರೆ ಅನ್ಯಥಾಜ್ಞಾನದ ನಿಂದೆಯನ್ನು ಮಾಡದಿರುವವರು ಇನ್ನೂ ಹೆಚ್ಚು ಕೆಳಗಿನ ತಮಸ್ಸಿಗೆ ಹೋಗುತ್ತಾರೆ. ಏಕೆಂದರೆ ಗುರುಗಳು ಉಪದೇಶ ಮಾಡಿದರೂ ಅದನ್ನು ಅಲಕ್ಷಿಸಿ ಅದಕ್ಕೆ ವಿರುದ್ಧವಾದ ವಿಷಯವನ್ನು ಸತ್ಯ ಎಂದು ತಿಳಿಯುವುದರಿಂದ ಅವರು ಹೆಚ್ಚು ಪಾಪಿಗಳು. ಏಕೆಂದರೆ ತಿಳಿಯದೆ ಅಜ್ಞಾನ ಪ್ರಯುಕ್ತ ಒಂದು ಅವಶ್ಯಪ್ರಮೇಯವನ್ನು ಪರಿತ್ಯಾಗ ಮಾಡುವವನಿಗಿಂತ, ತಿಳಿದೂ ಪರಿತ್ಯಾಗ ಮಾಡುವವನು ಹೆಚ್ಚು ದೋಷಿಯಾಗುತ್ತಾನೆ.

### ಗುರುವಿದ್ದಾಗ ತಿಳಿಯದವ ಕೆಟ್ಟ :

**ಉಪನಿಷತ್–ಅನಂದಾ ನಾಮ ತೇ ಲೋಕಾ ಅಂಧೇನ ತಮಸಾಽಽವೃತಾಃ ।**
**ತಾಂಸ್ತೇ ಪ್ರೇತ್ಯಾಭಿಗಚ್ಛಂತಿ ಅವಿದ್ವಾಂಸೋ ಬುಧೋ ಜನಾಃ ।**

ಕಣ್ಣು ಕುರುಡಾಗಿಸುವ ಕತ್ತಲಿನಿಂದ ಆವರಿಸಲ್ಪಟ್ಟಿರುವ, ಸುಖ ಲೇಶವೂ ಇಲ್ಲದ ಲೋಕಗಳಿವೆ. ಜ್ಞಾನಿಗಳು ದೊರಕಿದಾಗ ಅವರಿಂದ ತತ್ತ್ವಜ್ಞಾನವನ್ನು ಪಡೆಯದ ಜನರು ಸತ್ತ ನಂತರ ಆ ಲೋಕಗಳಿಗೆ ಹೋಗುತ್ತಾರೆ.

**ಭಾಷ್ಯ—ನಿತ್ಯದುಃಖಸ್ವರೂಪತ್ವಾದನಂದಂ ತತ್ತಮೋ ಮತಮ್ ।**
**ಬೋಧಕೇ ವಿದ್ಯಮಾನೇಽಪಿ ಯೇ ವಿದುರ್ನ ಪರಂ ಹರಿಮ್ ।**
**ತೇಽಪಿ ಯಾಂತಿ ತಮೋ ಘೋರಂ ನಿತ್ಯೋದ್ರಿಕ್ತಾಸುಖಾತ್ಮಕಮ್ ।**
**ಇತ್ಯಾದಿ ಚ ।**

**ಅನುವಾದ**—ತಮೋ ಲೋಕವು ನಿತ್ಯದುಃಖ ಸ್ವರೂಪವಾದುದರಿಂದ ಅನಂದ ಎನಿಸುತ್ತದೆ. ಉಪದೇಶಿಸುವ ಜ್ಞಾನಿಗಳು ದೊರಕಿದರೂ ಕೂಡ ಯಾರು ಅವರಿಂದ ಸರ್ವೋತ್ತಮನಾದ ಹರಿಯನ್ನು ತಿಳಿಯುವುದಿಲ್ಲವೋ ಅವರು ನಿತ್ಯವೂ ದುಃಖವುಳ್ಳ ಘೋರವಾದ ಆ ತಮಸ್ಸಿಗೆ ಹೋಗುತ್ತಾರೆ ಎಂದು ಮುಂತಾಗಿಯೂ ಹೇಳಿದೆ.

**ಭಾಷ್ಯ—ಬುಧಃ ಸಕಾಶೇಽಪ್ಯವಿದ್ವಾಂಸ ಇತ್ಯರ್ಥಃ ।**
**ಬೋಧನಾತ್ ಜ್ಞಾನವಾನ್ ಭುತ್ ಸ್ಯಾತ್ ತತ್ಸಕಾಶಾಚ್ಚ ಯೇ ಹರಿಂ**
**ನ ವಿದುಸ್ತೇ ತಮೋ ಯಾಂತಿ ಸರ್ವದುಃಖಾತ್ಮಕಂ ಪರಂ ।**

'ಬುಧಃ ಅವಿದ್ವಾಂಸಃ' ಎಂದರೆ ಜ್ಞಾನಿಗಳು ದೊರೆತಾಗಲೂ ಅವರಿಂದ ಜ್ಞಾನ ಸಂಪಾದಿಸದವರು. ಬೋಧನೆ ಮಾಡುವ ಕಾರಣದಿಂದ ಜ್ಞಾನಿಯು ಭುತ್ ಎನಿಸುತ್ತಾನೆ, ಅವನು ದೊರಕಿದಾಗಲೂ ಅವನಿಂದ ಯಾರು ಹರಿಯನ್ನು ತಿಳಿಯುವುದಿಲ್ಲವೋ ಅವರು ಸಕಲ ದುಃಖಗಳ ಸ್ವರೂಪವಾಗಿರುವ ಘೋರವಾದ ತಮಸ್ಸಿಗೆ ಹೋಗುತ್ತಾರೆ.

### ಅಭೇದವಿದ್ದರೆ ದುಃಖವೇಕೆ ?

**ಉಪನಿಷತ್—ಆತ್ಮಾನಂ ಚೇದ್ವಿಜಾನೀಯಾದಯಮಸ್ಮೀತಿ ಪೂರುಷಃ ।**
**ಕಿಮಿಚ್ಛನ್ ಕಸ್ಯ ಕಾಮಾಯ ಶರೀರಮನುಸಂಜ್ವರೇತ್ ।**

'ನಾನೇ ಪರಮಾತ್ಮ' ಎಂದು ತಿಳಿಯಲು ಜೀವನು ಯೋಗ್ಯನಾಗಿದ್ದರೆ,

ಅಂದರೆ, ಜೀವನೇ ಪರಮಾತ್ಮನಾಗಿದ್ದರೆ ಅವನು ಏಕೆ ತನ್ನ ಶರೀರಪೀಡೆಯಿಂದ ದುಃಖಿತನಾಗುತ್ತಾನೆ?

**ಭಾಷ್ಯ—ಯದಿ ಜೀವಃ ಪರಾತ್ಮಾನಮಯಮಸ್ಮೀತಿ ವೇದಿತುಂ ।**
**ಯೋಗ್ಯಃ ಶರೀರಭೇದಾದೇಃ ಕಥಂ ದುಃಖೀ ತದಾ ಭವೇತ್ ।**
**ದುಃಖೀ ಶರೀರಸಂಬಂಧಾಜ್ಜೀವೋ ವಿಷ್ಣೋಃ ಪ್ರಸಾದತಃ ।**
**ಅದುಃಖೀ ವಿಪ್ರುಡಾನಂದಂ ಮುಕ್ತ ಏವ ಚ ಭೋಕ್ಷ್ಯತಿ ।**
**ನಿತ್ಯಮುಕ್ತಃ ಪೂರ್ಣಸುಖಃ ಸ್ವತಂತ್ರಃ ಪುರುಷೋತ್ತಮಃ।**
**ಪರತಂತ್ರಃ ಕಥಂ ಜೀವೋ ಯೋಗ್ಯಃ ಸೋಽಸ್ಮೀತಿ ವೇದಿತುಮ್ ।**
**ತಸ್ಮಾತ್ ಸೋಽಸ್ಮೀತಿ ನೈವಾಯಂ ವಿಜಾನೀಯಾತ್ ಕದಾಚನ ।**
**ತದೀಯೋಽಸ್ಮೀತಿ ಜಾನೀಯಾತ್ ಸರ್ವದೈವ ಬುಧಸ್ತತಃ ।**
**ಇತಿ ಚ ।**

**ಅನುವಾದ**—ಜೀವನು ಪರಮಾತ್ಮನನ್ನು ನಾನೇ ಎಂದು ತಿಳಿಯಲು ಯೋಗ್ಯನಾಗಿದ್ದರೆ ಶರೀರಚ್ಛೇದ ಮೊದಲಾದ ಕಾರಣಗಳಿಂದ ಅವನು ದುಃಖಿಯಾಗಲು ಹೇಗೆ ಸಾಧ್ಯ? ಆದ್ದರಿಂದ ಶರೀರಪೀಡೆಯಿಂದ ದುಃಖ ಹೊಂದುವ ಸಂಸಾರಿ ಜೀವನು ವಿಷ್ಣುವಲ್ಲ. ಮುಕ್ತಜೀವನೂ ಕೂಡ ವಿಷ್ಣುವಾಗುವುದಿಲ್ಲ. ಅವನು ಪರತಂತ್ರ. ವಿಷ್ಣುವಿನ ಅನುಗ್ರಹದಿಂದಲೇ ದುಃಖರಹಿತನಾಗಿ ಅತ್ಯಲ್ಪ ಆನಂದವನ್ನು ಅನುಭವಿಸುತ್ತಾನೆ. ಪುರುಷೋತ್ತಮನಾದ ಹರಿಯು ನಿತ್ಯಮುಕ್ತ, ಪೂರ್ಣಸುಖಿ ಮತ್ತು ಸ್ವತಂತ್ರ. ಪರತಂತ್ರನಾದ ಜೀವನು 'ನಾನೇ ಪರಮಾತ್ಮ' ಎಂದು ತಿಳಿಯಲು ಹೇಗೆ ಯೋಗ್ಯನಾದಾನು? ಆದ್ದರಿಂದ 'ಅವನೇ ನಾನು' ಎಂದು ಜೀವನು ಯಾವ ಕಾಲದಲ್ಲೂ ತಿಳಿಯಬಾರದು. ಜ್ಞಾನಿಯಾದವನು 'ನಾನು ಅವನಿಗೆ ಅಧೀನನಾಗಿದ್ದೇನೆ' ಎಂದು ಯಾವಾಗಲೂ ತಿಳಿಯಬೇಕು ಎಂದೂ ಹೇಳಿದೆ.

**ಭಗವಂತನನ್ನರಿತರೆ ಭಯವಿಲ್ಲ :**

**ಉಪನಿಷತ್—ಯಸ್ಯಾನುವಿತ್ತಃ ಪ್ರತಿಬುದ್ಧ ಆತ್ಮಾ**
**ಅಸ್ಮಿನ್ ಸಂದೇಹೇ ಗಹನೇ ಪ್ರವಿಷ್ಟಃ ।**
**ಸ ವಿಶ್ವಕೃತ್ ಸ ಹಿ ಸರ್ವಸ್ಯ ಕರ್ತಾ**
**ತಸ್ಯ ಲೋಕಃ ಸ ಉ ಲೋಕ ಏವ ।**

ಆ ಪರಮಾತ್ಮನು ಮುಖ್ಯಪ್ರಾಣನಿಗೂ ಸೃಷ್ಟಿಕರ್ತ. ಏಕೆಂದರೆ ಅವನು ಇಡೀ ಜಗತ್ತಿನ ಸೃಷ್ಟಿಕರ್ತ. ಅವನು ಜೀವರ ಶರೀರದಲ್ಲಿ ಹೃದಯದೊಳಗೆ

ಪ್ರವೇಶಿಸಿ ಇರುತ್ತಾನೆ. ಅವನು ಸರ್ವಜ್ಞ. ಹೀಗೆ ತಿಳಿದ ಉಪಾಸಕರಿಗೆ ಆ ಭಗವಂತನ ಲೋಕವೇ ಲಭಿಸುತ್ತದೆ.

**ಭಾಷ್ಯ**—ಯಸ್ಯ ಜ್ಞಾತೋ ನಿತ್ಯಬುದ್ಧೋ ಭಗವಾನ್ ಪುರುಷೋತ್ತಮಃ ।
ತಸ್ಯ ಲೋಕಃ ಸ ಏವೈಕೋ ಯೋ ಲೋಕಃ ಪರಮಾತ್ಮನಃ ।
ಸ ಹಿ ವಿಷ್ಣುಃ ಪರೋ ವಾಯೋರಪಿ ಕರ್ತಾ ಪ್ರಕೀರ್ತಿತಃ ।
ವಿಶ್ವೋ ವಾಯುಃ ಸಮುದ್ದಿಷ್ಟಃ ಪೂರ್ಣತ್ವಾಜ್ಜೀವಸಂಘತಃ ।
ತದನ್ಯಸ್ಯಾಪಿ ಸರ್ವಸ್ಯ ಕರ್ತೈಕೋ ವಿಷ್ಣುರೇವ ಹಿ ।
ಪ್ರವಿಷ್ಟೋ ಗಹನೇ ದೇಹಮಧ್ಯೇ ಸಂದೇಹನಾಮನಿ ।
ತಜ್ಜ್ಞಾನೀ ಯಾತಿ ತಲ್ಲೋಕಂ ತತ್ಪ್ರಸಾದಾಚ್ಚ ವರ್ತತೇ ।

**ಅನುವಾದ**—ನಿತ್ಯ ಸರ್ವಜ್ಞನಾದ ಪುರುಷೋತ್ತಮನಾದ ಭಗವಂತನನ್ನು ಯಾರು ತಿಳಿಯುತ್ತಾನೋ ಅವನಿಗೆ ಸಿಗುವ ಲೋಕ ಶ್ರೇಷ್ಠವಾದ ಪರಮಾತ್ಮನ ಲೋಕವೇ. ಸರ್ವೋತ್ತಮನಾದ ವಿಷ್ಣುವು ವಾಯು ದೇವರಿಗೂ ಕರ್ತೃ ಎನಿಸಿದ್ದಾನೆ. ಉಳಿದ ಎಲ್ಲ ಜೀವರಿಗಿಂತಲೂ ಹೆಚ್ಚು ಪೂರ್ಣನಾದುದರಿಂದ ವಾಯುವಿಗೆ ವಿಶ್ವ ಎಂದು ಹೆಸರು. ಅವನಿಗೆ ಕರ್ತನಾದ್ದರಿಂದ ವಿಷ್ಣು 'ವಿಶ್ವಕೃತ್'. ಬೇರೆ ಎಲ್ಲ ಜಗತ್ತಿಗೂ ವಿಷ್ಣು ಒಬ್ಬನೇ ಕರ್ತೃ ಅಂದರೆ 'ಸರ್ವಕರ್ತ'. ಆದ್ದರಿಂದ ಆ ಎರಡು ಶಬ್ದಗಳಿಗೆ ಪುನರುಕ್ತಿಯಿಲ್ಲ. ದೇಹಮಧ್ಯದ ಹೃದಯಸ್ಥಾನದಲ್ಲಿ ಅವನು ಪ್ರವಿಷ್ಟನಾಗಿದ್ದಾನೆ. ಅವನನ್ನು ತಿಳಿದವನು ಅವನ ಲೋಕಕ್ಕೆ ಹೋಗುತ್ತಾನೆ. ಅಲ್ಲೇ ಇರುತ್ತಾನೆ.

**ಉಪನಿಷತ್**—ಇಹೈವ ಸಂತೋಽಥ ವಿದ್ಮಸ್ತದ್ ವಯಂ
ನ ಚೇದಿಹಾವೇದೀರ್ಮಹತೀ ವಿನಷ್ಟಿಃ ।
ಯ ಏತದ್ವಿದುರಮೃತಾಸ್ತೇ ಭವಂ-
ತ್ಯಥೇತರೇ ದುಃಖಮೇವಾಪಿಯಂತಿ ।

ಜ್ಞಾನಿಯು ಉಪದೇಶಕನಾಗಿ ದೊರೆತಾಗಲೇ ಸಜ್ಜನರಾದ ನಾವು ಪರಬ್ರಹ್ಮನನ್ನು ತಿಳಿಯಬೇಕು. ಆಗಲೂ ತಿಳಿಯದಿದ್ದರೆ ದೊಡ್ಡ ಅನರ್ಥ. ಗುರೂಪದೇಶದಿಂದ ಯಾರು ತಿಳಿಯುತ್ತಾರೋ ಅವರು ಮುಕ್ತರಾಗುತ್ತಾರೆ. ಗುರೂಪದೇಶವನ್ನು ತಿರಸ್ಕರಿಸಿ ಜ್ಞಾನಸಂಪಾದಿಸದವರು ಕೇವಲ ದುಃಖವನ್ನೇ ಹೊಂದುತ್ತಾರೆ.

**ಉಪನಿಷತ್**—ಯದೈತಮನುಪಶ್ಯಂತ್ಯಾತ್ಮಾನಂ ದೇವಮಂಜಸಾ ।
ಈಶಾನಂ ಭೂತಭವ್ಯಸ್ಯ ನ ತತೋ ವಿಜುಗುಪ್ಸತೇ ।

ಭೂತ ಭವಿಷ್ಯತ್ತುಗಳೆಲ್ಲಕ್ಕೂ ನಿಯಾಮಕನಾದ ಪರಮಾತ್ಮನನ್ನು ಚೆನ್ನಾಗಿ ತಿಳಿದವನು ಆ ಜ್ಞಾನದ ಬಲದಿಂದ ನಿರ್ಭೀತನಾಗಿದ್ದು ತನ್ನನ್ನು ಯಾವ ಅಪಾಯದಿಂದಲೂ ರಕ್ಷಿಸಿಕೊಳ್ಳಲು ಬಯಸುವುದಿಲ್ಲ.

**ಭಗವಂತ ನಿತ್ಯಮುಕ್ತ, ಸರ್ವಾಧಾರ :**

**ಉಪನಿಷತ್—ಯಸ್ಮಾದರ್ವಾಕ್ ಸಂವತ್ಸರೋಽಹೋಭಿಃ ಪರಿವರ್ತತೇ ।**
**ತದ್ದೇವಾ ಜ್ಯೋತಿಷಾಂ ಜ್ಯೋತಿರಾಯುರ್ಹೋಪಾಸತೇಽಮೃತಮ್ ।**

ದಿವಸಗಳು ಮತ್ತು ವರ್ಷಗಳು ಯಾರ ಮೇಲೆ ಪ್ರಭಾವವನ್ನು ಬೀರಲು ಅಸಮರ್ಥವಾಗಿವೆಯೋ ಅಂತಹ, ಬೆಳಕಿಗೆ ಬೆಳಕು ನೀಡುವ,ಅಚಲನಾದ ನಿತ್ಯಮುಕ್ತನಾದ ಪರಮಾತ್ಮನನ್ನು ದೇವತೆಗಳು ಉಪಾಸನೆ ಮಾಡುತ್ತಾರೆ.

**ಭಾಷ್ಯ—ನ ವತ್ಸರಾಶ್ಚ ನಾಹಾನಿ ಯಸ್ಯ ನಿತ್ಯಾವಿಕಾರತಃ ।**
**ಜ್ಯೋತಿಷಾಂ ಜ್ಯೋತಿರಚಲಂ ತದ್ ದೇವಾಃ ಸಮುಪಾಸತೇ ।**

**ಅನುವಾದ**—ಪರಮಾತ್ಮನು ಸದಾ ವಿಕಾರರಹಿತನಾದುದರಿಂದ ವರ್ಷಗಳು ದಿನಗಳು ಅವನ ಮೇಲೆ ಪರಿಣಾಮ ಉಂಟುಮಾಡಲಾರವು. ಸೂರ್ಯ ಚಂದ್ರಾದಿ ಜ್ಯೋತಿಗಳಿಗೆ ಬೆಳಗುವ ಶಕ್ತಿ ಕೊಡುವವನು ಅವನು. ಅಚಲನೂ ಆದ ಆ ಪರಮಾತ್ಮನನ್ನು ದೇವತೆಗಳು ಉಪಾಸಿಸುತ್ತಾರೆ.

**ಉಪನಿಷತ್—ಯಸ್ಮಿನ್ ಪಂಚ ಪಂಚ ಜನಾ ಆಕಾಶಶ್ಚ ಪ್ರತಿಷ್ಠಿತಃ ।**
**ತಮೇವಮನ್ಯ ಆತ್ಮಾನಂ ವಿದ್ವಾನ್ ಬ್ರಹ್ಮಾಮೃತೋಽಮೃತಮ್ ।**

ಪ್ರತಿಯೊಬ್ಬ ಜೀವಾತ್ಮನ ಶರೀರದಲ್ಲೂ ಐದು ಐದು ಜನರೂ, ಮೂಲಪ್ರಕೃತಿಯೂ ಯಾರನ್ನು ಆಶ್ರಯಿಸಿಕೊಂಡಿವೆಯೋ, ಆ ಪರಮಾತ್ಮನನ್ನೇ ತಿಳಿಯುವೆನು. ನಿತ್ಯಮುಕ್ತನಾದ ಆ ಪರಬ್ರಹ್ಮನನ್ನು ತಿಳಿದವರು ಮುಕ್ತರಾಗುತ್ತಾರೆ.

**ಭಾಷ್ಯ—ಪ್ರಾಣಶ್ಚಕ್ಷುಸ್ತಥೈವಾನ್ನಂ ಮನಃ ಶ್ರೋತ್ರಂ ಚ ಪಂಚಮಂ ।**
**ಮೂಲಪ್ರಕೃತಿಸಂಯುಕ್ತಂ ಯದ್ಗತಂ ಪ್ರತಿಪೂರುಷಂ ।**

**ಅನುವಾದ**—ಪ್ರತಿ ಜೀವನ ಶರೀರದಲ್ಲಿಯೂ ಪ್ರಾಣ, ಚಕ್ಷುಸ್, ಅನ್ನ, ಮನಸ್, ಶ್ರೋತ್ರ ಎಂಬ ಐದು ಜನರೂ, ಮೂಲಪ್ರಕೃತಿಯೂ ಪರಮಾತ್ಮನನ್ನು ಆಶ್ರಯಿಸಿವೆ.

**ಉಪನಿಷತ್—ಪ್ರಾಣಸ್ಯ ಪ್ರಾಣಮುತ ಚಕ್ಷುಷಶ್ಚಕ್ಷು-**
**ರುತ ಶ್ರೋತ್ರಸ್ಯ ಶ್ರೋತ್ರಂ ಮನಸೋ ಮನೋ ಯೇ**
**ವಿದುಸ್ತೇ ನಿಚಿಕ್ಯುರ್ಬ್ರಹ್ಮ ಪುರಾಣ ಮಗ್ರ್ಯಮ್ ।**

ಪ್ರಾಣಕ್ಕೆ ಪ್ರಾಣಶಕ್ತಿ ನೀಡುವವನೂ, ಕಣ್ಣಿಗೆ ದೃಷ್ಟಿಶಕ್ತಿ ನೀಡುವವನೂ, ಕಿವಿಗೆ ಶ್ರವಣಶಕ್ತಿ ನೀಡುವವನೂ, ಮನಸ್‌ಗೆ ತಿಳಿಯುವ ಶಕ್ತಿ ನೀಡುವವನೂ ಆದ ಪರಬ್ರಹ್ಮನನ್ನು ಯಾರು ತಿಳಿಯುತ್ತಾರೋ ಅವರು ಅನಾದಿಯೂ ಸರ್ವಶ್ರೇಷ್ಠನೂ ಆದ ಆ ಪರಬ್ರಹ್ಮನನ್ನು ಹೊಂದುವರು.

**ವಿವರಣೆ**—ಪ್ರಾಣ, ಚಕ್ಷುಸ್, ಶ್ರೋತ್ರ, ಮನಸ್ ಈ ನಾಲ್ಕು ಜನರೊಡನೆ ಹಿಂದೆ ಹೇಳಿದ ಜ್ಯೋತಿಯೂ ಸೇರಿದರೆ ಪಂಚಜನರಾಗುತ್ತಾರೆ. ಭಾಷ್ಯದಲ್ಲಿ ಅನ್ನವನ್ನು ಸೇರಿಸಿ ಪಂಚಜನರೆಂದು ಹೇಳಿದೆ. ಆದರೆ ಪ್ರಕೃತ ಮಂತ್ರದಲ್ಲಿ ಅನ್ನದ ಪ್ರಸ್ತಾಪವಿಲ್ಲ. ಆದ್ದರಿಂದ ಹಿಂದೆ ಹೇಳಿದ ಜ್ಯೋತಿಯನ್ನು ಸೇರಿಸಿಯೇ ಪಂಚಜನರನ್ನು ಗ್ರಹಿಸಬೇಕು. ಭಾಷ್ಯದಲ್ಲಿ ಅನ್ನವನ್ನು ಸೇರಿಸಿರುವುದು ಮಾಧ್ಯಂದಿನಶಾಖಾನುಸಾರವಾಗಿ. ಜ್ಯೋತಿಯ ಸ್ಥಾನದಲ್ಲಿ ಆ ಶಾಖೆಯವರು ಅನ್ನವನ್ನು ಗ್ರಹಿಸುತ್ತಾರೆ.

**ಭಗವಂತನಿಗೆ ತನ್ನಲ್ಲಿ ಭೇದವಿಲ್ಲ :**

**ಉಪನಿಷತ್—ಮನಸೈವಾನುದ್ರಷ್ಟವ್ಯಂ ನೇಹ ನಾನಾಸ್ತಿ ಕಿಂಚನ ।**
**ಮೃತ್ಯೋಃ ಸ ಮೃತ್ಯುಮಾಪ್ನೋತಿ ಯ ಇಹ ನಾನೇವ ಪಶ್ಯತಿ ।**

ಮೋಕ್ಷಸಾಧನವಾದ ಬ್ರಹ್ಮಾಪರೋಕ್ಷಜ್ಞಾನವನ್ನು ಮನಸ್ಸಿನಿಂದಲೇ ಸಂಪಾದಿಸಬೇಕು. ಬ್ರಹ್ಮನ ಶುಕ್ಲ ನೀಲಾದಿರೂಪಗಳಿಗಾಗಲೀ, ಜ್ಞಾನಾದಿಗುಣಗಳಿಗಾಗಲೀ ಪರಸ್ಪರ ಭೇದವಿಲ್ಲ. ಬ್ರಹ್ಮನೊಂದಿಗೂ ಭೇದವಿಲ್ಲ. ಬ್ರಹ್ಮನ ರೂಪ-ಗುಣಾದಿಗಳಿಗೂ ಬ್ರಹ್ಮನಿಂದ ಅಥವಾ ಪರಸ್ಪರವಾಗಿ ಭೇದಾಭೇದವನ್ನು ತಿಳಿದವರೂ ಕೂಡ ಅಂಧಂತಮಸ್ಸಿಗೆ ಹೋಗುತ್ತಾರೆ. ಭೇದವನ್ನೇ ತಿಳಿದರೆ ಇನ್ನೇನು ?

**ಭಾಷ್ಯ—ತಸ್ಯ ರೂಪಗುಣಾದ್ಯೇಷು ನ ಕಶ್ಚಿದ್ ಭೇದ ಇಷ್ಯತೇ ।**
**ತದ್ಭೇದದರ್ಶೀ ಸಂಯಾತಿ ಮೃತ್ಯೋರ್ಮೃತ್ಯ್ವಭಿಧಂ ತಮಃ ।**

**ಅನುವಾದ**—ಬ್ರಹ್ಮನ ರೂಪ–ಗುಣ ಮೊದಲಾದವುಗಳಲ್ಲಿ ಬ್ರಹ್ಮನಿಂದಾಗಲೀ ಪರಸ್ಪರವಾಗಿಯಾಗಲೀ ಯಾವ ಭೇದವೂ ಪ್ರಮಾಣ ಸಮ್ಮತವಲ್ಲ. ಭೇದವನ್ನು ಕಾಣುವವನು ಮೃತ್ಯುವಿಗಿಂತ ಭಯಂಕರ ಮೃತ್ಯು ಎನಿಸಿದ ಅಂಧಂತಮಸ್ಸನ್ನು ಹೊಂದುತ್ತಾನೆ.

**ಉಪನಿಷತ್**—ಏಕಧೈವಾನುದ್ರಷ್ಟವ್ಯಮೇತದಪ್ರಮಯಂ ಧ್ರುವಮ್ ।
ವಿರಜಃ ಪರ ಆಕಾಶಾದಜ ಆತ್ಮಾ ಮಹಾನ್ ಧ್ರುವಃ ।
ತಮೇವ ಧೀರೋ ವಿಜ್ಞಾಯ ಪ್ರಜ್ಞಾಂ ಕುರ್ವೀತ ಬ್ರಾಹ್ಮಣಃ ।
ನಾನುಧ್ಯಾಯೇತ್ ಬಹೂನ್ ಶಬ್ದಾನ್ ವಾಚೋ ವಿಗ್ಲಾಪನಂ ಹಿ ತತ್ ಇತಿ ।

ಭೇದವನ್ನು ತಿಳಿಯದೆ ಅಪರಿಮಿತನಾದ ನಿತ್ಯನಾದ ಈ ಬ್ರಹ್ಮನನ್ನು ಒಂದೇ ಪ್ರಕಾರನೆಂದು ತಿಳಿಯಬೇಕು. ರಜಸ್ ಮೊದಲಾದ ದೋಷಗಳಿಲ್ಲದ, ಮೂಲಪ್ರಕೃತಿಗಿಂತ ಉತ್ತಮನಾದ, ಜನ್ಮರಹಿತನಾದ, ಆದ್ಯಾನಾದಿ ಕಾರಣನಾದ, ಅಪರಿಚ್ಛಿನ್ನನಾದ ನಿತ್ಯನಾದ ಆ ಪರಬ್ರಹ್ಮನನ್ನೇ ಬ್ರಹ್ಮಜ್ಞಾನಯೋಗ್ಯ ಜೀವನು ದೃಢಮನಸ್ಕನಾಗಿ ಪರೋಕ್ಷವಾಗಿ ತಿಳಿದು ಅನಂತರ ಪ್ರತ್ಯಕ್ಷವಾಗಿ ಕಾಣಬೇಕು. ವೇದದ ಶಬ್ದಗಳನ್ನು ಮೇಲುನೋಟಕ್ಕೆ ಕಾಣುವಂತೆ ಬ್ರಹ್ಮರುದ್ರಾದಿ ಪರವೆಂದು ತಿಳಿದು ಅಧ್ಯಯನ ಮಾಡಬಾರದು. ಅಂತಹ ಅಧ್ಯಯನ ವಾಗಿಂದ್ರಿಯಕ್ಕೆ ಶ್ರಮಕರ.

**ಭಾಷ್ಯ**—ತಸ್ಮಾದೇಕಪ್ರಕಾರೇಣ ದ್ರಷ್ಟವ್ಯೋ ಭಗವಾನ್ ಹರಿಃ ।
ಪರಿಮಾಣವಿಹೀನತ್ವಾದಪ್ರಮೇಯ ಇತೀರಿತಃ ॥
ಇತ್ಯಾದಿ ವಚನಾತ್ ಅಪ್ರಮೇಯತ್ವಂ ಅವಾಚ್ಯತ್ವಂ ಅಮನೋವಿಷಯತ್ವಂ ಚ ಸರ್ವಾತ್ಮನಾ ನ । 'ಮನಸೈವಾನುದ್ರಷ್ಟವ್ಯ' ಮಿತ್ಯುಕ್ತತ್ವಾತ್ ।

**ಅನುವಾದ**—'ಆದ್ದರಿಂದ ಭಗವಾನ್ ಹರಿಯು ಏಕಪ್ರಕಾರನೆಂದು ಅಂದರೆ ತನ್ನ ರೂಪ ಗುಣ ಕ್ರಿಯಾದಿಗಳಿಂದ ಅಭಿನ್ನನೆಂದು ತಿಳಿಯಬೇಕು. ಹರಿಯು ಅಪರಿಮಿತನಾದ್ದರಿಂದ ಅಪ್ರಮೇಯನೆನಿಸಿದ್ದಾನೆ' ಎಂದು ಮುಂತಾದ ವಚನಗಳಿರುವುದರಿಂದ ಪರಮಾತ್ಮನು ಯಾವ ವಿಧದಿಂದಲೂ ತಿಳಿಯಲಾಗದವ, ಯಾವ ಶಬ್ದದಿಂದಲೂ ಹೇಳಲಾಗದವ, ಯಾವ ರೀತಿಯಿಂದಲೂ ಮನಸ್ಸಿಗೆ ಗೋಚರನಾಗದವ ಎಂದು ತಿಳಿಯಬಾರದು. 'ಮನಸ್ಸಿನಿಂದ ಬ್ರಹ್ಮಸಾಕ್ಷಾತ್ಕಾರ ಸಂಪಾದಿಸಿಕೊಳ್ಳಬೇಕೆಂ'ದು ಇಲ್ಲಿಯೇ ಹೇಳಿರುವುದರಿಂದಲೂ ಬ್ರಹ್ಮ ಸರ್ವಥಾ ಅಜ್ಞೇಯನಲ್ಲ, ಅವ್ಯಾಚ್ಯನಲ್ಲ.

**ಭಗವಂತ ಅವಾಚ್ಯನಲ್ಲ :**

**ಭಾಷ್ಯ**—ನ ಚ ಕೇನಾಪ್ಯವಾಚ್ಯಸ್ಯ ಲಕ್ಷಣಾ ದೃಷ್ಟಾ । ಕ್ಷೀರಮಾಧುರ್ಯವಿಶೇಷಾದೇರಪಿ ತತ್ತಚ್ಛಬ್ದೇನೈವ ವಾಚ್ಯತ್ವಾತ್ ।

ವಿಶದಂ ಕ್ಷೀರಮಾಧುರ್ಯಂ ಗುಡೇ ತೀಕ್ಷ್ಣಂ ಘೃತೇ ಸ್ಥಿರಂ ।
ಇತ್ಯಾದಿ ಚ ।

**ಅನುವಾದ**—ತೀರಶಬ್ದವಾಚ್ಯವಾದ ತೀರವೇ ಗಂಗಾಶಬ್ದ ಲಕ್ಷ್ಯವಾಗುವುದು ಕಂಡಿದೆ. ಯಾವುದೇ ಶಬ್ದದಿಂದ ವಾಚ್ಯವಲ್ಲದ ವಸ್ತು ಲಕ್ಷಣಾವೃತ್ತಿಯಿಂದ ಬೋಧ್ಯವಾಗುವುದು ಎಲ್ಲೂ ಕಂಡಿಲ್ಲ. ಆದ್ದರಿಂದ ಬ್ರಹ್ಮನನ್ನು ಸರ್ವಥಾ ಶಬ್ದಾವಾಚ್ಯನೆನ್ನ ಕೂಡದು. ಹಾಗೆ ಹೇಳಿದರೆ ಅವನು ಶಬ್ದಲಕ್ಷ್ಯನೂ ಆಗಲಾರ. ಹಾಲಿನ ವಿಶಿಷ್ಟ ಮಾಧುರ್ಯ ಮುಂತಾದವುಗಳೂ ಕೂಡ ಆಯಾ ಶಬ್ದಗಳಿಂದ ವಾಚ್ಯವೇ ಆಗಿವೆ. ಏಕೆಂದರೆ ಕ್ಷೀರ ಮಾಧುರ್ಯ, ಗುಡಮಾಧುರ್ಯ ಎಂದು ಮುಂತಾಗಿ ಅವುಗಳನ್ನು ಹೇಳಬಹುದು. ಅಥವಾ ಹಾಲಿನ ಮಾಧುರ್ಯಕ್ಕೆ ವಿಶದ ಎಂದೂ, ಬೆಲ್ಲದ ಮಾಧುರ್ಯಕ್ಕೆ ತೀಕ್ಷ್ಣ ಎಂದೂ, ತುಪ್ಪದ ಮಾಧುರ್ಯಕ್ಕೆ ಸ್ಥಿರ ಎಂದೂ ಹೆಸರು' ಎಂದು ಮುಂತಾಗಿ ಪಾಕಶಾಸ್ತ್ರದಲ್ಲಿ ಹೇಳಿದೆ. ಆದ್ದರಿಂದ ವಿಶದ ತೀಕ್ಷ್ಣಾದಿ ಶಬ್ದಗಳಿಂದಲೆ ಅವುಗಳನ್ನು ಹೇಳಬಹುದು.

**ಭಗವಂತ ನಿರ್ಗುಣ ಅಲ್ಲ :**

**ಭಾಷ್ಯ**—ನ ಚ ನಿರ್ಗುಣಸ್ಯ ಸತ್ವಮೇವಾಸ್ತಿ । ಗುಣಭೇದಾದೀನಾಮಪಿ
ಸಂತ್ಯೇವ ಗುಣಾಃ । ನ ಚಾನವಸ್ಥಾ । ಸ್ವನಿರ್ವಾಹಕತ್ವಾತ್ ।

**ಅನುವಾದ**—ಗುಣರಹಿತವಾದ ವಸ್ತುವಿಗೆ ಅಸ್ತಿತ್ವವೇ ಇಲ್ಲ. ಗುಣಗಳಲ್ಲಿಯೂ ಗುಣಗಳು ಇದ್ದೇ ಇವೆ. ಗುಣಗಳಲ್ಲಿ ಗುಣಗಳಿರುವುದರಿಂದ ಅನವಸ್ಥಾ ದೋಷವು ಉಂಟಾಗುವುದಿಲ್ಲ. ಏಕೆಂದರೆ ಗುಣವು ಸ್ವನಿರ್ವಾಹಕ.

**ವಿವರಣೆ**—"ಬ್ರಹ್ಮನು ನಿರ್ಗುಣನೆಂದು 'ಸಾಕ್ಷೀ ಚೇತಾ ಕೇವಲೋ ನಿರ್ಗುಣಶ್ಚ' ಎಂಬ ಶ್ರುತಿಯು ಹೇಳುತ್ತದೆ. ನಿರ್ಗುಣನಾದ ಅವನನ್ನು ವೇದಾದಿ ಶಾಸ್ತ್ರಗಳು ಪ್ರತಿಪಾದಿಸುತ್ತವೆ. ಶಬ್ದಪ್ರವೃತ್ತಿನಿಮಿತ್ತಗುಣರಹಿತನಾದ ಅವನನ್ನು ವೇದಾದಿಶಾಸ್ತ್ರದ ಶಬ್ದಗಳು ಶಕ್ತಿವೃತ್ತಿಯಿಂದ ಪ್ರತಿಪಾದಿಸಲು ಸಾಧ್ಯವಿಲ್ಲ. ಲಕ್ಷಣಾವೃತ್ತಿಯಿಂದ ಪ್ರತಿಪಾದಿಸುತ್ತವೆ ಎಂದೇ ಹೇಳಬೇಕು. ಆದ್ದರಿಂದ ಅವಾಚ್ಯನು ಲಕ್ಷ್ಯವೂ ಅಲ್ಲ ಎನ್ನುವುದು ಸರಿಯಲ್ಲ" ಈ ಆಕ್ಷೇಪಕ್ಕೆ ಸಮಾಧಾನ- ಬ್ರಹ್ಮನನ್ನು ನಿರ್ಗುಣನೆಂದು ಒಪ್ಪಲಾಗದು ಏಕೆಂದರೆ, ನಿರ್ಗುಣವಾದ ವಸ್ತುವಿಗೆ ಅಸ್ತಿತ್ವವೇ ಇರುವುದಿಲ್ಲ. ಬ್ರಹ್ಮನಿಗೆ ಅಸ್ತಿತ್ವ ಇರುವುದಾದರೆ ಗುಣವೂ ಅವನಲ್ಲಿ ಇರಲೇಬೇಕು. ನಿರ್ಗುಣ ಶ್ರುತಿಯು ಬ್ರಹ್ಮನಲ್ಲಿ ತ್ರಿಗುಣಗಳನ್ನು ಮಾತ್ರ ಇಲ್ಲವೆನ್ನುತ್ತದೆ. ಇಲ್ಲದಿದ್ದರೆ 'ಸಾಕ್ಷೀ ಚೇತಾ' ಎಂದು ಮುಂತಾದ ಮಾತು ಸ್ವವ್ಯಾಹತವಾದೀತು.

ನ್ಯಾಯ ವೈಶೇಷಿಕ ದರ್ಶನದಲ್ಲಿ ಗುಣವಿಲ್ಲದ ಗುಣ, ಕರ್ಮ. ಸಾಮಾನ್ಯ, ವಿಶೇಷ, ಸಮವಾಯ, ಅಭಾವಗಳಿಗೆ ಅಸ್ತಿತ್ವವನ್ನು ಅಂಗೀಕರಿಸಲಾಗಿದೆ. ಆದ್ದರಿಂದ ಗುಣವಿಲ್ಲದ ವಸ್ತುವೇ ಇಲ್ಲ ಎನ್ನುವುದು ಹೇಗೆ? ಈ ಪ್ರಶ್ನೆಗೆ ಉತ್ತರ- ಗುಣ ಕರ್ಮ ಮೊದಲಾದ ಪದಾರ್ಥಗಳು ನಿರ್ಗುಣವಾಗಿದ್ದರೂ ನಿರ್ಧರ್ಮಕವಲ್ಲ. ಧರ್ಮರಹಿತ ವಾದ ಒಂದು ವಸ್ತುವಿಗೆ ಅಸ್ತಿತ್ವವಿಲ್ಲವೆಂದು ಅಭಿಪ್ರಾಯ. ಗುಣಾದಿಗಳಲ್ಲಿ ಗುಣ ತ್ವಾದಿ ಧರ್ಮ ಇದ್ದೇ ಇದೆ. ವಸ್ತುತಃ ಗುಣಾದಿಗಳಲ್ಲಿ ಗುಣಾದಿಗಳಿಲ್ಲವೆಂದು ನ್ಯಾಯ ವೈಶೇಷಿಕರು ಹೇಳುವುದು ಯುಕ್ತಿ ಯುಕ್ತವಲ್ಲ. ಘಟದಲ್ಲಿ ಏಕತ್ವವಿದೆ ಯಾದರೂ ಏಕತ್ವದಲ್ಲಿ ತಿರುಗಿ ಏಕತ್ವ ಒಪ್ಪಿದರೆ ಆ ಏಕತ್ವದಲ್ಲಿ ಇನ್ನೊಂದು ಏಕತ್ವ ಎಂದು ಅನವಸ್ಥಾ ಒರುವುದಿಲ್ಲವೇ? ಎಂಬ ಪ್ರಶ್ನೆಗೆ ಸಮಾಧಾನ- ಘಟದಲ್ಲಿ ಪ್ರಮೇಯತ್ವವನ್ನೊಪ್ಪಿ ಪ್ರಮೇಯತ್ವದಲ್ಲಿ ತಿರುಗಿ ಪ್ರಮೇಯತ್ವ ಒಪ್ಪಿದರೂ ಆ ಪ್ರಮೇಯತ್ವದಲ್ಲಿ ಇನ್ನೊಂದು ಪ್ರಮೇಯತ್ವವೆಂದು ಅನವಸ್ಥೆ ಬಂದರೆ ಪ್ರಮೇಯತ್ವದಲ್ಲಿ ಪ್ರಮೇಯತ್ವ ಬೇರೆಯಲ್ಲ ಎರಡೂ ಒಂದೇ. ಅದು ಸ್ವನಿರ್ವಾಹಕ ಎಂದು ಸಮಾಧಾನಿಸುವಂತೆ ಏಕತ್ವದಲ್ಲಿ ಏಕತ್ವ ಬೇರೆಯಲ್ಲ ಎರಡೂ ಒಂದೇ, ಅದು ಸ್ವನಿರ್ವಾಹಕ ಎಂದು ಸಮಾಧಾನಿಸಬಹುದು.

**ಭಾಷ್ಯ—ಅವಾಚ್ಯಮಮನೋಗಮ್ಯಮಗುಣಂ ಚೇತ್ಕುತೋಽಸ್ತಿ ತತ್ ।**
**ತಸ್ಮಾದೇವಂ ವದನ್ ವಸ್ತುಶೂನ್ಯತಾಮರ್ಥತೋಽವದತ್ ।**
**ಗುಣಾಶ್ಚ ಗುಣಿನಃ ಸರ್ವೇ ಸ್ವೇನೈವ ಗುಣಿನೋ ಗುಣಾಃ ।**
**ಇತ್ಯಾದಿ ಚ ।**

**ಅನುವಾದ**—ಪರಬ್ರಹ್ಮವು ಅವಾಚ್ಯವೂ, ಮನೋಗಮ್ಯವಲ್ಲದ್ದೂ, ಗುಣ ರಹಿತವೂ ಆಗಿದ್ದರೆ ಅದಕ್ಕೆ ಅಸ್ತಿತ್ವವಾದರೂ ಹೇಗೆ? ಆದ್ದರಿಂದ ಯಾವುದೇ ವಸ್ತು ವನ್ನು ಕುರಿತು ಹೀಗೆ ಹೇಳುವವನು ಅರ್ಥಾತ್ ಅದು ಇಲ್ಲವೆಂದೇ ಹೇಳಿದಂತಾಗು ತ್ತದೆ. ಎಲ್ಲ ಗುಣಗಳಲ್ಲೂ ಗುಣಗಳಿವೆ. ಆದರೂ ಅನವಸ್ಥೆಯಿಲ್ಲ. ಗುಣಗಳು ತಮ್ಮಿಂದಲೇ ಗುಣಗಳೆನಿಸುವುವು. ಅಂದರೆ ಗುಣವು ಗುಣಿಯಾಗಲು ಇನ್ನೊಂದು ಗುಣ ಬೇಕಿಲ್ಲ ಎಂದು ಮುಂತಾಗಿಯೂ ಹೇಳಿದೆ.

**ಯಜ್ಞ ಅಧ್ಯಯನಾದಿಗಳ ಗುರಿ :**

**ಉಪನಿಷತ್—ಸ ವಾ ಏಷ ಮಹಾನಜ ಆತ್ಮಾ ಯೋಽಯಂ ವಿಜ್ಞಾನಮಯಃ ಪ್ರಾಣೇಷು ಯ ಏಷೋಽಂತರ್ಹೃದಯ ಆಕಾಶಸ್ತಸ್ಮಿನ್ ಶೇತೇ । ಸರ್ವಸ್ಯ ವಶೀ, ಸರ್ವಸ್ಯೇಶಾನಃ, ಸರ್ವಸ್ಯಾಧಿಪತಿಃ ಸಃ । ನ ಸಾಧುನಾ ಕರ್ಮಣಾ ಭೂಯಾನ್ । ನೋ ಏವಾಸಾಧುನಾ ಕನೀಯಾನ್ । ಏಷ**

**ಸರ್ವೇಶ್ವರ ಏಷ ಭೂತಾಧಿಪತಿರೇಷ ಭೂತಪಾಲ ಏಷ ಸೇತುರ್ವಿಧರಣ ಏಷಾಂ ಲೋಕಾನಾಮಸಂಭೇದಾಯ। ತಮೇತಂ ವೇದಾನುವಚನೇನ ಬ್ರಾಹ್ಮಣಾ ವಿವಿದಿಷಂತಿ ಯಜ್ಞೇನ ದಾನೇನ ತಪಸಾನಾಶಕೇನ। ಏತ-ಮೇವ ವಿದಿತ್ವಾ ಮುನಿರ್ಭವತಿ।**

ಈ ಹಿಂದೆ ಉಪನಿಷತ್ತಿನಲ್ಲಿ ಮಹಾನ್, ಅಜ, ಆತ್ಮಾ ಎಂದು ವರ್ಣಿಸಲ್ಪಟ್ಟಿರು ವನು ಚತುರ್ಮುಖನಲ್ಲ. ಶ್ರೀಹರಿಯೇ. ಅಂದರೆ ಸರ್ವಜ್ಞನೂ ಇಂದ್ರಿಯಗಳಲ್ಲಿ ನಿಯಾಮಕನೂ ಆಗಿದ್ದು ಹೃದಯದೊಳಗಿನ ಆಕಾಶದಲ್ಲಿರುವ ಪರಮಾತ್ಮನೆ. ಅವನ ಜ್ಞಾನವೇ ಮೋಕ್ಷಸಾಧನ. ಅಧ್ಯಯನಾದಿ ಕರ್ಮವು ಜ್ಞಾನಸಾಧನ ಮಾತ್ರ. ಆದ್ದರಿಂದ 'ಎಲ್ಲವನ್ನೂ ತನ್ನ ವಶದಲ್ಲಿಟ್ಟುಕೊಂಡಿರುವವ ಶ್ರೀಹರಿ ಬ್ರಹ್ಮರುದ್ರಾದಿ ಗಳೆಲ್ಲರಿಗೂ ಜೇಷ್ಟಕ. ಎಲ್ಲರಿಗಿಂತ ಗುಣಾಧಿಕ. ಪುಣ್ಯ ಕರ್ಮಗಳಿಂದ ಸುಖಪೂರ್ಣ ನಾಗುವುದಿಲ್ಲ. ಪಾಪಕರ್ಮಗಳಿಂದ ಸುಖರಹಿತನೂ ಆಗುವುದಿಲ್ಲ. ಎಲ್ಲರ ಒಡೆಯ. ಇವನು ಅನಾದಿಕಾಲದಿಂದಲೂ ಒಡೆಯನಾಗಿಯೇ ಇದ್ದಾನೆ. ಅನಾದಿಯಿಂದಲೂ ಪಾಲಕ. ಈ ಲೋಕಗಳನ್ನು ಒಂದರಲ್ಲೊಂದು ಕಲಸಿ ಹೋಗದಂತೆ ವ್ಯವಸ್ಥಿತವಾಗಿ ಇಟ್ಟಿರುವವನು' ಎಂದು ಶ್ರೀಹರಿಯನ್ನು ಬ್ರಹ್ಮಜ್ಞಾನ ಯೋಗ್ಯರು ವೇದಾಧ್ಯಯನ ದಿಂದ, ಯಜ್ಞದಿಂದ, ದಾನದಿಂದ, ತಪಸ್ಸಿನಿಂದ, ಉಪವಾಸದಿಂದ ತಿಳಿಯಲು ಇಚ್ಛಿಸುತ್ತಾರೆ. ಇವನನ್ನು ತಿಳಿದೇ ಜ್ಞಾನಸ್ವರೂಪರಾಗುತ್ತಾರೆ, ಅಂದರೆ ಮುಕ್ತ ರಾಗುತ್ತಾರೆ.

**ಸನ್ಯಾಸದ ಗುರಿ :**

**ಉಪನಿಷತ್**—**ಏತಮೇವ ಪ್ರವ್ರಾಜಿನೋ ಲೋಕಮಿಚ್ಛಂತಃ ಪ್ರವ್ರಜಂತಿ। ಏತದ್ಧಸ್ಮ ವೈ ಪೂರ್ವೇ ವಿದ್ವಾಂಸಃ ಪ್ರಜಾಂ ನ ಕಾಮಯಂತೇ। ಕಿಂ ಪ್ರಜಯಾ ಕರಿಷ್ಯಾಮೋ ಯೇಷಾಂ ನೋಽಯಮಾತ್ಮಾಯಂ ಲೋಕ ಇತಿ। ತೇ ಹ ಸ್ಮ ಪುತ್ರೈಷಣಾಯಾಶ್ಚ ವಿತ್ತೈಷಣಾಯಾಶ್ಚ ಲೋಕೈಷಣಾ-ಯಾಶ್ಚ ವ್ಯುತ್ಥಾಯಾಥ ಭಿಕ್ಷಾಚರ್ಯಂ ಚರಂತಿ। ಯಾ ಹ್ಯೇವ ಪುತ್ರೈಷಣಾ ಸಾ ವಿತ್ತೈಷಣಾ। ಯಾ ವಿತ್ತೈಷಣಾ ಸಾ ಲೋಕೈಷಣಾ। ಉಭೇ ಹ್ಯೇತೇ ಏಷಣೇ ಏವ ಭವತಃ। ಸ ಏಷ ನೇತಿ। ನೇತಿ। ಆತ್ಮಾಽಗೃಹ್ಯೋ ನಹಿ ಗೃಹ್ಯತೇ। ಅಶೀರ್ಯೋ ನ ಹಿ ಶೀರ್ಯತೇ। ಅಸಂಗೋ ನ ಹಿ ಸಜ್ಜತೇ। ಅಸಿತೋ ನ ವ್ಯಥತೇ। ನ ರಿಷ್ಯತಿ।**

ಈ ಭಗವಂತನನ್ನೇ ಆಶ್ರಯಿಸಲು ಬಯಸುವ ಸಂನ್ಯಾಸ ಯೋಗ್ಯರು ಸನ್ಯಾಸಿ ಗಳಾಗುತ್ತಾರೆ. ಭಗವಂತನೇ ಎಲ್ಲರಿಗೂ ಆಶ್ರಯ ಎಂಬ ಪ್ರಮೇಯವನ್ನು ತಿಳಿದ

ಪ್ರಾಚೀನರು ನಿಷಿದ್ಧ ವಸ್ತುಗಳನ್ನು ಕಾಮಿಸಲಿಲ್ಲ. ಏಕೆಂದರೆ ನಮಗೆ ಶ್ರೀಹರಿಯೇ ಒಡೆಯನೂ ಆಶ್ರಯನೂ ಆಗಿರುವಾಗ ನಿಷಿದ್ಧ ಪದಾರ್ಥಗಳಿಂದ ನಾವು ಏನು ಸಾಧಿಸಬೇಕು? ಎಂದು ಭಾವಿಸಿದರು. ಅವರು ಪುತ್ರೈಷಣ, ವಿತ್ತೈಷಣ ಮತ್ತು ಲೋಕೈಷಣಗಳನ್ನು ಮೀರಿ ಮುಕ್ತರಾಗಿ ಪರಮಾತ್ಮನಿಂದ ಅತ್ಯಲ್ಪ ಆನಂದವನ್ನು ಬೇಡುತ್ತಾರೆ. ಯಾವುದು ಪುತ್ರೈಷಣವೋ ಅದೇ ವಿತ್ತೈಷಣಾ. ಯಾವುದು ವಿತ್ತೈಷಣವೋ ಅದೇ ಲೋಕೈಷಣಾ. ಇವೆರಡು ಏಷಣಗಳು ದುಃಖಹೇತುಗಳೇ. ಅಂತಹ ಈ ಶ್ರೀಹರಿಯು ಶ್ರೀದೇವಿಯಂತೆಯೂ ಅಲ್ಲ, ಬ್ರಹ್ಮಾದಿಗಳಂತೆಯೂ ಅಲ್ಲ. ಏಕೆಂದರೆ ಶ್ರೀಹರಿಯು ಸಂಪೂರ್ಣವಾಗಿ ತಿಳಿಯಲ್ಪಡುವುದಿಲ್ಲ. ಅವನು ಸಂಪೂರ್ಣವಾಗಿ ತಿಳಿಯಲ್ಪಡುತ್ತಾನೆ ಎಂಬ ವಿಷಯದಲ್ಲಿ ಪ್ರಮಾಣವಿಲ್ಲ. ಕಾಲದಿಂದ ಅಥವಾ ಬೇರೆ ಕಾರಣಗಳಿಂದ ಹಿಂಸೆಯಿಲ್ಲದವನು. ಏಕೆಂದರೆ ಹಿಂಸಿಸಲ್ಪಡುತ್ತಾನೆ ಎಂಬ ವಿಷಯದಲ್ಲಿ ಪ್ರಮಾಣವಿಲ್ಲ. ಪ್ರಪಂಚದ ಜೊತೆ ಸಂಬಂಧ ಹೊಂದಿದ್ದರೂ ಪ್ರಪಂಚದ ದೋಷಗಳ ಲೇಪವಿಲ್ಲದವನು. ಏಕೆಂದರೆ ದೋಷಲೇಪವಿದೆ ಎಂಬ ವಿಷಯದಲ್ಲಿ ಪ್ರಮಾಣವಿಲ್ಲ. ಬಂಧವಿಲ್ಲದವನು. ಏಕೆಂದರೆ ಬಂಧವಿದೆ ಎಂಬ ವಿಷಯದಲ್ಲಿ ಪ್ರಮಾಣವಿಲ್ಲ. ಅವನು ನಾಶವಿಲ್ಲದವನು.

**ಉಪನಿಷತ್**–**ಏತಮು ಹ ಏವ ಏತೇ ನ ತರತಃ ಇತಿ। ಅತಃ ಪಾಪಮಕರವಮಿತಿ। ಅತಃ ಕಲ್ಯಾಣಮಕರವಮಿತಿ । ಉಭೇ ಉ ಹ್ಯೇವೈಷ ಏತೇ ತರತಿ । ನೈನಂ ಕೃತಾಕೃತೇ ತಪತಃ ।**

ನಾನು ಪಾಪ ಮಾಡಿದೆನು ಪುಣ್ಯಮಾಡಿದೆನೆಂಬ ಭಾವನೆಗಳು ಹರಿಗೆ ಮಾತ್ರವೆ ಇಲ್ಲ. ಹರಿಪ್ರೇರಣೆಯಿಂದಲೇ 'ಪಾಪವನ್ನು ಮಾಡಿದೆನು. ಪುಣ್ಯವನ್ನು ಮಾಡಿದೆನು' ಎಂಬ ಭಾವನೆಗಳು ಜೀವರಿಗೆ ಉಂಟಾಗುವುವು. ಶ್ರೀಹರಿಯು ಪುಣ್ಯ ಪಾಪ ಕರ್ಮಗಳನ್ನು ಮೀರಿದ್ದಾನೆ. ಆದ್ದರಿಂದ ಪುಣ್ಯ ಪಾಪಗಳು ಇವನಿಗೆ ಎಂದೂ ತಾಪವನ್ನುಂಟು ಮಾಡುವುದಿಲ್ಲ.

**ಭಾಷ್ಯ—ಸರ್ವಮಸ್ಯ ವಶೇ ಯಸ್ಮಾದ್ಧರಿಃ ಸರ್ವವಶೀ ತತಃ ।**
**ಸರ್ವಸ್ಯ ಬ್ರಹ್ಮರುದ್ರಾದೇರನ ಈಶಾನ ಏವ ಚ ।**
**ಗುಣಾಧಿಕಃ ಪಾಲಕಶ್ಚೇತ್ಯತೋಽಧಿಪತಿರೀರಿತಃ । ಇತಿ ಚ ।**
**ಭೂತ ಏವಾಧಿಪತಿಃ । ನಾಸ್ಯಾಧಿಪತ್ಯಮಾದಿಮತ್ ।**

**ಅನುವಾದ**—ಎಲ್ಲವೂ ಅವನ ವಶದಲ್ಲಿರುವುದರಿಂದ ಶ್ರೀಹರಿಯು ಸರ್ವವಶೀ ಎನಿಸಿದ್ದಾನೆ. ಬ್ರಹ್ಮ ರುದ್ರ ಮೊದಲಾದ ಎಲ್ಲರಿಗೂ ಜೇಷ್ಠನಾದುದರಿಂದ ಅವನು

ಈಶಾನ, ಎಲ್ಲರಿಗಿಂತ ಅಧಿಕಗುಣವುಳ್ಳವನಾದ್ದರಿಂದ ಮತ್ತು ಪಾಲಕನಾದ್ದರಿಂದ ಅವನು ಅಧಿಪತಿ ಎಂದು ಪ್ರಮಾಣವಿದೆ. ಆದ್ದರಿಂದ 'ಸರ್ವಸ್ಯ ವಶೀ, ಸರ್ವಸ್ಯೇಶಾನಃ ಸರ್ವಸ್ಯಾಧಿಪತಿಃ' ಎಂಬಲ್ಲಿ ಪುನರುಕ್ತಿಯಿಲ್ಲ. ಭೂತಾಧಿಪತಿಃ ಎಂದರೆ ಇವನ ಆಧಿಪತ್ಯ ಎಂದಾದರೂ ಆರಂಭವಾದುದಲ್ಲ; ಅನಾದಿ ಎಂದರ್ಥ. ಆದ್ದರಿಂದ 'ಸರ್ವಸ್ಯಾಧಿಪತಿಃ' ಎಂದ ಮೇಲೆ'ಭೂತಾಧಿಪತಿಃ' ಎನ್ನುವುದು ವ್ಯರ್ಥವೆಂಬ ಶಂಕೆಗೆ ಆಸ್ಪದವಿಲ್ಲ.

**ಭಾಷ್ಯ—ನಿತ್ಯಬೋಧಾತ್ಮಕತ್ವಾದ್ ಯೋಃ ಮುನಿಃ ಪ್ರೋಕ್ತೋ ಜನಾರ್ದನಃ ।**
**ತಂ ವಿದ್ವಾಂಶ್ಚ ಮುನಿರ್ನಾಮ ಬೋಧಸ್ತಸ್ಯಾಪ್ಯಮುಖ್ಯತಃ ।**
**ಯಂ ವಿದಿತ್ವಾ ವಿಮುಕ್ತಾಶ್ಚಾಯುಕ್ತಕಾಮ ವಿವರ್ಜಿತಾಃ ।**
**ಉತ್ಪತ್ತಿಲಯಹೀನಾಶ್ಚ ನಿತ್ಯಾನಂದೈಕ ಭೋಗಿನಃ ।**
**ಆನಂದಭಿಕ್ಷಾಂ ವಿಷ್ಣೂತ್ಥಾಂ ಚರಂತ್ಯಜ್ಞಾನವರ್ಜಿತಾಃ ।**
**ಸ ಏಷ ಮೋಕ್ಷದೋ ವಿಷ್ಣುರ್ಯತ್ ಕಲ್ಯಾಣಂ ಕೃತಂ ಮಯಾ ।**
**ಪಾಪಂ ಕೃತಂ ಮಯೇತ್ಯೇತನ್ನ ಕದಾಚಿತ್ ಕರಿಷ್ಯತಿ ।**

**ಅನುವಾದ**—ನಿತ್ಯಜ್ಞಾನಸ್ವರೂಪನಾದ್ದರಿಂದ ಜನಾರ್ದನನು ಮುನಿ ಎನಿಸಿದ್ದಾನೆ. ಅವನನ್ನು ತಿಳಿದ ಜ್ಞಾನಿಯೂ ಅವನ ಯೋಗ್ಯತಾನುಸಾರವಾಗಿ ಮುಕ್ತಿಯಲ್ಲಿ ಜ್ಞಾನಸ್ವರೂಪನಾಗುವುದರಿಂದ ಅವನೂ ಮುನಿ ಎಂದೇ ಪ್ರಸಿದ್ಧ. ಮನನ ಮಾಡುವವನೆಂಬ ಅರ್ಥದಲ್ಲಿ ಬ್ರಹ್ಮಜ್ಞಾನಕ್ಕಿಂತ ಪೂರ್ವದಲ್ಲಿಯೆ ಮುನಿಯಾಗಿರುತ್ತಾನೆ, ಬ್ರಹ್ಮಜ್ಞಾನಾನಂತರವಲ್ಲ. ಆದ್ದರಿಂದ ಆ ಅರ್ಥ ಇಲ್ಲಿ ಗ್ರಾಹ್ಯವಲ್ಲ. ಯಾರನ್ನು ತಿಳಿದು ಮುಕ್ತರಾದವರು ಅಯೋಗ್ಯಕಾಮನಾರಹಿತರಾಗಿ ಉತ್ಪತ್ತಿ ಲಯಹೀನರಾಗಿ ನಿತ್ಯಾನಂದವನ್ನು ಮಾತ್ರ ಅನುಭವಿಸುತ್ತಾ ಅಜ್ಞಾನರಹಿತರಾಗಿ ವಿಷ್ಣುವಿನಿಂದ ಲಭಿಸಿದ ಆನಂದಲೇಶವನ್ನು ಅನುಭವಿಸುವರೋ ಅಂತಹ ಮೋಕ್ಷದಾತೃವಾದ ಈ ವಿಷ್ಣುವು ನನ್ನಿಂದ ಪುಣ್ಯವು ಮಾಡಲ್ಪಟ್ಟಿತು ನನ್ನಿಂದ ಪಾಪವು ಮಾಡಲ್ಪಟ್ಟಿತು ಎಂಬ ಭಾವನೆಗಳನ್ನು ಎಂದೂ ಹೊಂದುವುದಿಲ್ಲ.

**ಭಾಷ್ಯ—ಕೃತೇ ಮಯಾ ಪುಣ್ಯಪಾಪೇ ಇತಿ ಯಚ್ಚೇತನಾತ್ಮನಾಮ್ ।**
**ತತ್ ಸರ್ವಮತ ಏವೋಕ್ತಂ ವಿಷ್ಣೋಃ ಸರ್ವೇಶ್ವರೇಶ್ವರಾತ್ ।**
**ತೀರ್ಣೋ ಹಿ ವರ್ತತೇ ನಿತ್ಯಂ ಪುಣ್ಯ ಪಾಪೇ ಜನಾರ್ದನಃ ।**
**ನೈನಂ ಕದಾಚಿತ್ತಪತಃ ಪುಣ್ಯಪಾಪೇ ಜನಾರ್ದನಂ । ಇತಿ ಚ ।**

**ಅನುವಾದ**—ನನ್ನಿಂದ ಪುಣ್ಯ ಪಾಪ ಕರ್ಮಗಳು ಮಾಡಲ್ಪಟ್ಟವು ಎಂಬ

ಜೀವರ ಭಾವನೆಗಳೆಲ್ಲವೂ ಸರ್ವೇಶ್ವರನಾದ ವಿಷ್ಣುವಿನಿಂದಲೇ ಉಂಟಾಗುತ್ತವೆ. ಜನಾರ್ದನನು ಎಲ್ಲ ಕಾಲಗಳಲ್ಲೂ ಪುಣ್ಯ-ಪಾಪಗಳನ್ನು ಮೀರಿದ್ದಾನೆ. ಪುಣ್ಯ ಪಾಪ ಗಳು ಎಂದೂ ಈ ಜನಾರ್ದನನನ್ನು ತಪಿಸುವುದಿಲ್ಲ.

**ಭಗವಂತನು ಕರ್ಮಲೇಪ ರಹಿತ :**

**ಉಪನಿಷತ್—ತದೇತದೃಚಾಭ್ಯುಕ್ತಂ—**

**ಏಷ ನಿತ್ಯೋ ಮಹಿಮಾ ಬ್ರಾಹ್ಮಣಸ್ಯ**
**ನ ಕರ್ಮಣಾ ವರ್ಧತೇ ನೋ ಕನೀಯಾನ್ ।**
**ತಸ್ಯೈವ ಸ್ಯಾತ್ ಪದವಿತ್ ತಂ ವಿದಿತ್ವಾ**
**ನ ಲಿಪ್ಯತೇ ಕರ್ಮಣಾ ಪಾಪಕೇನ । ಇತಿ ।**

ಈ ಪ್ರಮೇಯವು ಈ ಋಚೆಯಲ್ಲಿಯೂ ಉಕ್ತವಾಗಿದೆ- ವೇದವೇದ್ಯನಾದ ವಿಷ್ಣುವಿನ ಈ ಮಹಿಮೆ ನಿತ್ಯ. ಏಕೆಂದರೆ ಅವನ ಸುಖಜ್ಞಾನಾದಿಗಳು ಕರ್ಮದಿಂದ ಹೆಚ್ಚುವುದಿಲ್ಲ, ಕಡಿಮೆಯೂ ಆಗುವುದಿಲ್ಲ. ಅಂತಹ ವಿಷ್ಣುವಿನ ಸ್ವರೂಪವನ್ನು ತಿಳಿಯಬೇಕು. ಅವನನ್ನು ತಿಳಿದವನು ಪಾಪಕರ್ಮದ ಲೇಪವನ್ನು ಹೊಂದುವುದಿಲ್ಲ.

**ಉಪನಿಷತ್—ತಸ್ಮಾದೇವಂವಿತ್ ಶಾಂತೋ ದಾಂತ ಉಪರತಸ್ತಿತಿಕ್ಷುಃ ಸಮಾಹಿತೋ ಭೂತ್ವಾ ಆತ್ಮನ್ಯೇವಾತ್ಮಾನಂ ಪಶ್ಯತಿ । ಸರ್ವಮಾತ್ಮಾನಂ ಪಶ್ಯತಿ । ನೈನಂ ಪಾಪ್ಮಾ ತರತಿ । ಸರ್ವಂ ಪಾಪ್ಮಾನಂ ತರತಿ । ನೈನಂ ಪಾಪ್ಮಾ ತಪತಿ । ಸರ್ವಂ ಪಾಪ್ಮಾನಂ ತಪತಿ । ವಿಪಾಪೋ ವಿರಜೋಽವಿಚಿಕಿತ್ಸೋ ಬ್ರಾಹ್ಮಣೋ ಭವತ್ಯೇಷ ಬ್ರಹ್ಮಲೋಕಃ ಸಮ್ರಾಡಿತಿ ಹೋವಾಚ ಯಾಜ್ಞವಲ್ಕ್ಯಃ । ಸೋಽಹಂ ಭಗವತೇ ವಿದೇಹಾನ್ ದದಾಮಿ ಮಾಂ ಚಾಪಿ ಸಹ ದಾಸ್ಯಾಯ ಇತಿ ।**

ಬ್ರಹ್ಮಜ್ಞಾನವು ಮುಕ್ತಿಸಾಧನವಾದುದರಿಂದ ಅದನ್ನು ತಿಳಿದವನು ಭಗವನ್ನಿಷ್ಠನೂ ಇಂದ್ರಿಯ ನಿಗ್ರಹವುಳ್ಳವನೂ, ಹೃದಯದಲ್ಲಿರುವ ವಿಷ್ಣುವಿನ ಬಗ್ಗೆ ಚಿಂತನೆಯಿಂದಲೇ ಸಂತೋಷಪಡುವವನೂ, ದ್ವಂದ್ವ ಸಹಿಷ್ಣುವೂ, ಯಥಾರ್ಥ ಜ್ಞಾನಿಯೂ ಆಗಿ ತನ್ನಲ್ಲಿಯೇ ಇರುವ ವಿಷ್ಣುವನ್ನು ತಿಳಿಯುತ್ತಾನೆ, ತಿಳಿಯಬೇಕು. ತನ್ನಲ್ಲಿರುವ ವಿಷ್ಣುವನ್ನು ಪೂರ್ಣನೆಂದು ತಿಳಿಯುತ್ತಾನೆ, ತಿಳಿಯಬೇಕು. ಹೀಗೆ ತಿಳಿದವನನ್ನು ಪಾಪವು ಆಕ್ರಮಿಸುವುದಿಲ್ಲ. ಇವನೇ ಸಕಲ ಪಾಪಗಳನ್ನೂ ದಾಟುತ್ತಾನೆ. ಅಂದರೆ ಇವನನ್ನು ಪಾಪವು ಸುಡುವುದಿಲ್ಲ. ಇವನೇ ಪಾಪವನ್ನು ಸುಡುತ್ತಾನೆ. ಬ್ರಹ್ಮಜ್ಞಾನಿಯು ಪಾಪರಹಿತನೂ ರಜಸ್ ಮೊದಲಾದ ಪ್ರಾಕೃತ

ದೋಷವಿಲ್ಲದವನೂ ಸಂಶಯರಹಿತನೂ ಆಗುತ್ತಾನೆ. ಏಕೆಂದರೆ ರಾಜನೇ! ಪೂರ್ಣ ಜ್ಞಾನಸ್ವರೂಪನಾದ ಈ ಹರಿಯು ಪಾಪರಹಿತನೂ ರಜಸ್ ಮೊದಲಾದ ಪ್ರಾಕೃತ ಗುಣರಹಿತನೂ, ಸಂಶಯರಹಿತನೂ, ವೇದಗಮ್ಯನೂ ಆಗಿದ್ದಾನೆ ಎಂದು ಯಾಜ್ಞವಲ್ಕ್ಯರು ಹೇಳಿದರು. 'ಪೂಜ್ಯರಾದ ನಿಮಗೆ ನಾನು ಇಡೀ ವಿದೇಹದೇಶವನ್ನು ಮತ್ತು ನನ್ನನ್ನೂ ಗುರುದಕ್ಷಿಣೆಯಾಗಿ ಕೊಡುತ್ತೇನೆ' ಎಂದು ರಾಜನು ಹೇಳಿದನು.

**ಭಾಷ್ಯ—ಶಾಂತಿಸ್ತು ಭಗವನ್ನಿಷ್ಠಾ ದಮೋ ಮದವಿನಿಗ್ರಹಃ ।**
**ಹೃದಿಸ್ಥವಿಷ್ಣೌ ಸಂತೋಷಃ ಸದೈವೋಪರಮಃ ಸ್ಮೃತಃ ।**
**ತಿತಿಕ್ಷಾ ದ್ವಂದ್ವಸಹತಾ ಕ್ಷಮಾ ಕ್ರೋಧಾಸಮುತ್ಥಿತಿಃ ।**
**ಇತಿ ಶಬ್ದನಿರ್ಣಯೇ ।**

**ಅನುವಾದ**—'ಶಾಂತಿಃ-ಭಗವನ್ನಿಷ್ಠಾ, ದಮಃ-ಮದದ ಪೂರ್ಣನಿಗ್ರಹ, ಉಪರಮಃ-ಹೃದಯದಲ್ಲಿರುವ ವಿಷ್ಣುವಿನ ಚಿಂತನೆಯಿಂದಲೇ ಸದಾ ಪಡೆಯುವ ಸಂತೋಷ, ತಿತಿಕ್ಷಾ-ದ್ವಂದ್ವಗಳ ಸಹನೆ, ಕ್ಷಮಾ-ಕೋಪವುಂಟಾಗದಿರುವ ಮನೋಧರ್ಮ ಎಂದು ಪ್ರಮಾಣಸಿದ್ಧವಾಗಿದೆ' ಎಂದು ಶಬ್ದನಿರ್ಣಯದಲ್ಲಿ ಹೇಳಿದೆ.

**ಭಾಷ್ಯ—ಸರ್ವಃ ಪೂರ್ಣಃ ಸಮುದ್ದಿಷ್ಟಸ್ತಥಾ ಜ್ಞೇಯೋ ಜನಾರ್ದನಃ ।**
**ರಾಗಸಂದೇಹಪಾಪಾನಿ ತಥಾ ಜಾನಂಸ್ತರಿಷ್ಯತಿ ।**
**ನಿತ್ಯಂ ಹಿ ರಾಗಪಾಪಾದೇರ್ಮುಕ್ತೋ ಯತ್ ಪುರುಷೋತ್ತಮಃ ।**
**ವೇದಾಖ್ಯಬ್ರಹ್ಮಣಾಽಣ್ಯತ್ವಾದ್ ವಿಷ್ಣುರ್ಬ್ರಾಹ್ಮಣ ಉಚ್ಯತೇ।**
**ಪೂರ್ಣತ್ವಾತ್ ಜ್ಞಾನರೂಪತ್ವಾತ್ ಬ್ರಹ್ಮಲೋಕಶ್ಚ ಸ ಪ್ರಭುಃ ।**

**ಅನುವಾದ**-ಸರ್ವಮಾತ್ಮಾನಂ ಪಶ್ಯತಿ ಎಂದರೆ ಏಕ್ಯ ತಿಳಿಯಬೇಕೆಂದರ್ಥವಲ್ಲ. ಸರ್ವ ಎಂದರೆ ಪೂರ್ಣ. ಜನಾರ್ದನನನ್ನು ಪೂರ್ಣ ಎಂದು ತಿಳಿಯಬೇಕು ಎಂದರ್ಥ. ಏಕೆಂದರೆ ಪುರುಷೋತ್ತಮನು ಯಾವಾಗಲೂ ರಾಗ, ಪಾಪ ಮೊದಲಾದ ದೋಷಗಳಿಂದ ಮುಕ್ತನಾಗಿದ್ದಾನೆ. ಆದ್ದರಿಂದ ಹಾಗೆ ತಿಳಿದವನೂ ರಾಗಸಂದೇಹ ಪಾಪಗಳನ್ನು ಕಳೆದುಕೊಳ್ಳುತ್ತಾನೆ. ವೇದಕ್ಕೆ ಬ್ರಹ್ಮ ಎಂದು ಹೆಸರು. ಈ 'ಬ್ರಹ್ಮ'ದಿಂದ ವಿಷ್ಣುವು 'ಅಣ್ಯ' ಎಂದರೆ ತಿಳಿಯಲ್ಪಡಬೇಕು. ಆದ್ದರಿಂದ ವಿಷ್ಣುವಿಗೆ 'ಬ್ರಾಹ್ಮಣ' ಎಂದು ಹೆಸರು. ಆ ಪ್ರಭುವು ಪೂರ್ಣನೂ ಜ್ಞಾನರೂಪನೂ ಆದ್ದರಿಂದ ಅವನಿಗೆ ಬ್ರಹ್ಮಲೋಕ ಎಂದೂ ಹೆಸರು.

**ತತ್ತ್ವಜ್ಞಾನದಿಂದ ಸಂಪತ್ತು, ಭಯಪರಿಹಾರ :**

**ಉಪನಿಷತ್—ಸ ವಾ ಏಷ ಮಹಾನಜ ಆತ್ಮಾಽನ್ನಾದೋ ವಸುದಾನಃ ।**
**ವಿಂದತೇ ವಸು ಯ ಏವಂ ವೇದ ।**

ಮಹಾನ್ ಅಜ ಆತ್ಮಾ ಎಂದು ಪ್ರಸಿದ್ಧನಾದ ಈ ಹರಿಯೇ ಸಕಲ ಪ್ರಪಂಚವನ್ನೂ ಲಯಕಾಲದಲ್ಲಿ ಸಂಹರಿಸುವವನು, ಜ್ಞಾನಿಗೆ, ದೈವ, ಮಾನುಷ ಸಂಪತ್ತುಗಳನ್ನು ಕೊಡುವವನು. ಹೀಗೆ ತಿಳಿದ ಉಪಾಸಕನು ದೈವ ಮಾನುಷ ಸಂಪತ್ತುಗಳನ್ನು ಹೊಂದುತ್ತಾನೆ.

**ಉಪನಿಷತ್—ಸ ವಾ ಏಷ ಮಹಾನಜ ಆತ್ಮಾಽಜರೋಽಮರೋಽಮೃತೋಽಭಯೋ ಬ್ರಹ್ಮ । ಅಭಯಂ ವೈ ಬ್ರಹ್ಮ । ಅಭಯಂ ಹಿ ವೈ ಬ್ರಹ್ಮ ಭವತಿ ಯ ಏವಂ ವೇದ ।**

ಮಹಾನ್, ಅಜ, ಆತ್ಮಾ ಎಂದು ಪ್ರಸಿದ್ಧನಾದ ಇವನು ಹುಟ್ಟಿಲ್ಲದವನು, ಭೂತಕಾಲದಲ್ಲಿ ಮರಣರಹಿತ, ಭವಿಷ್ಯತ್ ಕಾಲದಲ್ಲಿಯೂ ಮರಣರಹಿತ. ಭಯರಹಿತ. ಆಪ್ತಕಾಮ. ಈ ವಿಷಯ 'ತದೇತದಮೃತಮಭಯಂ ಏತತ್ ಬ್ರಹ್ಮ' ಎಂಬ ಶ್ರುತಿಪ್ರಸಿದ್ಧವಾದುದು. ಹೀಗೆ ತಿಳಿದವನು ಭಯರಹಿತನೂ, ಆಪ್ತಕಾಮನೂ ಆಗುತ್ತಾನೆ.

**ಭಾಷ್ಯ—ನ ಮರಿಷ್ಯತೀತಿ ಹ್ಯಮರೋ ನ ಮೃತೋ ಯತ್ತತೋಽಮೃತಃ ।**
**ಬ್ರಹ್ಮಾಯಮಾಪ್ತಕಾಮತ್ವಾದೇವಂ ಯೋ ವೇದ ತಂ ಪರಮ್ ।**
**ಆಪ್ತಕಾಮೋಽಭಯಶ್ಚೈವ ಭವೇದ್ ವಿಷ್ಣೋರನುಗ್ರಹಾತ್ ।**
**ಇತಿ ೭೫ ।**

**ಅನುವಾದ**—ಇವನು ಅಮರ. ಭವಿಷ್ಯತ್ ಕಾಲದಲ್ಲಿ ಮರಣವಿಲ್ಲದ್ದರಿಂದ. ಅಮೃತ, ಭೂತಕಾಲದಲ್ಲಿ ಮರಣವಿಲ್ಲದಿದ್ದುದರಿಂದ. ಬ್ರಹ್ಮ ಆಪ್ತಕಾಮನಾದುದರಿಂದ. ಹೀಗೆ ತಿಳಿದವನು ವಿಷ್ಣುವಿನ ಅನುಗ್ರಹದಿಂದ ಆಪ್ತಕಾಮನೂ ಭಯರಹಿತನೂ ಆಗುತ್ತಾನೆ.

**ಭಾಷ್ಯ—ಪರಮಾರ್ಥೇ 'ಅವಿಚಿಕಿತ್ಸೋ ಬ್ರಾಹ್ಮಣೋ ಭವತೀ'ತಿ ನಿತ್ಯಮೇವ ತಥಾ ಭವತೀತ್ಯರ್ಥಃ ।**

**ಅನುವಾದ**—ಪರಮಾತ್ಮನ ವಿಷಯದಲ್ಲಿ 'ಅವಿಚಿಕಿತ್ಸೋ ಬ್ರಾಹ್ಮಣೋ ಭವತಿ' ಎಂದರೆ ಯಾವಾಗಲೂ ಸಂದೇಹರಹಿತ, ಯಾವಾಗಲೂ ವೇದಗಮ್ಯನೇ ಆಗಿರುತ್ತಾನೆ ಎಂದು ಅರ್ಥ.

**ಭಾಷ್ಯ—ಅಭೂದ್ ಭವಿಷ್ಯತಿ ಭವತ್ಯೇವಮಾದ್ಯಪದಾನಿ ತು ।**

**ನಿತ್ಯಭಾವಾಭಿಧಾಯೀನಿ ಯತ್ರ ವಾಚ್ಯಾ ಹರೇರ್ಗುಣಾಃ ।**
**ಇತಿ ಶಬ್ದನಿರ್ಣಯೇ ।**

**॥ ಇತಿ ಶಾರೀರ ಬ್ರಾಹ್ಮಣಮ್ ॥**

**ಅನುವಾದ**—ಅಭೂತ್, ಭವಿಷ್ಯತಿ, ಭವತಿ ಮೊದಲಾದ ಪದಗಳು ಪರಿಯ ಗುಣಗಳನ್ನು ಹೇಳುವ ಸಂದರ್ಭದಲ್ಲಿ ತ್ರಿಕಾಲದಲ್ಲಿಯೂ ಅಸ್ತಿತ್ವವನ್ನು ಹೇಳುತ್ತವೆ ಎಂದು ಶಬ್ದನಿರ್ಣಯದಲ್ಲಿ ಉಕ್ತವಾಗಿದೆ.

**ವಿವರಣೆ**—ಬ್ರಾಹ್ಮಣೋ ಭವತಿ ಎಂಬಲ್ಲಿ ವರ್ತಮಾನಕಾಲದ ಕ್ರಿಯಾಪದ ಇದೆ. ವರ್ತಮಾನಕಾಲದಲ್ಲಿ ಮಾತ್ರ ಪರಮಾತ್ಮ ವೇದಗಮ್ಯ, ಭೂತ-ಭವಿಷ್ಯತ್ ಕಾಲಗಳಲ್ಲಿ ವೇದಗಮ್ಯನಲ್ಲ ಎಂದು ಭಾಸವಾಗುತ್ತದೆ. ಅವಿಚಿಕಿತ್ಸೋ ಭವತಿ ಎಂದರೂ ಈಗ ಸಂದೇಹವಿಲ್ಲದವನೆಂದು ಅರ್ಥವಾಗುತ್ತದೆ. ಪರಮಾತ್ಮನ ವಿಷಯ ದಲ್ಲಿ ಸಂದೇಹಾಭಾವಾದಿಗಳನ್ನು ವರ್ತಮಾನಕಾಲ ಮಾತ್ರಕ್ಕೆ ಸೀಮಿತಗೊಳಿಸ ಲಾಗದು. ಆದ್ದರಿಂದ ವರ್ತಮಾನಕಾಲ ಅವಿವಕ್ಷಿತ, ತ್ರಿಕಾಲವಿವಕ್ಷೆಯಿಂದಲೇ ಪ್ರಯೋಗ.

॥ ಇಲ್ಲಿಗೆ ಶಾರೀರ ಬ್ರಾಹ್ಮಣ ಮುಗಿಯಿತು ॥

**ಮೈತ್ರೇಯಿಯ ಅಧ್ಯಾತ್ಮ ನಿಷ್ಠೆ :**

**ಉಪನಿಷತ್**—**ಅಥ ಹ ಯಾಜ್ಞವಲ್ಕ್ಯಸ್ಯ ದ್ವೇ ಭಾರ್ಯೇ ಬಭೂವತುಃ ಮೈತ್ರೇಯೀ ಚ ಕಾತ್ಯಾಯನೀ ಚ । ತಯೋರ್ಹ ಮೈತ್ರೇಯೀ ಬ್ರಹ್ಮ ವಾದಿನೀ ಬಭೂವ । ಸ್ತ್ರೀಪ್ರಜ್ಞೈವ ತರ್ಹಿ ಕಾತ್ಯಾಯನೀ । ಅಥ ಹ ಯಾಜ್ಞವಲ್ಕ್ಯೋಽನ್ಯದ್ ವೃತ್ತಮುಪಾಕರಿಷ್ಯನ್ । ಮೈತ್ರೇಯೀತಿ ಹೋವಾಚ ಯಾಜ್ಞವಲ್ಕ್ಯಃ। ಪ್ರವ್ರಜಿಷ್ಯನ್ ವಾ ಅರೇ ಅಹಮಸ್ಮಾತ್ ಸ್ಥಾನಾದಸ್ಮಿ । ಹಂತ ತೇಽನಯಾ ಕಾತ್ಯಾಯನ್ಯಾಽಂತಂ ಕರವಾಣೀತಿ ।**

ಯಾಜ್ಞವಲ್ಕ್ಯರಿಗೆ ಮೈತ್ರೇಯೀ ಮತ್ತು ಕಾತ್ಯಾಯನೀ ಎಂದು ಇಬ್ಬರು ಪತ್ನಿಯರಿದ್ದರು. ಅವರಲ್ಲಿ ಮೈತ್ರೇಯಿ ಬ್ರಹ್ಮವಾದಿನಿಯಾಗಿದ್ದಳು. ಕಾತ್ಯಾಯನಿ ಸಾಮಾನ್ಯ ಸ್ತ್ರೀ ಬುದ್ಧಿ ಉಳ್ಳವಳಾಗಿದ್ದಳು. ಒಮ್ಮೆ ಯಾಜ್ಞವಲ್ಕ್ಯರು ಸನ್ಯಾಸಾ ಶ್ರಮ ಸ್ವೀಕರಿಸಲು ಸಂಕಲ್ಪಿಸಿದರು. 'ಮೈತ್ರೇಯಿ, ನಾನು ಗೃಹಸ್ಥಾಶ್ರಮವನ್ನು ಬಿಟ್ಟು ಸಂನ್ಯಾಸವನ್ನು ತೆಗೆದುಕೊಳ್ಳುವವನಿದ್ದೇನೆ. ನಿನಗೂ ಕಾತ್ಯಾಯನಿಗೂ ಆಸ್ತಿಯನ್ನು ವಿಭಾಗ ಮಾಡುತ್ತೇನೆ. ಇದು ಸಂತೋಷದ ವಿಷಯ' ಎಂದು ಹೇಳಿ ದರು.

**ಉಪನಿಷತ್**—ಸಾ ಹೋವಾಚ ಮೈತ್ರೇಯೀ ।'ಯನ್ನು ಮ ಇಯಂ ಭಗೋಃ ಸರ್ವಾ ಪೃಥಿವೀ ವಿತ್ತೇನ ಪೂರ್ಣಾ ಸ್ಯಾತ್ ಸ್ಯಾಂ ನ್ವಹಂ ತೇನಾಮೃತಾ ಆಹೋ ನೇ'ತಿ। ನೇತಿ ಹೋವಾಚ ಯಾಜ್ಞವಲ್ಕ್ಯಃ।ಯಥೈವೋಪಕರಣ ವತಾಂ ಜೀವಿತಂ ತಥೈವ ತೇ ಜೀವಿತಂ ಸ್ಯಾತ್ । ಅಮೃತತ್ವಸ್ಯ ತು ನಾಽಶಾಽಸ್ತಿ ವಿತ್ತೇನೇತಿ ।

ಮೈತ್ರೇಯಿಯು ಹೇಳಿದಳು. 'ಪೂಜ್ಯರೇ ಈ ಪೃಥಿವಿಯು ಸರ್ವಐಶ್ವರ್ಯ ದಿಂದ ಪೂರ್ಣವಾಗಿ ನನ್ನ ವಶವಾದರೆ ಅದರಿಂದ ನಾನು ಮೋಕ್ಷವನ್ನು ಪಡೆಯು ಲಾದೀತೆ? ಇಲ್ಲವೆ?' ಎಂದು. ಯಾಜ್ಞವಲ್ಕ್ಯರು 'ಇಲ್ಲ' ಎಂದರು. 'ಲೋಕದಲ್ಲಿ ಸಂಪತ್ತು ಮನೆ ಉದ್ಯಾನ ಮಂಚ ಹಾಸಿಗೆ ಮೊದಲಾದ ಭೋಗಸಾಧನ ಉಳ್ಳವರಿಗೆ ಹೇಗೆ ಸುಖಜೀವನ ಲಭಿಸುವುದೋ ಹಾಗೆಯೇ ನಿನಗೂ ಸುಖಜೀವನ ಮಾತ್ರ ಲಭಿ ಸೀತು ದೊರತು ಈ ಐಶ್ವರ್ಯದಿಂದ ಎಂದಿಗೂ ಮೋಕ್ಷವನ್ನು ಪಡೆಯುವ ಆಸೆಯೇ ಸಲ್ಲದು' ಎಂದು ಹೇಳಿದರು.

**ಉಪನಿಷತ್**—ಸಾ ಹೋವಾಚ ಮೈತ್ರೇಯೀ । 'ಯೇನಾಹಂ ನಾಮೃತಾ ಸ್ಯಾಂ ಕಿಮಹಂ ತೇನ ಕುರ್ಯಾಂ ? ಯದೇವ ಭಗವಾನ್ ವೇತ್ಥ ತದೇವ ಮೇ ಬ್ರೂಹಿ' ಇತಿ ।

ಆಗ ಮೈತ್ರೇಯಿಯು 'ಯಾವುದರಿಂದ ನಾನು ಮೋಕ್ಷವನ್ನು ಪಡೆಯಲು ಸಾಧ್ಯವಿಲ್ಲವೋ ಅದರಿಂದ ನಾನು ಏನು ಮಾಡಲಿ? ಆದ್ದರಿಂದ ಪೂಜ್ಯರು ಯಾವು ದನ್ನು ಮೋಕ್ಷಸಾಧನವೆಂದು ತಿಳಿದಿದ್ದೀರೋ ಅದನ್ನೇ ನನಗೆ ಹೇಳಿರಿ' ಎಂದು ಹೇಳಿದಳು.

**ಪ್ರಿಯಭಾಷಿಣಿ ಸತಿ :**

**ಉಪನಿಷತ್**—ಸ ಹೋವಾಚ ಯಾಜ್ಞವಲ್ಕ್ಯಃ । 'ಪ್ರಿಯಾ ವೈ ಖಲು ನೋ ಭವತೀ ಸತೀ ಪ್ರಿಯಮವೃಥತ್ । ಹಂತ ತರ್ಹಿ ಭವತಿ ಏತದ್ ವ್ಯಾಖ್ಯಾಸ್ಯಾಮಿ ತೇ । ವ್ಯಾಚಕ್ಷಾಣಸ್ಯ ತು ಮೇ ನಿದಿಧ್ಯಾಸಸ್ವೇ'ತಿ ।

ಯಾಜ್ಞವಲ್ಕ್ಯರು ಹೇಳಿದರು, 'ಮೈತ್ರೇಯಿ, ನೀನು ನನಗೆ ಪ್ರಿಯಳಾದ ಸತಿ• ಪ್ರಿಯವಾದ ಮಾತನ್ನಾಡುವ ಕಲೆಯನ್ನು ಬೆಳೆಸಿಕೊಂಡಿರುವಿ. ಬಹಳ ಸಂತೋಷ. ನಿನಗೆ ಮುಕ್ತಿಸಾಧನವಾದ ಪ್ರಮೇಯವನ್ನು ಉಪದೇಶಿಸುತ್ತೇನೆ. ಏಕಾಗ್ರತೆಯಿಂದ ಕೇಳು.

**ಭಾಷ್ಯ**—ಪ್ರಿಯಾಂ ವಾಚಮವರ್ಧಯದ್ ಭವತೀ ।

**ಅನುವಾದ**—'ಮೈತ್ರೇಯಿ, ನೀನು ಪ್ರಿಯವಾದ ಮಾತನ್ನಾಡುವ ಕಲೆಯನ್ನು ಬೆಳೆಸಿಕೊಂಡಿದ್ದಿ'.

**ವಿವರಣೆ**—ಉಪನಿಷತ್ತಿನಲ್ಲಿ ಇಲ್ಲಿ 'ಪ್ರಿಯಮವೃಧತ್' ಎಂದು ಹೇಳಿದೆ. ಹಿಂದೆ ದ್ವಿತೀಯಾಧ್ಯಾಯದಲ್ಲಿ 'ಪ್ರಿಯಂ ಭಾಷಸೇ' ಎಂದು ಹೇಳಿದೆ. ಅದಕ್ಕನುಗುಣವಾಗಿ ಈ ವಾಕ್ಯಕ್ಕೂ ಪ್ರಿಯವಾದ ಮಾತನ್ನು ಬೆಳೆಸಿಕೊಂಡಿರುವಿ ಎಂದು ವ್ಯಾಖ್ಯಾನಿಸುವುದು ಯುಕ್ತ. ಶಾಖಾಂತರದಲ್ಲಿ 'ಪ್ರಿಯಾಮವೃಧತ್' ಎಂದು ಪಾಠವಿರುವುದು ಈ ವ್ಯಾಖ್ಯಾನಕ್ಕೆ ಪುಷ್ಟಿ ಕೊಡುತ್ತದೆ. ಈ ಉಪನಿಷತ್ತಿನಲ್ಲಿಯೂ ಕೆಲವು ಪ್ರತಿಗಳಲ್ಲಿ 'ಪ್ರಿಯಾಮವೃಧತ್' ಎಂದೇ ಪಾಠ. ಆದ್ದರಿಂದ ಈ ವ್ಯಾಖ್ಯಾನ ಸ್ವಾರಸ್ಯವಾಗಿದೆ.

**ಹರಿಯ ಸನ್ನಿಧಾನದಿಂದಲೇ ಎಲ್ಲವೂ ಪ್ರಿಯ, ಅವನ ಸಾಕ್ಷಾತ್ಕಾರವೇ ತಾರಕ:**

**ಉಪನಿಷತ್**—ಸ ಹೋವಾಚ । **ನ ವಾ ಅರೇ ಪತ್ಯುಃ ಕಾಮಾಯ ಪತಿಃ ಪ್ರಿಯೋ ಭವತಿ । ಆತ್ಮನಸ್ತು ಕಾಮಾಯ ಪತಿಃ ಪ್ರಿಯೋ ಭವತಿ । ನ ವಾ ಅರೇ ಜಾಯಾಯೈ ಕಾಮಾಯ ಜಾಯಾ ಪ್ರಿಯಾ ಭವತಿ । ಆತ್ಮನಸ್ತು ಕಾಮಾಯ ಜಾಯಾ ಪ್ರಿಯಾ ಭವತಿ । ನ ವಾ ಅರೇ ಪುತ್ರಾಣಾಂ ಕಾಮಾಯ ಪುತ್ರಾಃ ಪ್ರಿಯಾ ಭವಂತಿ । ಆತ್ಮನಸ್ತು ಕಾಮಾಯ ಪುತ್ರಾಃ ಪ್ರಿಯಾ ಭವಂತಿ । ನ ವಾ ಅರೇ ವಿತ್ತಸ್ಯ ಕಾಮಾಯ ವಿತ್ತಂ ಪ್ರಿಯಂ ಭವತಿ । ಆತ್ಮನಸ್ತು ಕಾಮಾಯ ವಿತ್ತಂ ಪ್ರಿಯಂ ಭವತಿ। ನ ವಾ ಅರೇ ಪಶೂನಾಂ ಕಾಮಾಯ ಪಶವಃ ಪ್ರಿಯಾ ಭವಂತಿ । ಆತ್ಮನಸ್ತು ಕಾಮಾಯ ಪಶವಃ ಪ್ರಿಯಾ ಭವಂತಿ । ನ ವಾ ಅರೇ ಬ್ರಹ್ಮಣಃ ಕಾಮಾಯ ಬ್ರಹ್ಮ ಪ್ರಿಯಂ ಭವತಿ । ಆತ್ಮನಸ್ತು ಕಾಮಾಯ ಬ್ರಹ್ಮ ಪ್ರಿಯಂ ಭವತಿ । ನ ವಾ ಅರೇ ಕ್ಷತ್ರಸ್ಯ ಕಾಮಾಯ ಕ್ಷತ್ರಂ ಪ್ರಿಯಂ ಭವತಿ । ಆತ್ಮನಸ್ತು ಕಾಮಾಯ ಕ್ಷತ್ರಂ ಪ್ರಿಯಂ ಭವತಿ । ನ ವಾ ಅರೇ ಲೋಕಾನಾಂ ಕಾಮಾಯ ಲೋಕಾಃ ಪ್ರಿಯಾ ಭವಂತಿ । ಆತ್ಮನಸ್ತು ಕಾಮಾಯ ಲೋಕಾಃ ಪ್ರಿಯಾ ಭವಂತಿ । ನ ವಾ ಅರೇ ದೇವಾನಾಂ ಕಾಮಾಯ ದೇವಾಃ ಪ್ರಿಯಾ ಭವಂತಿ । ಆತ್ಮನಸ್ತು ಕಾಮಾಯ ದೇವಾಃ ಪ್ರಿಯಾ ಭವಂತಿ । ನ ವಾ ಅರೇ ವೇದಾನಾಂ ಕಾಮಾಯ ವೇದಾಃ ಪ್ರಿಯಾ ಭವಂತಿ । ಆತ್ಮನಸ್ತು ಕಾಮಾಯ ವೇದಾಃ ಪ್ರಿಯಾ ಭವಂತಿ । ನ ವಾ ಅರೇ ಭೂತಾನಾಂ ಕಾಮಾಯ ಭೂತಾನಿ ಪ್ರಿಯಾಣಿ ಭವಂತಿ । ಆತ್ಮನಸ್ತು ಕಾಮಾಯ ಭೂತಾನಿ ಪ್ರಿಯಾಣಿ ಭವಂತಿ । ನ ವಾ ಅರೇ ಸರ್ವಸ್ಯ ಕಾಮಾಯ ಸರ್ವಂ ಪ್ರಿಯಂ ಭವತಿ । ಆತ್ಮನಸ್ತು ಕಾಮಾಯ ಸರ್ವಂ ಪ್ರಿಯಂ ಭವತಿ ।**

**ಆತ್ಮಾ ವಾ ಅರೇ ದ್ರಷ್ಟವ್ಯಃ ಶ್ರೋತವ್ಯೋ ಮಂತವ್ಯೋ ನಿದಿಧ್ಯಾ-ಸಿತವ್ಯಃ। ಮೈತ್ರೇಯಿ,ಆತ್ಮನಿ ಖಲ್ವರೇ ದೃಷ್ಟೇ ಶ್ರುತೇ ಮತೇ ವಿಜ್ಞಾತೇ ಇದಂ ಸರ್ವಂ ವಿದಿತಮ್ ।**

ಮೈತ್ರೇಯಿ, ನಾನು ಇವಳಿಗೆ ಪ್ರಿಯನಾಗಬೇಕು ಎಂಬ ಪತಿಯ ಇಚ್ಛೆಯಿಂದ ಪತಿಯು ಪತ್ನಿಗೆ ಪ್ರಿಯನಾಗುವುದಿಲ್ಲ. ಶ್ರೀಹರಿಯ ಇಚ್ಛೆಯಿಂದ ಪತಿಯು ಪತ್ನಿಗೆ ಪ್ರಿಯನಾಗುತ್ತಾನೆ. ಪತ್ನಿಯ ಇಚ್ಛೆಯಿಂದ ಪತ್ನಿಯು ಪ್ರಿಯಳಾಗುವುದಿಲ್ಲ. ಶ್ರೀಹರಿಯ ಇಚ್ಛೆಯಿಂದ ಪತ್ನಿಯು ಪ್ರಿಯಳಾಗುತ್ತಾಳೆ. ಮಕ್ಕಳ ಇಚ್ಛೆಯಿಂದ ಮಕ್ಕಳು ಪ್ರಿಯರಾಗುವುದಿಲ್ಲ. ಶ್ರೀಹರಿಯ ಇಚ್ಛೆಯಿಂದ ಮಕ್ಕಳು ಪ್ರಿಯರಾಗುತ್ತಾರೆ. ಸಂಪತ್ತಿನ ಅಭಿಮಾನಿಯಾದ ಕುಬೇರನ ಇಚ್ಛೆಯಿಂದ ಸಂಪತ್ತು ಪ್ರಿಯವಾಗುವುದಿಲ್ಲ. ಶ್ರೀಹರಿಯ ಇಚ್ಛೆಯಿಂದ ಸಂಪತ್ತು ಪ್ರಿಯವಾಗುತ್ತದೆ. ಪಶ್ವಭಿಮಾನಿಯ ಇಚ್ಛೆಯಿಂದ ಪಶುಗಳು ಪ್ರಿಯವೆನಿಸುವುದಿಲ್ಲ. ಶ್ರೀಹರಿಯ ಇಚ್ಛೆಯಿಂದ ಪಶುಗಳು ಪ್ರಿಯವೆನಿಸುತ್ತವೆ. ಬ್ರಾಹ್ಮಣ ಜಾತಿಯ ಅಭಿಮಾನಿಯಾದ ವಿರಿಂಚನ ಇಚ್ಛೆಯಿಂದ ಬ್ರಾಹ್ಮಣ ಜಾತಿ ಪ್ರಿಯವಾಗುವುದಿಲ್ಲ. ಶ್ರೀಹರಿಯ ಇಚ್ಛೆಯಿಂದ ಬ್ರಾಹ್ಮಣ ಜಾತಿ ಪ್ರಿಯವಾಗುತ್ತದೆ. ಕ್ಷತ್ರಿಯ ಜಾತಿಯ ಅಭಿಮಾನಿಯಾದ ವಾಯುದೇವನ ಇಚ್ಛೆಯಿಂದ ಕ್ಷತ್ರಿಯ ಜಾತಿ ಪ್ರಿಯವಾಗುವುದಿಲ್ಲ. ಶ್ರೀಹರಿಯ ಇಚ್ಛೆಯಿಂದ ಕ್ಷತ್ರಿಯ ಜಾತಿ ಪ್ರಿಯವಾಗುತ್ತದೆ. ಲೋಕಾಭಿಮಾನಿದೇವತೆಗಳ ಇಚ್ಛೆಯಿಂದ ಲೋಕಗಳು ಪ್ರಿಯವಾಗುವುದಿಲ್ಲ. ಶ್ರೀಹರಿಯ ಇಚ್ಛೆಯಿಂದ ಲೋಕಗಳು ಪ್ರಿಯವಾಗುತ್ತವೆ. ದೇವತೆಗಳ ಇಚ್ಛೆಯಿಂದ ದೇವತೆಗಳು ಪ್ರಿಯರಾಗುವುದಿಲ್ಲ. ಶ್ರೀಹರಿಯ ಇಚ್ಛೆಯಿಂದ ದೇವತೆಗಳು ಪ್ರಿಯರಾಗುತ್ತಾರೆ. ವೇದಾಭಿಮಾನಿಗಳ ಇಚ್ಛೆಯಿಂದ ವೇದಗಳು ಪ್ರಿಯವಾಗುವುದಿಲ್ಲ. ಶ್ರೀಹರಿಯ ಇಚ್ಛೆಯಿಂದ ವೇದಗಳು ಪ್ರಿಯವಾಗುತ್ತವೆ. ಪಂಚಭೂತಾಭಿಮಾನಿ ದೇವತೆಗಳ ಇಚ್ಛೆಯಿಂದ ಪಂಚಮಹಾಭೂತಗಳು ಪ್ರಿಯವಾಗುವುದಿಲ್ಲ. ಶ್ರೀಹರಿಯ ಇಚ್ಛೆಯಿಂದ ಪಂಚಮಹಾಭೂತಗಳು ಪ್ರಿಯವಾಗುತ್ತವೆ. ಸರ್ವವಸ್ತುಗಳಭಿಮಾನಿಯಾದ ಲಕ್ಷ್ಮಿಯ ಇಚ್ಛೆಯಿಂದ ಸರ್ವವಸ್ತುಗಳು ಪ್ರಿಯವಾಗುವುದಿಲ್ಲ. ಶ್ರೀಹರಿಯ ಇಚ್ಛೆಯಿಂದ ಸರ್ವವಸ್ತುಗಳು ಪ್ರಿಯವಾಗುತ್ತವೆ. ಹೀಗೆ ಯಾರ ಇಚ್ಛೆಯಿಂದ ಪತಿ ಮೊದಲಾದವರು ಪ್ರಿಯರಾಗುತ್ತಾರೆಯೋ ಅಂತಹ ಶ್ರೀಹರಿಯನ್ನೇ ಮೋಕ್ಷಾರ್ಥಿಯು ದರ್ಶನ ಮಾಡಬೇಕು. ಅವನ ದರ್ಶನಕ್ಕೆ ಶ್ರವಣ ಮನನ ನಿದಿಧ್ಯಾಸನ ಈ ಮೂರು ಉಪಾಯಗಳು. ಶ್ರವಣ ಎಂದರೆ ಶ್ರುತಿ ವಾಕ್ಯಗಳ ಅರ್ಥಜ್ಞಾನ. ಮನನ ಎಂದರೆ ಶ್ರುತಿಯ ಅರ್ಥಗಳನ್ನು ಯುಕ್ತಿಗಳಿಂದ ದೃಢಪಡಿಸಿಕೊಳ್ಳುವುದು. ನಿದಿಧ್ಯಾಸನವೆಂದರೆ ಧ್ಯಾನ. ದರ್ಶನಕ್ಕೆ ಧ್ಯಾನವೇ ಸಾಕ್ಷಾತ್ ಸಾಧನ. ಶ್ರವಣ ಮನನಗಳು ಧ್ಯಾನಕ್ಕೆ ಪ್ರತಿಬಂಧಕವಾದ ಅಜ್ಞಾನ ಮತ್ತು ಸಂಶಯಗಳನ್ನು ನಿವಾರಣೆ ಮಾಡುವುದರಿಂದ ಧ್ಯಾನಕ್ಕೆ ಅಂಗಗಳು.

ಕರ್ಮದೇವತಾದಿ ಜ್ಞಾನವೂ ಫಲಸಾಧನವೇ ಆಗಿದ್ದರೂ, ಆತ್ಮನ ಶ್ರವಣ ಮನನ ವಿಜ್ಞಾನ ಮತ್ತು ನಿದಿಧ್ಯಾಸನಗಳಿಂದ ಕರ್ಮದೇವತಾದಿರೂಪವಾದ ಸರ್ವಜಗತ್ತೂ ವಿದಿತವಾದಂತೆಯೇ ಆಗುತ್ತದೆ ಅಂದರೆ ಕರ್ಮದೇವತಾದಿಗಳ ಜ್ಞಾನದಿಂದ ಉಂಟಾಗುವ ಎಲ್ಲ ಫಲವೂ ಲಭಿಸುತ್ತದೆ. ಪ್ರತ್ಯೇಕವಾಗಿ ಕರ್ಮದೇವತಾದಿಗಳ ಶ್ರವಣಾದಿಗಳನ್ನು ಮಾಡುವ ಆವಶ್ಯಕತೆ ಇಲ್ಲ.

**ದೇವತೆಗಳೆಲ್ಲ ಹರಿಗೆ ಅಧೀನರು :**

**ಉಪನಿಷತ್—ಬ್ರಹ್ಮ ತಂ ಪರಾದಾದ್ ಯೋಽನ್ಯತ್ರಾತ್ಮನೋ ಬ್ರಹ್ಮ ವೇದ। ಕ್ಷತ್ರಂ ತಂ ಪರಾದಾದ್ ಯೋಽನ್ಯತ್ರಾತ್ಮನಃ ಕ್ಷತ್ರಂ ವೇದ। ಲೋಕಾಸ್ತಂ ಪರಾದುಃ ಯೋಽನ್ಯತ್ರಾತ್ಮನೋ ಲೋಕಾನ್ ವೇದ। ದೇವಾಸ್ತಂ ಪರಾದುರ್ಯೋಽನ್ಯತ್ರಾತ್ಮನೋ ದೇವಾನ್ ವೇದ।ವೇದಾಸ್ತಂ ಪರಾದುರ್ಯೋಽನ್ಯತ್ರಾತ್ಮನೋ ವೇದಾನ್ ವೇದ। ಭೂತಾನಿ ತಂ ಪರಾದುರ್ಯೋಽನ್ಯತ್ರಾತ್ಮನೋ ಭೂತಾನಿ ವೇದ। ಸರ್ವಂ ತಂ ಪರಾದಾದ್ ಯೋಽನ್ಯತ್ರಾತ್ಮನಃ ಸರ್ವಂ ವೇದ। ಇದಂ ಬ್ರಹ್ಮ ಇದಂ ಕ್ಷತ್ರಮಿಮೇ ಲೋಕಾ ಇಮೇ ದೇವಾ ಇಮೇ ವೇದಾ ಇಮಾನಿ ಭೂತಾನಿ ಇದಂ ಸರ್ವಂ ಯದಯಮಾತ್ಮಾ।**

ಬ್ರಾಹ್ಮಣಜಾತ್ಯಭಿಮಾನಿಯಾದ ಚತುರ್ಮುಖನನ್ನು ಭಗವಂತನ ಅಧೀನನೆಂದು ಯಾರು ತಿಳಿಯುವುದಿಲ್ಲವೋ, ಅವನನ್ನಾಶ್ರಯಿಸದೇ ಬೇರೆಯವರನ್ನೇ ಆಶ್ರಯಿಸಿದವನೆಂದು ತಿಳಿಯುತ್ತಾನೆಯೋ ಅವನನ್ನು ಚತುರ್ಮುಖನು ಲೋಕಾಲೋಕಪರ್ವತದ ಆಚೆ ಇರುವ ಅಂಧಂತಮಸ್ಸಿನಲ್ಲಿ ಹಾಕುತ್ತಾನೆ. ಕ್ಷತ್ರಿಯಜಾತ್ಯಭಿಮಾನಿಯಾದ ವಾಯುವು ಭಗವದಧೀನನೆಂದು ಯಾರು ತಿಳಿಯುವುದಿಲ್ಲವೋ ಅವನನ್ನು ವಾಯುವು ಅಂಧಂತಮಸ್ಸಿನಲ್ಲಿ ಹಾಕುತ್ತಾನೆ. ಲೋಕಾಭಿಮಾನಿಗಳು, ದೇವತೆಗಳು, ವೇದಾಭಿಮಾನಿಗಳು, ಪಂಚಭೂತಾಭಿಮಾನಿಗಳು, ಸರ್ವಾಭಿಮಾನಿನಿಯಾದ ಲಕ್ಷ್ಮೀ ಇವರನ್ನು ಅನ್ಯಾಧೀನರೆಂದು ಯಾರು ತಿಳಿಯುತ್ತಾನೆಯೋ, ಭಗವದಧೀನರೆಂದು ತಿಳಿಯುವುದಿಲ್ಲವೋ ಅವನನ್ನು ಆ ಲೋಕಾಭಿಮಾನಿ ದೇವತೆಗಳೇ ಮೊದಲಾದವರು ಅಂಧಂತಮಸ್ಸಿನಲ್ಲಿ ಹಾಕುತ್ತಾರೆ. ಈ ಚತುರ್ಮುಖ, ವಾಯು, ಲೋಕಾಭಿಮಾನಿಗಳು, ದೇವತೆಗಳು, ವೇದಾಭಿಮಾನಿಗಳು, ಪಂಚಭೂತಾಭಿಮಾನಿಗಳು, ಸರ್ವ ವಸ್ತ್ವಭಿಮಾನಿನಿಯಾದ ಲಕ್ಷ್ಮೀದೇವಿ ಎಲ್ಲರೂ ಯಾರನ್ನು ಆಶ್ರಯಿಸಿರುವರೋ ಅವನೇ ನಾರಾಯಣ.

**ಶ್ರೀಹರಿಯೇ ಸೃಷ್ಟಿಕರ್ತ– ಮೂರು ಉದಾಹರಣೆಗಳು :**

**ಉಪನಿಷತ್—ಸ ಯಥಾ ದುಂದುಭೇರ್ಹನ್ಯಮಾನಸ್ಯ ನ ಬಾಹ್ಯಾನ್ ಶಬ್ದಾನ್**

**ಶಕ್ನುಯಾದ್ ಗ್ರಹಣಾಯ । ದುಂದುಭೇಸ್ತು ಗ್ರಹಣೇನ ದುಂದುಭ್ಯಾಘಾತಸ್ಯ ವಾ ಶಬ್ದೋ ಗೃಹೀತಃ ।**

ಭೇರಿಯನ್ನು ಮೊಳಗಿಸುತ್ತಿರುವಾಗ ಕೇಳಿಬರುವ ಶಬ್ದಗಳನ್ನು ಮದ್ದಳೆ ಮೊದಲಾದ ಬೇರೆ ವಾದ್ಯಗಳಿಂದ ಹುಟ್ಟಿದವೆಂದು ತಿಳಿಯಲು ಯಾರೂ ಶಕ್ತರಾಗುವುದಿಲ್ಲ. ಏಕೆಂದರೆ ಭೇರಿಯನ್ನೂ ಅದರ ಬಡಿತವನ್ನೂ ಪೂರ್ವಭಾವಿಯಾಗಿ ತಿಳಿದಿರುವುದರಿಂದ, ಆ ಶಬ್ದಗಳು ಭೇರಿಯಿಂದಲೇ ಹುಟ್ಟಿದವುಗಳೆಂದೂ, ಭೇರಿಯ ಅಧೀನವೆಂದೂ ತಿಳಿಯಲ್ಪಡುತ್ತವೆ. ಹಾಗೆಯೇ ಶ್ರೀಹರಿಯನ್ನೂ ಅವನ ಇಚ್ಛೆಯನ್ನೂ ಪೂರ್ವಭಾವಿಯಾಗಿ ತಿಳಿದವನು ಈ ಜಗತ್ತು ಚತುರ್ಮುಖಾದಿಗಳಿಂದ ಹುಟ್ಟಿದುದೆಂದಾಗಲೀ, ಅವರ ಅಧೀನವೆಂದಾಗಲೀ ತಿಳಿಯುವುದಿಲ್ಲ. ಶ್ರೀಹರಿಯ ಇಚ್ಛೆಯಿಂದಲೇ ಹುಟ್ಟಿದುದು, ಶ್ರೀಹರಿಗೇ ಅಧೀನವಾದುದು ಎಂದೇ ತಿಳಿಯುತ್ತಾನೆ. ಇಲ್ಲಿ ಶ್ರೀಹರಿಯು ಭೇರಿಯ ಸ್ಥಾನದಲ್ಲಿಯೂ, ಅವನ ಇಚ್ಛೆಯು ಬಡಿತದ ಸ್ಥಾನದಲ್ಲಿಯೂ ಇದೆ. ಭೇರಿ ಎಂದರೆ ಭೇರಿಯ ಅಭಿಮಾನಿದೇವತೆ ಎಂದೂ ಅರ್ಥ. ಭೇರಿಯನ್ನು ಮೊಳಗಿಸಿದಾಗ ಅದರ ಅಭಿಮಾನಿ ದೇವತೆಯನ್ನು ತಿಳಿದವನು ಅದರಿಂದುಂಟಾದ ಶಬ್ದಗಳನ್ನು ಆ ದೇವತೆಯ ಅಧೀನವೆಂದು ಹೇಗೆ ತಿಳಿಯುತ್ತಾನೆಯೋ ಹಾಗೆ ಎಂದರ್ಥ.

**ಉಪನಿಷತ್ತು**—**ಸ ಯಥಾ ಶಂಖಸ್ಯ ಧ್ಮಾಯಮಾನಸ್ಯ ನ ಬಾಹ್ಯಾನ್ ಶಬ್ದಾನ್ ಶಕ್ನುಯಾದ್ ಗ್ರಹಣಾಯ । ಶಂಖಸ್ಯ ತು ಗ್ರಹಣೇನ ಶಂಖಧ್ಮಸ್ಯ ವಾ ಶಬ್ದೋ ಗೃಹೀತಃ ।**

ಶಂಖವನ್ನು ಊದುತ್ತಿರುವಾಗ ಉಂಟಾದ ಶಬ್ದಗಳನ್ನು ಬೇರೆಯವುಗಳಿಂದ ಉಂಟಾದವು ಎಂದೂ, ಬೇರೆಯವುಗಳಿಗೆ ಅಧೀನವೆಂದೂ ಹೇಗೆ ಯಾರೂ ತಿಳಿಯಲಾರರೋ, ಶಂಖವನ್ನೂ ಶಂಖದ ಊದುವಿಕೆಯನ್ನೂ ಪೂರ್ವಭಾವಿಯಾಗಿ ತಿಳಿದಿರುವುದರಿಂದ ಶಂಖದಿಂದ ಉಂಟಾದವು ಶಂಖದ ಅಧೀನವಾದವು ಎಂದೇ ಹೇಗೆ ತಿಳಿಯುವರೋ ಹಾಗೆ.

**ಉಪನಿಷತ್**—**ಸ ಯಥಾ ವೀಣಾಯೈ ವಾದ್ಯಮಾನಾಯೈ ನ ಬಾಹ್ಯಾನ್ ಶಬ್ದಾನ್ ಶಕ್ನುಯಾದ್ ಗ್ರಹಣಾಯ । ವೀಣಾಯೈ ತು ಗ್ರಹಣೇನ ವೀಣಾವಾದಸ್ಯ ವಾ ಶಬ್ದೋ ಗೃಹೀತಃ ।**

ವೀಣೆಯನ್ನು ನುಡಿಸುವಾಗ ಉಂಟಾದ ಶಬ್ದಗಳನ್ನು ಬೇರೆಯವುಗಳಿಂದ ಉಂಟಾದವು ಎಂದೂ, ಬೇರೆಯವುಗಳ ಅಧೀನವೆಂದೂ ಹೇಗೆ ಯಾರೂ ತಿಳಿಯುವುದಿಲ್ಲವೋ, ವೀಣೆಯನ್ನೂ ಅದರ ನುಡಿಸುವಿಕೆಯನ್ನೂ ಪೂರ್ವಭಾವಿಯಾಗಿ ತಿಳಿದಿರು

ವುದರಿಂದ ವೀಣೆಯಿಂದ ಉಂಟಾದವು, ವೀಣೆಯ ಅಧೀನವಾದವು ಎಂದೇ ಹೇಗೆ ತಿಳಿಯುವರೋ ಹಾಗೆ.

**ಶ್ರೀ ಹಯಗ್ರೀವನ ಮುಖದಿಂದಲೇ ಸಕಲ ಶಾಸ್ತ್ರಗಳ ಆವಿರ್ಭಾವ ।**

**ಉಪನಿಷತ್—ಸ ಯಥಾಽರ್ದ್ರೈಧಾಗ್ನೇರಭ್ಯಾಹಿತಸ್ಯ ಪೃಥಗ್ ಧೂಮಾ ವಿನಿಶ್ಚರಂತಿ, ಏವಂ ವಾ ಅರೇ ಅಸ್ಯ ಮಹತೋ ಭೂತಸ್ಯ ನಿಃಶ್ವಸಿತಮೇವೈತದ್ ಯದೃಗ್ವೇದೋ ಯಜುರ್ವೇದಃ ಸಾಮವೇದೋಽಥರ್ವಾಂಗಿರಸ ಇತಿಹಾಸಃ ಪುರಾಣಂ ವಿದ್ಯಾ ಉಪನಿಷದಃ ಶ್ಲೋಕಾಃ ಸೂತ್ರಾಣ್ಯನುವ್ಯಾಖ್ಯಾನಾನಿ ವ್ಯಾಖ್ಯಾನಾನೀಷ್ಟಂ ಹುತಮಾಶಿತಂ ಪಾಯಿತಮಯಂ ಚ ಲೋಕಃ ಪರಶ್ಚ ಲೋಕಃ ಸರ್ವಾಣಿ ಚ ಭೂತಾನ್ಯಸ್ಯೈವೈತಾನಿ ಸರ್ವಾಣಿ ನಿಃಶ್ವಸಿತಾನಿ ।**

ಹೇಗೆ ಹಸಿಕಟ್ಟಿಗೆಯ ಬೆಂಕಿಯಿಂದ ನಾನಾ ಬಗೆಯಾಗಿ ಹೊಗೆ ಕಿಡಿಗಳು ಹೊರ ಹೊಮ್ಮುತ್ತವೆಯೋ ಹಾಗೆಯೇ, ಸರ್ವೋತ್ತಮನೂ ಶಾಶ್ವತನೂ ಆದ ಹಯಗ್ರೀವ ರೂಪಿಯಾದ ಶ್ರೀಹರಿಯಿಂದ ಋಗ್ವೇದ ಯಜುರ್ವೇದ ಸಾಮವೇದ ಅಥರ್ವವೇದ ವೆಂಬ ನಾಲ್ಕು ಅವಾಂತರ ವೇದಗಳು, ಮಹಾಭಾರತ, ಮೂಲರಾಮಾಯಣ, ಸಂಹಿತಾ ವ್ಯತಿರಿಕ್ತವಾದ ಪಂಚರಾತ್ರ, ಪುರಾಣ, ಮೂಲವೇದ, ಉಪನಿಷತ್ತು, ಪಂಚರಾತ್ರ ಸಂಹಿತಾ, ಬ್ರಹ್ಮಸೂತ್ರ, ವೇದವ್ಯಾಖ್ಯಾನಗಳು, ಯಾಗ,ಹೋಮ,ಅನ್ನ ದಾನ, ಜಲದಾನ, ಈ ಲೋಕ ಪರಲೋಕ ಸಾಧನಕರ್ಮಗಳು, ಎಲ್ಲ ಪ್ರಾಣಿಗಳು ಇವೆಲ್ಲವೂ ಆದಿಸೃಷ್ಟಿಯಲ್ಲಿ ಅನಾಯಸವಾಗಿ ಸೃಷ್ಟಿಸಲ್ಪಡುತ್ತವೆ.

**ಶ್ರೀಹರಿಯೇ ಸರ್ವಾಶ್ರಯ–ಉದಾಹರಣೆಗಳು :**

**ಉಪನಿಷತ್—ಸ ಯಥಾ ಸರ್ವಾಸಾಮಪಾಂ ಸಮುದ್ರ ಏಕಾಯನಮೇವಂ । ಸರ್ವೇಷಾಂ ಸ್ಪರ್ಶಾನಾಂ ತ್ವಗೇಕಾಯನಮೇವಂ । ಸರ್ವೇಷಾಂ ರಸಾನಾಂ ಜಿಹ್ವೈಕಾಯನಮೇವಂ। ಸರ್ವೇಷಾಂ ಗಂಧಾನಾಂ ನಾಸಿಕೈಕಾಯನಮೇವಮ್ । ಸರ್ವೇಷಾಂ ರೂಪಾಣಾಂ ಚಕ್ಷುರೇಕಾಯನಮೇವಮ್ । ಸರ್ವೇಷಾಂ ಶಬ್ದಾನಾಂ ಶ್ರೋತ್ರಮೇಕಾಯನಮೇವಂ । ಸರ್ವೇಷಾಂ ಸಂಕಲ್ಪಾನಾಂ ಮನ ಏಕಾಯನಮೇವಮ್ । ಸರ್ವಾಸಾಂ ವಿದ್ಯಾನಾಂ ಹೃದಯಮೇಕಾಯನಮ್ಮೇವಮ್ । ಸರ್ವೇಷಾಂ ಕರ್ಮಣಾಂ ಹಸ್ತಾವೇಕಾಯನಮೇವಮ್ । ಸರ್ವೇಷಾಮಾನಂದಾನಾಮುಪಸ್ಥ ಏಕಾಯನಮೇವಮ್।ಸರ್ವೇಷಾಂ ವಿಸರ್ಗಾಣಾಂ ಪಾಯುರೇಕಾಯನಮೇವಂ । ಸರ್ವೇಷಾಮಧ್ವನಾಂ ಪಾದಾವೇಕಾಯನಮೇವಮ್ । ಸರ್ವೇಷಾಂ ವೇದಾನಾಂ ವಾಗೇಕಾಯನಮ್ ।**

ಹೇಗೆ ಎಲ್ಲಾ ನೀರಿಗೂ ಸಮುದ್ರತಳ ಅಥವಾ ಸಮುದ್ರಾಭಿಮಾನಿಯಾದ ವರುಣನೇ ಮುಖ್ಯಾಶ್ರಯನೋ ಹಾಗೆಯೇ ಸಮಸ್ತ ಜಗತ್ತಿಗೂ ಭಗವಂತನೇ ಮುಖ್ಯಾಶ್ರಯ. ಹೇಗೆ ಎಲ್ಲಾ ಸ್ಪರ್ಶಜ್ಞಾನಕ್ಕೂ ತ್ವಗಿಂದ್ರಿಯ ಕಾರಣವೋ, ಹೇಗೆ ಎಲ್ಲಾ ರಸಜ್ಞಾನಕ್ಕೂ ರಸನೇಂದ್ರಿಯ ಕಾರಣವೋ, ಹೇಗೆ ಎಲ್ಲಾ ಗಂಧ ಜ್ಞಾನಕ್ಕೂ ಘ್ರಾಣೇಂದ್ರಿಯ ಕಾರಣವೋ, ಹೇಗೆ ಎಲ್ಲಾ ರೂಪಜ್ಞಾನಕ್ಕೂ ಚಕ್ಷುಸ್ ಕಾರಣವೋ, ಹೇಗೆ ಎಲ್ಲಾ ಶಬ್ದಜ್ಞಾನಕ್ಕೂ ಶ್ರೋತ್ರೇಂದ್ರಿಯ ಕಾರಣವೋ ಹಾಗೆಯೇ ಎಲ್ಲ ಜಗತ್ತಿನ ಜ್ಞಾನಕ್ಕೂ ಶ್ರೀಹರಿಯೇ ಮುಖ್ಯಕಾರಣ. ಹೇಗೆ ಎಲ್ಲಾ ಸಂಕಲ್ಪಗಳಿಗೂ ಮನಸ್ಸೇ ಮುಖ್ಯವಾದ ಆಶ್ರಯವೋ ಹೇಗೆ ಎಲ್ಲಾ ವಿದ್ಯೆಗಳಿಗೂ ಹೃದಯವೇ ಮುಖ್ಯಾಶ್ರಯವೋ, ಹೇಗೆ ಎಲ್ಲಾ ಕರ್ಮಗಳಿಗೂ ಹಸ್ತಗಳೇ ಮುಖ್ಯಾಶ್ರಯವೋ ಹೇಗೆ ಎಲ್ಲಾ ಆನಂದಗಳಿಗೂ ಉಪಸ್ಥವೇ ಮುಖ್ಯಾಶ್ರಯವೋ, ಹೇಗೆ ಎಲ್ಲಾ ವಿಸರ್ಜನೆಗಳಿಗೂ ಪಾಯುವೇ ಮುಖ್ಯವಾದ ಆಶ್ರಯವೋ, ಹೇಗೆ ಎಲ್ಲಾ ಗಮನ ಕ್ರಿಯೆಗಳಿಗೂ ಪಾದವೇ ಮುಖ್ಯವಾದ ಆಶ್ರಯವೋ, ಹೇಗೆ ಎಲ್ಲಾ ವೇದಗಳಿಗೂ ವಾಗಿಂದ್ರಿಯವೇ ಮುಖ್ಯವಾದ ಆಶ್ರಯವೋ ಹಾಗೆ ಶ್ರೀಹರಿಯು ಎಲ್ಲಾ ಜಗತ್ತಿಗೂ ಮುಖ್ಯವಾದ ಆಶ್ರಯ.

**ಜೀವಸ್ವರೂಪ ಒಳಹೊರಗೆಲ್ಲ ಒಂದೆ :**

**ಉಪನಿಷತ್—ಸ ಯಥಾ ಸೈಂಧವಘನೋಽನಂತರೋಽಬಾಹ್ಯಃ ಕೃತ್ಸ್ನೋ ರಸಘನ ಏವ ಏವಂ ವಾ ಅರೇ ಅಯಮಾತ್ಮಾ ಅನಂತರೋಽಬಾಹ್ಯಃ ಕೃತ್ಸ್ನಃ ಪ್ರಜ್ಞಾನಘನ ಏವ । ಏತೇಭ್ಯೋ ಭೂತೇಭ್ಯಃ ಸಮುತ್ಥಾಯ ತಾನ್ಯೇವಾನು ವಿನಶ್ಯತಿ । ನ ಪ್ರೇತ್ಯ ಸಂಜ್ಞಾ ಅಸ್ತೀತ್ಯರೇ ಬ್ರವೀಮೀತಿ ಹೋವಾಚ ಯಾಜ್ಞವಲ್ಕ್ಯಃ ।**

'ಉಪ್ಪಿನ ಹರಳಿಗೆ ಒಳಭಾಗದಲ್ಲಾಗಲೀ, ಹೊರಭಾಗದಲ್ಲಾಗಲೀ ವ್ಯತ್ಯಾಸವೇ ಇಲ್ಲ. ಆದ್ದರಿಂದ ಇಡೀ ಹರಳಿನಲ್ಲಿ ಎಲ್ಲೆಡೆ ಉಪ್ಪಿನ ರಸವೆ ತುಂಬಿದೆ. ಹೀಗೆಯೇ ಈ ಜೀವಾತ್ಮನಲ್ಲಿ ಒಳಭಾಗ ಹೊರಭಾಗ ಎಂಬ ವ್ಯತ್ಯಾಸವಿಲ್ಲದೆ ಇಡಿಯಾಗಿ ಜ್ಞಾನ ಸ್ವರೂಪನಾಗಿದ್ದಾನೆ. ಆದರೆ ಪಂಚಭೂತಗಳ ಸಂಯೋಗದಿಂದ ಹುಟ್ಟಿ, ಅವುಗಳ ವಿಯೋಗದಿಂದ ಸಾಯುತ್ತಾನೆ ಹೊರತು ಸ್ವತಃ ಉತ್ಪತ್ತಿ ನಾಶವಿಲ್ಲ. ಮೈತ್ರೇಯಿ! ಜೀವನು ಮುಕ್ತನಾದ ಬಳಿಕ ಜ್ಞಾನವಿಲ್ಲ. ಇದು ನನ್ನ ಉಪದೇಶ' ಎಂದು ಯಾಜ್ಞವಲ್ಕ್ಯರು ಹೇಳಿದರು.

**ಭಾಷ್ಯ—ಬಾಹ್ಯಾಂತರ ವಿಶೇಷಾಭಾವೇನ ಸರ್ವತ್ರ ಲವಣರಸ ಘನ ಏವ ।**

**ಅನುವಾದ**—'ಅನಂತರಃ ಅಬಾಹ್ಯಃ ಕೃತ್ಸ್ನೋ ರಸಘನ ಏವ' ಎಂದರೆ ಒಳ

ಭಾಗವಲ್ಲಾಗಲೀ, ಹೊರಭಾಗದಲ್ಲಾಗಲೀ ಯಾವ ವ್ಯತ್ಯಾಸವೂ ಇಲ್ಲದಿರುವುದರಿಂದ ಎಲ್ಲ ಕಡೆಗೂ ಉಪ್ಪಿನ ರಸವೆ ತುಂಬಿವೆ ಎಂದರ್ಥ.

**ಉಪನಿಷತ್—ಸಾ ಹೋವಾಚ ಮೈತ್ರೇಯೀ । 'ಅತ್ರೈವ ಮಾ ಭಗವಾನ್ ಮೋಹಾಂತಮಾಪೀಪಿಪತ್ ನ ವಾ ಅಹಮಿಮಂ ವಿಜಾನಾತೀ'ತಿ । ಸ ಹೋವಾಚ । 'ನ ವಾ ಅರೇ ಅಹಂ ಮೋಹಂ ಬ್ರವೀಮಿ । ಅವಿನಾಶೀ ವಾ ಅರೇ ಅಯಮಾತ್ಮಾನುಚ್ಛಿತ್ತಿಧರ್ಮಾ' ।**

ಮೈತ್ರೇಯಿ ಹೇಳಿದಳು, ಜೀವನು ಮುಕ್ತನಾದ ಬಳಿಕ ಜ್ಞಾನವೆ ಇಲ್ಲವೆಂದರೆ ಮುಕ್ತನಿಗೆ ಅಂತರ್ಯಾಮಿಯ ಅರಿವೂ ಇಲ್ಲವೆಂದಾಯಿತು. ಪೂಜ್ಯರು ಈ ವಿಷಯ ದಲ್ಲಿ ನನಗೆ ಮೋಹ ಉಂಟು ಮಾಡಿದಿರಿ, ನಷ್ಟ ಉಂಟು ಮಾಡಿದಿರಿ. ಯಾಜ್ಞ ವಲ್ಕ್ಯರು ಹೇಳಿದರು, ಮೈತ್ರೇಯಿ! ನಾನು ಮೋಹಕವಾದ ಮಾತನ್ನು ಹೇಳಿಲ್ಲ. ಜೀವನಿಗೆ ಮೋಕ್ಷವಾದಾಗ ಪ್ರಾಕೃತಜ್ಞಾನ ಇಲ್ಲವಾಗುತ್ತದೆ ಹೊರತು ಜೀವಾತ್ಮನ ಜ್ಞಾನಮಯವಾದ ಸ್ವರೂಪವು ನಾಶವಾಗುವುದಿಲ್ಲ.

**ಭಾಷ್ಯ—'ನ ವಾ ಅಹಮಿಮಂ ವಿಜಾನಾತೀ'ತಿ ಅಹೇಯಂ ಪರಮಾತ್ಮಾನಂ ಜೀವೋ ನ ವಿಜಾನಾತೀತಿ, ಅತ್ರೈವ ಭಗವಾನ್ 'ಮೋಹಾಂತಂ' ಮೋಹಾಖ್ಯಂ ನಾಶಂ, 'ಆಪೀಪಿಪತ್' ಪ್ರಾಪಯಾಮಾಸ ।**

**ಅನುವಾದ**—'ನ ವಾ ಅಹಮಿಮಂ ವಿಜಾನಾತಿ' ಎಂದರೆ ನನಗಿದು ತಿಳಿ ಯುವುದಿಲ್ಲವೆಂದರ್ಥವಲ್ಲ. ಅಹೇಯನಾದ ಅಂತರ್ಯಾಮಿಯನ್ನು ಮುಕ್ತಜೀವನು ತಿಳಿಯುವುದಿಲ್ಲ ಎಂಬ ಈ ವಿಷಯದಲ್ಲೇ ಪೂಜ್ಯರಾದ ನೀವು ನನಗೆ ಮೋಹ ಎಂಬ ನಾಶವನ್ನು ಉಂಟುಮಾಡಿದ್ದೀರಿ ಎಂದರ್ಥ.

**ಭಾಷ್ಯ—ಅತಃ 'ಅಹಂ ಬ್ರಹ್ಮಾಸ್ಮಿ' ಇತ್ಯಾದಿಷ್ವಪಿ ಅಹಂಶಬ್ದೋಽಹೇಯ ವಾಚೀತಿ ಸಿದ್ಧಮ್ । ಅನ್ಯಥಾ ಕಥಂ'ಅಹಂ ವಿಜಾನಾತೀ'ತಿ ಯುಜ್ಯೇತ?**

**ಅನುವಾದ**—ಹೀಗೆ 'ನ ವಾ ಅಹಮಿಮಂ ವಿಜಾನಾತಿ' ಎಂಬಲ್ಲಿ ಅಹಂ ಪದಕ್ಕೆ ಅಹೇಯನಾದ ಪರಮಾತ್ಮ ಎಂದು ಅರ್ಥವು ಯುಕ್ತವಾಗಿರುವುದರಿಂದ 'ಅಹಂ ಬ್ರಹ್ಮಾಸ್ಮಿ' ಮೊದಲಾದ ವಾಕ್ಯಗಳಲ್ಲೂ ಅಹಂ ಶಬ್ದವು ಅಹೇಯ ಎಂಬ ಅರ್ಥವನ್ನು ಹೇಳುತ್ತದೆ ಎಂದು ಸಿದ್ಧವಾಯಿತು. ಇಲ್ಲದಿದ್ದರೆ 'ಅಹಂ ವಿಜಾನಾತಿ' ಎಂಬ ಪ್ರಯೋಗ ಹೇಗೆ ಯುಕ್ತವಾಗುವುದು? ಇದು 'ನಾನು' ಎಂಬ ಅರ್ಥದ 'ಅಹಂ' ಶಬ್ದವಾಗಿರುತ್ತಿದ್ದರೆ ಕ್ರಿಯಾಪದದಲ್ಲಿ ಉತ್ತಮಪುರುಷ ಪ್ರಯೋಗವಿರಬೇಕಾಗಿತ್ತು, 'ವಿಜಾನಾತಿ' ಎಂಬುವದರ ಬದಲಿಗೆ 'ವಿಜಾನಾಮಿ' ಎಂದಿರಬೇಕಾಗಿತ್ತು.

**ಉಪನಿಷತ್—ಯತ್ರ ಹಿ ದ್ವೈತಮಿವ ಭವತಿ ತದಿತರ ಇತರಂ ಪಶ್ಯತಿ । ತದಿತರ ಇತರಂ ಜಿಘ್ರತಿ । ತದಿತರ ಇತರಂ ರಸಯತೇ । ತದಿತರ ಇತರಮಭಿವದತಿ । ತದಿತರ ಇತರಂ ಶೃಣೋತಿ । ತದಿತರ ಇತರಂ ಮನುತೇ । ತದಿತರ ಇತರಂ ಸ್ಪೃಶತಿ । ತದಿತರ ಇತರಂ ವಿಜಾನಾತಿ । ಯತ್ರ ತ್ವಸ್ಯ ಸರ್ವಮಾತ್ಮೈವಾಭೂತ್ ತತ್ ಕೇನ ಕಂ ಪಶ್ಯೇತ್ । ತತ್ ಕೇನ ಕಂ ಜಿಘ್ರೇತ್ । ತತ್ ಕೇನ ಕಂ ರಸಯೇತ್ । ತತ್ ಕೇನ ಕಮಭಿವದೇತ್ । ತತ್ ಕೇನ ಕಂ ಶೃಣುಯಾತ್ । ತತ್ ಕೇನ ಕಂ ಮನ್ವೀತ । ತತ್ ಕೇನ ಕಂ ಸ್ಪೃಶೇತ್ । ತತ್ ಕೇನ ಕಂ ವಿಜಾನೀಯಾತ್ । ಯೇನೇದಂ ಸರ್ವಂ ವಿಜಾನಾತಿ ತಂ ಕೇನ ವಿಜಾನೀಯಾತ್ ।**

ಮುಕ್ತಿಯಲ್ಲಿ ಆತ್ಮನೊಬ್ಬನೇ ಉಳಿದು ಎರಡನೆ ವಸ್ತುವೇ ಇಲ್ಲದಾಗುವುದರಿಂದ ಮುಕ್ತನಿಗೆ ಜ್ಞಾನವೆ ಇಲ್ಲ ಎನ್ನುವಾಗ ಅತಿಪ್ರಸಂಗ ಬರುತ್ತದೆ. ಹೇಗೆಂದರೆ ಯಾವಾಗ ಪರತಂತ್ರವಾದ ಭಿನ್ನವಸ್ತು ಇರುತ್ತದೆಯೋ ಆಗಲಿ ಜೀವನು ತನ್ನಿಂದ ಬೇರೆಯಾದ ರೂಪವನ್ನು ನೋಡುತ್ತಾನೆ ಗಂಧವನ್ನು ಆಘ್ರಾಣಿಸುತ್ತಾನೆ ರಸವನ್ನು ಆಸ್ವಾದಿಸುತ್ತಾನೆ ಮಾತನಾಡುತ್ತಾನೆ ಮಾತನ್ನು ಕೇಳುತ್ತಾನೆ ವಸ್ತುವನ್ನು ಸಾಮಾನ್ಯವಾಗಿ ತಿಳಿಯುತ್ತಾನೆ ವಸ್ತುವನ್ನು ಮುಟ್ಟಿ ತಿಳಿಯುತ್ತಾನೆ ವಸ್ತುವನ್ನು ವಿಶೇಷವಾಗಿ ತಿಳಿಯುತ್ತಾನೆ. ಜೀವನಿಗೆ ಮುಕ್ತಿಯಲ್ಲಿ ಇಂದ್ರಿಯ ಹಾಗೂ ವಿಷಯಗಳೆಲ್ಲವೂ ಆತ್ಮಸ್ವರೂಪವೆ ಆದರೆ ಅಂದರೆ, ಆತ್ಮಾತಿರಿಕ್ತವಾದ ಯಾವ ವಸ್ತುವೂ ಇಲ್ಲವೆಂದಾದರೆ ಯಾವ ಇಂದ್ರಿಯದಿಂದ ಏನು ನೋಡುತ್ತಾನೆ ಏನು ಆಘ್ರಾಣಿಸುತ್ತಾನೆ ಏನು ಸವಿಯುತ್ತಾನೆ ಏನು ನುಡಿಯುತ್ತಾನೆ ಏನು ಕೇಳುತ್ತಾನೆ ಏನು ಸಾಮಾನ್ಯವಾಗಿ ತಿಳಿಯುತ್ತಾನೆ ಏನು ಮುಟ್ಟಿ ತಿಳಿಯುತ್ತಾನೆ ಏನು ವಿಶೇಷವಾಗಿ ತಿಳಿಯುತ್ತಾನೆ? ಯಾರಿಂದ ಜೀವನು ಎಲ್ಲವನ್ನು ತಿಳಿಯುತ್ತಾನೆಯೋ ಅಂಥ ಪರಮಾತ್ಮನನ್ನಾದರೂ ಯಾವ ಇಂದ್ರಿಯದಿಂದ ತಿಳಿಯುತ್ತಾನೆ?

**ಉಪನಿಷತ್—ಸ ಏಷ ನೇತಿ । ನೇತಿ । ಆತ್ಮಾ ಅಗೃಹ್ಯೋ ನ ಹಿ ಗೃಹ್ಯತೇ । ಅಶೀರ್ಯೋ ನ ಹಿ ಶೀರ್ಯತೇ । ಅಸಂಗೋ ನ ಹಿ ಸಜ್ಜತೇ । ಅಸಿತೋ ನ ವ್ಯಥತೇ । ನ ರಿಷ್ಯತಿ । ವಿಜ್ಞಾತಾರಮರೇ ಕೇನ ವಿಜಾನೀಯಾತ್ ।**

ಅಂತಹ ಈ ಹರಿಯು ಶ್ರೀದೇವಿಯಂತೆಯೂ ಅಲ್ಲ, ಬ್ರಹ್ಮಾದಿಗಳಂತೆಯೂ ಅಲ್ಲ. ಶ್ರೀಹರಿಯು ಸಂಪೂರ್ಣವಾಗಿ ತಿಳಿಯಲ್ಪಡುವುದಿಲ್ಲ. ಏಕೆಂದರೆ ಸಂಪೂರ್ಣವಾಗಿ ತಿಳಿಯಲ್ಪಡುತ್ತಾನೆ ಎಂಬ ವಿಷಯದಲ್ಲಿ ಪ್ರಮಾಣವಿಲ್ಲ. ಕಾಲದಿಂದ ಅಥವಾ ಬೇರೆ ಕಾರಣಗಳಿಂದ ಹಿಂಸೆ ಇಲ್ಲದವನು, ಏಕೆಂದರೆ ಹಿಂಸಿಸಲ್ಪಡುತ್ತಾನೆ ಎಂಬ

ವಿಷಯದಲ್ಲಿ ಪ್ರಮಾಣವಿಲ್ಲ. ಪ್ರಪಂಚದ ಜೊತೆ ಸಂಬಂಧ ಹೊಂದಿದ್ದರೂ ಪ್ರಪಂಚ ದೋಷಗಳ ಲೇಪವಿಲ್ಲದವನು, ಏಕೆಂದರೆ ದೋಷ ಲೇಪವಿದೆ ಎಂಬ ವಿಷಯದಲ್ಲಿ ಪ್ರಮಾಣವಿಲ್ಲ. ಬಂಧನವಿಲ್ಲದವನು, ನಾಶವಿಲ್ಲದವನು. ಏಕೆಂದರೆ ದುಃಖವಿದೆ ನಾಶ ವಿದೆ ಎಂಬ ವಿಷಯದಲ್ಲಿ ಪ್ರಮಾಣವಿಲ್ಲ. ಮೈತ್ರೇಯಿ, ಮುಕ್ತನು ಜ್ಞಾತೃವಾದ ತನ್ನನ್ನೂ ಯಾವ ಜ್ಞಾನ ಸಾಧನದಿಂದ ತಿಳಿದಾನು ?

**ಮೋಕ್ಷವೆಂದರೇನು ?**

**ಉಪನಿಷತ್—'ಇತ್ಯುಕ್ತಾನುಶಾಸನಾಸಿ ಮೈತ್ರೇಯಿ ಏತಾವದರೇ ಖಲ್ವ-ಮೃತತ್ವಮಿ'ತಿ ಹೋಕ್ತ್ವಾ ಯಾಜ್ಞವಲ್ಕ್ಯೋ ವಿಜಹಾರ ।**

'ಮೈತ್ರೇಯಿ! ಇದು ನಿನಗೆ ನನ್ನ ಉಪದೇಶ. ಮುಕ್ತನಿಗೆ ಅಂತರ್ಯಾಮಿಯ ಜ್ಞಾನವಿದೆ. ತನ್ನ ಸ್ವರೂಪ ಜ್ಞಾನವಿದೆ. ವಿಷಯ ಪದಾರ್ಥ ಜ್ಞಾನವಿದೆ. ಮೋಕ್ಷ ವೆಂದರೆ ಇಷ್ಟೇ'. ಹೀಗೆ ಹೇಳಿ ಯಾಜ್ಞವಲ್ಕ್ಯರು ತೃಪ್ತರಾದರು.

**ಭಾಷ್ಯ—ಏತಾವದ್ ವಿಜ್ಞಾತುಃ ಪರಮಾತ್ಮನೋ ವಿಜ್ಞಾನಾದಿಕಮೇವಂ ಹ್ಯಮೃತತ್ವಂ ಮೋಕ್ಷಃ ।**

**ಅನುವಾದ**—'ಏತಾವದರೇ ಖಲ್ವಮೃತತ್ವಂ' ಎಂದರೆ ಜೀವಾತ್ಮನಿಗೆ ಮೋಕ್ಷ ವೆಂದರೆ ಇಷ್ಟೇ, ಅಂದರೆ ಜೀವಾತ್ಮನಿಗೆ ಪರಮಾತ್ಮನ ವಿಶೇಷವಾದ ಜ್ಞಾನ, ಜೀವಾತ್ಮನ ಸ್ವರೂಪಜ್ಞಾನ, ವಿಷಯಗಳ ಜ್ಞಾನ ಇವಿಷ್ಟೇ ಮೋಕ್ಷ ಎಂದರ್ಥ ಹೊರತು ನಾನೀಗ ಉಪದೇಶಿಸಿದುದೇ ಮೋಕ್ಷಸಾಧನ ಜ್ಞಾನ ಎಂದರ್ಥವಲ್ಲ.

**ಭಾಷ್ಯ—ವಿಷ್ಣೋರ್ಜ್ಞಾನಾದಿಕಂ ಮೋಕ್ಷಸ್ತದಭಾವೇ ಕುತಃ ಸುಖಮ್ ।**
**ಜ್ಞೇಯಾಭಾವಾನ್ನ ಹಿ ಜ್ಞಾನಂ ಜ್ಞಾನಾಭಾವೇ ಹಿ ಶೂನ್ಯತಾ ।**
**ತಸ್ಮಾಜ್ಜ್ಞೇಯಯುತೋ ಮೋಕ್ಷಃ ಸುಖರೂಪತ್ವತಃ ಸದಾ ।**
**ಇತಿ ಬ್ರಹ್ಮತರ್ಕೇ ।**

**॥ ಇತಿ ಮೈತ್ರೇಯೀ ಬ್ರಾಹ್ಮಣಂ ॥**

**ಅನುವಾದ**–ಜೀವನಿಗೆ ವಿಷ್ಣುವಿನ ಜ್ಞಾನ ಮೊದಲಾದವುಗಳೇ ಮೋಕ್ಷ. ಅವು ಇಲ್ಲದಿದ್ದರೆ ಸುಖ ಹೇಗೆ ಲಭಿಸಬೇಕು? ಜ್ಞಾನಕ್ಕೆ ವಿಷಯವೇ ಇಲ್ಲದಿದ್ದರೆ ಜ್ಞಾನ ಇಲ್ಲವಾಗುವುದು. ಜ್ಞಾನವಿಲ್ಲದಿದ್ದರೆ ಶೂನ್ಯಸ್ಥಿತಿ ಉಂಟಾದೀತು. ಆದ್ದರಿಂದ ಜ್ಞಾನ ವಿಷಯವಿದ್ದರೇನೇ ಅದು ಸುಖರೂಪವಾಗಿದ್ದು ಮೋಕ್ಷವೆನಿಸುತ್ತದೆ ಎಂದು ಬ್ರಹ್ಮ ತರ್ಕದಲ್ಲಿ ಹೇಳಿದೆ.

ಇಲ್ಲಿಗೆ ಮೈತ್ರೇಯೀ ಬ್ರಾಹ್ಮಣ ಮುಗಿಯಿತು.

ಗುರು ಶಿಷ್ಯರು :

ಉಪನಿಷತ್—ಅಥ ವಂಶಃ । ಪೌತಿಮಾಷ್ಯೋ ಗೌಪವನಾತ್ । ಗೌಪವನಃ ಪೌತಿಮಾಷ್ಯಾತ್ । ಪೌತಿಮಾಷ್ಯೋ ಗೌಪವನಾತ್ । ಗೌಪವನಃ ಕೌಶಿಕಾತ್ । ಕೌಶಿಕಃ ಕೌಂಡಿನ್ಯಾತ್ । ಕೌಂಡಿನ್ಯಃ ಶಾಂಡಿಲ್ಯಾತ್ । ಶಾಂಡಿಲ್ಯಃ ಕೌಶಿಕಾಚ್ಚ ಗೌತಮಾಚ್ಚ । ಗೌತಮ ಆಗ್ನಿವೇಶ್ಯಾತ್ । ಆಗ್ನಿವೇಶ್ಯೋ ಗಾರ್ಗ್ಯಾತ್ । ಗಾರ್ಗ್ಯೋ ಗಾರ್ಗ್ಯಾತ್ । ಗಾರ್ಗ್ಯೋ ಗೌತಮಾತ್ । ಗೌತಮಃ ಸೈತವಾತ್ । ಸೈತವಃ ಪಾರಾಶರ್ಯಾಯಣಾತ್ । ಪಾರಾಶರ್ಯಾಯಣೋ ಗಾರ್ಗ್ಯಾಯಣಾತ್ । ಗಾರ್ಗ್ಯಾಯಣ ಉದ್ದಾಲಕಾಯನಾತ್ । ಉದ್ದಾಲಕಾಯನೋ ಜಾಬಾಲಾಯನಾತ್। ಜಾಬಾಲಾಯನೋ ಮಾಧ್ಯಂದಿನಾಯನಾತ್। ಮಾಧ್ಯಂದಿನಾಯನಃ ಸೌಕರಾಯಣಾತ್ । ಸೌಕರಾಯಣಃ ಕಾಷಾಯಣಾತ್ । ಕಾಷಾಯಣಃ ಸಾಯಕಾಯನಾತ್।ಸಾಯಕಾಯನಃ ಕೌಶಿಕಾಯನೇಃ। ಕೌಶಿಕಾಯನಿಃ ಘೃತಕೌಶಿಕಾತ್ । ಘೃತಕೌಶಿಕಃ ಪಾರಾಶರ್ಯಾಯಣಾತ್ । ಪಾರಾಶರ್ಯಾಯಣಃ ಪಾರಾಶರ್ಯಾತ್ । ಪಾರಾಶರ್ಯೋ ಜಾತುಕರ್ಣ್ಯಾತ್ । ಜಾತುಕರ್ಣ್ಯ ಆಸುರಾಯಣಾಚ್ಚ ಯಾಸ್ಕಾಚ್ಚ । ಆಸುರಾಯಣಃ ತ್ರೈವರ್ಣೇಃ । ತ್ರೈವರ್ಣಿಃ ಔಪಬಂಧನೇಃ । ಔಪಬಂಧನಿಃ ಆಸುರೇಃ । ಆಸುರಿಃ ಭಾರದ್ವಾಜಾತ್ । ಭಾರದ್ವಾಜ ಆತ್ರೇಯಾತ್ । ಆತ್ರೇಯೋ ಮಾಂಡೇಃ । ಮಾಂಡಿಃ ಗೌತಮಾತ್ । ಗೌತಮೋ ಗೌತಮಾತ್ । ಗೌತಮೋ ವಾತ್ಸ್ಯಾತ್ । ವಾತ್ಸ್ಯಃ ಶಾಂಡಿಲ್ಯಾತ್ । ಶಾಂಡಿಲ್ಯಃ ಕೈಶೋರ್ಯಾತ್ ಕಾಪ್ಯಾತ್ । ಕೈಶೋರ್ಯಃ ಕಾಪ್ಯಃ ಕುಮಾರಹಾರಿತಾತ್ । ಕುಮಾರಹಾರಿತೋ ಗಾಲವಾತ್ । ಗಾಲವೋ ವಿದರ್ಭೀ ಕೌಂಡಿನ್ಯಾತ್ । ವಿದರ್ಭೀ ಕೌಂಡಿನ್ಯೋ ವತ್ಸನಪಾದೋ ಬಾಭ್ರವಾತ್। ವತ್ಸನಪಾದ್ ಬಾಭ್ರವಃ ಪಥಃ ಸೌಭರಾತ್ । ಪಂಥಾಃ ಸೌಭರಃ ಅಯಾಸ್ಯಾದ್ ಆಂಗಿರಸಾತ್ । ಅಯಾಸ್ಯ ಆಂಗಿರಸ ಆಭೂತೇಃ ತ್ವಾಷ್ಟ್ರಾತ್ । ಆಭೂತಿಃ ತ್ವಾಷ್ಟ್ರಃ ವಿಶ್ವರೂಪಾತ್ ತ್ವಾಷ್ಟ್ರಾತ್ । ವಿಶ್ವರೂಪಃ ತ್ವಾಷ್ಟ್ರಃ ಅಶ್ವಿಭ್ಯಾಂ । ಅಶ್ವಿನೌ ದಧೀಚ ಆಥರ್ವಣಾತ್ । ದಧ್ಯಙ್ ಆಥರ್ವಣಃ ಅಥರ್ವಣೋ ದೈವಾತ್ । ಅಥರ್ವಾ ದೈವೋ ಮೃತ್ಯೋಃ ಪ್ರಾಧ್ವಂಸನಾತ್। ಮೃತ್ಯುಃ ಪ್ರಾಧ್ವಂಸನಃ ಪ್ರಾಧ್ವಂಸನಾತ್ । ಪ್ರಾಧ್ವಂಸನ ಏಕರ್ಷೇಃ । ಏಕರ್ಷಿರ್ವಿಪ್ರಚಿತ್ತೇಃ। ವಿಪ್ರಚಿತ್ತಿಃ ವ್ಯಷ್ಟೇಃ । ವ್ಯಷ್ಟಿಃ ಸನಾರೋಃ । ಸನಾರುಃ ಸನಾತನಾತ್ । ಸನಾತನಃ ಸನಕಾತ್ । ಸನಕಃ ಪರಮೇಷ್ಠಿನಃ । ಪರಮೇಷ್ಠೀ ಬ್ರಹ್ಮಣಃ। ಬ್ರಹ್ಮ ಸ್ವಯಂಭು ।

**ಬ್ರಹ್ಮಣೇ ನಮಃ । ಇತಿ ವಂಶಬ್ರಾಹ್ಮಣಮ್ ॥**
**ಇತಿ ಶ್ರೀ ಬೃಹದಾರಣ್ಯಕೇ ಚತುರ್ಥೋಽಧ್ಯಾಯಃ ।**

ಇನ್ನು ಮುಂದೆ ಗುರು-ಶಿಷ್ಯ ಪರಂಪರೆಯ ನಿರೂಪಣೆ.

ಬ್ರಹ್ಮವಿದ್ಯೆಯು ವಿದ್ಯಾಪ್ರವರ್ತಕರಾದ ಋಷಿಗಳ ಸ್ಮರಣೆ ಪೂರ್ವಕವಾಗಿ ಅನುಷ್ಠಾನ ಮಾಡಿದರೆ ಮಾತ್ರ ಫಲವನ್ನು ಕೊಡುತ್ತದೆ. ಆದ್ದರಿಂದ ಈ ಮಧು ವಿದ್ಯೆಯ ಋಷಿಗಳಾದ ಗುರುಶಿಷ್ಯರ ಪರಂಪರೆಯು ನಿರೂಪಿಸಲ್ಪಡುತ್ತದೆ. ಪೌತಿಮಾಷ್ಯರು ಗೌಪವನರಿಂದ ಕಲಿತರು. ಗೌಪವನರು ಇನ್ನೊಬ್ಬ ಪೌತಿಮಾಷ್ಯರಿಂದ ಕಲಿತರು. ಆ ಪೌತಿಮಾಷ್ಯರು ಇನ್ನೊಬ್ಬ ಗೌಪವನರಿಂದ, ಆ ಗೌಪವನರು ಕೌಶಿಕರಿಂದ. ಕೌಶಿಕರು ಕೌಂಡಿನ್ಯರಿಂದ. ಕೌಂಡಿನ್ಯರು ಶಾಂಡಿಲ್ಯರಿಂದ. ಶಾಂಡಿಲ್ಯರು ಕೌಶಿಕರಿಂದ ಮತ್ತು ಗೌತಮರಿಂದ. ಗೌತಮರು ಆಗ್ನಿವೇಶ್ಯರಿಂದ. ಆಗ್ನಿವೇಶ್ಯರು ಗಾರ್ಗ್ಯರಿಂದ, ಗಾರ್ಗ್ಯರು ಇನ್ನೊಬ್ಬ ಗಾರ್ಗ್ಯರಿಂದ, ಆ ಗಾರ್ಗ್ಯರು ಇನ್ನೊಬ್ಬ ಗೌತಮರಿಂದ. ಆ ಗೌತಮರು ಸೈತವರಿಂದ, ಸೈತವರು ಪಾರಾಶರ್ಯಾಯಣರಿಂದ, ಪಾರಾಶರ್ಯಾಯಣರು ಗಾರ್ಗ್ಯಾಯಣರಿಂದ, ಗಾರ್ಗ್ಯಾಯಣರು ಉದ್ದಾಲಕಾಯನರಿಂದ, ಉದ್ದಾಲಕಾಯನರು ಜಾಬಾಲಾಯನರಿಂದ, ಜಾಬಾಲಾಯನರು ಮಾಧ್ಯಂದಿನಾಯನರಿಂದ, ಮಾಧ್ಯಂದಿನಾಯನರು ಸೌಕರಾಯಣರಿಂದ, ಸೌಕರಾಯಣರು ಕಾಷಾಯಣರಿಂದ, ಕಾಷಾಯಣರು ಸಾಯಕಾಯನರಿಂದ, ಸಾಯಕಾಯನರು ಕೌಶಿಕಾಯನಿಗಳಿಂದ. ಕೌಶಿಕಾಯನಿಗಳು ಘೃತಕೌಶಿಕರಿಂದ. ಘೃತಕೌಶಿಕರು ಪಾರಾಶರ್ಯಾಯಣರಿಂದ. ಪಾರಾಶರ್ಯಾಯಣರು ಪಾರಾಶರ್ಯರಿಂದ. ಆ ಪಾರಾಶರ್ಯರು ಜಾತುಕರ್ಣ್ಯರಿಂದ. ಜಾತುಕರ್ಣ್ಯರು ಆಸುರಾಯಣರಿಂದ ಮತ್ತು ಯಾಸ್ಕರಿಂದ. ಆಸುರಾಯಣರು ತ್ರೈವರ್ಣಿಗಳಿಂದ. ತ್ರೈವರ್ಣಿಗಳು ಔಪಬಂಧನಿಗಳಿಂದ. ಔಪಬಂಧನಿಗಳು ಆಸುರಿಗಳಿಂದ. ಆಸುರಿಗಳು ಭಾರದ್ವಾಜರಿಂದ. ಭಾರದ್ವಾಜರು ಆತ್ರೇಯರಿಂದ. ಆತ್ರೇಯರು ಮಾಂಡಿಗಳಿಂದ. ಮಾಂಡಿಗಳು ಬೇರೆ ಗೌತಮರಿಂದ. ಆ ಗೌತಮರು ಇನ್ನೊಬ್ಬ ಗೌತಮರಿಂದ, ಆ ಗೌತಮರು ವಾತ್ಸ್ಯರಿಂದ. ವಾತ್ಸ್ಯರು ಇನ್ನೊಬ್ಬ ಶಾಂಡಿಲ್ಯರಿಂದ. ಆ ಶಾಂಡಿಲ್ಯರು ಕೈಶೋರ್ಯಕಾಪ್ಯರಿಂದ. ಕೈಶೋರ್ಯಕಾಪ್ಯರು ಕುಮಾರಹಾರಿತರಿಂದ. ಕುಮಾರಹಾರಿತರು ಗಾಲವರಿಂದ. ಗಾಲವರು ವಿದರ್ಭೀ ಕೌಂಡಿನ್ಯರಿಂದ.ವಿದರ್ಭೀಕೌಂಡಿನ್ಯರು ವತ್ಸನಪಾದ್ ಬಾಭ್ರವರಿಂದ. ವತ್ಸನಪಾದ್ ಬಾಭ್ರವರು ಪಂಥಾ ಸೌಭರರಿಂದ. ಪಂಥಾ ಸೌಭರರು ಅಯಾಸ್ಯ ಆಂಗೀರಸರಿಂದ. ಅಯಾಸ್ಯ ಆಂಗೀರಸರು ಆಭೂತಿ ತ್ವಾಷ್ಟ್ರರಿಂದ. ಆಭೂತಿ ತ್ವಾಷ್ಟ್ರರು ತ್ವಷ್ಟೃಪುತ್ರರಾದ ವಿಶ್ವರೂಪರಿಂದ.ವಿಶ್ವರೂಪರು ಅಶ್ವಿನೀದೇವತೆಗಳಿಂದ. ಅಶ್ವಿನೀದೇವತೆಗಳು ಆಥರ್ವಣ ದಧೀಚಿಗಳಿಂದ. ಆಥರ್ವಣ ದಧೀಚಿಗಳು ದೈವ ಅಥರ್ವರಿಂದ. ದೈವ ಅಥರ್ವರು ಮೃತ್ಯು ಪ್ರಧ್ವಸನರಿಂದ.

ಮೃತ್ಯು ಪ್ರಧ್ವಂಸನರು ಪ್ರಾಧ್ವಂಸನರಿಂದ. ಪ್ರಾಧ್ವಂಸನರು ಏಕರ್ಷಿಗಳಿಂದ. ಏಕರ್ಷಿಗಳು ವಿಪ್ರಚಿತ್ತಿಗಳಿಂದ. ವಿಪ್ರಚಿತ್ತಿಗಳು ವ್ಯಷ್ಟಿಗಳಿಂದ. ವ್ಯಷ್ಟಿಗಳು ಸನಾರುಗಳಿಂದ. ಸನಾರುಗಳು ಸನಾತನರಿಂದ. ಸನಾತನರು ಸನಕರಿಂದ. ಸನಕರು ಚತುರ್ಮುಖ ಬ್ರಹ್ಮನಿಂದ. ಚತುರ್ಮುಖ ಬ್ರಹ್ಮನು ಹಯಗ್ರೀವರೂಪಿ ಪರಮಾತ್ಮನಿಂದ ಕಲಿತನು. ಹಯಗ್ರೀವನು ಸ್ವತಃ ಸರ್ವಜ್ಞನು. ಅಂತಹ ಹಯಗ್ರೀವರೂಪಿ ಬ್ರಹ್ಮನಿಗೆ ನಮಸ್ಕಾರ.

**ಭಾಷ್ಯ—ಅವರೇಭ್ಯೋಽಪಿ ಶೃಣ್ವಂತಿ ಪರಮಾಶ್ಚ ಕ್ವಚಿತ್ ಕ್ವಚಿತ್ ।**
**ಲೀಲಯೈವ ನ ಚೈತೇಷಾಂ ಪರಮತ್ವಂ ವಿಹೀಯತೇ । ಇತಿ ಚ ।**

**॥ ಇತಿ ವಂಶ ಬ್ರಾಹ್ಮಣಂ ॥**

**॥ ಇತಿ ಶ್ರೀ ಬೃಹದಾರಣ್ಯಕಭಾಷ್ಯೇ ಚತುರ್ಥೋಽಧ್ಯಾಯಃ ॥**

**ಅನುವಾದ**—ಕೆಲವೆಡೆ ಜ್ಞಾನದಲ್ಲಿ ಹಿರಿಯರಾದವರೂ ಕ್ರೀಡಾ ಮನೋಭಾವದಿಂದ ತಮಗಿಂತ ಕಡಿಮೆಯಾದವರಲ್ಲಿ ವಿದ್ಯಾಭ್ಯಾಸ ಮಾಡುವುದುಂಟು. ಇದರಿಂದ ಅವರ ಹಿರಿತನಕ್ಕೆ ಕುಂದಿಲ್ಲ. ಉದಾ : ಅಶ್ವಿನೀದೇವತೆಗಳು ದಧೀಚಿ ಮುನಿಯಲ್ಲಿ ಅಧ್ಯಯನ ಮಾಡಿದರು. ಆದರೂ ಅಶ್ವಿನೀ ದೇವತೆಗಳು ಜ್ಞಾನದಲ್ಲಿ ಹಿರಿಯರೆ.

ಇಲ್ಲಿಗೆ ವಂಶ ಬ್ರಾಹ್ಮಣ ಮುಗಿಯಿತು.

ಬೃಹದಾರಣ್ಯಕ ಭಾಷ್ಯದಲ್ಲಿ ನಾಲ್ಕನೇ ಅಧ್ಯಾಯ ಮುಗಿಯಿತು.

## ಐದನೇ ಅಧ್ಯಾಯ

**ಉಪ–ಓಂ ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ ಪೂರ್ಣಮುದಚ್ಯತೇ ।**
**ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾವಶಿಷ್ಯತೇ ।**

ಮಹಾವಿಷ್ಣುವಿನ ಮೂಲರೂಪವು ಪೂರ್ಣ. ಅವತಾರ ರೂಪಗಳೂ ಪೂರ್ಣ. ಪೂರ್ಣವಾದ ಮೂಲರೂಪದಿಂದ ಪೂರ್ಣವಾದ ಅವತಾರ ರೂಪವು ಹೊರಟು ಬರುತ್ತದೆ. ಕೊನೆಯಲ್ಲಿ ಪೂರ್ಣ ಮೂಲರೂಪದ ಪೂರ್ಣ ಅವತಾರ ರೂಪವು ತನ್ನಲ್ಲಿ ತಾನು ಒಂದಾಗಿ ಪೂರ್ಣ ಮೂಲರೂಪವೆ ಆಗಿ ಉಳಿಯುತ್ತದೆ.

**ಭಾಷ್ಯ—ಅವತಾರಾ ಮಹಾವಿಷ್ಣೋಃ ಸರ್ವೇ ಪೂರ್ಣಾಃ ಪ್ರಕೀರ್ತಿತಾಃ ।**
**ಪೂರ್ಣಂ ಚ ತತ್ ಪರಂ ರೂಪಂ ಪೂರ್ಣಾತ್ ಪೂರ್ಣಾಃ ಸಮುದ್ಗತಾಃ ।**

**ಪರಾವರತ್ವಂ ತೇಷಾಂ ತು ವ್ಯಕ್ತಿಮಾತ್ರವಿಶೇಷತಃ ।**
**ನ ದೇಶಕಾಲಸಾಮರ್ಥ್ಯೈಃ ಪಾರಾವರ್ಯಂ ಕಥಂಚನ ।**
**ಪೂರ್ವರೂಪಸ್ಯ ಪೂರ್ಣಸ್ಯ ಪೂರ್ಣಂ ಯದವತಾರಗಮ್ ।**
**ರೂಪಂ ತದಾತ್ಮನ್ಯಾದಾಯ ಪೂರ್ಣಮೇವಾವಶಿಷ್ಯತೇ ।**
**ಲೌಕಿಕವ್ಯವಹಾರೋ ಯೋ ಭೂಭಾರಕ್ಷಪಣಾದಿಕಃ ।**
**ತದದೃಷ್ಟಿಂ ವಿನಾ ನಾನ್ಯೋ ಲಯಃ ಕೃಷ್ಣಾದಿನಾಂ ಕ್ವಚಿತ್ ।**

**ಅನುವಾದ**—ಮಹಾವಿಷ್ಣುವಿನ ಎಲ್ಲಾ ಅವತಾರ ರೂಪಗಳೂ ಪೂರ್ಣ ಎಂದು ಶಾಸ್ತ್ರಗಳು ಹೇಳುತ್ತವೆ. ಅವನ ಮೂಲರೂಪವೂ ಪೂರ್ಣ. ಪೂರ್ಣಮೂಲ ರೂಪದಿಂದ ಪೂರ್ಣ ಅವತಾರ ರೂಪಗಳು ಆವಿರ್ಭವಿಸುತ್ತವೆ. ಮೊದಲಿಗೇ ಅಭಿವ್ಯಕ್ತವಾಗಿರುವುದರಿಂದ, ಮೂಲರೂಪವನ್ನು ಮೂಲ ಎಂತಲೂ ಕೆಲವು ಸಮಯದಲ್ಲಿ ಮಾತ್ರ ಅಭಿವ್ಯಕ್ತವಾಗುವ ರೂಪಗಳನ್ನು ಅವತಾರ ಎಂದೂ ಕರೆಯ ಲಾಗುತ್ತದೆ. ಇದಲ್ಲದೆ ದೇಶಕಾಲಗಳ ಸಾಮರ್ಥ್ಯದಿಂದ ಎಂದೂ ಭಗವದ್ರೂಪ ಗಳಲ್ಲಿ ಮೂಲ, ಅವತಾರಗಳೆಂಬ ಭೇದವಿಲ್ಲ. ಪೂರ್ಣ ಮೂಲರೂಪದ ಪೂರ್ಣ ಅವತಾರ ರೂಪವನ್ನು ಭಗವಂತನು ತನ್ನಲ್ಲಿ ಸೇರಿಸಿಕೊಂಡಾಗ ಪೂರ್ಣರೂಪವೇ ಉಳಿಯುತ್ತದೆ. ಕೃಷ್ಣ ಮೊದಲಾದ ರೂಪಗಳ 'ಲಯ' ಎಂದರೆ ಭೂಭಾರಹರಣ ಮೊದಲಾದ ಲೌಕಿಕ ಕಾರ್ಯಗಳ ಅದರ್ಶನ ಮಾತ್ರ, ಬೇರೆ ಏನೂ ಅಲ್ಲ.

**ವಿಷ್ಣುವಿನ ಮೂಲರೂಪ :**

**ಉಪನಿಷತ್**—**ಓಂ ಖಂ ಬ್ರಹ್ಮ ಖಂ ಪುರಾಣಂ ವಾಯುರಂ ಖಂ ಇತಿ ಹ ಸ್ಮ ಆಹ ಕೌರವ್ಯಾಯಣೀಪುತ್ರಃ । ವೇದೋಽಯಂ ಬ್ರಾಹ್ಮಣಾ ವಿದುಃ ವೇದೇನ ವಿನ ಯದ್ ವೇದಿತವ್ಯಮ್ । ಇತಿ ಪ್ರಥಮಂ ಬ್ರಾಹ್ಮಣಂ॥**

ಮೂಲರೂಪವು ಪೂರ್ಣ, ಪ್ರಕಾಶರೂಪ, ಸರ್ವವ್ಯಾಪ್ತ, ಸುಖರೂಪ, ಅನಾದಿ, ವಾಯುದೇವರಿಗೆ ವಿಶೇಷ ಸುಖಕರ, ಸಕಲಶಾಸ್ತ್ರ ಪ್ರಸಿದ್ಧ ಎಂದು ರೋಹಿಣೀ ಸುತನಾದ ಬಲರಾಮನು ಹೇಳಿದ್ದಾನೆ. ಈ ಪರಮಾತ್ಮನು ವೇದ ಎಂದರೆ ಜ್ಞಾನರೂಪನೆಂದು ಬ್ರಹ್ಮಜ್ಞಾನಿಗಳು ತಿಳಿದಿದ್ದಾರೆ. ದೋಷರಹಿತನಾದ್ದ ರಿಂದ 'ಅ' ಎಂದು ಪ್ರಸಿದ್ಧನಾದ ಜ್ಞಾನರೂಪನಾದ ಭಗವಂತನಿಂದಲೇ ಜೀವಾತ್ಮನು ಪ್ರಮಾಣಸಿದ್ಧವಾದ ಎಲ್ಲವನ್ನೂ ತಿಳಿಯಬೇಕು. ಆದ್ದರಿಂದಲೂ ಪರಮಾತ್ಮನು ವೇದ ಎನಿಸಿದ್ದಾನೆ.

**ವಿವರಣೆ**—'ವೇದೇನೈವ' ಎಂಬ ರಘೂತ್ತಮತೀರ್ಥರ ಪಾಠದಂತೆ ಮೇಲೆ

ಅನುವಾದಿಸಲಾಗಿದೆ. 'ವೇದೋಽನೇನೈವ' ಎಂದು ರಾಘವೇಂದ್ರಸ್ವಾಮಿಗಳ ಪಾಠ. ಈ ಪಾಠದಲ್ಲಿ ವೇದ ಉ ಅನೇನ ಏವ ಎಂದು ಪದಚ್ಛೇದ. ಅಕಾರ ವಾಚ್ಯನಾದ ಈ ಭಗವಂತನಿಂದಲೇ ಜೀವಾತ್ಮನು ತಿಳಿಯಬೇಕಾದ ಎಲ್ಲವನ್ನೂ ತಿಳಿಯುತ್ತಾನೆ. ಆದ್ದರಿಂದ ಭಗವಂತನಿಗೆ ವೇದ ಎಂದು ಹೆಸರು ಎಂದರ್ಥ.

**ಭಾಷ್ಯ—ಓತಾಃ ಸರ್ವಗುಣಾ ಯಸ್ಮಾದಸ್ಮಿನ್ ಓಂ ವಿಷ್ಣುರುಚ್ಯತೇ ।**
**ಖಂ ಪ್ರಕಾಶಸ್ವರೂಪತ್ವಾತ್ ಬ್ರಹ್ಮ ತದ್ ವ್ಯಾಪ್ತರೂಪತಃ ।**
**ಪುನಃ ಖಂ ಸುಖರೂಪತ್ವಾತ್ ಪುರಾಣಂ ತದನಾದಿತಃ ।**
**ವಾಯೋಶ್ಚ ರತಿದಂ ಯಸ್ಮಾದ್ ವಾಯುರಂ ಬ್ರಹ್ಮ ತತ್ ಪರಮ್।**
**ಖ್ಯಾತತ್ವಾಚ್ಚಾಪಿ ತತ್ ಖಂ ಸ್ಯಾದ್ ರೌಹಿಣೇಯಸ್ತಥಾವದತ್ ।**
**ವೇದೋಽಯಂ ಜ್ಞಾನರೂಪತ್ವಾದಿತಿ ಯಂ ಬ್ರಾಹ್ಮಣಾ ವಿದುಃ ।**
**ನಿರ್ದೋಷತ್ವಾದ್ ಅ ಇತ್ಯುಕ್ತಸ್ತೇನ ವೇದ್ಯಂ ಸದಾಖಿಲಮ್ ।**
**ಇತಿ ಚ ।**

**ಬಾಹ್ಲೀಕ ಸುತಾ ಹಿ ರೋಹಿಣೀ । ಅತೋ ಬಲಭದ್ರಃ ಕೌರವ್ಯಾಯಣೀಪುತ್ರಃ । ಇತಿ ಪ್ರಥಮಂ ಬ್ರಾಹ್ಮಣಂ ॥**

**ಅನುವಾದ**—ವಿಷ್ಣುವಿನಲ್ಲಿ ಎಲ್ಲ ಗುಣಗಳೂ ಪೂರ್ಣವಾಗಿ ಇರುವುದರಿಂದ ವಿಷ್ಣು 'ಓಮ್' ಎನಿಸುತ್ತಾನೆ. ಪ್ರಕಾಶಸ್ವರೂಪನಾದುದರಿಂದ 'ಖಮ್' ಎಂದೂ, ವ್ಯಾಪ್ತನಾದ್ದರಿಂದ 'ಬ್ರಹ್ಮ' ಎಂದೂ ಅವನಿಗೆ ಹೆಸರು. ಸುಖರೂಪನಾದುದರಿಂದಲೂ 'ಖಮ್' ಎಂದು ಅವನಿಗೇ ಹೆಸರು. ಅನಾದಿಯಾದುದರಿಂದ ಪುರಾಣ ಎಂದೂ, ವಾಯುದೇವರಿಗೆ ಸುಖವನ್ನು ಕೊಡುವುದರಿಂದ ವಾಯುರ ಎಂದೂ ಹೆಸರು. ಸಕಲಶಾಸ್ತ್ರಗಳಲ್ಲಿ ಪ್ರಖ್ಯಾತನಾದುದರಿಂದಲೂ ಅವನಿಗೆ 'ಖಮ್' ಎಂದು ಹೆಸರು. ಹೀಗೆ ರೋಹಿಣೀ ಸುತನಾದ ಬಲರಾಮನು ಹೇಳಿದನು. ಜ್ಞಾನರೂಪನಾದುದರಿಂದ ಇವನಿಗೆ 'ವೇದ' ಎಂದು ಹೆಸರು ಎಂದು ಬ್ರಹ್ಮಜ್ಞಾನಿಗಳು ಯಾರನ್ನು ತಿಳಿದಿರುವರೋ, ಯಾರು ದೋಷರಹಿತನಾದುದರಿಂದ 'ಅ' ಎಂದು ಪ್ರಸಿದ್ಧನೋ ಅವನಿಂದಲೇ ತಿಳಿಯಬೇಕಾದ ಎಲ್ಲವನ್ನೂ ಯಾವಾಗಲೂ ತಿಳಿಯಬೇಕು ಎಂದು ಬ್ರಹ್ಮತರ್ಕದಲ್ಲಿ ಹೇಳಲಾಗಿದೆ.

ರೋಹಿಣಿಯು ಕುರುವಂಶದ ಬಾಹ್ಲೀಕನ ಮಗಳು ಎನ್ನುವುದು ಪ್ರಸಿದ್ಧ. ಆದ್ದರಿಂದ ರೋಹಿಣೀಪುತ್ರನಾದ ಬಲಭದ್ರನನ್ನು 'ಕೌರವ್ಯಾಯಣೀ ಪುತ್ರ' ಎಂದು ಕರೆದಿರುವುದು ಸರಿ.

ಒಂದನೇ ಬ್ರಾಹ್ಮಣ ಮುಗಿಯಿತು.

**ಮೂರು ದಕಾರಗಳು– ದಮ, ದಾನ, ದಯ :**

**ಉಪನಿಷತ್—ತ್ರಯಾಃ ಪ್ರಾಜಾಪತ್ಯಾಃ ಪ್ರಜಾಪತೌ ಪಿತರಿ ಬ್ರಹ್ಮಚರ್ಯಮೂಷುಃ ದೇವಾ ಮನುಷ್ಯಾ ಅಸುರಾಃ । ಉಷಿತ್ವಾ ಬ್ರಹ್ಮಚರ್ಯಂ ದೇವಾ ಊಚುಃ 'ಬ್ರವೀತು ನೋ ಭಗವಾನ್' ಇತಿ । ತೇಭ್ಯೋ ಹೈತದಕ್ಷರಮುವಾಚ 'ದ' ಇತಿ । 'ವ್ಯಜ್ಞಾಸಿಷ್ಟಾ೩' ಇತಿ । 'ವ್ಯಜ್ಞಾಸಿಷ್ಮೇ'ತಿ ಹೋಚುಃ 'ದಾಮ್ಯತೇತಿ ನ ಆತ್ಥ' ಇತಿ । ಓಮಿತಿ ಹೋವಾಚ ವ್ಯಜ್ಞಾಸಿಷ್ಟ ಇತಿ ।**

ಚತುರ್ಮುಖಬ್ರಹ್ಮನ ಮಕ್ಕಳಾದ ದೇವತೆಗಳು ಮನುಷ್ಯರು ಮತ್ತು ಅಸುರರು ಮೂವರೂ, ತಮ್ಮ ತಂದೆ ಚತುರ್ಮುಖನ ಬಳಿ ಬ್ರಹ್ಮಚರ್ಯ ವ್ರತವನ್ನು ಕೈಗೊಂಡರು. ಬ್ರಹ್ಮಚರ್ಯವನ್ನು ಅನುಷ್ಠಾನ ಮಾಡಿದ ದೇವತೆಗಳು 'ಪೂಜ್ಯರಾದ ತಾವು ನಮಗೆ ಉಪದೇಶಿಸಿರಿ' ಎಂದು ಚತುರ್ಮುಖನನ್ನು ಪ್ರಾರ್ಥಿಸಿದರು. ಅವನು ಅವರಿಗೆ 'ದ' ಎಂಬ ಅಕ್ಷರವನ್ನು ಉಪದೇಶಿಸಿದನು. 'ತಿಳಿಯಿತೇ?'ಎಂದು ಕೇಳಿದನು. 'ತಿಳಿಯಿತು. ದಾಮ್ಯತ, ದಮವಂತರಾಗಿರಿ–ಅಹಂಕಾರ ಬಿಡಿ–ಎಂದು ನಮಗೆ ಉಪದೇಶಿಸಿದ್ದೀರಿ' ಎಂದರು ದೇವತೆಗಳು. 'ಹೌದು. ನಿಮಗೆ ಅರ್ಥವಾಗಿದೆ' ಎಂದು ಚತುರ್ಮುಖನು ಹೇಳಿದನು.

**ಉಪನಿಷತ್—ಅಥ ಹೈನಂ ಮನುಷ್ಯಾ ಊಚುಃ 'ಬ್ರವೀತು ನೋ ಭಗವಾನ್' ಇತಿ । ತೇಭ್ಯೋ ಹೈತದೇವಾಕ್ಷರಮುವಾಚ 'ದ' ಇತಿ । 'ವ್ಯಜ್ಞಾಸಿಷ್ಟಾ೩'ಇತಿ। 'ವ್ಯಜ್ಞಾಸಿಷ್ಮೇ'ತಿ ಹೋಚುಃ 'ದತ್ತೇತಿ ನ ಆತ್ಥ' ಇತಿ । ಓಮಿತಿ ಹೋವಾಚ । ವ್ಯಜ್ಞಾಸಿಷ್ಟ ಇತಿ ।**

ಅನಂತರ ಮನುಷ್ಯರು ಚತುರ್ಮುಖನನ್ನು 'ಪೂಜ್ಯರಾದ ತಾವು ನಮಗೆ ಉಪದೇಶಿಸಿರಿ' ಎಂದು ಪ್ರಾರ್ಥಿಸಿದರು. ಅವರಿಗೂ 'ದ' ಎಂಬ ಅಕ್ಷರವನ್ನೇ ಉಪದೇಶಿಸಿ, 'ತಿಳಿಯಿತೇ?' ಎಂದು ಕೇಳಿದನು. ತಿಳಿಯಿತು, ದತ್ತ-ದಾನಮಾಡಿರಿ ಎಂದು ನಮಗೆ ಉಪದೇಶಿಸಿದ್ದೀರಿ' ಎಂದರು ಮನುಷ್ಯರು. 'ಹೌದು. ನಿಮಗೆ ಅರ್ಥವಾಗಿದೆ' ಎಂದು ಚತುರ್ಮುಖನು ಹೇಳಿದನು.

**ಉಪನಿಷತ್—ಅಥ ಹೈನಮಸುರಾ ಊಚುಃ 'ಬ್ರವೀತು ನೋ ಭಗವಾನಿ'ತಿ। ತೇಭ್ಯೋ ಹೈತದೇವಾಕ್ಷರಮುವಾಚ 'ದ' ಇತಿ । 'ವ್ಯಜ್ಞಾಸಿಷ್ಟಾ೩'**

**ಇತಿ । 'ವ್ಯಜ್ಞಾಸಿಷ್ಮೇ'ತಿ ಹೋಚುಃ 'ದಯಧ್ವಮಿತಿ ನ ಆತ್ಥ' ಇತಿ । ಓಮಿತಿ ಹೋವಾಚ । ವ್ಯಜ್ಞಾಸಿಷ್ಟ ಇತಿ ।**

**ತದೇತದೇವ ಏಷಾ ದೈವೀ ವಾಗನುವದತಿ ಸ್ತನಯಿತ್ನುಃ ದ ದ ದ ಇತಿ । ದಾಮ್ಯತ, ದತ್ತ, ದಯಧ್ವಮಿತಿ । ತದೇತತ್ ತ್ರಯಂ ಶಿಕ್ಷೇದ್ ದಮಂ ದಾನಂ ದಯಾಮ್ ಇತಿ । ಇತಿ ದ್ವಿತೀಯಂ ಬ್ರಾಹ್ಮಣಂ ॥**

ಅನಂತರ ಅಸುರರು ಚತುರ್ಮುಖ ಬ್ರಹ್ಮನನ್ನು 'ಪೂಜ್ಯರಾದ ತಾವು ನಮಗೆ ಉಪದೇಶಿಸಿರಿ' ಎಂದು ಪ್ರಾರ್ಥಿಸಿದರು. ಅವರಿಗೆ ಈ 'ದ' ಎಂಬ ಅಕ್ಷರವನ್ನೇ ಉಪದೇಶಿಸಿ 'ತಿಳಿಯಿತೇ?' ಎಂದು ಕೇಳಿದನು. 'ತಿಳಿಯಿತು. ದಯಧ್ವಂ–ದಯಾಶಾಲಿಗಳಾಗಿರಿ– ಎಂದು ನಮಗೆ ಉಪದೇಶಿಸಿದ್ದೀರಿ' ಎಂದರು ಅಸುರರು. 'ಹೌದು. ನಿಮಗೆ ಅರ್ಥವಾಗಿದೆ' ಎಂದು ಚತುರ್ಮುಖನು ಹೇಳಿದನು.

ಚತುರ್ಮುಖನು ಉಪದೇಶಿಸಿದ ವಿಷಯವನ್ನೇ ದೇವತೆಗಳ ವಾಣಿಯಾದ ಮೋಡವು'ದ ದ ದ' 'ದಯುವನ್ನು ಹೊಂದಿರಿ, ದಾನ ಮಾಡಿರಿ, ದಯಾವಂತರಾಗಿರಿ' ಎಂದು ಅನುವಾದಿಸುತ್ತದೆ. ಆದ್ದರಿಂದ ದಮ, ದಾನ, ದಯೆ ಈ ಮೂರನ್ನೂ ಕಲಿಯಬೇಕು.

**ಭಾಷ್ಯ—ಜ್ಞಾನದಾನಂ ತು ದೇವಾನಾಂ ಫಲದಾನಂ ಚ ಕರ್ಮಣಾಮ್ ।**
**ವಿಷ್ಣುನಾ ವಿಹಿತಂ ಪೂರ್ವಂ ಪುನರ್ದೇವನರಾಸುರಾಃ ।**
**ಬ್ರಹ್ಮಾಣಮಪಿ ಪಪ್ರಚ್ಛುರ್ದೇವಾನಾಂ ಸದ್ಗುಣೋಚ್ಛ್ರಿತೇಃ ।**
**ಅನಹಂಕಾರಮಾತ್ರಂ ತು ಬ್ರಹ್ಮಣಾ ವಿಹಿತಂ ಸದಾ ।**
**ಸರ್ವೋಚ್ಚಮೋಕ್ಷ ಸಂಪ್ರಾಪ್ತ್ಯೈ ನರಾಣಾಂ ಜ್ಞಾನಸಾಧನಮ್ ।**
**ದೇವಾದೀನಾಂ ದಾನಮೇವ ಹವಿರಾದೇಃ ಪ್ರಕೀರ್ತಿತಮ್ ।**
**ತಮಃಪ್ರಾಪ್ತಿವಿಲಂಬಾಯ ದೈತ್ಯಾನಾಂ ವಿಹಿತಾ ದಯಾ ।**
**ಇತಿ ಪ್ರವೃತ್ತೇ ।**

**ಅನುವಾದ**—ಮನುಷ್ಯರಿಗೆ ಜ್ಞಾನದಾನ ಮಾಡುವುದು ಮತ್ತು ಅವರಿಗೆ ಕರ್ಮಾನುಗುಣವಾದ ಫಲದಾನ ಮಾಡುವುದು ದೇವತೆಗಳ ಕರ್ತವ್ಯವೆಂದು ಸೃಷ್ಟಿಯ ಆರಂಭದಲ್ಲಿ ವಿಷ್ಣುವೇ ವಿಧಿಸಿದ್ದಾನೆ. ಹಾಗೆಯೇ ಮನುಷ್ಯರಿಗೆ ದಾನವೂ, ಅಸುರರಿಗೆ ದಯೆಯೂ ಮೊದಲೇ ವಿಹಿತವಾಗಿದೆ. ಆದರೂ ವಿಶೇಷವಾಗಿ ತಿಳಿದುಕೊಳ್ಳುವ ಇಚ್ಛೆಯಿಂದ ದೇವತೆಗಳು, ಮನುಷ್ಯರು ಮತ್ತು ಅಸುರರು ಚತುರ್ಮುಖನನ್ನು ಪ್ರಾರ್ಥಿಸಿದರು. ದೇವತೆಗಳಿಗೆ ಉಪದೇಶಿಸಿದ ದಮ ಇಂದ್ರಿಯನಿಗ್ರಹವಲ್ಲ. ಅಪರೋಕ್ಷಿಗಳಾದ್ದರಿಂದ ಅದು ಅವರಲ್ಲಿ ಸ್ವತಃ ಇದೆ. ಮೋಕ್ಷದಲ್ಲಿ ಸರ್ವೋತ್ಕೃಷ್ಟ

ಆನಂದದ ಪ್ರಾಪ್ತಿಗಾಗಿ ಆವಶ್ಯಕವಾದ ಜ್ಞಾನ ಭಕ್ತಿ ಮೊದಲಾದ ಗುಣಗಳನ್ನು ವೃದ್ಧಿಪಡಿಸುವ ಉದ್ದೇಶದಿಂದ ದೇವತೆಗಳು ಅಹಂಕಾರವನ್ನು ಬಿಡಬೇಕೆಂದು ಮಾತ್ರ ಚತುರ್ಮುಖನು ಉಪದೇಶಿಸಿದನು. ಯಾಗಾದಿಗಳಲ್ಲಿ ದೇವತೆಗಳಿಗೆ ಹವಿಸ್ಸು ಮುಂತಾದುವನ್ನು ಕೊಡುವುದೇ ಅಜ್ಞಾನಿಗಳಾದ ಮಾನವರಿಗೆ ಜ್ಞಾನಸಾಧನವಾದ ದಾನ. ಆದ್ದರಿಂದ ನರರಿಗೆ 'ದಾನ ಮಾಡಿರಿ' ಎಂದು ಉಪದೇಶಿಸಿದನು. ತಮೋಯೋಗ್ಯರಾದ ದೈತ್ಯರಿಗೆ ತಮಸ್ಸಿನ ಪ್ರಾಪ್ತಿ ತಡವಾಗಿ ಆಗಲಿ ಎಂಬ ಆಶಯದಿಂದ 'ದಯಾವಂತರಾಗಿ' ಎಂದು ಅವರಿಗೆ ಉಪದೇಶಿಸಿದನು ಎಂದು ಪ್ರವೃತ್ತ ಎಂಬ ಗ್ರಂಥದಲ್ಲಿ ಹೇಳಿದೆ.

ಎರಡನೆಯ ಬ್ರಾಹ್ಮಣ ಮುಗಿಯಿತು.

**ವಿಷ್ಣು ಚತುರ್ಮುಖರಿಗೆ ಹೃದಯ ಎಂದು ಹೆಸರು :**

**ಉಪನಿಷತ್—ಏಷ ಪ್ರಜಾಪತಿರ್ಯದ್ಧೃದಯಮ್ । ಏತದ್ ಬ್ರಹ್ಮ । ಏತತ್ ಸತ್ಯಮ್ । ತದೇತತ್ ತ್ರ್ಯಕ್ಷರಂ ಹೃದಯಮಿತಿ । ಹೃ ಇತ್ಯೇಕಮಕ್ಷರಂ। ಹರಂತ್ಯಸ್ಮೈ ಸ್ವಾಶ್ಚಾನ್ಯೇ ಚ ಯ ಏವಂ ವೇದ । ದ ಇತ್ಯೇಕಮಕ್ಷರಂ। ದದತ್ಯಸ್ಮೈ ಸ್ವಾಶ್ಚಾನ್ಯೇ ಚ ಯ ಏವಂ ವೇದ । ಯಮ್ ಇತ್ಯೇಕಮಕ್ಷರಂ। ಏತಿ ಸ್ವರ್ಗಂ ಲೋಕಂ ಯ ಏವಂ ವೇದ ॥**

**ಇತಿ ತೃತೀಯಂ ಬ್ರಾಹ್ಮಣಂ ॥**

ಈ ವಿಷ್ಣುವೂ ಚತುರ್ಮುಖನೂ ಪ್ರಜಾಪತಿಗಳಾಗಿದ್ದಾರೆ ಮತ್ತು ಹೃದಯರೆನಿಸಿದ್ದಾರೆ. ಇವರು ಪೂರ್ಣರು. ಸದ್ಗುಣಸ್ವರೂಪರು. ಈ ಹೃದಯ ಎಂಬ ಪದವು ಮೂರು ಅಕ್ಷರವುಳ್ಳದ್ದು. ಹೃ ಎಂಬುದು ಒಂದು ಅಕ್ಷರ. ಯಜ್ಞಭಾಗವನ್ನು ತೆಗೆದುಕೊಳ್ಳುವ ಕಾರಣದಿಂದ ಈ ವಿಷ್ಣು-ಚತುರ್ಮುಖರಿಗೆ ಹೃ ಎಂದು ಹೆಸರು ಎಂದು ಯಾರು ತಿಳಿಯುತ್ತಾರೋ ಅವರಿಗೆ ಸ್ವಕೀಯರು ಮತ್ತು ಪರರು ಐಶ್ವರ್ಯವನ್ನು ಶತ್ರುಗಳಿಂದ ಅಪಹರಿಸಿ ತಂದು ಅರ್ಪಿಸುತ್ತಾರೆ. ದ ಎಂಬುದು ಒಂದು ಅಕ್ಷರ. ಜ್ಞಾನ ಮೊದಲಾದುದನ್ನು ದಾನಮಾಡುವ ಕಾರಣದಿಂದ ಇವರಿಗೆ ದ ಎಂದು ಹೆಸರು ಎಂದು ಯಾರು ತಿಳಿಯುತ್ತಾರೋ ಅವರಿಗೆ ಸ್ವಕೀಯರು ಮತ್ತು ಪರರು ಸಂಪತ್ತನ್ನು ತಂದುಕೊಡುತ್ತಾರೆ. ಯ ಎಂಬುದು ಒಂದು ಅಕ್ಷರ. ಚತುರ್ಮುಖನು ಬೇರೆ ದೇವತೆಯಲ್ಲಿ ಪ್ರವೇಶ ಮಾಡದೆ ನೇರವಾಗಿ ಪರಬ್ರಹ್ಮನ ಒಳಗೆ ಹೋಗುವವನು ಎಂಬ ಕಾರಣದಿಂದ ಅವನು ಯ ಎಂಬ ಹೆಸರುಳ್ಳವನು ಮತ್ತು ಕರ್ಮಫಲದಾಯಕರಾದ್ದರಿಂದ ವಿಷ್ಣು ಚತುರ್ಮುಖರಿಬ್ಬರೂ ಯ ಎನಿಸುವರು ಎಂದು ಯಾರು ತಿಳಿಯುತ್ತಾರೋ ಅವರು ಮುಕ್ತಿಯನ್ನು ಹೊಂದುತ್ತಾರೆ.

**ಭಾಷ್ಯ**—**ಹರಣಾದ್ ಯಜ್ಞಭಾಗಾದೇರ್ಜ್ಞಾನಾದೇರ್ದಾನತಸ್ತಥಾ ।**
**ಯಾನಾದವ್ಯವಧಾನೇನ ಪರಸ್ಯ ಬ್ರಹ್ಮಣಸ್ತಥಾ ।**
**ಬ್ರಹ್ಮಾ ಹೃದಯ ಇತ್ಯುಕ್ತಸ್ತಸ್ಯೈವಂವಿದಪಿ ಧ್ರುವಮ್ ।**
**ಹೃತಿದಾನಸ್ವರ್ಗಯಾನಪಾತ್ರಂ ಸ್ಯಾತ್ ತತ್ಪ್ರಸಾದತಃ ।**
**ಹೃತ್ವೈವಾಸ್ಮೈ ದದತ್ಯದ್ಧಾ ಸ್ವಕೀಯಾಶ್ಚಾನ್ಯ ಏವ ಚ ।**
**ಇತಿ ನಿರ್ಣಯೇ।**

**ಪರಮಾತ್ಮಾ ಚ ಪ್ರಜಾಪತಿಃ ।**

**ಅನುವಾದ**—ವಿಷ್ಣುವೂ ಚತುರ್ಮುಖಬ್ರಹ್ಮನೂ ಯಜ್ಞಭಾಗ ಮುಂತಾದುವನ್ನು ಸ್ವೀಕರಿಸುವ ಕಾರಣದಿಂದ ಹೃ ಎನಿಸುವರು. ಜ್ಞಾನಾದಿಗಳನ್ನು ಕೊಡುವುದರಿಂದ ದ ಎನಿಸುವರು. ಚತುರ್ಮುಖನು ಪರಬ್ರಹ್ಮನ ಬಳಿ ನೇರವಾಗಿ ಹೋಗುವ ಕಾರಣದಿಂದ ಯ ಎನಿಸುವನು. ಕರ್ಮಫಲದಾಯಕರಾದ್ದರಿಂದ ವಿಷ್ಣು ಚತುರ್ಮುಖರಿಬ್ಬರೂ 'ಯ' ಎನಿಸುವರು. ಹೀಗೆ ಇಬ್ಬರೂ ಹೃದಯ ಎಂದು ಪ್ರಸಿದ್ಧರಾಗಿದ್ದಾರೆ. ಹೃದಯ ಎಂಬ ಹೆಸರಿನ ಈ ಅರ್ಥವನ್ನು ತಿಳಿದವನೂ ಕೂಡ ಅವರ ಅನುಗ್ರಹದಿಂದ ಐಶ್ವರ್ಯ ಸ್ವೀಕಾರ, ಪ್ರಾಪ್ತಿ ಹಾಗೂ ಸ್ವರ್ಗಗಮನಗಳಿಗೆ ಪಾತ್ರನಾಗುತ್ತಾನೆ. ಐಶ್ವರ್ಯ ಸ್ವೀಕಾರ ಮತ್ತು ಪ್ರಾಪ್ತಿಗಳೆಂದರೆ ಸ್ವಕೀಯರು ಮತ್ತು ಪರರು ಶತ್ರುಗಳಿಂದ ಸಂಪತ್ತನ್ನು ಅಪಹರಿಸಿ ತಂದು ಕೊಡುತ್ತಾರೆ ಎಂದು ಅರ್ಥ ಎಂದು ನಿರ್ಣಯ ಎಂಬ ಗ್ರಂಥದಲ್ಲಿ ಹೇಳಿದೆ. ಏಷಃ ಪ್ರಜಾಪತಿಃ ಎಂಬಲ್ಲಿ ಪ್ರಜಾಪತಿ ಪದದಿಂದ ಪರಮಾತ್ಮನೂ ವಿವಕ್ಷಿತನಾಗಿದ್ದಾನೆ.

**ವಿವರಣೆ**—ಹಿಂದೆ ಚತುರ್ಮುಖನ ಪ್ರಸ್ತಾಪವಿದೆ. ಆದ್ದರಿಂದ ಇಲ್ಲಿ ಪ್ರಜಾಪತಿ ಶಬ್ದಕ್ಕೆ ಚತುರ್ಮುಖಬ್ರಹ್ಮ ಎಂದಷ್ಟೇ ಅರ್ಥವನ್ನು ತಿಳಿಯುವ ಸಾಧ್ಯತೆ ಇದೆ. ಆದರೆ ಪರಮಾತ್ಮಾ ಎಂಬ ಅರ್ಥವೂ ಇಲ್ಲಿ ವಿವಕ್ಷಿತ. ಏಕೆಂದರೆ ಇಲ್ಲಿ ಹೇಳಿದ ಬ್ರಹ್ಮ ಸತ್ಯ ಶಬ್ದಗಳು ಮುಖ್ಯವಾಗಿ ಪರಮಾತ್ಮನಿಗೇ ಅನ್ವಯಿಸುತ್ತವೆ. ಚತುರ್ಮುಖನಿಗಲ್ಲ.

ಮೂರನೇ ಬ್ರಾಹ್ಮಣ ಮುಗಿಯಿತು.

**ವಾಸುದೇವನು ಪರಬ್ರಹ್ಮನ ಪ್ರಥಮಾವತಾರ :**

**ಉಪನಿಷತ್**—**ತದ್ ಹ ಏತದ್ ಏತದೇವ ತದಾಸ ಸತ್ಯಮೇವ । ಸ ಯೋ ಹೈತಂ ಮಹದ್ಯಕ್ಷಂ ಪ್ರಥಮಜಂ ವೇದ ಸತ್ಯಂ ಬ್ರಹ್ಮೇತಿ ಜಯತೀಮಾನ್ ಲೋಕಾನ್ । ಜಿತ ಇನು ಅಸೌ ಅಸದ್ ಯ ಏವಮೇತಂ ಮಹದ್ಯಕ್ಷಂ ಪ್ರಥಮಜಂ ವೇದ ಸತ್ಯಂ ಬ್ರಹ್ಮೇತಿ । ಸತ್ಯಂ ಹ್ಯೇವ ಬ್ರಹ್ಮ ।** **ಇತಿ ಚತುರ್ಥಂ ಬ್ರಾಹ್ಮಣಂ ॥**

ಪರಬ್ರಹ್ಮನು ವ್ಯಾಪ್ತನೂ ಎಲ್ಲ ಕಾಲಗಳಲ್ಲಿ ಏಕರೂಪನೂ ಆಗಿರುವನು. ಪರಬ್ರಹ್ಮ ಒಂದೇ ನಿರ್ವಿಕಾರವೂ ವ್ಯಾಪ್ತವೂ ಆದ ಚೇತನ. ಬೇರೆ ಯಾರೂ ಹೀಗಿಲ್ಲ. ಈ ಪರಬ್ರಹ್ಮವೇ ವಾಸುದೇವ. ಯಾರು ಮುಖ್ಯ ಪೂಜ್ಯನೂ, ಮೊದಲು ಅವತರಿಸಿದವನೂ ಆದ ಈ ವಾಸುದೇವನನ್ನು ಬ್ರಹ್ಮ ಎಂದು ತಿಳಿಯುತ್ತಾರೋ ಅವರು ಧರ್ಮಜ್ಞಾನ ಮೊದಲಾದ ಗುಣಗಳಿಂದ ತುಂಬಿದವರಾಗುತ್ತಾರೆ. ಯಾರು ಮುಖ್ಯ ಪೂಜ್ಯನೂ ತನ್ನಿಂದ ತಾನೇ ಮೊದಲು ಅವತರಿಸಿದವನೂ ಆದ ವಾಸುದೇವ ನನ್ನು ಪರಬ್ರಹ್ಮ ಎಂದು ತಿಳಿಯುತ್ತಾರೋ ಅವರು ಪರಲೋಕವನ್ನು ಹೊಂದು ತ್ತಾರೆ. ಆದ್ದರಿಂದ ವಾಸುದೇವನು ಪರಬ್ರಹ್ಮನೆಂಬ ವಿಷಯದಲ್ಲಿ ಯಾವ ಸಂದೇಹವೂ ಇಲ್ಲ.

**ಭಾಷ್ಯ—ತತತ್ವಾದೇಕರೂಪತ್ವಾತ್ ತತ್ ಪರಂ ಬ್ರಹ್ಮ ಕೀರ್ತಿತಮ್ ।**
**ತದೇವ ತಾದೃಶಂ ಪ್ರೋಕ್ತಂ ನೈವಾನ್ಯತ್ ತಾದೃಶಂ ಕ್ವಚಿತ್ ।**
**ತದೇತತ್ ಸತ್ಯಮೇವಾಸೀತ್ ವಾಸುದೇವಾಖ್ಯಮವ್ಯಯಮ್ ।**
**ಇತಿ ಬ್ರಹ್ಮತರ್ಕೇ ।**
**ತದೇವ ಹಿ ತತ್ । ತನ್ನಾರಾಯಣಾಖ್ಯಂ ಪರಂ ಬ್ರಹ್ಮ ಏತದೇವ ಸತ್ಯಂ ವಾಸುದೇವಾಖ್ಯಮಾಸೀದಿತ್ಯರ್ಥಃ ।**

**ಅನುವಾದ**—ಪರಬ್ರಹ್ಮನು ವ್ಯಾಪ್ತನೂ ಏಕರೂಪನೂ ಆದುದರಿಂದ ಅವನಿಗೆ ತತ್ ಎಂದೂ, ಏತತ್ ಎಂದೂ ಹೆಸರು. ಪರಬ್ರಹ್ಮನೊಬ್ಬನೇ ವ್ಯಾಪ್ತ ಮತ್ತು ಏಕರೂಪ. ಬೇರೆ ಯಾವ ವಸ್ತುವೂ ಎಲ್ಲಿಯೂ ಹಾಗಿಲ್ಲ. ವ್ಯಾಪ್ತನಾದ ಪರ ಬ್ರಹ್ಮನು ಏಕರೂಪನಾದ ವಾಸುದೇವನಾಗಿ ಅವತರಿಸಿದನು ಎಂದು ಬ್ರಹ್ಮತರ್ಕದಲ್ಲಿ ಹೇಳಿದೆ. ಆದ್ದರಿಂದ ಉಪನಿಷದ್ವಾಕ್ಯಕ್ಕೆ 'ಆ ಪರಬ್ರಹ್ಮನೇ ವ್ಯಾಪ್ತ ಮತ್ತು ನಿರ್ವಿಕಾರ. ನಾರಾಯಣ ಎಂಬ ಹೆಸರಿನ ಪರಬ್ರಹ್ಮನು ವಾಸುದೇವ ಎಂಬ ಹೆಸರಿನ ಅವತಾರರೂಪವುಳ್ಳವನಾದನು' ಎಂದು ಅರ್ಥ.

**ವಿವರಣೆ**—'ತದ್ಧೈತತ್ ಏತದೇವ ತದಾಸ ಸತ್ಯಮೇವ' ಎಂಬಲ್ಲಿ 'ತತ್ ಏತತ್। ತದೇವ ಹ ತತ್ । ತತ್ ಏತದೇವ ಸತ್ಯಮಾಸ' ಎಂದು ಅನ್ವಯ ಮಾಡಿ ಕೊಂಡು ಅರ್ಥ ಹೇಳಬೇಕೆಂದು ಈ ಭಾಷ್ಯವು ತಿಳಿಸುತ್ತಿದೆ.

**ಭಾಷ್ಯ—ಸ್ವಸ್ಮಾತ್ ಸ್ವಯಂ ಸಮುತ್ಪನ್ನೋ ವಾಸುದೇವಾತ್ಮನಾ ಪ್ರಭುಃ ।**
**ಸತ್ಯಂ ಬ್ರಹ್ಮೇತಿ ಯೋ ವೇದ ಮಹಾಯಾಜ್ಯಂ ತು ತಂ ಪರಮ್ ।**
**ಪ್ರಾಪ್ನೋತ್ಯೇವ ಹಿ ತಲ್ಲೋಕಾನ್ ಜೀವನ್ನಪ್ಯುತ್ತಮೋ ಭವೇತ್ ।**
**ಇತಿ ಪ್ರಧ್ಯಾನೇ ।**

ಸ್ವಭಾಗಹರಣಾದ್ ದಾನಾತ್ ಫಲಾನಾಂ ಯಾಪನಾನ್ನೃಣಾಮ್ ।
ಹೃದಯಂ ಭಗವಾನ್ ವಿಷ್ಣುಃ ಸತ್ಯಂ ಸದ್ಗುಣರೂಪತಃ ।
ಇತಿ ಸತ್ತತ್ತ್ವೇ ।

**ಅನುವಾದ**—ಪ್ರಭು ನಾರಾಯಣನು ವಾಸುದೇವ ರೂಪದಿಂದ ತನ್ನಿಂದ ತಾನೇ ಮೊತ್ತಮೊದಲಿಗೆ ಪ್ರಾದುರ್ಭವಿಸಿದ್ದಾನೆ. ಮುಖ್ಯ ಪೂಜ್ಯನಾದ ಆ ವಾಸುದೇವನನ್ನು ಪರಬ್ರಹ್ಮ ಎಂದು ಯಾರು ತಿಳಿಯುತ್ತಾರೋ ಅವರು ಬ್ರಹ್ಮಲೋಕವನ್ನು ತಪ್ಪದೇ ಹೊಂದುತ್ತಾರೆ. ಈ ಲೋಕದ ಜೀವನದಲ್ಲೂ ಉತ್ಕರ್ಷವನ್ನು ಹೊಂದುತ್ತಾರೆ ಎಂದು ಪ್ರಧ್ಯಾಸ ಎಂಬ ಗ್ರಂಥದಲ್ಲಿ ಹೇಳಲಾಗಿದೆ. ಭಗವಾನ್ ವಿಷ್ಣುವು ಯಜ್ಞದಲ್ಲಿ ಅರ್ಪಿಸಲ್ಪಟ್ಟ ಹವಿಸ್ಸಿನ ತನ್ನ ಭಾಗವನ್ನು ಸ್ವೀಕರಿಸುವುದರಿಂದ 'ಹೃ'. ಜೀವರಿಗೆ ಜ್ಞಾನವನ್ನು ಕೊಡುವುದರಿಂದ 'ದ'. ಮತ್ತು ಅವರು ಕರ್ಮಫಲವನ್ನು ಹೊಂದುವಂತೆ ಮಾಡುವುದರಿಂದ 'ಯ'. ಹೀಗೆ ಹೃದಯ ಎಂಬ ಹೆಸರುಳ್ಳವನು. ಸದ್ಗುಣಸ್ವರೂಪನಾದುದರಿಂದ ಸತ್ಯ ಎಂದೂ ಹೆಸರು ಎಂದು ಸತ್ತತ್ತ್ವ ಎಂಬ ಗ್ರಂಥದಲ್ಲಿ ಹೇಳಿದೆ.

**ವಿವರಣೆ**—ಪ್ರಜಾಪತಿ ಶಬ್ದವು ವಿಷ್ಣುಪರವೂ ಆಗಿದೆ ಎಂದು ಹಿಂದೆ ಹೇಳಿದೆ. ಆದರೆ ಪರಬ್ರಹ್ಮನ ಬಳಿ ಸೇರಲಾಗಿ ಹೋಗುವವನೆಂಬ ಅರ್ಥದಲ್ಲಿ ವಿಷ್ಣು 'ಯ' ಎಂದು ಕರೆಸಿಕೊಳ್ಳುವುದಿಲ್ಲ. ಆದ್ದರಿಂದ ಹೃದಯ ಎಂಬ ಮೂರು ಅಕ್ಷರಗಳನ್ನು ಇಲ್ಲಿ ಬೇರೆ ರೀತಿಯಿಂದ ವಿಷ್ಣುವಿನಲ್ಲಿ ಸಮನ್ವಯ ಮಾಡಲಾಗಿದೆ.

**ಭಾಷ್ಯ**—ಪ್ರಜಾಪತಿರಿತಿ ಬ್ರಹ್ಮಾ ವೇದೇಷೂಕ್ತೋ ಹ್ಯಮುಖ್ಯತಃ ।
ಯಸ್ಮಿನ್ ಊಷುರ್ಬ್ರಹ್ಮಚರ್ಯಂ ದೇವಾಸುರನರೋಽಬ್ಜಜೇ ।
ಏಷ ವೈ ಭಗವಾನ್ ವಿಷ್ಣುರ್ಮುಖ್ಯತಸ್ತು ಪ್ರಜಾಪತಿಃ ।
ಯಜ್ಞಾಜ್ಞಾನಾತ್ ಮುಕ್ತಿಮಾಯಾಂತಿ ಸ್ವರ್ಗಾಖ್ಯಾಂ ಹೃದಯಂ ಚ ಸಃ ।

ಹೃತಿಸದ್ಧಾನಯಾನೇಭ್ಯಃ ಸತ್ಯಂ ಸದ್ಗುಣರೂಪತಃ ।
ಯತ್ ತದ್ಧೃದಯಮಿತ್ಯುಕ್ತಂ ಬ್ರಹ್ಮ ತತ್ ಸತ್ಯತಾಮಗಾತ್ ।
ಸತ್ಯತ್ವಂ ಸದನೀಯತ್ವಮಾಸಾದ್ಯಂ ಯನ್ಮುಮುಕ್ಷುಭಿಃ ।
ಏವಂ ತದ್ ಬ್ರಹ್ಮ ಯೋ ವೇದ ಸ ಹಿ ಲೋಕಾನಿಮಾನ್ ಜಯೇತ್
ಏತಲ್ಲೋಕಜಯೋ ನಾಮ ಧರ್ಮಜ್ಞಾನಾದಿಪೂರ್ಣತಾ ।
ಜಿತ ಏವ ಹ್ಯಸೌ ಲೋಕೋ ಯದಾ ವೇದ ಜನಾರ್ದನಮ್ ।
ಇತಿ ಗುಣಪರನೇ ।

ಪರಲೋಕೋ ಜಿತ ಏವಾಭವದಿತ್ಯರ್ಥಃ ।

**ಅನುವಾದ**—ವೇದಗಳಲ್ಲಿ ಪ್ರಜಾಪತಿ ಶಬ್ದದಿಂದ ಅಮುಖ್ಯವಾಗಿ ಚತುರ್ಮುಖ ಬ್ರಹ್ಮನು ಹೇಳಲ್ಪಟ್ಟಿದ್ದಾನೆ. ಚತುರ್ಮುಖನ ಬಳಿ ವಾಸಿಸುತ್ತ ದೇವತೆಗಳು ಅಸುರರು ಮತ್ತು ನರರು ಬ್ರಹ್ಮಚರ್ಯ ವ್ರತವನ್ನು ನಡೆಸಿದರು. 'ತ್ರಯಃ ಪ್ರಾಜಾಪತ್ಯಾಃ' ಎಂಬಲ್ಲಿ ಹೀಗೆ ಪೂರ್ವಪ್ರಕೃತನಾದ್ದರಿಂದ, ಚತುರ್ಮುಖನೂ 'ಏಷ ಪ್ರಜಾಪತಿಃ' ಎಂಬಲ್ಲಿ ವಿವಕ್ಷಿತನಾಗಿದ್ದಾನೆ. ಪ್ರಜಾಪತಿ ಶಬ್ದದ ಮುಖ್ಯಾರ್ಥ ಭಗವಾನ್ ವಿಷ್ಣುವೇ. ಅವನ ಜ್ಞಾನದಿಂದಲೇ ಸ್ವರ್ಗ ಎಂಬ ಹೆಸರಿನ ಮುಕ್ತಿಯನ್ನು ಹೊಂದುತ್ತಾರೆ. ಯಜ್ಞಭಾಗ ಸ್ವೀಕಾರ, ಜ್ಞಾನಾದಿ ಸದ್ಗುಣ ದಾನ, ಪರಬ್ರಹ್ಮ ಪ್ರಾಪ್ತಿ ಈ ಕಾರಣಗಳಿಂದ ಚತುರ್ಮುಖನು ಅಮುಖ್ಯವಾಗಿ ಹೃದಯ ಎಂದೂ ಕರೆಸಿಕೊಳ್ಳುತ್ತಾನೆ. ಸದ್ಗುಣರೂಪನಾದುದರಿಂದ ಅವನಿಗೆ ಸತ್ಯ ಎಂದೂ ಹೆಸರು. ಯಜ್ಞಭಾಗ ಸ್ವೀಕಾರ, ಕರ್ಮಫಲದಾನ, ಪರಬ್ರಹ್ಮಪ್ರಾಪ್ತಿ ಕಾರಣತ್ವ ಈ ಕಾರಣಗಳಿಂದ ವಿಷ್ಣು ಮುಖ್ಯವಾಗಿ ಹೃದಯ ಎಂದೂ ಕರೆಸಿಕೊಳ್ಳುತ್ತಾನೆ. ಸದ್ಗುಣ ಸ್ವರೂಪನಾದ್ದರಿಂದ ಸತ್ಯ ಎಂದೂ ಅವನಿಗೆ ಹೆಸರು. ಮುಖ್ಯವಾಗಿ ಹೃದಯನೆನಿಸಿದ ಪರಬ್ರಹ್ಮನೇ ವಾಸುದೇವ ಎಂಬ ಹೆಸರಿನ ರೂಪಾಂತರವನ್ನು ಹೊಂದಿದನು. ಇವನು ಸತ್ಯ ಎನಿಸಿದುದು ಮುಮುಕ್ಷುಗಳ ಗಮ್ಯಸ್ಥಾನವಾದುದರಿಂದ. ಹೀಗೆ ಆ ಪರಬ್ರಹ್ಮನನ್ನು ಯಾರು ತಿಳಿಯುವರೋ ಅವರು ಈ ಲೋಕವನ್ನು ಜಯಿಸುವರು. ಈ ಲೋಕದ ಜಯ ಎಂದರೆ ಧರ್ಮಜ್ಞಾನ ಮೊದಲಾದವುಗಳಿಂದ ತುಂಬಿರುವುದು. ಜನಾರ್ದನನನ್ನು ತಿಳಿದಾಗ ಪರಲೋಕದ ಜಯವೂ ಆಗಿಯೇ ಆಗುತ್ತದೆ ಎಂದು ಗುಣಪರಮ ಎಂಬ ಗ್ರಂಥದಲ್ಲಿ ಹೇಳಲಾಗಿದೆ. ಜಿತ ಇನ್ನ್ವಸಾವಸತ್ ಎಂದರೆ ವಾಸುದೇವೋಪಾಸಕನಿಂದ ಖಂಡಿತವಾಗಿ ಜಿತವಾಯಿತು ಎಂದು ಅರ್ಥ.

ನಾಲ್ಕನೆಯ ಬ್ರಾಹ್ಮಣ ಮುಗಿಯಿತು.

**ವಾಸುದೇವನು ಸತ್ಯ ಏಕೆ ?**

**ಉಪನಿಷತ್—ಆಪ ಏವೇದಮಗ್ರ ಆಸುಃ । ತಾ ಆಪಃ ಸತ್ಯಮಸೃಜಂತ । ಸತ್ಯಂ ಬ್ರಹ್ಮ । ಸತ್ಯಂ ಪ್ರಜಾಪತಿಮ್ । ಪ್ರಜಾಪತಿರ್ದೇವಾನ್ । ತೇ ದೇವಾಃ ಸತ್ಯಮೇವೋಪಾಸತೇ ।**

ಸೃಷ್ಟಿಯ ಮೊದಲು ನಾರಾಯಣನೊಬ್ಬನೆ ಇದ್ದನು. ಆ ನಾರಾಯಣನು ವಾಸುದೇವರೂಪವನ್ನು ಅಭಿವ್ಯಕ್ತಗೊಳಿಸಿದನು. ಆ ವಾಸುದೇವರೂಪವು ಸದ್ಗುಣ ರೂಪ ಮತ್ತು ಪೂರ್ಣ. ವಾಸುದೇವನು ಚತುರ್ಮುಖನನ್ನು ಸೃಷ್ಟಿಸಿದನು. ಚತುರ್ಮುಖನು ದೇವತೆಗಳನ್ನು ಸೃಷ್ಟಿಸಿದನು. ಆ ದೇವತೆಗಳು ವಾಸುದೇವನನ್ನೇ ಉಪಾಸನೆ ಮಾಡುತ್ತಾರೆ.

ಭಾಷ್ಯ— ಸದಾ ಸರ್ವಗುಣಾಪಾನಾದಾಪ್ತೋ ನಾರಾಯಣಃ ಸ್ಮೃತಃ ।
ದ್ವಿತೀಯಂ ರೂಪಮುತ್ಸೃಜದ್ ವಾಸುದೇವಂ ಸ ಆತ್ಮನಃ ।
ಬ್ರಹ್ಮ ಸತ್ಯಮಿತಿ ಪ್ರಾಹುರ್ವಾಸುದೇವಾಭಿಧಂ ಪ್ರಭುಮ್ ।
ತಸ್ಮಾದ್ ಬ್ರಹ್ಮಾಽಜನಿ ತತೋ ದೇವಾಃ ಸರ್ವೇಽಪಿ ಜಜ್ಞಿರೇ ।
ತಸ್ಮಾದ್ ಬ್ರಹ್ಮಾದಯಃ ಸರ್ವೇ ವಾಸುದೇವಮುಪಾಸತೇ ।

**ಅನುವಾದ**—ಎಲ್ಲ ಗುಣಗಳನ್ನೂ ಯಾವಾಗಲೂ ಹೊಂದಿರುವುದರಿಂದ ನಾರಾಯಣನಿಗೆ ಆಪ ಎಂದು ಹೆಸರು ಪ್ರಸಿದ್ಧ. ನಾರಾಯಣನು ತನ್ನಿಂದಲೇ ವಾಸುದೇವ ಎಂಬ ಎರಡನೆಯ ರೂಪವನ್ನು ಅಭಿವ್ಯಕ್ತಗೊಳಿಸಿದನು. ವಾಸುದೇವ ಎಂಬ ಹೆಸರಿನ ಈ ಪ್ರಭುವನ್ನು ಬ್ರಹ್ಮ ಎಂದೂ ಸತ್ಯ ಎಂದೂ ಹೇಳುತ್ತಾರೆ. ವಾಸುದೇವನಿಂದ ಚತುರ್ಮುಖನು ಹುಟ್ಟಿದನು. ಅವನಿಂದ ಎಲ್ಲ ದೇವತೆಗಳೂ ಹುಟ್ಟಿದರು. ಆದ್ದರಿಂದ ಚತುರ್ಮುಖ ಮೊದಲಾದ ಎಲ್ಲ ದೇವತೆಗಳೂ ವಾಸುದೇವನನ್ನು ಉಪಾಸಿಸುತ್ತಾರೆ.

ಉಪನಿಷತ್—ತದೇತತ್ ತ್ರ್ಯಕ್ಷರಂ ಸತ್ಯಮಿತಿ । ಸ ಇತ್ಯೇಕಮಕ್ಷರಮ್ । ತೀತ್ಯೇಕಮಕ್ಷರಮ್ । ಯಮಿತ್ಯೇಕಮಕ್ಷರಮ್ । ಪ್ರಥಮೋತ್ತಮೇ ಅಕ್ಷರೇ ಸತ್ಯಂ । ಮಧ್ಯತೋಽನೃತಮ್ । ತದೇತದನೃತಮ್ ಉಭಯತಃ ಸತ್ಯೇನ ಪರಿಗೃಹೀತಂ ಸತ್ಯಭೂಯಮೇವ ಭವತಿ । ನೈವಂವಿದ್ವಾಂಸಮನೃತಂ ಹಿನಸ್ತಿ । ಇತಿ ಪಂಚಮಂ ಬ್ರಾಹ್ಮಣಂ ।

ಸತ್ಯಮ್ ಎಂಬ ಪದವು ಮೂರು ಅಕ್ಷರ ಉಳ್ಳದ್ದು. ಸ ಒಂದು ಅಕ್ಷರ, ತಿ ಒಂದು ಅಕ್ಷರ, ಯಮ್ ಒಂದು ಅಕ್ಷರ. ಮೊದಲನೆಯ ಮತ್ತು ಕೊನೆಯ ಅಕ್ಷರಗಳಿಗೆ ಸತ್ಯ ಅಂದರೆ ವಾಸುದೇವ ಎಂದು ಅರ್ಥ. ಮಧ್ಯದ ಅಕ್ಷರಕ್ಕೆ ಅನೃತ ಅಂದರೆ ಮಿಥ್ಯಾಜ್ಞಾನ ಎಂದು ಅರ್ಥ. ಈ ಅನೃತವು ಕೆಳಗೆ ಮತ್ತು ಮೇಲೆ ಎರಡು ಕಡೆಯಿಂದ ಸತ್ಯನಾಮಕ ವಾಸುದೇವನಿಂದ ಆವರಿಸಲ್ಪಟ್ಟಿದೆ, ಆದ್ದರಿಂದ ಅನೃತವು ಸತ್ಯನಾಮಕ ವಾಸುದೇವನ ಅಧೀನವೇ ಆಗುತ್ತದೆ. ಹೀಗೆ ತಿಳಿದವನಿಗೆ ಮಿಥ್ಯಾಜ್ಞಾನವು ಉಂಟಾಗುವುದಿಲ್ಲ.

ಭಾಷ್ಯ—ತತತ್ವಾದನ್ಯಥಾಜ್ಞಾನಂ ತೀತ್ಯೇವ ಸಮುದೀರ್ಯತೇ ।
ತಸ್ಮಾದಧಸ್ತಾತ್ ಸದಾತ್ಮಾ ತು ಸಾದಯನ್ನನೃತಂ ಹರಿಃ ।
ಉಪರಿಷ್ಟಾಚ್ಚ ಯನ್ನಾಮಾ ನಾಶಯನ್ನನೃತಂ ಸ್ಥಿತಃ ।
ಏವಂ ಯೋ ವೇದ ತಂ ವಿಷ್ಣುಂ ನಾಸ್ಯ ಮಿಥ್ಯಾದೃಶಿರ್ಭವೇತ್ ।

**ಅನುವಾದ**–ಅನ್ಯಥಾಜ್ಞಾನವು ಪುರುಷರಲ್ಲಿ ವ್ಯಾಪಿಸಿರುವುದರಿಂದ ಅದಕ್ಕೆ ತಿ ಎಂದು ಹೆಸರು. ಸಾಧುಸ್ವರೂಪನಾದ ಹರಿಯು ಅನ್ಯಥಾಜ್ಞಾನವನ್ನು ಮರ್ದಿಸುತ್ತಾ ಸಕಾರವಾಚ್ಯನಾಗಿ ಅದರ ಕೆಳಗೆ ಇದ್ದಾನೆ. ಸಾಧುಸ್ವರೂಪನಾದ ಹರಿಯು ಅನ್ಯಥಾಜ್ಞಾನವನ್ನು ನಾಶಮಾಡುತ್ತಾ ಯಕಾರನಾಮಕನಾಗಿ ಅದರ ಮೇಲೆ ಇದ್ದಾನೆ. ಹೀಗೆ ಮಿಥ್ಯಾಜ್ಞಾನನಾಶಕನೆಂದು ಹರಿಯನ್ನು ಯಾರು ತಿಳಿಯುತ್ತಾರೋ ಅವರಿಗೆ ಅನ್ಯಥಾಜ್ಞಾನ ಉಂಟಾಗುವುದಿಲ್ಲ.

**ಭಾಷ್ಯ—ಯೋಗ್ಯತಾಪೇಕ್ಷಯೋಪಾಸಾಥಾಪರೋಕ್ಷ್ಯಾಚ್ಚ ತತ್ಫಲವ್ |**
**ಸಮ್ಯಗ್ ದದಾತ್ಯನ್ಯಥಾ ಚ ಭವೇದೇವೋಪಕಾರಿಣೀ |**
**ಅತ್ಯಯೋಗ್ಯಾಯ ಚೇತ್ ಸಾ ಸ್ಯಾದ್ ವಿಪರೀತಫಲಪ್ರದಾ |**
**ವೈಪರೀತ್ಯಂ ತು ವಿಘ್ನಃ ಸ್ಯಾನ್ನ ತು ಪಾಪಂ ಕಥಂಚನ |**
**ಇತ್ಯಾಧಾರೇ |**

**ಅನುವಾದ**—ಮೇಲೆ ಹೇಳಿದ ಉಪಾಸನೆಯನ್ನು ದೇವತೆಗಳು ಮಾತ್ರವಲ್ಲದೆ ಯೋಗ್ಯತೆ ಇರುವವರು ಯಾರೂ ಮಾಡಬಹುದು. ಆದರೆ ಉಪಾಸನೆಯು ಅಪರೋಕ್ಷಜ್ಞಾನವನ್ನು ಉಂಟುಮಾಡಿಯೆ ಚೆನ್ನಾಗಿ ಫಲವನ್ನು ಕೊಡುತ್ತದೆ. ಅಪರೋಕ್ಷಜ್ಞಾನವನ್ನು ಉಂಟುಮಾಡುವುದಕ್ಕೆ ಮೊದಲು ಕೂಡ ಸಾಧನಮಾರ್ಗದಲ್ಲಿ ಸಾಗಲು ಉಪಕಾರ ಮಾಡುವುದು. ಅತ್ಯಂತ ಅಯೋಗ್ಯನು ಮಾಡುವ ಉಪಾಸನೆಯು ವಿಪರೀತ ಫಲವನ್ನು ಕೊಡುತ್ತದೆ. ವಿಪರೀತ ಫಲವೆಂದರೆ ಉಪಾಸನೆಗೆ ವಿಘ್ನ. ಪಾಪ ಸರ್ವಥಾ ಸಂಭವಿಸುವುದಿಲ್ಲ, ಎಂದು ಆಧಾರ ಎಂಬ ಗ್ರಂಥದಲ್ಲಿ ಹೇಳಿದೆ.

ಐದನೇ ಬ್ರಾಹ್ಮಣ ಮುಗಿಯಿತು.

**ಬಲಗಣ್ಣಿನಲ್ಲಿ ಸೂರ್ಯಮಂಡಲದಲ್ಲಿ ಸತ್ಯನಾಮಕ ವಾಸುದೇವ :**

**ಉಪನಿಷತ್—ತದ್ ಯತ್ ತತ್ ಸತ್ಯಂ ಅಸೌ ಸ ಆದಿತ್ಯಃ| ಯ ಏಷ ಏತಸ್ಮಿನ್ ಮಂಡಲೇ ಪುರುಷಃ, ಯಶ್ಚಾಯಂ ದಕ್ಷಿಣೇಽಕ್ಷನ್ ಪುರುಷಃ ತೌ ಏತೌ ಅನ್ಯೋನ್ಯಸ್ಮಿನ್ ಪ್ರತಿಷ್ಠಿತೌ | ರಶ್ಮಿಭಿರೇಷೋಽಸ್ಮಿನ್ ಪ್ರತಿಷ್ಠಿತಃ | ಪ್ರಾಣೈರಯಮಮುಷ್ಮಿನ್ | ಸ ಯದಾ ಉತ್ಕ್ರಮಿಷ್ಯನ್ ಭವತಿ ಶುದ್ಧಮೇವೈತನ್ಮಂಡಲಂ ಪಶ್ಯತಿ | ನೈನಮೇತೇ ರಶ್ಮಯಃ ಪ್ರತ್ಯಾಯಂತಿ |ಇತಿ ಷಷ್ಠಂ ಬ್ರಾಹ್ಮಣಂ ||**

ಈ ಸತ್ಯನಾಮಕ ವಾಸುದೇವನು ಯಾರೆಂದರೆ, ಈ ಸೂರ್ಯಮಂಡಲದಲ್ಲಿದ್ದು ಆದಿತ್ಯನಾಮಕನಾದ ಪುರುಷ. ಬಲಗಣ್ಣಿನಲ್ಲಿ ಇರುವ ಪುರುಷನೂ ವಾಸುದೇವನೇ.

ಆದಿತ್ಯನಲ್ಲಿರುವ ವಾಸುದೇವರೂಪ ಬಲಗಣ್ಣಿನಲ್ಲೂ, ಬಲಗಣ್ಣಿನಲ್ಲಿರುವ ವಾಸುದೇವ ರೂಪ ಆದಿತ್ಯನಲ್ಲೂ ಇದೆ. ಹೇಗೆಂದರೆ, ಆದಿತ್ಯನಲ್ಲಿರುವ ವಾಸುದೇವರೂಪವು ರಶ್ಮಿಗಳ ಜೊತೆ ಬಲಗಣ್ಣಿನಲ್ಲಿ ಇದೆ. ಬಲಗಣ್ಣಿನಲ್ಲಿ ಇರುವ ವಾಸುದೇವರೂಪವು ಚಕ್ಷುರಾದಿ ಇಂದ್ರಿಯಗಳ ಜೊತೆ ಆದಿತ್ಯನಲ್ಲಿದೆ. ಬಲಗಣ್ಣಿನಲ್ಲಿರುವ ವಾಸುದೇವ ರೂಪವು ದೇಹ ಬಿಟ್ಟು ಹೊರಗೆ ಹೋಗಲು ಉದ್ಯುಕ್ತವಾದಾಗ ಸಾಯುವ ಜೀವನು ರಶ್ಮಿರಹಿತವಾದ ಸೂರ್ಯಮಂಡಲವನ್ನು ನೋಡುತ್ತಾನೆ. ಅವನಿಗೆ ರಶ್ಮಿಗಳು ಕಾಣಿಸುವುದಿಲ್ಲ.

**ವಿವರಣೆ**—ಆದಿತ್ಯರಶ್ಮಿಗಳು ಕಣ್ಣಿಗೆ ನೋಡಲು ಸಹಕಾರಿಯಾಗಿ ಕಣ್ಣಿನಲ್ಲಿರುತ್ತವೆ. ಆದ್ದರಿಂದ ಆದಿತ್ಯನಿಗೆ ಶಕ್ತಿಯನ್ನು ಕೊಡುವ ವಾಸುದೇವರೂಪವು ಕಣ್ಣಿನಲ್ಲಿದೆ. ಚಕ್ಷುರಿಂದ್ರಿಯವು ರಶ್ಮಿರೂಪದಿಂದ ಸೂರ್ಯಮಂಡಲವನ್ನು ಸೇರಿ ಅದನ್ನು ತೋರಿಸುತ್ತದೆ. ಆದ್ದರಿಂದ ಕಣ್ಣಿನಲ್ಲಿರುವ ವಾಸುದೇವರೂಪವು ಸೂರ್ಯ ಮಂಡಲದಲ್ಲಿದೆ ಎಂದು ಅರ್ಥ.

**ಭಾಷ್ಯ—ಸ ವಾಸುದೇವೋ ಭಗವಾನಾದಿತ್ಯಸ್ಥೋ ಜನಾರ್ದನಃ ।**
**ಆದಿತ್ಯನಾಮಾ ಸಂಪ್ರೋಕ್ತ ಆದಾನಾದ್ ಹವಿಷಾಂ ಸದಾ ।**
**ಸ ಏವ ದಕ್ಷಿಣಾಕ್ಷಿಸ್ಥಃ ತಚ್ಚ ರೂಪದ್ವಯಂ ಹರೇಃ ।**
**ಅನ್ಯೋನ್ಯಸ್ಮಿನ್ ಸ್ಥಿತಂ ನಿತ್ಯಂ ಪ್ರಾಣೈಶ್ಚ ಸಹ ರಶ್ಮಿಭಿಃ ।**
**ದಕ್ಷಿಣಾಕ್ಷಿಸ್ಥಿತೋ ವಿಷ್ಣುರ್ಯದಾಽಸ್ಮಾದುತ್ಕ್ರಮಿಷ್ಯತಿ ।**
**ತದೈವ ಮ್ರಿಯಮಾಣಸ್ತು ಜೀವಃ ಪಶ್ಯೇದ್ ವಿರಶ್ಮಿಕವತ್ ।**
**ಸೂರ್ಯಸ್ಯ ಮಂಡಲಂ ನಾಸ್ಯ ಪ್ರತೀಯಂತೇ ಹಿ ರಶ್ಮಯಃ ।**
**ತತ್ಕ್ಷಣೇ ನಿಯಮೇನೈವ ಕೇಷಾಂಚಿತ್ ಸಪ್ತಭಿರ್ದಿನೈಃ ।**

**ಅನುವಾದ**—ಆ ಸತ್ಯನಾಮಕನಾದ ಭಗವಾನ್ ವಾಸುದೇವ ಆದಿತ್ಯನಲ್ಲಿ ಇದ್ದಾನೆ. ಹವಿಸ್ಸನ್ನು ಸ್ವೀಕರಿಸುವುದರಿಂದ ಅವನಿಗೆ ಆದಿತ್ಯ ಎಂದು ಹೆಸರು. ಆ ವಾಸುದೇವನೇ ಬಲಗಣ್ಣಿನಲ್ಲಿದ್ದಾನೆ. ಆ ಎರಡು ರೂಪಗಳು ಪರಸ್ಪರ ಅಂದರೆ ಆದಿತ್ಯ ನಲ್ಲಿರುವ ರೂಪ ರಶ್ಮಿಗಳ ಜೊತೆಗೆ ಚಕ್ಷುಸ್ಸಿನಲ್ಲಿಯೂ, ಚಕ್ಷುಸ್ಸಿನಲ್ಲಿರುವ ರೂಪ ಚಕ್ಷುರಾದಿ ಇಂದ್ರಿಯಗಳ ಜೊತೆಗೆ ಆದಿತ್ಯನಲ್ಲಿಯೂ ಇದೆ. ಬಲಗಣ್ಣಿನಲ್ಲಿರುವ ವಿಷ್ಣು ಯಾವಾಗ ದೇಹದಿಂದ ಹೊರ ಹೋಗಲು ಉದ್ಯುಕ್ತನಾಗುವನೋ ಆಗ, ಮರಣ ಹೊಂದುತ್ತಿರುವ ಜೀವನಿಗೆ ಸೂರ್ಯಮಂಡಲ ರಶ್ಮಿರಹಿತವಾಗಿ ಕಾಣುತ್ತದೆ. ಅವನಿಗೆ ರಶ್ಮಿಗಳು ಕಾಣುವುದಿಲ್ಲ. ಮರಣಕಾಲದಲ್ಲಿ ಯಾರಿಗೂ ಕಾಣಿಸುವುದಿಲ್ಲ. ಕೆಲವರಿಗೆ ಏಳು ದಿನ ಮೊದಲೇ ಕಾಣುವುದಿಲ್ಲ.

ಆರನೇ ಬ್ರಾಹ್ಮಣ ಮುಗಿಯಿತು.

**ವಾಸುದೇವನ ಅವಯವಗಳು :**

**ಉಪನಿಷತ್—ಯ ಏಷ ಏತಸ್ಮಿನ್ ಮಂಡಲೇ ಪುರುಷಸ್ತಸ್ಯ ಭೂರಿತಿ ಶಿರಃ। ಏಕಂ ಶಿರಃ। ಏಕಮೇತದಕ್ಷರಮ್। ಭುವ ಇತಿ ಬಾಹೂ। ದ್ವೌ ಬಾಹೂ। ದ್ವೇ ಏತೇ ಅಕ್ಷರೇ। ಸುವರಿತಿ ಪ್ರತಿಷ್ಠಾ। ದ್ವೇ ಪ್ರತಿಷ್ಠೇ। ದ್ವೇ ಏತೇ ಅಕ್ಷರೇ। ತಸ್ಯೋಪನಿಷದಹರಿತಿ। ಹಂತಿ ಪಾಪ್ಮಾನಂ ಜಹಾತಿ ಚ ಯ ಏವಂ ವೇದ।**

ಸೂರ್ಯಮಂಡಲದಲ್ಲಿರುವ ಷಡ್ಗುಣಪೂರ್ಣನಾದ ಪ್ರಸಿದ್ಧನಾದ ವಾಸುದೇವನ ಶಿರಸ್‌ಗೆ ಭೂ ಎಂದು ಹೆಸರು. ಈ ಹೆಸರು ಶಿರಸ್ಸಿಗೆ ಯುಕ್ತ. ಏಕೆಂದರೆ ಶಿರಸ್ ಒಂದು. ಭೂ ಎಂಬ ಅಕ್ಷರವೂ ಒಂದು. ಬಾಹುಗಳಿಗೆ 'ಭುವಃ' ಎಂದು ಹೆಸರು. ಬಾಹುಗಳು ಎರಡು. 'ಭುವಃ' ಎಂಬ ಹೆಸರಿನಲ್ಲಿ ಅಕ್ಷರಗಳೂ ಎರಡು. ಕಾಲುಗಳಿಗೆ ಸುವಃ ಎಂದು ಹೆಸರು. ಕಾಲುಗಳು ಎರಡು. 'ಸುವಃ' ಎಂಬ ಹೆಸರಿನಲ್ಲಿ ಅಕ್ಷರಗಳೂ ಎರಡು. ಅಹಃ ಎನ್ನುವುದು ವಾಸುದೇವನ ರಹಸ್ಯನಾಮ. ಹೀಗೆ ತಿಳಿದವರ ಪಾಪಗಳು ನಾಶವಾಗುತ್ತವೆ. ಪಾಪಪ್ರೇರಕರಾದ ಕಲಿ ಮೊದಲಾದವರ ಪ್ರಭಾವ ಇವರ ಮೇಲೆ ಆಗುವುದಿಲ್ಲ.

**ಉಪನಿಷತ್—ಯೋಽಯಂ ದಕ್ಷಿಣೇಽಕ್ಷನ್ ಪುರುಷಸ್ತಸ್ಯ ಭೂರಿತಿ ಶಿರಃ। ಏಕಂ ಶಿರಃ। ಏಕಮೇತದಕ್ಷರಮ್। ಭುವ ಇತಿ ಬಾಹೂ। ದ್ವೌ ಬಾಹೂ। ದ್ವೇ ಏತೇ ಅಕ್ಷರೇ। ಸುವರಿತಿ ಪ್ರತಿಷ್ಠಾ। ದ್ವೇ ಪ್ರತಿಷ್ಠೇ। ದ್ವೇ ಏತೇ ಅಕ್ಷರೇ। ತಸ್ಯೋಪನಿಷದಹಮಿತಿ। ಹಂತಿ ಪಾಪ್ಮಾನಂ ಜಹಾತಿ ಚ ಯ ಏವಂ ವೇದ। ಇತಿ ಸಪ್ತಮಂ ಬ್ರಾಹ್ಮಣಂ॥**

ಬಲಗಣ್ಣಿನಲ್ಲಿರುವ ಷಡ್ಗುಣಪೂರ್ಣನಾದ ವಾಸುದೇವನ ಶಿರಸ್‌ಗೆ ಭೂ ಎಂದು ಹೆಸರು. ಏಕೆಂದರೆ ಶಿರಸ್ ಒಂದು, ಈ ಹೆಸರಿನ ಅಕ್ಷರವೂ ಒಂದು. ಬಾಹುಗಳಿಗೆ ಭುವಃ ಎಂದು ಹೆಸರು ಬಾಹುಗಳು ಎರಡು, ಭುವಃ ಎಂಬ ಹೆಸರಿನಲ್ಲಿ ಅಕ್ಷರಗಳೂ ಎರಡು. ಪಾದಗಳಿಗೆ ಸುವಃ ಎಂದು ಹೆಸರು. ಪಾದಗಳು ಎರಡು, ಸುವಃ ಎಂಬ ಹೆಸರಿನಲ್ಲಿ ಅಕ್ಷರಗಳೂ ಎರಡು. ಅಹಂ ಎನ್ನುವುದು ವಾಸುದೇವನ ರಹಸ್ಯನಾಮ. ಹೀಗೆ ತಿಳಿದವರ ಪಾಪಗಳು ನಾಶವಾಗುತ್ತವೆ. ಪಾಪಪ್ರೇರಕರಾದ ಕಲಿ ಮೊದಲಾದವರ ಪ್ರಭಾವ ಇವರ ಮೇಲೆ ಆಗುವುದಿಲ್ಲ.

**ಭಾಷ್ಯ—ತಸ್ಯ ವಿಷ್ಣೋಃ ಶಿರೋ ನಾಮ ಭಾವನಾದ್ ಭೂರಿತಿ ಸ್ಮೃತಮ್।**
**ಭಾವನಂ ರಕ್ಷಣಂ ಪ್ರೋಕ್ತಂ ದೃಷ್ಟ್ಯಾ ವಾಚಾ ಚ ರಕ್ಷತಿ।**

ಉತ್ಪಾದನಾದ್ ಭುನಾಮಾ ಸ್ಯಾದ್ ದಕ್ಷಿಣೋ ಬಾಹುರಸ್ಯ ತು ।
ವಿನಾಶನಾದ್ ವ ಇತ್ಯುಕ್ತಃ ಸವ್ಯೋ ಬಾಹುಃ ಪರಾತ್ಮನಃ ।
ಸ್ಥಿತ್ಯಾನಂದಃ ಸಮುದಿಷ್ಟೋ ವರಿತಿ ಜ್ಞಾನಮುಚ್ಯತೇ ।
ಮುಕ್ತಿದಾನೇನ ತದ್ದಾನಾತ್ ಸುವರಸ್ಯ ಪದದ್ವಯಮ್ ।
ದಕ್ಷಿಣಶ್ಚೈವ ಸವ್ಯಶ್ಚ ಕ್ರಮಾತ್ ವರ್ಣದ್ವಯೋದಿತಾ ।
ಪಾದಾವಸ್ಯ ಹಿ ತತ್ಪ್ರಾಪ್ತಿರ್ಮುಕ್ತಿರಿತ್ಯಭಿಧೀಯತೇ ।
ಅಹರ್ನೇಷೋ ಹ್ಯಹೇಯತ್ವಾಜ್ಜೀವೇನ ಸಹಭಾವತಃ ।
ಅಸಾವಹರಿತಿ ಪ್ರೋಕ್ತಃ ಸರ್ವಲೋಕ ಪ್ರಕಾಶನಾತ್ ।
ತದ್ವೇದನಾತ್ ಸರ್ವಪಾಪಂ ಹಂತಿ ಚೈವ ಜಹಾತಿ ಚ ।
ಕಾನಿಚಿದ್ಧಂತಿ ಪಾಪಾನಿ ಕಲ್ಯಾದೀನ್ ಸ ಜಹಾತಿ ಚ ।

ಇತಿ ಪ್ರವೃತ್ತೇ ।

**ಅನುವಾದ**—ಸೂರ್ಯನಲ್ಲಿಯೂ ಬಲಗಣ್ಣಿನಲ್ಲಿಯೂ ಇರುವ ವಿಷ್ಣುವಿನ ಶಿರಸ್ಸು 'ಭಾವನ' ಮಾಡುವುದರಿಂದ ಭೂ ಎಂದು ಪ್ರಸಿದ್ಧವಾಗಿದೆ. ಭಾವನ ಎಂದರೆ ರಕ್ಷಣೆ. ಕಣ್ಣಿನ ನೋಟದಿಂದ ಮತ್ತು ಮಾತಿನಿಂದ ವಿಷ್ಣುವಿನ ಶಿರಸ್ಸು ಲೋಕವನ್ನು ರಕ್ಷಿಸುತ್ತದೆ. ಇವನ ಬಾಹುಗಳಿಗೆ ಭುವಃ ಎಂದು ಹೆಸರು. ಏಕೆಂದರೆ ಇವನ ಬಲಗೈ ಜಗತ್ತನ್ನು ಉತ್ಪಾದಿಸುವುದರಿಂದ ಭು, ಮತ್ತು ಎಡಗೈ ಜಗತ್ತನ್ನು ಸಂಹರಿಸುವುದರಿಂದ ವಃ ಎನಿಸುತ್ತದೆ. ಇವನ ಎರಡು ಪಾದಗಳಿಗೆ ಸುವಃ ಎಂದು ಹೆಸರು. ಏಕೆಂದರೆ ಸು ಎಂದರೆ ಆನಂದ, ವ ಎಂದರೆ ಜ್ಞಾನ. ಜೀವರಿಗೆ ಮುಕ್ತಿಯನ್ನು ಕೊಟ್ಟು ಸ್ವರೂಪಭೂತವಾದ ಆನಂದ ಜ್ಞಾನಗಳನ್ನು ಅವನು ಕೊಡುತ್ತಾನೆ. ಆದ್ದರಿಂದ ಅವನ ಬಲ ಮತ್ತು ಎಡಗಾಲುಗಳು ಕ್ರಮವಾಗಿ ಸು ಮತ್ತು ವಃ ಎಂಬ ಎರಡು ವರ್ಣಗಳಿಂದ ಕರೆಯಲ್ಪಡುತ್ತವೆ. ಅಂತಹ ಪಾದಗಳ ಪ್ರಾಪ್ತಿಯನ್ನೇ ಮುಕ್ತಿ ಎಂದು 'ಭೇಜೇ ಖಗೇಂದ್ರಧ್ವಜ ಪಾದಮೂಲಂ' ಎಂದು ಮುಂತಾದೆಡೆ ಹೇಳಿದೆ. ಬಲಗಣ್ಣಿನಲ್ಲಿರುವ ವಾಸುದೇವನು ಜೀವನ ಜೊತೆಯಲ್ಲಿ ಸದಾ ರಕ್ಷಕನಾಗಿರುವುದರಿಂದ ಜೀವನಿಗೆ ಇವನನ್ನು ಬಿಡಲು ಸಾಧ್ಯವಿಲ್ಲ. ಹೀಗೆ ಅಹೇಯನಾದ್ದರಿಂದ ಇವನಿಗೆ ಅಹಮ್ ಎಂದು ರಹಸ್ಯನಾಮ. ಸೂರ್ಯನಲ್ಲಿರುವ ಈ ವಾಸುದೇವನು ಸರ್ವಲೋಕಕ್ಕೆ ಬೆಳಕು ಕೊಡುವುದರಿಂದ ಇವನಿಗೆ ಅಹಃ ಎಂದೂ ರಹಸ್ಯನಾಮ. ವಾಸುದೇವನ ಈ ನಾಮಗಳನ್ನು ತಿಳಿಯುವುದರಿಂದ ಸರ್ವಪಾಪಗಳೂ ನಾಶವಾಗುತ್ತವೆ ಮತ್ತು ದೂರವಾಗುತ್ತವೆ. ಅಂದರೆ, ಪಾಪಗಳಲ್ಲಿ ಕೆಲವು ಸ್ವತಃ ಪಾಪಗಳು. ಇವು ನಾಶವಾಗುತ್ತವೆ. ಇನ್ನು ಕೆಲವು ಪಾಪಕಾರಣಗಳು, ಕಲ್ಯಾದಿಗಳು. ಇವು ದೂರವಾಗುತ್ತವೆ ಎಂದು ಪ್ರವೃತ್ತಗ್ರಂಥದಲ್ಲಿ ಹೇಳಿದೆ.

ಐದನೇ ಬ್ರಾಹ್ಮಣ ಮುಗಿಯಿತು.

**ಜೀವನ ಹೃದಯದಲ್ಲಿರುವ ಭಗವದ್ರೂಪ :**

**ಉಪನಿಷತ್—ಮನೋಮಯೋಽಯಂ ಪುರುಷೋ ಭಾಃ ಸತ್ಯಃ । ತಸ್ಮಿನ್ನಂತ-ರ್ಹೃದಯೇ ಯಥಾ ವ್ರೀಹಿರ್ವಾ ಯವೋ ವಾ । ಸ ಏಷ ಸರ್ವ-ಸ್ಯೇಶಾನಃ ಸರ್ವಸ್ಯಾಧಿಪತಿಃ । ಸರ್ವಮಿದಂ ಪ್ರಶಾಸ್ತಿ ಯದಿದಂ ಕಿಂ ಚ। ಇತ್ಯಷ್ಟಮಂ ಬ್ರಾಹ್ಮಣಂ ॥**

ಷಡ್ಗುಣ ಸಂಪನ್ನನಾದ ಹರಿ ಮಹಾಜ್ಞಾನಸ್ವರೂಪ, ಪ್ರಕಾಶರೂಪ, ಸದ್ಗುಣ ರೂಪ. ಇವನು ಜೀವರ ಹೃದಯದಲ್ಲಿ ಭತ್ತ ಅಥವಾ ಬಾರ್ಲಿಯ ಗಾತ್ರದಲ್ಲಿ ಇರು ತ್ತಾನೆ. ಇವನೇ ಸಕಲಚೇಷ್ಟಕ, ಸರ್ವರ ಅಧಿಪತಿ. ಎಲ್ಲವನ್ನು ನಿಯಮಿಸುತ್ತಾನೆ.

**ಭಾಷ್ಯ—ಮನೋಮಯೋ ಜ್ಞಾನಮಯಃ ಪ್ರಧಾನಂ ಮಯ ಉಚ್ಯತೇ ।
ಮಹಾಜ್ಞಾನಾತ್ಮಕಶ್ಚೈವ ಭಾರೂಪಃ ಸದ್ಗುಣಾತ್ಮಕಃ ।
ಸರ್ವಪ್ರಕಾಶಕೋ ವಿಷ್ಣುಃ...... ।**

**ಅನುವಾದ**—ಮನೋಮಯ ಎಂದರೆ ಜ್ಞಾನಮಯ. ಇಲ್ಲಿ ಮಯಶಬ್ದಕ್ಕೆ ಪ್ರಧಾನ ಮತ್ತು ಸ್ವರೂಪ ಎಂದು ಎರಡೂ ಅರ್ಥ ವಿವಕ್ಷಿತ. ಆದ್ದರಿಂದ ಮನೋ ಮಯ ಎಂದರೆ ಮಹಾಜ್ಞಾನಸ್ವರೂಪ ಎಂದೇ ಅರ್ಥವಾಗುತ್ತದೆ. ಹೊರತು, ವಿಕಾರ ಎಂಬ ಅರ್ಥದಲ್ಲಿ ಮಯಶಬ್ದ ವಿವಕ್ಷಿತವಾಗಿಲ್ಲ. ಭಾರೂಪ ಎಂದರೆ ಪ್ರಕಾಶ ಸ್ವರೂಪ. ಸತ್ಯ ಎಂದರೆ ಸದ್ಗುಣಸ್ವರೂಪ. 'ಸರ್ವಮಿದಂ ಪ್ರಶಾಸ್ತಿ' ಎಂದರೆ ವಿಷ್ಣು ಸರ್ವನಿಯಾಮಕ ಎಂದರ್ಥ.

ಎಂಟನೇ ಬ್ರಾಹ್ಮಣ ಮುಗಿಯಿತು.

**ಪರಬ್ರಹ್ಮನಿಗೆ ವಿದ್ಯುತ್ ಎಂದು ಹೆಸರು :**

**ಉಪನಿಷತ್—ವಿದ್ಯುದ್ ಬ್ರಹ್ಮ ಇತ್ಯಾಹುಃ । ವಿದಾನಾದ್ ವಿದ್ಯುತ್ । ವಿದ್ಯತಿ ಏನಂ ಪಾಪ್ಮನೋ ಯ ಏವಂ ವೇದ ವಿದ್ಯುದ್ ಬ್ರಹ್ಮ ಇತಿ । ವಿದ್ಯುದ್ ಹಿ ಏವ ಬ್ರಹ್ಮ । ಇತಿ ನವಮಂ ಬ್ರಾಹ್ಮಣಂ ॥**

ಪರಬ್ರಹ್ಮನನ್ನು ವಿದ್ಯುತ್ ಎಂದು ಜ್ಞಾನಿಗಳು ಹೇಳುತ್ತಾರೆ. ಎಲ್ಲವನ್ನೂ ತಿಳಿದಿರುವುದರಿಂದ ಮತ್ತು ಅಜ್ಞಾನ ಮೊದಲಾದ ದೋಷಗಳನ್ನು ಕತ್ತರಿಸುವುದರಿಂದ ಅವನಿಗೆ ವಿದ್ಯುತ್ ಎಂದು ಹೆಸರು. ಹೀಗೆ ಬ್ರಹ್ಮನನ್ನು ವಿದ್ಯುತ್ ಎಂದೂ, ಹಿಂದೆ ಹೇಳಿದಂತೆ ಸರ್ವನಿಯಾಮಕನೆಂದೂ ಯಾರು ತಿಳಿಯುತ್ತಾನೋ, ಅವನ ಪಾಪ

ಗಳನ್ನು ಬ್ರಹ್ಮನು ಪರಿಹರಿಸಿ ತನ್ನ ಜ್ಞಾನವನ್ನು ಕೊಡುತ್ತಾನೆ. ಹೀಗೆ ಬ್ರಹ್ಮನು ಯಥಾರ್ಥವಾಗಿ ವಿದ್ಯುತ್ ಎನಿಸಿದ್ದಾನೆ.

**ಭಾಷ್ಯ—.. ...ವಿದ್ಯುತ್ ಸರ್ವಸ್ಯ ವೇದನಾತ್ ।**

**ಯ ಏನಂ ವೇದ ವೇತ್ತಾರಂ ಸರ್ವಸ್ಯ ಪರಮೇಶ್ವರಮ್ ।**

**ಪಾಪೇಭ್ಯೋ ಮೋಚಯಿತ್ವೈನಂ ಸ್ವಾತ್ಮಾನಂ ವೇದಯೇದ್ಧರಿಃ ।**

**ಇತಿ ಮಾಹಾತ್ಮ್ಯೇ ।**

**ಅನುವಾದ**—ವಿಷ್ಣು ಎಲ್ಲವನ್ನೂ ತಿಳಿದಿರುವುದರಿಂದ ಮತ್ತು ಅಜ್ಞಾನಾದಿ ದೋಷನಾಶಕನಾದ್ದರಿಂದ ಅವನಿಗೆ ವಿದ್ಯುತ್ ಎಂದು ಹೆಸರು. ಹೀಗೆ ಸರ್ವಜ್ಞನೆಂದೂ, ಸರ್ವನಿಯಾಮಕನೆಂದೂ ಪರಮಾತ್ಮನನ್ನು ತಿಳಿದರೆ, ಅವನ ಪಾಪವನ್ನು ಹರಿಯು ಪರಿಹರಿಸಿ ತನ್ನ ಜ್ಞಾನವನ್ನು ಕೊಡುತ್ತಾನೆ ಎಂದು ಮಾಹಾತ್ಮ್ಯ ಎಂಬ ಗ್ರಂಥದಲ್ಲಿ ಹೇಳಿದೆ.

**ವಿವರಣೆ**—ಈ ಬ್ರಾಹ್ಮಣದಲ್ಲಿ ಹಿಂದಿನ ಬ್ರಾಹ್ಮಣದಲ್ಲಿ ಹೇಳಿದ ಸರ್ವನಿಯಾಮಕತ್ವೋಪಾಸನೆಗೂ, ಇಲ್ಲಿ ಹೇಳಿದ ಸರ್ವಜ್ಞತ್ವ ಸರ್ವದೋಷನಾಶಕತ್ವೋಪಾಸನೆಗೂ ಒಟ್ಟಿಗೆ ಫಲವನ್ನು ಹೇಳಿದೆ ಆದ್ದರಿಂದ ಹಿಂದಿನ ಬ್ರಾಹ್ಮಣದಲ್ಲಿ ಫಲವನ್ನು ಹೇಳಿಲ್ಲ.

ಒಂಭತ್ತನೇ ಬ್ರಾಹ್ಮಣ ಮುಗಿಯಿತು.

**ಗೋರೂಪಳು ವಾಗ್ದೇವಿ :**

**ಉಪನಿಷತ್—ವಾಚಂ ಧೇನುಮುಪಾಸೀತ । ತಸ್ಯಾಶ್ಚತ್ವಾರಃ ಸ್ತನಾಃ । ಸ್ವಾಹಾಕಾರೋ ವಷಟ್‌ಕಾರೋ ಹಂತಕಾರಃ ಸ್ವಧಾಕಾರಃ । ತಸ್ಯೈ ದ್ವೌ ಸ್ತನೌ ದೇವಾ ಉಪಜೀವಂತಿ ಸ್ವಾಹಾಕಾರಂ ಚ ವಷಟ್‌ಕಾರಂ ಚ। ಹಂತಕಾರಂ ಮನುಷ್ಯಾಃ । ಸ್ವಧಾಕಾರಂ ಪಿತರಃ । ತಸ್ಯಾಃ ಪ್ರಾಣ ಋಷಭೋ, ಮನೋ ವತ್ಸಃ । ಇತಿ ದಶಮಂ ಬ್ರಾಹ್ಮಣಮ್ ॥**

ಗೋರೂಪದಲ್ಲಿ ವಾಗ್ದೇವಿ ಸರಸ್ವತಿಯನ್ನು ಉಪಾಸನೆ ಮಾಡಬೇಕು. ಹೇಗೆಂದರೆ, ಆ ಧೇನುವಿಗೆ ಸ್ವಾಹಾಕಾರ, ವಷಟ್‌ಕಾರ,ಹಂತಕಾರ ಮತ್ತು ಸ್ವಧಾಕಾರ ಎಂದು ನಾಲ್ಕು ಸ್ತನಗಳಿವೆ. ಸ್ವಾಹಾಕಾರ ಮತ್ತು ವಷಟ್‌ಕಾರ ಎಂಬ ಎರಡು ಸ್ತನಗಳನ್ನು ದೇವತೆಗಳು ಆಶ್ರಯಿಸಿದ್ದಾರೆ. ಹಂತಕಾರ ಎಂಬ ಸ್ತನವನ್ನು ಮನುಷ್ಯರು ಆಶ್ರಯಿಸಿದ್ದಾರೆ. ಪಿತೃಗಳು ಸ್ವಧಾಕಾರವೆಂಬ ಸ್ತನವನ್ನು ಆಶ್ರಯಿಸಿದ್ದಾರೆ. ವಾಯು ದೇವರು ಅವಳಿಗೆ ಪತಿ, ರುದ್ರದೇವರು ಕರು.

**ಭಾಷ್ಯ—ಸರಸ್ವತೀ ತು ಗೋರೂಪಾ ತಸ್ಯಾ ದೇವಾದಯೋಽಖಿಲಾಃ ।
ಸ್ತನಾನೇವೋಪಜೀವಂತಿ ತಸ್ಯಾ ವಾಯುಃ ಪತಿಃ ಪ್ರಭುಃ ।
ವತ್ಸೋ ಮನೋಽಭಿಮಾನ್ಯಸ್ಯಾಃ ಸರಸ್ವತ್ಯಾಃ ಸದಾಶಿವಃ ।
ಇತಿ ಪ್ರಭಂಜನೇ ।**

**ಅನುವಾದ**—ಸರಸ್ವತಿ ಧೇನುರೂಪವುಳ್ಳವಳು. ದೇವಾದಿಗಳೆಲ್ಲರೂ ಆವಳ ಸ್ತನಗಳನ್ನೇ ಆಶ್ರಯಿಸಿ ಜೀವಿಸುತ್ತಾರೆ. ವಾಯುದೇವರು ಅವಳ ಪತಿ. ಮನೋಭಿಮಾನಿ ರುದ್ರದೇವರು ಕರು.

ಹತ್ತನೆಯ ಬ್ರಾಹ್ಮಣ ಮುಗಿಯಿತು.

**ಜಠರಾಗ್ನಿಯಲ್ಲಿರುವ ಶ್ರೀಹರಿಗೆ ವೈಶ್ವಾನರ ಎಂದು ಹೆಸರು :**

**ಉಪನಿಷತ್—ಅಯಮಗ್ನಿರ್ವೈಶ್ವಾನರೋ ಯೋಽಯಮಂತಃ ಪುರುಷೇ। ಯೇನೇದಮನ್ನಂ ಪಚ್ಯತೇ, ಯದಿದಮದ್ಯತೇ । ತಸ್ಯೈಷ ಘೋಷೋ ಭವತಿ ಯಮೇತತ್ ಕರ್ಣಾವಪಿಧಾಯ ಶೃಣೋತಿ । ಸ ಯದಾ ಉತ್ಕ್ರಮಿಷ್ಯನ್ ಭವತಿ ನೈನಂ ಘೋಷಂ ಶೃಣೋತಿ ।
ಇತಿ ಏಕಾದಶಂ ಬ್ರಾಹ್ಮಣಮ್॥**

ಜೀವನ ಶರೀರದಲ್ಲಿ ಜಾಠರಾಗ್ನಿಯಲ್ಲಿರುವ ಅಗ್ನಿನಾಮಕ ಪರಮಾತ್ಮನಿಗೆ ವೈಶ್ವಾನರ ಎಂದು ಹೆಸರು. ಈ ವೈಶ್ವಾನರನೇ ಪ್ರಾಣಿಗಳು ತಿನ್ನುವ ಆಹಾರವನ್ನು ಜೀರ್ಣವಾಗಿಸುತ್ತಾನೆ. ಕಿವಿಯನ್ನು ಮುಚ್ಚಿಕೊಂಡಾಗ ಕೇಳುವ ಶಬ್ದ ವಾಯುದೇವನು ಮಾಡುವ ಘೋಷ. ಇದು ಈ ವೈಶ್ವಾನರನ ಸ್ತುತಿರೂಪವಾಗಿದೆ. ಈ ವೈಶ್ವಾನರನು ಜೀವನ ಶರೀರದಿಂದ ಹೊರ ಹೋಗುವ ಕಾಲ ಸನ್ನಿಹಿತವಾದಾಗ ಈ ಘೋಷ ಕೇಳಿಸುವುದಿಲ್ಲ. ಇದು ಮರಣಸೂಚಕವಾಗುತ್ತದೆ.

**ಭಾಷ್ಯ—ಅಗ್ನಿನಾಮಾ ತು ಭಗವಾನೌದರ್ಯಾಗ್ನೌ ಪ್ರತಿಷ್ಠಿತಃ ।
ವಿಶ್ವೈರ್ಗುಣೈಃ ಸಮೇತತ್ವಾದನಂತತ್ವಾಚ್ಚ ಸ ಪ್ರಭುಃ ।
ವೈಶ್ವಾನರ ಇತಿ ಪ್ರೋಕ್ತಃ ಸೋಽಗ್ನಿರಂಗ ಪ್ರಣೇತೃತಃ ।
ತಸ್ಯ ವಿಷ್ಣೋಃ ಸ್ತುತಿರಿಯಂ ಕ್ರಿಯತೇ ವಾಯುನಾ ಸದಾ ।
ಕರ್ಣೌ ಪಿಧಾಯ ಯಾ ನಿತ್ಯಂ ಶ್ರೋತುಂ ಶಕ್ಯಾಽಖಿಲೈಃ ಸದಾ ।
ಇತಿ ತಂತ್ರಮಾಲಾಯಾಂ ।**

**ಅನುವಾದ**—ಅಗ್ನಿ ಎಂಬ ಹೆಸರಿನ ಭಗವಂತನು ಜಾಠರಾಗ್ನಿಯಲ್ಲಿದ್ದಾನೆ. ಆ

ಪ್ರಭು 'ವೈಶ್ವ' ಅಂದರೆ ಸಕಲಗುಣಗಳಿಂದ ಕೂಡಿರುವುದರಿಂದ ಮತ್ತು 'ಅನರ' ಅಂದರೆ ನಾಶರಹಿತನಾದ್ದರಿಂದ ವೈಶ್ವಾನರ ಎಂದು ಪ್ರಸಿದ್ಧನಾಗಿದ್ದಾನೆ. ಶರೀರದ ಎಲ್ಲ ಅಂಗಗಳನ್ನೂ ಆಯಾ ಕಾರ್ಯಗಳಲ್ಲಿ ನಡೆಸುವುದರಿಂದ ಅವನಿಗೆ ಅಗ್ನಿ ಎಂದು ಹೆಸರು. ಈ ವಿಷ್ಣುವಿನ ಸ್ತುತಿಯನ್ನು ವಾಯುದೇವರು ಸದಾ ಮಾಡುತ್ತಾರೆ. ಎಲ್ಲರೂ ಕಿವಿಮುಚ್ಚಿಕೊಂಡಾಗ ಈ ಸ್ತೋತ್ರವನ್ನು ಕೇಳಬಹುದು.

ಹನ್ನೊಂದನೆ ಬ್ರಾಹ್ಮಣ ಮುಗಿಯಿತು.

**ಅರ್ಚಿರಾದಿ ಮಾರ್ಗ :**

**ಉಪನಿಷತ್—ಯದಾ ವೈ ಪುರುಷೋಽಸ್ಮಾತ್ ಲೋಕಾತ್ ಪ್ರೈತಿ ಸ ವಾಯುಮಾಗಚ್ಛತಿ । ತಸ್ಮೈ ಸ ತತ್ರ ವಿಜಿಹೀತೇ ಯಥಾ ರಥಚಕ್ರಸ್ಯ ಖಮ್। ತೇನ ಸ ಊರ್ಧ್ವ ಆಕ್ರಮತೇ । ಸ ಆದಿತ್ಯಮಾಗಚ್ಛತಿ । ತಸ್ಮೈ ಸ ತತ್ರ ವಿಜಿಹೀತೇ ಯಥಾ ಲಂಬರಸ್ಯ ಖಂ । ತೇನ ಸ ಊರ್ಧ್ವ ಆಕ್ರಮತೇ । ಸ ಚಂದ್ರಮಸಮಾಗಚ್ಛತಿ। ತಸ್ಮೈ ಸ ತತ್ರ ವಿಜಿಹೀತೇ ಯಥಾ ದುಂದುಭೇಃ ಖಮ್ । ತೇನ ಸ ಊರ್ಧ್ವ ಆಕ್ರಮತೇ । ಸ ಲೋಕಮಾಗಚ್ಛತ್ಯಶೋಕಮಹಿಮಮ್ । ತಸ್ಮಿನ್ ವಸತಿ ಶಾಶ್ವತೀಃ ಸಮಾಃ ।**

**ಇತಿ ದ್ವಾದಶಂ ಬ್ರಾಹ್ಮಣಮ್ ॥**

ಅಪರೋಕ್ಷ ಜ್ಞಾನಿಯು ತನ್ನ ಶರೀರದಿಂದ ನಿರ್ಗಮಿಸಿದಾಗ ಪ್ರವಹ ವಾಯುವಿನ ಲೋಕಕ್ಕೆ ಬರುತ್ತಾನೆ. ಅನ್ಯರಿಗೆ ಅಲ್ಲಿ ಹೋಗಲು ದಾರಿ ಸಿಗಲಾರದು. ಜ್ಞಾನಿಯು ಮಾತ್ರ ಮುಂದೆ ಹೋಗುವುದಕ್ಕಾಗಿ ರಥಚಕ್ರ ಉರುಳಲು ಬೇಕಾದಷ್ಟು ಅವಕಾಶವನ್ನು ಪ್ರವಹನೆ ಮಾಡಿಕೊಡುತ್ತಾನೆ. ಆ ದಾರಿಯಿಂದ ಜ್ಞಾನಿಯು ಪ್ರವಹಲೋಕವನ್ನು ಸೇರಿ ಅಲ್ಲಿಂದ ಊರ್ಧ್ವ ಮುಖವಾಗಿ ಹೋಗುತ್ತಾನೆ. ಸೂರ್ಯ ಲೋಕಕ್ಕೆ ಬರುತ್ತಾನೆ. ಆಗ ಸೂರ್ಯನು ಆ ಜ್ಞಾನಿಗೆ ದಾರಿಯನ್ನು ಮಾಡಿಕೊಡುತ್ತಾನೆ.ಲಂಬರವೆಂಬ ವಾದ್ಯದಲ್ಲಿ ಇರುವ ರಂಧ್ರದಷ್ಟು ಅವಕಾಶವನ್ನು ಕೊಡುತ್ತಾನೆ. ಆ ದಾರಿಯ ಮೂಲಕ ಅವನು ಊರ್ಧ್ವಮುಖವಾಗಿ ಹೋಗುತ್ತಾನೆ. ಚಂದ್ರ ಲೋಕಕ್ಕೆ ಬರುತ್ತಾನೆ. ಆಗ ಚಂದ್ರನು ಆ ಜ್ಞಾನಿಗೆ ದುಂದುಭಿಯಲ್ಲಿ ಇರುವ ರಂಧ್ರದಷ್ಟು ದಾರಿ ಮಾಡಿಕೊಡುತ್ತಾನೆ. ಆ ದಾರಿಯ ಮೂಲಕ ಅವನು ಊರ್ಧ್ವ ಮುಖವಾಗಿ ಹೋಗುತ್ತಾನೆ. ಅಲ್ಲಿಂದ ಊರ್ಧ್ವಮುಖವಾಗಿ ವೈಶ್ವಾನರಾದಿ ಲೋಕಗಳ ಮಾರ್ಗವಾಗಿ ಹೋಗುತ್ತಾನೆ. ಪ್ರಧಾನವಾಯುಲೋಕಕ್ಕೆ ಬರುತ್ತಾನೆ. ಅಲ್ಲಿಂದ ಊರ್ಧ್ವಮುಖವಾಗಿ ಹೋಗುತ್ತಾನೆ. ಶೋಕರಹಿತವಾದ ಸತ್ಯಲೋಕಕ್ಕೆ ಅಥವಾ ವಿಷ್ಣುಲೋಕಕ್ಕೆ ಬರುತ್ತಾನೆ. ಅಲ್ಲಿ ಬಹುಕಾಲ ಅಂದರೆ ಚತುರ್ಮುಖನ ಮುಕ್ತಿ ಪರ್ಯಂತ ವಾಸಮಾಡುತ್ತಾನೆ.

**ವಿವರಣೆ**—ಈ ಉಪನಿಷತ್ತಿನಲ್ಲಿ ಜ್ಞಾನಿಯ ಉತ್ಕ್ರಮಣಮಾರ್ಗ ಪೂರ್ಣವಾಗಿ ಹೇಳಿಲ್ಲ. ಸೂತ್ರಭಾಷ್ಯದಲ್ಲಿ ಉಕ್ತವಾದ ಬ್ರಹ್ಮತರ್ಕವಚನದಲ್ಲಿ ಅದರ ವಿವರ ಹೀಗಿದೆ–

ಉತ್ಕ್ರಾಂತಸ್ತು ಶರೀರಾತ್ ಸ್ವಾತ್ ಗಚ್ಛತ್ಯರ್ಚಿಷಮೇವ ತು ।
ತತೋ ಹಿ ವಾಯೋಃ ಪುತ್ರಂ ಚ ಯೋಽಸೌ ನಾಮ್ನಾತಿವಾಹಿಕಃ ।
ತತೋಽಹಃ ಪೂರ್ವಪಕ್ಷಂ ವಾಪ್ಯುದಕ್ ಸಂವತ್ಸರಂ ತಥಾ ।
ತಟಿತಂ ವರುಣಂ ಚೈವ ಪ್ರಜಾಪಂ ಸೂರ್ಯಮೇವ ಚ ।
ಸೋಮಂ ವೈಶ್ವಾನರಂ ಚೇಂದ್ರಂ ಧ್ರುವಂ ದೇವೀಂ ದಿವಂ ತಥಾ ।
ತತೋ ವಾಯುಂ ಪರಂ ಪ್ರಾಪ್ಯ ತೇನೈತಿ ಪುರುಷೋತ್ತಮಮ್ ।

**ಭಾಷ್ಯ—ಪ್ರವಹಂ ವಾಯುಪುತ್ರಂ ಚ ಸೂರ್ಯಸೋಮೌ ಚ ವಿದ್ಯುತಮ್ ।**
**ಪ್ರಾಪ್ಯ ಪ್ರಧಾನವಾಯುಂ ಚ ಯಾತಿ ತತ್ ಪರಮಂ ಪದಮ್ ।**
**ಇತಿ ಬ್ರಹ್ಮಾಂಡೇ ।**

**ಅನುವಾದ**—ಜ್ಞಾನಿಯು ಮುಖ್ಯವಾಯುದೇವರ ಮಗನಾದ ಪ್ರವಹ ವಾಯು ಲೋಕವನ್ನು, ಸೂರ್ಯ ಚಂದ್ರ ಮತ್ತು ಭಾರತೀದೇವಿಯರ ಲೋಕಗಳನ್ನೂ ಮುಖ್ಯವಾಯುದೇವರ ಲೋಕವನ್ನೂ ತಲುಪಿ ಅನಂತರ ಮುಕ್ತಿಯನ್ನು ಹೊಂದುತ್ತಾನೆ ಎಂದು ಬ್ರಹ್ಮಾಂಡಪುರಾಣದಲ್ಲಿ ಹೇಳಲಾಗಿದೆ.

ಹನ್ನೆರಡನೇ ಬ್ರಾಹ್ಮಣ ಮುಗಿಯಿತು.

**ದುಃಖವೆಲ್ಲವೂ ತಪಸ್ಸೇ :**

**ಉಪನಿಷತ್**–**ಏತದ್ ವೈ ಪರಮಂ ತಪೋ ಯದ್ ವ್ಯಾಧಿತಸ್ತಪ್ಯತೇ ।ಪರಮಂ ಹೈವ ಲೋಕಂ ಜಯತಿ ಯ ಏವಂ ವೇದ। ಏತದ್ ವೈ ಪರಮಂ ತಪೋ ಯಂ ಪ್ರೇತಮರಣ್ಯಂ ಹರಂತಿ। ಪರಮಂ ಹೈವ ಲೋಕಂ ಜಯತಿ ಯ ಏವಂ ವೇದ । ಏತದ್ ವೈ ಪರಮಂ ತಪೋ ಯಂ ಪ್ರೇತ-ಮಗ್ನಾ ಅಭ್ಯಾದಧತಿ । ಪರಮಂ ಹೈವ ಲೋಕಂ ಜಯತಿ ಯ ಏವಂ ವೇದ ।**
**ಇತಿ ತ್ರಯೋದಶಂ ಬ್ರಾಹ್ಮಣಮ್ ॥**

ತಾನು ವ್ಯಾಧಿಯಿಂದ ಅನುಭವಿಸುವ ತಾಪವು ತಾನು ವಿಷ್ಣುವನ್ನು ಕುರಿತು ಆಚರಿಸುವ ತಪಸ್ಸೇ ಎಂದು ಭಾವಿಸುವುದೇ ಉತ್ತಮವಾದ ತಪಸ್ಸು. ಹೀಗೆ ಭಾವಿಸುವವನು ಉತ್ತಮ ಲೋಕವನ್ನು ಹೊಂದುತ್ತಾನೆ. ತಾನು ಸತ್ತನಂತರ ಶವ

ಶರೀರವನ್ನು ಬಂಧುಗಳು ಸ್ಮಶಾನಕ್ಕೆ ತೆಗೆದುಕೊಂಡು ಹೋಗುವುದೂ ಕೂಡ ತಾನು ವಿಷ್ಣುವನ್ನು ಕುರಿತು ಆಚರಿಸುವ ತಪಸ್ಸೇ ಎಂದು ಭಾವಿಸುವುದೂ ಉತ್ತಮವಾದ ತಪಸ್ಸು. ಹೀಗೆ ಭಾವಿಸುವವನು ಉತ್ತಮಲೋಕವನ್ನು ಹೊಂದುತ್ತಾನೆ. ತನ್ನ ಮೃತಶರೀರವನ್ನು ಬಂಧುಗಳು ಅಗ್ನಿಯಲ್ಲಿ ಸುಡುವುದೂ ತಾನು ವಿಷ್ಣುವನ್ನು ಕುರಿತು ಆಚರಿಸುವ ತಪಸ್ಸೇ ಎಂದೂ ಭಾವಿಸುವುದೂ ಉತ್ತಮ ತಪಸ್ಸು. ಹೀಗೆ ಭಾವಿಸುವವನೂ ಉತ್ತಮ ಲೋಕವನ್ನು ಹೊಂದುತ್ತಾನೆ.

**ಭಾಷ್ಯ—ವ್ಯಾಧೀನ್ ಶವಹೃತಿಂ ಚೈವ ಶವದಾಹಾದಿಕಂ ತಥಾ ।**
**ವಿಷ್ಣವೇ ತಪ ಇತ್ಯೇವ ಚಿಂತಯನ್ ಯಾತಿ ತತ್ ಪರಮ್ ।ಇತಿ ಚ।**

**ಅನುವಾದ**—ವ್ಯಾಧಿಗಳನ್ನೂ, ಸ್ಮಶಾನಕ್ಕೆ ಶವವನ್ನು ತೆಗೆದುಕೊಂಡು ಹೋಗುವುದನ್ನೂ ಮತ್ತು ಶವದಾಹ ಮೊದಲಾದುವನ್ನೂ ವಿಷ್ಣುವನ್ನು ಕುರಿತು ತಾನು ಮಾಡುವ ತಪಸ್ಸು ಎಂದು ಭಾವಿಸುವವನು ಶ್ರೀಹರಿಯನ್ನು ಹೊಂದುತ್ತಾನೆ ಎಂದೂ ಬ್ರಹ್ಮಾಂಡಪುರಾಣದಲ್ಲಿ ಹೇಳಿದೆ.

**ವಿಷ್ಣು ಸ್ವರೂಪವನ್ನು ತಿಳಿದವನ ಉಪಾಸನೆಗಳೇ ಸಫಲ :**

**ಭಾಷ್ಯ—ಅಕ್ಲೇಶಿತೋಽಪಿ ಕ್ಲೇಶಾದೀನತೀತೈಷ್ಯಾನ್ ಅಪೀಹ ಯಃ ।**
**ವಿಷ್ಣವೇ ತಪ ಇತ್ಯೇವ ಪ್ರಾರ್ಥಯೇತ್ ಸ ಪರಂ ವ್ರಜೇತ್ ।**
**ವಿಷ್ಣೋಃ ಸ್ವರೂಪವೇತ್ತಾ ಚೇದನ್ಯಥಾ ನ ಕಥಂಚನ ।**
**ಯಥಾಸ್ವರೂಪವೇತ್ತುಃ ಸ್ಯಾದೇಕೈಕಾಪಿ ಹ್ಯುಪಾಸನಾ ।**
**ಮೋಕ್ಷಾಯ ಸಹಿತಾಃ ಸರ್ವಾ ಅಪ್ಯಜ್ಞಸ್ಯ ನ ತು ಕ್ವಚಿತ್ ।**
**ಯಥಾವತ್ ಕೇಶವಂ ಜ್ಞಾತ್ವಾ ಸ್ವಯೋಗ್ಯೈಕಾಮುಪಾಸನಾಮ್ ।**
**ಅಪಿ ಕೃತ್ವಾ ಹರಿಂ ದೃಷ್ಟ್ವಾ ಮುಚ್ಯತೇ ನಾತ್ರ ಸಂಶಯಃ ।**
**ಇತಿ ಬ್ರಹ್ಮತರ್ಕೇ ।**

**ಅನುವಾದ**—ವ್ಯಾಧಿ ಮೊದಲಾದವುಗಳನ್ನು ಈಗ ಅನುಭವಿಸುತ್ತಿಲ್ಲವಾದರೂ ಹಿಂದೆ ಅನುಭವಿಸಿರುವ ಮತ್ತು ಮುಂದೆ ಅನುಭವಿಸಲಿರುವ ವ್ಯಾಧಿ ಮೊದಲಾದವುಗಳನ್ನು, ಅವು ವಿಷ್ಣುವನ್ನು ಕುರಿತು ತಾನು ಮಾಡುವ ತಪಸ್ಸು ಎಂದು ಭಾವಿಸಿದವನು ವಿಷ್ಣುಲೋಕವನ್ನು ಹೊಂದುತ್ತಾನೆ. ಆದರೆ ವಿಷ್ಣುಸ್ವರೂಪವನ್ನು ತಿಳಿದವನು ಮಾಡುವ ಇಂತಹ ಚಿಂತನೆ ಮಾತ್ರ ವಿಷ್ಣುಲೋಕಪ್ರಾಪ್ತಿಗೆ ಸಾಧನ. ತಿಳಿಯದವನ ಚಿಂತನೆ ಸಾಧನವಲ್ಲ. ಪರಮಾತ್ಮನ ಯಥಾರ್ಥ ಜ್ಞಾನಿಗೆ ಒಂದೊಂದೇ ಉಪಾಸನೆಯಿಂದಲೂ ಮೋಕ್ಷವು ಲಭಿಸುವುದು. ಅಜ್ಞಾನಿಯು ಎಲ್ಲ ಉಪಾಸನೆ

ಗಳನ್ನು ಮಾಡಿದರೂ ಮೋಕ್ಷವು ಲಭಿಸುವುದಿಲ್ಲ. ಜ್ಞಾನಿಯು ಕೇಶವನನ್ನು ಯಥಾರ್ಥವಾಗಿ ತಿಳಿದು ತನಗೆ ಯೋಗ್ಯವಾದ ಒಂದು ಉಪಾಸನೆಯನ್ನು ಮಾಡಿದರೂ ಕೂಡ ಹರಿಯ ಸಾಕ್ಷಾತ್ಕಾರವನ್ನು ಹೊಂದಿ ಮುಕ್ತಿಯನ್ನು ಹೊಂದುತ್ತಾನೆ. ಈ ವಿಷಯದಲ್ಲಿ ಸಂಶಯವಿಲ್ಲ ಎಂದು ಬ್ರಹ್ಮತರ್ಕದಲ್ಲಿ ಹೇಳಿದೆ.

ಹದಿಮೂರನೇ ಬ್ರಾಹ್ಮಣ ಮುಗಿಯಿತು.

**ವಾಯು ಬ್ರಹ್ಮರ ಅನ್ಯೋನ್ಯತೆ :**

**ಉಪನಿಷತ್—ಅನ್ನಂ ಬ್ರಹ್ಮ ಇತ್ಯೇಕ ಆಹುಃ । ತನ್ನ ತಥಾ । ಪೂಯತಿ ವಾ ಅನ್ನಮ್ ಋತೇ ಪ್ರಾಣಾತ್ । ಪ್ರಾಣೋ ಬ್ರಹ್ಮ ಇತ್ಯೇಕ ಆಹುಃ । ತನ್ನ ತಥಾ । ಶುಷ್ಯತಿ ವೈ ಪ್ರಾಣ ಋತೇ ಅನ್ನಾತ್ । ಏತೇ ಹ ತ್ವೇವ ದೇವತೇ ಏಕಧಾಭೂಯಂ ಭೂತ್ವಾ ಪರಮತಾಂ ಗಚ್ಛತಃ । ತದ್ಧ ಸ್ಮಾಹ ಪ್ರಾತೃದಃ ಪಿತರಂ 'ಕಿಂ ಸ್ವಿದೇವೈವಂವಿದುಷೇ ಸಾಧು ಕುರ್ಯಾಂ ? ಕಿಮೇವಾಸ್ಮಾ ಅಸಾಧು ಕುರ್ಯಾಮ್?' ಇತಿ । ಸ ಹ ಸ್ಮಾಹ ಪಾಣಿನಾಮಾ ಪ್ರಾತೃದಃ 'ಕಸ್ತ್ವೇನಯೋರೇಕಧಾಭೂಯಂ ಭೂತ್ವಾ ಪರಮತಾಂ ಗಚ್ಛತೀ'ತಿ । ತಸ್ಮಾ ಉ ಹೈತದುವಾಚ 'ವಿ' ಇತಿ । ಅನ್ನಂ ವೈ ವಿ । ಅನ್ನೇ ಹಿ ಇಮಾನಿ ಸರ್ವಾಣಿ ಭೂತಾನಿ ವಿಷ್ಟಾನಿ । 'ರಮ್' ಇತಿ । ಪ್ರಾಣೋ ವೈ ರಮ್ । ಪ್ರಾಣೇ ಹಿ ಇಮಾನಿ ಸರ್ವಾಣಿ ಭೂತಾನಿ ರಮಂತೇ । ಸರ್ವಾಣಿ ಹವಾ ಅಸ್ಮಿನ್ ಭೂತಾನಿ ವಿಶಂತಿ ಸರ್ವಾಣಿ ಭೂತಾನಿ ರಮಂತೇ ಯ ಏವಂ ವೇದ ।**

**ಇತಿ ಚತುರ್ದಶಂ ಬ್ರಾಹ್ಮಣಮ್ ॥**

'ಅನ್ನಾಭಿಮಾನಿಯಾದ ಚತುರ್ಮುಖ ಬ್ರಹ್ಮನು ತನ್ನ ಕೆಲಸಗಳನ್ನು ಮಾಡಲು ಶ್ರೀಹರಿಯನ್ನು ಬಿಟ್ಟು ಬೇರೆ ಯಾರನ್ನೂ ಅವಲಂಬಿಸಿಲ್ಲ' ಎಂದು ಕೆಲವರು ಹೇಳುತ್ತಾರೆ. ಅದು ಸರಿಯಲ್ಲ. ಅನ್ನಾಭಿಮಾನಿಯಾದ ಬ್ರಹ್ಮದೇವರ ದೇಹವು ಅದರಲ್ಲಿ ಮುಖ್ಯಪ್ರಾಣನಿಲ್ಲದಿದ್ದರೆ ಕೊಳೆತು ನಾರುತ್ತದೆ. 'ಮುಖ್ಯಪ್ರಾಣನು ತನ್ನ ಕೆಲಸಗಳನ್ನು ಮಾಡಲು ಶ್ರೀಹರಿಯನ್ನಲ್ಲದೆ ಬೇರೆ ಯಾರನ್ನೂ ಅವಲಂಬಿಸಿಲ್ಲ' ಎಂದು ಮತ್ತೆ ಕೆಲವರು ಹೇಳುತ್ತಾರೆ. ಅದೂ ಸರಿಯಲ್ಲ. ಮುಖ್ಯಪ್ರಾಣನ ದೇಹವು ಅದರಲ್ಲಿ ಅನ್ನಾಭಿಮಾನಿಯಾದ ಚತುರ್ಮುಖನಿಲ್ಲದಿದ್ದರೆ ಒಣಗುತ್ತದೆ. ಈ ಇಬ್ಬರು ದೇವತೆಗಳು ಒಬ್ಬರು ಇನ್ನೊಬ್ಬರಲ್ಲಿ ಪ್ರವೇಶ ಹೊಂದಿಯೇ ಸುಸ್ಥಿತಿಯಲ್ಲಿರುತ್ತಾರೆ. ಈ ವಿಷಯವನ್ನು ತಿಳಿದ 'ಪಾಣಿ' ಎಂಬ ಒಬ್ಬ ವಸಿಷ್ಠಪುತ್ರನು ತನ್ನ ತಂದೆಯ ಬಳಿ ಹೀಗೆ ಹೇಳಿದನು. 'ಚತುರ್ಮುಖ ಮುಖ್ಯಪ್ರಾಣರನ್ನು ಹೀಗೆ ತಿಳಿದು ಕೃತಕೃತ್ಯನಾದ ಜ್ಞಾನಿಗೆ

ನಾನು ಯಾವ ಉಪಕಾರ ಮಾಡಿ ಅವನನ್ನು ವಶೀಕರಿಸಿಕೊಂಡೇನು? ಅಥವಾ ಯಾವ ಅಪಕಾರದಿಂದ ಅವನನ್ನು ವಶಪಡಿಸಿಕೊಂಡೇನು?' ಹೀಗೆ ಬ್ರಹ್ಮ ವಾಯುಗಳನ್ನು ತಿಳಿದ ಜ್ಞಾನಿಯನ್ನು ಪ್ರಶಂಸಿಸಿ ಪ್ರಾಣಿ ಕೇಳಿದನು– 'ಪರಸ್ಪರ' ದೇಹದಲ್ಲಿ ಪ್ರವೇಶದಿಂದ ಈ ಇಬ್ಬರಲ್ಲಿ ಯಾರಿಗೆ ಹೆಚ್ಚು ಪ್ರಯೋಜನ?' ವಸಿಷ್ಠರು 'ವಿ' ಎಂದು ಹೇಳಿದರು. 'ವಿ ಎಂದರೆ ಅನ್ನ. ಏಕೆಂದರೆ ಅನ್ನಾಭಿಮಾನಿ ಚತುರ್ಮುಖ ಬ್ರಹ್ಮನನ್ನು ಸಮಸ್ತ ಪ್ರಾಣಿಗಳು ಪ್ರವೇಶಿಸಿವೆ. ಅಂದರೆ ಆಶ್ರಯಿಸಿವೆ' ಮುಂದುವರಿದು ವಸಿಷ್ಠರು 'ರಂ' ಎಂದು ಹೇಳಿದರು. 'ರಂ' ಎಂದರೆ ಪ್ರಾಣ. ಏಕೆಂದರೆ ಸಮಸ್ತ ಪ್ರಾಣಿಗಳೂ ಮುಖ್ಯಪ್ರಾಣನ ಅನುಗ್ರಹದಿಂದ ಮಾತ್ರ ಸುಖವಾಗಿರುತ್ತಾರೆ. ಸಮಸ್ತ ಪ್ರಾಣಿಗಳಲ್ಲಿ ಚತುರ್ಮುಖ ಮುಖ್ಯಪ್ರಾಣರೂ ಸೇರಿದ್ದಾರೆ. ಆದ್ದರಿಂದ ಚತುರ್ಮುಖನು ವಾಯುದೇವರಿಗೆ ಆಶ್ರಯ. ವಾಯುದೇವರಿಂದ ಚತುರ್ಮುಖನಿಗೆ ಸುಖ. ಹೀಗೆ ಪರಸ್ಪರ ಪ್ರವೇಶದಿಂದ ಇಬ್ಬರಿಗೂ ಸಮಾನವಾಗಿಯೇ ಪ್ರಯೋಜನ. ಎಂದು ವಸಿಷ್ಠರು ಹೇಳಿದರು. ಚತುರ್ಮುಖಬ್ರಹ್ಮ ಮತ್ತು ಮುಖ್ಯಪ್ರಾಣನ ಬಗ್ಗೆ ಹೀಗೆ ತಿಳಿದ ಜ್ಞಾನಿಯೂ ಕೂಡ ಎಲ್ಲರಿಗೂ ಆಶ್ರಯವನ್ನು ಮತ್ತು ಸುಖವನ್ನು ಕೊಡುವ ಸುಸ್ಥಿತಿಯನ್ನು ಪಡೆಯುತ್ತಾನೆ.

**ಭಾಷ್ಯ—ಅನ್ನಾಭಿಮಾನೀ ಬ್ರಹ್ಮೈವ ಪ್ರಾಣೋ ವಾಯುರುದಾಹೃತಃ ।**
**ಅನ್ಯೋನ್ಯಾನುಪ್ರವಿಷ್ಟೌ ತೌ ಸರ್ವದೈವ ಸುಸಂಸ್ಥಿತೌ ।**
**ವಾಯುಂ ವಿನಾ ಬ್ರಹ್ಮಣೋಽಪಿ ಶರೀರಂ ಪೂತಿಮೇಷ್ಯತಿ ।**
**ವಾಯುಶ್ಚ ಶೋಷಮಾಯಾತಿ ವಿನಾ ಬ್ರಹ್ಮಾಣಮಂಜಸಾ ।**
**ತಯೋರೇವಂ ಪರಿಜ್ಞಾನೀ ವಾಸಿಷ್ಠಃ ಪ್ರಾಣಿನಾಮಕಃ ।**
**ಬ್ರಹ್ಮವಾಯುವಿದೇ ಕಾರ್ಯಂ ಕಿಂ ಮಯಾ ಸಾಧ್ವಸಾಧು ವಾ ।**
**ನಾಸಾಧುನಾ ಬಾಧಯಿತುಂ ಶಕ್ಯೋಽಸೌ ಸಾಧುನಾಽಪಿ ವಾ ।**
**ನಾರ್ಥೋಽಸ್ಯ ಕೃತಕೃತ್ಯತ್ವಾದ್ ಯದಿ ವೇದ ಪರಂ ಹರಿಮ್ ।**
**ಇತಿ ಪ್ರಶಸ್ಯ ತಜ್ಜ್ಞಾನಂ ವಸಿಷ್ಠಂ ಪ್ರಾಬ್ರವೀತ್ ತತಃ ।**
**ಅನ್ಯೋನ್ಯಾನುಪ್ರವೇಶೇನ ಬ್ರಹ್ಮವಾಯ್ವೋರ್ವಿಶೇಷತಃ ।**
**ಪ್ರಯೋಜನಂ ಕಸ್ಯ ಭವೇದಿತಿ ತಂ ಪ್ರಾತೃದೋಽಬ್ರವೀತ್ ।**
**ಬ್ರಹ್ಮಾ ನಿವೇಶನೀಯಃ ಸ್ಯಾದ್ ವಾಯುಶ್ಚಾಸ್ಯ ರತಿಪ್ರದಃ ।**
**ಅತಃ ಪ್ರಯೋಜನಂ ತುಲ್ಯಮನ್ಯೋನ್ಯಾತ್ಮಪ್ರವೇಶನಾತ್ ।**
**ಇತಿ ಸಂಧಾನೇ ।**

**ಅನುವಾದ**—ಅನ್ನ ಎಂದರೆ ಅನ್ನಾಭಿಮಾನಿಯಾದ ಚತುರ್ಮುಖಬ್ರಹ್ಮ. ಪ್ರಾಣ ಎಂದರೆ ವಾಯುದೇವರು. ಅವರಿಬ್ಬರಿಗೂ ಯಾವಾಗಲೂ ಪರಸ್ಪರರ ದೇಹ

ದಲ್ಲಿ ಪ್ರವೇಶಮಾಡಿ ಸುಸ್ಥಿತಿಯಲ್ಲಿರುತ್ತಾರೆ. ವಾಯುದೇವರಿಲ್ಲದ ಬ್ರಹ್ಮದೇವರ ಶರೀರವು ದುರ್ಗಂಧವನ್ನು ಹೊಂದುತ್ತದೆ. ಬ್ರಹ್ಮದೇವರಿಲ್ಲದ ವಾಯುದೇವರ ಶರೀರವು ಒಣಗಿ ಹೋಗುತ್ತದೆ. ಇವರಿಬ್ಬರ ಬಗ್ಗೆ ಹೀಗೆ ತಿಳಿದಿರುವ ಪಾಣಿ ಎಂಬ ವಸಿಷ್ಠಪುತ್ರನು 'ಚತುರ್ಮುಖ ಮುಖ್ಯಪ್ರಾಣರನ್ನು ಹೀಗೆ ತಿಳಿದ ಮತ್ತು ಶ್ರೀಹರಿ ಸರ್ವೋತ್ತಮನೆಂದು ತಿಳಿದ ಜ್ಞಾನಿಗೆ ನಾನು ಉಪಕಾರವನ್ನು ಅಥವಾ ಅಪಕಾರವನ್ನು ಮಾಡಲು ಸಮರ್ಥನೆ? ಅವನಿಗೆ ಅಪಕಾರದಿಂದ ಯಾವ ತೊಂದರೆಯೂ ಆಗುವು ದಿಲ್ಲ. ಅವನು ಕೃತಕೃತ್ಯನಾದುದರಿಂದ ಉಪಕಾರದಿಂದ ಆಗಬೇಕಾದ್ದೇನೂ ಇಲ್ಲ' ಎಂದು ಚತುರ್ಮುಖ ಮುಖ್ಯಪ್ರಾಣರ ಬಗ್ಗೆ ಜ್ಞಾನವನ್ನು ಪ್ರಶಂಸಿಸಿ ವಸಿಷ್ಠರನ್ನು ಕೇಳಿದನು. 'ಬ್ರಹ್ಮ ವಾಯುಗಳು ಒಬ್ಬರಲ್ಲಿ ಇನ್ನೊಬ್ಬರು ಪ್ರವೇಶ ಮಾಡಿರುವುದ ರಿಂದ ಇಬ್ಬರಲ್ಲಿ ಯಾರಿಗೆ ವಿಶೇಷ ಪ್ರಯೋಜನ?' ವಸಿಷ್ಠರು ಅವನಿಗೆ ಹೇಳಿದರು, 'ಬ್ರಹ್ಮನು ವಾಸಸ್ಥಾನ, ಮುಖ್ಯಪ್ರಾಣನು ಸುಖವನ್ನು ಕೊಡುವವನು. ಆದ್ದರಿಂದ ಪರಸ್ಪರ ಪ್ರವೇಶದಿಂದ ಇಬ್ಬರಿಗೂ ಸಮವಾದ ಪ್ರಯೋಜನ' ಎಂದು. ಹೀಗೆ ಸಂಧಾನ ಎಂಬ ಗ್ರಂಥದಲ್ಲಿ ಹೇಳಿದೆ.

ಹದಿನಾಲ್ಕನೇ ಬ್ರಾಹ್ಮಣ ಮುಗಿಯಿತು.

**ಉಕ್ಥನಾಮಕ ಪ್ರಾಣ :**

**ಉಪನಿಷತ್—ಉಕ್ಥಮ್ । ಪ್ರಾಣೋ ವಾ ಉಕ್ಥಮ್ । ಪ್ರಾಣೋ ಹಿ ಇದಂ ಸರ್ವಮುತ್ಥಾಪಯತಿ । ಉದ್ ಹ ಅಸ್ಮಾ ಉಕ್ಥವಿದ್ ವೀರಸ್ತಿಷ್ಠತಿ । ಉಕ್ಥಸ್ಯ ಸಾಯುಜ್ಯಂ ಸಲೋಕತಾಂ ಜಯತಿ ಯ ಏವಂ ವೇದ ।**

**ಇತಿ ಪಂಚದಶಂ ಬ್ರಾಹ್ಮಣಂ ॥**

ಉಕ್ಥವನ್ನು ಉಪಾಸನೆ ಮಾಡಬೇಕು. ಮುಖ್ಯಪ್ರಾಣನೇ ಉಕ್ಥ. ಏಕೆಂದರೆ ಮುಖ್ಯಪ್ರಾಣನು ಈ ವಿಶ್ವವೆಲ್ಲವನ್ನೂ ಸೃಷ್ಟಿಸುತ್ತಾನೆ. ಮತ್ತು ವಿಶ್ವದ ಪ್ರತಿ ಯೊಂದು ವಸ್ತುವನ್ನೂ ಅದರ ಕ್ರಿಯೆಯಲ್ಲಿ ತೊಡಗಿಸುತ್ತಾನೆ. ಹೀಗೆ ಉಪಾಸನೆ ಮಾಡುವವನಿಗೆ ಉಕ್ಥಜ್ಞಾನಿಯಾದ ಪುತ್ರನು ಜನಿಸುತ್ತಾನೆ. ಮತ್ತು ಆ ಉಪಾಸಕನು ಉಕ್ಥನಾಮಕ ಪ್ರಾಣನ ಸಾಯುಜ್ಯವನ್ನೂ ಸಾಲೋಕ್ಯವನ್ನೂ ಯೋಗ್ಯತೆಗನುಗುಣ ವಾಗಿ ಹೊಂದುತ್ತಾನೆ.

ಹದಿನೈದನೇ ಬ್ರಾಹ್ಮಣ ಮುಗಿಯಿತು.

**ಯಜುರ್ನಾಮಕ ಪ್ರಾಣ :**

**ಉಪನಿಷತ್—ಯಜುಃ । ಪ್ರಾಣೋ ವೈ ಯಜುಃ । ಪ್ರಾಣೇ ಹೀಮಾನಿ ಸರ್ವಾಣಿ ಭೂತಾನಿ ಯುಜ್ಯಂತೇ । ಯುಜ್ಯಂತೇ ಹಾಸ್ಮೈ ಸರ್ವಾಣಿ**

**ಭೂತಾನಿ ಶ್ರೈಷ್ಠ್ಯಾಯ। ಯಜುಷಃ ಸಾಯುಜ್ಯಂ ಸಲೋಕತಾಂ ಜಯತಿ ಯ ಏವಂ ವೇದ। ಇತಿ ಷೋಡಶಂ ಬ್ರಾಹ್ಮಣಂ ||**

ಯಜುಸ್ಸನ್ನು ಉಪಾಸನೆ ಮಾಡಬೇಕು. ಮುಖ್ಯಪ್ರಾಣನೇ ಯಜುಸ್. ಏಕೆಂದರೆ ಮುಕ್ತಿಯಲ್ಲಿ ಎಲ್ಲ ಚೇತನಗಳೂ ಮುಖ್ಯಪ್ರಾಣನನ್ನು ಸೇರುತ್ತವೆ. ಹೀಗೆ ಉಪಾಸನೆ ಮಾಡುವವನ ಶ್ರೇಷ್ಠತೆಯನ್ನು ಬೇರೆಯವರೆಲ್ಲರೂ ಸ್ವಾಗತಿಸುತ್ತಾರೆ. ಮತ್ತು ಆ ಉಪಾಸಕನು ಯಜುರ್ನಾಮಕ ಪ್ರಾಣನ ಸಾಯುಜ್ಯವನ್ನೂ ಸಾಲೋಕ್ಯ ವನ್ನೂ ಯೋಗ್ಯತಾನುಗುಣವಾಗಿ ಹೊಂದುತ್ತಾನೆ.

ಹದಿನಾರನೇ ಬ್ರಾಹ್ಮಣ ಮುಗಿಯಿತು.

**ಸಾಮನಾಮಕ ಪ್ರಾಣ :**

**ಉಪನಿಷತ್—ಸಾಮ। ಪ್ರಾಣೋ ವೈ ಸಾಮ। ಪ್ರಾಣೇ ಹೀಮಾನಿ ಸರ್ವಾಣಿ ಭೂತಾನಿ ಸಮ್ಯಂಚಿ। ಸಮ್ಯಂಚಿ ಹ ಅಸ್ಮೈ ಸರ್ವಾಣಿ ಭೂತಾನಿ ಶ್ರೈಷ್ಠ್ಯಾಯ ಕಲ್ಪಂತೇ।ಸಾಮ್ನಃ ಸಾಯುಜ್ಯಂ ಸಲೋಕತಾಂ ಜಯತಿ ಯ ಏವಂ ವೇದ। ಇತಿ ಸಪ್ತದಶಂ ಬ್ರಾಹ್ಮಣಂ ||**

ಸಾಮವನ್ನು ಉಪಾಸನೆ ಮಾಡಬೇಕು. ಮುಖ್ಯಪ್ರಾಣನೇ ಸಾಮ. ಏಕೆಂದರೆ ಮುಖ್ಯಪ್ರಾಣನಿಂದಲೇ ಎಲ್ಲ ಚೇತನಗಳೂ ಪರಸ್ಪರ ಸೌಹಾರ್ದದಿಂದಿರುತ್ತವೆ. ಹೀಗೆ ಉಪಾಸನೆ ಮಾಡುವವನನ್ನು ಎಲ್ಲರೂ ಸೌಹಾರ್ದದಿಂದ ಕಾಣುತ್ತಾರೆ, ಯಾರೂ ವಿರೋಧಿಸುವುದಿಲ್ಲ. ಅವನ ಶ್ರೇಷ್ಠತೆಯನ್ನು ಎಲ್ಲರೂ ವಿರೋಧವಿಲ್ಲದೆ ಒಪ್ಪಿ ಕೊಳ್ಳುತ್ತಾರೆ. ಮತ್ತು ಅವನು ಸಾಮನಾಮಕ ಪ್ರಾಣನ ಸಾಯುಜ್ಯವನ್ನೂ ಸಾಲೋಕ್ಯವನ್ನೂ ಯೋಗ್ಯತಾನುಸಾರ ಹೊಂದುತ್ತಾನೆ.

ಹದಿನೇಳನೆ ಬ್ರಾಹ್ಮಣ ಮುಗಿಯಿತು.

**ಕ್ಷತ್ರನಾಮಕ ಪ್ರಾಣ :**

**ಉಪನಿಷತ್—ಕ್ಷತ್ರಮ್। ಪ್ರಾಣೋ ವೈ ಕ್ಷತ್ರಮ್। ಪ್ರಾಣೋ ಹಿ ವೈ ಕ್ಷತ್ರಮ್। ತ್ರಾಯತೇ ಹ ಏನಂ ಪ್ರಾಣಃ ಕ್ಷಣಿತೋಃ। ಪ್ರಕ್ಷತ್ರಮ-ಕ್ಷತ್ರಮಾಪ್ನೋತಿ। ಕ್ಷತ್ರಸ್ಯ ಸಾಯುಜ್ಯಂ ಸಲೋಕತಾಂ ಜಯತಿ ಯ ಏವಂ ವೇದ। ಇತಿ ಅಷ್ಟಾದಶಂ ಬ್ರಾಹ್ಮಣಂ ||**

ಕ್ಷತ್ರವನ್ನು ಉಪಾಸನೆ ಮಾಡಬೇಕು. ಮುಖ್ಯಪ್ರಾಣನೇ ಕ್ಷತ್ರ. ಮುಖ್ಯ ಪ್ರಾಣನೇ ಕ್ಷತ್ರ ಎನ್ನುವುದು ಪ್ರಸಿದ್ಧವೇ. ಏಕೆಂದರೆ ಪ್ರಾಣನು ಜೀವನನ್ನು

ಅಪಾಯದಿಂದ ರಕ್ಷಿಸುತ್ತಾನೆ. ಹೀಗೆ ಉಪಾಸನೆ ಮಾಡುವವನು ಮುಖ್ಯಪ್ರಾಣನಿಂದಲೇ ಒಳ್ಳೆಯ ರಕ್ಷಣೆಯನ್ನು ಪಡೆಯುತ್ತಾನೆ. ಬೇರೆಯವರಿಂದ ರಕ್ಷಣೆಯನ್ನು ಪಡೆಯಬೇಕಾಗಿಲ್ಲ. ಮತ್ತು ಅವನು ಕ್ಷತ್ರನಾಮಕ ಪ್ರಾಣನ ಸಾಯುಜ್ಯವನ್ನೂ ಸಾಲೋಕ್ಯವನ್ನೂ ಯೋಗ್ಯತಾನುಗುಣವಾಗಿ ಹೊಂದುತ್ತಾನೆ.

**ಭಾಷ್ಯ—ಉತ್ಥಾಪನಾದುಕ್ಥನಾಮಾ ಮೋಕ್ಷೇ ಪ್ರಾಪ್ಯೋ ಯತೋಽಖಿಲೈಃ ।**
**ಯಜುಶ್ಚಾಥ ಕ್ಷತಾತ್ ತ್ರಾಣಾತ್ ಕ್ಷತ್ರಂ ಸಮ್ಯಕ್ತ್ವಕಾರಣಾತ್ ।**
**ಸರ್ವೇಷಾಂ ಸಾಮ ಚ ಪ್ರೋಕ್ತೋ ವಾಯುರೇವ ಜಗತ್ಪತಿಃ ।**
**ಇತಿ ಚ ।**

**ಅನುವಾದ**—ಜಗತ್ಪತಿಯಾದ ವಾಯುದೇವರು ಜಗತ್ತನ್ನು ಸೃಷ್ಟಿಸಿ ಅದಕ್ಕೆ ಪ್ರವೃತ್ತಿಯನ್ನು ಕೊಡುವವರಾದ್ದರಿಂದ ಉಕ್ಥ ಎಂದೂ, ಮುಕ್ತರೆಲ್ಲರೂ ಮೋಕ್ಷದಲ್ಲಿ ಅವರನ್ನೇ ಸೇರುವುದರಿಂದ ಯಜುಸ್ ಎಂದೂ, ಅಪಾಯಗಳಿಂದ ರಕ್ಷಿಸುವುದರಿಂದ ಕ್ಷತ್ರ ಎಂದೂ, ಎಲ್ಲರ ಪರಸ್ಪರ ಸೌಹಾರ್ದಸ್ಥಿತಿಗೆ ಕಾರಣರಾದುದರಿಂದ ಸಾಮ ಎಂದೂ ಪ್ರಸಿದ್ಧರಾಗಿದ್ದಾರೆ.

ಹದಿನೆಂಟನೇ ಬ್ರಾಹ್ಮಣ ಮುಗಿಯಿತು.

**ಗಾಯತ್ರ್ಯುಪಾಸನೆ :**

**ಉಪನಿಷತ್—ಭೂಮಿರಂತರಿಕ್ಷಂ ದ್ಯೌರಿತ್ಯಷ್ಟಾವಕ್ಷರಾಣಿ। ಅಷ್ಟಾಕ್ಷರಂ ಹ ವಾ ಏಕಂ ಗಾಯತ್ರ್ಯೈ ಪದಮ್। ಏತದು ಹೈವಾಸ್ಯಾ ಏತತ್ । ಸ ಯಾವದೇಷು ತ್ರಿಷು ಲೋಕೇಷು ತಾವದ್ಧ ಜಯತಿ ಯೋಽಸ್ಯಾ ಏತದೇವ ಪದಂ ವೇದ ।**

ಭೂಮಿ ಅಂತರಿಕ್ಷ ದ್ಯೌ ಎಂಬ ಮೂರು ಪದಗಳಲ್ಲಿ,ದ್ಯೌ ಎಂಬುದನ್ನು ದಿ ಔ ಎಂದು ವಿಭಜಿಸಿದರೆ ಒಟ್ಟು ಎಂಟು ಅಕ್ಷರಗಳಿವೆ.ಗಾಯತ್ರೀ ಮಂತ್ರದ'ತತ್ಸವಿತುರ್ವರೇಣ್ಯಂ' ಎಂಬ ಪ್ರಥಮ ಪಾದದಲ್ಲೂ ಣ್ಯಂ ಎಂಬುದನ್ನು ಣಿ ಯಂ ಎಂದು ವಿಭಜಿಸಿದರೆ ಒಟ್ಟು ಎಂಟು ಅಕ್ಷರಗಳಿವೆ. ಆದ್ದರಿಂದ ಭೂಮಿ, ಅಂತರಿಕ್ಷ ಮತ್ತು ಸ್ವರ್ಗಗಳಲ್ಲಿ ಭೂಮಿ ಅಂತರಿಕ್ಷ ದ್ಯು ನಾಮಕವಾಗಿರುವ ಅನಿರುದ್ಧನಾಮಕ ಭಗವದ್ರೂಪವೇ ಗಾಯತ್ರಿಯಲ್ಲಿ ಪ್ರಥಮಪಾದ ಪ್ರತಿಪಾದ್ಯ. ಹೀಗೆ ಗಾಯತ್ರಿಯ ಪ್ರಥಮಪಾದಪ್ರತಿಪಾದ್ಯವನ್ನು ಗಾಯತ್ರ್ಯುಪಾಸನೆಗೆ ಮುಖ್ಯಾಧಿಕಾರಿಯಾದ ಬ್ರಹ್ಮಪದವಿಯೋಗ್ಯನಾದ ಯಾರು ತಿಳಿಯುತ್ತಾನೋ ಅವನು ಮೂರು ಲೋಕಗಳಿಗೆ ಅಧಿಪತಿಯಾಗುತ್ತಾನೆ.

**ಉಪನಿಷತ್—ಋಚೋ ಯಜೂಂಷಿ ಸಾಮಾನೀತಿ ಅಷ್ಟಾವಕ್ಷರಾಣಿ । ಅಷ್ಟಾಕ್ಷರಂ ಹ ವಾ ಏಕಂ ಗಾಯತ್ರ್ಯೈ ಪದಮ್। ಏತದು ಹೈವಾಸ್ಯಾ ಏತತ್। ಸ ಯಾವತೀಯಂ ತ್ರಯೀ ವಿದ್ಯಾ ತಾವದ್ಧ ಜಯತಿ ಯೋಽಸ್ಯಾ ಏತದೇವಂ ಪದಂ ವೇದ ।**

'ಋಚಃ, ಯಜೂಂಷಿ, ಸಾಮಾನಿ' ಎಂಬ ಮೂರು ಪದಗಳಲ್ಲಿ ಎಂಟು ಅಕ್ಷರಗಳಿವೆ. ಗಾಯತ್ರೀಮಂತ್ರದ ಭರ್ಗೋ ದೇವಸ್ಯ ಧೀಮಹಿ ಎಂಬ ಎರಡನೆಯ ಪಾದದಲ್ಲಿಯೂ ಎಂಟು ಅಕ್ಷರಗಳಿವೆ. ಋಕ್, ಯಜುಸ್, ಸಾಮಗಳಲ್ಲಿ ''ಋಚಃ, ಯಜೂಂಷಿ, ಸಾಮಾನಿ' ಎಂಬ ಮೂರು ಪದಗಳಿಂದ ಪ್ರತಿಪಾದ್ಯವಾಗಿರುವ ಪ್ರದ್ಯುಮ್ನನಾಮಕ ಭಗವದ್ರೂಪವೇ ಗಾಯತ್ರಿಯ ದ್ವಿತೀಯಪಾದಪ್ರತಿಪಾದ್ಯ. ಹೀಗೆ ಗಾಯತ್ರಿಯ ದ್ವಿತೀಯಪಾದಪ್ರತಿಪಾದ್ಯವನ್ನು ಗಾಯತ್ರ್ಯುಪಾಸನೆಗೆ ಮುಖ್ಯಾಧಿಕಾರಿಯಾದ ಬ್ರಹ್ಮಪದವಿಗೆ ಯೋಗ್ಯನಾದ ಯಾರು ತಿಳಿಯುತ್ತಾನೋ ಅವನು ಮೂರು ವೇದಗಳಿಗೆ ಅಧಿಪತಿಯಾಗುತ್ತಾನೆ,

**ಉಪನಿಷತ್—ಪ್ರಾಣೋಽಪಾನೋ ವ್ಯಾನ ಇತ್ಯಷ್ಟಾವಕ್ಷರಾಣಿ । ಅಷ್ಟಾಕ್ಷರಂ ಹ ವಾ ಏಕಂ ಗಾಯತ್ರ್ಯೈ ಪದಮ್। ಏತದು ಹೈವಾಸ್ಯಾ ಏತತ್ । ಸ ಯಾವದಿದಂ ಪ್ರಾಣಿ ತಾವದ್ಧ ಜಯತಿ ಯೋಽಸ್ಯಾ ಏತದೇವಂ ಪದಂ ವೇದ ।**

ಪ್ರಾಣ, ಅಪಾನ, ವ್ಯಾನ ಎಂಬ ಮೂರು ಪದಗಳಲ್ಲಿ, ವ್ಯಾನ ಎಂಬುದನ್ನು ವಿಆನ ಎಂದು ವಿಭಜಿಸಿದರೆ ಒಟ್ಟು ಎಂಟು ಅಕ್ಷರಗಳಿವೆ. ಗಾಯತ್ರೀಮಂತ್ರದ ಧಿಯೋ ಯೋ ನಃ ಪ್ರಚೋದಯಾತ್ ಎಂಬ ಮೂರನೆಯಪಾದದಲ್ಲೂ ಎಂಟು ಅಕ್ಷರಗಳಿವೆ. ಪ್ರಾಣ, ಅಪಾನ, ವ್ಯಾನ ಎಂಬ ವಾಯುಗಳಲ್ಲಿರುವ, ಈ ಮೂರು ಪದಗಳಿಂದ ಪ್ರತಿಪಾದ್ಯವಾದ ಸಂಕರ್ಷಣನಾಮಕ ಭಗವದ್ರೂಪವೇ ಗಾಯತ್ರಿಯ ಮೂರನೆಯಪಾದ ಪ್ರತಿಪಾದ್ಯ. ಹೀಗೆ ಗಾಯತ್ರಿಯ ತೃತೀಯಪಾದಪ್ರತಿಪಾದ್ಯವನ್ನು ಗಾಯತ್ರ್ಯುಪಾಸನೆಗೆ ಮುಖ್ಯಾಧಿಕಾರಿಯಾದ ಬ್ರಹ್ಮಪದವಿಗೆ ಯೋಗ್ಯನಾದ ಯಾರು ತಿಳಿಯುತ್ತಾನೋ ಅವನು ಎಲ್ಲ ಜೀವರಿಗೂ ಅಧಿಪತಿಯಾಗುತ್ತಾನೆ. ಪ್ರಾಣಿಗಳನ್ನು ಜಯಿಸುತ್ತಾನೆ.

**ಭಾಷ್ಯ—ಋಗ್ಯಜುಃಸಾಮಸಂಸ್ಥೋ ಯೋ ಭಗವಾನ್ ಪುರುಷೋತ್ತಮಃ ।**
**ಸ ದ್ವಿತೀಯಪದೇನೋಕ್ತೋ ಗಾಯತ್ರ್ಯಾಃ ಪ್ರಥಮೇನ ತು ।**
**ಭೂಮ್ಯಂತರಿಕ್ಷ ಸ್ವರ್ಗಸ್ಥಸ್ತೃತೀಯೇನ ಸಮೀರಗಃ ।**

**ಅನುವಾದ**—ಋಗ್ವೇದ ಯಜುರ್ವೇದ ಸಾಮವೇದಗಳಲ್ಲಿ ಇರುವ ಭಗವಾನ್ ಪುರುಷೋತ್ತಮನು ಗಾಯತ್ರಿಯ ಎರಡನೆಯ ಪಾದದಿಂದ ಪ್ರತಿಪಾದ್ಯ. ಭೂಮಿ ಅಂತರಿಕ್ಷ ಮತ್ತು ಸ್ವರ್ಗಗಳಲ್ಲಿರುವ ಭಗವಾನ್ ಪುರುಷೋತ್ತಮನು ಪ್ರಥಮಪಾದ ಪ್ರತಿಪಾದ್ಯ. ವಾಯುದೇವರಲ್ಲಿರುವ ಭಗವಾನ್ ಪುರುಷೋತ್ತಮನು ತೃತೀಯ ಪಾದಪ್ರತಿಪಾದ್ಯ.

**ಉಪನಿಷತ್—ಅಥ ಅಸ್ಯಾ ಏತದೇವ ತುರೀಯಂ ದರ್ಶತಂ ಪದಂ ಪರೋರಜಾ ಯ ಏಷ ತಪತಿ । ಯದ್ ವೈ ಚತುರ್ಥಂ ತತ್ ತುರೀಯಮ್।ದರ್ಶತಂ ಪದಮಿತಿ ದದೃಶೇ ಇವ ಹ್ಯೇಷಃ । ಪರೋರಜಾ ಇತಿ ಸರ್ವಮು ಹ್ಯೇವೈಷ ರಜ ಉಪರ್ಯುಪರಿ ತಪತಿ । ಏವಂ ಹೈವ ಶ್ರಿಯಾ ಯಶಸಾ ತಪತಿ ಯೋಽಸ್ಯಾ ಏತದೇವಂ ಪದಂ ವೇದ ।**

ಇನ್ನು ಚತುರ್ಥಪಾದಪ್ರತಿಪಾದ್ಯದ ನಿರೂಪಣೆ– ದರ್ಶತವೂ ಪರೋರಜವೂ ಆಗಿ ಬೆಳಗುವ ಭಗವದ್ರೂಪವೇ ಗಾಯತ್ರಿಯ ತುರೀಯಪಾದವೆನಿಸಿದ ಓಂಕಾರದ ಪ್ರತಿಪಾದ್ಯ. ತುರೀಯ ಎಂದರೆ ಚತುರ್ಥ. ದರ್ಶತಂ ಪದಂ ಎಂದರೆ ಗಾಯತ್ರಿಯ ಚತುರ್ಥಪಾದಪ್ರತಿಪಾದ್ಯನಾದ ವಾಸುದೇವ. ಏಕೆಂದರೆ ಇವನು ಸೂರ್ಯಮಂಡಲಾಂತ ರ್ಗತನಾಗಿ ಜನರ ಕಣ್ಣಿಗೆ ಕಾಣಿಸುವವನಂತೆ ಇದ್ದಾನೆ. ಅವನ ಅಧೀನವಾದ ತೇಜಸ್ಸು ಸೂರ್ಯಮಂಡಲದಲ್ಲಿ ಕಾಣುವುದರಿಂದ ಅವನೇ ಕಾಣಿಸಿಕೊಂಡಂತೆ. ವಾಸುದೇವನು ಎಲ್ಲ ಪ್ರಕೃತಿಯನ್ನೂ ಪೂರ್ಣವಾಗಿ ಮೀರಿ ಸರ್ವೋತ್ತಮನಾಗಿ ಪ್ರಕಾಶಿಸುತ್ತಾನೆ. ಆದ್ದರಿಂದ ಇವನಿಗೆ ಪರೋರಜ ಎಂದು ಹೆಸರು. ಹೀಗೆ ಗಾಯತ್ರಿಯ ಚತುರ್ಥ ಪಾದರೂಪ ಪ್ರಣವ ಪ್ರತಿಪಾದ್ಯನಾದ ವಾಸುದೇವನನ್ನು ಗಾಯತ್ರ್ಯುಪಾಸನೆಗೆ ಮುಖ್ಯಾಧಿಕಾರಿಯೂ, ಬ್ರಹ್ಮಪದವಿಗೆ ಯೋಗ್ಯನೂ ಆದ ಯಾರು ತಿಳಿಯುತ್ತಾನೋ ಅವನು ಉಪಾಸ್ಯನಾದ ವಾಸುದೇವನಂತೆಯೇ ಸರ್ವ ಲೋಕ ವೇದ ಜೀವರಿಗೆ ಅಧಿ ಪತಿಯಾಗಿ ಸಂಪತ್ತು ಕೀರ್ತಿಗಳಿಂದ ಶೋಭಿಸುತ್ತಾನೆ.

**ಭಾಷ್ಯ—ಚತುರ್ಥಪಾದೋ ಗಾಯತ್ರ್ಯಾಃ ಪ್ರಣವಃ ಸಮುದೀರಿತಃ ।**
**ತದ್ವಾಚ್ಯೋ ಭಗವಾನ್ ಸೂರ್ಯಮಂಡಲಸ್ಥಾ ತು ಯಾ ರಮಾ ।**
**ಸತ್ತಾವ್ಯಕ್ತ್ಯೈಕ್ಯೈವ ತತ್ಸಂಸ್ಥೋ ರಜಆಖ್ಯಪ್ರಧಾನತಃ ।**
**ಪರಃ ಪರೋರಜಾಸ್ತಸ್ಮಾದ್ ಯ ಏವಂ ವೇದ ತಂ ಪ್ರಭುಮ್ ।**
**ಲೋಕಾನಾಂ ಚೈವ ವೇದಾನಾಂ ಸರ್ವೇಷಾಂ ಪ್ರಾಣಿನಾಮಪಿ ।**
**ಸದೈವಾಧಿಪತಿರ್ಭೂತ್ವಾ ಯಶಃಶ್ರೀಮಾಂಶ್ಚ ಜಾಯತೇ ।**

**ಅನುವಾದ**—ಓಂಕಾರವು ಗಾಯತ್ರಿಯ ನಾಲ್ಕನೆಯ ಪಾದವೆನಿಸಿದೆ. ಸೂರ್ಯ

ಮಂಡಲದಲ್ಲಿ ಜ್ಞಾನಾನಂದ ಸ್ವರೂಪಳಾದ ಲಕ್ಷ್ಮೀದೇವಿ ಇದ್ದಾಳೆ. ಅವಳಲ್ಲಿ ಇರುವ ಹರಿಯು ಓಂಕಾರವಾಚ್ಯನಾಗಿದ್ದಾನೆ. ಶೋಭಿಸುವುದರಿಂದ ರಜಸ್ ಎನಿಸಿದ ಲಕ್ಷ್ಮೀದೇವಿಗಿಂತಲೂ ಹರಿ ಉತ್ತಮನಾದುದರಿಂದ ಅವನಿಗೆ ಪರೋರಜಸ್ ಎಂದು ಹೆಸರು. ಸರ್ವಶಕ್ತನಾದ ಶ್ರೀಹರಿಯನ್ನು ಹೀಗೆ ತಿಳಿದವನು ಸಕಲ ಲೋಕ ವೇದ ಮತ್ತು ಪ್ರಾಣಿಗಳಿಗೆ ಅಧಿಪತಿಯಾಗಿ ಯಶಸ್ಸನ್ನೂ ಸಂಪತ್ತನ್ನೂ ಹೊಂದುತ್ತಾನೆ.

**ಭಾಷ್ಯ**—**ಗಾಯತ್ರ್ಯುಪಾಸನೇ ಯೋಗ್ಯೋ ಬ್ರಹ್ಮೈವ ಹಿ ಚತುರ್ಮುಖಃ ।**
**ತಸ್ಮಾದುಕ್ತಫಲಂ ಸರ್ವಂ ಸರ್ವೋಪಾಸಾ ಚ ತಸ್ಯ ಹಿ ।**
**ಅಂಶೇನೋಪಾಸನಾಽನ್ಯೇಷಾಂ ಫಲಮಲ್ಪಂ ಚ ಯೋಗ್ಯತಃ ।**
**ಗಾಯತ್ರ್ಯಾ ನ ಹ್ಯಯೋಗ್ಯೋಽಪಿ ದ್ವಿಜೋ ಯೋಗ್ಯೋಽಪಿ ನ ಕ್ವಚಿತ್ ।**
**ಋತೇ ವಿರಿಂಚಂ ತಸ್ಮಾತ್ತು ತಸ್ಯೈವ ಹ್ಯಖಿಲಂ ಫಲಮ್ ।**

**ಅನುವಾದ**—ಚತುರ್ಮುಖ ಬ್ರಹ್ಮದೇವರೊಬ್ಬರೇ ಗಾಯತ್ರೀಪ್ರತಿಪಾದ್ಯ ಭಗವಂತನ ಉಪಾಸನೆಗೆ ಮುಖ್ಯ ಯೋಗ್ಯರು. ಆದ್ದರಿಂದ ಅವರೊಬ್ಬರಿಗೆ ಮಾತ್ರ ಗಾಯತ್ರಿಯ ಪಾದಚತುಷ್ಟಯ ಪ್ರತಿಪಾದ್ಯ ಭಗವದ್ರೂಪಗಳ ಪೂರ್ಣ ಉಪಾಸನೆ ಸಾಧ್ಯ. ಅದಕ್ಕೆ ಹೇಳಿದ ಫಲವೂ ಅವರೊಬ್ಬರಿಗೆ ಮಾತ್ರ ಪೂರ್ಣವಾಗಿ ಲಭಿಸುತ್ತದೆ. ಬೇರೆ ಎಲ್ಲರೂ ಕೇವಲ ಅಂಶತಃ ಉಪಾಸನೆ ಮಾಡಲು ಅರ್ಹರು. ಅದಕ್ಕೆ ಫಲವೂ ಅಲ್ಪವೇ, ಯೋಗ್ಯತಾನುಸಾರ ಲಭಿಸುತ್ತದೆ. ಆದರೆ ಯಾವ ದ್ವಿಜನೂ ಗಾಯತ್ರಿಯ ಉಪಾಸನೆಗೆ ಸರ್ವಥಾ ಅಯೋಗ್ಯನಲ್ಲ. ಚತುರ್ಮುಖನನ್ನು ಬಿಟ್ಟು ಬೇರೆ ಯಾರೂ ಪೂರ್ಣ ಅರ್ಹರೂ ಅಲ್ಲ. ಆದ್ದರಿಂದ ಚತುರ್ಮುಖಬ್ರಹ್ಮದೇವರಿಗೆ ಮಾತ್ರ ಗಾಯತ್ರ್ಯುಪಾಸನೆಯ ಪೂರ್ಣಫಲ ಲಭಿಸುತ್ತದೆ.

**ಭಾಷ್ಯ**—**ಯಃ ಪರೋರಜಾಸ್ತಪತಿ ಸ ತುರೀಯಪದೇನ ಪ್ರಣವೇನ ಪದ್ಯತೇ ತುರೀಯಂ ಪದಮ್ । ದದೃಶ ಇವ ದೃಷ್ಟ ಇವ । ತದಧೀನ ತೇಜಃ-ಪುಂಜಸ್ಯ ಸೂರ್ಯಮಂಡಲಸ್ಯ ದೃಷ್ಟತ್ವಾತ್ ।**

**ಅನುವಾದ**—'ತುರೀಯಂ ದರ್ಶತಂ ಪದಂ ಪರೋರಜಾ ಯ ಏಷ ತಪತಿ' ಎಂಬ ವಾಕ್ಯದಲ್ಲಿ 'ಯಃ ಪರೋರಜಾಸ್ತಪತಿ ಸ ತುರೀಯಂ ಪದಂ' ಎಂದು ಅನ್ವಯ. ತುರೀಯಂ ಎಂದರೆ ಗಾಯತ್ರಿಯ ಚತುರ್ಥಪಾದವಾದ ಓಂಕಾರದಿಂದ, ಪದಂ ಎಂದರೆ ಪ್ರತಿಪಾದ್ಯನಾಗಿದ್ದಾನೆ ಎಂದರ್ಥ. ದದೃಶ ಇವ ಎಂದರೆ ಕಾಣಿಸಿಕೊಂಡಂತೆ ಎಂದರ್ಥ. 'ಕಾಣಿಸಿಕೊಳ್ಳದಿದ್ದರೂ ಅವನ ಅಧೀನವಾದ ತೇಜಃ ಪುಂಜವಾದ ಸೂರ್ಯಮಂಡಲ ಕಾಣಿಸಿಕೊಳ್ಳುವುದರಿಂದ' ಎಂದು ಅಭಿಪ್ರಾಯ.

**ವಿವರಣೆ**—ಗಾಯತ್ರಿಯ ಪಾದಗಳು ಎಂಟು ಅಕ್ಷರಗಳುಳ್ಳವುಗಳು. ಪ್ರಣವ ದಲ್ಲಿಯೂ ಅ ಉ ಮ ನಾದ ಬಿಂದು ಘೋಷ ಶಾಂತ ಅತಿಶಾಂತಗಳೆಂದು ಎಂಟು ಅಕ್ಷರಗಳಿರುವುದರಿಂದ ಪ್ರಣವಯುಕ್ತ ಗಾಯತ್ರಿ ಮಂತ್ರಕ್ಕೆ ಪ್ರಣವವು ನಾಲ್ಕನೆಯ ಪಾದವೆನಿಸಿದೆ.

**ಭಾಷ್ಯ—ಸೂರ್ಯಮಂಡಲಗೋ ವಿಷ್ಣುಃ ಸರ್ವೇಷಾಂ ದೃಷ್ಟವತ್ ಸ್ಥಿತಃ ।**
**ಯಸ್ಮಾತ್ ತದುತ್ಥಿತಂ ತೇಜೋಮಂಡಲಂ ದೃಶ್ಯತೇಽಖಿಲೈಃ ।**
**ಇತಿ ತ್ರೈವಿದ್ಯೇ ।**

**ಅನುವಾದ**–ಸೂರ್ಯಮಂಡಲದಲ್ಲಿ ರಮಾದೇವಿಯಲ್ಲಿರುವ ವಿಷ್ಣುವು ಎಲ್ಲರಿಗೂ ಕಾಣಿಸುವವನಂತೆ ಇದ್ದಾನೆ. ಏಕೆಂದರೆ ಅವನು ಕಾಣಿಸದಿದ್ದರೂ ಅವನಿಂದ ಉದ್ಭವ ವಾಗುವ ತೇಜೋಮಂಡಲವು ಎಲ್ಲರಿಗೂ ಕಾಣುತ್ತದೆ ಎಂದು ತ್ರೈವಿದ್ಯದಲ್ಲಿ ಹೇಳಿದೆ.

**ಭಾಷ್ಯ—ಸರ್ವಂ ರಜಃ ಸರ್ವಾಂ ಪ್ರಕೃತಿಮ್ ।**
**ರಂಜನಾತ್ ಪ್ರಕೃತಿಃ ಪ್ರೋಕ್ತಾ ರಜ ಇತ್ಯೇವ ವೈದಿಕೈಃ ।**
**ತಸ್ಯಾ ಅಪ್ಯುತ್ತಮೋ ವಿಷ್ಣುರ್ಯತೋಽತಃ ಸ ಪರೋರಜಾಃ ।**

**ಅನುವಾದ**—ಸರ್ವಂ ರಜಃ ಉಪರ್ಯುಪರಿ ಎಂದರೆ ಪ್ರಕೃತಿಯೆ ಶ್ರೇಷ್ಠ ಎಂದರ್ಥವಲ್ಲ. ಎಲ್ಲ ಪ್ರಕೃತಿಯನ್ನೂ ಮೀರಿ ಹರಿಯು ಶ್ರೇಷ್ಠನಾಗಿದ್ದಾನೆ ಎಂದರ್ಥ. ಚಿತ್ ಪ್ರಕೃತಿಯು ಶೋಭಿಸುವುದರಿಂದ ರಜಸ್ ಎನಿಸಿದ್ದಾಳೆ. ಅವಳಿ ಗಿಂತಲೂ ಉತ್ತಮನಾದ್ದರಿಂದ ವಿಷ್ಣು ಪರೋರಜನೆನಿಸಿದ್ದಾನೆ.

**ಗಾಯತ್ರಿಯೆ ಸಾವಿತ್ರಿ :**

**ಉಪನಿಷತ್—ಸೈಷಾ ಗಾಯತ್ರೀ ಏತಸ್ಮಿನ್ ತುರೀಯೇ ದರ್ಶತೇ ಪದೇ ಪರೋರಜಸಿ ಪ್ರತಿಷ್ಠಿತಾ । ತದ್ ವಾ ಏತತ್ ಸತ್ಯೇ ಪ್ರತಿಷ್ಠಿತಮ್ । ಚಕ್ಷುರ್ವೈ ಸತ್ಯಮ್। ಚಕ್ಷುರ್ಹಿ ವೈ ಸತ್ಯಮ್। ತಸ್ಮಾದ್ ಯದಿದಾನೀಂ ದ್ವೌ ವಿವದಮಾನೌ ಏಯಾತಾಂ'ಅಹಮದರ್ಶಮಹಮಶ್ರೌಷಮ್' ಇತಿ ಯ ಏವ ಬ್ರೂಯಾತ್ 'ಅಹಂ ಅದರ್ಶಮ್' ಇತಿ ತಸ್ಮಾ ಏವ ಶ್ರದ್ದ-ಧ್ಯಾಮ । ತದ್ವಾ ಏತತ್ ಸತ್ಯಂ ಬಲೇ ಪ್ರತಿಷ್ಠಿತಮ್ । ಪ್ರಾಣೋ ವೈ ಬಲಮ್ । ತತ್ ಪ್ರಾಣೇ ಪ್ರತಿಷ್ಠಿತಮ್ । ತಸ್ಮಾದಾಹುರ್ಬಲಂ ಸತ್ಯಾ-ದೋಜೀಯ ಇತಿ । ಏವಮು ಏಷಾ ಗಾಯತ್ರೀ ಅಧ್ಯಾತ್ಮಂ ಪ್ರತಿ-ಷ್ಠಿತಾ । ಸಾ ಹೈಷಾ ಗಯಾನ್ ತತ್ರೇ । ಪ್ರಾಣಾ ವೈ ಗಯಾಃ । ತತ್ ಪ್ರಾಣಾನ್ ತತ್ರೇ। ತದ್ ಯದ್ ಗಯಾಂಸ್ತತ್ರೇ ತಸ್ಮಾದ್ ಗಾಯತ್ರೀ**

**ನಾಮ । ಸ ಯಾಮೇವಾಮೂಂ ಸಾವಿತ್ರೀಮನ್ವಾಹ ಏಷೈವ ಸಾ । ಸ ಯಸ್ಮಾ ಅನ್ವಾಹ ತಸ್ಯ ಪ್ರಾಣಾನ್ ತ್ರಾಯತೇ ।**

ಗಾಯತ್ರಿಯ ಅಭಿಮಾನಿನಿಯರಾದ ಲಕ್ಷ್ಮಿ ಸರಸ್ವತಿಯರು ಹಿಂದೆ ಹೇಳಿದಂತೆಯೇ 'ತುರೀಯಪದ ದರ್ಶತ ಪರೋರಜ'ನೆನಿಸಿದ ವಾಸುದೇವನನ್ನು ಆಶ್ರಯಿಸಿರುವರು. ಇದು ಹೇಗೆಂದರೆ ಭೂಮಿ ಅಂತರಿಕ್ಷ ದ್ಯುಲೋಕ ರೂಪವಾದ ಎಲ್ಲ ಜಗತ್ತು, ವಿಷ್ಣುವಿಗೆ ಶಯನಸಾದ್ದರಿಂದ ಸತ್ಯನಾಮಕನಾದ ಸತ್ಯಾಭಿಮಾನಿಯಾದ ಶೇಷನನ್ನು ಆಶ್ರಯಿಸಿದೆ. ಸತ್ಯನಾಮಕ ಶೇಷನು ಚಕ್ಷುರ್ನಾಮಕ ಸೂರ್ಯಾಭಿಮಾನಿ. ಏಕೆಂದರೆ ಅವನು ಚಕ್ಷುರ್ನಾಮಕ ಸೂರ್ಯನಿಗೆ ಅಭಿಮಾನಿ ಎನ್ನುವುದು ಪ್ರಸಿದ್ಧವಾದ ವಿಷಯ. ಆದ್ದರಿಂದಲೇ, 'ಇದೆ ಎಂದು ನಾನು ನೋಡಿದ್ದೇನೆ' 'ಇಲ್ಲವೆಂದು ನಾನು ಕೇಳಿದ್ದೇನೆ' ಎಂದು ವಿವಾದ ಮಾಡುತ್ತ ಇಬ್ಬರು ಬಂದಾಗ 'ನಾನು ನೋಡಿದ್ದೇನೆ' ಎಂದು ಹೇಳುವವನನ್ನೆ ನಂಬುತ್ತೇವೆ. ಹೀಗೆ ಸತ್ಯವನ್ನು ತಿಳಿಯಲು ಚಕ್ಷುಸ್ ಮುಖ್ಯಸಾಧನವಾಗಿದೆ. ಆ ಸತ್ಯನಾಮಕ ಶೇಷನು ಬಲವನ್ನು ಆಶ್ರಯಿಸಿದ್ದಾನೆ. ಬಲ ಎಂದರೆ ಪ್ರಾಣ. ಶೇಷನು ಪ್ರಾಣನನ್ನು ಆಶ್ರಯಿಸಿದ್ದಾನೆ ಎಂದರ್ಥ. ಆದ್ದರಿಂದ ಸತ್ಯನಾಮಕ ಶೇಷನಿಗಿಂತ ಬಲನಾಮಕ ಪ್ರಾಣನೆ ಹೆಚ್ಚು ಬಲಶಾಲಿ ಎಂದು ಹೇಳುತ್ತಾರೆ. ಈ ಬಲನಾಮಕ ಪ್ರಾಣನು ಗಾಯತ್ರಿಯ ಅಭಿಮಾನಿನಿಯಾದ ಲಕ್ಷ್ಮಿಯನ್ನು ಆಶ್ರಯಿಸಿದ್ದಾನೆ. ಹೀಗೆಯೇ ಲಕ್ಷ್ಮಿಯೂ ಸಕಲಜೀವರ ಅಧಿಪತಿಯಾದ ಶ್ರೀಹರಿಯನ್ನು ಆಶ್ರಯಿಸಿದ್ದಾಳೆ. ಗಾಯತ್ರಿಯ ಅಭಿಮಾನಿನಿಯಾದ ಲಕ್ಷ್ಮಿಯು 'ಗಯ'ರನ್ನು ರಕ್ಷಿಸುತ್ತಾಳೆ. ಗಯರು ಎಂದರೆ ಪಂಚಪ್ರಾಣಗಳು. ಆದ್ದರಿಂದ ಪ್ರಾಣಗಳನ್ನು ರಕ್ಷಿಸುತ್ತಾಳೆ ಎಂದರ್ಥ. ಲಕ್ಷ್ಮಿಯು ಉಪಾಸಕನ ಪಂಚ ಪ್ರಾಣಗಳನ್ನು ರಕ್ಷಿಸುವುದರಿಂದಲೇ ಅವಳಿಗೆ ಗಾಯತ್ರಿ ಎಂದು ಹೆಸರು. ಪರೋರಜನಾದ ವಿಷ್ಣು ಗಾಯತ್ರೀನಾಮಕಳಾದ ಲಕ್ಷ್ಮಿಯನ್ನೇ ಸವಿತೃನಾಮಕನಾದ ತನಗೆ ಪ್ರಿಯಳಾದ್ದರಿಂದ ಸಾವಿತ್ರೀ ಎಂದು ಕರೆಯುತ್ತಾನೆ. ಆದ್ದರಿಂದ ಸಾವಿತ್ರಿ ಗಾಯತ್ರಿಯೇ. ಬೇರೆ ಯಾರೂ ಅಲ್ಲ. ವಿಷ್ಣುವು ಗಾಯತ್ರೀ ಮಂತ್ರವನ್ನು ಚತುರ್ಮುಖ ಬ್ರಹ್ಮನಿಗೆ ಉಪದೇಶಿಸುತ್ತಾನೆ. ಅವನ ಪ್ರಾಣಗಳನ್ನು ಲಕ್ಷ್ಮಿಯು ರಕ್ಷಿಸುತ್ತಾಳೆ.

**ಭಾಷ್ಯ—ಅಭಿಮಾನಿನೀ ತು ಗಾಯತ್ರ್ಯಾ ಮುಖ್ಯಾ ಶ್ರೀಃ ಪರಿಕೀರ್ತಿತಾ ।**
**ಬ್ರಹ್ಮಾಣ್ಯಮುಖ್ಯತೋ ಜ್ಞೇಯಾ ಸಾ ತು ಬ್ರಹ್ಮಾಣಮಾಶ್ರಿತಾ ।**
**ಬ್ರಹ್ಮಾ ತು ಮುಖ್ಯಗಾಯತ್ರೀಂ ಸಾ ಪರೋರಜಆಶ್ರಯಾ ।**
**ಇತಿ ಚ ।**

**ಅನುವಾದ**—ಗಾಯತ್ರೀ ಮಂತ್ರದ ಮುಖ್ಯ ಅಭಿಮಾನಿನಿ ಲಕ್ಷ್ಮೀದೇವಿ.

ಸರಸ್ವತಿ ಅಮುಖ್ಯ ಅಭಿಮಾನಿನಿ. ಸರಸ್ವತಿ ಚತುರ್ಮುಖ ಬ್ರಹ್ಮನನ್ನು ಆಶ್ರಯಿಸಿದ್ದಾಳೆ. ಚತುರ್ಮುಖಬ್ರಹ್ಮನು ಗಾಯತ್ರಿಯ ಮುಖ್ಯಾಭಿಮಾನಿನಿಯಾದ ಲಕ್ಷ್ಮಿಯನ್ನು ಆಶ್ರಯಿಸಿದ್ದಾನೆ. ಲಕ್ಷ್ಮಿ ಪರೋರಜನಾದ ವಿಷ್ಣುವನ್ನು ಆಶ್ರಯಿಸಿದ್ದಾಳೆ.

**ಭಾಷ್ಯ—'ತದ್ ವಾ ಏತತ್' ಜಗತ್, ಸತ್ಯೇ ಪ್ರತಿಷ್ಠಿತಮ್ । 'ಭೂಮಿರಂತರಿಕ್ಷಂ ದ್ಯೌಃ' ಇತ್ಯಾದಿನಾ ಪ್ರಸ್ತುತತ್ವಾತ್ ।**

**ಅನುವಾದ**—'ತದ್ ವಾ ಏತತ್ ಸತ್ಯೇ ಪ್ರತಿಷ್ಠಿತಂ' ಎಂಬಲ್ಲಿ ತದ್ ವಾ ಏತತ್ ಎಂದರೆ ಪರಮಾತ್ಮನಲ್ಲ, ಜಗತ್ತು. ಏಕೆಂದರೆ ಭೂಮಿರಂತರಿಕ್ಷಂ ದ್ಯೌಃ ಎಂದು ಹಿಂದೆ ಜಗತ್ತು ಪ್ರಕೃತವಾಗಿರುವುದರಿಂದ ತತ್ ಏತತ್ ಶಬ್ದಗಳಿಂದ ಜಗತ್ತನ್ನಿಟ್ಟುಕೊಳ್ಳಬಹುದು. ಜಗತ್ತು ಶೇಷನನ್ನಾಶ್ರಯಿಸಿದೆ ಎಂದರ್ಥ.

**ಭಾಷ್ಯ—ತದ್ ವಾ ಏತದ್ ಜಗತ್ ಸರ್ವಂ ಚಕ್ಷುಃಸೂರ್ಯಾಭಿಮಾನಿನಿ ।**
**ವಿರಾಣ್ನಾಮನಿ ಶೇಷಾಖ್ಯೇ ಸರ್ವದಾ ಸಂಪ್ರತಿಷ್ಠಿತಮ್ ।**
**ಶೇಷಃ ಪ್ರತಿಷ್ಠಿತೋ ವಾಯೌ ಸ ಹ್ಯಸ್ಮಾದ್ ಬಲವತ್ತರಃ ।**
**ಸ ಸತ್ಯ ಇತಿ ಸಂಪ್ರೋಕ್ತಃ ಸನ್ ಅಸ್ಮಿನ್ ಯಾತಿ ಯದ್ಧರಿಃ ।**
**ವಾಯುಃ ಸಮಾಶ್ರಿತೋ ದೇವೀಂ ಮುಖ್ಯಾಂ ಗಾಯತ್ರಿನಾಮಿಕಾಂ।**
**ಸಾ ಚಾತ್ಮನಾಮಧಿಪತಿಮೇವಂ ಪರಮುಪಾಶ್ರಿತಾ ।**
**ಪ್ರಾಣಾನಾಂ ರಕ್ಷಣಾದೇವ ಗಾಯತ್ರೀ ಸಾ ಪ್ರಕೀರ್ತಿತಾ ।**
**ಸಾವಿತ್ರೀತಿ ಚ ಯಾಮಾಹ ಸ ವಿಷ್ಣುಃ ಪರತೋ ರಜಾಃ ।**
**ಏಷೈವ ಸಾ ಹಿ ಗಾಯತ್ರೀ ಸವಿತಾ ಹಿ ಜನಾರ್ದನಃ ।**
**ತಸ್ಮಾದ್ಧಿ ಸೂಯತೇ ಸರ್ವಂ ಸಾವಿತ್ರೀ ಚ ತದಾಶ್ರಿತಾ ।**
**ಆದಿತ್ಯಸ್ತತ್ಪ್ರತೀಕತ್ವಾತ್ ಸವಿತೇತಿ ಪ್ರಕೀರ್ತಿತಃ ।**
**ಪ್ರತಿಮಾಯಾಂ ಚ ತಚ್ಛಬ್ದಃ ಪ್ರಯೋಜ್ಯೋ ಹ್ಯುಪಚಾರತಃ ।**
**ಯಸ್ಮಾ ಆಹ ಸ ವಿಷ್ಣುಸ್ತಾಂ ಗಾಯತ್ರೀಂ ಜಗದೀಶ್ವರಃ ।**
**ಬ್ರಹ್ಮಣೇ ತಸ್ಯ ಸಾ ಪ್ರಾಣಾನ್ ಸರ್ವದಾ ಪಾತಿ ಪುತ್ರವತ್ ।**
**ಬ್ರಹ್ಮಾ ಹಿ ಪುತ್ರಸ್ತಸ್ಯಾಸ್ತು ತತ್ಪೌತ್ರಾ ಇತರೇಽಖಿಲಾಃ ।**

**ಅನುವಾದ**—ಈ ಜಗತ್ತೆಲ್ಲವೂ ಚಕ್ಷುರ್ನಾಮಕ ಸೂರ್ಯನ ಅಭಿಮಾನಿಯಾದ ವಿರಾಟ್ ನಾಮಕ ಶೇಷನನ್ನು ಯಾವಾಗಲೂ ಆಶ್ರಯಿಸಿದೆ. ಶೇಷನು ವಾಯುವನ್ನು ಆಶ್ರಯಿಸಿದ್ದಾನೆ. ಏಕೆಂದರೆ ವಾಯು ಶೇಷನಿಗಿಂತ ಬಲಶಾಲಿ. 'ಸತ್' ಎಂದರೆ ದೋಷದೂರನಾದ ಹರಿಯು ಶೇಷನಲ್ಲಿ, 'ಯ' ಮಲಗಿರುವುದರಿಂದ ಶೇಷನಿಗೆ ಸತ್ಯ ಎಂದು ಹೆಸರು. ವಾಯುವು ಗಾಯತ್ರಿಯ ಮುಖ್ಯ ಅಭಿಮಾನಿನಿಯಾದ

ಗಾಯತ್ರೀನಾಮಕ ಶ್ರೀದೇವಿಯನ್ನು ಆಶ್ರಯಿಸಿದ್ದಾನೆ. ಅವಳು ಜೀವಾತ್ಮರ ಪರಮಾಧಿಪತಿಯಾದ ಹರಿಯನ್ನು ಆಶ್ರಯಿಸಿದ್ದಾಳೆ. ಪ್ರಾಣಗಳನ್ನು ರಕ್ಷಿಸುವುದರಿಂದ ಗಾಯತ್ರೀ ಎಂದು ಪ್ರಸಿದ್ಧಳಾಗಿದ್ದಾಳೆ. ಪರೋರಜನಾದ ವಿಷ್ಣು ಸಾವಿತ್ರಿ ಎಂದು ಯಾರನ್ನು ಕರೆಯುತ್ತಾನೋ ಅವಳು ಈ ಗಾಯತ್ರಿಯೇ. ಏಕೆಂದರೆ ಜನಾರ್ದನನು ಸವಿತಾ ಎನಿಸಿದ್ದಾನೆ. ಅವನಿಂದಲೇ ಜಗತ್ತು ಹುಟ್ಟುತ್ತದೆ. ಅವನನ್ನು ಆಶ್ರಯಿಸಿದವಳಾದ್ದರಿಂದ ಗಾಯತ್ರಿಯೇ ಸಾವಿತ್ರಿ. ಸೂರ್ಯನು ಸವಿತೃನಾಮಕ ವಿಷ್ಣುವಿನ ಪ್ರತೀಕನಾದ್ದರಿಂದ ಅವನಿಗೆ ಸವಿತಾ ಎಂದು ಹೆಸರು. ಏಕೆಂದರೆ ಒಬ್ಬ ದೇವತೆಯ ಪ್ರತಿಮೆಯನ್ನು ಆ ದೇವತೆಯ ಹೆಸರಿನಿಂದಲೇ ಔಪಚಾರಿಕವಾಗಿ ಕರೆಯಬಹುದು. ಜಗದೀಶ್ವರನಾದ ವಿಷ್ಣು ಗಾಯತ್ರೀಮಂತ್ರವನ್ನು ಯಾವ ಚತುರ್ಮುಖ ಬ್ರಹ್ಮನಿಗೆ ಉಪದೇಶಿಸಿದನೋ ಆ ಚತುರ್ಮುಖನನ್ನು ಪುತ್ರನಂತೆ ನೋಡಿಕೊಂಡು ಅವನ ಪ್ರಾಣಗಳನ್ನು ಶ್ರೀದೇವಿಯು ರಕ್ಷಿಸುತ್ತಾಳೆ. ಚತುರ್ಮುಖನು ಅವಳ ಪುತ್ರನೇ ಹೌದು. ಬೇರೆ ಎಲ್ಲರೂ ಅವನ ಪುತ್ರರು.

**ಉಪನಿಷತ್–ತಾಂ ಹ ಏತಾಮೇಕೇ ಸಾವಿತ್ರೀಮನುಷ್ಟುಭಮನ್ವಾಹುಃ। ವಾಕ್ ಅನುಷ್ಟುಪ್। ತದ್ ವಾಚಮನುಬ್ರೂಮ ಇತಿ। ತನ್ನ ತಥಾ ಕುರ್ಯಾತ್। ಗಾಯತ್ರೀಮೇವ ಸಾವಿತ್ರೀಮನುಬ್ರೂಯಾತ್। ಯದಿ ಹ ವಾ ಅಪ್ಯೇವಂವಿದ್ ಬಹ್ವಿವ ಪ್ರತಿಗೃಹ್ಣಾತಿ ನ ಹೈವ ತದ್ ಗಾಯತ್ರ್ಯಾ ಏಕಂಚನ ಪದಂ ಪ್ರತಿ।**

ಸವಿತೃನಾಮಕ ಹರಿಯನ್ನು ಆಶ್ರಯಿಸಿರುವ ಈ ಸಾವಿತ್ರಿಯನ್ನು ಕೆಲವರು ಅನುಷ್ಟುಪಿನ ಅಭಿಮಾನಿನಿಯೆಂದು ಹೇಳುತ್ತಾರೆ. 'ತತ್ಸವಿತುರ್ವೃಣೀಮಹೇ ವಯಂ ದೇವಸ್ಯ ಭೋಜನಂ। ಶ್ರೇಷ್ಠಂ ಸರ್ವಧಾತಮಂ ತುರಂ ಭಗಸ್ಯ ಧೀಮಹಿ' ಎಂಬ ಮಂತ್ರವೇ ಅನುಷ್ಟುಪ್. ಆದ್ದರಿಂದ ಈ ಅನುಷ್ಟುಪ್ ಋಚೆಯನ್ನೇ ಸಾವಿತ್ರಿಯ ಪ್ರತಿಮೆ ಎನ್ನುತ್ತೇವೆ ಎನ್ನುತ್ತಾರೆ. ಆದರೆ ಹಾಗೆ ಮಾಡಬಾರದು. ಗಾಯತ್ರೀ ಋಚೆಯನ್ನೇ ಸಾವಿತ್ರೀನಾಮಕ ಶ್ರೀದೇವಿಯ ಮುಖ್ಯಪ್ರತಿಮೆ ಎಂದು ಹೇಳಬೇಕು. ಹೀಗೆ ಗಾಯತ್ರಿಯನ್ನು ತಿಳಿದ ಚತುರ್ಮುಖನು ವಿಷ್ಣುವಿನಿಂದ ಬಹಳ ಸಂಪತ್ತನ್ನೇ ಪಡೆದರೂ ಆ ಸಂಪತ್ತಿನಿಂದ ಲಭಿಸುವ ಸುಖ ಗಾಯತ್ರೀಮಂತ್ರದ ಒಂದು ಪಾದದ ಜ್ಞಾನಕ್ಕೆ ಸಾಟಿಯಾಗುವುದಿಲ್ಲ. ಇದು ಪ್ರಸಿದ್ಧವಾದ ವಿಷಯ. ಆದ್ದರಿಂದ ಗಾಯತ್ರಿಯ ಉಪಾಸಕನಾದ ಚತುರ್ಮುಖನಿಗೆ ಪ್ರತಿಗ್ರಹದೋಷ ಸರ್ವಥಾ ಇಲ್ಲ.

**ಭಾಷ್ಯ—ತಾಮಾಹುಃ ಪರಮಾಂ ದೇವೀಂ ವೃಣೀಮಹಋಗಾತ್ಮಿಕಾಮ್ ।**
**ನೈವ ಸಾ ಪ್ರತಿಮಾ ಮುಖ್ಯಾ ಗಾಯತ್ರೀ ಪರಮಾ ಸ್ಮೃತಾ ।**

**ಗಾಯತ್ರೀಮುಖ್ಯವೇತ್ತಾರೋ ಯೋಗ್ಯಾ ಬ್ರಹ್ಮಪದಸ್ಯ ಯೇ ।
ತೇಷಾಂ ಪ್ರತಿಗ್ರಹಾದ್ ದೋಷೋ ನ ಕಶ್ಚನ ಭವಿಷ್ಯತಿ ।
ನ ಚೈಕಪದವಿಜ್ಞಾನಫಲಾಯಾಲಂ ಸುಖಾನಿ ಚ ।**

**ಅನುವಾದ**—ಸಾವಿತ್ರೀನಾಮಕ ಲಕ್ಷ್ಮಿಯನ್ನು 'ತತ್ಸವಿತುರ್ವೃಣೀಮಹೇ' ಎಂಬ ಅನುಷ್ಟುಪ್ ಮಂತ್ರದ ಅಭಿಮಾನಿನಿಯೆಂದು ಹೇಳುತ್ತಾರೆ. ಆದರೆ ಈ ಮಂತ್ರ ಸಾವಿತ್ರೀನಾಮಕ ಶ್ರೀದೇವಿಯ ಮುಖ್ಯಪ್ರತಿಮೆ ಅಲ್ಲ. ಗಾಯತ್ರೀ ಮಂತ್ರವೇ ಆ ದೇವಿಯ ಮುಖ್ಯಪ್ರತಿಮೆ. ಬ್ರಹ್ಮಪದವಿಗೆ ಯೋಗ್ಯರಾದವರು ಮಾತ್ರ ಗಾಯತ್ರೀ ಮಂತ್ರೋಪಾಸಕರಲ್ಲಿ ಮುಖ್ಯರು. ಅವರಿಗೆ ಪ್ರತಿಗ್ರಹದಿಂದ ಯಾವ ದೋಷವೂ ಉಂಟಾಗುವುದಿಲ್ಲ. ಏಕೆಂದರೆ ಪ್ರತಿಗ್ರಹದಿಂದ ಉಂಟಾದ ಸುಖವು ಗಾಯತ್ರೀ ಮಂತ್ರದ ಒಂದು ಪಾದದ ಜ್ಞಾನಕ್ಕೆ ಸಾಟಿಯಲ್ಲ.

**ಉಪನಿಷತ್**–**ಸ ಯ ಇಮಾನ್ ತ್ರೀನ್ ಲೋಕಾನ್ ಪೂರ್ಣಾನ್ ಪ್ರತಿಗೃಹ್ಣೀಯಾತ್ ।ಸೋಽಸ್ಯಾ ಏತತ್ ಪ್ರಥಮಂ ಪದಮಾಪ್ನುಯಾತ್ । ಅಥ ಯಾವತೀಯಂ ತ್ರಯೀ ವಿದ್ಯಾ ಯಸ್ತಾವತ್ ಪ್ರತಿಗೃಹ್ಣೀಯಾತ್। ಸೋಽಸ್ಯಾ ಏತದ್ ದ್ವಿತೀಯಂ ಪದಮಾಪ್ನುಯಾತ್ । ಅಥ ಯಾವದಿದಂ ಪ್ರಾಣಿ ಯಸ್ತಾವತ್ ಪ್ರತಿಗೃಹ್ಣೀಯಾತ್ । ಸೋಽಸ್ಯಾ ಏತತ್ ತೃತೀಯಂ ಪದಮಾಪ್ನುಯಾತ್ । ಅಥಾಸ್ಯಾ ಏತದೇವ ತುರೀಯಂ ದರ್ಶತಂ ಪದಂ ಪರೋರಜಾ ಯ ಏಷ ತಪತಿ ನೈವ ಕೇನಚನಾಪ್ಯಂ। ಕುತ ಉ ಏತಾವತ್ ಪ್ರತಿಗೃಹ್ಣೀಯಾತ್ ।**

ಗಾಯತ್ರಿಯ ಉಪಾಸಕನಾದ ಚತುರ್ಮುಖನು ಭೂಮಿ ಅಂತರಿಕ್ಷ ದ್ಯೌ ಎಂಬ ಮೂರುಲೋಕಗಳ ಪೂರ್ಣ ಆಧಿಪತ್ಯವನ್ನು ಲೋಕಾಂತರ್ಗತನಾದ ಅನಿರುದ್ಧನಿಂದ ಪಡೆಯುತ್ತಾನೆ. ಆದರೆ ಈ ಪ್ರತಿಗ್ರಹದ ಸುಖವು ಗಾಯತ್ರಿಯ ಪ್ರಥಮಪಾದದ ಉಪಾಸನೆಯ ಫಲದ ಒಂದು ಅಂಶದಷ್ಟೇ ಆಗುತ್ತದೆ. ಗಾಯತ್ರ್ಯುಪಾಸನೆಗೆ ಲೌಕಿಕಸುಖ ಮಾತ್ರವೇ ಫಲವಲ್ಲ. ಈ ಚತುರ್ಮುಖನು ಮುಕ್ತನಾದ ನಂತರ ಪ್ರಥಮ ಪಾದಪ್ರತಿಪಾದ್ಯನಾದ ಅನಿರುದ್ಧನನ್ನು ಪ್ರವೇಶಿಸಿ ವ್ಯಾಪಿಸುತ್ತಾನೆ. ಗಾಯತ್ರಿಯ ಉಪಾಸಕನಾದ ಚತುರ್ಮುಖನು ಎಲ್ಲ ಮೂರು ವೇದಗಳ ಒಡೆತನವನ್ನು ವೇದಾಂತರ್ಗತನಾದ ಪ್ರದ್ಯುಮ್ನನಿಂದ ಪಡೆಯುತ್ತಾನೆ. ಇದು ಗಾಯತ್ರಿಯ ದ್ವಿತೀಯ ಪಾದದ ಉಪಾಸನೆಯ ಫಲದ ಒಂದು ಅಂಶ ಮಾತ್ರ. ಮುಕ್ತಿಯಲ್ಲಿ ದ್ವಿತೀಯ ಪಾದಪ್ರತಿಪಾದ್ಯನಾದ ಪ್ರದ್ಯುಮ್ನನನ್ನು ಪ್ರವೇಶಿಸಿ ವ್ಯಾಪಿಸುತ್ತಾನೆ. ಗಾಯತ್ರಿಯ ಉಪಾಸಕನಾದ ಚತುರ್ಮುಖನು ಸಕಲಪ್ರಾಣಿಗಳ ಆಧಿಪತ್ಯವನ್ನು ಪ್ರಾಣಾಪಾನಾದಿ ವಾಯ್ವಂತರ್ಗತ ಸಂಕರ್ಷಣನಿಂದ ಪಡೆಯುತ್ತಾನೆ. ಇದೂ ಕೂಡ ಗಾಯತ್ರಿಯ

ತೃತೀಯಪಾದದ ಉಪಾಸನೆಯು ಒಂದು ಅಂಶ ಮಾತ್ರವಾಗುತ್ತದೆ. ಮುಕ್ತಿಯಲ್ಲಿ ತೃತೀಯಪಾದ ಪ್ರತಿಪಾದ್ಯನಾದ ವಾಯ್ವಂತರ್ಗತ ಸಂಕರ್ಷಣನನ್ನು ಪ್ರವೇಶಿಸಿ ವ್ಯಾಪಿಸುತ್ತಾನೆ. ಚಿತ್ತಕ್ಕೃತಿಯನ್ನು ಮೀರಿ ಪ್ರಕಾಶಿಸುವ ಸೂರ್ಯಮಂಡಲಾಂತರ್ಗತ ನಾಗಿ ಎಲ್ಲರಿಗೂ ಕಾಣುವವನಂತೆ ಇರುವ ಚತುರ್ಥಪಾದವಾದ ಪ್ರಣವದ ಪ್ರತಿಪಾದ್ಯ ನಾದ ವಾಸುದೇವನನ್ನು ಪ್ರವೇಶಿಸಿ ವ್ಯಾಪಿಸಲು ಯಾರಿಗೂ ಸಾಧ್ಯವಿಲ್ಲ. ಹೀಗಿರು ವಾಗ ವಾಸುದೇವನು ವ್ಯಾಪಿಸಿರುವ ಪ್ರದೇಶಗಳಲ್ಲಿರುವ ಎಲ್ಲವುಗಳ ಆಧಿಪತ್ಯವನ್ನು ಹೊಂದಲು ಯಾರಿಗೆ ಸಾಧ್ಯ ?

**ಭಾಷ್ಯ—ವಿಷ್ಣೋರ್ಯದಾ ಭಗವತೋ ಲೋಕಾನ್ ವೇದಾಂಶ್ಚ ಚೇತನಾನ್ ।**
**ವಿರಿಂಚಜನ್ಮನ್ಯಖಿಲಾನ್ ಪ್ರತಿಗೃಹ್ಣಂತಿ ಕೃತ್ಸ್ನಶಃ ।**
**ಗಾಯತ್ರೀಪದವಿಜ್ಞಾನಫಲಮಾತ್ರಂ ತದಾ ಭವೇತ್ ।**
**ಪ್ರಣವಪ್ರತಿಪಾದ್ಯಂ ಯತ್ ತುರೀಯಂ ಭಗವತ್ಪದಮ್ ।**
**ಸರ್ವಗಂ ವಾಸುದೇವಾಖ್ಯಂ ನ ತತ್ ಕೇನಚಿದಾಪ್ಯತೇ ।**
**ಗಾಯತ್ರೀತ್ರಿಪದಜ್ಞೇಯಮ್ ಅನಿರುದ್ಧಾದಿಕಂ ತ್ರಯಮ್ ।**
**ಬ್ರಹ್ಮಾ ವ್ಯಾಪ್ನೋತಿ ಮುಕ್ತಃ ಸನ್ ವಾಸುದೇವಂ ನ ಕಶ್ಚನ ।**
**ಲೋಕಸ್ಥಮನಿರುದ್ಧಂ ಚ ಪ್ರದ್ಯುಮ್ನಂ ವೇದಗಂ ತಥಾ ।**
**ಸಂಕರ್ಷಣಂ ವಾಯುಸಂಸ್ಥಂ ವ್ಯಾಪ್ಯ ಬ್ರಹ್ಮಾ ವಿಮುಕ್ತಿಗಃ ।**
**ಗಾಯತ್ರೀಜ್ಞಾನಸಾಮರ್ಥ್ಯಾತ್ ಪ್ರಣವಜ್ಞಾನಶಕ್ತಿತಃ ।**
**ವಾಸುದೇವಂ ಚ ಸಂಪಶ್ಯೇನ್ನ ವ್ಯಾಪ್ನೋತಿ ಕಥಂಚನ ।**
**ಅನಂತತ್ವಾತ್ ವಾಸುದೇವಃ ಕಥಂ ವ್ಯಾಪ್ಯೋ ಭವೇತ್ ಪ್ರಭುಃ ।**
**ವರ್ಣತ್ರಯಾತ್ಮಪ್ರಕೃತಿಮತೀತಃ ಸೂರ್ಯಮಂಡಲೇ ।**
**ಗುಣತ್ರಯಾತ್ಮಿಕಾಂ ಬಾಹ್ಯೇ ಯತೋಽತಃ ಸ ಪರೋರಜಾಃ ।**
**ಯತೋ ನ ವ್ಯಾಪ್ಯತೇ ಸೋಽಸೌ ಬ್ರಹ್ಮಣಾಪಿ ಕಥಂಚನ ।**
**ಅತಃ ಪ್ರತಿಗ್ರಹೋ ನಾಸ್ಯ ವಾಸುದೇವಸ್ಯ ವಿದ್ಯತೇ ।**
**ಇತಿ ಪ್ರಕಾಶಿಕಾಯಾಂ ।**

**ಅನುವಾದ**—ಗಾಯತ್ರೀ ಮಂತ್ರದ ಉಪಾಸನೆಗೆ ಮುಖ್ಯ ಅಧಿಕಾರಿಗಳಾದ ವರು ತಮ್ಮ ವಿರಿಂಚಜನ್ಮದಲ್ಲಿ ವಿಷ್ಣುವಿನಿಂದ ಭೂಮಿ ಅಂತರಿಕ್ಷ ದ್ಯೌ ಎಂಬ ಮೂರು ಲೋಕಗಳನ್ನೂ, ಮೂರು ವೇದಗಳನ್ನೂ, ಎಲ್ಲ ಚೇತನಗಳನ್ನೂ ಉಪಾ ಸನೆಯ ಫಲವಾಗಿ ಪಡೆದಾಗ ಅದು ಗಾಯತ್ರಿಯ ಒಂದೊಂದು ಪಾದದ ಜ್ಞಾನ ದಿಂದ ಲಭಿಸಬೇಕಾದ ಫಲದ ಒಂದು ಅಂಶ ಮಾತ್ರವಾಗುತ್ತದೆ. ಪ್ರಣವಪ್ರತಿಪಾದ್ಯ ವಾದ ಸರ್ವವ್ಯಾಪಿಯಾದ ಭಗವಂತನ ವಾಸುದೇವರೂಪವನ್ನು ಪ್ರವೇಶಿಸಿ ವ್ಯಾಪಿ

ಸಲು ಯಾರಿಗೂ ಸಾಧ್ಯವಿಲ್ಲ. ಆದರೆ ಗಾಯತ್ರಿಯ ಮೂರು ಪಾದಗಳಿಂದ ತಿಳಿಯಲ್ಪಡುವ ಅನಿರುದ್ಧ ಪ್ರದ್ಯುಮ್ನ ಸಂಕರ್ಷಣರನ್ನು ಚತುರ್ಮುಖ ಬ್ರಹ್ಮದೇವರು ಮುಕ್ತರಾದನಂತರ ಪ್ರವೇಶಿಸಿ ವ್ಯಾಪಿಸುತ್ತಾರೆ. ವಾಸುದೇವನನ್ನು ಯಾರೂ ವ್ಯಾಪಿಸುವುದಿಲ್ಲ. ಮುಕ್ತಿ ಹೊಂದಿದ ಚತುರ್ಮುಖನು ತನ್ನ ಗಾಯತ್ರೀಜ್ಞಾನ ಸಾಮರ್ಥ್ಯದಿಂದ ಭೂಮಿ ಮೊದಲಾದ ಲೋಕಗಳಲ್ಲಿ ವ್ಯಾಪಿಸಿರುವ ಅನಿರುದ್ಧನನ್ನೂ ವೇದಗಳಲ್ಲಿ ವ್ಯಾಪಿಸಿರುವ ಪ್ರದ್ಯುಮ್ನನನ್ನೂ ಪ್ರಾಣಾದಿ ವಾಯುಗಳಲ್ಲಿ ವ್ಯಾಪಿಸಿರುವ ಸಂಕರ್ಷಣನನ್ನೂ ಪ್ರವೇಶಿಸಿ ವ್ಯಾಪಿಸುತ್ತಾನೆ. ಏಕೆಂದರೆ ಈ ಮೂವರಿಗೂ ಪರಿಮಿತಿ ಉಂಟು. ಆದರೆ ಪ್ರಣವಜ್ಞಾನದ ಸಾಮರ್ಥ್ಯದಿಂದ ಚತುರ್ಮುಖನಿಗೆ ವಾಸುದೇವನ ದರ್ಶನ ಮಾತ್ರ ಲಭಿಸುತ್ತದೆ ಹೊರತು ಅವನನ್ನು ವ್ಯಾಪಿಸಲು ಸಾಮರ್ಥ್ಯವಿರುವುದಿಲ್ಲ. ಏಕೆಂದರೆ ವಾಸುದೇವನು ಅನಂತ. ಅನಂತನಾದ ಚತುರ್ಮುಖಬ್ರಹ್ಮ ಅವನನ್ನು ವ್ಯಾಪಿಸಲು ಹೇಗೆ ಸಾಧ್ಯ? ಸೂರ್ಯಮಂಡಲದಲ್ಲಿರುವ ವಾಸುದೇವನು ಶುಕ್ಲ ಕೃಷ್ಣ ಕನೀನಿಕಾ ಎಂಬ ಮೂರು ವರ್ಣಗಳ ಅಭಿಮಾನಿನಿಯಾದ ಲಕ್ಷ್ಮೀದೇವಿಗಿಂತ ಉತ್ತಮನಾಗಿದ್ದು ಪರಿಮಿತನೇ ಆಗಿದ್ದರೂ ಸೂರ್ಯಮಂಡಲದ ಹೊರಗೆ ಸತ್ತ್ವ ರಜಸ್ ತಮೋಗುಣಗಳಿಗೆ ಅಭಿಮಾನಿನಿಯಾದ ಲಕ್ಷ್ಮೀದೇವಿಗಿಂತ ಉತ್ತಮನಾಗಿದ್ದು ಅನಂತದೇಶವ್ಯಾಪಿಯಾಗಿದ್ದಾನೆ. ಆದ್ದರಿಂದ ಅವನು ಪರೋರಜಸ್. ಅಂತಹ ವಾಸುದೇವನನ್ನು ಚತುರ್ಮುಖನಿಗೂ ವ್ಯಾಪಿಸಲು ಸಾಧ್ಯವಿಲ್ಲ. ಆದ್ದರಿಂದ ಅನಿರುದ್ಧಾದಿಗಳಲ್ಲಿ ವ್ಯಾಪಿಸುವುದರಿಂದ ಚತುರ್ಮುಖನು ಅವರಿಂದ ಲೋಕಾಧಿಪತ್ಯ ಮುಂತಾದವುಗಳನ್ನು ಪಡೆಯುತ್ತಾನೆ. ವಾಸುದೇವನಲ್ಲಿ ವ್ಯಾಪಿಸದಿರುವುದರಿಂದ ಅವನಿಂದ ಏನೂ ಪಡೆಯಲಾರ.

**ಭಾಷ್ಯ—ತಾವದೇತಾವತ್ ಪ್ರತಿಗೃಹ್ಣೀಯಾತ್ ಇತಿ ತಸ್ಯೈವ ಸಾಮಸ್ತ್ಯೇನ ಗ್ರಹಣಾರ್ಥಮ್ । 'ಏತಾವದೇವ ಮಮ ಹಸ್ತೇ ವಿದ್ಯತೇ' ಇತಿವತ್ । ನ ಹ್ಯನ್ಯದೇತಾವತ್ ಪ್ರತಿಗ್ರಾಹ್ಯಮಸ್ತಿ।**

**ಅನುವಾದ**—'ತಾವತ್ ಪ್ರತಿಗೃಹ್ಣೀಯಾತ್' ಈ ಪದಗಳಿಗೆ ಅಷ್ಟೇ ಪರಿಮಾಣದ ಬೇರೆ ಪದಾರ್ಥಗಳನ್ನು ಪಡೆಯುತ್ತಾನೆ ಎಂದರ್ಥವಲ್ಲ. ಯಾವುದು ಪ್ರಸ್ತುತವೋ ಅದನ್ನೇ ಸಮಗ್ರವಾಗಿ ಪೂರ್ಣಪ್ರಮಾಣದಲ್ಲಿ ತೆಗೆದುಕೊಳ್ಳುತ್ತಾನೆ ಎಂದೇ ಅರ್ಥ. 'ನನ್ನ ಕೈಯಲ್ಲಿ ಈ ಪದಾರ್ಥ ಇಷ್ಟೇ ಇದೆ' ಎಂದಾಗ ಇಷ್ಟೇ ಎಂಬುದರಿಂದ ಕೈಯಲ್ಲಿರುವ ವಸ್ತುವನ್ನೇ ಗ್ರಹಿಸುತ್ತೇವೆ. ಅದೇ ಪ್ರಮಾಣದ ಬೇರೆ ವಸ್ತುವನ್ನು ಎಂದೂ ಗ್ರಹಿಸುವುದಿಲ್ಲ. ಆದ್ದರಿಂದ 'ಯಾವತೀಯಂ ತ್ರಯೀ ವಿದ್ಯಾ ತಾವತ್ ಪ್ರತಿಗೃಹ್ಣೀಯಾತ್' ಮತ್ತು 'ಯದಿದಂ ಪ್ರಾಣಿ ತಾವತ್ ಪ್ರತಿ

ಗೃಹ್ಣೀಯಾತ್' ಎಂಬ ವಾಕ್ಯಗಳಲ್ಲಿ ಪ್ರಸ್ತುತವಾದ ವೇದಗಳನ್ನು ಮತ್ತು ಪ್ರಾಣಿಗಳನ್ನೇ ಸಮಗ್ರವಾಗಿ ಪ್ರತಿಗ್ರಹಿಸುತ್ತಾನೆ ಎಂದೇ ಅರ್ಥ, ಪ್ರಸ್ತುತವಾದ ವೇದ, ಪ್ರಾಣಿಗಳಿಗೆ ಸದೃಶವಾದ ಪ್ರಮಾಣದಲ್ಲಿ ಬೇರೆ ಏನನ್ನೋ ಗ್ರಹಿಸುತ್ತಾನೆ ಎಂದು ಅರ್ಥವಲ್ಲ. ಅದಲ್ಲದೆ ಸಕಲವೇದಕ್ಕೆ ಮತ್ತು ಪ್ರಾಣಿಗಳಿಗೆ ಸದೃಶವಾದ ಪ್ರಮಾಣದಲ್ಲಿ ಬೇರೆ ವಸ್ತು ಇಲ್ಲವೇ ಇಲ್ಲ. ಆದ್ದರಿಂದಲೂ ಬೇರೆ ವಸ್ತುವನ್ನು ಗ್ರಹಿಸುವುದು ಯುಕ್ತವಲ್ಲ.

**ಉಪನಿಷತ್—ತಸ್ಯಾ ಉಪಸ್ಥಾನಮ್ । ಗಾಯತ್ರೀ ಅಸಿ । ಏಕಪದೀ, ದ್ವಿಪದೀ, ತ್ರಿಪದೀ, ಚತುಷ್ಪದೀ । ಅಪದ್ ಅಸಿ । ನ ಹಿ ಪದ್ಯಸೇ । ನಮಸ್ತೇ ತುರೀಯಾಯ ದರ್ಶತಾಯ ಪದಾಯ ಪರೋರಜಸೇ । 'ಅಸೌ ಅದೋ ಮಾ ಪ್ರಾಪದಿ'ತಿ ಯಂ ದ್ವಿಷ್ಯಾತ್ 'ಅಸಾವಸ್ಮೈ ಕಾಮೋ ಮಾ ಸಮೃದ್ಧೀ'ತಿ ವಾ, ನ ಹೈವಾಸ್ಮೈ ಸ ಕಾಮ ಋದ್ಧ್ಯತೇ । ಯಸ್ಮಾ ಏವಮುಪತಿಷ್ಠತೇ ಅಹಮದಃ ಪ್ರಾಪಮಿತಿ ವಾ ।**

ಗಾಯತ್ರೀ ಪ್ರತಿಪಾದ್ಯನಾದ ಶ್ರೀಹರಿಯ ಉಪಾಸನೆಯನ್ನು ಹೀಗೆ ಮಾಡಬೇಕು— 'ಗಾಯತ್ರೀ ಪ್ರತಿಪಾದ್ಯನಾದ ಶ್ರೀಹರಿಯೇ ! ನೀನು ಗಾಯತ್ರಿಯ ಒಂದು ಪಾದದಿಂದ ಪ್ರತಿಪಾದ್ಯನಾಗಿರುವಿ ಎರಡು ಪಾದಗಳಿಂದ ಪ್ರತಿಪಾದ್ಯನಾಗಿರುವಿ. ಮೂರು ಪಾದಗಳಿಂದ ಪ್ರತಿಪಾದ್ಯನಾಗಿರುವಿ. ನಾಲ್ಕು ಪಾದಗಳಿಂದ ಪ್ರತಿಪಾದ್ಯನಾಗಿರುವಿ. ಬ್ರಹ್ಮನನ್ನು ಬಿಟ್ಟು ಯಾರಿಂದಲೂ ಪೂರ್ಣವಾಗಿ ನೀನು ತಿಳಿಯಲ್ಪಡುವುದಿಲ್ಲ. ಪರೋರಜನೂ ದರ್ಶತನೂ ಆದ ಚತುರ್ಥ ಪಾದ ಪ್ರತಿಪಾದ್ಯ ಪಾಸ್ಯದೇವರೂಪನಾದ ನಿನಗೆ ನಮಸ್ಕಾರ'. ಹೀಗೆ ಗಾಯತ್ರಿಯ ಉಪಾಸನೆ ಮಾಡುವವನು 'ಈ ಶತ್ರುವು ಈ ಅಭೀಷ್ಟವನ್ನು ಹೊಂದದಿರಲಿ' ಎಂದು ಅಥವಾ 'ಈ ಅಭೀಷ್ಟವು ಈ ಶತ್ರುವಿಗೆ ದೊರಕದಿರಲಿ'ಎಂದು ಯಾರನ್ನು ದ್ವೇಷಿಸುವನೋ ಅವನಿಗೆ ಅಭೀಷ್ಟ ಸಿದ್ಧಿಸಲಾರದು, ಈ ಅಭೀಷ್ಟವನ್ನು ನಾನು ಪಡೆಯಬೇಕೆಂದು ಯಾವ ಅಭೀಷ್ಟಕ್ಕಾಗಿ ಉಪಾಸಕನು ಉಪಾಸನೆ ನಡೆಸುವನೋ ಆ ಅಭೀಷ್ಟ ಅವನಿಗೆ ಸಮೃದ್ಧಿಯಾಗಿ ದೊರಕುವುದು.

**ಭಾಷ್ಯ—ಅಷ್ಟಾಕ್ಷರತ್ವಾದ್ ಗಾಯತ್ರ್ಯಾಃ ಪ್ರೋಕ್ತಾ ಸೈಕಪದೀತಿ ಚ ।**
**ಪ್ರಣವೇನ ಸಹೈತಾಸ್ತು ಗಾಯತ್ರ್ಯಶ್ಚತುರಸ್ತದಾ ।**
**ಅಕಾರಾದ್ಯತಿಶಾಂತಾಂತಃ ಪ್ರಣವೋಽಷ್ಟಾಕ್ಷರೋ ಯತಃ ।**
**ಪಾದಃ ಪ್ರಣವಸಂಯುಕ್ತೋ ಗಾಯತ್ರೀ ಸಾ ಪೃಥಗ್ ಯದಾ ।**
**ದ್ವಿಪದೀತಿ ತದಾ ಪ್ರೋಕ್ತಾ ತ್ರಿಪದೀ ಸ್ವಪದೈಸ್ತ್ರಿಭಿಃ ।**

**ಚತುಷ್ಪದೀ ಸಪ್ರಣವಾ ಬ್ರಹ್ಮಣೋಽನ್ಯೈರ್ನ ಗಮ್ಯತೇ ।**
**ಅಪದೀ ಚ ತತಃ ಪ್ರೋಕ್ತಾ ಗಾಯತ್ರ್ಯೇವಮುಪಸ್ಥಿತಾ ।**

**ಅನುವಾದ**—ಗಾಯತ್ರಿಗೆ ಏಕಪದೀತ್ವ ವಿಪತ್ತಿ ಇದ್ದಾಗ ಗಾಯತ್ರೀಮಂತ್ರದ ಪ್ರತಿಯೊಂದು ಪಾದವನ್ನೂ ಪ್ರಣವವನ್ನೂ ಪ್ರತ್ಯೇಕವಾಗಿ ಗಾಯತ್ರೀ ಎಂದು ಪರಿಗಣಿಸಬಹುದು. ಏಕೆಂದರೆ ಗಾಯತ್ರಿಯಲ್ಲಿ ಎಂಟು ಅಕ್ಷರಗಳು ಇರುತ್ತವೆ. ಪ್ರಣವದಲ್ಲಿ ಅ ಉ ಮ ನಾದ ಬಿಂದು ಘೋಷ ಶಾಂತ ಅತಿಶಾಂತ ಎಂದು ಎಂಟು ಅಕ್ಷರಗಳಿವೆ. ಆದ್ದರಿಂದ ಪ್ರಣವವೇ ಒಂದು ಗಾಯತ್ರಿ ಮತ್ತು ಮೂರು ಪಾದಗಳೇ ಮೂರು ಗಾಯತ್ರಿಗಳು. ಇವೆಲ್ಲವುಗಳಿಂದ ಪ್ರತಿಪಾದ್ಯನಾದ ಶ್ರೀಹರಿ ಏಕಪಾದ ಪ್ರತಿಪಾದ್ಯನೆನಿಸುತ್ತಾನೆ. ಅವನು ಎರಡು ಪಾದಗಳಿಂದ ಪ್ರತಿಪಾದ್ಯ. ಏಕೆಂದರೆ ಪ್ರಣವವೇ ಒಂದು ಪಾದ. ಇಡೀ ಗಾಯತ್ರಿಯೇ ಒಂದು ಪಾದ. ಹೀಗೆ ಪರಿಗಣಿಸಿದಾಗ ಪ್ರಣವಯುಕ್ತ ಗಾಯತ್ರಿಯನ್ನು ದ್ವಿಪದಿ ಎಂದೂ ಹೇಳಬಹುದು. ಶ್ರೀಹರಿ ಮೂರುಪಾದಗಳಿಂದಲೂ ಪ್ರತಿಪಾದ್ಯ. ಏಕೆಂದರೆ ಪ್ರಣವವನ್ನು ಗಾಯತ್ರಿಯ ಪಾದ ಎಂದು ಪರಿಗಣಿಸದಿದ್ದರೆ ಗಾಯತ್ರಿ ತ್ರಿಪದಿಯಾಗುತ್ತದೆ. ಪ್ರಣವವೂ ಒಂದುಪಾದ ಎಂದು ಪರಿಗಣಿಸಿದಾಗ ಗಾಯತ್ರಿ ಚತುಷ್ಪದಿಯಾಗುತ್ತದೆ. ಶ್ರೀಹರಿಯು ನಾಲ್ಕು ಪಾದಗಳಿಂದಲೂ ಪ್ರತಿಪಾದ್ಯನೆನಿಸುತ್ತಾನೆ. ಚತುರ್ಮುಖ ಬ್ರಹ್ಮನಲ್ಲದೆ ಬೇರೆ ಯಾರೂ ಈ ಗಾಯತ್ರಿಯನ್ನು ಪೂರ್ಣವಾಗಿ ತಿಳಿಯಲಾರರು. ಆದ್ದರಿಂದ ಅದಕ್ಕೆ ಅಪದೀ ಎಂದೂ ಹೆಸರು. ಇಂತಹ ಗಾಯತ್ರಿಯಿಂದ ಪ್ರತಿಪಾದ್ಯನಾದ್ದರಿಂದ ಶ್ರೀಹರಿ ಅಪದ್ ಎನಿಸುತ್ತಾನೆ.

**ಭಾಷ್ಯ—ಕಾಮಾಪ್ರಾಪ್ತಿಮಪೂರ್ತಿಂ ವಾ ಶತ್ರವೇ ಸಾ ಕರಿಷ್ಯತಿ ।**
**ಅಸಾವದೋ ಮೈವ ಪ್ರಾಪನ್ನಾಸ್ಯೈ ಕಾಮಃ ಸಮೃದ್ಧ್ಯತಾಮ್ ।**
**ಉಪಸ್ಥಿತಾ ಚೇದಿತ್ಥಂ ಸಾ ಯದ್ಯದೋಽಹಂ ಸಮಾಪ್ನುಯಾಮ್ ।**
**ಇತಿ ಸಾ ಕಾಮಪೂರ್ತಿಂ ಚ ಸ್ವಸ್ಯ ಸಮ್ಯಕ್ ಕರಿಷ್ಯತಿ ।**
**ಸಮ್ಯಗ್ ಬ್ರಹ್ಮಪದಾವಾಪ್ತಿಂ ತದ್ಯೋಗ್ಯಾಂ ಮುಕ್ತಿಮೇವ ಚ ।**
**ಬ್ರಹ್ಮಣೋಪಾಸಿತೋ ದದ್ಯಾದ್ ಗಾಯತ್ರ್ಯಾ ಪುರುಷೋತ್ತಮಃ ।**
**ಅಲೇಪಂ ಸರ್ವಪಾಪೇಭ್ಯೋ ವಿಶೇಷೇಣ ಪ್ರತಿಗ್ರಹಾತ್ ।**
**ತದ್ಯೋಗ್ಯಾಂ ಮುಕ್ತಿಮನ್ಯೇಷಾಂ ಯಥಾಯೋಗ್ಯಮುಪಾಸಿತಃ ।**

**ಅನುವಾದ**—'ಇವನ ಅಪೇಕ್ಷೆ ನೆರವೇರದಿರಲಿ', 'ಇವನಿಗೆ ಇಷ್ಟವಾದ ವಸ್ತುಗಳು ಸಮೃದ್ಧವಾಗದಿರಲಿ' ಎಂದು ಗಾಯತ್ರಿಯನ್ನು ಉಪಾಸನೆ ಮಾಡಿದರೆ ಉಪಾಸಕನ ಶತ್ರುವಿನ ಅಪೇಕ್ಷೆ ನೆರವೇರದಂತೆ ಅಥವಾ ಇಷ್ಟವಸ್ತುಗಳು ಸಮೃದ್ಧಿಯಾಗದಂತೆ

ಅವಳು ಮಾಡುತ್ತಾಳೆ. 'ನಾನು ನನ್ನ ಅಪೇಕ್ಷೆಗಳನ್ನು ಹೊಂದುವಂತಾಗಲಿ' ಎಂದು ಗಾಯತ್ರಿಯ ಉಪಾಸನೆ ಮಾಡಿದರೆ ಅವಳು ಉಪಾಸಕನ ಅಪೇಕ್ಷೆಯನ್ನು ಚೆನ್ನಾಗಿ ನೆರವೇರಿಸುತ್ತಾಳೆ. ಆದ್ದರಿಂದಲೆ ಚತುರ್ಮುಖಬ್ರಹ್ಮನು ಗಾಯತ್ರೀಮಂತ್ರದಿಂದ ಪುರುಷೋತ್ತಮನಾದ ಶ್ರೀಹರಿಯನ್ನು ಉಪಾಸನೆ ಮಾಡುತ್ತಾನೆ. ಹರಿಯು ಅವನಿಗೆ ಬ್ರಹ್ಮ ಪದವಿಯನ್ನೂ ಯೋಗ್ಯವಾದ ಮುಕ್ತಿಯನ್ನೂ ಕೊಡುತ್ತಾನೆ. ಇತರರು ತಮ್ಮ ಯೋಗ್ಯತಾನುಗುಣವಾಗಿ ಗಾಯತ್ರೀಮಂತ್ರದಿಂದ ಹರಿಯ ಉಪಾಸನೆಯನ್ನು ಮಾಡಿದರೆ ಅವರಿಗೆ ಯಾವ ಪಾಪಗಳ ಲೇಪವೂ ಆಗದಂತೆ ಮಾಡುತ್ತಾನೆ. ವಿಶೇಷವಾಗಿ ಪ್ರತಿಗ್ರಹದಿಂದ ಉಂಟಾದ ಪಾಪದ ಲೇಪವಾಗದಂತೆ ಮಾಡುತ್ತಾನೆ. ಅವರಿಗೆ ಯೋಗ್ಯತಾನುಗುಣವಾದ ಮುಕ್ತಿಯನ್ನು ಕೊಡುತ್ತಾನೆ.

**ಉಪನಿಷತ್—ಏತದ್ಧ ವೈ ತಜ್ಜನಕೋ ವೈದೇಹೋ ಬುಡಿಲಮಾಶ್ವತರಾಶ್ವಿಮುವಾಚ । ಯನ್ನು ಹೋ ತದ್ ಗಾಯತ್ರೀವಿದಬ್ರೂಥಾ ಅಥ ಕಥಂ ಹಸ್ತೀಭೂತೋ ವಹಸೀತಿ । ಮುಖಂ ಹ್ಯಸ್ಯಾಃ ಸಮ್ರಾಣ್ಣ ವಿದಾಂಚಕಾರ ಇತಿ ಹೋವಾಚ । ತಸ್ಯಾ ಅಗ್ನಿರೇವ ಮುಖಮ್ । ಯದಿ ಹ ವಾ ಅಪಿ ಬಹ್ವಿವಾಗ್ನಾವಭ್ಯಾದಧತಿ ಸರ್ವಮೇವೈತತ್ ಸಂದಹತಿ । ಏವಂ ಹೈವ ಏವಂವಿದ್ ಯದ್ಯಪಿ ಬಹ್ವಿವ ಪಾಪಂ ಕುರುತೇ, ಸರ್ವಮೇವ ತತ್ ಸಂಪ್ಸಾಯ ಶುದ್ಧಃ ಪೂತೋಽಜರೋಽಮೃತಃ ಸಂಭವತಿ ।**

**ಇತಿ ಏಕೋನವಿಂಶಂ ಬ್ರಾಹ್ಮಣಂ ॥**

ವಿದೇಹರಾಜ ಜನಕನು ಅಶ್ವತರಾಶ್ವಗೋತ್ರದಲ್ಲಿ ಜನಿಸಿದ ಬುಡಿಲನನ್ನು ಹೀಗೆ ಕೇಳಿದನು "ಬುಡಿಲ! 'ನಾನು ಗಾಯತ್ರಿಯನ್ನು ತಿಳಿದಿದ್ದೇನೆ' ಎಂದು ನೀನು ಹೇಳುತ್ತಿರುವಿ. ಇದು ಆಶ್ಚರ್ಯಕರ. ನೀನು ಗಾಯತ್ರಿಯನ್ನು ತಿಳಿದಿದ್ದರೆ ಮೂರ್ಖನಾಗಿ ಏಕೆ ಪ್ರತಿಗ್ರಹದ ದೋಷವನ್ನು ಹೊತ್ತಿರುವಿ?" ಬುಡಿಲನು ಹೇಳಿದನು 'ರಾಜನೆ, ನಾನು ಗಾಯತ್ರಿಯನ್ನು ತಿಳಿದಿದ್ದರೂ ಗಾಯತ್ರಿಯ ಪ್ರಥಮಾಕ್ಷರಪ್ರತಿಪಾದ್ಯ ಭಗವದ್ರೂಪ ಯಾವುದೆಂದು ತಿಳಿದಿಲ್ಲ'. ಅಗ್ನಿಮಂಡಲದಲ್ಲಿರುವ ಅಗ್ನಿನಾಮಕ ಪರಶುರಾಮನೇ ಗಾಯತ್ರಿಯ ಪ್ರಥಮಾಕ್ಷರದಲ್ಲಿರುವ ದೇವತೆ. ಅಗ್ನಿಯಲ್ಲಿ ಬಹಳ ಇಂಧನವನ್ನು ಹಾಕಿದರೂ ಅಗ್ನಿ ಅವೆಲ್ಲವನ್ನೂ ಸುಡುತ್ತದೆ. ಅದರಂತೆ ಗಾಯತ್ರಿಯ ಪ್ರಥಮಾಕ್ಷರದಲ್ಲಿರುವ ಭಗವದ್ರೂಪವನ್ನು ತಿಳಿದವನು ಬಹು ಪಾಪವನ್ನು ಮಾಡಿದ್ದರೂ ಆ ಎಲ್ಲ ಪಾಪವನ್ನು ಪರಿಹರಿಸಿಕೊಂಡು ದೋಷವಿಲ್ಲದವನೂ, ಪವಿತ್ರನೂ ಮುಪ್ಪಿಲ್ಲದವನೂ ಮುಕ್ತನೂ ಆಗುತ್ತಾನೆ.

**ಭಾಷ್ಯ—ವಕ್ತ್ರವ್ಯೋ ಭಗವಾನ್ ವಿಷ್ಣುರ್ಗಾಯತ್ರ್ಯಾ ಮುಖಸಂಸ್ಥಿತಃ ।**

**ಅಗ್ನಿಮಂಡಲಗೋ ನಿತ್ಯಮಗ್ನಿನಾಮಾಗ್ರಣೀಸ್ತ್ವತಃ ।**
**ಗಾಯತ್ರ್ಯಾಸ್ತು ಪರಿಜ್ಞಾನಂ ಜ್ಞಾತೇ ಮುಖಗತೇ ಹರೌ ।**
**ಸಫಲಂ ಭವೇದನ್ಯಥಾ ತು ನ ಸಮ್ಯಕ್ ಫಲದಂ ಭವೇತ್ ।**
**ಗಾಯತ್ರೀಮುಖಗೋ ವಿಷ್ಣುರ್ಜ್ಞೇಯಃ ಸರ್ವಾತ್ಮನಾ ತತಃ ।**
**ಸಂಹರ್ತಾ ಸರ್ವದೋಷಾಣಾಮಗ್ನಿಸ್ಥಃ ಸರ್ವದಾಹಕಃ ।**
**ನಿತ್ಯಾನಂದೋಽಗ್ನಿವರ್ಣಶ್ಚ ರಾಮಃ ಪರಶುಭೃತ್ ಸದಾ ।**
**ಇತಿ ಗಾಯತ್ರೀಸಂಹಿತಾಯಾಮ್ ।**

**ಅನುವಾದ**—ಸರ್ವಪ್ರೇರಕನಾದುದರಿಂದ ಅಗ್ನಿನಾಮಕನಾಗಿ ಅಗ್ನಿಮಂಡಲದಲ್ಲಿರುವ ವಿಷ್ಣುವನ್ನು ಗಾಯತ್ರಿಯ ಪ್ರಥಮಾಕ್ಷರದಲ್ಲಿರುವವನು ಎಂದು ತಿಳಿಯಬೇಕು. ಪ್ರಥಮಾಕ್ಷರದಲ್ಲಿರುವ ಹರಿಯನ್ನು ತಿಳಿದರೆ ಮಾತ್ರ ಗಾಯತ್ರಿಯ ಜ್ಞಾನವು ಸಫಲವಾಗುವುದು. ಇಲ್ಲದಿದ್ದರೆ ಗಾಯತ್ರೀಜ್ಞಾನವು ಪೂರ್ಣಫಲವನ್ನು ಕೊಡುವುದಿಲ್ಲ. ಆದ್ದರಿಂದ ಗಾಯತ್ರಿಯ ಪ್ರಥಮಾಕ್ಷರದಲ್ಲಿರುವ ವಿಷ್ಣುವನ್ನು ತಿಳಿಯಲೇಬೇಕು. ಎಲ್ಲ ಇಂಧನವನ್ನೂ ಅಗ್ನಿ ದಹಿಸುವಂತೆ ಅಗ್ನಿಯಲ್ಲಿರುವ ನಿತ್ಯಾನಂದ ಸ್ವರೂಪನೂ, ಅಗ್ನಿಯ ಬಣ್ಣವುಳ್ಳವನೂ ಆದ ಪರಶುಧಾರಿ ರಾಮನು ಎಲ್ಲ ಪಾಪಗಳನ್ನೂ ಪರಿಹಾರ ಮಾಡುತ್ತಾನೆ, ಎಂದು ಗಾಯತ್ರೀಸಂಹಿತೆಯಲ್ಲಿ ಹೇಳಲಾಗಿದೆ.

ಹತ್ತೊಂಭತ್ತನೇ ಬ್ರಾಹ್ಮಣ ಮುಗಿಯಿತು.

**ಭಗವದನುಗ್ರಹ ಪ್ರಾರ್ಥನೆ :**

**ಉಪನಿಷತ್—ಹಿರಣ್ಮಯೇನ ಪಾತ್ರೇಣ ಸತ್ಯಸ್ಯಾಪಿಹಿತಂ ಮುಖಮ್ ।**
**ತತ್ ತ್ವಂ ಪೂಷನ್ ಅಪಾವೃಣು ಸತ್ಯಧರ್ಮಾಯ ದೃಷ್ಟಯೇ ॥**

ಬಂಗಾರದಂತೆ ಹೊಳೆಯುವ ಸೂರ್ಯಮಂಡಲದಿಂದ ಸದ್ಗುಣಪೂರ್ಣನಾದ ನಿನ್ನ ಸ್ವರೂಪವು ಮರೆಯಾಗಿದೆ. ಪೂರ್ಣನಾದ ಪರಮಾತ್ಮನೆ! ಭಗವಂತನನ್ನು ಹೃದಯದಲ್ಲಿ ಧರಿಸಿರುವ ಭಕ್ತನಾದ ನನಗೆ ನಿನ್ನ ದರ್ಶನವಾಗುವುದಕ್ಕಾಗಿ ಆ ಆವರಣವನ್ನು ದೂರ ಸರಿಸು.

**ಭಾಷ್ಯ—ಸೂರ್ಯಮಂಡಲನಾಮ್ನಾ ತು ಪಾತ್ರೇಣ ಸ್ವಮುಖಂ ಹರಿಃ ।**
**ಪಿಧಾಯೈವ ಜಗತ್ ಸರ್ವಂ ಪಶ್ಯತ್ಯಮಿತವಿಕ್ರಮಃ ।**
**ಉದಕಂ ಪೀಯತೇಽನೇನ ತಮಸಸ್ತ್ರಾಯತೇ ಜಗತ್ ।**
**ಯತೋಽತಃ ಪಾತ್ರಮುದ್ದಿಷ್ಟಂ ವಿದ್ವದ್ಭಿಃ ಸೂರ್ಯಮಂಡಲಮ್ ।**

**ಪೂಷಾ ಪೂರ್ಣತ್ವತೋ ವಿಷ್ಣುರ್ದೃಷ್ಟ್ವಯೋ ವಿಷ್ಣುಧರ್ಮಿಣಃ ।**
**ಸ್ವಮುಖಂ ಪ್ರಕಾಶಯೇದೇಕಂ ನಾನ್ಯಥಾ ತು ಕಥಂಚನ ।**

**ಅನುವಾದ**—ಅಮಿತಪರಾಕ್ರಮನಾದ ಹರಿಯು ಸೂರ್ಯಮಂಡಲವೆಂಬ ಪಾತ್ರೆಯಿಂದ ತನ್ನ ಸ್ವರೂಪವನ್ನು ಮುಚ್ಚಿಕೊಂಡು ಇಡೀ ಜಗತ್ತನ್ನು ನೋಡುತ್ತಾನೆ. ಸೂರ್ಯಮಂಡಲವು ನೀರನ್ನು 'ಪಾ' ಪಾನಮಾಡುತ್ತದೆ. 'ತ್ರ' ಕತ್ತಲಿನಿಂದ ಜಗತ್ತನ್ನು ರಕ್ಷಿಸುತ್ತದೆ. ಆದ್ದರಿಂದ ಅದನ್ನು ಪಾತ್ರ ಎಂದು ವಿದ್ವಾಂಸರು ಹೇಳುತ್ತಾರೆ. ವಿಷ್ಣು ಪೂರ್ಣಾನಂದನಾದುದರಿಂದ ಅವನಿಗೆ ಪೂಷನ್ ಎಂದು ಹೆಸರು. ವಿಷ್ಣು ತನ್ನನ್ನು ಧ್ಯಾನಮಾಡುವ ಭಕ್ತನಿಗೆ ಮಾತ್ರ ಸಾಕ್ಷಾತ್ಕಾರವಾಗಲು ಗುಣಪೂರ್ಣವಾದ ತನ್ನ ಸ್ವರೂಪವನ್ನು ವ್ಯಕ್ತಗೊಳಿಸುತ್ತಾನೆ. ಅನ್ಯರಿಗೆ ಹಾಗೆ ಮಾಡುವುದಿಲ್ಲ.

**ಉಪನಿಷತ್**–**ಪೂಷನ್ನೇಕರ್ಷೇ ಯಮ ಸೂರ್ಯ ಪ್ರಾಜಾಪತ್ಯ ವ್ಯೂಹ ರಶ್ಮೀನ್।**
**ಸಮೂಹ ತೇಜೋ ಯತ್ತೇ ರೂಪಂ ಕಲ್ಯಾಣತಮಂ ತತ್ತೇ ಪಶ್ಯಾಮಿ ।**

ಪೂರ್ಣನೇ, ಅಸದೃಶಪೂರ್ಣಜ್ಞಾನಿಯೇ, ಸರ್ವನಿಯಾಮಕನೇ, ಭಕ್ತರನ್ನು ತನ್ನವರೆಂದು ಸ್ವೀಕರಿಸಿದವನೇ, ಪ್ರಜಾಪತಿಯಿಂದ ಮಾತ್ರ ವಿಶೇಷವಾಗಿ ತಿಳಿಯಲ್ಪಟ್ಟವನೇ, ನಿನ್ನ ಸ್ವರೂಪಜ್ಞಾನವೆಂಬ ರಶ್ಮಿಗಳನ್ನು ವಿಸ್ತರಿಸು. ವೃತ್ತಿಜ್ಞಾನವೆಂಬ ತೇಜಸ್ಸನ್ನು ವಿಸ್ತರಿಸು. ಈ ಜ್ಞಾನದಿಂದ ನಿನ್ನ ನಿರತಿಶಯಮಂಗಳಕರವಾದ ರೂಪವನ್ನು ನಿನ್ನ ಅನುಗ್ರಹದಿಂದಲೇ ನೋಡುತ್ತೇನೆ.

**ಭಾಷ್ಯ**—**ನಾನ್ಯೋ ಯತ್ ತಾದೃಶೋ ಜ್ಞಾತಾ ತಸ್ಮಾದೇಕಋಷಿರ್ಹರಿಃ ।**
**ಯಮೋ ನಿಯಮನಾತ್ ಪ್ರೋಕ್ತಃ ಸೂರ್ಯ ಊರೀಕೃತೇರಯಮ್।**
**ಜ್ಞೇಯಃ ಪ್ರಜಾಪತೇರೇವ ಪ್ರಾಜಾಪತ್ಯಸ್ತತಃ ಸ್ಮೃತಃ ।**

**ಅನುವಾದ**—ಹರಿ ಏಕರ್ಷಿ ಎನಿಸಿದ್ದಾನೆ. ಏಕೆಂದರೆ ಅವನಂಥ ಜ್ಞಾನಿ ಮತ್ತೊಬ್ಬನಿಲ್ಲ. ಎಲ್ಲವನ್ನೂ ನಿಯಂತ್ರಿಸುವುದರಿಂದ ಅವನು ಯಮ ಎಂದೂ ಭಕ್ತರನ್ನು ತನ್ನವರೆಂದು ಅಂಗೀಕರಿಸುವುದರಿಂದ ಸೂರ್ಯ ಎಂದೂ ಕರೆಸಿಕೊಂಡಿದ್ದಾನೆ. ಪ್ರಜಾಪತಿಯು ಮಾತ್ರ ಇವನನ್ನು ವಿಶೇಷವಾಗಿ ತಿಳಿಯಬಲ್ಲನು. ಆದ್ದರಿಂದ ಇವನು ಪ್ರಾಜಾಪತ್ಯ ಎಂದು ಪ್ರಸಿದ್ಧ.

**ಉಪನಿಷತ್**—**ಯೋಽಸಾವಸೌ ಪುರುಷಃ ಸೋಽಹಮಸ್ಮಿ ।**

ಮುಖ್ಯಪ್ರಾಣನಲ್ಲಿರುವ ಪೂರ್ಣಪುರುಷನಾದ ಹರಿಯು ಅಹೇಯನಾದ್ದರಿಂದ

'ಅಹಮ್'ಎಂಬ ಹೆಸರನ್ನೂ, ಪ್ರಾಣರೂಪನೂ, ಅವಶ್ಯ ತಿಳಿಯಲ್ಪಡಬೇಕಾದವನೂ ಆದ್ದರಿಂದ 'ಅಸ್ಮಿ' ಎಂಬ ಹೆಸರನ್ನೂ ಹೊಂದಿದ್ದಾನೆ.

**ಭಾಷ್ಯ—ಪ್ರಾಣೇ ಸ್ಥಿತೋ ಯಃ ಪುರುಷಃ ಸೋಽಸೌ ಅಹಮಿತಿ ಸ್ಮೃತಃ ।**
**ಅಹೇಯತ್ವಾದ್ ಅಸುತ್ವಾಚ್ಚ ಮೇಯತ್ವಾಚ್ಚಾಸ್ಮಿನಾಮಕಃ ।**

**ಅನುವಾದ**—ಮುಖ್ಯಪ್ರಾಣನಲ್ಲಿ ಯಾವ ಪುರುಷನಿರುವನೋ ಅವನು ಅಹೇಯನಾದ್ದರಿಂದ ಅಹಮ್ ಎನಿಸಿದ್ದಾನೆ, ಪ್ರಾಣರೂಪನೂ ಅವಶ್ಯ ತಿಳಿಯಲ್ಪಡಬೇಕಾದವನೂ ಆದ್ದರಿಂದ 'ಅಸ್ಮಿ' ಎಂಬ ಹೆಸರನ್ನು ಹೊಂದಿದ್ದಾನೆ.

**ಉಪನಿಷತ್—ವಾಯುರನಿಲಮಮೃತಮಥೇದಂ ಭಸ್ಮಾಂತಂ ಶರೀರಮ್ ।**

ನಮ್ಮ ಶರೀರ ನಾಶವಾಗುತ್ತದೆ. ಆದರೆ ಅದರಲ್ಲಿರುವ ವಿಷ್ಣುವಿಗೆ ಮರಣ ದೋಷವಿಲ್ಲ. ಏಕೆಂದರೆ ವಿಷ್ಣುವನ್ನು ಆಶ್ರಯಿಸಿದ ವಾಯುದೇವರಿಗೇ ಮರಣ ವಿಲ್ಲ. ಅವರು ಅಮೃತರು. ಹೀಗಿರುವಾಗ ವಿಷ್ಣು ಅಮೃತ ಎಂದು ಬೇರೆ ಹೇಳ ಬೇಕಿಲ್ಲ.

**ಭಾಷ್ಯ—ಅದೋಷತ್ವಾದ ಇತ್ಯುಕ್ತೋ ವಾಯುಸ್ತನ್ನಿಲಯೋ ಯತಃ ।**
**ಅನಿಲಂ ತತ ಏವಾಸಾವಮೃತಂ ಚೇತಿ ಕೀರ್ತ್ಯತೇ ।**
**ತದಾಶ್ರಯೋಽಪಿ ಹ್ಯಮೃತಃ ಕಿಮು ಸಾಕ್ಷಾತ್ ಸ್ವಯಂ ಹರಿಃ ।**

**ಅನುವಾದ**—ವಿಷ್ಣು ದೋಷರಹಿತನಾದ್ದರಿಂದ ಅವನಿಗೆ 'ಅ' ಎಂದು ಹೆಸರು ವಾಯುದೇವರು ಅವನನ್ನು ಆಶ್ರಯಿಸಿದ್ದಾರೆ. ಆದ್ದರಿಂದಲೇ ಅವರು ಅನಿಲ ಎನಿಸಿದ್ದಾರೆ. ಅವರು ಮರಣ ರಹಿತರು ಎಂದು ಜ್ಞಾನಿಗಳು ಹೇಳುತ್ತಾರೆ. ಹರಿ ಯನ್ನು ಆಶ್ರಯಿಸಿದವರೇ ಹೀಗೆ ಮರಣರಹಿತರಾಗಿರುವಾಗ ಸ್ವಯಂ ಹರಿ ಮರಣ ರಹಿತ ಎಂದು ಬೇರೆ ಹೇಳಬೇಕೆ ?

**ಉಪನಿಷತ್—ಓಂ ಕ್ರತೋ ಸ್ಮರ ಕೃತಂ ಸ್ಮರ ಕ್ರತೋ ಸ್ಮರ ಕೃತಂ ಸ್ಮರ ।**

ಗುಣಪೂರ್ಣನೇ ! ಜ್ಞಾನರೂಪನೇ! ದಯವಿಟ್ಟು ನನ್ನನ್ನು ಅನುಗ್ರಹಿಸು. ನನ್ನ ಧ್ಯಾನ ಮೊದಲಾದ ಸತ್ಕರ್ಮಗಳನ್ನು ಗಮನಿಸಿ ದಯವಿಟ್ಟು ಅನುಗ್ರಹಿಸು. ಜ್ಞಾನರೂಪನೆ! ನನ್ನನ್ನು ದಯವಿಟ್ಟು ಅನುಗ್ರಹಿಸು ನನ್ನ ಧ್ಯಾನ ಮೊದಲಾದ ಸತ್ಕರ್ಮಗಳನ್ನು ದಯವಿಟ್ಟು ಗಮನಿಸಿ ಅನುಗ್ರಹಿಸು.

**ವಿವರಣೆ**—ಮಂತ್ರದಲ್ಲಿರುವ ಸ್ಮರ ಪದಕ್ಕೆ ನೆನೆಸಿಕೋ ಅಂದರೆ ಅನುಗ್ರಹಿಸು ಎಂದು ಅರ್ಥ. 'ಲಾಭ ಅನುಕೂಲಗಳನ್ನು ನನಗೂ ಸಿಗುವಂತೆ ಮಾಡು' ಎಂಬ ಅಭಿಪ್ರಾಯದಿಂದ 'ನನ್ನನ್ನು ಮರೆಯಬೇಡ' 'ನನ್ನನ್ನು ನೆನೆಸಿಕೋ' ಎಂಬ ಪ್ರಯೋಗ ಲೋಕದಲ್ಲಿ ರೂಢಿಯಲ್ಲಿದೆ.

**ಭಾಷ್ಯ—ಕ್ರತುಶ್ಚ ಜ್ಞಾನರೂಪತ್ವಾತ್ ಸ ಏವ ಹಿ ಜನಾರ್ದನಃ ।**

**ಅನುವಾದ**—ಜ್ಞಾನರೂಪನಾದ್ದರಿಂದ ಕ್ರತು ಎನಿಸಿದವನೂ ಆ ಜನಾರ್ದನನೆ.

**ಉಪನಿಷತ್—ಅಗ್ನೇ ನಯ ಸುಪಥಾ ರಾಯೇ ಅಸ್ಮಾನ್**
**ವಿಶ್ವಾನಿ ದೇವ ವಯುನಾನಿ ವಿದ್ವಾನ್ ।**
**ಯುಯೋಧ್ಯಸ್ಮಜ್ಜುಹುರಾಣಮೇನೋ**
**ಭೂಯಿಷ್ಠಾಂ ತೇ ನಮಉಕ್ತಿಂ ವಿಧೇಮ ॥**

ಅಸ್ವತಂತ್ರ ಜಗತ್ತಿಗೆ ಪ್ರೇರಕನಾದ ಕ್ರೀಡಾದಿ ಗುಣವಿಶಿಷ್ಟನಾದ ಹರಿಯೇ! ನಮ್ಮ ಕರ್ಮಗಳನ್ನು ತಿಳಿದಿರುವ ನೀನು ನಮ್ಮನ್ನು ಮುಕ್ತಿಗಾಗಿ ಸನ್ಮಾರ್ಗದಲ್ಲಿ ಕರೆದು ಕೊಂಡು ಹೋಗು. ನಮ್ಮನ್ನು ಅಲ್ಪರನ್ನಾಗಿಸುವ ಪಾಪಗಳನ್ನು ದಯವಿಟ್ಟು ನಮ್ಮಿಂದ ದೂರೀಕರಿಸು. ನಾವು ನಿನ್ನನ್ನು ಜ್ಞಾನಭಕ್ತಿಪೂರ್ವಕವಾಗಿ ನಮಸ್ಕರಿಸುತ್ತೇವೆ.

**ಭಾಷ್ಯ—ಸೋಽಗ್ನಿರಂಗಪ್ರಣೇತೃತ್ವಾದ್ ವಿಶ್ವಜ್ಞಾನ ವಿದಾಂ ವರಃ । ಇತಿ ಚ । ಜುಹುರಾಣಮ್ ಅಲ್ಪಂ ಕುರ್ವತ್ । 'ನ ವಾ ಅಹಮಿಮಂ ವಿಜಾನಾತಿ' ಇತಿವತ್ ಸರ್ವತ್ರಾಪ್ಯಹಂಶಬ್ದೋಽಹೇಯವಾಚ್ಯೇವ ।**

**ಇತಿ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯ ವಿರಚಿತೇ**
**ಶ್ರೀಮದ್ ಬೃಹದಾರಣ್ಯಕೋಪನಿಷದ್ಭಾಷ್ಯೇ ಪಂಚಮೋಽಧ್ಯಾಯಃ ॥**

ಸರ್ವಜ್ಞಶ್ರೇಷ್ಠನಾದ ಆ ಹರಿ 'ಅಗ' ಅಂದರೆ ಅಸ್ವತಂತ್ರ ಜಗತ್ತಿಗೆ 'ನಿ' ಪ್ರೇರಕನಾದ್ದರಿಂದ ಅಗ್ನಿ ಎಂಬ ಹೆಸರುಳ್ಳವನು. ಜುಹುರಾಣಮ್ ಎಂದರೆ ಅಲ್ಪನನ್ನಾಗಿಸುವ ಎಂದರ್ಥ. 'ನ ವಾ ಅಹಮಿಮಂ ವಿಜಾನಾತಿ' ಎಂಬ ವಾಕ್ಯದಲ್ಲಿ ಹೇಗೋ ಹಾಗೆ ಎಲ್ಲಕಡೆಯೂ ಅಹಂ ಶಬ್ದವು ಅಹೇಯ ಎಂಬ ಅರ್ಥವನ್ನೇ ಹೇಳುತ್ತದೆ.

**ವಿವರಣೆ**—'ನ ವಾ ಅಹಮಿಮಂ ವಿಜಾನಾತಿ' ಎಂಬ ವಾಕ್ಯದಲ್ಲಿ ಅಹಂ

ಶಬ್ದಕ್ಕೆ ಅಷೇಯ ಎಂದು ಅರ್ಥವನ್ನು ಭಾಷ್ಯದಲ್ಲಿ ಹಿಂದೆ ಚೆನ್ನಾಗಿ ವಿವರಿಸಲಾಗಿದೆ. ಆದ್ದರಿಂದ ಈ ಅಧ್ಯಾಯದ ಏಳನೆಯ ಬ್ರಾಹ್ಮಣದ 'ತಸ್ಯೋಪನಿಷದಹಮ್' ಎಂಬ ವಾಕ್ಯದಲ್ಲಿ ಮತ್ತು ಇಪ್ಪತ್ತನೆಯ ಬ್ರಾಹ್ಮಣದ 'ಯೋऽಸಾವಸೌ ಪುರುಷಃ ಸೋऽಹಮಸ್ಮಿ' ಎಂಬ ವಾಕ್ಯದಲ್ಲಿ ಅಹಮ್ ಶಬ್ದಕ್ಕೆ ಅಹೇಯ ಎಂದು ಅರ್ಥ ಹೇಳುವುದು ಅನುಚಿತವಲ್ಲ.

ಇಪ್ಪತ್ತನೆಯ ಬ್ರಾಹ್ಮಣ ಮುಗಿಯಿತು.

ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯ ವಿರಚಿತ
ಶ್ರೀ ಬೃಹದಾರಣ್ಯಕಭಾಷ್ಯದಲ್ಲಿ ಐದನೆ ಅಧ್ಯಾಯ ಮುಗಿಯಿತು

## ಆರನೆ ಅಧ್ಯಾಯ

**ಉಪನಿಷತ್—ಓಂ । ಯೋ ಹ ವೈ ಜ್ಯೇಷ್ಠಂ ಚ ಶ್ರೇಷ್ಠಂ ಚ ವೇದ ಜ್ಯೇಷ್ಠಶ್ಚ ಶ್ರೇಷ್ಠಶ್ಚ ಸ್ವಾನಾಂ ಭವತಿ । ಪ್ರಾಣೋ ವೈ ಜ್ಯೇಷ್ಠಶ್ಚ ಶ್ರೇಷ್ಠಶ್ಚ । ಜ್ಯೇಷ್ಠಶ್ಚ ಶ್ರೇಷ್ಠಶ್ಚ ಸ್ವಾನಾಂ ಭವತ್ಯಪಿ ಚ ಯೇಷಾಂ ಬುಭೂಷತಿ ಯ ಏವಂ ವೇದ ।**

ಯಾರು ವಯಸ್ಸಿನಿಂದಲೂ ಗುಣದಿಂದಲೂ ಉತ್ತಮನಾದವನನ್ನು ಉಪಾಸನೆ ಮಾಡುವನೋ ಅವನು ತನ್ನ ಸಮಾನಿಕರಿಗಿಂತ ವಯಸ್ಸಿನಲ್ಲಿಯೂ, ಗುಣದಲ್ಲಿಯೂ ಉತ್ತಮನೆನಿಸುತ್ತಾನೆ. ಮುಖ್ಯವಾಯುವೇ ವಯಸ್ಸಿನಲ್ಲೂ ಗುಣದಲ್ಲೂ ಉತ್ತಮ. ಇದು ಪ್ರಸಿದ್ಧ. ಯಾರು ಹೀಗೆ ತಿಳಿದು ಉಪಾಸನೆ ಮಾಡುವನೋ ಅವನು ಸಂಸಾರದಲ್ಲಿ ಮಾತ್ರವಲ್ಲದೆ ಮುಕ್ತಿಯಲ್ಲಿಯೂ ತನ್ನ ಸಮಾನಿಕರಿಗಿಂತ ವಯಸ್ಸಿನಲ್ಲೂ ಗುಣದಲ್ಲಿಯೂ ಉತ್ತಮನೆನಿಸುತ್ತಾನೆ. ಯಾರ ನಡುವೆ ಉತ್ತಮನೆನಿಸಲು ಬಯಸುವನೋ ಅವರ ನಡುವೆ ಅವನು ಉತ್ತಮನೆನಿಸುತ್ತಾನೆ.

**ಉಪನಿಷತ್ತು—ಯೋ ಹ ವೈ ವಸಿಷ್ಠಾಂ ವೇದ ವಸಿಷ್ಠಃ ಸ್ವಾನಾಂ ಭವತಿ । ವಾಗ್ ವೈ ವಸಿಷ್ಠಾ । ವಸಿಷ್ಠಃ ಸ್ವಾನಾಂ ಭವತ್ಯಪಿ ಚ ಯೇಷಾಂ ಬುಭೂಷತಿ ಯ ಏವಂ ವೇದ । ಯೋ ಹ ವೈ ಪ್ರತಿಷ್ಠಾಂ ವೇದ ಪ್ರತಿತಿಷ್ಠತಿ ಸಮೇ ಪ್ರತಿತಿಷ್ಠತಿ ದುರ್ಗೇ । ಚಕ್ಷುರ್ವೈ ಪ್ರತಿಷ್ಠಾ । ಚಕ್ಷುಷಾ ಹಿ ಸಮೇ ಚ ದುರ್ಗೇ ಚ ಪ್ರತಿತಿಷ್ಠತಿ । ಪ್ರತಿತಿಷ್ಠತಿ ಸಮೇ ಪ್ರತಿತಿಷ್ಠತಿ ದುರ್ಗೇ ಯ ಏವಂ ವೇದ ।**

ಯಾರು ವಾಸಿಸುವವರಲ್ಲಿ ಶ್ರೇಷ್ಠನನ್ನು ತಿಳಿಯುತ್ತಾನೆಯೋ ಅವನು ತನ್ನ

ಸಮಾನಿಕರಲ್ಲಿ ಶ್ರೇಷ್ಠನಾಗುತ್ತಾನೆ. ವಾಗಿಂದ್ರಿಯಾಭಿಮಾನಿಯಾದ ವಹ್ನಿಯೇ ವಾಸಿಸುವರಲ್ಲಿ ಶ್ರೇಷ್ಠ. ಇದು ಪ್ರಸಿದ್ಧ. ಯಾರು ವಾಸಿಸುವವರಲ್ಲಿ ಶ್ರೇಷ್ಠನನ್ನು ತಿಳಿಯುತ್ತಾನೆಯೋ ಅವನು ಸಂಸಾರದಲ್ಲಿ ಮಾತ್ರವಲ್ಲದೆ ಮುಕ್ತಿಯಲ್ಲಿಯೂ ತನ್ನ ಸಮಾನಿಕರಲ್ಲಿ ಶ್ರೇಷ್ಠನೆನಿಸುತ್ತಾನೆ. ಯಾರು ಉತ್ಕೃಷ್ಟ ಸ್ಥಿತಿಗೆ ಕಾರಣನಾದವನನ್ನು ತಿಳಿಯುತ್ತಾನೆಯೋ ಅವನು ಈ ಲೋಕದಲ್ಲಿ ಉತ್ಕೃಷ್ಟ ಸ್ಥಿತಿಯನ್ನು ಬಯಸಿದರೆ ಈ ಲೋಕದಲ್ಲಿಯೂ, ದುರ್ಗಮವಾದ ಸ್ವರ್ಗಾದಿ ಲೋಕದಲ್ಲಿರಲು ಬಯಸಿದರೆ ಆ ಸ್ವರ್ಗಾದಿ ಲೋಕದಲ್ಲಿಯೂ ಉತ್ಕೃಷ್ಟ ಸ್ಥಿತಿಯನ್ನು ಹೊಂದುವನು. ಉತ್ಕೃಷ್ಟ ಸ್ಥಿತಿಗೆ ಕಾರಣನಾರೆಂದರೆ ಸೂರ್ಯನೇ. ಇದು ಪ್ರಸಿದ್ಧ. ಏಕೆಂದರೆ ಚಕ್ಷುರಭಿಮಾನಿಯಾದ ಸೂರ್ಯನಿಂದಲೇ ಇಹ ಲೋಕದಲ್ಲಿ ಸಮತಲವಾದ ಪ್ರದೇಶದಲ್ಲಿಯೂ ಉನ್ನತವಾದ ಪ್ರದೇಶದಲ್ಲಿಯೂ ಉತ್ಕೃಷ್ಟ ಸ್ಥಿತಿಯನ್ನು ಹೊಂದುತ್ತಾನೆ. ಯಾರು ಸೂರ್ಯನನ್ನು ಉತ್ಕೃಷ್ಟ ಸ್ಥಿತಿ ಕಾರಣನೆಂದು ತಿಳಿಯುವನೋ ಅವನು ಇಹದಲ್ಲಿ ಮಾತ್ರವಲ್ಲ, ಮುಕ್ತಿಯಲ್ಲಿಯೂ ಎಲ್ಲ ಮುಕ್ತರಿಗೂ ಸುಲಭವಾಗಿ ಸಿಗುವಂಥ ಸಾಂತಾನಿಕ ಲೋಕದಲ್ಲಿರುತ್ತಾನೆ. ಅನ್ಯರಿಗೆ ದುರ್ಗಮವಾದ ವಿಷ್ಣುಲೋಕದಲ್ಲಿರಲು ಬಯಸಿದರೆ ಅಲ್ಲಿಯೂ ಇರುತ್ತಾನೆ.

**ಉಪನಿಷತ್—ಯೋ ಹ ವೈ ಸಂಪದಂ ವೇದ ಸಂ ಹಾಸ್ಮೈ ಪದ್ಯತೇ ಯಂ ಕಾಮಂ ಕಾಮಯತೇ । ಶ್ರೋತ್ರಂ ವೈ ಸಂಪತ್ । ಶ್ರೋತ್ರೇ ಹೀಮೇ ಸರ್ವೇ ವೇದಾ ಅಭಿ ಸಂಪನ್ನಾಃ । ಸಂ ಹಾಸ್ಮೈ ಪದ್ಯತೇ ಯಂ ಕಾಮಂ ಕಾಮಯತೇ ಯ ಏವಂ ವೇದ । ಯೋ ಹ ವಾ ಆಯತನಂ ವೇದಾऽಯತನಂ ಸ್ವಾನಾಂ ಭವತ್ಯಾಯತನಂ ಜನಾನಾಂ । ಮನೋ ವಾ ಆಯತನಂ । ಆಯತನಂ ಸ್ವಾನಾಂ ಭವತಿ ಆಯತನಂ ಜನಾನಾಂ ಯ ಏವಂ ವೇದ । ಯೋ ಹ ವೈ ಪ್ರಜಾಪತಿಂ ವೇದ ಪ್ರಜಾಯತೇ ಹ ಪ್ರಜಯಾ ಪಶುಭಿಃ । ರೇತೋ ವೈ ಪ್ರಜಾಪತಿಃ । ಪ್ರಜಾಯತೇ ಹ ಪ್ರಜಯಾ ಪಶುಭಿರ್ಯ ಏವಂ ವೇದ ।**

ಯಾರು ಸರ್ವವೇದ ಪ್ರಾಪ್ತಿಗೆ ಕಾರಣನನ್ನು ತಿಳಿಯುತ್ತಾನೆಯೋ ಅವನು ಯಾವ ವಸ್ತುವನ್ನು ಬಯಸಿದರೂ ಅದು ಸಿದ್ಧಿಸುತ್ತದೆ. ಶ್ರೋತ್ರಾಭಿಮಾನಿಯಾದ ಇಂದ್ರನೇ ಸರ್ವವೇದ ಪ್ರಾಪ್ತಿಗೆ ಕಾರಣ. ಇದು ಪ್ರಸಿದ್ಧ. ಏಕೆಂದರೆ ಈ ಎಲ್ಲ ವೇದಗಳೂ ಶ್ರೋತ್ರದಿಂದಲೇ ಸಿಗುತ್ತವೆ. ಯಾರು ಇಂದ್ರನನ್ನು ಸರ್ವವೇದ ಪ್ರಾಪ್ತಿಕಾರಣನೆಂದು ತಿಳಿಯುವನೋ ಅವನಿಗೆ ಸಂಸಾರದಲ್ಲಿ ಮಾತ್ರವಲ್ಲದೆ ಮುಕ್ತಿಯಲ್ಲಿಯೂ ಬಯಸಿದುದೆಲ್ಲಾ ಸಿದ್ಧಿಸುತ್ತದೆ. ಯಾರು ಆಶ್ರಯವನ್ನು ತಿಳಿಯುತ್ತಾನೆಯೋ ಅವನು ಸ್ವಜಾತಿಯವರಿಗೂ ಮತ್ತು ಬೇರೆ ಜನರಿಗೂ ಆಶ್ರಯ

ನಾಗುತ್ತಾನೆ. ಮನೋಽಭಿಮಾನಿಗಳಾದ ಶೇಷ ರುದ್ರ ಗರುಡರೇ ಆಶ್ರಯರು. ಇದು ಪ್ರಸಿದ್ಧ. ಯಾರು ಆಶ್ರಯವನ್ನು ತಿಳಿಯುವನೋ ಅವನು ಸಂಸಾರದಲ್ಲಿ ಮಾತ್ರವಲ್ಲದೆ ಮುಕ್ತಿಯಲ್ಲಿಯೂ ತನ್ನ ಜಾತಿಯವರಿಗೂ ಮತ್ತು ಭಿನ್ನ ಜಾತಿಯವರಿಗೂ ಆಶ್ರಯನಾಗುತ್ತಾನೆ ಯಾರು ಸಂತಾನದ ಉತ್ಪತ್ತಿಗೆ ಕಾರಣವನ್ನು ತಿಳಿಯುತ್ತಾನೋ ಅವನು ಸಂತತಿಗಳಿಂದಲೂ ಪಶುಗಳಿಂದಲೂ ಯುಕ್ತನಾಗುತ್ತಾನೆ. ರೇತೋಽಭಿಮಾನಿಯಾದ ವರುಣನೇ ಸಂತಾನೋತ್ಪತ್ತಿಗೆ ಕಾರಣ. ಇದು ಪ್ರಸಿದ್ಧ. ಸಂತಾನೋತ್ಪತ್ತಿಗೆ ಕಾರಣವನ್ನು ತಿಳಿದವನು ಸಂಸಾರದಲ್ಲಿ ಮಾತ್ರವಲ್ಲದೆ ಮುಕ್ತಿಯಲ್ಲಿಯೂ ಸಹ ಪ್ರಜೆಗಳಿಂದಲೂ ಪಶುಗಳಿಂದಲೂ ಯುಕ್ತನಾಗುತ್ತಾನೆ.

**ಉಪನಿಷತ್—ತೇ ಹೇಮೇ ಪ್ರಾಣಾ ಅಹಂಶ್ರೇಯಸೇ ವಿವದಮಾನಾ ಬ್ರಹ್ಮ ಜಗ್ಮುಃ । ತದ್ಧೋಚುಃ 'ಕೋ ನೋ ವಸಿಷ್ಠ' ಇತಿ । ತದ್ಧೋವಾಚ 'ಯಸ್ಮಿನ್ ವ ಉತ್ಕ್ರಾಂತ ಇದಂ ಶರೀರಂ ಪಾಪೀಯೋ ಮನ್ಯತೇ ಸ ವೋ ವಸಿಷ್ಠ' ಇತಿ ।**

ಪ್ರಾಣ ವಾಕ್ ಮೊದಲಾದ ದೇವತೆಗಳು 'ನಾನೇ ಶ್ರೇಷ್ಠ, ನಾನೇ ಶ್ರೇಷ್ಠ' ಎಂದು ಸ್ಪರ್ಧೆ ಮಾಡುತ್ತಾ ಪರಬ್ರಹ್ಮನ ಬಳಿಗೆ ಹೋದರು. ನಮ್ಮಲ್ಲಿ ಯಾರು ವಾಸ ಮಾಡುವವರಲ್ಲಿ ಶ್ರೇಷ್ಠರು ಎಂದು ಕೇಳಿದರು. ಪರಮಾತ್ಮನು ಹೇಳಿದನು, 'ನಿಮ್ಮಲ್ಲಿ ಯಾರು ಈ ಬ್ರಹ್ಮನ ಶರೀರದಿಂದ ಹೊರಟ ತಕ್ಷಣ ಅದನ್ನು ಶವದಂತೆ ಜನರು ತಿಳಿಯುತ್ತಾರೋ ಅವರು ನಿಮ್ಮಲ್ಲಿ ಶ್ರೇಷ್ಠರು' ಎಂದು.

**ಉಪನಿಷತ್—ವಾಗ್ಘೋಚ್ಚಕ್ರಾಮ । ಸಾ ಸಂವತ್ಸರಂ ಪ್ರೋಷ್ಯಾಽಗತ್ಯೋ-ವಾಚ 'ಕಥಮಶಕತ ಮದೃತೇ ಜೀವಿತುಮಿ'ತಿ । ತೇ ಹೋಚುಃ 'ಯಥಾಽಕಲಾ ಅವದಂತೋ ವಾಚಾ ಪ್ರಾಣಂತಃ ಪ್ರಾಣೇನ ಪಶ್ಯಂತ-ಶ್ಚಕ್ಷುಷಾ ಶೃಣ್ವಂತಃ ಶ್ರೋತ್ರೇಣ ವಿದ್ವಾಂಸೋ ಮನಸಾ ಪ್ರಜಾಯ-ಮಾನಾ ರೇತಸಾ ಏವಮಜೀವಿಷ್ಮೇ'ತಿ । ಪ್ರವಿವೇಶ ಹ ವಾಕ್ ।**

ಮೊದಲಿಗೆ ವಾಗಭಿಮಾನಿದೇವನು ಬ್ರಹ್ಮಶರೀರದಿಂದ ಹೊರಗೆ ಹೋದನು. ಆವನು ಒಂದು ವರ್ಷಕಾಲ ಪ್ರವಾಸ ಮಾಡಿ ಬಂದು 'ದೇವತೆಗಳೇ! ನಾನಿಲ್ಲದೆ ಹೇಗೆ ಬದುಕಿರುವಿರಿ?' ಎಂದು ಕೇಳಿದನು. ಆ ದೇವತೆಗಳು 'ಹೇಗೆ ಮೂಕರಾದವರು ಬಾಯಿಯಿಂದ ಮಾತನಾಡದೆ ಇದ್ದರೂ ಪ್ರಾಣದಿಂದ ಉಸಿರಾಡುತ್ತಾ, ಕಣ್ಣಿನಿಂದ ನೋಡುತ್ತಾ, ಕಿವಿಯಿಂದ ಕೇಳುತ್ತಾ, ಮನಸ್ಸಿನಿಂದ ತಿಳಿಯುತ್ತಾ, ರೇತಸ್ಸಿನಿಂದ

ಸಂತಾನೋತ್ಪತ್ತಿಯನ್ನು ಮಾಡುತ್ತಾ ಇರುತ್ತಾರೋ ಹಾಗೆಯೇ ಜೀವಿಸಿಯೇ ಇದ್ದೇವೆ' ಎಂದು ಹೇಳಿದರು. ಅನಂತರ ವಾಗಭಿಮಾನಿ ದೇವನು ಬ್ರಹ್ಮನ ಶರೀರವನ್ನು ಪ್ರವೇಶಿಸಿದನು.

**ಉಪನಿಷತ್—ಚಕ್ಷುರ್ಹೋಚ್ಚಕ್ರಾಮ । ತತ್ ಸಂವತ್ಸರಂ ಪ್ರೋಷ್ಯಾಽಗತ್ಯೋವಾಚ 'ಕಥಮಶಕತ ಮದೃತೇ ಜೀವಿತುಮಿ'ತಿ । ತೇ ಹೋಚುಃ 'ಯಥಾಽಂಧಾ ಅಪಶ್ಯಂತಶ್ಚಕ್ಷುಷಾ ಪ್ರಾಣಂತಃ ಪ್ರಾಣೇನ ವದಂತೋ ವಾಚಾ ಶೃಣ್ವಂತಃ ಶ್ರೋತ್ರೇಣ ವಿದ್ವಾಂಸೋ ಮನಸಾ ಪ್ರಜಾಯಮಾನಾ ರೇತಸೈವಮಜೀವಿಷ್ಮೇ'ತಿ । ಪ್ರವಿವೇಶ ಹ ಚಕ್ಷುಃ ।**

ಚಕ್ಷುರಭಿಮಾನಿ ದೇವತೆಯು ಬ್ರಹ್ಮದೇವರ ಶರೀರದಿಂದ ಹೊರಗೆ ಬಂದನು. ಆವನು ಒಂದು ಸಂವತ್ಸರ ಕಾಲ ಪ್ರವಾಸಮಾಡಿ ಪುನಃ ಬಂದು ದೇವತೆಗಳೇ!ನನ್ನನ್ನು ಬಿಟ್ಟು ನೀವು ಹೇಗೆ ಬದುಕಿದಿರಿ? ಎಂದು ಕೇಳಿದನು. ಆಗ ಆ ದೇವತೆಗಳು 'ಹೇಗೆ ಕುರುಡರು ಕಣ್ಣಿನಿಂದ ನೋಡದೆ ಇದ್ದರೂ ಪ್ರಾಣದಿಂದ ಉಸಿರಾಡುತ್ತಾ, ವಾಗಿಂದ್ರಿಯದಿಂದ ಮಾತನಾಡುತ್ತಾ, ಕಿವಿಯಿಂದ ಕೇಳುತ್ತಾ, ಮನಸ್ಸಿನಿಂದ ತಿಳಿಯುತ್ತಾ, ರೇತಸ್ಸಿನಿಂದ ಸಂತಾನೋತ್ಪತ್ತಿಯನ್ನು ಮಾಡುತ್ತಾರೋ ಹಾಗೆಯೇ ಬದುಕಿಯೇ ಇದ್ದೇವೆ' ಎಂದು ಹೇಳಿದರು. ಅನಂತರ ಚಕ್ಷುರಭಿಮಾನಿ ದೇವತೆಯು ಬ್ರಹ್ಮನ ಶರೀರವನ್ನು ಪ್ರವೇಶಿಸಿದನು.

**ಉಪನಿಷತ್—ಶ್ರೋತ್ರಂ ಹೋಚ್ಚಕ್ರಾಮ । ತತ್ ಸಂವತ್ಸರಂ ಪ್ರೋಷ್ಯಾಽಗತ್ಯೋವಾಚ 'ಕಥಮಶಕತ ಮದೃತೇ ಜೀವಿತುಮಿ'ತಿ । ತೇ ಹೋಚುಃ 'ಯಥಾ ಬಧಿರಾ ಅಶೃಣ್ವಂತಃ ಶ್ರೋತ್ರೇಣ ಪ್ರಾಣಂತಃ ಪ್ರಾಣೇನ ವದಂತೋ ವಾಚಾ ಪಶ್ಯಂತಶ್ಚಕ್ಷುಷಾ ವಿದ್ವಾಂಸೋ ಮನಸಾ ಪ್ರಜಾಯಮಾನಾ ರೇತಸೈವಮಜೀವಿಷ್ಮೇ'ತಿ । ಪ್ರವಿವೇಶ ಹ ಶ್ರೋತ್ರಮ್ ।**

ಶ್ರೋತ್ರಾಭಿಮಾನಿದೇವತೆಯು ಬ್ರಹ್ಮದೇವರ ಶರೀರದಿಂದ ಹೊರಬಂದನು. ಆವನು ಒಂದು ಸಂವತ್ಸರಕಾಲ ಪ್ರವಾಸಮಾಡಿ ಪುನಃ ಬಂದು ದೇವತೆಗಳೇ!ನಾನಿಲ್ಲದೆ ಹೇಗೆ ಬದುಕಿದಿರಿ? ಎಂದು ಕೇಳಿದನು. ಆಗ ಆ ದೇವತೆಗಳು 'ಹೇಗೆ ಕಿವುಡರು ಕಿವಿಯಿಂದ ಕೇಳದೆ ಇದ್ದರೂ ಪ್ರಾಣದಿಂದ ಉಸಿರಾಡುತ್ತಾ, ವಾಗಿಂದ್ರಿಯದಿಂದ ಮಾತನಾಡುತ್ತಾ, ಕಣ್ಣಿನಿಂದ ನೋಡುತ್ತಾ, ಮನಸ್ಸಿನಿಂದ ತಿಳಿಯುತ್ತಾ, ರೇತಸ್ಸಿನಿಂದ ಸಂತಾನೋತ್ಪತ್ತಿಯನ್ನು ಮಾಡುತ್ತಾರೋ ಹಾಗೆಯೇ ಬದುಕಿಯೇ ಇದ್ದೇವೆ' ಎಂದು ಹೇಳಿದರು. ಅನಂತರ ಶ್ರೋತ್ರಾಭಿಮಾನಿ ದೇವತೆಯು ಬ್ರಹ್ಮನ ಶರೀರವನ್ನು ಪ್ರವೇಶಿಸಿದನು.

**ಉಪನಿಷತ್—ಮನೋ ಹೋಚ್ಚಕ್ರಾಮ । ತತ್ ಸಂವತ್ಸರಂ ಪ್ರೋಷ್ಯಾಗತ್ಯೋವಾಚ 'ಕಥಮಶಕತ ಮದೃತೇ ಜೀವಿತುಮಿ'ತಿ । ತೇ ಹೋಚುಃ 'ಯಥಾ ಮುಗ್ಧಾ ಅವಿದ್ವಾಂಸೋ ಮನಸಾ ಪ್ರಾಣಂತಃ ಪ್ರಾಣೇನ ವದಂತೋ ವಾಚಾ ಪಶ್ಯಂತಶ್ಚಕ್ಷುಷಾ ಶೃಣ್ವಂತಃ ಶ್ರೋತ್ರೇಣ ಪ್ರಜಾಯಮಾನಾ ರೇತಸೈವಮಜೀವಿಷ್ಮೇ'ತಿ । ಪ್ರವಿವೇಶ ಹ ಮನಃ ।**

ಮನೋಽಭಿಮಾನಿ ದೇವತೆಯು ಬ್ರಹ್ಮದೇವರ ಶರೀರದಿಂದ ಹೊರಟನು. ಅವನು ಒಂದು ಸಂವತ್ಸರ ಕಾಲ ಪ್ರವಾಸ ಮಾಡಿ ಪುನಃ ಬಂದು, 'ದೇವತೆಗಳೇ! ನಾನಿಲ್ಲದೆ ಹೇಗೆ ಬದುಕಿದಿರಿ?' ಎಂದು ಕೇಳಿದನು. ಆಗ ಆ ದೇವತೆಗಳು 'ಹೇಗೆ ಮನುಷ್ಯರು ಆರು ತಿಂಗಳ ವಯಸ್ಸಿನಲ್ಲಿ ಮನಸ್ಸಿನಿಂದ ತಿಳಿಯದೇ ಇದ್ದರೂ ಪ್ರಾಣದಿಂದ ಉಸಿರಾಡುತ್ತಾ,ವಾಗಿಂದ್ರಿಯದಿಂದ ಮಾತನಾಡುತ್ತಾ, ಕಣ್ಣಿನಿಂದ ನೋಡುತ್ತ ಕಿವಿಯಿಂದ ಕೇಳುತ್ತಾ ಇದ್ದು ಮುಂದೆ ರೇತಸ್ಸಿನಿಂದ ಸಂತಾನೋತ್ಪತ್ತಿಯನ್ನು ಮಾಡುತ್ತಾರೆಯೋ ಹಾಗೆಯೇ ಬದುಕಿಯೇ ಇದ್ದೇವೆ' ಎಂದು ಹೇಳಿದರು. ಅನಂತರ ಮನೋಽಭಿಮಾನಿದೇವತೆಯು ಬ್ರಹ್ಮನ ಶರೀರವನ್ನು ಪ್ರವೇಶಮಾಡಿದನು.

**ಉಪನಿಷತ್—ರೇತೋ ಹೋಚ್ಚಕ್ರಾಮ । ತತ್ ಸಂವತ್ಸರಂ ಪ್ರೋಷ್ಯಾಗತ್ಯೋವಾಚ 'ಕಥಮಶಕತ ಮದೃತೇ ಜೀವಿತುಮಿ'ತಿ । ತೇ ಹೋಚುಃ 'ಯಥಾ ಕ್ಲೀಬಾ ಅಪ್ರಜಾಯಮಾನಾ ರೇತಸಾ ಪ್ರಾಣಂತಃ ಪ್ರಾಣೇನ ವದಂತೋ ವಾಚಾ ಪಶ್ಯಂತಶ್ಚಕ್ಷುಷಾ ಶೃಣ್ವಂತಃ ಶ್ರೋತ್ರೇಣ ವಿದ್ವಾಂಸೋ ಮನಸೈವಮಜೀವಿಷ್ಮೇ'ತಿ । ಪ್ರವಿವೇಶ ಹ ರೇತಃ ।**

ಅನಂತರ ರೇತೋಽಭಿಮಾನಿದೇವತೆಯು ಬ್ರಹ್ಮನ ಶರೀರದಿಂದ ಹೊರಬಂದನು. ಅವನು ಒಂದು ಸಂವತ್ಸರ ಕಾಲ ಪ್ರವಾಸ ಮಾಡಿ ಪುನಃ ಬಂದು, 'ದೇವತೆಗಳೇ! ನಾನಿಲ್ಲದೆ ಹೇಗೆ ಬದುಕಿದಿರಿ?'ಎಂದು ಕೇಳಿದನು. ಆಗ ಆ ದೇವತೆಗಳು 'ನಪುಂಸಕರಂತೆ ರೇತಸ್ಸಿನಿಂದ ಸಂತಾನೋತ್ಪತ್ತಿಯನ್ನು ಮಾಡದೆ ಇದ್ದರೂ, ಪ್ರಾಣದಿಂದ ಉಸಿರಾಡುತ್ತಾ, ವಾಗಿಂದ್ರಿಯದಿಂದ ಮಾತನಾಡುತ್ತಾ, ಕಣ್ಣಿನಿಂದ ನೋಡುತ್ತಾ, ಕಿವಿಯಿಂದ ಕೇಳುತ್ತಾ,ಮನಸ್ಸಿನಿಂದ ತಿಳಿಯುತ್ತಾ ಬದುಕಿಯೇ ಇದ್ದೇವೆ' ಎಂದು ಹೇಳಿದರು. ಅನಂತರ ರೇತೋಽಭಿಮಾನಿದೇವತೆಯು ಬ್ರಹ್ಮನ ಶರೀರವನ್ನು ಪ್ರವೇಶ ಮಾಡಿದನು.

**ಉಪನಿಷತ್—ಅಥ ಹ ಪ್ರಾಣ ಉತ್ಕ್ರಮಿಷ್ಯನ್ ಯಥಾ ಮಹಾಸುಹಯಃ ಸೈಂಧವಃ ಪಡ್ವೀಶಶಂಕೂನ್ ಸಂವೃಹೇದ್ ಏವಂ ಹೈವೇಮಾನ್ ಪ್ರಾಣಾನ್ ಸಂಬಬರ್ಹ । ತೇ ಹೋಚುಃ 'ಮಾ ಭಗವ ಉತ್ಕ್ರಮೀಃ ।**

**ನ ವೈ ಶಕ್ಷ್ಯಾಮಸ್ತ್ವದೃತೇ ಜೀವಿತುಮಿ'ತಿ । 'ತಸ್ಯೋ ಮೇ ಬಲಿಂ ಕುರುತೇ'ತಿ । 'ತಥೇ'ತಿ ।**

ಹೀಗೆ ವಾಗಾದಿದೇವತೆಗಳ ಆ ಶಕ್ತಿಯು ಪ್ರಕಟಗೊಂಡ ಮೇಲೆ ಮುಖ್ಯ ವಾಯುವು ಬ್ರಹ್ಮನ ಶರೀರದಿಂದ ಹೊರಗೆ ಹೊರಟು, ಹೇಗೆ ದೊಡ್ಡದಾದ ಮತ್ತು ಒಳ್ಳೆಯ ಲಕ್ಷಣಗಳಿಂದ ಕೂಡಿದ ಸಿಂಧುದೇಶದ ಕುದುರೆಯು ತನ್ನನ್ನು ಕಟ್ಟಿರುವ ಹಗ್ಗದ ಗೂಟವನ್ನು ಕಿತ್ತುಹಾಕುತ್ತದೆಯೋ ಹಾಗೆ ಉಳಿದ ಇಂದ್ರಿಯಾಭಿಮಾನಿ ದೇವತೆಗಳನ್ನು ದೇಹದಿಂದ ಕಿತ್ತು ಸೆಳೆದನು. ಅವರು ತಮ್ಮ ತಮ್ಮ ಸ್ಥಳವನ್ನು ಬಿಗಿಯಾಗಿ ಹಿಡಿದು ನಿಲ್ಲಲೂ ಸಮರ್ಥರಾಗಲಿಲ್ಲ. 'ಪೂಜ್ಯನೇ! ದೇಹದಿಂದ ಹೊರಗೆ ಹೋಗಬೇಡ. ನೀನಿಲ್ಲದೆ ನಾವು ಜೀವಿಸಿರಲಾರೆವು' ಎಂದು ಹೇಳಿದರು. ಆಗ ಮುಖ್ಯಪ್ರಾಣನು 'ದೇವತೆಗಳೇ! ಹಾಗಾದರೆ ಅತಿ ಬಲಿಷ್ಠನೆಂದು ನನಗೆ ಪೂಜೆಯನ್ನು ಸಲ್ಲಿಸಿ' ಎಂದು ಹೇಳಿದನು. ದೇವತೆಗಳು 'ಹಾಗೆಯೇ ಆಗಲಿ' ಎಂದು ಒಪ್ಪಿದರು.

**ಉಪನಿಷತ್—ಸಾ ಹ ವಾಗುವಾಚ 'ಯದ್ ವಾ ಅಹಂ ವಸಿಷ್ಠಾಽಸ್ಮಿ ತ್ವಂ ತದ್ ವಸಿಷ್ಠೋಽಸೀ'ತಿ । ಯದ್ ವಾ ಅಹಂ ಪ್ರತಿಷ್ಠಾಸ್ಮಿ ತ್ವಂ ತತ್ ಪ್ರತಿಷ್ಠಾಸೀತಿ ಚಕ್ಷುಃ । ಯದ್ ವಾ ಅಹಂ ಸಂಪದಸ್ಮಿ ತ್ವಂ ತತ್ ಸಂಪದಸೀತಿ ಶ್ರೋತ್ರಂ । ಯದ್ ವಾ ಅಹಮಾಯತನಮಸ್ಮಿ ತ್ವಂ ತದಾಯತನಮಸೀತಿ ಮನಃ । ಯದ್ ವಾ ಅಹಂ ಪ್ರಜಾಪತಿರಸ್ಮಿ ತ್ವಂ ತತ್ ಪ್ರಜಾಪತಿರಸೀತಿ ರೇತಃ।'ತಸ್ಯೋ ಮೇ ಕಿಮನ್ನಂ ಕಿಂ ವಾಸಃ'ಇತಿ। 'ಯದಿದಂ ಕಿಂ ಚ ಆ ಶ್ವಭ್ಯ ಆ ಕೃಮಿಭ್ಯ ಆ ಕೀಟಪತಂಗೇಭ್ಯಸ್ತತ್ ತೇಽನ್ನಂ । ಆಪೋ ವಾಸಃ' ಇತಿ । ನ ಹ ವಾ ಅಸ್ಯ ಅನನ್ನಂ ಜಗ್ಧಂ ಭವತಿ ನಾನನ್ನಂ ಪರಿಗೃಹೀತಂ ಯ ಏವಮೇತದನಸ್ಯಾನ್ನಂ ವೇದ ।ತದ್ ವಿದ್ವಾಂಸಃ ಶ್ರೋತ್ರಿಯಾ ಅಶಿಷ್ಯಂತ ಆಚಾಮಂತಿ।ಅಶಿತ್ವಾಽಽಚಾಮಂತಿ। ಏತಮೇವ ತದನಮನಗ್ನಂ ಕುರ್ವಂತೋ ಮನ್ಯಂತೇ । ತಸ್ಮಾದೇವಂ ವಿದ್ವಾನಶಿಷ್ಯನ್ನಾಽಽಚಾಮೇದಶಿತ್ವಾಽಽಚಾಮೇತ್ ।**

**ಇತಿ ಪ್ರಥಮಂ ಬ್ರಾಹ್ಮಣಂ ॥**

ದೇವತೆಗಳೆಲ್ಲರೂ ಪ್ರತ್ಯೇಕವಾಗಿ ತಮ್ಮ ತಮ್ಮ ಅಸಾಧಾರಣ ಶಕ್ತಿಗಳು ಪ್ರಾಣನ ಅಧೀನವೆಂದು ತಿಳಿದು ಅವನಿಗೆ ಸಮರ್ಪಿಸಿದರು. ವಾಗಭಿಮಾನಿಯು 'ನಾನು ವಾಸಿಸುವವರಲ್ಲಿ ಶ್ರೇಷ್ಠನಾಗಿದ್ದರೂ ನನ್ನಲ್ಲಿರುವ ಈ ಶ್ರೇಷ್ಠತ್ವವು ನಿನ್ನ ಅಧೀನ' ಎಂದು ಹೇಳಿದನು. ಚಕ್ಷುರಭಿಮಾನಿಯು, 'ನನ್ನಲ್ಲಿರುವ ಉತ್ಕೃಷ್ಟಸ್ಥಿತಿ ಹೇತುತ್ವವು ನಿನ್ನ ಅಧೀನ'ಎಂದು ಹೇಳಿದನು. ಶ್ರೋತ್ರಾಭಿಮಾನಿಯು 'ನನ್ನಲ್ಲಿರುವ

ಸರ್ವವೇದಪ್ರಾಪ್ತಿ ಕಾರಣತ್ವವು ನಿನ್ನ ಅಧೀನ' ಎಂದು ಹೇಳಿದನು. ಮನೋಭಿಮಾನಿಯು 'ನನ್ನಲ್ಲಿರುವ ಆಶ್ರಯತ್ವವು ನಿನ್ನ ಅಧೀನ' ಎಂದು ಹೇಳಿದನು. ರೇತೋಭಿಮಾನಿಯು 'ನನ್ನಲ್ಲಿರುವ ಸಂತಾನೋತ್ಪತ್ತಿಶಕ್ತಿಯು ನಿನ್ನ ಅಧೀನ' ಎಂದು ಹೇಳಿದನು. ಆಗ ಆ ಪ್ರಾಣನು, 'ದೇವತೆಗಳೇ! ಸರ್ವಸ್ವಾಮಿಯಾದ ನನಗೆ ಯಾವುದು ಅನ್ನ ಮತ್ತು ಯಾವುದು ವಸ್ತ್ರ?' ಎಂದು ಕೇಳಿದನು. ಆಗ ದೇವತೆಗಳು 'ನಾಯಿ ಕ್ರಿಮಿಕೀಟ ಪರ್ಯಂತವಾಗಿ ಸಕಲ ಪ್ರಾಣಿಗಳು ಯಾವ ಅನ್ನವನ್ನು ತಿನ್ನುತ್ತವೆಯೋ ಅದು ಅವುಗಳೊಳಗೆ ಪ್ರೇರಕನಾಗಿರುವ ನಿನಗೆ ಅನ್ನ, ಯಾವ ನೀರನ್ನು ಕುಡಿಯುತ್ತವೆಯೋ ಅದು ಅವುಗಳ ಅಂತರ್ಯಾಮಿಯಾದ ನಿನಗೆ ವಸ್ತ್ರ' ಎಂದು ಹೇಳಿದರು. ಯಾರು, ಸರ್ವಪ್ರಾಣಿಗಳೂ ತಿನ್ನುವ ಅನ್ನವು ಅವರ ಅಂತರ್ಯಾಮಿಯಾದ ಮುಖ್ಯಪ್ರಾಣನ ಅನ್ನವೆಂದು ದೇವತೆಗಳು ಸಮರ್ಪಿಸಿರುವುದನ್ನು ತಿಳಿಯುವನೋ ಅವನು ಎಂದಾದರೂ ಅಯೋಗ್ಯ ಅನ್ನವನ್ನು ಉಂಡರೂ ಅಭಕ್ಷ್ಯ ಭಕ್ಷಣದೋಷ ಬರಲಾರದು. ಅಗ್ರಾಹ್ಯವಸ್ತುವನ್ನು ದಾನಪಡೆದರೂ ದೋಷಬರಲಾರದು. ಆದ್ದರಿಂದ ವೇದಾಧ್ಯಯನ ಮಾಡುವ ಪುರುಷರು ಊಟಮಾಡುವಾಗ ಮೊದಲಿಗೆ ಆಪೋಶನ ಮಾಡುತ್ತಾರೆ. ಊಟವಾದ ನಂತರವೂ ಆಪೋಶನ ಮಾಡುತ್ತಾರೆ. ಈ ಆಪೋಶನಗಳಿಂದ ಮುಖ್ಯಪ್ರಾಣನಿಗೆ ವಸ್ತ್ರ ಉಡಿಸಿದಂತೆ ಭಾವಿಸುತ್ತಾರೆ. ಇದು ಹಿಂದಿನಿಂದ ಬಂದ ಸಂಪ್ರದಾಯ. ಆದ್ದರಿಂದ ಇದನ್ನು ತಿಳಿದವನು ಊಟ ಮಾಡುವ ಮೊದಲೂ ಆಪೋಶನ ಮಾಡಬೇಕು. ಊಟವಾದ ನಂತರವೂ ಆಪೋಶನ ಮಾಡಬೇಕು.

**ಭಾಷ್ಯ—ಅಹಂಶ್ರೇಯೋ ವಿವಾದಂ ತು ಯೇನ ಕೃತ್ವಾಽಖಿಲಾಃ ಸುರಾಃ ।**
**ಅಸಮರ್ಥಾಃ ಸ್ವರಕ್ಷಾಯಾಂ ಸ ವಾಯುಃ ಸುರನಾಯಕಃ ।**
**ವಿವದಂತೋಽಖಿಲಾ ದೇವಾ ಯಯುರ್ನಾರಾಯಣಂ ಪ್ರಭುಮ್ ।**
**ಅಹಂ ಶ್ರೇಯಾನಹಂ ಶ್ರೇಯಾನಿತಿ ವಾಯುಪುರಃಸರಾಃ ।**
**ಉಕ್ತಂ ಭಗವತಾ ತೇನ ಯೇನ ತ್ಯಕ್ತೇಽಖಿಲಾ ಅಪಿ ।**
**ಸ್ಥಾತುಂ ನ ಶಕ್ತಾಃ ಸ ಶ್ರೇಯಾನಿತ್ಯುಕ್ತಾಃ ಪುನರಾಗತಾಃ ।**
**ಉತ್ಕ್ರಾಂತಾಶ್ಚ ಪುನಃ ಸರ್ವೇ ತದ್ವಿಜ್ಞಪ್ತ್ಯೈ ಪೃಥಕ್ ಪೃಥಕ್ ।**

**ಅನುವಾದ**—ವಾಯುವಿನ ಜೊತೆಯಲ್ಲಿ ದೇವತೆಗಳು 'ನಾನೇ ಶ್ರೇಷ್ಠ ನಾನೇ ಶ್ರೇಷ್ಠ' ಎಂದು ಸ್ಪರ್ಧೆ ಮಾಡುತ್ತಾ ಕೊನೆಯಲ್ಲಿ ಪ್ರಾಣನಿಲ್ಲದೆ ತಮ್ಮನ್ನೇ ತಾವು ರಕ್ಷಿಸಿಕೊಳ್ಳಲು ಅಸಮರ್ಥರಾದರು. ಆದ್ದರಿಂದ ವಾಯುವು ದೇವತೆಗಳಿಗೆ ನಾಯಕ ಎಂಬುದು ಸಿದ್ಧವಾಯಿತು. ವಾಯು ಮೊದಲಾಗಿ ಎಲ್ಲಾ ದೇವತೆಗಳೂ ಹೀಗೆ ಸ್ಪರ್ಧೆ ಮಾಡಿ ಪ್ರಭುವಾದ ನಾರಾಯಣನ ಬಳಿ ಹೋದರು. ಆಗ ಭಗವಂತನು

ನಿಮ್ಮಲ್ಲಿ ಯಾರು ಬ್ರಹ್ಮನ ಶರೀರದಿಂದ ಹೊರಗೆ ಹೋದರೆ ಉಳಿದವರೆಲ್ಲರೂ ಆ ಶರೀರದಲ್ಲಿ ಇರುವುದಕ್ಕೂ ಅಸಮರ್ಥರಾಗುತ್ತಾರೋ ಅವರು ನಿಮ್ಮಲ್ಲಿ ಶ್ರೇಷ್ಠರು ಎಂದು ಹೇಳಿದನು. ಅನಂತರ ಎಲ್ಲರೂ ಬ್ರಹ್ಮನ ಶರೀರಕ್ಕೆ ಒಂದರು. ಶ್ರೇಷ್ಠ ಯಾರೆಂಬುದನ್ನು ನಿರ್ಣಯಿಸುವ ಸಲುವಾಗಿ ಒಬ್ಬೊಬ್ಬರಾಗಿ ಎಲ್ಲರೂ ಆ ದೇಹದಿಂದ ಹೊರಗೆ ಹೊರಟರು.

**ಭಾಷ್ಯ—ಸುಪರ್ಣಶೇಷರುದ್ರೇಂದ್ರಸೂರ್ಯಾದಿಷು ಪೃಥಕ್ ಪೃಥಕ್ ।**
**ಉತ್ಕ್ರಾಂತೇಷು ಬ್ರಹ್ಮದೇಹಾತ್ ಶರೀರಂ ನ ಪಪಾತ ಹ ।**
**ಋುತ ಉತ್ಕ್ರಾಂತಮೇಕಂ ತು ತದನ್ಯೇ ನಿವಸಂತಿ ಚ ।**
**ಪ್ರಾಣ ಉಚ್ಚಿಕ್ರಮಿಷತಿ ಸ್ಥಾತುಂ ನಾಶಕ್ನುವನ್ ಪರೇ ।**
**ಪ್ರಾಣಂ ವಿನಾ ನ ಚ ಬ್ರಹ್ಮಾ ತಂ ವಿನಾ ಪ್ರಾಣ ಏವ ಚ ।**
**ಅನ್ಯೋನ್ಯಾಪಾಶ್ರಯಾತ್ ಶಕ್ತೌ ಸ್ಥಾತುಮನ್ಯೇ ಕುತಸ್ತತಃ ।**
**ತಸ್ಮಾತ್ ಪ್ರಾಣೋ ವರೋ ದೇವೇಷ್ವಿತಿ ಸರ್ವೇಽಪಿ ಮೇನಿರೇ ।**
**ಇತ್ಯಾದಿ ಪವಮಾನೇ ।**

**ಅನುವಾದ**—ಗರುಡ ಶೇಷ ರುದ್ರ ಇಂದ್ರ ಸೂರ್ಯ ಮೊದಲಾದ ಎಲ್ಲ ದೇವತೆಗಳೂ ಒಬ್ಬೊಬ್ಬರಾಗಿ ಬ್ರಹ್ಮನ ಶರೀರದಿಂದ ಹೊರಹೊರಟಾಗ ಆ ಶರೀರವು ಬೀಳಲಿಲ್ಲ. ಹೊರಗೆ ಹೊರಟ ದೇವತೆಯೊಬ್ಬನನ್ನು ಬಿಟ್ಟು ಉಳಿದ ಎಲ್ಲ ದೇವತೆಗಳು ಆ ಶರೀರದಲ್ಲಿಯೇ ವಾಸ ಮಾಡಿದರು. ಮುಖ್ಯಪ್ರಾಣನು ಹೊರಡಲು ಮನಸ್ಸು ಮಾಡಿದ ಮಾತ್ರಕ್ಕೆ ಉಳಿದ ದೇವತೆಗಳು ಆ ಶರೀರದಲ್ಲಿ ಇರಲೂ ಅಸಮರ್ಥರಾದರು. ಪ್ರಾಣಬ್ರಹ್ಮರು ಪರಸ್ಪರವಾಗಿ ಆಶ್ರಯಿಸಿರುವುದರಿಂದ ಪ್ರಾಣನನ್ನು ಬಿಟ್ಟು ಬ್ರಹ್ಮನೂ, ಬ್ರಹ್ಮನನ್ನು ಬಿಟ್ಟು ಪ್ರಾಣನೂ ಇರಲು ಅಸಮರ್ಥರು ಎಂದ ಮೇಲೆ ಉಳಿದ ದೇವತೆಗಳು ಪ್ರಾಣನನ್ನು ಬಿಟ್ಟು ಇರಲು ಅಸಮರ್ಥರು ಎಂದು ಸುತರಾಂ ಸಿದ್ಧವಾಗುತ್ತದೆ. ಆದ್ದರಿಂದ ಪ್ರಾಣನು ಎಲ್ಲ ದೇವತೆಗಳಲ್ಲಿ ಶ್ರೇಷ್ಠನೆಂದು ಎಲ್ಲರೂ ತಿಳಿದರು ಎಂದು ಮುಂತಾಗಿ ಪವಮಾನ ಎಂಬ ಗ್ರಂಥದಲ್ಲಿ ಹೇಳಿದೆ.

ಇಲ್ಲಿಗೆ ಪ್ರಥಮ ಬ್ರಾಹ್ಮಣ ಮುಗಿಯಿತು.

**ಕ್ಷತ್ರಿಯನಿಂದ ಬ್ರಾಹ್ಮಣನಿಗೆ ಉಪದೇಶ :**

**ಉಪನಿಷತ್–ಶ್ವೇತಕೇತುರ್ಹವಾ ಆರುಣೇಯಃ ಪಂಚಾಲಾನಾಂ ಪರಿಷದಮಾಜಗಾಮ। ಸ ಆಜಗಾಮ ಜೈವಲಿಂ ಪ್ರವಾಹಣಂ ಪರಿಚಾರಯಮಾಣಂ। ತಮುದೀಕ್ಷ್ಯಾಭ್ಯುವಾದ 'ಕುಮಾರ ೩' ಇತಿ । ಸ 'ಭೋ' ಇತಿ ಪ್ರತಿಶುಶ್ರಾವ । 'ಅನುಶಿಷ್ಟೋ ನ್ವಸಿ ಪಿತ್ರೇ'ತಿ । 'ಓಮಿ'ತಿ ಹೋವಾಚ ।**

ಅರುಣಾ ಎನ್ನುವವಳ ಮಗನಾದ ಶ್ವೇತಕೇತುವು ತನ್ನ ಪಾಂಡಿತ್ಯವನ್ನು ಪ್ರದರ್ಶಿಸಲು ಪಾಂಚಾಲದೇಶದ ರಾಜಸಭೆಗೆ ಬಂದನು. ತನ್ನ ಭೃತ್ಯರಿಂದ ಪರಿಚರ್ಯೆ ವನ್ನು ಮಾಡಿಸಿಕೊಳ್ಳುತ್ತಿದ್ದ ಜಿಬಲನ ಮಗನಾದ ಪ್ರವಾಹಣ ರಾಜನ ಸಮೀಪಕ್ಕೆ ಬಂದನು. ರಾಜನು ಶ್ವೇತಕೇತುವನ್ನು ನೋಡಿ 'ಕುಮಾರ!' ಎಂದು ಕರೆದನು. ಶ್ವೇತಕೇತುವು 'ಓ' ಎಂದನು. 'ನೀನು ನಿನ್ನ ತಂದೆಯಿಂದ ಉಪದೇಶವನ್ನು ಪಡೆದಿರುವೆಯಷ್ಟೆ?' ಎಂದು ಪ್ರವಾಹಣನು ಕೇಳಿದನು. 'ಹೌದು' ಎಂದನು ಶ್ವೇತಕೇತು.

**ಉಪನಿಷತ್—'ವೇತ್ಥ ಯಥೇಮಾಃ ಪ್ರಜಾಃ ಪ್ರಯತ್ಯೋ ವಿಪ್ರತಿಪದ್ಯಂತಾ೩' ಇತಿ । 'ನೇ'ತಿ ಹೋವಾಚ । 'ವೇತ್ಥೋ ಯಥೇಮಂ ಲೋಕಂ ಪುನರಾಪದ್ಯಂತಾ೩' ಇತಿ । ನೇತಿ ಹೋವಾಚ । 'ವೇತ್ಥೋ ಯಥಾಽಸೌ ಲೋಕ ಏವಂ ಬಹುಭಿಃ ಪುನಃ ಪುನಃ ಪ್ರಯದ್ಭಿರ್ನ ಸಂಪೂರ್ಯತಾ೩' ಇತಿ । ನೇತಿ ಹೋವಾಚ । 'ವೇತ್ಥೋ ಯತಿಥ್ಯಾಮಾಹುತ್ಯಾಂ ಹುತಾಯಾಮಾಪಃ ಪುರುಷವಾಚೋ ಭೂತ್ವಾ ಸಮುತ್ಥಾಯ ವದಂತೀ೩' ಇತಿ । ನೇತಿ ಹೋವಾಚ । 'ವೇತ್ಥೋ ದೇವಯಾನಸ್ಯ ವಾ ಪಥಃ ಪ್ರತಿಪದಂ ಪಿತೃಯಾಣಸ್ಯ ವಾ ಯತ್ ಕೃತ್ವಾ ದೇವಯಾನಂ ವಾ ಪಂಥಾನಂ ಪ್ರತಿಪದ್ಯಂತೇ ಪಿತೃಯಾಣಂ ವಾಽಪಿ ಹಿ । ನಃ ಋಷೇರ್ವಚಃ ಶ್ರುತಂ । ದ್ವೇ ಸೃತೀ ಅಶೃಣವಂ ಪಿತೄಣಾಮಹಂ ದೇವಾನಾಮುತ ಮರ್ತ್ಯಾನಾಂ। ತಾಭ್ಯಾಮಿದಂ ವಿಶ್ವಮೇಜತ್ ಸಮೇತಿ ಯದಂತರಾ ಪಿತರಂ ಮಾತರಂ ಚೇ'ತಿ । 'ನಾಹಮತ ಏಕಂ ಚ ನ ವೇದೇ'ತಿ ಹೋವಾಚ ।**

ಈ ಉಪಾಸಕರು ಮರಣವನ್ನು ಹೊಂದಿ ಬ್ರಹ್ಮಲೋಕವನ್ನು ಅಥವಾ ಚಂದ್ರ ಲೋಕವನ್ನು ಯಾವ ಮಾರ್ಗದಿಂದ ಪಡೆಯುತ್ತಾರೆ ಎಂದು ತಿಳಿದಿದ್ದೀಯಾ ಎಂದು ರಾಜನು ಕೇಳಿದನು. ಕುಮಾರನು ಇಲ್ಲವೆಂದು ಉತ್ತರಕೊಟ್ಟನು. ಚಂದ್ರಲೋಕಕ್ಕೆ ಹೋದವರು ಪುನಃ ಭೂಲೋಕಕ್ಕೆ ಯಾವ ಮಾರ್ಗದಿಂದ ಬರುತ್ತಾರೆ ಎಂದು ತಿಳಿದಿದ್ದೀಯಾ ಎಂದು ರಾಜನು ಕೇಳಿದನು. ಕುಮಾರನು ಇಲ್ಲವೆಂದೇ ಉತ್ತರ ಕೊಟ್ಟನು. ಭೂಲೋಕದಿಂದ ಬಹುಮಂದಿ ಉಪಾಸಕರು ಪುನಃ ಪುನಃ ಹೋಗು ತ್ತಿದ್ದರೂ ಪರಲೋಕವು ಹೇಗೆ ನಿರವಕಾಶವಾಗಿ ತುಂಬಿ ಹೋಗುತ್ತಿಲ್ಲ ಎಂದು ತಿಳಿದಿದ್ದೀಯಾ ಎಂದು ರಾಜನು ಕೇಳಿದನು. ಕುಮಾರನು ಇಲ್ಲವೆಂದು ಉತ್ತರ ಕೊಟ್ಟನು. ಎಷ್ಟನೆಯ ಆಹುತಿಯಲ್ಲಿ ಜಲಾದಿ ಪಂಚಮಹಾಭೂತಯುಕ್ತನಾದ

ಜೀವನು ಶರೀರವನ್ನು ಪಡೆದು ಪುರುಷನೆನಿಸಿ ಜನಿಸಿ ವಾಗಾದಿ ವ್ಯಾಪಾರ ಮಾಡುತ್ತಾನೆ ಎಂಬುದನ್ನು ತಿಳಿದಿದ್ದೀಯಾ ಎಂದು ರಾಜನು ಕೇಳಿದನು. ಕುಮಾರನು ಇಲ್ಲ ಎಂದನು. 'ಯಾವ ಕರ್ಮವನ್ನು ಮಾಡಿ ಜೀವನು ದೇವಯಾನ ರೂಪವಾದ ಮಾರ್ಗವನ್ನು ಹೊಂದುತ್ತಾನೆ. ಯಾವ ಕರ್ಮವನ್ನು ಮಾಡಿ ಜೀವನು ಪಿತೃಯಾಣ ರೂಪವಾದ ಮಾರ್ಗವನ್ನು ಪೊಂದುತ್ತಾನೆ ಎಂದು ದೇವಯಾನ ಪಿತೃಯಾಣಪ್ರಾಪ್ತಿ ಸಾಧನವನ್ನು ತಿಳಿದಿದ್ದೀಯಾ?' ಎಂದು ರಾಜನು ಕೇಳಿದನು. ಮರ್ತ್ಯರಿಗೆ ತಂದೆಯಂತಿರುವ ದ್ಯುಲೋಕ ಹಾಗೂ ತಾಯಿಯಂತಿರುವ ಭೂಲೋಕಗಳ ನಡುವೆ ಪಿತೃಯಾಣ ಮತ್ತು ದೇವಯಾನ ಎನ್ನುವ ಎರಡೇ ಮಾರ್ಗಗಳಿವೆ ಎಂದು ಕೇಳಿದ್ದೇನೆ. 'ವೇದೋಕ್ತ ಪ್ರವೃತ್ತಿ ನಿವೃತ್ತಿ ಕರ್ಮಾದಿ ಸಾಧನ ಪೂರ್ತಿ ಹೊಂದಿದ ಜೀವರು ಈ ಎರಡು ಮಾರ್ಗಗಳನ್ನು ಹೊಂದುತ್ತಾರೆ' ಎನ್ನುವ ಋಷಿವಾಕ್ಯವನ್ನೂ ನಾವು ಕೇಳಿದ್ದೇವೆ. ಆದ್ದರಿಂದ ಎರಡು ಮಾರ್ಗಗಳಿರುವುದು ನಿಜ ಎಂದು ರಾಜನು ಹೇಳಿದನು. ಆಗ ಶ್ವೇತಕೇತುವು ನಿನ್ನ ಪ್ರಶ್ನೆಗಳಲ್ಲಿ ಒಂದಕ್ಕೂ ಸಹ ನಾನು ಉತ್ತರವನ್ನು ತಿಳಿದಿಲ್ಲ ಎಂದು ಹೇಳಿದನು.

**ಉಪನಿಷತ್—ಅಥೈನಂ ವಸತ್ಯೋಪಮಂತ್ರಯಾಂಚಕ್ರೇ । ಅನಾದೃತ್ಯ ವಸತಿಂ ಕುಮಾರಃ ಪ್ರದುದ್ರಾವ। ಸ ಆಜಗಾಮ ಪಿತರಂ । ತಂ ಹೋವಾಚೇತಿ ವಾವ ಕಿಲ ನೋ ಭವಾನ್ ಪುರಾಽನುಶಿಷ್ಟಾನವೋಚ ಇತಿ । ಕಥಂ ಸುಮೇಧ ಇತಿ । ಪಂಚ ಮಾ ಪ್ರಶ್ನಾನ್ ರಾಜನ್ಯಬಂಧುರಪ್ರಾಕ್ಷೀತ್। ತತೋ ನೈಕಂಚನ ವೇದೇತಿ । ಕತಮೇ ತ ಇತಿ । ಇಮ ಇತಿ ಹ ಪ್ರತೀಕಾನ್ಯುದಾಜಹಾರ ।**

ತಾನು ಕೇಳಿದ ಪ್ರಶ್ನೆಗಳಿಗೆ ಶ್ವೇತಕೇತುವು ಉತ್ತರವನ್ನು ತಿಳಿಯದಿದ್ದುದರಿಂದ ಇನ್ನೂ ಹೆಚ್ಚಿನ ಅಧ್ಯಯನಕ್ಕಾಗಿ ನನ್ನ ಬಳಿ ಇರು ಎಂದು ಪ್ರವಾಹಣನು ಶ್ವೇತಕೇತುವನ್ನು ಆಹ್ವಾನಿಸಿದನು. ಕುಮಾರನು ಒಪ್ಪಲಿಲ್ಲ. ಇಲ್ಲಿಯೇ ವಾಸಮಾಡು, ಅರ್ಘ್ಯಪಾದ್ಯಾದಿಗಳನ್ನು ಸ್ವೀಕರಿಸು, ಎಂದನು ರಾಜ. ಅದನ್ನು ಕುಮಾರನು ತಿರಸ್ಕರಿಸಿ ಹೊರಟು ಹೋದನು. ತಂದೆಯ ಸಮೀಪಕ್ಕೆ ಬಂದು, ಹೀಗೆ ವಿದ್ಯೆಯನ್ನು ಪೂರ್ತಿ ಉಪದೇಶಿಸದೆ 'ಉಪದೇಶಿಸಿದ್ದೇನೆ' ಎಂದು ಹೇಳಿದೆಯಲ್ಲವೆ? ಎಂದು ತಂದೆಯನ್ನು ಆಕ್ಷೇಪಿಸಿದನು. ಜಾಣನೆ! ನಾನು ಉಪದೇಶಿಸಲಿಲ್ಲ ಎಂದು ಹೇಗೆ ಹೇಳುವೆ? ಎಂದು ತಂದೆ ಕೇಳಿದನು. 'ನನಗೆ ಶ್ರೇಷ್ಠ ರಾಜನಾದ ಪ್ರವಾಹಣನು ಐದು ಪ್ರಶ್ನೆಗಳನ್ನು ಕೇಳಿದನು. ಅವುಗಳಲ್ಲಿ ಒಂದಕ್ಕೂ ಉತ್ತರವು ನನಗೆ ತಿಳಿದಿಲ್ಲ' ಎಂದು ಹೇಳಿದನು. ಅವು ಯಾವ ಪ್ರಶ್ನೆಗಳು ಎಂದು ತಂದೆಯು ಕೇಳಿದನು. ಕುಮಾರನು ಆ ಪ್ರಶ್ನೆಗಳು ಇವು ಎಂದು ಹೇಳಿ ಅವುಗಳನ್ನು ಹೇಳಿದನು.

**ಉಪನಿಷತ್**—ಸ ಹೋವಾಚ 'ತಥಾ ನಸ್ತ್ವಂ ತಾತ ಜಾನೀಥಾ ಯಥಾ ಯದಹಂ ಕಿಂಚನ ವೇದ ಸರ್ವಮಹಂ ತತ್ ತುಭ್ಯಮವೋಚಂ । ಪ್ರೈಹಿ ತು । ತತ್ರ ಪ್ರತೀತ್ಯ ಬ್ರಹ್ಮಚರ್ಯಂ ವತ್ಸ್ಯಾವ' ಇತಿ । 'ಭವಾನೇವ ಗಚ್ಛತ್ವಿ'ತಿ ।

ತಂದೆಯು, 'ಮಗು ನಾನು ಏನನ್ನು ತಿಳಿದಿದ್ದೇನೆಯೋ ಅದೆಲ್ಲವನ್ನೂ ನಿನಗೆ ಹೇಳಿದ್ದೇನೆ ಎಂದು ತಿಳಿ. ರಾಜನು ಕೇಳಿದ ವಿಷಯವನ್ನು ನಾನು ತಿಳಿದೇ ಇಲ್ಲ. ಜೊತೆಯಲ್ಲಿ ಬಾ. ನಾವಿಬ್ಬರೂ ರಾಜನ ಸಮೀಪದಲ್ಲಿ ಬ್ರಹ್ಮಚರ್ಯ ವಾಸವನ್ನು ಮಾಡೋಣ' ಎಂದು ಹೇಳಿದನು. ಕುಮಾರನು ಪೂಜ್ಯನಾದ ನೀನೇ ಹೋಗು ಎಂದು ಹೇಳಿದನು.

**ಉಪನಿಷತ್**—ಸ ಆಜಗಾಮ ಗೌತಮೋ ಯತ್ರ ಪ್ರವಾಹಣಸ್ಯ ಜೈಬಲೇರಾಸ। ಸ ತಸ್ಮಾ ಆಸನಮಾಹೃತ್ಯೋದಕಮಾಹಾರಯಾಂಚಕಾರ ।ಅಥ ಹಾಸ್ಮಾ ಅರ್ಘ್ಯಂ ಚಕಾರ । ತಂ ಹೋವಾಚ 'ವರಂ ಭಗವತೇ ಗೌತಮಾಯ ದದ್ಮ' ಇತಿ । ಸ ಹೋವಾಚ 'ಪ್ರತಿಜ್ಞಾತೋ ಮ ಏಷ ವರಃ ಯಾಂ ತು ಕುಮಾರಸ್ಯಾಂತೇ ವಾಚಮಭಾಷಥಾಸ್ತಾಂ ಮೇ ಬ್ರೂಹೀ'ತಿ ।

ಆ ಗೌತಮನು ಪ್ರವಾಹಣ ಜೈಬಲಿಯ ಮನೆಗೆ ಬಂದನು. ಪ್ರವಾಹಣನು ಅವನಿಗೆ ಆಸನವನ್ನು ನೀಡಿ, ಭೃತ್ಯರಿಂದ ಉದಕವನ್ನು ತರಿಸಿದನು. ಅರ್ಘ್ಯಾದಿ ಸತ್ಕಾರಗಳನ್ನು ಮಾಡಿದನು. ಪೂಜ್ಯ ಗೌತಮರಿಗೆ ಅವರ ಅಭೀಷ್ಟವನ್ನು ಸಲ್ಲಿಸುವೆನೆಂದನು. 'ನೀನು ಸಲ್ಲಿಸುವೆನೆಂದಿರುವ ನನ್ನ ಅಭೀಷ್ಟ ಯಾವುದೆಂದರೆ, ನೀನು ಕುಮಾರನ ಮುಂದೆ ಕೇಳಿದ ವಿಷಯಗಳನ್ನು ನನಗೆ ಹೇಳಬೇಕು' ಎಂದು ಕೇಳಿದನು.

**ಉಪನಿಷತ್**—ಸ ಹೋವಾಚ । 'ದೈವೇಷು ವೈ ಗೌತಮ ತದ್ ವರೇಷು । ಮಾನುಷಾಣಾಂ ಬ್ರೂಹೀ'ತಿ । ಸ ಹೋವಾಚ 'ವಿಜ್ಞಾಯತೇ ಹಾಸ್ತಿ ಹಿರಣ್ಯಸ್ಯೋಪಾತ್ತಂ ಗೋಅಶ್ವಾನಾಂ ದಾಸೀನಾಂ ಪ್ರವಾರಾಣಾಂ ಪರಿಧಾನಸ್ಯ । ಮಾ ನೋ ಭವಾನ್ ಬಹೋರನಂತಸ್ಯಾಪರ್ಯಂತಸ್ಯಾಭ್ಯವದಾನ್ಯೋ ಭೂದಿ'ತಿ । ಸ ವೈ 'ಗೌತಮ ತೀರ್ಥೇನೇಚ್ಛಾಸಾ' ಇತಿ। 'ಉಪೈಮ್ಯಹಂ ಭವಂತಮಿ'ತಿ । ವಾಚಾ ಹ ಸ್ಮೈವ ಪೂರ್ವ ಉಪಯಂತಿ । ಸ ಹೋಪಾಯನಕೀರ್ತ್ಯಾ ಉವಾಸ ।

ಆಗ ರಾಜನು ಗೌತಮರೇ! ನೀವು ಕೇಳಿದ ವಿಷಯವು ಅತಿ ರಹಸ್ಯವಾದ ದೇವ ಯೋಗ್ಯವರಗಳಲ್ಲಿ ಸೇರುವಂಥದ್ದು. ಮನುಷ್ಯರಿಗೆ ಯೋಗ್ಯವಾದ ಗಜ ಅಶ್ವ

ಹಿರಣ್ಯಾದಿಗಳಲ್ಲಿ ಯಾವುದನ್ನು ಅಪೇಕ್ಷಿಸುತ್ತೀರೋ ಅದನ್ನು ಕೇಳಿ, ಎಂದನು. ಗೌತಮನು ಹೇಳಿದನು, ಗಜ ಹಿರಣ್ಯ ಗೋವು ಅಶ್ವ ದಾಸಿಯರು ದಾಸರು, ಉಡುವ ಮತ್ತು ಹೊದೆಯುವ ವಸ್ತ್ರಗಳು ಇವೆಲ್ಲ ನಮ್ಮ ಬಳಿ ಇವೆ ಎಂಬುದು ನಿನಗೆ ತಿಳಿದೇ ಇದೆ. ಆದುದರಿಂದ ನಮಗೆ ನೀನು ಅನಂತಫಲಕ್ಕೆ ಕಾರಣವಾದ, ಪುತ್ರಪೌತ್ರಾದಿ ಸಂತತಿಯಲ್ಲಿಯೂ ಮುಂದುವರಿಯಬಲ್ಲ ವಿಪುಲವಾದ ದೈವವಿತ್ತವನ್ನೇ ಕೊಡು, ಇಲ್ಲವೆನ್ನಬೇಡ, ಗುಣಪೂರ್ಣನಾದ, ನಾಶರಹಿತನಾದ ಅಪರಿಮಿತವ್ಯಾಪ್ತಿ ಉಳ್ಳ ಭಗವಂತನ ವಿದ್ಯೆಯನ್ನು ಕೊಡು, ಇಲ್ಲವೆನ್ನಬೇಡ ಎಂದು ಹೇಳಿದನು. ಆ ರಾಜನು, ಗೌತಮರೆ! ನೀವು ವಿಧಿವತ್ತಾಗಿ ನನ್ನಲ್ಲಿ ಅಧ್ಯಯನ ಮಾಡಲು ಬಯಸಿ ಎಂದು ಹೇಳಿದನು. ಅದಕ್ಕೆ ಗೌತಮನು ನಾನು ಶಿಷ್ಯನಾಗಿ ನಿನ್ನ ಬಳಿ ಇರುತ್ತೇನೆ ಎಂದು ಹೇಳಿದನು. ಪೂರ್ವಕಾಲದ ಬ್ರಾಹ್ಮಣರು ಕ್ಷತ್ರಿಯರ ಬಳಿ ವಿದ್ಯೆಯನ್ನು ಕಲಿಯಲು ಬಯಸಿದರೆ ವಿನಯಪೂರ್ವಕವಾದ ಮಾತುಗಳಿಂದಲೇ ಶಿಷ್ಯವೃತ್ತಿಯನ್ನು ಮಾಡುತ್ತಿದ್ದರು. ಹೊರತು ಕಾಣಿಕೆಯನ್ನು ಕೊಟ್ಟು ಸೇವೆಯನ್ನು ಮಾಡಿಕೊಂಡು ಅಲ್ಲ. ಗೌತಮನೂ ಹಾಗೆ ಮಾಡಿದ್ದನು. ಪ್ರವಾಹಣನ ಬಳಿ ವಿನಯಪೂರ್ವಕ ಮಾತುಗಳನ್ನು ಹೇಳಿಕೊಂಡೇ ಶಿಷ್ಯನಾಗಿ ವಾಸ ಮಾಡಿದನು.

**ಉಪನಿಷತ್—ಸ ಹೋವಾಚ । ತಥಾ ನಸ್ತ್ವಂ ಗೌತಮ ಮಾಪರಾಧಾಃ । ತವ ಚ ಪಿತಾಮಹಾಃ । ಯಥೇಯಂ ವಿದ್ಯೇತಃಪೂರ್ವಂ ನ ಕಸ್ಮಿಂಶ್ಚನ ಬ್ರಾಹ್ಮಣ ಉವಾಸ। ತಾಂ ತ್ವಹಂ ತುಭ್ಯಂ ವಕ್ಷ್ಯಾಮಿ। ಕೋ ಹಿ ತ್ವೇವಂ ಬ್ರುವಂತಮರ್ಹತಿ ಪ್ರತ್ಯಾಖ್ಯಾತುಮಿತಿ ।**

ಪ್ರವಾಹಣರಾಜನು ಹೇಳಿದನು, ನಿನ್ನ ಪುತ್ರನ ಅಜ್ಞಾನವನ್ನು ಪ್ರಕಟಿಸಿದ ನನ್ನನ್ನು ಮನ್ನಿಸು. ನಿನ್ನ ಪಿತೃ ಪಿತಾಮಹರೂ, ನನ್ನ ಪಿತೃ ಪಿತಾಮಹರ ಅಪರಾಧಗಳನ್ನು ಕ್ಷಮಿಸುತ್ತಿದ್ದರು. ನೀನು ಕೇಳ ಬಯಸಿದ ಈ ವಿದ್ಯೆಯು ಇದಕ್ಕಿಂತ ಮೊದಲು ಯಾವ ಬ್ರಾಹ್ಮಣನಲ್ಲಿಯೂ ಯಥಾವತ್ತಾಗಿ ಇರಲಿಲ್ಲ. ಅಂಥ ವಿದ್ಯೆಯನ್ನು ಕೂಡ ನಾನು ನಿನಗೆ ಹೇಳುತ್ತೇನೆ. 'ಶಿಷ್ಯನಾಗುತ್ತೇನೆ' ಎಂದು ವಿನಯದಿಂದ ಮಾತನಾಡುವವನನ್ನು ಯಾರು ತಾನೆ ನಿರಾಕರಿಸಬಲ್ಲ?

**ಪಂಚಾಗ್ನಿಗಳಲ್ಲಿ ಜೀವಹೋಮ :**

**ಉಪನಿಷತ್–ಅಸೌ ವೈ ಲೋಕೋಽಗ್ನಿರ್ಗೌತಮ। ತಸ್ಯಾದಿತ್ಯ ಏವ ಸಮಿತ್ । ರಶ್ಮಯೋ ಧೂಮಃ । ಅಹರರ್ಚಿಃ । ದಿಶೋಽಂಗಾರಾಃ । ಅವಾಂತರ–ದಿಶೋ ವಿಸ್ಫುಲಿಂಗಾಃ। ತಸ್ಮಿನ್ನೇತಸ್ಮಿನ್ನಗ್ನೌ ದೇವಾಃ ಶ್ರದ್ಧಾಂ ಜುಹ್ವತಿ। ತಸ್ಯಾ ಆಹುತ್ಯೈ ಸೋಮೋ ರಾಜಾ ಸಂಭವತಿ ।**

ಗೌತಮ! ಪ್ರಾಣಾಂತರ್ಗತನೂ ಪ್ರಕಾಶಸ್ವರೂಪನೂ ಆದ ದ್ಯುಲೋಕಾಂತರ್ಗತ ನಾರಾಯಣನೆ ಜೀವರೂಪ ಹವಿಸ್ಸಿಗೆ ಅಗ್ನಿ. ಅವನು ಪ್ರಳಯಕಾಲದಲ್ಲಿ ಸರ್ವವನ್ನೂ ಸಂಹರಿಸುವ ಕಾರಣದಿಂದ ಅಗ್ನಿ ಎನಿಸುತ್ತಾನೆ. ಈ ಅಗ್ನಿಗೆ ಸಮಿತ್ತು ಮುಂತಾದ ರೂಪದ ಪಂಚವಸ್ತುಗಳಲ್ಲಿ ನಾರಾಯಣನೆ ಪುನಃ ನಾರಾಯಣಾದಿ ಪಂಚ ರೂಪಗಳಿಂದ ಪಂಚವಿಧವಾಗಿ ಇದ್ದಾನೆ. ಅದು ಹೇಗೆಂದರೆ ಈ ಅಗ್ನಿಗೆ ಆದಿತ್ಯನೇ ಸಮಿತ್ತು. ಹವಿಸ್ಸು ಮುಂತಾದುವನ್ನು ಸ್ವೀಕರಿಸುತ್ತಾನೆ ಎಂಬ ಅರ್ಥದಲ್ಲಿ ಆದಿತ್ಯ ಶಬ್ದವಾಚ್ಯನಾದ ಆದಿತ್ಯಸ್ಥನಾದ ನಾರಾಯಣ ನಾರಾಯಣನೇ ಚೆನ್ನಾಗಿ ಪ್ರಕಾಶಿಸುವುದರಿಂದ ಸಮಿತ್ ಶಬ್ದವಾಚ್ಯನಾಗಿದ್ದಾನೆ. ರಶ್ಮಿಗಳೇ ಧೂಮ. ತಾನು ಸುಖರೂಪನಾಗಿದ್ದು ಜೀವರಿಗೆ ಸುಖನೀಡುವುದರಿಂದ ರಶ್ಮಿ ಶಬ್ದವಾಚ್ಯನಾದ ರಶ್ಮಿಸ್ಥನಾದ ನಾರಾಯಣ ವಾಸುದೇವನೇ ಶತ್ರುಗಳನ್ನು ನಾಶಪಡಿಸುವುದರಿಂದ ಧೂಮನಾಮಕನಾಗಿದ್ದಾನೆ. ಅಹಸ್ಸೇ ಅರ್ಚಿ ಅಂದರೆ ಜ್ವಾಲೆ. ಯಾರಿಗಿಂತಲೂ ನಿಕೃಷ್ಟನಾಗದಿರುವುದರಿಂದ ಅಹಃ ಶಬ್ದವಾಚ್ಯನಾಗಿ ಅಹರ್ಗತನಾಗಿರುವ ನಾರಾಯಣ ಸಂಕರ್ಷಣನು ಅತಿಶಯವಾಗಿ ಪೂಜಿಸಲ್ಪಡುವ ಕಾರಣ ಅರ್ಚಿಃ ಶಬ್ದವಾಚ್ಯನಾಗಿದ್ದಾನೆ. ದಿಕ್ಕುಗಳೇ ಅಂಗಾರಗಳು ಅಂದರೆ ಕೆಂಡಗಳು. ಮುಖ್ಯತತ್ತ್ವೋಪದೇಶವನ್ನು ಕೊಡುವುದರಿಂದ ದಿಕ್ ಎಂದು ಕರೆಯಲ್ಪಡುವ ನಾರಾಯಣ ಪ್ರದ್ಯುಮ್ನನು ತನ್ನ ಅಂಗಗಳಲ್ಲಿಯೇ ತಾನು ರಮಿಸುವುದರಿಂದ ಅಂಗಾರ ಶಬ್ದವಾಚ್ಯನಾಗಿದ್ದಾನೆ. ಅವಾಂತರ ದಿಕ್ಕುಗಳೇ ವಿಸ್ಫುಲಿಂಗ ಅಂದರೆ ಕಿಡಿಗಳು. ಅವಾಂತರತತ್ತ್ವಗಳ ಉಪದೇಶ ಕೊಡುವ ಕಾರಣದಿಂದ ಅವಾಂತರ ದಿಕ್ ಎಂದು ಕರೆಯಲ್ಪಡುವ ಅವಾಂತರ ದಿಕ್ಕುಗಳಲ್ಲಿರುವ ನಾರಾಯಣಾನಿರುದ್ಧನು ಬಹುಪ್ರಕಾರವಾಗಿ ಪ್ರಕಾಶಿಸುವುದರಿಂದ ವಿಸ್ಫುಲಿಂಗ ಶಬ್ದವಾಚ್ಯನಾಗಿದ್ದಾನೆ. ಹೀಗೆ ನಾರಾಯಣ ನಾರಾಯಣಾದಿ ಪಂಚ ರೂಪಗಳಿಂದಿರುವ ದ್ಯುಲೋಕಸ್ಥನಾದ ನಾರಾಯಣನೆಂಬ ಅಗ್ನಿಯಲ್ಲಿ ದೇವತೆಗಳು ಹಿಂದೆ ಶ್ರದ್ಧಾಪೂರ್ವಕವಾಗಿ ಯಜ್ಞಾದಿಗಳನ್ನು ಮಾಡಿ ಮರಣ ಹೊಂದಿದ ಜೀವನನ್ನು ಜಲಾದಿ ಪಂಚಭೂತ ಸಹಿತವಾಗಿ ಹೋಮಿಸುತ್ತಾರೆ. ಅನಂತರ ಜೀವನು ದ್ಯುಲೋಕದಲ್ಲಿ ಸ್ವಲ್ಪಕಾಲವಿದ್ದು ಪುಣ್ಯಕ್ಷಯವಾದ ಮೇಲೆ ಚಂದ್ರಲೋಕವನ್ನು ಸೇರುತ್ತಾನೆ.

**ಉಪನಿಷತ್—ಪರ್ಜನ್ಯೋ ವಾ ಅಗ್ನಿರ್ಗೌತಮ । ತಸ್ಯ ಸಂವತ್ಸರ ಏವ ಸಮಿತ್ । ಅಭ್ರಾಣಿ ಧೂಮಃ । ವಿದ್ಯುದರ್ಚಿಃ । ಅಶನಿರಂಗಾರಾಃ । ಹ್ರಾದುನಯೋ ವಿಸ್ಫುಲಿಂಗಾಃ । ತಸ್ಮಿನ್ನೇತಸ್ಮಿನ್ನಗ್ನೌ ದೇವಾಃ ಸೋಮಂ ರಾಜಾನಂ ಜುಹ್ವತಿ । ತಸ್ಯಾ ಆಹುತ್ಯೈ ವೃಷ್ಟಿಃ ಸಂಭವತಿ ।**

ಗೌತಮನೇ! ಶ್ರೇಷ್ಠನಾದ ಬ್ರಹ್ಮನನ್ನೂ ಹುಟ್ಟಿಸುವುದರಿಂದ ಪರ್ಜನ್ಯನಾಮಕ

ನಾದ ಮೇಘಮಂಡಲಗತನಾದ ವಾಸುದೇವನು ಜೀವನನ್ನು ಹೋಮಿಸುವ ಸ್ಥಾನ ವಾದುದರಿಂದ ಅಗ್ನಿನಾಮಕನಾಗಿದ್ದಾನೆ. ಭಕ್ತರನ್ನು ಚೆನ್ನಾಗಿ ಸಂತೋಷಪಡಿಸುವು ದರಿಂದ ಸಂವತ್ಸರನಾಮಕನಾದ ಸಂವತ್ಸರಸ್ಥನಾದ ವಾಸುದೇವನಾರಾಯಣನು ಸಮಿತ್ತು. ಇನ್ನೊಬ್ಬರಿಂದ ಧರಿಸಲು ಸಾಧ್ಯವಿಲ್ಲದ ಅಭ್ರನಾಮಕನಾದ ಅಭ್ರಸ್ಥ ನಾದ ವಾಸುದೇವ ವಾಸುದೇವನು ಧೂಮ. ವಿಶೇಷವಾಗಿ ಪ್ರಕಾಶಿಸಿರುವುದರಿಂದ ವಿದ್ಯುತ್ ಎಂದು ಕರೆಯಲ್ಪಡುವ ವಿದ್ಯುದ್ಗತನಾದ ವಾಸುದೇವ ಸಂಕರ್ಷಣನು ಅರ್ಚಿ. ಸರ್ವವನ್ನು ಭಕ್ಷಿಸುವ ಕಾರಣ ಅಶನಿನಾಮಕನಾಗಿ ಸಿಡಿಲಿನಲ್ಲಿರುವ ವಾಸು ದೇವ ಪ್ರದ್ಯುಮ್ನನು ಅಂಗಾರಗಳು. ಗರ್ಜನೆ ಮಾಡುವ ಕಾರಣದಿಂದ ಹ್ರಾದುನಿ ನಾಮಕನಾಗಿ ಗುಡುಗಿನಲ್ಲಿರುವ ವಾಸುದೇವಾನಿರುದ್ಧನು ಕಿಡಿಗಳು. ಹೀಗೆ ವಾಸುದೇವ ನಾರಾಯಣಾದಿ ಪಂಚರೂಪದಿಂದ ಐದು ರೀತಿಯಾಗಿ ಮೇಘಮಂಡಲದಲ್ಲಿ ಇರುವ ವಾಸುದೇವರೂಪಿ ಅಗ್ನಿಯಲ್ಲಿ ಚಂದ್ರನಲ್ಲಿದ್ದ ಜೀವನನ್ನು ದೇವತೆಗಳು ಹೋಮಿಸು ತ್ತಾರೆ. ಜೀವನು ಮೇಘಮಂಡಲಾಂತರ್ಗತನಾದ ವಾಸುದೇವನಲ್ಲಿ ಸ್ವಲ್ಪಕಾಲವಿದ್ದು ಅನಂತರ ವೃಷ್ಟಿಯಲ್ಲಿ ಸೇರುತ್ತಾನೆ.

**ಉಪನಿಷತ್—ಅಯಂ ವೈ ಲೋಕೋಽಗ್ನಿರ್ಗೌತಮ । ತಸ್ಯ ಪೃಥಿವ್ಯೇವ ಸಮಿತ್ । ಅಗ್ನಿರ್ಧೂಮಃ । ರಾತ್ರಿರರ್ಚಿಃ । ಚಂದ್ರಮಾ ಅಂಗಾರಾಃ । ನಕ್ಷತ್ರಾಣಿ ವಿಸ್ಫುಲಿಂಗಾಃ । ತಸ್ಮಿನ್ನೇತಸ್ಮಿನ್ನಗ್ನೌ ದೇವಾ ವೃಷ್ಟಿಂ ಜುಹ್ವತಿ । ತಸ್ಯಾ ಆಹುತ್ಯಾ ಅನ್ನಂ ಸಂಭವತಿ ।**

ಗೌತಮನೇ! ಪೃಥಿವೀಲೋಕಸ್ಥನಾದ ಸಂಕರ್ಷಣನೇ ಅಗ್ನಿ. ಅವನಿಗೆ ಪ್ರಥಿತ ಅಂದರೆ ಕೀರ್ತಿವಂತನಾದುದರಿಂದ ಪೃಥಿವೀನಾಮಕನಾದ ಪೃಥಿವೀಸ್ಥ ಸಂಕರ್ಷಣ ನಾರಾಯಣನು ಸಮಿತ್ತು. ಸಂಹಾರಮಾಡುವುದರಿಂದ ಅಗ್ನಿನಾಮಕನಾದ ಅಗ್ನಿಸ್ಥ ನಾದ ಸಂಕರ್ಷಣ ವಾಸುದೇವನು ಧೂಮ. ಸುಖವನ್ನು ಕೊಡುವುದರಿಂದ ರಾತ್ರಿ ನಾಮಕನಾದ ರಾತ್ರಿಸ್ಥ ಸಂಕರ್ಷಣ ಸಂಕರ್ಷಣನು ಅರ್ಚಿ. ಆಹ್ಲಾದವನ್ನು ಕೊಡುವುದರಿಂದ ಚಂದ್ರನಾಮಕನಾದ ಚಂದ್ರಾಂತರ್ಗತ ಸಂಕರ್ಷಣ ಪ್ರದ್ಯುಮ್ನನು ಅಂಗಾರಗಳು. ಇವನನ್ನು ರಕ್ಷಿಸುವವರು ಮತ್ತೊಬ್ಬರು ಇಲ್ಲದಿರುವುದರಿಂದ ನಕ್ಷತ್ರನಾಮಕನಾದ ನಕ್ಷತ್ರಗತ ಸಂಕರ್ಷಣಾನಿರುದ್ಧನು ವಿಸ್ಫುಲಿಂಗಗಳು. ಹೀಗೆ ಸಂಕರ್ಷಣನಾರಾಯಣಾದಿ ಪಂಚರೂಪದಿಂದ ಐದು ವಿಧವಾಗಿ ಪೃಥಿವೀ ಲೋಕದಲ್ಲಿರುವ ಸಂಕರ್ಷಣನಾಮಕ ಅಗ್ನಿಯಲ್ಲಿ ದೇವತೆಗಳು ವೃಷ್ಟಿಯಲ್ಲಿದ್ದ ಜೀವ ನನ್ನು ಆಹುತಿಯಾಗಿ ಹಾಕುತ್ತಾರೆ. ಈ ಆಹುತಿಯನ್ನು ಹಾಕಿದ ಮೇಲೆ, ಜೀವನು ಅಲ್ಲಿ ಸ್ವಲ್ಪಕಾಲವಿದ್ದು ಓಷಧಿಯಲ್ಲಿ ಪ್ರವೇಶಮಾಡಿ ತಿನ್ನುವ ಆಹಾರದಲ್ಲಿ ಹೋಗಿ ಸೇರುತ್ತಾನೆ.

**ಉಪನಿಷತ್—ಪುರುಷೋ ವಾ ಅಗ್ನಿರ್ಗೌತಮ । ತಸ್ಯ ವ್ಯಾತ್ತಮೇವ ಸಮಿತ್। ಪ್ರಾಣೋ ಧೂಮಃ । ವಾಗರ್ಚಿಃ । ಚಕ್ಷುರಂಗಾರಾಃ । ಶ್ರೋತ್ರಂ ವಿಷ್ಫುಲಿಂಗಾಃ । ತಸ್ಮಿನ್ನೇತಸ್ಮಿನ್ನಗ್ನೌ ದೇವಾ ಅನ್ನಂ ಜುಹ್ವತಿ । ತಸ್ಯಾ ಆಹುತ್ಯೈ ರೇತಃ ಸಂಭವತಿ ।**

ಗೌತಮ! ಜಗತ್ತನ್ನು ತುಂಬುವುದರಿಂದ ಪುರುಷನಾಮಕನಾದ ಪುರುಷಗತನಾದ ಪ್ರದ್ಯುಮ್ನನೇ ಅಗ್ನಿ. ಅವನಿಗೆ ವ್ಯಾತ್ತನಾಮಕನಾಗಿ ಬಾಯಿತೆರೆಯುವುದರಲ್ಲಿ ಇರುವ ಪ್ರದ್ಯುಮ್ನ ನಾರಾಯಣನು ಸಮಿತ್ತು. ಜಗತ್ತನ್ನು ನಡೆಸುವುದರಿಂದ ಪ್ರಾಣನಾಮಕನಾದ ಪ್ರಾಣಾಂತಸ್ಥನಾದ ಪ್ರದ್ಯುಮ್ನ ವಾಸುದೇವನು ಧೂಮ. ಮಾತನಾಡುವುದರಿಂದ ವಾಙ್‌ನಾಮಕನಾದ ವಾಕ್‌ಸ್ಥಿತನಾದ ಪ್ರದ್ಯುಮ್ನ ಸಂಕರ್ಷಣನು ಅರ್ಚಿ. ನೋಡುವುದರಿಂದ ಚಕ್ಷುರ್ನಾಮಕನಾದ ಚಕ್ಷುರ್ಗತನಾದ ಪ್ರದ್ಯುಮ್ನ ಪ್ರದ್ಯುಮ್ನನು ಅಂಗಾರಗಳು. ಕೇಳುವುದರಿಂದ ಶ್ರೋತ್ರನಾಮಕನಾದ ಶ್ರೋತ್ರಗತನಾದ ಪ್ರದ್ಯುಮ್ನಾನಿರುದ್ಧನು ವಿಷ್ಫುಲಿಂಗಗಳು. ಹೀಗೆ ಪ್ರದ್ಯುಮ್ನ ನಾರಾಯಣಾದಿ ಪಂಚರೂಪಗಳಿಂದ ಐದು ವಿಧವಾಗಿ ಪುರುಷಗತನಾದ ಪ್ರದ್ಯುಮ್ನ ನಾಮಕ ಅಗ್ನಿಯಲ್ಲಿ ಅನ್ನದಲ್ಲಿದ್ದ ಜೀವನನ್ನು ದೇವತೆಗಳು ಹೋಮಿಸುತ್ತಾರೆ. ಸ್ವಲ್ಪ ಕಾಲದ ಮೇಲೆ ಆ ಜೀವನು ಪುರುಷನ ರೇತಸ್ಸಿನಲ್ಲಿ ಹೋಗಿ ಸೇರುತ್ತಾನೆ.

**ಉಪನಿಷತ್—ಯೋಷಾ ವಾ ಅಗ್ನಿರ್ಗೌತಮ । ತಸ್ಯಾ ಉಪಸ್ಥ ಏವ ಸಮಿತ್ । ಲೋಮಾನಿ ಧೂಮಃ । ಯೋನಿರರ್ಚಿಃ । ಯದಂತಃ ಕರೋತಿ ತೇಽಂಗಾರಾಃ । ಅಭಿನಂದಾ ವಿಷ್ಫುಲಿಂಗಾಃ । ತಸ್ಮಿನ್ನೇ-ತಸ್ಮಿನ್ನಗ್ನೌ ದೇವಾ ರೇತೋ ಜುಹ್ವತಿ । ತಸ್ಯಾ ಆಹುತ್ಯೈ ಪುರುಷಃ ಸಂಭವತಿ । ಸ ಜೀವತಿ ಯಾವಜ್ಜೀವತಿ । ಅಥ ಯದಾ ಮ್ರಿಯತೇ ಅಥೈನಮಗ್ನಯೇ ಹರಂತಿ । ತಸ್ಯಾಗ್ನಿರೇವಾಗ್ನಿರ್ಭವತಿ । ಸಮಿತ್ ಸಮಿತ್ । ಧೂಮೋ ಧೂಮಃ। ಅರ್ಚಿರರ್ಚಿಃ । ಅಂಗಾರಾ ಅಂಗಾರಾಃ। ವಿಷ್ಫುಲಿಂಗಾ ವಿಷ್ಫುಲಿಂಗಾಃ । ತಸ್ಮಿನ್ನೇತಸ್ಮಿನ್ನಗ್ನೌ ದೇವಾಃ ಪುರುಷಂ ಜುಹ್ವತಿ । ತಸ್ಯಾ ಆಹುತ್ಯೈ ಪುರುಷೋ ಭಾಸ್ವರವರ್ಣಃ ಸಂಭವತಿ ।**

ಗೌತಮ! ಎಲ್ಲರಿಂದ ಪ್ರೀತಿಸಲ್ಪಡುತ್ತಾ ಸ್ತ್ರೀಯರಲ್ಲಿರುವ ಯೋಷಿತ್‌ನಾಮಕನಾದ ಅನಿರುದ್ಧನು ಅಗ್ನಿ. ಸರ್ವಜೀವರಿಗೆ ಹೃದಯದಲ್ಲಿದ್ದು ಸಮೀಪದಲ್ಲಿರುವುದರಿಂದ ಉಪಸ್ಥನಾಮಕನಾದ ಉಪಸ್ಥಸ್ಥಿತನಾದ ಅನಿರುದ್ಧನಾರಾಯಣನು ಸಮಿತ್ತು. ಪ್ರಪಂಚ ನಾಶಮಾಡುವುದರಿಂದ ಲೋಮನಾಮಕನಾದ ಲೋಮಸ್ಥನಾದ ಅನಿರುದ್ಧ ವಾಸುದೇವನು ಧೂಮ. ಸಜ್ಜನರನ್ನು ಮೋಕ್ಷಕ್ಕೂ, ದುರ್ಜನರನ್ನು ನರಕಕ್ಕೂ

ಒಯ್ಯುವುದರಿಂದ ಯೋನಿನಾಮಕನಾದ ಯೋನಿಸ್ಥನಾದ ಅನಿರುದ್ಧ ಸಂಕರ್ಷಣನು ಅರ್ಚಿ. ಲಯಕಾಲದಲ್ಲಿ ಎಲ್ಲವನ್ನೂ ತನ್ನೊಳಗೆ ಸೇರಿಸಿಕೊಳ್ಳುವ ಅನಿರುದ್ಧ ಪ್ರದ್ಯುಮ್ನನು ಅಂಗಾರಗಳು. ಸಂತೋಷಗೊಳಿಸುವುದರಿಂದ ಅಭಿನಂದನಾಮಕನಾದ ಅಭಿನಂದಗತನಾದ ಅನಿರುದ್ಧಾನಿರುದ್ಧನು ವಿಷ್ಫುಲಿಂಗಗಳು. ಹೀಗೆ ನಾರಾಯಣಾದಿ ಪಂಚರೂಪನಾದ ಅನಿರುದ್ಧನಲ್ಲಿ ದೇವತೆಗಳು ರೇತಸ್ಸಿನಲ್ಲಿರುವ ಜೀವನನ್ನು ಆಹುತಿಯಾಗಿ ಹಾಕುತ್ತಾರೆ. ಅನಂತರ ಸ್ವಲ್ಪಕಾಲದಲ್ಲಿ ಆ ಜೀವನು ಪಾಂಚಭೌತಿಕ ಶರೀರ ಯುಕ್ತನಾಗುತ್ತಾನೆ. ಎಷ್ಟುಕಾಲ ಜೀವಿಸಿರಲು ಕರ್ಮವಿದೆಯೋ ಅಲ್ಲಿಯವರೆಗೆ ಬದುಕುತ್ತಾನೆ. ಅನಂತರ ಕರ್ಮ ತೀರಿದಾಗ ಯಾವಾಗ ಮರಣ ಹೊಂದುತ್ತಾನೆಯೋ ಆಗ ಅವನನ್ನು ದೇವತೆಗಳು ಅಂತ್ಯೇಷ್ಟಿಯ ಅಗ್ನಿಯಲ್ಲಿ ಹಾಕುತ್ತಾರೆ. ಈ ಆರನೇ ಆಹುತಿಗೆ ಅಗ್ನಿಸ್ಥ ಅಗ್ನಿನಾಮಕನಾದ ಪರಮಾತ್ಮನೇ ಅಗ್ನಿ. ಕಾಷ್ಠಸ್ಥ ಕಾಷ್ಠನಾಮಕ ಪರಮಾತ್ಮನೆ ಸಮಿತ್ತು. ಧೂಮಸ್ಥ ಧೂಮನಾಮಕನೇ ಧೂಮ. ಅರ್ಚಿಸ್ಥ ಅರ್ಚಿನಾಮಕನೇ ಅರ್ಚಿ. ಅಂಗಾರಸ್ಥ ಅಂಗಾರನಾಮಕ ಪರಮಾತ್ಮನೇ ಅಂಗಾರಗಳು. ಕಿಡಿಗಳಲ್ಲಿರುವ ವಿಷ್ಫುಲಿಂಗನಾಮಕನೆ ಕಿಡಿಗಳು. ಈ ಅಗ್ನಿಯಲ್ಲಿ ದೇವತೆಗಳು ಮೃತಪುರುಷನನ್ನು ಹೋಮ ಮಾಡುತ್ತಾರೆ. ಇದರಿಂದ ಪುರುಷನು ನಿಷೇಕಾದಿ ಅಂತ್ಯೇಷ್ಟಿ ಪರಿಯಂತವಾಗಿ ಸಂಸ್ಕೃತನಾದ ಕಾರಣ ಜ್ಯೋತಿರ್ಮಯವಾದ ಶರೀರವನ್ನು ಹೊಂದುತ್ತಾನೆ.

**ಜ್ಞಾನಿಗಳಿಗೆ ಅರ್ಚಿರಾದಿ ಮೋಕ್ಷಮಾರ್ಗ :**

**ಉಪನಿಷತ್—ತೇ ಯ ಏವಮೇತದ್ವಿದುರ್ಯೇ ಚಾಮೀ ಅರಣ್ಯೇ ಶ್ರದ್ಧಾಂ ಸತ್ಯಮುಪಾಸತೇ ತೇಽರ್ಚಿರಭಿಸಂಭವಂತಿ । ಅರ್ಚಿಷೋಽಹಃ । ಅಹ್ನ ಆಪೂರ್ಯಮಾಣಪಕ್ಷಂ।ಆಪೂರ್ಯಮಾಣಪಕ್ಷಾತ್‌ಯಾನ್ ಷಣ್ಮಾಸಾನು-ದಙ್ ಆದಿತ್ಯ ಏತಿ । ಮಾಸೇಭ್ಯೋ ದೇವಲೋಕಂ । ದೇವಲೋಕಾ-ದಾದಿತ್ಯಂ । ಆದಿತ್ಯಾದ್ ವೈದ್ಯುತಂ । ತಾನ್ ವೈದ್ಯುತಾನ್ ಪುರುಷೋ ಮಾನವ ಏತ್ಯ ಬ್ರಹ್ಮಲೋಕಾನ್ ಗಮಯತಿ । ತೇ ತೇಷು ಬ್ರಹ್ಮ-ಲೋಕೇಷು ಪರಾನ್ ಪರಾವತೋ ವಸಂತಿ । ತೇಷಾಂ ನ ಪುನರಾವೃತ್ತಿಃ।**

ಯಾರು ಹೀಗೆ ಈ ಪಂಚಾಗ್ನಿಗಳ ಸ್ವರೂಪವನ್ನು ತಿಳಿಯುತ್ತಾರೆಯೋ ಮತ್ತು ಯಾರು ಅರಣ್ಯದಲ್ಲಿ ಶ್ರದ್ಧೆಯಿಂದ ಸದ್ಗುಣ ಸ್ವರೂಪನಾದ ಪರಮಾತ್ಮನನ್ನು ಉಪಾಸನೆ ಮಾಡುತ್ತಾರೆಯೋ ಅವರಿಬ್ಬರೂ ಈ ದೇಹವನ್ನು ತೊರೆದು ಅರ್ಚಿಲೋಕವನ್ನು ಹೊಂದುತ್ತಾರೆ. ಅನಂತರ ವಾಯುಲೋಕವನ್ನು ಹೊಂದಿ ಅಹರ್ನಾಮಕ ದೇವತಾ ಲೋಕವನ್ನು ಹೊಂದುತ್ತಾರೆ. ಅಲ್ಲಿ ಸ್ವಲ್ಪಕಾಲವಿದ್ದು ಶುಕ್ಲಪಕ್ಷಾಭಿಮಾನಿದೇವತೆಯ ಲೋಕವನ್ನು ಹೊಂದುತ್ತಾರೆ. ಅಲ್ಲಿಂದ ಸೂರ್ಯನು ಯಾವ ಆರು ಮಾಸಗಳಲ್ಲಿ

ಉತ್ತರದಲ್ಲಿ ಸಂಚರಿಸುತ್ತಾನೆಯೋ ಅಂತಹ ಉತ್ತರಾಯಣಾಭಿಮಾನಿದೇವನ ಲೋಕ ವನ್ನು ಹೊಂದುತ್ತಾರೆ. ಅಲ್ಲಿಂದ ಸಂವತ್ಸರ ತಟಿತ್ ವರುಣಲೋಕ ಮಾರ್ಗವಾಗಿ ಪ್ರಜಾಪತಿ ಲೋಕವನ್ನೂ, ಅಲ್ಲಿಂದ ಆದಿತ್ಯ ಲೋಕವನ್ನೂ, ಆದಿತ್ಯ ಲೋಕದಿಂದ ಹೊರಟು ಸೋಮ ವೈಶ್ವಾನರ ಇಂದ್ರ ಧ್ರುವ ಲೋಕದ್ವಾರವಾಗಿ ವಿದ್ಯುನ್ನಾಮಕ ಭಾರತೀಲೋಕವನ್ನೂ ಹೊಂದಿದ ಈ ಜೀವರನ್ನು ಮುಖ್ಯವಾಯುವು ಬ್ರಹ್ಮಲೋಕ ವಿಷ್ಣುಲೋಕಗಳಿಗೆ ಕರೆದೊಯ್ಯುತ್ತಾನೆ. ಆ ಜೀವರು ಅಲ್ಲಿ ಬ್ರಹ್ಮದೇವರ ಆಯುಸ್ಸಿನ ಸಮಾಪ್ತಿ ಪರ್ಯಂತ ವಾಸಮಾಡುತ್ತಾರೆ. ಅವರು ಪುನಃ ಸಂಸಾರಕ್ಕೆ ಮರಳಿ ಬರುವುದಿಲ್ಲ.

**ಅಜ್ಞಾನಿಗಳಿಗೆ ಧೂಮಾದಿಮಾರ್ಗ :**

**ಉಪನಿಷತ್—ಅಥ ಯೇ ಯಜ್ಞೇನ ದಾನೇನ ತಪಸಾ ಲೋಕಾನ್ ಜಯಂತಿ ತೇ ಧೂಮಮಭಿಸಂಭವಂತಿ। ಧೂಮಾದ್ ರಾತ್ರಿಂ । ರಾತ್ರೇರಪಕ್ಷೀಯಮಾಣಪಕ್ಷಂ । ಅಪಕ್ಷೀಯಮಾಣಪಕ್ಷಾದ್ ಯಾನ್ ಷಣ್ಮಾಸಾನ್ ದಕ್ಷಿಣಾಽಽದಿತ್ಯ ಏತಿ । ಮಾಸೇಭ್ಯಃ ಪಿತೃಲೋಕಂ । ಪಿತೃಲೋಕಾಚ್ಚಂದ್ರಂ । ತೇ ಚಂದ್ರಂ ಪ್ರಾಪ್ಯಾನ್ನಂ ಭವಂತಿ । ತಾಂಸ್ತತ್ರ ದೇವಾ ಯಥಾ ಸೋಮಂ ರಾಜಾನಮಾಪ್ಯಾಯಸ್ವಾಪಕ್ಷೀಯಸ್ವೇತ್ಯೇವಮೇನಾಂಸ್ತತ್ರ ಭಕ್ಷಯಂತಿ । ತೇಷಾಂ ಯದಾ ತತ್ ಪರ್ಯವೈತ್ಯಥೇಮಮೇವಾಽಕಾಶಮಭಿನಿಷ್ಪದ್ಯಂತೇ । ಆಕಾಶಾದ್ ವಾಯುಂ । ವಾಯೋರ್ವೃಷ್ಟಿಂ। ವೃಷ್ಟೇಃ ಪೃಥಿವೀಂ । ತೇ ಪೃಥಿವೀಂ ಪ್ರಾಪ್ಯಾನ್ನಂ ಭವಂತಿ । ಪುನಃ ಪುರುಷಾಗ್ನೌ ಹೂಯಂತೇ । ತತೋ ಯೋಷಾಗ್ನೌ । ತತೋ ಜಾಯಂತೇ । ತೇ ಲೋಕಾನ್ ಪ್ರತ್ಯುತ್ಥಾಯಿನಸ್ತ ಏವಾನುಪರಿವರ್ತಂತೇ । ಅಥ ಯ ಏತೌ ಪಂಥಾನೌ ನ ವಿದುಸ್ತೇ ಕೀಟಾಃ ಪತಂಗಾಃ ಯದಿದಂ ದಂದಶೂಕಮ್ ।**

**|| ಇತಿ ದ್ವಿತೀಯ ಬ್ರಾಹ್ಮಣಂ ||**

ಮತ್ತು ಯಾರು ಜ್ಯೋತಿಷ್ಟೋಮಾದಿ ಯಾಗ, ಸತ್ಪಾತ್ರರಲ್ಲಿ ದಾನ, ಕೃಚ್ಛ್ರ-ಚಾಂದ್ರಾಯಣ ಮೊದಲಾದ ಸಕಾಮಕರ್ಮಗಳಿಂದ ಚಂದ್ರಾದಿಲೋಕಗಳನ್ನು ಜಯಿಸುತ್ತಾರೆಯೋ ಅವರು ಮರಣಾನಂತರ ಧೂಮಾಭಿಮಾನಿದೇವತೆಯ ಲೋಕವನ್ನು ಹೊಂದುತ್ತಾರೆ. ಅಲ್ಲಿಂದ ರಾತ್ರ್ಯಭಿಮಾನಿ ಲೋಕಕ್ಕೂ, ಅಲ್ಲಿಂದ ಕೃಷ್ಣಪಕ್ಷಾಭಿಮಾನಿ ಲೋಕಕ್ಕೂ ಅಲ್ಲಿಂದ ದಕ್ಷಿಣಾಯನಾಭಿಮಾನಿ ಲೋಕಕ್ಕೂ, ಅಲ್ಲಿಂದ ಪಿತೃಲೋಕಕ್ಕೂ, ಅಲ್ಲಿಂದ ಚಂದ್ರಲೋಕಕ್ಕೂ ಹೋಗುತ್ತಾರೆ. ಅಲ್ಲಿ ದೇವತೆಗಳಿಗೆ ಸೇವಕರಾಗುತ್ತಾರೆ. ದೇವತೆಗಳು ಅವರನ್ನು ತಮ್ಮ ಸೇವೆಯಲ್ಲಿ ತೊಡಗಿಸುತ್ತಾರೆ.

ಹೇಗೆ ಋತ್ವಿಜರು ಯಾರಿಗಾದರೂ 'ಸೋಮಲತೆಯನ್ನು ತುಂಬು, ಒರಿದು ಮಾಡು' ಎನ್ನುತ್ತಾ ಅದನ್ನು ತರಿಸಿ ಭಕ್ಷಿಸುವರೋ ಹಾಗೆಯೇ ದೇವತೆಗಳು ಈ ಜೀವರನ್ನು 'ನೀನು ಈ ಕರ್ಮದಿಂದ ತುಂಬಿಕೊಳ್ಳು, ಒರಿದಾಗು' ಎನ್ನುತ್ತ ಅವರಿಂದ ಸೇವೆ ಮಾಡಿಸಿಕೊಳ್ಳುತ್ತಾರೆ. ಹೀಗೆ ಚಂದ್ರನಲ್ಲಿರುವ ಜೀವರು ತಮ್ಮ ಅದೃಷ್ಟವು ಮುಗಿದ ಮೇಲೆ ಆಕಾಶವನ್ನು ತಲುಪುತ್ತಾರೆ. ಆಕಾಶದಿಂದ ವಾಯುಲೋಕಕ್ಕೂ ಅಲ್ಲಿಂದ ವೃಷ್ಟಿಯಲ್ಲಿಯೂ ವೃಷ್ಟಿಯಿಂದ ಭೂಲೋಕಕ್ಕೂ ಬರುತ್ತಾರೆ. ಭೂಲೋಕಕ್ಕೆ ಬಂದು ಆಹಾರದೊಳಗೆ ಸೇರುತ್ತಾರೆ. ಪುನಃ ಪುರುಷಾಗ್ನಿಯಲ್ಲಿ ಹೋಮಿಸಲ್ಪಡುತ್ತಾರೆ. ಅನಂತರ ಯೋಷಾಗ್ನಿಯಲ್ಲಿ ಹೋಮಿಸಲ್ಪಟ್ಟು ಜನ್ಮವನ್ನು ಪಡೆಯುತ್ತಾರೆ. ಹೀಗೆ ಸಕಾಮ ಕರ್ಮ ಮಾಡಿ ಪುನರಾವರ್ತಿಯುಳ್ಳ ಲೋಕಗಳಿಗೆ ಹೋಗುತ್ತಾರೆ. ಪುಣ್ಯ ತೀರಿದಾಗ ಪುನಃ ಹಿಂತಿರುಗಿ ಬರುತ್ತಾರೆ. ಹೀಗೆಯೇ ಸಂಚರಿಸುತ್ತಲೇ ಇರುತ್ತಾರೆ. ದೇವಯಾನ ಪಿತೃಯಾಣ ರೂಪವಾದ ಈ ಮಾರ್ಗದ್ವಯವನ್ನು ಯಾರು ಹೊಂದುವುದಿಲ್ಲವೋ ಅವರು ಕ್ರಿಮಿ ಕೀಟಗಳು, ಪತಂಗಗಳು ಮತ್ತು ಸರ್ಪಗಳಾಗಿ ಹುಟ್ಟುತ್ತಾರೆ.

ಎರಡನೇ ಬ್ರಾಹ್ಮಣ ಮುಗಿಯಿತು.

**ನಾರಾಯಣಾದಿ ಪಂಚಭಗವದ್ರೂಪಗಳೇ ಪಂಚಾಗ್ನಿಗಳು :**

**ಭಾಷ್ಯ—ದ್ಯುಪರ್ಜನ್ಯಧರಾಪುಂಸ್ತ್ರೀಸಂಸ್ಥಿತಂ ಪಂಚರೂಪಿಣಮ್ ।**
**ನಾರಾಯಣಂ ವಾಸುದೇವಂ ತಥಾ ಸಂಕರ್ಷಣಂ ಪ್ರಭುಮ್ ।**
**ಪ್ರದ್ಯುಮ್ನಂ ಚಾನಿರುದ್ಧಂ ಚ ಕ್ರಮಾದ್ ಧ್ಯಾಯಂಸ್ತು ಸರ್ವದಾ ।**
**ಪಂಚಾಗ್ನಿವಿನ್ನಾಮ ಭವೇತ್ ಸ ಯಾತಿ ಪರಮಂ ಪದಮ್ ।**
**ನಾಸ್ಯ ಸಂಸರ್ಗದೋಷೋಽಪಿ ಕದಾಚನ ಭವಿಷ್ಯತಿ ।**
**ಇತಿ ತ್ರೈವಿದ್ಯೇ ।**

ದ್ಯುಲೋಕ, ಮೇಘಮಂಡಲ, ಪೃಥಿವೀ, ಪುರುಷ ಮತ್ತು ಸ್ತ್ರೀಯಲ್ಲಿ ಕ್ರಮವಾಗಿ ನಾರಾಯಣ, ವಾಸುದೇವ, ಸಂಕರ್ಷಣ, ಪ್ರದ್ಯುಮ್ನ ಅನಿರುದ್ಧರೂಪಿಯಾಗಿರುವ, ಪ್ರತ್ಯೇಕವಾಗಿಯೂ ನಾರಾಯಣಾದಿ ಪಂಚರೂಪಿಯಾಗಿರುವ ಪರಿಯನ್ನು ತಿಳಿದು ಸರ್ವದಾ ಧ್ಯಾನಿಸುವವನು ಪಂಚಾಗ್ನಿ ವಿದ್ಯಾವೇತ್ತನೆನಿಸುತ್ತಾನೆ. ಅವನು ಮೋಕ್ಷವನ್ನು ಹೊಂದುತ್ತಾನೆ. ಈ ಲೋಕದಲ್ಲಿಯೂ ಪಾಪಿಗಳ ಸಂಸರ್ಗದೋಷವು ಅವನಿಗೆ ಬರುವುದಿಲ್ಲ ಎಂದು ತ್ರೈವಿದ್ಯ ಎಂಬ ಗ್ರಂಥದಲ್ಲಿ ಹೇಳಿದೆ.

**ಭಾಷ್ಯ—ದೃಷ್ಟಾದೃಷ್ಟಮಹತ್ತ್ವಮ್ । ಅನೇನೋಪನಿಷದುಕ್ತ ವಿಧಾನೇನ**

ಜಾತಃ ಪುತ್ರಃ ಪ್ರಾಯಃ ಸ್ವರ್ಗಾಪವರ್ಗಯೋರ್ಯೋಗ್ಯೋ ಭವತೀತಿ ಪ್ರಜಾತಿ ಕರ್ಮವಚನಮ್ ।

ಯಥೋಪನಿಷದಂ ಜಾತೋ ಯೋಗ್ಯಃ ಸ್ವರ್ಗಾಪವರ್ಗಯೋಃ ।
ಭವೇದ್ ಯದಿ ಮನಃ ಪಿತ್ರೋರ್ವಿಷ್ಣೋರ್ನಾನ್ಯತ್ರ ಗಚ್ಛತಿ ।
ನ ಕುರ್ಯಾದ್ ಯದಿ ಕರ್ಮೈತನ್ಮನಃ ಪಿತ್ರೋಸ್ತು ವಿಷ್ಣುಗಮ್ ।
ದೃಷ್ಟಸಾಮರ್ಥ್ಯಹೀನಶ್ಚ ಮೋಕ್ಷಯೋಗ್ಯಃ ಸ್ಥಿರಂ ಯದಿ ।
ದೃಷ್ಟಸಾಮರ್ಥ್ಯವಾಂಶ್ಚ ಸ್ಯಾದಾಜ್ಞಾದ್ಯೈಃ ಕಾರಣೈಃ ಕ್ವಚಿತ್ ।
ವಿಶೇಷಕಾರಣಾಭಾವೇ ಯಥೋಕ್ತಂ ನಾನ್ಯಥಾ ಭವೇತ್ ।

ಇತಿ ಚ ।

**ಅನುವಾದ**—ಮುಂದೆ ಉಪನಿಷತ್ತಿನಲ್ಲಿ 'ಸ ಯಃ ಕಾಮಯತೇ ಮಹತ್ ಪ್ರಾಪ್ನುಯಾಂ' ಎಂಬಲ್ಲಿ ಮಹತ್ ಶಬ್ದದಿಂದ ಐಹಿಕ ಮತ್ತು ಆಮುಷ್ಮಿಕವೆಂದು ಎರಡು ಬಗೆಯ ಮಹತ್ವವೂ ವಿವಕ್ಷಿತವಾಗಿದೆ. 'ಏಷಾಂ ಭೂತಾನಾಂ ಪೃಥಿವೀ ರಸಃ' ಎಂದು ಮುಂತಾಗಿ ಮುಂದೆ ಉಪನಿಷತ್ತಿನಲ್ಲಿ ಹೇಳಿದ ವಿಧಾನದಿಂದ ಹುಟ್ಟಿದ ಮಗನು ಪ್ರಾಯಃ ಸ್ವರ್ಗ ಮತ್ತು ಮೋಕ್ಷಗಳಿಗೆ ಯೋಗ್ಯನಾಗುತ್ತಾನಾದ್ದರಿಂದ ಪುತ್ರೋತ್ಪತ್ತಿ ಕರ್ಮವು ಹೇಳಲ್ಪಟ್ಟಿದೆ.

ತಂದೆತಾಯಿಗಳ ಮನಸ್ಸು ಪುತ್ರೋತ್ಪಾದನ ಕಾಲದಲ್ಲಿ ವಿಷ್ಣುವಿನಿಂದ ಬೇರೆಕಡೆಗೆ ಹೋಗದೇ ಇದ್ದರೆ ಉಪನಿಷತ್ತಿನಲ್ಲಿ ಹೇಳಿದ ವಿಧಾನದಂತೆ ಹುಟ್ಟಿದ ಪುತ್ರನು ಸ್ವರ್ಗ ಮೋಕ್ಷಗಳಿಗೆ ಯೋಗ್ಯನಾಗುತ್ತಾನೆ. ತಂದೆ ತಾಯಿಗಳ ಮನಸ್ಸು ಸ್ಥಿರವಾಗಿ ವಿಷ್ಣುವಿನಲ್ಲಿದ್ದು ಉಪನಿಷತ್ತಿನಲ್ಲಿ ಹೇಳಿದ ಕರ್ಮ ವಿಧಾನವನ್ನು ಅನುಸರಿಸದಿದ್ದರೆ ಹುಟ್ಟುವ ಪುತ್ರನು ಮೋಕ್ಷಯೋಗ್ಯನಾಗುವನು. ಆದರೆ ಕರ್ಮವನ್ನು ಮಾಡಿದ್ದರೆ ಏನು ದೃಷ್ಟ ಫಲ ಉಂಟಾಗಬೇಕಾಗಿದ್ದಿತೋ ಆ ಸಾಮರ್ಥ್ಯ ಉಂಟಾಗುವುದಿಲ್ಲ. ಕೆಲವು ಕಡೆ ಉಪನಿಷದುಕ್ತ ಕರ್ಮ ಮಾಡದೆಯೂ ತಪಸ್ವಿಗಳಾದ ಮಹಾನುಭಾವರ ಆಜ್ಞೆ, ವರ ಮೊದಲಾದವುಗಳಿಂದ ಪುತ್ರನು ದೃಷ್ಟಫಲ ಸಾಮರ್ಥ್ಯವುಳ್ಳವನಾಗುತ್ತಾನೆ. ಅಂತಹ ವಿಶೇಷಕಾರಣಗಳಿಲ್ಲದಿದ್ದರೆ ಮೊದಲು ಹೇಳಿದ ನಿಯಮವು ವ್ಯತ್ಯಾಸವನ್ನು ಹೊಂದುವುದಿಲ್ಲ ಎಂದೂ ಹೇಳಿದೆ.

**ಭಾಷ್ಯ**—ನಾರಾಯಣೋ ದ್ಯುಶಬ್ದೋಕ್ತಃ ಸರ್ವದಾ ದ್ಯುತಿಹೇತುತಃ ।
ವಾಸುದೇವಸ್ತು ಪರ್ಜನ್ಯಃ ಪರಂ ಸಂಜನಯೇದ್ ಯತಃ ।
ಸಂಕರ್ಷಣಸ್ತು ಪೃಥಿವೀ ಪ್ರಥಿತತ್ವಾತ್ ಸದೈವ ಹಿ ।
ಪ್ರದ್ಯುಮ್ನಃ ಪುರುಷೇತ್ಯುಕ್ತಃ ಪೂರಯೇಚ್ ಸ ಜಗದ್ ಯತಃ ।

**ಸ್ತ್ರೀಶಬ್ದೋದಿತೋಽನಿರುದ್ಧಃ ಸ್ಯಾತ್ ಸಹಿತಸ್ತ್ರಿಷು ಯತ್ ಸದಾ ।**
**ಅನಿರುದ್ಧೋ ಹಿ ವೇದೇಷು ಸರ್ವದಾ ತ್ರಿಷು ಸಂಸ್ಥಿತಃ ।**
**ದ್ಯುವಾದಿಷು ಪ್ರಸಿದ್ಧೇಷು ತತ್ಸಂಬಂಧಾದ್ ದ್ಯುವಾದಿಕಃ ।**
**ಶಬ್ದೋ ಭವೇತ್.........।**

**ಅನುವಾದ**—ಸರ್ವದಾ ಜ್ಞಾನಸ್ವರೂಪನಾದುದರಿಂದ ನಾರಾಯಣನು ದ್ಯುಶಬ್ದ ವಾಚ್ಯನಾಗುತ್ತಾನೆ. ಯದ್ಯಪಿ ಉಪನಿಷತ್ತಿನಲ್ಲಿ 'ಅಸೌ ಲೋಕಃ' ಎಂದೇ ಇದೆ. ಆದರೆ ಅದು ದ್ಯುಲೋಕಪರವಾದ್ದರಿಂದ ನಾರಾಯಣನಲ್ಲಿ ದ್ಯುಶಬ್ದವನ್ನು ಹೀಗೆ ಸಮನ್ವಯ ಮಾಡಿಕೊಳ್ಳಬೇಕು. ಪರ ಎಂದರೆ ಜೀವೋತ್ತಮನಾದ ಚತುರ್ಮುಖ ನನ್ನು ಸೃಷ್ಟಿಸುವುದರಿಂದ ವಾಸುದೇವನು ಪರ್ಜನ್ಯ ಎನಿಸುತ್ತಾನೆ. ದೇವತೆಗಳಲ್ಲಿ ಪ್ರಸಿದ್ಧನಾದುದರಿಂದ ಸಂಕರ್ಷಣನು ಪೃಥಿವೀ ಎನಿಸುತ್ತಾನೆ. 'ಅಯಂ ವೈ ಲೋಕಃ' ಎಂಬುದು ಪೃಥಿವೀ ಪರವಾದ್ದರಿಂದ ಹೀಗೆ ಪೃಥಿವೀಶಬ್ದ ಸಮನ್ವಯ ಮಾಡಿಕೊಳ್ಳ ಬೇಕು. ಜಗತ್ತನ್ನು ತುಂಬುವುದರಿಂದ ಪ್ರದ್ಯುಮ್ನನು ಪುರುಷ ಎನಿಸುತ್ತಾನೆ. ಮೂರು ವೇದಗಳಲ್ಲಿ ಸ್ಥಿತನಾದುದರಿಂದ ಅನಿರುದ್ಧನು ಸ್ತ್ರೀ ಎನಿಸುತ್ತಾನೆ. ಅನಿರುದ್ಧನು ಸರ್ವದಾ ಮೂರು ವೇದಗಳಲ್ಲಿ ಸ್ಥಿತನಾಗಿರುವುದು ಪ್ರಸಿದ್ಧ. ದ್ಯು ಮೊದಲಾದ ನಾಮಗಳುಳ್ಳ ಪರಮಾತ್ಮನ ಸಂಬಂಧದಿಂದಲೇ ಪ್ರಸಿದ್ಧ ದ್ಯುಲೋಕ ಮೊದಲಾದವು ದ್ಯು ಮೊದಲಾದ ಶಬ್ದಗಳಿಂದ ವಾಚ್ಯವಾಗುತ್ತವೆ.

**ಭಾಷ್ಯ**—**............ತಥಾಗ್ನ್ಯಾದಿರದನಾತ್ ಪರನೋ ಭವೇತ್ ।**
**ಅಂಗತ್ವೇನಾರ್ಚ್ಯತೇ ಯಸ್ಮಾದಂಗಾರಸ್ತೇನ ಕೀರ್ತಿತಃ ।**
**ಅರ್ಚ್ಯತ್ವಾದರ್ಚಿರುದ್ದಿಷ್ಟೋ ವಿಷ್ವಕ್ತ್ವಾದ್ ವಿಷ್ಫುಲಿಂಗಕಾಃ ।**
**ಸನೇಧನಾಚ್ಚ ಸಮಿಧಸ್ತತ್ರ ತತ್ರ ಸ್ಥಿತೋ ಹರಿಃ ।**
**ತತ್ತಚ್ಛಬ್ದೈಃ ಸದಾ ವಾಚ್ಯ ಇತರೇ ತು ತದನ್ವಯಾತ್ ।**
**ಆದಿತ್ಯೋ ರಶ್ಮಿರಿತ್ಯಾದ್ಯಾಃ ಶಬ್ದಾಶ್ಚೈವಮುವಸ್ಥಿತಾಃ ।**
**ಏಕೈಕಸ್ಮಿನ್ ಪಂಚಭೇದಾ ಅರ್ಚಿರಾದಿವಿಭಾಗತಃ ।**
**ನಾರಾಯಣಾದಿಭೇದೇನ ತಥೈವ ಪ್ರತಿಪಾದಿತಾಃ । ಇತಿ ಪ್ರವೃತ್ತೇ ।**
**ಧೂತ್ಕಾರಾದ್ ಧೂಮ ಉದ್ದಿಷ್ಟಃ ಶತ್ರೂಣಾಂ ಪುರುಷೋತ್ತಮಃ ।**
**ಅರ್ಚಿರರ್ಚ್ಯತಮತ್ವಾಚ್ಚ ಸ್ವಾಂಗೋಽಂಗಾರ ಉದೀರ್ಯತೇ ।**
**ಅಂಗಿತ್ವೇನಾಂಗರೂಪೇಣ ಯತ ಏಕೋ ವ್ಯವಸ್ಥಿತಃ ।**
**ಇತ್ಯಾದಿ ತ್ರೈವಿದ್ಯೇ ।**

**ಅನುವಾದ**-ಸರ್ವಸಂಹಾರ ಮಾಡುವುದರಿಂದ ಹರಿಯು ಅಗ್ನಿ ಎನಿಸುತ್ತಾನೆ.

ತಾನೇ ತನ್ನ ಅವಯುವನಾದುದರಿಂದ ಅಂಗಾರ ಎಂದೂ, ಸರ್ವರಿಂದಲೂ ಪೂಜಿಸಲ್ಪಡುವುದರಿಂದ ಅರ್ಚಿ ಎಂತಲೂ, ಬಹು ರೀತಿಯಾಗಿ ಪ್ರಕಾಶಿಸುವುದರಿಂದ ಅಥವಾ ಸರ್ವದೇಶದಲ್ಲಿ ವ್ಯಾಪ್ತನಾದ ಪ್ರಯುಕ್ತ ವಿಸ್ಫುಲಿಂಗ ಎಂತಲೂ, ಸರ್ವೋತ್ತಮನಾದುದರಿಂದ ಸಮಿತ್ ಎಂತಲೂ ಹರಿಯೇ ಹೇಳಲ್ಪಡುತ್ತಾನೆ. ಹೀಗೆ ಅಗ್ನಿ ಮೊದಲಾದ ಆಯಾ ಸ್ಥಾನದಲ್ಲಿರುವ ಪರಮಾತ್ಮನು ಅಗ್ನಿ ಮೊದಲಾದ ಶಬ್ದಗಳಿಂದ ಸರ್ವದಾ ವಾಚ್ಯನಾಗಿದ್ದಾನೆ. ಬೇರೆ ದೇವತೆಗಳು ಅಗ್ನ್ಯಾದಿನಾಮಕ ಪರಮಾತ್ಮನ ಸಂಬಂಧದಿಂದ ಅಗ್ನಿ ಮೊದಲಾದ ಶಬ್ದಗಳಿಂದ ವಾಚ್ಯರಾಗಿದ್ದಾರೆ. ಹೀಗೆಯೇ ಆದಿತ್ಯ, ರಶ್ಮಿ ಮೊದಲಾದ ಶಬ್ದಗಳೂ ಹರಿಯನ್ನೇ ಹೇಳುತ್ತವೆ. ದ್ಯುಲೋಕ, ಪರ್ಜನ್ಯ, ಧರಾ,ಪುರುಷ, ಸ್ತ್ರೀರೂಪವಾದ ಪಂಚ ಅಗ್ನಿಗಳಲ್ಲಿ ನಾರಾಯಣಾದಿ ಪಂಚ ರೂಪಗಳು ಕ್ರಮವಾಗಿ ಇರುವಂತೆ ಒಂದೊಂದು ಅಗ್ನಿಯಲ್ಲಿಯೂ ಸಮಿತ್, ಧೂಮ ಆರ್ಚಿ, ಅಂಗಾರ,ವಿಸ್ಫುಲಿಂಗಗಳೆಂದು ಕ್ರಮವಾಗಿ ನಾರಾಯಣಾದಿ ಪಂಚರೂಪಗಳಿವೆ ಎಂದು ಪ್ರವೃತ್ತ ಎಂಬ ಗ್ರಂಥದಲ್ಲಿ ಹೇಳಿದೆ.

ಶತ್ರುಗಳನ್ನು ತಿರಸ್ಕರಿಸುವುದರಿಂದ ಪುರುಷೋತ್ತಮನಾದ ಹರಿಯು ಧೂಮ ಎನಿಸುತ್ತಾನೆ. ಆರ್ಚನೀಯರಲ್ಲಿ ಶ್ರೇಷ್ಠನಾದುದರಿಂದ ಆರ್ಚಿ ಎನಿಸುತ್ತಾನೆ. ತನಗೆ ತಾನು ಒಬ್ಬನೇ ಅಂಗ ಮತ್ತು ಅಂಗಿಯಾದುದರಿಂದ ಅಂಗಾರ ಎನಿಸುತ್ತಾನೆ ಎಂದು ಮುಂತಾಗಿ ತ್ರೈವಿದ್ಯ ಎಂಬ ಗ್ರಂಥದಲ್ಲಿ ಹೇಳಿದೆ.

**ಭಾಷ್ಯ—ನೀಚಾದಪ್ಯುತ್ತಮಾ ಜ್ಞಾನಂ ಶೃಣುಯುರ್ಲೀಲಯಾ ಕ್ವಚಿತ್ ।**
**ಶ್ರೋತೃವಕ್ತೃವಿಭೇದೋಽಯಂ ನಾಽಧಿಕ್ಯಜ್ಞಾಪಕಸ್ತತಃ ।**
**ಯಸ್ಯಾಧಿಕ್ಯಂ ತು ವೇದೋಕ್ತಂ ಪಂಚರಾತ್ರೇಽಥವಾ ಭವೇತ್ ।**
**ಇತಿಹಾಸೇ ಪುರಾಣೇ ವಾ ಸೋಽಧಿಕೋ ನೇತರಃ ಕ್ವಚಿತ್ ।**
**ಇತಿ ಬ್ರಹ್ಮತರ್ಕೇ ।**

**ಅನುವಾದ**—ವಂಶಬ್ರಾಹ್ಮಣದಲ್ಲಿ 'ಅಂಭೃಣ್ಯಾದಿತ್ಯಾತ್. ಲಕ್ಷ್ಮೀದೇವಿಯು ಆದಿತ್ಯನಿಂದ ವಿದ್ಯೆಯನ್ನು ಪಡೆದಳು' ಎಂದು ಹೇಳಿದೆ. ಇದರಿಂದ ಲಕ್ಷ್ಮೀದೇವಿಗಿಂತ ಆದಿತ್ಯನು ಶ್ರೇಷ್ಠನಾಗುವುದಿಲ್ಲ. ಏಕೆಂದರೆ 'ಉತ್ತಮರೂ ಕೂಡ ಕೆಲವು ವೇಳೆ ಲೀಲೆಯಿಂದ ತಮಗಿಂತ ಅಧಮರಿಂದ ಶಾಸ್ತ್ರಶ್ರವಣವನ್ನು ಮಾಡುತ್ತಾರೆ. ಆದ್ದರಿಂದ ಶ್ರೋತೃ ವಕ್ತೃ ವಿಭಾಗವು ವಕ್ತೃವಿನ ಆಧಿಕ್ಯವನ್ನು ಸೂಚಿಸುವುದಿಲ್ಲ. ವೇದ ಪಂಚರಾತ್ರ ಇತಿಹಾಸ ಪುರಾಣಗಳಲ್ಲಿ ಯಾರಿಗೆ ಉತ್ತಮತ್ವವನ್ನು ಹೇಳಿದೆಯೋ ಅವನೇ ಉತ್ತಮ. ಇತರರು ಎಂದೂ ಉತ್ತಮರಲ್ಲ' ಎಂದು ಬ್ರಹ್ಮತರ್ಕದಲ್ಲಿ ಹೇಳಿದೆ.

**ಭಾಷ್ಯ—ಆದಾನಾದಾದಿತ್ಯಃ । ರಮಣಾತ್ ಶಾಮನಾಚ್ಚ ರಶ್ಮಯಃ । ಅಹೀನತ್ವಾದಹಃ। ಚಂದನಾಚ್ಚಂದ್ರಃ । ಅಸ್ಯ ಕ್ಷತ್ರಮನ್ಯನ್ನಾಸ್ತೀತಿ ನಕ್ಷತ್ರಮ್। ಬಹುರೂಪತ್ವಾದ್ ಬಹುವಚನಮ್ । ಜ್ಞಾನಾದಾಯುಷ್ಟ್ವಾಚ್ಚ ವಾಯುಃ । ಅನ್ಯೈರಭರಣೀಯತ್ವಾದಭ್ರಮ್ । ವಿದ್ಯೋತನಾತ್ ವಿದ್ಯುತ್ । ಅಶನಾದಶನಿಃ । ನಿಹ್ರ್ಲಾದನಾದ್ ಹ್ರಾದುನಿಃ । ಆ ಸಮಂತಾತ್ ಕಾಶನಾದಾಕಾಶಃ । ಸಮ್ಯಗ್ ವತ್ಸಾನ್ ರಮಯತೀತಿ ಸಂವತ್ಸರಃ । ಆದೇಶನಾದ್ ದಿಶಃ । ಅವಾಂತರಮಾದಿಶತೀತ್ಯವಾಂತರ-ದಿಶಃ । ರತಿಕರತ್ವಾದ್ ರಾತ್ರಿಃ । ವಚನಾದ್ ವಾಕ್ । ಪ್ರಣಯನಾತ್ ಪ್ರಾಣಃ । ಜಹಾತಿ ಗಮಯತೀತಿ ಜಿಹ್ವಾ ।**

**ಅನುವಾದ**—ಹರಿಯು ಹವಿಸ್ಸು ಮೊದಲಾದವುಗಳನ್ನು ಸ್ವೀಕರಿಸುವುದರಿಂದ ಆದಿತ್ಯ ಎನಿಸುತ್ತಾನೆ. ಸುಖರೂಪನಾದುದರಿಂದಲೂ, ಇನ್ನೊಬ್ಬರಿಗೆ ಸುಖವನ್ನು ಕೊಡುವುದರಿಂದಲೂ ರಶ್ಮಿ ಎನಿಸುತ್ತಾನೆ. ನಿಕೃಷ್ಟನಾಗದಿರುವುದರಿಂದ ಅಹಃ ಎನಿಸುತ್ತಾನೆ. ಭಕ್ತರನ್ನು ಸಂತೋಷಪಡಿಸುವುದರಿಂದ ಚಂದ್ರ ಎನಿಸುತ್ತಾನೆ. ಇನ್ನೊಬ್ಬ ರಕ್ಷಕನಿಲ್ಲದಿರುವುದರಿಂದ ನಕ್ಷತ್ರ ಎನಿಸುತ್ತಾನೆ. ಹರಿಯು ಒಬ್ಬನೇ ಆದರೂ ಬಹುರೂಪನಾದ್ದರಿಂದ 'ನಕ್ಷತ್ರಾಣಿ' 'ರಶ್ಮಯಃ' ಇತ್ಯಾದಿ ಶಬ್ದಗಳಲ್ಲಿರುವ ಬಹುವಚನವು ಕೂಡುತ್ತದೆ. ಜ್ಞಾನರೂಪನಾದುದರಿಂದ ಮತ್ತು ಆಯುಷ್ಯಪ್ರದನಾದುದರಿಂದ ವಾಯು ಎಂದು ಹೇಳಲ್ಪಡುತ್ತಾನೆ. ಇವನು ಇನ್ನೊಬ್ಬರಿಂದ ಪೋಷಿಸಲ್ಪಡಲು ಸಾಧ್ಯವಿಲ್ಲದವನಾದುದರಿಂದ ಅಭ್ರ. ವಿಶೇಷವಾಗಿ ಪ್ರಕಾಶಿಸುವುದರಿಂದ ವಿದ್ಯುತ್, ಸರ್ವಜಗತ್ತನ್ನೂ ಸಂಹರಿಸುವುದರಿಂದ ಅಶನಿ, ಚೆನ್ನಾಗಿ ಸಂತೋಷಪಡಿಸುವುದರಿಂದ ಹ್ರಾದುನಿ. ಚೆನ್ನಾಗಿ ಪ್ರಕಾಶಿಸುವುದರಿಂದ ಆಕಾಶ. ಮಕ್ಕಳಾದ ಬ್ರಹ್ಮಾದಿಗಳನ್ನು ಚೆನ್ನಾಗಿ ಸಂತೋಷಪಡಿಸುವುದರಿಂದ ಸಂವತ್ಸರ. ಮುಖ್ಯವಾದ ತನ್ನ ಸ್ವರೂಪವನ್ನು ತಿಳಿಸುವುದರಿಂದ ದಿಕ್. ಅಮುಖ್ಯ ತತ್ತ್ವಗಳನ್ನೂ ತಿಳಿಸುವುದರಿಂದ ಅವಾಂತರ ದಿಕ್. ಸಂತೋಷವನ್ನುಂಟು ಮಾಡುವುದರಿಂದ ರಾತ್ರಿ. ಮಾತನಾಡುವುದರಿಂದ ವಾಕ್. ಆಯಾ ಕಾರ್ಯಗಳಲ್ಲಿ ಪ್ರೇರಿಸುವುದರಿಂದ ಪ್ರಾಣ. ಭಕ್ತರ ಪಾಪವನ್ನು ಕಳೆದು ಅವರನ್ನು ಮೋಕ್ಷಕ್ಕೆ ತಲುಪಿಸುವುದರಿಂದ ಜಿಹ್ವಾ.

**ವಿವರಣೆ**-ಇಲ್ಲಿ ಉಪನಿಷತ್ತಿನಲ್ಲಿ ವಾಯು ಶಬ್ದವಿಲ್ಲ. ಆದರೂ ಛಾಂದೋಗ್ಯೋಪನಿಷತ್ತಿನಲ್ಲಿ 'ಪರ್ಜನ್ಯೋ ವಾ ಗೌತಮಾಗ್ನಿಸ್ತಸ್ಯ ವಾಯುರೇವ ಸಮಿತ್' ಎಂದು ಇದ್ದುದರಿಂದ ವಾಯು ಶಬ್ದವನ್ನೂ, ಹಾಗೆಯೆ ಆಕಾಶ, ಜಿಹ್ವಾ ಶಬ್ದಗಳನ್ನೂ

ಸಮನ್ವಯ ಮಾಡಿಕೊಳ್ಳಬೇಕು. 'ಆಕಾಶೋ ಧೂಮಃ' ಎಂದು ಆಕಾಶ ಶಬ್ದವೂ ಛಾಂದೋಗ್ಯೋಪನಿಷತ್ತಿನಲ್ಲಿ ಬಂದಿದೆ.

**ಭಾಷ್ಯ—ಚಷ್ಟ ಇತಿ ಚಕ್ಷುಃ। ಶೃಣೋತೀತಿ ಶ್ರೋತ್ರಂ। ಉಪಸ್ಥಿತತ್ವಾದುಪಸ್ಥಃ ಯಾಪಯತಿ ನಯತಿ ಚೇತಿ ಯೋನಿಃ । ಅಭಿನಂದಯತೀತ್ಯಭಿನಂದಃ । ಉಪಮಂತ್ರಣಮಂತಃ ಕರಣಂ ಚ ಸ ಏವ ಕರೋತಿ ।**

**ತದಧೀನಂ ಯತಃ ಸರ್ವಂ ಸರ್ವಶಬ್ದೈಸ್ತತೋ ಹರಿಃ ।**
**ಮುಖ್ಯಾಭಿಧೇಯಸ್ತ್ವನ್ಯಾನಿ ತತ್ಸಂಗಾದುಪಚಾರತಃ ।**

**ಇತಿ ಬ್ರಹ್ಮತರ್ಕೇ ।**

**'ತದಧೀನತ್ವಾದರ್ಥವತ್' ಇತಿ ಭಗವದ್ವಚನಮ್ । 'ಸಮಾಕರ್ಷಾತ್' ಇತಿ ಚ ।**

**॥ಇತಿ ದ್ವಿತೀಯ ಬ್ರಾಹ್ಮಣಂ ॥**

**ಅನುವಾದ**—ಹರಿಯೇ ಸರ್ವವನ್ನೂ ನೋಡುವುದರಿಂದ ಚಕ್ಷುಸ್, ಸರ್ವವನ್ನೂ ಕೇಳುವುದರಿಂದ ಶ್ರೋತ್ರ. ಸಮಸ್ತಜೀವರ ಹೃದಯದಲ್ಲಿದ್ದು ಸಮೀಪದಲ್ಲಿದ್ದ ಪ್ರಯುಕ್ತ ಉಪಸ್ಥ. ಸಜ್ಜನರನ್ನು ಮೋಕ್ಷಕ್ಕೂ ದುರ್ಜನರನ್ನು ಅಂಧಂತಮಸ್ಸಿಗೂ ಕಳುಹಿಸುವುದರಿಂದ ಯೋನಿ. ಆನಂದ ಉಂಟುಮಾಡುವುದರಿಂದ ಅಭಿನಂದ. ಛಾಂದೋಗ್ಯದಲ್ಲಿ ಹೇಳಿದ ಸರಸಸಲ್ಲಾಪವನ್ನೂ, ಇಲ್ಲಿ ಹೇಳಿದ ಸಂಭೋಗಕ್ರಿಯೆಯನ್ನೂ ಸ್ತ್ರೀ ಪುರುಷರಲ್ಲಿದ್ದು ಅವನೇ ಮಾಡುತ್ತಾನೆ. ದ್ಯು ಪರ್ಜನ್ಯ ಮುಂತಾದವುಗಳಲ್ಲಿರುವ ದ್ಯು-ಪರ್ಜನ್ಯಾದಿ ಶಬ್ದಪ್ರವೃತ್ತಿ ನಿಮಿತ್ತಗಳು ಎಲ್ಲವೂ ಹರಿಯ ಅಧೀನವಾದುದರಿಂದಲೂ, ಹರಿಯೇ ಎಲ್ಲಾ ಶಬ್ದಗಳಿಗೂ ಮುಖ್ಯ ವಾಚ್ಯ; ಭೃತ್ಯನ ಜಯವು ರಾಜಾಧೀನವಾದ್ದರಿಂದ ರಾಜನನ್ನೇ ಮುಖ್ಯವಾಗಿ ವಿಜಯಿ ಎನ್ನುವಂತೆ. ಅಂತಹ ಹರಿಯ ಸಂಬಂಧದಿಂದ ಉಳಿದ ಪದಾರ್ಥಗಳು ಆಯಾ ಶಬ್ದಗಳಿಂದ ಅಮುಖ್ಯವಾಗಿ ವಾಚ್ಯವಾಗುತ್ತವೆ ಎಂದು ಬ್ರಹ್ಮತರ್ಕದಲ್ಲಿ ಹೇಳಿದೆ. 'ತದಧೀನತ್ವಾದರ್ಥವತ್' (1–4–3), 'ಸಮಾಕರ್ಷಾತ್' (1–4–16) ಎಂಬ ಬ್ರಹ್ಮಸೂತ್ರಗಳೂ ಈ ವಿಷಯವನ್ನು ಹೇಳುತ್ತವೆ.

ಇಲ್ಲಿಗೆ ದ್ವಿತೀಯ ಬ್ರಾಹ್ಮಣವು ಮುಗಿಯಿತು.

**ಸಾಧನ ಮಾರ್ಗದಲ್ಲಿ ವಿಘ್ನನಿವಾರಣೋಪಾಯ– ಹೋಮ :**

**ಉಪನಿಷತ್–ಸ ಯಃ ಕಾಮಯೇತ ಮಹತ್ ಪ್ರಾಪ್ನುಯಾಮಿತಿ, ಉದಗಯನ ಆಪೂರ್ಯಮಾಣಪಕ್ಷಸ್ಯ ಪುಣ್ಯಾಹೇ ದ್ವಾದಶಾಹಮುಪಸದ್ ವ್ರತೀ ಭೂತ್ವಾದುಂಬರೇ ಕಂಸೇ ಚಮಸೇ ವಾ ಸರ್ವೌಷಧಂ ಫಲಾನೀತಿ**

**ಸಂಭೃತ್ಯ ಪರಿಸಮುಹ್ಯ ಪರಿಲಿಪ್ಯಾಗ್ನಿಮುಪಸಮಾಧಾಯ ಪರಿಸ್ತೀರ್ಯಾऽವೃತಾಜ್ಯಂ ಸಂಸ್ಕೃತ್ಯ ಪುಂಸಾ ನಕ್ಷತ್ರೇಣ ಮಂಥಂ ಸಂನೀಯ ಜುಹೋತಿ।**

**ಯಾವಂತೋ ದೇವಾಸ್ತ್ವಯಿ ಜಾತವೇದ-**
**ಸ್ತಿರ್ಯಂಚೋ ಘ್ನಂತಿ ಪುರುಷಸ್ಯ ಕಾಮಾನ್ ।**
**ತೇಭ್ಯೋऽಹಂ ಭಾಗಧೇಯಂ ಜುಹೋಮಿ**
**ತೇ ಮಾ ತೃಪ್ತಾಃ ಸರ್ವೈಃ ಕಾಮೈಸ್ತರ್ಪಯಂತು ಸ್ವಾಹಾ ।**
**ಯಾ ತಿರಶ್ಚೀ ನಿಪದ್ಯತೇऽಹಂ ವಿಧರಣೀ ಇತಿ ।**
**ತಾಂ ತ್ವಾ ಘೃತಸ್ಯ ಧಾರಯಾ ಯಜೇ ಸಂರಾಧನೀಮಹಂ ಸ್ವಾಹಾ**

ಯಾರು ಐಹಿಕ ಆಮುಷ್ಮಿಕಗಳಲ್ಲಿ ಮಹತ್ವಸಂಪಾದಿಸಲು ಬಯಸುವನೋ ಅವನು ಉತ್ತರಾಯಣದ ಶುಕ್ಲಪಕ್ಷದ ಪುಣ್ಯದಿವಸದಲ್ಲಿ ಹೋಮದಿವಸಕ್ಕಿಂತ ಮೊದಲು ಹನ್ನೆರಡು ದಿವಸ ಹಾಲನ್ನು ಮಾತ್ರ ಕುಡಿಯುವ ಉಪವಾಸವ್ರತ ಮಾಡಿ ಅತ್ತಿಮರದ ಚಮಸ ಪಾತ್ರೆಯಲ್ಲಾಗಲೀ, ಕಂಚಿನ ಪಾತ್ರೆಯಲ್ಲಾಗಲೀ ಭತ್ತ ಮೊದಲಾದ ಧಾನ್ಯಗಳನ್ನೂ,ಅನಿಷಿದ್ಧವಾದ ಬಾಳೆಯ ಹಣ್ಣು ಮೊದಲಾದ ಹಣ್ಣುಗಳನ್ನೂ ಸಂಗ್ರಹಿಸಿ, ಭೂಶುದ್ಧಿ ಮಾಡಿ ಹೋಮಕುಂಡವನ್ನು ಗೋಮಯದಿಂದ ಲೇಪಿಸಿ, ಅಗ್ನಿಯನ್ನು ಸ್ಥಾಪಿಸಿ, ತಮ್ಮ ತಮ್ಮ ಶಾಖೆಗಳಲ್ಲಿ ಹೇಳಿದಂತೆ ದರ್ಭೆಗಳಿಂದ ಪರಿಸ್ತರಣ ಮಾಡಿ, ಹೋಮದ ತುಪ್ಪವನ್ನು ಕರಗಿಸಿ ಸಂಸ್ಕಾರ ಮಾಡಿ, ಹಸ್ತ ಸ್ವಾತಿ ಮೊದಲಾದ ಪುರುಷನಕ್ಷತ್ರಗಳಲ್ಲಿ ಎಲ್ಲಾ ಧಾನ್ಯಗಳ ಹಿಟ್ಟನ್ನು ತಂದು ಸಂಸ್ಕಾರ ಹೊಂದಿದ ತುಪ್ಪದಿಂದ ಹೋಮ ಮಾಡಬೇಕು. ಹೋಮ ಮಂತ್ರಗಳು—

'ಅಗ್ನಿಯಲ್ಲಿ ಅಂತರ್ಗತನಾದ ಸರ್ವಜ್ಞನಾದ ಶ್ರೀಹರಿಯೇ ನಿನ್ನಾಶ್ರಯದಲ್ಲಿರುವ ಎಷ್ಟು ದೇವತೆಗಳು ನನ್ನ ಇಷ್ಟಸಿದ್ಧಿಗೆ ಅಡ್ಡಬಂದು ಅದನ್ನು ಕೆಡಿಸುತ್ತಾರೋ ಆ ದೇವತೆಗಳಿಗೆ ತುಪ್ಪದ ಆಹುತಿಯನ್ನು ಕೊಡುತ್ತೇನೆ. ಆದರಿಂದ ತೃಪ್ತರಾದ ಆ ದೇವತೆಗಳು ನನಗೆ ಎಲ್ಲಾ ಅಭೀಷ್ಟಗಳನ್ನೂ ಕೊಟ್ಟು ತೃಪ್ತಿಪಡಿಸಲಿ. ಯಾವ ದೇವತೆಯು ತಾನು ವಿಘ್ನಕರ್ತನೆಂದು ಅಡ್ಡಬರುತ್ತಿರುವುದು ಕಂಡುಬರುವುದೋ, ಪ್ರಸನ್ನನಾದರೆ ಎಲ್ಲಾ ಪುರುಷಾರ್ಥಗಳನ್ನೂ ಸಾಧಿಸಿಕೊಡಬಲ್ಲ ಆ ದೇವತೆಯನ್ನು ನಾನು ಘೃತದ ಧಾರೆಯಿಂದ ಆರಾಧಿಸುತ್ತೇನೆ'.

**ಉಪನಿಷತ್**–**ಜ್ಯೇಷ್ಠಾಯ ಸ್ವಾಹಾ ಶ್ರೇಷ್ಠಾಯ ಸ್ವಾಹೇತ್ಯಗ್ನೌ ಹುತ್ವಾ ಮಂಥೇ ಸಂಸ್ರವಮವನಯತಿ । ಪ್ರಾಣಾಯ ಸ್ವಾಹಾ । ವಸಿಷ್ಠಾಯೈ ಸ್ವಾಹೇತ್ಯಗ್ನೌ ಹುತ್ವಾ ಮಂಥೇ ಸಂಸ್ರವಮವನಯತಿ । ವಾಚೇ ಸ್ವಾಹಾ । ಪ್ರತಿಷ್ಠಾಯೈ ಸ್ವಾಹೇತ್ಯಗ್ನೌ ಹುತ್ವಾ ಮಂಥೇ ಸಂಸ್ರವಮವನಯತಿ । ಚಕ್ಷುಷೇ ಸ್ವಾಹಾ । ಸಂಪದೇ ಸ್ವಾಹೇತ್ಯಗ್ನೌ ಹುತ್ವಾ**

**ಮಂಥೇ ಸಂಸ್ರವಮವನಯತಿ। ಶ್ರೋತ್ರಾಯ ಸ್ವಾಹಾ। ಆಯತನಾಯ ಸ್ವಾಹೇತ್ಯಗ್ನೌ ಹುತ್ವಾ ಮಂಥೇ ಸಂಸ್ರವಮವನಯತಿ । ಮನಸೇ ಸ್ವಾಹಾ । ಪ್ರಜಾಪತಯೇ ಸ್ವಾಹೇತ್ಯಗ್ನೌ ಹುತ್ವಾ ಮಂಥೇ ಸಂಸ್ರವ-ಮವನಯತಿ । ರೇತಸೇ ಸ್ವಾಹೇತಿ ಅಗ್ನೌ ಹುತ್ವಾ ಮಂಥೇ ಸಂಸ್ರವ-ಮವನಯತಿ ।**

ಹಿಂದಿನ ಎರಡು ಮಂತ್ರಗಳಿಂದ ಎರಡು ಆಜ್ಯಾಹುತಿ ನೀಡಿ ಹುತಶೇಷವಾದ ಆಜ್ಯವನ್ನು ಸ್ರುವದಿಂದ ಪಿಷ್ಟಗಳ ಪಿಂಡಕ್ಕೆ ಹಾಕಿ ಸಂಸ್ಕರಿಸಬೇಕು. ಹೀಗೆ ಸಂಸ್ಕೃತ ವಾದ ಪಿಷ್ಟವನ್ನು ಜ್ಯೇಷ್ಠನಾಮಕ ಪ್ರಾಣನಿಗಿದು ಆಹುತಿ, ಶ್ರೇಷ್ಠನಾಮಕ ಪ್ರಾಣನಿಗಿದು ಆಹುತಿ ಎಂದು ಹೋಮಮಾಡಿ ಪುನಃ ಉಳಿದಿರುವ ಪಿಷ್ಟಕ್ಕೆ ಸ್ರುವ ಆಜ್ಯದಿಂದ ಸೇಚನೆ ಮಾಡಿ ಸಂಸ್ಕರಿಸಿ ವಾಕ್ಕಿನಲ್ಲಿರುವ ವಸಿಷ್ಠನಾಮಕ ಪ್ರಾಣನಿಗಿದು ಆಹುತಿ ಎಂದು ಹೋಮಮಾಡಬೇಕು. ಉಳಿದ ಪಿಷ್ಟವನ್ನು ಸ್ರುವದ ಆಜ್ಯದಿಂದ ಸಿಂಪಡಿಸಬೇಕು. ಚಕ್ಷುಸ್ಸಿನಲ್ಲಿರುವ ಪ್ರತಿಷ್ಠಾನಾಮಕ ಪ್ರಾಣನಿಗಿದು ಆಹುತಿ ಎಂದು ಹೋಮಮಾಡಬೇಕು. ಪುನಃ ಉಳಿದ ಹಿಟ್ಟಿಗೆ ಸ್ರುವದ ತುಪ್ಪವನ್ನು ಸೇರಿಸಿ ಶ್ರೋತ್ರದಲ್ಲಿರುವ ಸಂಪನ್ನಾಮಕ ಪ್ರಾಣನಿಗಿದು ಆಹುತಿಯೆಂದು ಹೋಮಿಸಬೇಕು. ಪುನಃ ಉಳಿದ ಹಿಟ್ಟಿಗೆ ಸ್ರುವದ ತುಪ್ಪ ಬೆರೆಸಿ ಮನೋನಿಷ್ಠನಾದ ಆಯತನನಾಮಕ ಪ್ರಾಣನಿಗೆ ಇದು ಆಹುತಿ ಎಂದು ಹೋಮಿಸಬೇಕು. ಪುನಃ ಉಳಿದ ಹಿಟ್ಟಿಗೆ ಸ್ರುವದ ತುಪ್ಪ ಸಿಂಪಡಿಸಿ ರೇತೋನಿಷ್ಠ ಪ್ರಜಾಪತಿನಾಮಕ ಪ್ರಾಣನಿಗಿದು ಆಹುತಿ ಎಂದು ಹೋಮಿಸಬೇಕು.

**ಉಪನಿಷತ್–ಅಗ್ನಯೇ ಸ್ವಾಹೇತ್ಯಗ್ನೌ ಹುತ್ವಾ ಮಂಥೇ ಸಂಸ್ರವಮವನಯತಿ। ಸೋಮಾಯ ಸ್ವಾಹೇತ್ಯಗ್ನೌ ಹುತ್ವಾ ಮಂಥೇ ಸಂಸ್ರವಮವನಯತಿ । ಭೂಃ ಸ್ವಾಹೇತ್ಯಗ್ನೌ ಹುತ್ವಾ ಮಂಥೇ ಸಂಸ್ರವಮವನಯತಿ । ಭುವಃ ಸ್ವಾಹೇತ್ಯಗ್ನೌ ಹುತ್ವಾ ಮಂಥೇ ಸಂಸ್ರವಮವನಯತಿ । ಸ್ವಃ ಸ್ವಾಹೇ-ತ್ಯಗ್ನೌ ಹುತ್ವಾ ಮಂಥೇ ಸಂಸ್ರವಮವನಯತಿ । ಭೂರ್ಭುವಃ ಸ್ವಃ ಸ್ವಾಹೇತ್ಯಗ್ನೌ ಹುತ್ವಾ ಮಂಥೇ ಸಂಸ್ರವಮವನಯತಿ । ಬ್ರಹ್ಮಣೇ ಸ್ವಾಹೇತ್ಯಗ್ನೌ ಹುತ್ವಾ ಮಂಥೇ ಸಂಸ್ರವಮವನಯತಿ । ಕ್ಷತ್ರಾಯ ಸ್ವಾಹೇತ್ಯಗ್ನೌ ಹುತ್ವಾ ಮಂಥೇ ಸಂಸ್ರವಮವನಯತಿ । ಭೂತಾಯ ಸ್ವಾಹೇತ್ಯಗ್ನೌ ಹುತ್ವಾ ಮಂಥೇ ಸಂಸ್ರವಮವನಯತಿ । ಭವಿಷ್ಯತೇ ಸ್ವಾಹೇತ್ಯಗ್ನೌ ಹುತ್ವಾ ಮಂಥೇ ಸಂಸ್ರವಮವನಯತಿ । ವಿಶ್ವಾಯ**

**ಸ್ವಾಹೇತ್ಯಗ್ನೌ ಹುತ್ವಾ ಮಂಥೇ ಸಂಸ್ರವಮವನಯತಿ । ಸರ್ವಾಯ ಸ್ವಾಹೇತ್ಯಗ್ನೌ ಹುತ್ವಾ ಮಂಥೇ ಸಂಸ್ರವಮವನಯತಿ । ಪ್ರಜಾಪತಯೇ ಸ್ವಾಹೇತ್ಯಗ್ನೌ ಹುತ್ವಾ ಮಂಥೇ ಸಂಸ್ರವಮವನಯತಿ ।**

ಅನಂತರ ಅಗ್ನಯೇ ಸ್ವಾಹಾ, ಸೋಮಾಯ ಸ್ವಾಹಾ, ಭೂಃ ಸ್ವಾಹಾ, ಭುವಃ ಸ್ವಾಹಾ, ಸ್ವಃ ಸ್ವಾಹಾ, ಭೂರ್ಭುವಃ ಸ್ವಃ ಸ್ವಾಹಾ, ಬ್ರಹ್ಮಣೇ ಸ್ವಾಹಾ, ಕ್ಷತ್ರಾಯ ಸ್ವಾಹಾ, ಭೂತಾಯ ಸ್ವಾಹಾ, ಭವಿಷ್ಯತೇ ಸ್ವಾಹಾ, ವಿಶ್ವಾಯ ಸ್ವಾಹಾ, ಸರ್ವಾಯ ಸ್ವಾಹಾ, ಪ್ರಜಾಪತಯೇ ಸ್ವಾಹಾ ಎಂದು ಹೋಮಮಾಡಬೇಕು. ಪ್ರತಿಯೊಂದು ಆಹುತಿಯ ನಂತರವೂ ಉಳಿದ ಪಿಷ್ಟವನ್ನು ಆಜ್ಯದಿಂದ ಸಂಸ್ಕರಿಸಬೇಕು.

**ಉಪನಿಷತ್—ಅಥೈನಮಭಿಮೃಶತಿ– ಭ್ರಮದಸಿ । ಜ್ವಲದಸಿ । ಪೂರ್ಣಮಸಿ । ಪ್ರಸ್ತಬ್ಧಮಸಿ । ಏಕಸಭಮಸಿ । ಹಿಂಕೃತಮಸಿ । ಹಿಂಕ್ರಿಯಮಾಣಮಸಿ। ಉದ್ಗೀಥಮಸಿ । ಉದ್ಗೀಯಮಾನಮಸಿ । ಶ್ರಾವಿತಮಸಿ । ಪ್ರತ್ಯಾ-ಶ್ರಾವಿತಮಸಿ । ಆರ್ದ್ರೇ ಸಂದೀಪ್ತಮಸಿ । ವಿಭುರಸಿ । ಪ್ರಭುರಸಿ । ಅನ್ನಮಸಿ । ಜ್ಯೋತಿರಸಿ । ನಿಧನಮಸಿ । ಸಂವರ್ಗೋಽಸೀತಿ ।**

ಹೋಮ ಮಾಡಿದ ಮೇಲೆ ಉಳಿದ ಪಿಷ್ಟ ಪಿಂಡವನ್ನು ಸ್ಪರ್ಶಿಸುತ್ತ ಹೀಗೆ ಸ್ತೋತ್ರ ಮಾಡಬೇಕು- 'ಪಿಂಡಾಂತರ್ಗತ ಪರಬ್ರಹ್ಮನೇ! ನೀನು ಜಗತ್ತಿನ ಸೃಷ್ಟ್ಯಾದಿಗಳನ್ನು ಮಾಡುವವನೂ, ಪ್ರಕಾಶರೂಪನೂ, ಗುಣಪೂರ್ಣನೂ, ನಿಷ್ಕ್ರಿಯನೂ ಅಂದರೆ ಅಕ್ಲಿಷ್ಟಕಾರಿಯೂ, ಕುದುರೆ ಮೊದಲಾದ ಏಕಶಫ ಪ್ರಾಣಿಗಳಲ್ಲಿ ಅಂತರ್ಗತನೂ, ಪ್ರಸ್ತೋತೃವು ಯಾಗಾರಂಭದಲ್ಲಿ ಮತ್ತು ಮಧ್ಯದಲ್ಲಿ ಹೇಳುವ ಹಿಂಕಾರದಿಂದ ಪ್ರತಿಪಾದ್ಯನೂ, ಯಾಗಾರಂಭದಲ್ಲಿ ಮತ್ತು ಯಾಗ ಮಧ್ಯದಲ್ಲಿ ಉದ್ಗಾತೃವಿನಿಂದ ಗಟ್ಟಿಯಾಗಿ ಗಾನ ಮಾಡಲ್ಪಡುವವನೂ, ಅಧ್ವರ್ಯು ಮತ್ತು ಅಗ್ನೀಧ್ರರಿಂದ ಹೊಗಳಲ್ಪಡುವವನೂ, ಆರ್ದ್ರವಾದ ಮೇಘದಲ್ಲಿರುವ ಮಿಂಚು ಮೊದಲಾದವುಗಳಲ್ಲಿ ಇರುವ ಪ್ರಕಾಶರೂಪನೂ, ಸರ್ವತ್ರವ್ಯಾಪ್ತನೂ, ಸಮರ್ಥನೂ, ಸರ್ವಾಶ್ರಯನೂ ಸರ್ವಸಂಹಾರಕನೂ, ಜ್ಞಾನರೂಪನೂ, ಪ್ರಲಯಕಾಲದಲ್ಲಿ ಸರ್ವಸಂಹಾರಕನೂ, ವಾಯ್ವಂತರ್ಗತನೂ ಆಗಿರುತ್ತಿ'.

**ಉಪನಿಷತ್—ಅಥೈನಮುದ್ಯಚ್ಛತಿ– 'ಆಮಂಸ್ಯಾಮಂಹಿ ತೇ ಮಹಿ । ಸ ಹಿ ರಾಜೇಶಾನೋಽಧಿಪತಿಃ । ಸ ಮಾಂ ರಾಜೇಶಾನೋಽಧಿಪತಿಂ ಕರೋತ್ವಿ'ತಿ ।**

ಪಿಂಡವನ್ನು ಪಾತ್ರೆ ಸಹಿತವಾಗಿ ಕೈಯಲ್ಲಿ ತೆಗೆದುಕೊಂಡು ಹೀಗೆ ಹೇಳಬೇಕು– ಪಿಂಡಾಂತರ್ಗತನಾದ ಪರಮಾತ್ಮನೇ ನಿನ್ನ ಮಹತ್ತರವಾದ ರೂಪವನ್ನು ನೀನೇ ಚೆನ್ನಾಗಿ ತಿಳಿದಿರುತ್ತಿ. ನಾವು ನಿನ್ನ ಅತ್ಯಂತ ಪೂಜ್ಯವಾದ ರೂಪವನ್ನು ನಿನ್ನ ಅನುಗ್ರಹದಿಂದ ಅತ್ಯಲ್ಪವಾಗಿಯೇ ತಿಳಿದಿರುತ್ತೇವೆ. ಅಂತಹ ನೀನು ಪ್ರಕಾಶ ರೂಪನು, ಬ್ರಹ್ಮಾದಿಗಳಿಗೆ ಪ್ರೇರಕನು, ಹೆಚ್ಚು ಗುಣಗಳುಳ್ಳವನು ಮತ್ತು ಸರ್ವ ರಕ್ಷಕನು. ಅಂತಹ ನೀನು ನನ್ನನ್ನು ನನಗಿಂತ ಕೆಳಗಿನವರಿಗೆ ಅಧಿಪತಿಯನ್ನಾಗಿ ಮಾಡು'.

**ಉಪನಿಷತ್—ಅಥೈನಮಾಚಾಮತಿ- ತತ್ ಸವಿತುರ್ವರೇಣ್ಯಂ। ಮಧು ವಾತಾ ಋತಾಯತೇ ಮಧು ಕ್ಷರಂತಿ ಸಿಂಧವಃ।ಮಾಧ್ವೀರ್ನಃ ಸಂತ್ವೋಷಧೀಃ। ಭೂಃ ಸ್ವಾಹಾ। ಭರ್ಗೋ ದೇವಸ್ಯ ಧೀಮಹಿ। ಮಧು ನಕ್ತಮುತೋಷಸೋ ಮಧುಮತ್ ಪಾರ್ಥಿವಂ ರಜಃ। ಮಧು ದ್ಯೌರಸ್ತು ನಃ ಪಿತಾ। ಭುವಃ ಸ್ವಾಹಾ। ಧಿಯೋ ಯೋ ನಃ ಪ್ರಚೋದಯಾತ್। ಮಧುಮಾನ್ ನೋ ವನಸ್ಪತಿರ್ಮಧುಮಾನ್ ಅಸ್ತು ಸೂರ್ಯಃ। ಮಾಧ್ವೀರ್ಗಾವೋ ಭವಂತು ನಃ। ಸ್ವಃ ಸ್ವಾಹೇತಿ। ಸರ್ವಾಂ ಚ ಸಾವಿತ್ರೀಮನ್ವಾಹ। ಸರ್ವಾಶ್ಚ ಮಧುಮತೀಃ। ಅಹಮೇವೇದಂ ಸರ್ವಂ ಭೂಯಾಸಂ ಭೂರ್ಭುವಃ ಸ್ವಃ ಸ್ವಾಹೇತಿ। ಅಂತತ ಆಚಮ್ಯ ಪಾಣೀ ಪ್ರಕ್ಷಾಲ್ಯ ಜಘನೇನಾಗ್ನಿಂ ಪ್ರಾಕ್‌ಶಿರಾಃ ಸಂವಿಶತಿ। ಪ್ರಾತರಾದಿತ್ಯಮುಪತಿಷ್ಠತೇ 'ದಿಶಾಮೇಕಪುಂಡರೀಕಮಸಿ। ಅಹಂ ಮನುಷ್ಯಾಣಾಮೇಕಪುಂಡರೀಕಂ ಭೂಯಾಸಮಿ'ತಿ। ಯಥೇತಮೇತ್ಯ ಜಘನೇನಾಗ್ನಿಮಾಸೀನೋ ವಂಶಂ ಜಪತಿ।**

ಹೀಗೆ ಕೈಯಲ್ಲಿ ಹಿಡಿದುಕೊಂಡು ಅಭಿಮಂತ್ರಿಸಿದ ಪಿಷ್ಟಪಿಂಡವನ್ನು ನಾಲ್ಕು ಭಾಗ ಮಾಡಿ ಬೇರೆ ಬೇರೆಯಾಗಿಟ್ಟು ಮೊದಲನೆಯ ಭಾಗವನ್ನು ಮಂತ್ರಪೂರ್ವಕವಾಗಿ ಭಕ್ಷಿಸಬೇಕು. ಆಗ ಜಪಿಸಬೇಕಾದ ಮಂತ್ರ– 'ಜಗತ್ತನ್ನು ಸೃಷ್ಟಿಸುವ ಪರಮಾತ್ಮನ ಗುಣಪೂರ್ಣವಾದ ರೂಪವು ಎಲ್ಲರಿಗೂ ಆರಾಧ್ಯವಾಗಿದೆ. ನಮಗೆ ಮಂಗಳವನ್ನುಂಟುಮಾಡುತ್ತಾ ವಾಯುದೇವರು ಬೀಸಲಿ. ಮಂಗಳವನ್ನುಂಟು ಮಾಡುತ್ತಾ ನದಿಯ ಅಭಿಮಾನಿದೇವತೆಗಳು ಹರಿಯಲಿ. ಸಸ್ಯಾಭಿಮಾನಿಗಳು ನಮಗೆ ಮಂಗಳದಾಯಕರಾಗಲಿ' ಹೀಗೆ ಹೇಳಿ ಪೂರ್ಣನಾದ ಹರಿಗೆ ಇದು ಆಹುತಿ ಎಂದು ಭಕ್ಷಿಸಬೇಕು. ಎರಡನೆಯ ಭಾಗವನ್ನು ತಿನ್ನುವಾಗ 'ಜಗತ್ತನ್ನು ಪೋಷಿಸುವ ಜ್ಞಾನರೂಪವಾದ ಹರಿಯ ರೂಪವನ್ನು ಧ್ಯಾನಿಸುವೆವು. ರಾತ್ರಿಯ ಅಭಿಮಾನಿ ನಮಗೆ ಮಂಗಳವನ್ನುಂಟುಮಾಡಲಿ. ಉಷಃಕಾಲ ದಿವಸಾಭಿಮಾನಿಗಳು ನಮಗೆ ಮಂಗಲ

ವನ್ನುಂಟುಮಾಡಲಿ. ಪೃಥಿವಿಯ ಧೂಳಿಯ ಅಭಿಮಾನಿಗಳು ಶುಭಪ್ರದವಾಗಲಿ. ನಮ್ಮ ತಂದೆಯಾದ ದ್ಯುಲೋಕಾಭಿಮಾನಿಯು ನಮಗೆ ಮಂಗಲವನ್ನುಂಟುಮಾಡಲಿ'. ಹೀಗೆ ಹೇಳಿ ಲಕ್ಷ್ಮೀಪತಿಗೆ ಇದು ಆಹುತಿ ಎಂದು ಭಕ್ಷಿಸಬೇಕು. ಮೂರನೆಯ ಭಾಗ ವನ್ನು ತಿನ್ನುವಾಗ 'ಸೃಷ್ಟಿಕರ್ತನಾದ ಹರಿ ನಮಗೆ ಸದ್ಬುದ್ಧಿಯನ್ನು ಪ್ರೇರಿಸುತ್ತಾನೆ. ನಮಗೆ ವೃಕ್ಷಾಭಿಮಾನಿ ಮಂಗಳವನ್ನುಂಟುಮಾಡಲಿ. ಸೂರ್ಯದೇವನು ಮಂಗಳ ಪ್ರದನಾಗಲಿ. ಗೋವುಗಳು ನಮಗೆ ಮಂಗಲವನ್ನು ಕೊಡಲಿ'. ಹೀಗೆ ಹೇಳಿ ಅನಂತ ಸುಖಿನಾದ ಹರಿಗೆ ಇದು ಆಹುತಿ ಎಂದು ಭಕ್ಷಿಸಬೇಕು. ಅನಂತರ ಮೇಲೆ ಹೇಳಿದ ಸಮಗ್ರ ಗಾಯತ್ರಿಯನ್ನೂ, ಸಮಗ್ರ ಮಧುಮತೀ ಸೂಕ್ತವನ್ನೂ ಹೇಳಿ 'ನಾನು ನನಗೆ ಯೋಗ್ಯವಾದ ಅಭಿವ್ಯಕ್ತ ಸ್ವರೂಪ ಸುಖದಿಂದಲೇ ಪೂರ್ಣನಾಗುತ್ತೇನೆ' ಎಂದು ಹೇಳಿ, ಎಲ್ಲಾ ವ್ಯಾಹೃತಿಗಳನ್ನೂ ಉಚ್ಚರಿಸಿ ನಾಲ್ಕನೆ ಭಾಗವನ್ನು ಭಕ್ಷಿಸಿ ಕೈಗಳನ್ನು ತೊಳೆದು ಅಗ್ನಿಗೆ ಪಶ್ಚಿಮ ದಿಕ್ಕಿನಲ್ಲಿ, ಪೂರ್ವದಿಕ್ಕಿಗೆ ತಲೆಮಾಡಿ ಮಲಗಿ ಕೊಳ್ಳಬೇಕು. ಪ್ರಾತಃ ಸಂಧ್ಯಾವಂದನೆ ಮಾಡಿ ಸೂರ್ಯೋದಯಕಾಲದಲ್ಲಿ ಸೂರ್ಯಾಂತ ರ್ಗತನಾದ ನಾರಾಯಣನನ್ನು ಧ್ಯಾನಿಸಬೇಕು. ಧ್ಯಾನಮಂತ್ರ—'ಸೂರ್ಯಾಂತರ್ಗತ ನಾರಾಯಣನೇ! ನೀನು ಎಲ್ಲ ದಿಕ್ಕುಗಳಲ್ಲಿರುವ ಚೇತನರಲ್ಲೆಲ್ಲ ಶ್ರೇಷ್ಠನಾಗಿರುವಿ. ಅಂತಹ ನಿನ್ನನ್ನು ಉಪಾಸನೆ ಮಾಡುವ ನಾನು ಎಲ್ಲ ಮನುಷ್ಯರಿಗಿಂತ ಶ್ರೇಷ್ಠನೆನಿಸು ವಂತಾಗಲಿ'. ಸಂಧ್ಯಾವಂದನೆಗಾಗಿ ಎದ್ದುಹೋದ ದಾರಿಯಿಂದಲೆ ಹಿಂದೆ ಬಂದು ಅಗ್ನಿಗೆ ಪಶ್ಚಿಮದಿಕ್ಕಿನಲ್ಲಿ ಕುಳಿತುಕೊಂಡು ಮೇಲೆ ಹೇಳಿದ ವಿದ್ಯೆಯನ್ನು ಉಪದೇಶಿ ಸಿದ ಆಚಾರ್ಯರ ಪರಂಪರೆಯನ್ನು ಜಪಿಸಬೇಕು.

**ಹೋಮ ವಿಧಿಯ ಆಚಾರ್ಯ ಪರಂಪರೆ :**

**ಉಪನಿಷತ್—ತಂ ಹೈತಮುದ್ದಾಲಕ ಆರುಣಿರ್ವಾಜಸನೇಯಾಯ ಯಾಜ್ಞ- ವಲ್ಕ್ಯಾಯಾಂತೇವಾಸಿನ ಉಕ್ತ್ವೋವಾಚಾಪಿ 'ಯ ಏನಂ ಶುಷ್ಕೇ ಸ್ಥಾಣೌ ನಿಷಿಂಚೇಜ್ಜಾಯೇರಂಛಾಖಾಃ ಪ್ರರೋಹೇಯುಃ ಪಲಾಶಾ- ನೀ'ತಿ । ಏತಮುಹೈವ ವಾಜಸನೇಯೋ ಯಾಜ್ಞವಲ್ಕ್ಯೋ ಮಧು- ಕಾಯ ಪೈಂಗ್ಯಾಯಾಂತೇವಾಸಿನ ಉಕ್ತ್ವೋವಾಚಾಪಿ 'ಯ ಏನಂ ಶುಷ್ಕೇ ಸ್ಥಾಣೌ ನಿಷಿಂಚೇಜ್ಜಾಯೇರಂಛಾಖಾಃ ಪ್ರರೋಹೇಯುಃ ಪಲಾಶಾನೀ'ತಿ । ಏತಮು ಹೈವ ಮಧುಕಃ ಪೈಂಗ್ಯಶ್ಚೂಲಾಯ ಭಾಗವಿತ್ತಯೇಽಂತೇವಾಸಿನ ಉಕ್ತ್ವೋವಾಚಾಪಿ 'ಯ ಏನಂ ಶುಷ್ಕೇ ಸ್ಥಾಣೌ ನಿಷಿಂಚೇಜ್ಜಾಯೇರಂಛಾಖಾಃ ಪ್ರರೋಹೇಯುಃ ಪಲಾಶಾ- ನೀ'ತಿ । ಏತಮು ಹೈವ ಚೂಲೋ ಭಾಗವಿತ್ತಿರ್ಜಾನಕಯ ಆಯ- ಸ್ಥೂಣಾಯಾಂತೇವಾಸಿನ ಉಕ್ತ್ವೋವಾಚಾಪಿ 'ಯ ಏನಂ ಶುಷ್ಕೇ**

**ಸ್ಥಾಣೌ ನಿಷಿಂಚೇಜ್ಜಾಯೇರಂಛಾಖಾಃ ಪ್ರರೋಹೇಯುಃ ಪಲಾಶಾ-ನೀ'ತಿ । ಏತಮು ಹೈವ ಜಾನಕಿರಾಯಸ್ಥೂಣಃ ಸತ್ಯಕಾಮಾಯ ಜಾಬಾಲಾಯಾಂತೇವಾಸಿನ ಉಕ್ತ್ವೋವಾಚಾಪಿ । 'ಯ ಏನಂ ಶುಷ್ಕೇ ಸ್ಥಾಣೌ ನಿಷಿಂಚೇಜ್ಜಾಯೇರಂಛಾಖಾಃ ಪ್ರರೋಹೇಯುಃ ಪಲಾಶಾ-ನೀ'ತಿ । ಏತಮು ಹೈವ ಸತ್ಯಕಾಮೋ ಜಾಬಾಲೋಽಂತೇವಾಸಿಭ್ಯ ಉಕ್ತ್ವೋವಾಚಾಪಿ 'ಯ ಏನಂ ಶುಷ್ಕೇ ಸ್ಥಾಣೌ ನಿಷಿಂಚೇಜ್ಜಾಯೇ-ರಂಛಾಖಾಃ ಪ್ರರೋಹೇಯುಃ ಪಲಾಶಾನೀ'ತಿ । ತಮೇತಂ ನಾಪುತ್ರಾಯ ವಾಽನಂತೇವಾಸಿನೇ ವಾ ಬ್ರೂಯಾತ್ ।**

ಜಪಿಸಬೇಕಾದ ಆಚಾರ್ಯ ಪರಂಪರೆ ಹೀಗಿದೆ–ಪಿಷ್ಟಪಿಂಡವನ್ನು ಸಿದ್ಧಪಡಿಸುವ ಕ್ರಮವನ್ನು ಅರುಣನ ಮಗನಾದ ಉದ್ದಾಲಕನು ಶಿಷ್ಯನಾದ ಯಾಜ್ಞವಲ್ಕ್ಯನಿಗೆ ಹೇಳಿ 'ಹೋಮಮಾಡಿ ಉಳಿದ ಪಿಷ್ಟವನ್ನು ಒಣಗಿದ ಮರದಲ್ಲಿ ಹಾಕಿದರೆ ಕೊಂಬೆ ಗಳು ಹುಟ್ಟುತ್ತವೆ. ಎಲೆಗಳು ಚಿಗುರುತ್ತವೆ'ಎಂದನು. ಇದನ್ನೇ ಯಾಜ್ಞವಲ್ಕ್ಯನು ಪಿಂಗನ ಮಗನಾದ ಮಧುಕನಿಗೆ ಹೇಳಿ 'ಹೋಮಮಾಡಿ ಉಳಿದ ಪಿಷ್ಟವನ್ನು ಒಣಗಿದ ಮರದಲ್ಲಿ ಹಾಕಿದರೆ ಕೊಂಬೆಗಳು ಹುಟ್ಟುತ್ತವೆ, ಎಲೆಗಳು ಚಿಗುರುತ್ತವೆ' ಎಂದನು. ಇದನ್ನೇ ಮಧುಕನು ಭಗವಿತ್ತಿಯ ಮಗನಾದ ಚೂಲನಿಗೆ ಹೇಳಿ 'ಹೋಮ ಮಾಡಿ ಉಳಿದ ಹಿಟ್ಟನ್ನು ಒಣಗಿದ ಮರದಲ್ಲಿ ಹಾಕಿದರೆ ಕೊಂಬೆಗಳು ಹುಟ್ಟುತ್ತವೆ, ಎಲೆಗಳು ಚಿಗುರುತ್ತವೆ' ಎಂದನು. ಇದನ್ನೇ ಚೂಲನು ಜನಕನ ಮಗನಾದ ಆಯಸ್ಥೂಣನಿಗೆ ಹೇಳಿ 'ಹೋಮ ಮಾಡಿ ಉಳಿದ ಪಿಷ್ಟವನ್ನು ಒಣಗಿದ ಮರದಲ್ಲಿ ಹಾಕಿದರೆ ಕೊಂಬೆ ಗಳು ಹುಟ್ಟುತ್ತವೆ, ಎಲೆಗಳು ಚಿಗುರುತ್ತವೆ' ಎಂದನು. ಇದನ್ನೇ ಆಯಸ್ಥೂಣನು ಜಾಬಾಲೆಯ ಮಗನಾದ ಸತ್ಯಕಾಮನಿಗೆ ಹೇಳಿ 'ಹೋಮಮಾಡಿ ಉಳಿದ ಪಿಷ್ಟವನ್ನು ಒಣಗಿದ ಮರದಲ್ಲಿ ಹಾಕಿದರೆ ಕೊಂಬೆಗಳು ಹುಟ್ಟುತ್ತವೆ, ಎಲೆಗಳು ಚಿಗುರುತ್ತವೆ' ಎಂದನು. ಇದನ್ನೇ ಸತ್ಯಕಾಮನು ತನ್ನ ಶಿಷ್ಯರಿಗೆ ಹೇಳಿ 'ಹೋಮ ಮಾಡಿ ಉಳಿದ ಪಿಷ್ಟವನ್ನು ಒಣಗಿದ ಮರದಲ್ಲಿ ಹಾಕಿದರೆ ಕೊಂಬೆಗಳು ಹುಟ್ಟುತ್ತವೆ, ಎಲೆಗಳು ಚಿಗುರುತ್ತವೆ' ಎಂದನು. ಇದನ್ನು ಪುತ್ರನಿಗೆ ಅಥವಾ ಶಿಷ್ಯನಿಗೆ ಹೊರತು ಬೇರೆ ಯಾರಿಗೂ ಹೇಳಬಾರದು.

**ಉಪನಿಷತ್—ಚತುರೌದುಂಬರಾ ಭವಂತಿ । ಔದುಂಬರಃ ಸ್ರುವಃ । ಔದುಂಬ-ರಶ್ಚಮಸಃ । ಔದುಂಬರ ಇಧ್ಮ । ಔದುಂಬರ್ಯಾವುಪಮಂಥನ್ಯೌ । ದಶ ಗ್ರಾಮ್ಯಾಣಿ ಧಾನ್ಯಾನಿ ಭವಂತಿ ವ್ರೀಹಿಯವಾಸ್ತಿಲಮಾಷಾ ಅಣುಪ್ರಿಯಂಗವೋ ಗೋಧೂಮಾಶ್ಚ ಮಸೂರಾಶ್ಚ ಖಲ್ವಾಶ್ಚ**

**ಖಲಕುಲಾಶ್ಚ । ತಾನ್ ಪಿಷ್ಟಾನ್ ದಧನಿ ಮಧುನಿ ಘೃತ ಉಪಸಿಂಚತಿ। ಆಜ್ಯಸ್ಯ ಜುಹೋತಿ ॥ ಇತಿ ತೃತೀಯ ಬ್ರಾಹ್ಮಣಂ ॥**

ಅತ್ತಿ ಮರದಿಂದ ಮಾಡಿದ ಪದಾರ್ಥಗಳು ನಾಲ್ಕು. ಸ್ರುವ, ಚಮಸ,ಇಧ್ಮ, ಮತ್ತು ಎರಡು ಅರಣಿಗಳು. ಹತ್ತು ಪ್ರಧಾನವಾದ ಧಾನ್ಯಗಳು ಯಾವುವೆಂದರೆ ಭತ್ತ, ಜವೆಗೋಧಿ, ಎಳ್ಳು, ಉದ್ದು, ಸಾವೆ ಅಕ್ಕಿ, ನವಣೆ, ಗೋಧಿ. ಮಸೂರ, ಅವರೆ ಮತ್ತು ಹುರುಳಿ. ಇವುಗಳನ್ನು ಹಿಟ್ಟುಮಾಡಿ ಮೊಸರು, ಜೇನುತುಪ್ಪ ಮತ್ತು ತುಪ್ಪಗಳಿಂದ ಕಲಸಿ ಆಜ್ಯಭಾಗದೊಂದಿಗೆ ಹೋಮ ಮಾಡಬೇಕು.

ಇಲ್ಲಿಗೆ ತ್ರತೀಯ ಬ್ರಾಹ್ಮಣವು ಮುಗಿಯಿತು.

**ಸ್ತ್ರೀಸಂಗದಲ್ಲಿ ಯಜ್ಞ ಭಾವನೆ ಬೇಕು :**

**ಉಪನಿಷತ್—ಏಷಾಂ ವೈ ಭೂತಾನಾಂ ಪೃಥಿವೀ ರಸಃ । ಪೃಥಿವ್ಯಾ ಆಪಃ । ಅಪಾಮೋಷಧಯಃ । ಓಷಧೀನಾಂ ಪುಷ್ಪಾಣಿ। ಪುಷ್ಪಾಣಾಂ ಫಲಾನಿ । ಫಲಾನಾಂ ಪುರುಷಃ । ಪುರುಷಸ್ಯ ರೇತಃ ।**

ಈ ಚೇತನಾಚೇತನ ವಸ್ತುಗಳಲ್ಲಿ ಪೃಥಿವೀದೇವತೆಯು ಶ್ರೇಷ್ಠಳು. ಪೃಥಿವಿಗಿಂತ ಅಬಭಿಮಾನಿಯಾದ ವರುಣನೂ, ವರುಣನಿಗಿಂತ ಓಷಧಿಗಳ ಅಭಿಮಾನಿಯಾದ ಚಂದ್ರನೂ, ಚಂದ್ರನಿಗಿಂತ ಪುಷ್ಪಾಭಿಮಾನಿಗಳಾದ ದಕ್ಷ ಬೃಹಸ್ಪತಿ ಮೊದಲಾದವರೂ ಅವರಿಗಿಂತ ಫಲಾಭಿಮಾನಿಗಳಾದ ಇಂದ್ರಕಾಮರೂ, ಅವರಿಗಿಂತ ಪುಂಸ್ತ್ವಾಭಿಮಾನಿಯಾದ ರುದ್ರನೂ, ಅವನಿಗಿಂತ ರೇತೋಭಿಮಾನಿಯಾದ ಸರಸ್ವತಿಯೂ ಶ್ರೇಷ್ಠರು.

**ಉಪನಿಷತ್—ಸ ಹ ಪ್ರಜಾಪತಿರೀಕ್ಷಾಂಚಕ್ರೇ 'ಹಂತಾಸ್ಮೈ ಪ್ರತಿಷ್ಠಾಂ ಕಲ್ಪಯಾನೀ'ತಿ । ಸ ಸ್ತ್ರಿಯಂ ಸಸೃಜೇ । ತಾಂ ಸೃಷ್ಟ್ವಾಽಧ ಉಪಾಸ್ತ। ತಸ್ಮಾತ್ ಸ್ತ್ರಿಯಮಧ ಉಪಾಸೀತ । ಸ ಏತಂ ಪ್ರಾಂಚಂ ಗ್ರಾವಾಣಮಾತ್ಮನ ಏವ ಸಮುದಪಾರಯತ್ । ತೇನೈನಾಮಭ್ಯಸೃಜತ್ ।**

ಇಂತಹ ಶ್ರೇಷ್ಠವಾದ ರೇತಸ್ಸಿಗೆ ಹೇಗೆ ಆಧಾರವನ್ನು ಕಲ್ಪಿಸಲಿ ಎಂದು ಚತುರ್ಮುಖನು ಆಲೋಚಿಸಿದನು. ಬಳಿಕ ಸ್ತ್ರೀಯನ್ನು ಸೃಷ್ಟಿಸಿ ಸಂಗವನ್ನು ಮಾಡಿದನು. ಆದ್ದರಿಂದ ಈಗಿನ ಕಾಲದವರೂ ಕೂಡ ಸ್ತ್ರೀಸಂಗವನ್ನು ಮಾಡಬೇಕು. ಪ್ರಾಚೀನವಾದ ಕಲ್ಲಿನಂಥ ರೇತಸ್ಸನ್ನು ತಮ್ಮ ದೇಹದಿಂದ ಹೊರಗೆ ಹಾಕಬೇಕು. ಅದರಿಂದ ಸ್ತ್ರೀಯನ್ನು ಸಂಯುಕ್ತಳನ್ನಾಗಿ ಮಾಡಬೇಕು.

**ಉಪನಿಷತ್**—ತಸ್ಯಾ ವೇದಿರುಪಸ್ಥಃ। ಲೋಮಾನಿ ಬರ್ಹಿಃ। ಚರ್ಮ ಅಧಿಷವಣೇ ಸಮಿದ್ಧೋ ಮಧ್ಯತಃ ತೌ ಮುಷ್ಕೌ। ಸ ಯಾವಾನ್ ಹ ವೈ ವಾಜಪೇಯೇನ ಯಜಮಾನಸ್ಯ ಲೋಕೋ ಭವತಿ ತಾವಾನಸ್ಯ ಲೋಕೋ ಭವತಿ। ಯ ಏವಂ ವಿದ್ವಾನಧೋಪಹಾಸಂ ಚರತಿ । ಆಸಾಂ ಸ್ತ್ರೀಣಾಂ ಸುಕೃತಂ ವೃಂಕ್ತೇ । ಅಥ ಯ ಇದಮವಿದ್ವಾನಧೋಪಹಾಸಂ ಚರತಿ ಅಸ್ಯ ಸ್ತ್ರಿಯಃ ಸುಕೃತಂ ವೃಂಜತೇ ।

ಪುರುಷರಲ್ಲಿ ಸ್ತ್ರೀಸಂಗ ಪ್ರವೃತ್ತಿ ಸ್ವಾಭಾವಿಕವಾಗಿ ಉಂಟಾದರೂ ಅದೊಂದು ಯಜ್ಞವೆಂಬ ಭಾವನೆ ಬೇಕು. ಸ್ತ್ರೀಯ ಉಪಸ್ಥವೇ ವೇದಿ. ರೋಮಗಳೇ ದರ್ಭೆ. ಚರ್ಮವೇ ಕೃಷ್ಣಾಜಿನ. ವೃಷಣಗಳೇ ಸೋಮರಸವನ್ನು ಹಿಂಡುವ ಹಲಗೆಗಳು. ಯೋನಿ ಮಧ್ಯಪ್ರದೇಶವೇ ಜ್ವಲಿಸುವ ಅಗ್ನಿ. ಅದರಲ್ಲಿ ರೇತಸ್ಸನ್ನು ಹೋಮಿಸಬೇಕು. ಪ್ರಜಾಪತಿಯು ಹೀಗೆ ಯಜ್ಞಭಾವನೆಯಿಂದ ಸ್ತ್ರೀಸಂಗ ಮಾಡಿದ್ದನೆಂದು ತಿಳಿದು ಭಗವಂತನಲ್ಲಿ ಮನಸ್ಸಿಟ್ಟು ತನ್ನ ಪತ್ನಿಯ ಸಂಗವನ್ನು ಯಾರು ಮಾಡುತ್ತಾನೆಯೋ ಅವನಿಗೆ ವಾಜಪೇಯ ಯಾಗವನ್ನು ಮಾಡಿದವನಿಗೆ ಸಿಗುವ ಪರಲೋಕಸುಖವೆಲ್ಲವೂ ಪ್ರಾಪ್ತವಾಗುತ್ತವೆ. ಹೀಗೆ ತಿಳಿದು ಸ್ತ್ರೀಸಂಗವನ್ನು ಮಾಡುವವನು ಆ ಸ್ತ್ರೀಯರ ಪುಣ್ಯಕ್ಕೆ ತಾನೂ ಭಾಗಿಯಾಗುತ್ತಾನೆ. ಯಾರು ಇದನ್ನು ತಿಳಿಯದೆ ಸ್ತ್ರೀಸಂಗ ಮಾಡುತ್ತಾನೆಯೋ ಅವನ ಪುಣ್ಯವನ್ನು ಸ್ತ್ರೀಯರೆ ಪಡೆಯುತ್ತಾರೆ.

**ಉಪನಿಷತ್**—ಏತದ್ಧ ಸ್ಮ ವೈ ತದ್ ವಿದ್ವಾನುದ್ದಾಲಕ ಆರುಣಿರಾಹ । ಏತದ್ಧ ಸ್ಮ ವೈ ತದ್ ವಿದ್ವಾನ್ ನಾಕೋ ಮೌದ್ಗಲ್ಯ ಆಹ । ಏತದ್ಧ ಸ್ಮ ವೈ ತದ್ ವಿದ್ವಾನ್ ಕುಮಾರ ಹಾರೀತ ಆಹ । ಬಹವೋ ಮರ್ಯಾ ಬ್ರಾಹ್ಮಣಾಯಾನಾ ನಿರಿಂದ್ರಿಯಾ ವಿಸುಕೃತೋಽಸ್ಮಾಲ್ಲೋಕಾತ್ ಪ್ರಯಂತಿ ಯ ಇದಮವಿದ್ವಾಂಸೋಽಧೋಪಹಾಸಂ ಚರಂತೀತಿ । ಬಹು ವಾ ಇದಂ ಸುಪ್ತಸ್ಯ ವಾ ಜಾಗ್ರತೋ ವಾ ರೇತಃ ಸ್ಕಂದತಿ ತದಭಿಮೃಶೇದನು ವಾ ಮಂತ್ರಯೇತ । 'ಯನ್ಮೇಽದ್ಯ ರೇತಃ ಪೃಥಿವೀಮಸ್ಕಂದತ್ ಯದೋಷಧೀರಪ್ಯಸರದ್ ಯದಪ ಇದಮಹಂ ತದ್ ರೇತ ಆದದೇ । ಪುನರ್ಮಾಮೈತು ಇಂದ್ರಿಯಂ ಪುನಸ್ತೇಜಃ ಪುನರ್ಭಗಃ ಪುನರಗ್ನಿರ್ಧಿಷ್ಣ್ಯಾಃ । ಯಥಾಸ್ಥಾನಂ ಕಲ್ಪಂತಾಂ' ಇತ್ಯನಾಮಿಕಾಂಗುಷ್ಠಾಭ್ಯಾಮಾದಾಯಾಂತರೇಣ ಸ್ತನೌ ವಾ ಭ್ರುವೌ ವಾ ನಿಮೃಜ್ಯಾತ್ ।

ಜ್ಞಾನಪೂರ್ವಕವಾದ ಈ ಸಂಗಪ್ರಕಾರವನ್ನು ತಿಳಿದ ಉದ್ದಾಲಕರು ಹೇಳಿ

ದರು. ನಾಕರು ಹೇಳಿದರು. ಕುಮಾರ ಹಾರೀತರೂ ಹೇಳಿದರು. ಏನೆಂದರೆ, ಬ್ರಹ್ಮಜ್ಞಾನಿಗಳಲ್ಲದೆ, ಬ್ರಹ್ಮಜ್ಞಾನಿಗಳಂತೆ ತೋರುವ ಅನೇಕ ಮಾನವರು ಯಜ್ಞ ರೂಪದ ಸ್ತ್ರೀಸಂಗ ಪ್ರಕಾರವನ್ನು ತಿಳಿಯದೆ ಸಂಗವನ್ನು ಮಾಡಿ, ನಿರಿಂದ್ರಿಯರಾಗಿ, ಪುಣ್ಯವನ್ನೂ ಕಳೆದುಕೊಂಡು ಈ ಲೋಕದಿಂದ ನರಕಾದಿ ಲೋಕಗಳಿಗೆ ಹೋಗುತ್ತಾರೆ. ಸುಪ್ತರಾಗಿದ್ದಾಗ ಅಥವಾ ಜಾಗ್ರದವಸ್ಥೆಯಲ್ಲಿ ಸ್ತ್ರೀಸಂಗವಿಲ್ಲದೆಯೇ ರೇತಃ ಸ್ಖಲನ ಹೊಂದಿದರೆ, ಆಗ ರೇತಸ್ಸನ್ನು ಸ್ಪರ್ಶ ಮಾಡಿ ಹೀಗೆ ಅಭಿಮಂತ್ರಣ ಮಾಡಬೇಕು– 'ಯಾವ ನನ್ನ ರೇತಸ್ಸು ಈಗ ಭೂಮಿಗೆ ಜಾರಿತೋ, ಓಷಧಿಗಳನ್ನು ಸೇರಿತೋ, ಜಲವನ್ನು ಸೇರಿತೋ, ಆ ರೇತಸ್ಸನ್ನು ಹಿಂತೆಗೆದುಕೊಳ್ಳುತ್ತೇನೆ. ನನಗೆ ರೇತಸ್ಸಿನ ರೂಪದಿಂದ ಕಳೆದುಹೋದ ಇಂದ್ರಿಯವು ಮರಳಿ ಬರಲಿ, ತೇಜಸ್ಸು ಮರಳಿ ಬರಲಿ, ಭಾಗ್ಯವು ಮರಳಿ ಬರಲಿ, ಹೋಮದ ಅಗ್ನಿಯು ಮರಳಿ ಬರಲಿ. ಹಿಂದೆ ಬಂದಂತಹ ಇಂದ್ರಿಯಾದಿಗಳು ತಮ್ಮ ತಮ್ಮ ಸ್ಥಾನಗಳಲ್ಲಿ ನೆಲೆಸಲಿ'. ಹೀಗೆ ಹೇಳಿ ಅಂಗುಷ್ಠ ಮತ್ತು ಅನಾಮಿಕ ಬೆರಳುಗಳಿಂದ ಆ ರೇತಸ್ಸನ್ನು ಸ್ತನಗಳ ಮಧ್ಯದಲ್ಲಾಗಲೀ, ಹುಬ್ಬುಗಳ ಮಧ್ಯದಲ್ಲಾಗಲೀ ಹಚ್ಚಬೇಕು.

**ಉಪನಿಷತ್—ಅಥ ಯದ್ಯುದಕ ಆತ್ಮಾನಂ ಪರಿಪಶ್ಯೇತ್ ತದಭಿಮಂತ್ರಯೇತ 'ಮಯಿ ತೇಜ ಇಂದ್ರಿಯಂ ಯಶೋ ದ್ರವಿಣಂ ಸುಕೃತಮಿ'ತಿ ।**

ನೀರಿನಲ್ಲಿ ತನ್ನ ಪ್ರತಿಬಿಂಬವನ್ನು ನೋಡಿದರೆ ಆ ಪ್ರತಿಬಿಂಬವಿರುವ ನೀರನ್ನು ಮುಟ್ಟಿ ಹೀಗೆ ಅಭಿಮಂತ್ರಣ ಮಾಡಬೇಕು– 'ನೀರಿನಲ್ಲಿ ಪ್ರತಿಬಿಂಬದರ್ಶನದಿಂದ ಕಳೆದು ಹೋದ ನನ್ನ ತೇಜಸ್ಸೂ, ಇಂದ್ರಿಯವೂ, ಯಶಸ್ಸೂ, ದ್ರವ್ಯವೂ, ಸುಕೃತವೂ ನನಗೆ ತಿರುಗಿ ಬರಲಿ'.

**ದಂಪತಿಗಳು ಅನ್ಯೋನ್ಯವಾಗಿರಬೇಕು :**

**ಉಪನಿಷತ್—ಶ್ರೀರ್ಹವಾ ಏಷಾ ಸ್ತ್ರೀಣಾಂ ಯನ್ಮಲೋದ್ವಾಸಾಃ। ತಸ್ಮಾನ್ಮಲೋದ್ವಾಸಸಂ ಯಶಸ್ವಿನೀಮಭಿಕ್ರಮ್ಯೋಪಮಂತ್ರಯೇತ ।**

ಸ್ತ್ರೀಯರಲ್ಲಿ ಋತುಮತಿಯಾದ ಸ್ತ್ರೀಯು ಪುತ್ರವತಿಯಾಗಿ ಯಶಸ್ಸನ್ನು ಹೊಂದಬಲ್ಲಳು. ಆದ್ದರಿಂದ ಋತುಮತಿಯಾಗಿ ಶುದ್ಧ ಸ್ನಾನವನ್ನು ಮಾಡಿದ ಅಂಥ ಸ್ತ್ರೀಯನ್ನು ಸಮೀಪಿಸಿ ಒಳ್ಳೆಯ ಸಂತತಿ ಪಡೆಯುವ ಬಗ್ಗೆ ವಿಚಾರ ಮಾಡಬೇಕು.

**ಉಪನಿಷತ್–ಸಾ ಚೇದಸ್ಮೈ ನ ದದ್ಯಾತ್ ಕಾಮಮೇನಾಮವಕ್ರೀಣೀಯಾತ್। ಸಾ ಚೇದಸ್ಮೈ ನೈವ ದದ್ಯಾತ್ ಕಾಮಮೇನಾಂ ಯಷ್ಟ್ಯಾ ವಾ**

**ಪಾಣಿನಾ ವೋಪಹತ್ಯಾತಿಕ್ರಾಮೇತ್ 'ಇಂದ್ರಿಯೇಣ ತೇ ಯಶಸಾ ಯಶ ಆದದ' ಇತಿ । ಅಯಶಾ ಏವ ಭವತಿ । ಸಾ ಚೇದಸ್ಮೈ ದದ್ಯಾತ್ 'ಇಂದ್ರಿಯೇಣ ತೇ ಯಶಸಾ ಯಶ ಆದಧಾಮೀ'ತಿ । ಯಶಸ್ವಿನಾವೇವ ಭವತಃ ।**

ಅವಳು ಇವನಿಗೆ ಸಂಗವನ್ನು ಕೊಡದಿದ್ದರೆ ಅವಳು ಬಯಸಿದುದನ್ನೆಲ್ಲಾ ಕೊಟ್ಟು ಉಪಾಯದಿಂದ ವಶಪಡಿಸಿಕೊಳ್ಳಬೇಕು. ಎಷ್ಟು ಮಾತ್ರಕ್ಕೂ ಅವಳು ಒಪ್ಪದಿದ್ದಲ್ಲಿ ಕೋಲಿನಿಂದಾಗಲೀ, ಕೈಯಿಂದಾಗಲೀ ಹೊಡೆದು ಅವಳನ್ನು ತೊರೆದು ಹೋಗಬೇಕು. ಹೋಗುವಾಗ 'ಯಶಸ್ಸಿಗೆ ಕಾರಣವಾದ ನನ್ನ ಇಂದ್ರಿಯದಿಂದ ನಿನ್ನ ಯಶಸ್ಸನ್ನು ತೆಗೆದುಕೊಳ್ಳುತ್ತೇನೆ' ಎಂದು ಹೇಳಬೇಕು. ಇದರಿಂದ ಅವಳು ಪುತ್ರಸಂತತಿಯಿಲ್ಲದೆ ಯಶೋಹೀನಳೇ ಆಗುತ್ತಾಳೆ. ಅವಳು ಅವನಿಗೆ ಸಂಗವನ್ನು ಕೊಟ್ಟರೆ ಯಶಸ್ಸಿಗೆ ಕಾರಣವಾದ ನನ್ನ ಇಂದ್ರಿಯದಿಂದ ನಿನ್ನಲ್ಲಿ ಯಶಸ್ಸನ್ನು ಇಡುತ್ತೇನೆ ಎಂದು ಹೇಳಬೇಕು. ಆದರಿಂದ ದಂಪತಿಗಳು ಪುತ್ರಾದಿ ಯಶಸ್ಸುಳ್ಳವರೇ ಆಗುತ್ತಾರೆ.

**ಉಪನಿಷತ್**—**ಸ ಯಾಮಿಚ್ಛೇತ್ ಕಾಮಯೇತ ನೇತಿ ತಸ್ಯಾಮರ್ಥಂ ನಿಷ್ಠಾಯ ಮುಖೇನ ಮುಖಂ ಸಂಧಾಯೋಪಸ್ಥಮಸ್ಯಾ ಅಭಿಮೃಶ್ಯ ಜಪೇತ್**-

**ಅಂಗಾದಂಗಾತ್ ಸಂಭವಸಿ ಹೃದಯಾದಧಿ ಜಾಯಸೇ ।**
**ಸ ತ್ವಮಂಗಕಷಾಯೋಽಸಿ**
**ದಿಗ್ಧವಿದ್ಧಾಮಿವ ಮಾದಯೇಮಾಮಮೂಂ ಮಯಿ ॥ಇತಿ ।**

ತನ್ನನ್ನು ರಮಿಸಲೆಂದು ಯಾರನ್ನು ವಶೀಕರಿಸಿಕೊಳ್ಳಲು ಪುರುಷನು ಬಯಸುತ್ತಾನೆಯೋ ಅವಳನ್ನು ಕೂಡುವಾಗ ಮುಖದಿಂದ ಮುಖವನ್ನು ಸ್ಪರ್ಶಿಸಿ ಉಪಸ್ಥವನ್ನು ಸ್ಪರ್ಶಿಸಿ ಜಪಿಸಬೇಕು-'ರೇತೋಂತರ್ಗತನಾದ ಭಗವಂತನೇ! ನೀನು ನನ್ನ ಪ್ರತಿಯೊಂದು ಅಂಗದಿಂದಲೂ ಅಭಿವ್ಯಕ್ತನಾಗುತ್ತಿ. ವಿಶೇಷವಾಗಿ ಹೃದಯದಲ್ಲಿರುವ ನಾಡೀದ್ವಾರಾ ಅಭಿವ್ಯಕ್ತನಾಗುತ್ತಿ. ನೀನು ಅಂಗಗಳ ಸಾರನಾಗಿದ್ದಿ. ಔಷಧಗಳಿಂದ ಲಿಪ್ತಳಾದವಳಂತೆ ಪರವಶಗೊಳಿಸಿ ಇವಳನ್ನು ನನಗೆ ವಶಳಾಗುವಂತೆ ಮಾಡು'.

**ಉಪನಿಷತ್**—**ಅಥ ಯಾಮಿಚ್ಛೇನ್ನ ಗರ್ಭಂ ದಧೀತೇತಿ ತಸ್ಯಾಮರ್ಥಂ ನಿಷ್ಠಾಯ ಮುಖೇನ ಮುಖಂ ಸಂಧಾಯಾಭಿಪ್ರಾಣ್ಯಾಪಾನ್ಯಾತ್ 'ಇಂದ್ರಿಯೇಣ ತೇ ರೇತಸಾ ರೇತ ಆದದ' ಇತಿ । ಅರೇತಾ ಏವ ಭವತಿ ।**

ತನ್ನ ಪತ್ನಿಯ ಯೌವನ ನಾಶವಾದೀತೆಂಬ ಭಯದಿಂದ ಗರ್ಭವನ್ನು ಧರಿಸಬಾರದೆಂದು ಪತಿ ಬಯಸಿದರೆ ಅವಳೊಡನೆ ಕೂಡುವಾಗ ಮುಖಕ್ಕೆ ಮುಖವನ್ನು ಜೋಡಿಸಿ ಶ್ವಾಸವನ್ನು ಬಿಟ್ಟು, ಪುನಃ ಶ್ವಾಸವನ್ನು ತೆಗೆದುಕೊಳ್ಳಬೇಕು. 'ನನ್ನ ರೇತಸ್ಸಿಗೆ ಕಾರಣವಾದ ಇಂದ್ರಿಯದಿಂದ ನಿನ್ನ ಸಂತಾನಶಕ್ತಿಯನ್ನು ತೆಗೆದುಕೊಳ್ಳುತ್ತೇನೆ' ಎನ್ನಬೇಕು. ಆದರಿಂದ ಅವಳು ಸಂತತಿ ಇಲ್ಲದವಳಾಗುತ್ತಾಳೆ.

**ಉಪನಿಷತ್—ಅಥ ಯಾಮಿಚ್ಛೇತ್ ಗರ್ಭಂ ದಧೀತೇತಿ ತಸ್ಯಾಮರ್ಥಂ ನಿಷ್ಠಾಯ ಮುಖೇನ ಮುಖಂ ಸಂಧಾಯಾಪಾನ್ಯಾಭಿಪ್ರಾಣ್ಯಾತ್ 'ಇಂದ್ರಿಯೇಣ ತೇ ರೇತಸಾ ರೇತ ಆದಧಾಮೀ'ತಿ । ಗರ್ಭಿಣ್ಯೇವ ಭವತಿ।**

ತನ್ನ ಪತ್ನಿ ಗರ್ಭವನ್ನು ಧರಿಸಬೇಕೆಂದು ಪತಿ ಬಯಸುವುದಾದರೆ ಅವಳೊಡನೆ ಕೂಡುವಾಗ ಮುಖಕ್ಕೆ ಮುಖವನ್ನು ಜೋಡಿಸಿ ಶ್ವಾಸವನ್ನು ತೆಗೆದುಕೊಂಡು ಅನಂತರ ಶ್ವಾಸವನ್ನು ಬಿಡಬೇಕು. 'ನನ್ನ ರೇತಸ್ಸಿಗೆ ಕಾರಣವಾದ ಇಂದ್ರಿಯದಿಂದ ನಿನಗೆ ಸಂತಾನಶಕ್ತಿಯನ್ನು ಕೊಡುತ್ತೇನೆ' ಎಂದು ಹೇಳಬೇಕು. ಆದರಿಂದ ಅವಳು ಗರ್ಭಿಣಿಯೇ ಆಗುತ್ತಾಳೆ.

**ಉಪನಿಷತ್—ಅಥ ಯಸ್ಯ ಜಾಯಾಯೈ ಜಾರಃ ಸ್ಯಾತ್ತಂ ಚೇದ್ ದ್ವಿಷ್ಯಾದ್ ಆಮಪಾತ್ರೇಽಗ್ನಿಮುಪಸಮಾಧಾಯ ಪ್ರತಿಲೋಮಂ ಶರಬರ್ಹಿಸ್ತೀರ್ತ್ವಾ ತಸ್ಮಿನ್ನೇತಾಃ ಶರಭೃಷ್ಟೀಃ ಪ್ರತಿಲೋಮಾಃ ಸರ್ಪಿಷಾಽಕ್ತಾ ಜುಹು-ಯಾತ್ । 'ಮಮ ಸಮಿದ್ಧೇಽಹೌಷೀಃ ಪ್ರಾಣಾಪಾನೌ ತ ಆದದೇಽಸಾ-ವಿ'ತಿ । 'ಮಮ ಸಮಿದ್ಧೇಽಹೌಷೀಃ ಪುತ್ರಪಶೂಂಸ್ತ ಆದದೇಽಸಾವಿ'ತಿ 'ಮಮ ಸಮಿದ್ಧೇಽಹೌಷೀಃ ಇಷ್ಟಾಸುಕೃತೇ ತ ಆದದೇಽಸಾವಿ'ತಿ । 'ಮಮ ಸಮಿದ್ಧೇಽಹೌಷೀಃ ಆಶಾ ಪರಾಕಾಶೌ ತ ಆದದೇಽಸಾವಿ'ತಿ । ಸ ವಾ ಏಷ ನಿರಿಂದ್ರಿಯೋ ವಿಸುಕೃತೋಽಸ್ಮಾಲ್ಲೋಕಾತ್ಪ್ರೈತಿ । ಯಮೇವಂ ವಿದ್ವಾನ್ ಬ್ರಾಹ್ಮಣಃ ಶಪತಿ । ತಸ್ಮಾದೇವಂವಿ-ಚ್ಛ್ರೋತ್ರಿಯಸ್ಯ ದಾರೇಣ ನೋಪಹಾಸಮಿಚ್ಛೇದುತ ಹ್ಯೇವಂವಿತ್ ಪರೋ ಭವತಿ ।**

ತನ್ನ ಪತ್ನಿಗೆ ಜಾರನಿದ್ದು ಆ ಜಾರನನ್ನು ದ್ವೇಷಿಸುತ್ತಿದ್ದರೆ, ಹಸಿಮಡಿಕೆಯಲ್ಲಿ ಅಗ್ನಿಯನ್ನು ಸಂಗ್ರಹಿಸಿ, ಪಶ್ಚಿಮಕ್ಕೆ ಅಥವಾ ದಕ್ಷಿಣಕ್ಕೆ ತುದಿಯು ಬರುವಂತೆ ದರ್ಭೆಯನ್ನು ಹರಡಿ ಆ ಅಗ್ನಿಯಲ್ಲಿ, ಆಜ್ಯದಲ್ಲಿ ಅದ್ದಿದ ದರ್ಭೆಗಳನ್ನು ಹೋಮಮಾಡಬೇಕು. ಆಗ ಜಾರನ ನಾಮರೂಪಾದಿಗಳನ್ನು ಹೇಳಿ 'ನೀನು ನನ್ನ ಜ್ವಲಿಸುವ ಭಾರ್ಯಾಗ್ನಿಯಲ್ಲಿ ವೀರ್ಯವನ್ನು ಹೋಮಿಸಿರುವಿ. ಅಂತಹ ನಿನ್ನ ಪ್ರಾಣಾಪಾನಗಳನ್ನು

ನಾನು ತೆಗೆದುಕೊಳ್ಳುತ್ತೇನೆ. ನಿನ್ನ ಪಶು ಪುತ್ರರನ್ನು ತೆಗೆದುಕೊಳ್ಳುತ್ತೇನೆ. ನಿನ್ನ ಯಾಗ ಮತ್ತು ತದಿತರ ಪುಣ್ಯಗಳನ್ನು ತೆಗೆದುಕೊಳ್ಳುತ್ತೇನೆ. ನಿನ್ನ ಅಭಿಲಾಷೆ ಮತ್ತು ಉತ್ತಮ ತೇಜಸ್ಸನ್ನು ತೆಗೆದುಕೊಳ್ಳುತ್ತೇನೆ' ಎನ್ನಬೇಕು. ಆದರಿಂದ ಆ ಜಾರನು ಅಜಿತೇಂದ್ರಿಯನಾಗಿ ಪುಣ್ಯವನ್ನು ಕಳೆದುಕೊಂಡು ಮರಣ ಹೊಂದುತ್ತಾನೆ. ಈ ಅಭಿಚಾರ ಹೋಮಕ್ರಮವನ್ನು ತಿಳಿದ ಬ್ರಾಹ್ಮಣನು ಯಾರನ್ನು ಶಪಿಸುತ್ತಾನೆಯೋ ಅವನೂ ಕೂಡ ಅಜಿತೇಂದ್ರಿಯನೂ ಪುಣ್ಯಹೀನನೂ ಆಗಿ ಮರಣ ಹೊಂದುತ್ತಾನೆ. ಆದ್ದರಿಂದ ಪರಸ್ತ್ರೀಸಂಗದ ದೋಷವನ್ನು ತಿಳಿದವನು ಶ್ರೋತ್ರಿಯನ ಪತ್ನಿಯ ಸಂಸರ್ಗವನ್ನು ಸರ್ವಥಾ ಮಾಡಬಾರದು, ಬಯಸಲೂಕೂಡದು. ಪತಿಯು ಅಭಿಚಾರವನ್ನು ತಿಳಿದ ಶ್ರೋತ್ರಿಯನಾಗಿದ್ದರೆ ಅವನು ಇವನಿಗೆ ಮಾರಕನಾಗುತ್ತಾನೆ.

**ಉಪನಿಷತ್—ಅಥ ಯಸ್ಯ ಜಾಯಾಂ ಆರ್ತವಂ ವಿಂದೇತ್ ತ್ರ್ಯಹಂ ಕಂಸೇ ನ ಪಿಬೇತ್ । ಅಹತವಾಸಾಃ । ನೈನಾಂ ವೃಷಲೋ ನ ವೃಷಲ್ಯುಪ-ಹನ್ಯಾತ್ । ತ್ರಿರಾತ್ರಾಂತ ಆಪ್ಲುತ್ಯ ವ್ರೀಹೀನವಘಾತಯೇತ್ ।**

ಭಾರ್ಯೆಯು ರಜಸ್ವಲೆಯಾದರೆ ಅವಳು ಮೂರು ದಿವಸ ಕಂಚಿನ ಪಾತ್ರೆಯಲ್ಲಿ ಊಟಮಾಡಬಾರದು. ಬಟ್ಟೆಯನ್ನು ಒಗೆದುಕೊಳ್ಳಬಾರದು. ಶೂದ್ರನಾಗಲೀ, ಶೂದ್ರಸ್ತ್ರೀಯಾಗಲೀ ಅವಳನ್ನು ಮುಟ್ಟಬಾರದು. ಮೂರು ರಾತ್ರಿ ಕಳೆದ ಮೇಲೆ ಸ್ನಾನಮಾಡಿಸಿ ಅವಳಿಂದ ಭತ್ತವನ್ನು ಕುಟ್ಟಿಸಬೇಕು.

**ಅಭೀಷ್ಟ ಪುತ್ರಪ್ರಾಪ್ತಿಗೆ ಉಪಾಯಗಳು :**

**ಉಪನಿಷತ್—ಸ ಯ ಇಚ್ಛೇತ್ ಪುತ್ರೋ ಮೇ ಶುಕ್ಲೋ ಗೌರೋ ಜಾಯೇತ ವೇದಮನುಬ್ರುವೀತ ಸರ್ವಮಾಯುರಿಯಾದಿತಿ ಕ್ಷೀರೌದನಂ ಪಾಚ-ಯಿತ್ವಾ ಸರ್ಪಿಷ್ಮಂತಮಶ್ನೀಯಾತಾಂ । ಈಶ್ವರೌ ಜನಯಿತವೈ ।**

ನನಗೆ ಶುದ್ಧನಾದ ಬೆಳ್ಳಗಿನ ಪುತ್ರನು ಜನಿಸಲಿ. ಅವನು ಒಂದು ವೇದವನ್ನು ಅಧ್ಯಯನ ಮಾಡಲಿ. ಪೂರ್ಣವಾದ ಆಯುಸ್ಸನ್ನು ಹೊಂದಲಿ ಎಂದು ಯಾರು ಇಚ್ಛಿಸುತ್ತಾನೆಯೋ ಅವನು ಕ್ಷೀರಾನ್ನವನ್ನು ಬೇಯಿಸಿ ಹೋಮಮಾಡಬೇಕು. ತುಪ್ಪದಿಂದ ಕೂಡಿದ ಆ ಹೋಮ ಶೇಷವನ್ನು ದಂಪತಿಗಳು ಭೋಜನ ಮಾಡಬೇಕು. ಆಗ ಅವರು ಅಂತಹ ಪುತ್ರನನ್ನು ಪಡೆಯಲು ಸಮರ್ಥರೇ ಆಗುತ್ತಾರೆ.

**ಉಪನಿಷತ್—ಅಥ ಯ ಇಚ್ಛೇತ್ ಪುತ್ರೋ ಮೇ ಕಪಿಲಃ ಪಿಂಗಲೋ**

**ಜಾಯೇತ ದ್ವೌ ವೇದಾವನುಬ್ರುವೀತ ಸರ್ವಮಾಯುರಿಯಾದಿತಿ ದಧ್ಯೋದನಂ ಪಾಚಯಿತ್ವಾ ಸರ್ಪಿಷ್ಮಂತಮಶ್ನೀಯಾತಾಂ । ಈಶ್ವರೌ ಜನಯಿತವೈ ।**

ತನಗೆ ಕಂದುಗಣ್ಣಿನ ಕೆಂಪುಬಣ್ಣದ ಪುತ್ರನು ಜನಿಸಲಿ. ಅವನು ಎರಡು ವೇದಗಳನ್ನು ಅಧ್ಯಯನ ಮಾಡಲಿ. ಪೂರ್ಣವಾದ ಆಯುಸ್ಸನ್ನು ಪಡೆಯಲಿ ಎಂದು ಯಾರು ಇಚ್ಛಿಸುತ್ತಾನೆಯೋ ಅವನು ಮೊಸರನ್ನವನ್ನು ಬೇಯಿಸಿ ಹೋಮ ಮಾಡಬೇಕು. ಹೋಮಶೇಷವನ್ನು ಆಜ್ಯಮಿಶ್ರಿತವಾಗಿ ದಂಪತಿಗಳು ಭೋಜನ ಮಾಡಬೇಕು. ಅವರು ಅಂತಹ ಪುತ್ರನನ್ನು ಪಡೆಯಲು ಸಮರ್ಥರೇ ಆಗುತ್ತಾರೆ.

**ಉಪನಿಷತ್—ಅಥ ಯ ಇಚ್ಛೇತ್ ಪುತ್ರೋ ಮೇ ಶ್ಯಾಮೋ ಲೋಹಿತಾಕ್ಷೋ ಜಾಯೇತ ತ್ರೀನ್ ವೇದಾನನುಬ್ರುವೀತ ಸರ್ವಮಾಯುರಿಯಾದಿತಿ ಉದೌದನಂ ಪಾಚಯಿತ್ವಾ ಸರ್ಪಿಷ್ಮಂತಮಶ್ನೀಯಾತಾಂ । ಈಶ್ವರೌ ಜನಯಿತವೈ ।**

ತನಗೆ ಕೆಂಪು ಕಣ್ಣುಳ್ಳ ಶ್ಯಾಮವರ್ಣದ ಪುತ್ರನು ಜನಿಸಲಿ. ಮೂರು ವೇದಗಳನ್ನು ಅಧ್ಯಯನ ಮಾಡಲಿ. ಪೂರ್ಣಾಯುಷ್ಯ ಹೊಂದಲಿ ಎಂದು ಯಾರು ಇಚ್ಛಿಸುತ್ತಾನೆಯೋ ಅವನು ಕೇವಲ ನೀರಿನಲ್ಲಿ ಅನ್ನವನ್ನು ಬೇಯಿಸಿ ಹೋಮಮಾಡಬೇಕು. ಹೋಮಶೇಷವನ್ನು ತುಪ್ಪದೊಂದಿಗೆ ಭೋಜನ ಮಾಡಬೇಕು. ಆಗ ಆ ದಂಪತಿಗಳು ಅಂತಹ ಪುತ್ರನನ್ನು ಪಡೆಯಲು ಸಮರ್ಥರೆ ಆಗುತ್ತಾರೆ.

**ಉಪನಿಷತ್—ಅಥ ಯ ಇಚ್ಛೇದ್ ದುಹಿತಾ ಮೇ ಪಂಡಿತಾ ಜಾಯೇತ ಸರ್ವಮಾಯುರಿಯಾದಿತಿ ತಿಲೌದನಂ ಪಾಚಯಿತ್ವಾ ಸರ್ಪಿಷ್ಮಂತಮಶ್ನೀಯಾತಾಂ । ಈಶ್ವರೌ ಜನಯಿತವೈ ॥**

ತನಗೆ ಪಂಡಿತಳಾದ ಮಗಳು ಜನಿಸಬೇಕು, ಅವಳು ಪೂರ್ಣಾಯುಸ್ಸನ್ನು ಹೊಂದಬೇಕು ಎಂದು ಯಾರು ಇಚ್ಛಿಸುತ್ತಾನೆಯೋ ಅವನು ಎಳ್ಳನ್ನವನ್ನು ಬೇಯಿಸಿ ಹೋಮ ಮಾಡಬೇಕು. ಹೋಮಶೇಷವನ್ನು ತುಪ್ಪದೊಂದಿಗೆ ಉಣಬೇಕು. ಆಗ ದಂಪತಿಗಳು ಅಂಥ ಮಗಳನ್ನು ಪಡೆಯಲು ಸಮರ್ಥರೇ ಆಗುತ್ತಾರೆ.

**ಉಪನಿಷತ್—ಅಥ ಯ ಇಚ್ಛೇತ್ ಪುತ್ರೋ ಮೇ ಪಂಡಿತೋ ವಿಜಿಗೀಥಃ ಸಮಿತಿಂಗಮಃ ಶುಶ್ರೂಷಿತಾಂ ವಾಚಂ ಭಾಷಿತಾ ಜಾಯೇತ ಸರ್ವಾನ್ ವೇದಾನನುಬ್ರುವೀತ ಸರ್ವಮಾಯುರಿಯಾದಿತಿ ಮಾಂಸೌದನಂ ಪಾಚ-**

**ಯಿತ್ವಾ ಸರ್ಪಿಷ್ಮಂತಮಶ್ನೀಯಾತಾಂ । ಈಶ್ವರೌ ಜನಯಿತವೈ ।ಔಕ್ಷೇಣ ವಾಽಽರ್ಷಭೇಣ ವಾ ।**

ತನಗೆ ಪಂಡಿತನಾದ, ಜಯಶಾಲಿಯಾದ, ವಿದ್ವತ್ಸಭೆಗಳಲ್ಲಿ ಪ್ರವೇಶಿಸಿ ಶ್ರಾವ್ಯವಾದ ಮಾತನ್ನಾಡುವಂಥ ಪುತ್ರನು ಜನಿಸಲಿ, ಅವನು ಎಲ್ಲ ವೇದಗಳನ್ನು ಅಧ್ಯಯನ ಮಾಡಲಿ, ಪೂರ್ಣಾಯುಷ್ಯವನ್ನು ಹೊಂದಲಿ ಎಂದು ಯಾರು ಬಯಸುವನೋ ಅವನು ಹೋರಿ ಅಥವಾ ಎತ್ತಿನ ಮಾಂಸ ಮಿಶ್ರಿತ ಅನ್ನ ಬೇಯಿಸಿ ಹೋಮ ಮಾಡಬೇಕು. ಹೋಮಶೇಷವನ್ನು ತುಪ್ಪದೊಂದಿಗೆ ಉಣಬೇಕು. ಆಗ ಆ ದಂಪತಿಗಳು ಅಂಥ ಮಗನನ್ನು ಪಡೆಯಲು ಸಮರ್ಥರೇ ಆಗುತ್ತಾರೆ.

**ಸ್ತ್ರೀಸಂಗ ವಿಧಾನ :**

**ಉಪನಿಷತ್—ಅಥಾಭಿ ಪ್ರಾತರೇವ ಸ್ಥಾಲೀಪಾಕಾವೃತಾಜ್ಯಂ ಚೇಷ್ಟಿತ್ವಾ ಸ್ಥಾಲೀಪಾಕಸ್ಯೋಪಘಾತಂ ಜುಹೋತಿ- 'ಅಗ್ನಯೇ ಸ್ವಾಹಾ । ಅನುಮತಯೇ ಸ್ವಾಹಾ । ದೇವಾಯ ಸವಿತ್ರೇ ಸತ್ಯಪ್ರಸವಾಯ ಸ್ವಾಹೇ'ತಿ । ಹುತ್ವೋದ್ಧೃತ್ಯ ಪ್ರಾಶ್ನಾತಿ । ಪ್ರಾಶ್ಯೇತರಸ್ಯಾಃ ಪ್ರಯಚ್ಛತಿ । ಪ್ರಕ್ಷಾಲ್ಯ ಪಾಣೀ ಉದಪಾತ್ರಂ ಪೂರಯಿತ್ವಾ ತೇನೈನಾಂ ತ್ರಿರಭ್ಯುಕ್ಷತಿ- ಉತ್ತಿಷ್ಠಾತೋ ವಿಶ್ವಾವಸೋಽನ್ಯಾಮಿಚ್ಛ ಪ್ರಭವ್ಯಾಂ ಸಂ ಜಾಯಾಂ ಪತ್ಯಾ ಸಹೇತಿ ।**

ಪತ್ನಿಯು ಋತುಸ್ನಾನಮಾಡಿ ಬತ್ತ ಕುಟ್ಟಿದ ಮರುದಿನ ಪ್ರಾತಃಕಾಲದಲ್ಲಿಯೇ ಸ್ಥಾಲೀಪಾಕವನ್ನೂ, ಹೋಮಾಜ್ಯವನ್ನೂ ಸಿದ್ಧಪಡಿಸಿ ಆಜ್ಯಮಿಶ್ರಿತವಾದ ಸ್ಥಾಲೀ ಪಾಕದ ಭಾಗವನ್ನು ಹೋಮ ಮಾಡಬೇಕು.'ಅಗ್ನ್ಯಂತರ್ಗತ ವಿಷ್ಣುವಿನಲ್ಲಿ ಹೋಮ ಮಾಡುತ್ತೇನೆ, ಅನುಮತ್ಯಂತರ್ಗತ ವಿಷ್ಣುವಿನಲ್ಲಿ ಹೋಮ ಮಾಡುತ್ತೇನೆ, ಕ್ರೀಡಾದಿ ಗುಣವಿಶಿಷ್ಟನಾದ, ಜಗತ್ತನ್ನು ಸೃಷ್ಟಿಸುವ, ಸತ್ಪುತ್ರ ಸಂತಾನಕಾರಣನಾದ ವಿಷ್ಣುವಿಗೆ ಈ ಆಹುತಿಯನ್ನು ಹೋಮಮಾಡುತ್ತೇನೆ' ಎಂಬ ಮಂತ್ರಗಳಿಂದ ಹೋಮಮಾಡಿ, ಸ್ಥಾಲೀಪಾಕದಲ್ಲಿರುವ ಹೋಮಶೇಷವನ್ನು ಎತ್ತಿಕೊಂಡು ತಾನು ಭಕ್ಷಿಸಿ ಪತ್ನಿಗೂ ಕೊಡಬೇಕು. ಅನಂತರ ಕೈಗಳನ್ನು ತೊಳೆದು ಉದಕ ಪಾತ್ರೆಯನ್ನು ಪುಣ್ಯಾಹೋದಕ ದಿಂದ ತುಂಬಿ ಆ ನೀರಿನಿಂದ ಪತ್ನಿಗೆ ಮೂರು ಸಲ ಪ್ರೋಕ್ಷಣೆ ಮಾಡಬೇಕು. ಆಗ 'ವಿಶ್ವಾವಸು ಗಂಧರ್ವನೇ!ನನ್ನ ಪತ್ನಿಯಿಂದ ಎದ್ದೇಳು. ನೀನು ಇನ್ನೊಬ್ಬ ತರುಣಿಯನ್ನು ಇಚ್ಛಿಸು. ಈ ಪತ್ನಿಯನ್ನು ಪತಿಯಾದ ನನ್ನೊಡನೆ ಸೇರಿಸು' ಎಂದು ಹೇಳಬೇಕು.

**ಉಪನಿಷತ್—ಅಥೈನಾಮಭಿಪದ್ಯತೇ 'ಅಮೋಽಹಮಸ್ಮಿ । ಸಾ ತ್ವಂ । ಸಾ ತ್ವ**

**ಮಸಿ । ಅಮೋಽಹಂ । ಸಾಮಾಹಮಸ್ಮಿ । ಋಕ್ ತ್ವಂ । ದ್ಯೌರಹಂ । ಪೃಥಿವೀ ತ್ವಂ । ತಾವೇಹಿ ಸಂ ರಭಾವಹೈ । ಸಹ ರೇತೋ ದಧಾವಹೈ ಪುಂಸೇ ಪುತ್ರಾಯ ವಿತ್ತಯ' ಇತಿ ।**

ಹೀಗೆ ಪತ್ನಿಯ ಶರೀರದಲ್ಲಿದ್ದ ವಿಶ್ವಾವಸುಗಂಧರ್ವನನ್ನು ದೂರ ಮಾಡಿದ ಮೇಲೆ ಯಥೇಷ್ಟ ಕ್ಷೀರಾನ್ನಾದಿಗಳನ್ನು ಊಟ ಮಾಡಿದ ಪತ್ನಿಯನ್ನು ಸಮೀಪಿಸಿ ಹೀಗೆ ಹೇಳಬೇಕು– ನನ್ನಲ್ಲಿರುವ ಹರಿವಾಯುಗಳು ದೋಷಲೇಶರಹಿತರಾದುದರಿಂದ 'ಅಮ' ಎಂದೂ ನಿನ್ನಲ್ಲಿರುವ ಲಕ್ಷ್ಮೀ ಭಾರತಿಯರು ಶ್ರೇಷ್ಠರಾದ ಪ್ರಯುಕ್ತ 'ಸಾ' ಎಂದೂ ಕರೆಯಲ್ಪಡುತ್ತಾರೆ. ನಾವಿಬ್ಬರೂ ಸೇರಿದರೆ 'ಸಾಮ' ಎನಿಸುವೆವು. ನನ್ನಲ್ಲಿರುವ ಹರಿವಾಯುಗಳಿಗೆ, ಸಾಮವೇದ ಪ್ರತಿಪಾದ್ಯರಾದುದರಿಂದ ಸಾಮ ಎಂದು ಹೆಸರು. ನಿನ್ನಲ್ಲಿರುವ ಲಕ್ಷ್ಮಿ ಭಾರತಿಯರು ಋಗ್ವೇದಕ್ಕೆ ಅಭಿಮಾನಿನಿಯಾದು ದರಿಂದ ಅವರಿಗೆ ಋಕ್ ಎಂದು ಹೆಸರು. ನಾವು ಇಬ್ಬರೂ ಸೇರಿ ಋಕ್‌ಸಾಮ ಎನಿಸುವೆವು. ನನ್ನಲ್ಲಿರುವ ಹರಿವಾಯುಗಳಿಗೆ, ಪ್ರಕಾಶರೂಪರಾದುದರಿಂದ ದ್ಯು ಎಂದು ಹೆಸರು. ನಿನ್ನಲ್ಲಿರುವ ಲಕ್ಷ್ಮಿ ಭಾರತಿಯರಿಗೆ ಪ್ರಸಿದ್ಧರಾದುದರಿಂದ ಪೃಥಿವೀ ಎಂದು ಹೆಸರು. ಇಬ್ಬರೂ ಸೇರಿ ದ್ಯಾವಾಪೃಥಿವೀ ಎನಿಸುವೆವು. ಹತ್ತಿರ ಬಾ. ಭಾರತೀ ಮುಖ್ಯಪ್ರಾಣರ, ಲಕ್ಷ್ಮೀನಾರಾಯಣರ ಸನ್ನಿಧಾನವಿರುವ ನಾವಿಬ್ಬರೂ ಪುತ್ ಎಂಬ ನರಕದಿಂದ ರಕ್ಷಿಸುವ ಜ್ಞಾನಿಯಾದ ಪುತ್ರನನ್ನು ಪಡೆಯಲು ಸಂಸರ್ಗ ಮಾಡೋಣ. ಶುಕ್ಲ ಶೋಣಿತಗಳನ್ನು ಒಂದುಗೂಡಿಸೋಣ.

**ಉಪನಿಷತ್—ಅಥಾಸ್ಯಾ ಊರೂ ವಿಹಾಪಯತಿ 'ವಿಜಿಹೀಥಾಂ ದ್ಯಾವಾ-ಪೃಥಿವೀ' ಇತಿ । ತಸ್ಯಾಮರ್ಥಂ ನಿಷ್ಠಾಯ ಮುಖೇನ ಮುಖಂ ಸಂಧಾಯ ತ್ರಿರೇನಾಮನುಲೋಮಾಮನುಮಾರ್ಷ್ಟಿ–**

**ವಿಷ್ಣುರ್ಯೋನಿಂ ಕಲ್ಪಯತು ತ್ವಷ್ಟಾ ರೂಪಾಣಿ ಪಿಂಶತು ।**
**ಆಸಿಂಚತು ಪ್ರಜಾಪತಿರ್ಧಾತಾ ಗರ್ಭಂ ದಧಾತು ತೇ ।**
**ಗರ್ಭಂ ಧೇಹಿ ಸಿನೀವಾಲಿ ಗರ್ಭಂ ಧೇಹಿ ಪೃಥುಷ್ಟುಕೇ ।**
**ಗರ್ಭಂ ತೇ ಅಶ್ವಿನೌ ದೇವಾವಾಧತ್ತಾಂ ಪುಷ್ಕರಸ್ರಜೌ ।**

ಅನಂತರ ದ್ಯಾವಾಪೃಥಿವಿಗಳು ಬಿಡಿಸಿಕೊಳ್ಳಲಿ ಎಂದು ಅವಳೊಂದಿಗೆ ಕೂಡಬೇಕು. ಮುಖಕ್ಕೆ ಮುಖವನ್ನು ಜೋಡಿಸಿ ಮೂರುಸಲ ತಲೆಯಿಂದ ಕಾಲಿನವರೆಗೆ ನೇವರಿಸಬೇಕು. ಆಗ 'ವಿಷ್ಣುನಾಮಕನಾದ ವಾಸುದೇವನು ನಿನ್ನ ಯೋನಿಯನ್ನು ಶುದ್ಧಮಾಡಲಿ, ತ್ವಷ್ಟನಾಮಕನಾದ ಸಂಕರ್ಷಣನು ಗರ್ಭಸ್ಥ ಶಿಶು ವಿನ ಅಂಗಗಳನ್ನು ನಿರ್ಮಿಸಲಿ. ಪ್ರಜಾಪತಿನಾಮಕನಾದ ಪ್ರದ್ಯುಮ್ನನು ಪುತ್ರ

ಪ್ರಸವ ಮಾಡಿಸಲಿ. ಧಾತೃನಾಮಕನಾದ ಅನಿರುದ್ಧನು ನೀನು ಗರ್ಭಧರಿಸುವಂತೆ ಮಾಡಲಿ. ಚತುರ್ದಶೀಯುಕ್ತ ಅಮಾವಾಸ್ಯೆಯ ದೇವತೆಯಾದ ಸಿನೀವಾಲಿಯಲ್ಲಿ ಇರುವ ಹರಿಯೇ! ಗರ್ಭವನ್ನುಂಟುಮಾಡು. ಪೃಥುಷ್ಟುಕಾ ನಾಮಕಳಾದ ಸರಸ್ವತಿ ಯಲ್ಲಿರುವ ಹರಿಯೇ! ಗರ್ಭವನ್ನುಂಟುಮಾಡು. ಪದ್ಮಮಾಲೆ ಧರಿಸಿರುವ ರಾಮ ಕೃಷ್ಣರು ನಿನಗೆ ಗರ್ಭವನ್ನುಂಟುಮಾಡಲಿ' ಎಂದು ಹೇಳಬೇಕು.

**ಉಪನಿಷತ್—ಹಿರಣ್ಮಯೀ ಅರಣೀ ಯಾಭ್ಯಾಂ ನಿರ್ಮಂಥತಾಮಶ್ವಿನೌ ।**
**ತಂ ತೇ ಗರ್ಭಂ ಹವಾಮಹೇ ದಶಮೇ ಮಾಸಿ ಸೂತಯೇ ।**
**ಯಥಾಗ್ನಿಗರ್ಭಾ ಪೃಥಿವೀ ಯಥಾ ದ್ಯೌರಿಂದ್ರೇಣ ಗರ್ಭಿಣೀ ।**
**ವಾಯುರ್ದಿಶಾಂ ಯಥಾ ಗರ್ಭ ಏವಂ ಗರ್ಭಂ ದಧಾಮಿ ತೇಽಸಾವಿತಿ।**

ನಾವಿಬ್ಬರೂ ಹಿರಣ್ಮಯವಾದ ಅರಣಿಗಳು. ಅರಣಿಗಳಾದ ನಮ್ಮಿಂದ ರಾಮ ಕೃಷ್ಣರು ಮಥನ ಮಾಡುತ್ತಾರೆ. ಈ ಮಥನದಿಂದಾಗುವ ಗರ್ಭವನ್ನು ಇನ್ನು ಹತ್ತನೆಯ ತಿಂಗಳಿನಲ್ಲಿ ಪ್ರಸವಿಸಲು ನಾವು ನಿನ್ನಲ್ಲಿ ಇಡುತ್ತೇವೆ. ಪೃಥಿವಿಯು ಅಗ್ನಿ ಯನ್ನು ಗರ್ಭದಲ್ಲಿ ಹೊಂದಿರುವಂತೆ, ದ್ಯುಲೋಕವು ಇಂದ್ರನನ್ನು ಗರ್ಭದಲ್ಲಿ ಹೊಂದಿರುವಂತೆ, ದಿಕ್ಕುಗಳು ವಾಯುವನ್ನು ಗರ್ಭದಲ್ಲಿ ಹೊಂದಿರುವಂತೆ ನೀನು ಈ ಗರ್ಭವನ್ನು ಹೊಂದು, ಅದನ್ನು ನಿನ್ನಲ್ಲಿ ಇಡುತ್ತೇನೆ.

**ಪುತ್ರೋತ್ಪತ್ತಿ-ಜಾತಕರ್ಮ :**

**ಉಪನಿಷತ್—ಸೋಷ್ಯಂತೀಮದ್ಭಿರಭ್ಯುಕ್ಷತಿ–**
**ಯಥಾ ವಾಯುಃ ಪುಷ್ಕರಿಣೀಂ ಸಮಿಂಜಯತಿ ಸರ್ವತಃ ।**
**ಏವಾ ತೇ ಗರ್ಭ ಏಜತು ಸಹಾವೈತು ಜರಾಯುಣಾ ।**
**ಇಂದ್ರಸ್ಯಾಯಂ ವ್ರಜಃ ಕೃತಃ ಸಾರ್ಗಲಃ ಸಪರಿಶ್ರಯಃ ।**
**ತಮಿಂದ್ರ ನಿರ್ಜಹಿ ಗರ್ಭೇಣ ಸಾವರಾಂ ಸಹೇತಿ ।**

ಪ್ರಸವಕಾಲ ಸಮೀಪಿಸಿದಾಗ ಪತ್ನಿಯನ್ನು ನೀರಿನಿಂದ ಪ್ರೋಕ್ಷಿಸಬೇಕು. ಆಗ 'ವಾಯು ಸರೋವರನ್ನು ಎಲ್ಲಾ ಕಡೆಗಳಲ್ಲಿಯೂ ಹೇಗೆ ಅಲುಗಾಡಿಸುತ್ತದೆಯೋ ಹಾಗೆ ನಿನ್ನ ಗರ್ಭವು ಪ್ರಸವ ವಾಯುವಿನಿಂದ ಚಲಿಸಲಿ. ಅನಂತರ ಜರಾಯು ಸಹಿತವಾಗಿ ಕೆಳಗೆ ಬೀಳಲಿ. ಇಂದ್ರನಾಮಕ ಪರಮಾತ್ಮನು ಈ ಗರ್ಭವನ್ನು ವಾಯು ವಿನ ಮತ್ತು ಜರಾಯುವಿನ ಆವರಣಗಳಿಂದ ರಕ್ಷಿಸುತ್ತ ಅದರಲ್ಲಿದ್ದಾನೆ. ಇಂದ್ರ ನಾಮಕ ಪರಮಾತ್ಮನೆ!ನೀನು ಆವರಣ ಸಹಿತವಾಗಿ ಗರ್ಭವನ್ನು ಹೊರಗೆ ಕಳುಹಿಸು. ಆ ಗರ್ಭದ ಜೊತೆಯಲ್ಲಿ ರಕ್ಷಕನಾದ ನೀನೂ ಹೊರಗೆ ಬಾ' ಎಂದು ಹೇಳಬೇಕು.

**ಉಪನಿಷತ್**—ಜಾತೇಽಗ್ನಿಮುಪಸಮಾಧಾಯಾಂಕ ಆಧಾಯ ಕಂಸೇ ಪೃಷ-
ದಾಜ್ಯಂ ಸಂನೀಯ ಪೃಷದಾಜ್ಯಸ್ಯೋಪಘಾತಂ ಜುಹೋತಿ–
ಅಸ್ಮಿನ್ ಸಹಸ್ರಂ ಪುಷ್ಯಾಸಮೇಧಮಾನಃ ಸ್ವೇ ಗೃಹೇ ।
ಅಸ್ಯೋಪಸದ್ಯಾಂ ಮಾಚ್ಛೈತ್ಸೀಃ ಪ್ರಜಯಾ ಚ ಪಶುಭಿಶ್ಚ ಸ್ವಾಹಾ।
ಮಯಿ ಪ್ರಾಣಾನ್ ತ್ವಯಿ ಮನಸಾ ಜುಹೋಮಿ ಸ್ವಾಹಾ ।
ಯತ್ ಕರ್ಮಣಾಽತ್ಯರೀರಿಚಂ
ಯದ್ ವಾ ನ್ಯೂನಮಿಹಾಕರಮ್ ।
ಅಗ್ನಿಷ್ಟತ್ ಸ್ವಿಷ್ಟಕೃದ್ ವಿದ್ವಾನ್
ಸರ್ವಂ ಸ್ವಿಷ್ಟಂ ಸುಹುತಂ ಕರೋತು ನಃ ಸ್ವಾಹೇತಿ ।

ಪ್ರಸವವಾದ ಮೇಲೆ ತೊಡೆಯ ಮೇಲೆ ಮಗುವನ್ನು ಇಟ್ಟುಕೊಂಡು ಅಗ್ನಿಯನ್ನು ಸಿದ್ಧಪಡಿಸಿ ಕಂಚಿನ ಪಾತ್ರೆಯಲ್ಲಿ ಸಂಸ್ಕೃತವಾದ ತುಪ್ಪವನ್ನು ಸಿದ್ಧಪಡಿಸಿ ಆ ತುಪ್ಪದ ಒಂದು ಭಾಗವನ್ನು ಹೋಮ ಮಾಡಬೇಕು. ಆಗ ಹೀಗೆ ಹೇಳಬೇಕು– ಅಗ್ನ್ಯಂತರ್ಗತನಾದ ಹರಿಯೇ, ಈ ನನ್ನ ಮನೆಯಲ್ಲಿ ನಾನು ಚೆನ್ನಾಗಿ ಅಭಿವೃದ್ಧಿಯನ್ನು ಹೊಂದುವಂತಾಗಲಿ. ಈ ನನ್ನ ಮಗನಿಗೆ ಸಂತತಿಯನ್ನೂ ಪ್ರಜಾ ಪಶು ಸಂಪತ್ತನ್ನೂ ವಿಚ್ಛೇದಗೊಳಿಸಬೇಡ. ನನ್ನ ಇಂದ್ರಿಯಗಳನ್ನೂ ಮತ್ತು ಮನಸ್ಸನ್ನೂ ನಿನ್ನಲ್ಲಿ ಸ್ಥಿರಗೊಳಿಸುತ್ತೇನೆ. ನಾನು ಈ ಕರ್ಮದಲ್ಲಿ ಮಾಡಿರಬಹುದಾದ ನ್ಯೂನಾಧಿಕ್ಯಗಳನ್ನು, ಎಲ್ಲವನ್ನೂ ತಿಳಿದವನಾದ, ಸ್ವಿಷ್ಟಕೃತ್‌ನಾಮಕ ಅಗ್ನ್ಯಂತರ್ಗತನಾದ ನೀನು ಸರಿಪಡಿಸಿ ಹೋಮವನ್ನು ಪ್ರಶಸ್ತಗೊಳಿಸು.

**ಗುಪ್ತನಾಮಕರಣ–ಸ್ತನ್ಯಪ್ರಾಶನ :**

**ಉಪನಿಷತ್**—ಅಥಾಸ್ಯ ದಕ್ಷಿಣಂ ಕರ್ಣಮಭಿನಿಧಾಯ ವಾಗ್ ವಾಗಿತಿ ತ್ರಿಃ ।
ಅಥ ದಧಿ ಮಧು ಘೃತಂ ಸಂನೀಯಾನಂತರಿತೇನ ಜಾತರೂಪೇಣ ಪ್ರಾಶ-
ಯತಿ 'ಭೂಸ್ತೇ ದಧಾಮಿ । ಭುವಸ್ತೇ ದಧಾಮಿ । ಸ್ವಸ್ತೇ ದಧಾಮಿ ।
ಭೂರ್ಭುವಃ ಸ್ವಃ ಸರ್ವಂ ತ್ವಯಿ ದಧಾಮೀ'ತಿ।ಅಥಾಸ್ಯ ನಾಮ ಕರೋತಿ
ವೇದೋಽಸೀತಿ । ತದಸ್ಯ ತದ್ಗುಹ್ಯಮೇವ ನಾಮ ಭವತಿ ।

ಅನಂತರ ಮಗುವಿನ ಬಲಗಿವಿಯನ್ನು ತನಗೆ ಅಭಿಮುಖವಾಗಿ ಇಟ್ಟು ಮೂರು ವೇದಗಳನ್ನು ಕಲಿತು ವಿದ್ವಾಂಸನಾಗು ಎಂಬ ಅಭಿಪ್ರಾಯದಿಂದ ವಾಕ್ ವಾಕ್ ವಾಕ್ ಎಂದು ಮೂರು ಬಾರಿ ಜಪಿಸಬೇಕು. ಅನಂತರ ಮೊಸರು, ಜೇನು ಮತ್ತು ತುಪ್ಪಗಳನ್ನು ಕಲಸಿ ವಸ್ತ್ರಾದಿಗಳಿಂದ ಆಚ್ಛಾದಿಸದಿದ್ದ ಸುವರ್ಣದಿಂದ 'ಭೂನಾಮಕ ಪರಮಾತ್ಮನೆ! ನಿನ್ನಲ್ಲಿ ಇವನ ರಕ್ಷಣಾಭಾರವಿಡುತ್ತೇನೆ, ಭುವರ್ನಾಮಕನೆ! ನಿನ್ನಲ್ಲಿ

ಇವನ ರಕ್ಷಣಾಭಾರವಿಡುತ್ತೇನೆ. ಸುವರ್ನಾಮಕನೆ! ನಿನ್ನಲ್ಲಿ ಇವನ ರಕ್ಷಣಾಭಾರ ವಿಡುತ್ತೇನೆ, ಭೂರ್ಭುವಃ ಸ್ವರ್ನಾಮಕನೆ! ನಿನ್ನಲ್ಲಿ ಇವನ ರಕ್ಷಣಾಭಾರವಿಡುತ್ತೇನೆ ಎಂದು ನಾಲ್ಕು ಬಾರಿ ನೆಕ್ಕಿಸಬೇಕು. ಬಳಿಕ ಮಗುವಿಗೆ ವೇದ ಎಂದು ನಾಮಕರಣ ಮಾಡಬೇಕು. ಈ ನಾಮವು ಮಗುವಿಗೆ ಗುಪ್ತವಾದ ನಾಮವೇ ಆಗಿರುತ್ತದೆ. ವ್ಯವಹಾರಕ್ಕಲ್ಲ. ಜಾತಾಶೌಚ ಕಳೆದ ಬಳಿಕ, ವ್ಯವಹಾರಕ್ಕೆಂದು ಬೇರೆಯೇ ಹೆಸರನ್ನಿಡಬೇಕು.

**ಉಪನಿಷತ್—ಅಥೈನಂ ಮಾತ್ರೇ ಪ್ರದಾಯ ಸ್ತನಂ ಪ್ರಯಚ್ಛತಿ-**

**ಯಸ್ತೇ ಸ್ತನಃ ಶಶಯೋ ಯೋ ಮಯೋಭೂಃ**

**ಯೋ ರತ್ನಧಾ ವಸುವಿದ್ ಯಃ ಸುದತ್ರಃ ।**

**ಯೇನ ವಿಶ್ವಾ ಪುಷ್ಯಸಿ ವಾರ್ಯಾಣಿ**

**ಸರಸ್ವತಿ ತಮಿಹ ಧಾತವೇಽಕರಿತಿ ।**

ನಾಮಕರಣವಾದ ಮೇಲೆ ಮಗುವನ್ನು ತಾಯಿಗೆ ಕೊಟ್ಟು ಸ್ತನ್ಯಪ್ರಾಶನ ಮಾಡಿಸಬೇಕು. ಆಗ ಹೀಗೆ ಹೇಳಬೇಕು- 'ಸರಸ್ವತಿ ನಿನ್ನ ಸ್ತನವು ಸುಖಪೂರ್ಣ ವಾದುದು, ಸರ್ವೋತ್ತಮವಾದುದು, ಪೂರ್ಣವಾದುದು, ರತ್ನದ ಆಭರಣವನ್ನು ಧರಿಸಿಕೊಂಡಿರುವಂತಹುದು, ಆಭರಣ ಸಂಪತ್ತನ್ನು ಹೊಂದಿರುವಂತಹುದು, ಮಕ್ಕ ಳಾದ ನಮ್ಮನ್ನು ಚೆನ್ನಾಗಿ ಶಕ್ತಿ ನೀಡಿ ರಕ್ಷಿಸುವಂತಹುದು. ದೇವ ಮನುಷ್ಯಾದಿ ಗಳೆಲ್ಲರನ್ನೂ ಪೋಷಿಸುವ ಆ ನಿನ್ನ ಸ್ತನವನ್ನು ಈ ಶಿಶುವಿಗೆ ಕುಡಿಯುವುದಕ್ಕಾಗಿ ತಾಯಿಯ ಸ್ತನದಲ್ಲಿ ಇಟ್ಟಿರುವಿ'.

**ಉಪನಿಷತ್—ಅಥಾಸ್ಯ ಮಾತರಮಭಿಮಂತ್ರಯತೇ-**

**ಇಲಾಽಸಿ ಮೈತ್ರಾವರುಣಿ ವೀರೇ ವೀರಮಜೀಜನತ್**

**ಸಾ ತ್ವಂ ವೀರವತೀ ಭವ ಯಾಽಸ್ಮಾನ್ ವೀರವತೋಽಕರದಿತಿ ।**

ಸ್ತನ್ಯಪಾನ ಮಾಡಿಸಿದ ಮೇಲೆ ಪತ್ನಿಯನ್ನು ಕುರಿತು ಹೇಳಬೇಕು- 'ನೀನು ಸ್ತುತ್ಯಳಾಗಿರುವಿ. ಮಿತ್ರಾವರುಣನಾಮಕ ಹರಿಯ ಸನ್ನಿಧಾನಪಾತ್ರಳಾಗಿರುವಿ. ಕುಮಾರನನ್ನು ಹೆತ್ತಿರುವಿ. ನನ್ನನ್ನು ಪುತ್ರವಂತನನ್ನಾಗಿ ಮಾಡಿದ ನೀನು ಸಹ ಪುತ್ರವತಿ ಎನಿಸು.

**ಉಪನಿಷತ್—ತಂ ವಾ ಏತಮಾಹುಃ-ಅತಿಪಿತಾ ಬತಾಭೂಃ। ಅತಿಪಿತಾಮಹೋ ಬತಾಭೂಃ।ಪರಮಾಂ ಬತ ಕಾಷ್ಠಾಂ ಪ್ರಾಪ ಶ್ರಿಯಾ ಯಶಸಾ ಬ್ರಹ್ಮ- ವರ್ಚಸೇನ ಯ ಏವಂವಿದೋ ಬ್ರಾಹ್ಮಣಸ್ಯ ಪುತ್ರೋ ಜಾಯತ ಇತಿ ।**

**ಇತಿ ಚತುರ್ಥಬ್ರಾಹ್ಮಣಮ್ ॥**

ಜ್ಞಾನಿಯಾದ ಬ್ರಾಹ್ಮಣನಿಗೆ ಜನಿಸಿದ ಶಿಶುವನ್ನು ಕುರಿತು ಬಂಧುಗಳು ಹೀಗೆ ಹೇಳುತ್ತಾರೆ– 'ಮಗು ನೀನು ಪಿತನನ್ನು ಮೀರಿಸಿರುವಿ. ಪಿತಾಮಹನನ್ನು ಮೀರಿಸಿರುವಿ. ಏಕೆಂದರೆ ನಿನ್ನಿಂದಾಗಿ ನಿನ್ನ ಈ ತಂದೆ ಸಂಪತ್ತು ಕೀರ್ತಿ ಬ್ರಹ್ಮ ವರ್ಚಸ್ಸುಗಳ ಪರಮಾವಧಿಯನ್ನು ಹೊಂದಿದ್ದಾನೆ.

ಇಲ್ಲಿಗೆ ಚತುರ್ಥ ಬ್ರಾಹ್ಮಣವು ಮುಗಿಯಿತು.

**ಋಷಿ ಪರಂಪರೆ :**

**ಉಪನಿಷತ್—ಅಥ ವಂಶಃ । ಪೌತಿಮಾಷೀಪುತ್ರಃ ಕಾತ್ಯಾಯನೀಪುತ್ರಾತ್ । ಕಾತ್ಯಾಯನೀಪುತ್ರೋ ಗೌತಮೀಪುತ್ರಾತ್ । ಗೌತಮೀಪುತ್ರೋ ಭಾರದ್ವಾಜೀಪುತ್ರಾತ್ । ಭಾರದ್ವಾಜೀಪುತ್ರಃ ಪಾರಾಶರೀಪುತ್ರಾತ್ । ಪಾರಾಶರೀಪುತ್ರ ಔಪಸ್ವಸ್ತಿ ಪುತ್ರಾತ್ । ಔಪಸ್ವಸ್ತಿಪುತ್ರಃ ಪಾರಾಶರೀ ಪುತ್ರಾತ್ । ಪಾರಾಶರೀಪುತ್ರಃ ಕಾತ್ಯಾಯನೀಪುತ್ರಾತ್ । ಕಾತ್ಯಾ-ಯನೀಪುತ್ರಃ ಕೌಶಿಕೀಪುತ್ರಾತ್ । ಕೌಶಿಕೀಪುತ್ರ ಆಲಂಬೀಪುತ್ರಾಚ್ಚ ವೈಯಾಘ್ರಪದೀಪುತ್ರಾಚ್ಚ । ವೈಯಾಘ್ರಪದೀಪುತ್ರಃ ಕಾಣ್ವೀ ಪುತ್ರಾಚ್ಚ ಕಾಪೀಪುತ್ರಾಚ್ಚ ।**

ಐದನೇ ಮತ್ತು ಆರನೆಯ ಅಧ್ಯಾಯಗಳಲ್ಲಿ ಹೇಳಲ್ಪಟ್ಟ ಉಪಾಸನೆಗಳಿಗೆ ಪ್ರವರ್ತಕರಾದ ಋಷಿಗಳ ಪರಂಪರೆ ಹೀಗಿದೆ– ಪೌತಿಮಾಷೀ ಪುತ್ರನು ಕಾತ್ಯಾಯನೀ ಪುತ್ರನಿಂದಲೂ, ಕಾತ್ಯಾಯನೀ ಪ್ರತ್ರನು ಗೌತಮೀ ಪುತ್ರನಿಂದಲೂ, ಗೌತಮೀ ಪುತ್ರನು ಭಾರದ್ವಾಜೀಪುತ್ರನಿಂದಲೂ, ಅವನು ಪಾರಾಶರೀ ಪುತ್ರನಿಂದಲೂ, ಅವನು ಔಪಸ್ವಸ್ತಿ ಪುತ್ರನಿಂದಲೂ, ಅವನು ಪಾರಾಶರೀ ಪುತ್ರನಿಂದಲೂ, ಅವನು ಕಾತ್ಯಾ ಯನೀ ಪುತ್ರನಿಂದಲೂ, ಅವನು ಕೌಶಿಕೀ ಪುತ್ರನಿಂದಲೂ, ಅವನು ಆಲಂಬೀ ಪುತ್ರ ಮತ್ತು ವೈಯಾಘ್ರಪದೀ ಪುತ್ರರಿಂದಲೂ, ವೈಯಾಘ್ರಪದೀ ಪುತ್ರನು ಕಾಣ್ವೀ ಪುತ್ರ ಮತ್ತು ಕಾಪೀ ಪುತ್ರರಿಂದಲೂ ಕಲಿತರು.

**ಉಪನಿಷತ್—ಕಾಪೀಪುತ್ರಃ ಅತ್ರೇಯೀಪುತ್ರಾತ್ । ಆತ್ರೇಯೀಪುತ್ರೋ ಗೌತಮೀಪುತ್ರಾತ್ । ಗೌತಮೀಪುತ್ರೋ ಭಾರದ್ವಾಜೀಪುತ್ರಾತ್ । ಭಾರದ್ವಾಜೀಪುತ್ರಃ ಪಾರಾಶರೀಪುತ್ರಾತ್ । ಪಾರಾಶರೀಪುತ್ರೋ ವಾತ್ಸೀಪುತ್ರಾತ್ । ವಾತ್ಸೀಪುತ್ರಃ ಪಾರಾಶರೀಪುತ್ರಾತ್ । ಪಾರಾ-ಶರೀಪುತ್ರೋ ವಾರ್ಕಾರುಣೀಪುತ್ರಾತ್ । ವಾರ್ಕಾರುಣೀಪುತ್ರಃ ಆರ್ತಭಾಗೀಪುತ್ರಾತ್ । ಆರ್ತಭಾಗೀಪುತ್ರಃ ಶೌಂಗೀಪುತ್ರಾತ್ । ಶೌಂಗೀಪುತ್ರಃ ಸಾಂಕೃತೀಪುತ್ರಾತ್ । ಸಾಂಕೃತೀಪುತ್ರಃ ಆಲಂಬಾಯನೀ ಪುತ್ರಾತ್ । ಆಲಂಬಾಯನೀಪುತ್ರ ಆಲಂಬೀಪುತ್ರಾತ್ । ಆಲಂಬೀ**

**ಪುತ್ರೋ ಜಾಯಂತೀಪುತ್ರಾತ್ । ಜಾಯಂತೀಪುತ್ರೋ ಮಾಂಡೂಕಾಯನೀಪುತ್ರಾತ್ । ಮಂಡೂಕಾಯನೀಪುತ್ರೋ ಮಾಂಡೂಕೀಪುತ್ರಾತ್ । ಮಾಂಡೂಕೀಪುತ್ರಃ ಶಾಂಡಿಲೀಪುತ್ರಾತ್ । ಶಾಂಡಿಲೀಪುತ್ರೋ ರಾಥೀತರೀಪುತ್ರಾತ್ । ರಾಥೀತರೀಪುತ್ರೋ ಭಾಲ್ಲಕೀಪುತ್ರಾತ್ । ಭಾಲ್ಲಕೀಪುತ್ರಃ ಕ್ರೌಂಚಿಕೀಪುತ್ರಾಭ್ಯಾಂ । ಕ್ರೌಂಚಿಕೀಪುತ್ರೌ ವೈದಭೃತೀಪುತ್ರಾತ್ । ವೈದಭೃತೀಪುತ್ರಃ ಕಾರ್ಶಿಕೇಯೀಪುತ್ರಾತ್ । ಕಾರ್ಶಿಕೇಯೀಪುತ್ರಃ ಪ್ರಾಚೀನಯೋಗೀಪುತ್ರಾತ್ । ಪ್ರಾಚೀನಯೋಗೀಪುತ್ರಃ ಸಾಂಜೀವೀಪುತ್ರಾತ್ । ಸಾಂಜೀವೀಪುತ್ರಃ ಪ್ರಾಶ್ನೀಪುತ್ರಾದಾಸುರೀವಾಸಿನಃ । ಪ್ರಾಶ್ನೀಪುತ್ರ ಆಸುರಾಯಣಾತ್। ಆಸುರಾಯಣ ಆಸುರೇಃ ।**

ಕಾಷೀ ಪುತ್ರನು ಆತ್ರೇಯೀ ಪುತ್ರನಿಂದಲೂ, ಆತ್ರೇಯೀ ಪುತ್ರನು ಗೌತಮೀ ಪುತ್ರನಿಂದಲೂ, ಗೌತಮೀ ಪುತ್ರನು ಭಾರದ್ವಾಜೀ ಪುತ್ರನಿಂದಲೂ, ಭಾರದ್ವಾಜೀ ಪುತ್ರನು ಪಾರಾಶರೀ ಪುತ್ರನಿಂದಲೂ, ಅವನು ವಾತ್ಸೀ ಪುತ್ರನಿಂದಲೂ, ಅವನು ಪಾರಾಶರೀ ಪುತ್ರನಿಂದಲೂ, ಅವನು ವಾರ್ಕಾರುಣೀ ಪುತ್ರನಿಂದಲೂ, ಅವನು ಆರ್ತಭಾಗೀ ಪುತ್ರನಿಂದಲೂ. ಅವನು ಶೌಂಗೀ ಪುತ್ರನಿಂದಲೂ, ಅವನು ಸಾಂಕೃತೀ ಪುತ್ರನಿಂದಲೂ, ಅವನು ಆಲಂಬಾಯನೀ ಪುತ್ರನಿಂದಲೂ, ಅವನು ಆಲಂಬೀ ಪುತ್ರನಿಂದಲೂ, ಅವನು ಜಾಯಂತೀ ಪುತ್ರನಿಂದಲೂ, ಅವನು ಮಾಂಡೂಕಾಯನೀ ಪುತ್ರನಿಂದಲೂ, ಅವನು ಮಾಂಡೂಕೀ ಪುತ್ರನಿಂದಲೂ, ಅವನು ಶಾಂಡಿಲೀ ಪುತ್ರನಿಂದಲೂ, ಅವನು ರಾಥೀತರೀ ಪುತ್ರನಿಂದಲೂ, ಅವನು ಭಾಲ್ಲಕೀ ಪುತ್ರನಿಂದಲೂ, ಅವನು ಕ್ರೌಂಚಿಕಿಯ ಇಬ್ಬರು ಪುತ್ರರಿಂದಲೂ,ಕ್ರೌಂಚಿಕೀ ಪುತ್ರರು ವೈದಭೃತೀ ಪುತ್ರನಿಂದಲೂ, ಅವನು ಕಾರ್ಶಿಕೇಯೀ ಪುತ್ರನಿಂದಲೂ, ಅವನು ಪ್ರಾಚೀನಯೋಗಿ ಪುತ್ರನಿಂದಲೂ, ಅವನು ಸಾಂಜೀವೀ ಪುತ್ರನಿಂದಲೂ, ಅವನು ಪ್ರಾಶ್ನೀ ಪುತ್ರನಿಂದಲೂ, ಅವನು ಆಸುರಾಯಣನಿಂದಲೂ, ಅವನು ಆಸುರಿಯಿಂದಲೂ ಕಲಿತರು.

**ಉಪನಿಷತ್—ಆಸುರಿಃ ಯಾಜ್ಞವಲ್ಕ್ಯಾದ್ ।ಯಾಜ್ಞವಲ್ಕ್ಯ ಉದ್ದಾಲಕಾತ್। ಉದ್ದಾಲಕೋಽರುಣಾತ್ । ಅರುಣ ಉಪವೇಶೇಃ। ಉಪವೇಶಿಃ ಕುಶ್ರೇಃ। ಕುಶ್ರಿರ್ವಾಜಶ್ರವಸಃ । ವಾಜಶ್ರವಾ ಜಿಹ್ವಾವತೋ ಬಾಧ್ಯೋಗಾತ್ । ಜಿಹ್ವಾವಾನ್ ಬಾಧ್ಯೋಗೋಽಸಿತಾದ್ ವಾರ್ಷಗಣಾತ್ । ಅಸಿತೋ ವಾರ್ಷಗಣೋ ಹರಿತಾತ್ ಕಶ್ಯಪಾತ್ । ಹರಿತಃ ಕಶ್ಯಪಃ ಶಿಲ್ಪಾತ್ ಕಶ್ಯಪಾತ್ । ಶಿಲ್ಪಃ ಕಶ್ಯಪಃ ಕಶ್ಯಪಾನ್ನೈಧ್ರುವೇಃ । ಕಶ್ಯಪೋ ನೈಧ್ರುವಿರ್ವಾಚಃ । ವಾಗಂಭ್ರಿಣ್ಯಾಃ । ಅಂಭ್ರಿಣ್ಯಾದಿತ್ಯಾತ್ । ಆದಿತ್ಯಾನೀ–**

**ಮಾನಿ ಶುಕ್ಲಾನಿ ಯಜೂಂಷಿ ವಾಜಸನೇಯೇನ ಯಾಜ್ಞವಲ್ಕ್ಯೇನಾಽ-ಖ್ಯಾಯಂತೇ ।**

ಆಸುರಿಯು ಯಾಜ್ಞವಲ್ಕ್ಯನಿಂದಲೂ, ಅವನು ಉದ್ದಾಲಕನಿಂದಲೂ, ಅವನು ಅರುಣನಿಂದಲೂ, ಅವನು ಉಪವೇಶಿಯಿಂದಲೂ, ಅವನು ಕುಶ್ರಿಯಿಂದಲೂ, ಅವನು ವಾಜಶ್ರವಸ್ಸಿನಿಂದಲೂ, ಅವನು ಜಿಹ್ವಾವಾನ್ ಬಾಧ್ಯೋಗನಿಂದಲೂ, ಅವನು ಅಸಿತ ವಾರ್ಷಗಣನಿಂದಲೂ, ಅವನು ಹರಿತ ಕಶ್ಯಪನಿಂದಲೂ, ಅವನು ಶಿಲ್ಪ ಕಶ್ಯಪನಿಂದಲೂ, ಅವನು ಕಶ್ಯಪ ನೈಧ್ರುವಿಯಿಂದಲೂ,ಅವನು ವಾಕ್‌ನಿಂದಲೂ ಅವಳು ಅಂಭ್ರಿಣಿಯಿಂದಲೂ, ಅಂಭ್ರಿಣಿಯು ಆದಿತ್ಯನಿಂದಲೂ ಕಲಿತರು.ಆದಿತ್ಯನಿಂದ ಹೇಳಲ್ಪಟ್ಟ ಈ ಶುದ್ಧವಾದ ಯಜುಸ್ಸುಗಳು ಯಾಜ್ಞವಲ್ಕ್ಯರಿಂದ ಪ್ರಕಟಿಸಲ್ಪಡುತ್ತವೆ.

**ಉಪನಿಷತ್—ಸಮಾನಃ ಸಾಂಜೀವೀಪುತ್ರಾತ್ । ಸಾಂಜೀವೀಪುತ್ರೋ ಮಾಂಡೂಕಾಯನೇಃ । ಮಾಂಡೂಕಾಯನಿರ್ಮಾಂಡವ್ಯಾತ್ । ಮಾಂಡವ್ಯಃ ಕೌತ್ಸಾತ್ । ಕೌತ್ಸೋ ಮಾಹಿಕ್ಕೇಃ । ಮಾಹಿಕ್ಕಿರ್ವಾಮಕಕ್ಷಾಯಣಾತ್ । ವಾಮಕಕ್ಷಾಯಣಃ ಶಾಂಡಿಲ್ಯಾತ್ । ಶಾಂಡಿಲ್ಯೋ ವಾತ್ಸ್ಯಾತ್ । ವಾತ್ಸ್ಯಃ ಕುಶ್ರೇಃ । ಕುಶ್ರಿರ್ಯಜ್ಞವಚಸೋ ರಾಜ-ಸ್ತಂಬಾಯನಾತ್ । ಯಜ್ಞವಚಾ ರಾಜಸ್ತಂಬಾಯನಸ್ತುರಾತ್ ಕಾವಷೇಯಾತ್ । ತುರಃ ಕಾವಷೇಯಃ ಪ್ರಜಾಪತೇಃ । ಪ್ರಜಾಪತಿ-ರ್ಬ್ರಹ್ಮಣಃ । ಬ್ರಹ್ಮ ಸ್ವಯಂಭು । ಬ್ರಹ್ಮಣೇ ನಮಃ ।**

**॥ ಇತಿ ಪಂಚಮಂ ಬ್ರಾಹ್ಮಣಮ್ ॥**

**ಇತಿ ಶ್ರೀ ಬೃಹದಾರಣ್ಯಕೇ ಷಷ್ಠೋಽಧ್ಯಾಯಃ ॥**

ಸಮಾನನು ಸಾಂಜೀವೀ ಪುತ್ರನಿಂದಲೂ,ಅವನು ಮಾಂಡೂಕಾಯನಿಯಿಂದಲೂ, ಅವನು ಮಾಂಡವ್ಯನಿಂದಲೂ,ಅವನು ಕೌತ್ಸನಿಂದಲೂ,ಅವನು ಮಾಹಿಕ್ಕಿಯಿಂದಲೂ, ಅವನು ವಾಮಕಕ್ಷಾಯಣನಿಂದಲೂ, ಅವನು ಶಾಂಡಿಲ್ಯನಿಂದಲೂ, ಅವನು ವಾತ್ಸ್ಯನಿಂದಲೂ, ಅವನು ಕುಶ್ರಿಯಿಂದಲೂ, ಅವನು ಯಜ್ಞವಚಾ ರಾಜಸ್ತಂಬಾಯನನಿಂದಲೂ, ಅವನು ತುರ ಕಾವಷೇಯನಿಂದಲೂ, ಅವನು ಚತುರ್ಮುಖಿನಿಂದಲೂ, ಅವನು ಪರಬ್ರಹ್ಮನಿಂದಲೂ ಕಲಿತರು. ಪರಬ್ರಹ್ಮನು ತಾನೇ ಸ್ವತಂತ್ರನು ಸರ್ವಜ್ಞನು, ಸರ್ವರಿಗೆ ಉಪದೇಶಮಾಡುವವನು,ಇನ್ನೊಬ್ಬನಿಂದ ಕಲಿಯುವವನಲ್ಲ. ಅಂತಹ ಪರಬ್ರಹ್ಮನಿಗೆ ನಮಸ್ಕಾರ.

ಇಲ್ಲಿಗೆ ಪಂಚಮಬ್ರಾಹ್ಮಣವು ಮುಗಿಯಿತು.

ಇಲ್ಲಿಗೆ ಬೃಹದಾರಣ್ಯಕೋಪನಿಷತ್ತಿನಲ್ಲಿ ಆರನೇ ಅಧ್ಯಾಯವು ಮುಗಿಯಿತು.

ಭಾಷ್ಯ—ಪಂಚಾಗ್ನಿ ವಿದ್ಯಯಾ ಚೈವ ತಥೈವ ಪ್ರಾಣವಿದ್ಯಯಾ ।
ಪ್ರಜಾತಿಕರ್ಮಣಾ ಚೈವ ತಥಾ ಜ್ಞಾನಪ್ರದಾನತಃ ।
ಆಚಾರ್ಯವಂಶ ವಿಜ್ಞಾನಾದ್ ಯಃ ಪೂಜ್ಯಃ ಪುರುಷೋತ್ತಮಃ ।
ಸರ್ವಾಂತರ್ಯಾಮಕೋ ನಿತ್ಯೋ ನಮಸ್ತಸ್ಮೈ ಪರಾತ್ಮನೇ ।
ಇತಿ ಸದ್ಭಾವೇ ।

**ಅನುವಾದ**—ಪಂಚಾಗ್ನಿ ವಿದ್ಯೆಯಿಂದಲೂ, ಪ್ರಾಣವಿದ್ಯೆಯಿಂದಲೂ, ಪ್ರಜೋತ್ಪತ್ತಿ ಕರ್ಮದಿಂದಲೂ,ಜ್ಞಾನವನ್ನು ಕೊಡುವ ಆಚಾರ್ಯರ ವಂಶಜ್ಞಾನದಿಂದಲೂ ಯಾವ ಪುರುಷೋತ್ತಮನು ಪೂಜಿಸಲ್ಪಡುತ್ತಾನೆಯೋ ಅಂತಹ ಸರ್ವಾಂತರ್ಯಾಮಿಯಾದ ನಿತ್ಯನಾದ ಪರಮಾತ್ಮನಿಗೆ ನಮಸ್ಕಾರ ಎಂದು ಸದ್ಭಾವ ಎಂಬ ಗ್ರಂಥದಲ್ಲಿ ಹೇಳಿದೆ.

**ಭಾಷ್ಯದ ಅಂತಿಮ ಮಂಗಳಾಚರಣೆ :**

ಭಾಷ್ಯ—ನಿತ್ಯಾನಂದಮನೌಪಮಂ ಪರಮಜಂ ಸರ್ವತ್ರಗಂ ಸುಸ್ಥಿರಂ
ಸರ್ವಜ್ಞಂ ಪ್ರತಿಬೋಧಮಾತ್ರಮಮಲಂ ಪೂರ್ಣಂ ಗುಣೈರಚ್ಯುತೈಃ।
ವಿಶ್ವೋತ್ಪತ್ತಿಲಯಸ್ಥಿತಿಪ್ರಮಿತಿ ಸನ್ಮೋಕ್ಷೇ ಪರಂ ಕಾರಣಂ
ಪ್ರೇಷ್ಠಂ ಮೇ ಸತತಂ ಪ್ರಿಯಾತ್ ಪ್ರಿಯತಮಂ ನಿತ್ಯಂ
ಸದೋಪಾಸ್ಮಹೇ ।

**ಅನುವಾದ**—ಪೂರ್ಣಾನಂದನೂ,ಅಸದೃಶನೂ, ಸರ್ವೋತ್ತಮನೂ, ಉತ್ಪತ್ತಿಹೀನನೂ, ಮುಖ್ಯಪ್ರಾಣಾದಿಗಳಲ್ಲಿ ಸರ್ವತ್ರ ಇರುವವನೂ, ಪರಮನಿತ್ಯನೂ, ಸರ್ವಜ್ಞನೂ, ಜ್ಞಾನಸ್ವರೂಪನೂ, ನಿರ್ದೋಷನೂ, ದೇಶಕಾಲಗುಣಗಳಿಂದ ಚ್ಯುತಿ ಇಲ್ಲದಿರುವಗುಣಗಳಿಂದ ಪೂರ್ಣನೂ, ಜಗತ್ತಿನ ಉತ್ಪತ್ತಿ, ನಾಶ, ಸ್ಥಿತಿ, ಯಥಾರ್ಥ ಜ್ಞಾನ, ಸಜ್ಜನರ ಮೋಕ್ಷ ಇವುಗಳಿಗೆ ಮುಖ್ಯಕಾರಣನೂ, ಸತತವಾಗಿ ನನಗೆ ಅತ್ಯಂತ ಪ್ರಿಯನಾದವನೂ, ನಿತ್ಯದಲ್ಲಿಯೂ ಪ್ರಿಯವಸ್ತುಗಳಿಗಿಂತಲೂ ಅತ್ಯಂತಪ್ರಿಯನೂ ಆದ ವಿಷ್ಣುವನ್ನು ಸದಾ ಉಪಾಸನೆ ಮಾಡುತ್ತೇವೆ.

**ಶ್ರೀಮದಾಚಾರ್ಯರು ಪರಮಾಪ್ತರು :**

ಭಾಷ್ಯ—ಯಸ್ಯ ತ್ರೀಣ್ಯುದಿತಾನಿ ವೇದವಚನೇ ರೂಪಾಣಿ ದಿವ್ಯಾನ್ಯಲಂ
ಬಟ್ ತದ್ದರ್ಶತಮಿತ್ಥಮೇವ ನಿಹಿತಂ ದೇವಸ್ಯ ಭರ್ಗೋ ಮಹತ್ ।
ವಾಯೋ ರಾಮವಚೋನಯಂ ಪ್ರಥಮಕಂ ಪೃಕ್ಷೋ ದ್ವಿತೀಯಂ
ವಪುಃ
ಮಧ್ವೋ ಯತ್ತು ತೃತೀಯಕಂ ಕೃತಮಿದಂ ಭಾಷ್ಯಂ ಹಿ ತೇನ
ಪ್ರಭೌ ॥

**ಅನುವಾದ**—ವಾಯುದೇವರ ಕ್ರೀಡಾದಿಗುಣವಿಶಿಷ್ಟವಾದ ಹನುಮಾನ್ ಭೀಮ ಮತ್ತು ಮಧ್ವ ಎಂಬ ಮೂರು ರೂಪಗಳು 'ಬಳಿತ್ಥಾ ತದ್ವಪುಷೇ' ಮೊದಲಾದ ವೇದವಚನಗಳಲ್ಲಿ ಚೆನ್ನಾಗಿ ವರ್ಣಿತವಾಗಿದೆ. ಅವು ಬಲರೂಪವಾದವು, ಜ್ಞಾನಪೂರ್ಣವಾದವು, ಜಗತ್ತಿನ ಪೋಷಣೆ ಮಾಡುವವು, ಜ್ಞಾನ ನೀಡುವವು, ಅತ್ಯಂತ ಪೂಜ್ಯವಾದುವು. ಈ ಮೂರು ರೂಪಗಳೂ ಪರಮಾತ್ಮ ಪ್ರೇರಣೆಯಿಂದಲೇ ಅವತರಿಸಿದುವು. ವಾಯುದೇವರ ಮೂಲರೂಪದಂತೆಯೇ ಈ ಅವತಾರ ರೂಪಗಳೂ ಬಲಜ್ಞಾನಪೂರ್ಣವಾಗಿವೆ. ಮೊದಲನೆಯ ಹನುಮದ್ರೂಪವು ರಾಮದೇವರ ವಚನಗಳನ್ನು ಸೀತೆಗೆ ತಲುಪಿಸುತ್ತದೆ. ಮೂಲರಾಮಾಯಣ ಮೊದಲಾದ ರಾಮನ ಚರಿತ್ರೆಯನ್ನು ಶಿಷ್ಯರಿಗೆ ಉಪದೇಶಿಸುತ್ತದೆ. ಎರಡನೆಯದಾದ ಭೀಮರೂಪವು ಶತ್ರುಗಳಾದ ಕೌರವರ ಸೈನ್ಯವನ್ನು ನಾಶಮಾಡುವಂತಹುದು. ಮೂರನೆಯದಾದ ಈ ಮಧ್ವರೂಪವು ಶ್ರೀಹರಿ ಪ್ರೀತಿಯನ್ನುದ್ದೇಶಿಸಿ ಈ ಭಾಷ್ಯವನ್ನು ಮಾಡಿದೆ.

**ಬಳಿತ್ಥಾ ಸೂಕ್ತಾರ್ಥ :**

**ಭಾಷ್ಯ—ಹನುಶಬ್ದೋ ಜ್ಞಾನವಾಚೀ ಹನುಮಾನ್ ಮತಿಶಬ್ದಿತಃ ।**
**ರಾಮಸ್ಯ ಸ್ವೃತರೂಪಸ್ಯ ವಾಚಸ್ತೇನಾನಯಂತ ಹಿ ।**
**ಭೃತವೋ ಭೀಮ ಇತ್ಯುಕ್ತೋ ವಾಚೋ ಮಾ ಮಾತರಃ ಸ್ಮೃತಾಃ।**
**ಋಗಾದ್ಯಾ ಇತಿಹಾಸಶ್ಚ ಪುರಾಣಂ ಪಂಚರಾತ್ರಕಮ್ ।**
**ಪ್ರೋಕ್ತಾಃ ಸಪ್ತ ಶಿವಾಸ್ತತ್ರ ಶಯೋ ಭೀಮಸ್ತತಃ ಸ್ಮೃತಃ ।**
**ಮಧ್ವಿತ್ಯಾನಂದ ಉದ್ದಿಷ್ಟೋ ವೇತಿ ತೀರ್ಥಮುದಾಹೃತಮ್ ।**
**ಮಧ್ವ ಆನಂದತೀರ್ಥಃ ಸ್ಯಾತ್ ತೃತೀಯಾ ಮಾರುತೀ ತನುಃ ।**
**ಇತಿ ಸೂಕ್ತಗತಂ ರೂಪತ್ರಯಮೇತನ್ಮಹಾತ್ಮನಃ ।**
**ಯೋ ವೇದ ವೇದವಿತ್ ಸ ಸ್ಯಾತ್ ತತ್ತ್ವವಿತ್ ತತ್ಪ್ರಸಾದತಃ ।**
**ಇತಿ ಚ ।**

**ಅನುವಾದ**—'ಬಳಿತ್ಥಾ ಸೂಕ್ತ'ವು ವಾಯುದೇವರ ಮೂರು ಅವತಾರಗಳನ್ನು ಹೇಳುತ್ತವೆ. ಹೇಗೆಂದರೆ 'ಹನು' ಶಬ್ದಕ್ಕೆ ಜ್ಞಾನ ಎಂದು ಅರ್ಥ. ಆದ್ದರಿಂದ ಸೂಕ್ತದಲ್ಲಿ ಹನುಮಂತನಿಗೇ ಮತಿ ಎಂದು ಹೆಸರು. 'ಋತಸ್ಯ ಧೇನಾ ಅನಯಂತ ಸಸ್ರುತಃ' ಎಂಬುದಕ್ಕೆ ಹನುಮಂತನು ಸತ್ಯರೂಪನಾದ ಅಥವಾ ಸರ್ವದಾ ಏಕಪ್ರಕಾರನಾಗಿರುವ ರಾಮದೇವರ ಮಾತುಗಳನ್ನು ಸೀತೆಗೆ ತಲುಪಿಸಿದನು ಎಂದೂ ಮೂಲರಾಮಾಯಣಾದಿಗಳನ್ನು ಶಿಷ್ಯರಿಗೆ ಉಪದೇಶಿಸಿದ್ದಾನೆ ಎಂದೂ ಅರ್ಥ. 'ಪೃಕ್ಷೋ ವಪುಃ' ಇತ್ಯಾದಿ ವಾಕ್ಯವು ಭೀಮಾವತಾರವನ್ನು ಪ್ರತಿಪಾದಿಸುತ್ತದೆ. ಏಕೆಂದರೆ ಭೀಮಶಬ್ದಕ್ಕೂ 'ಆ ಶಯೇ ಸಪ್ತ ಶಿವಾಸು ಮಾತೃಷು' ಎನ್ನುವುದಕ್ಕೂ

ಸಮಾನಾರ್ಥತ್ವವಿದೆ. ಭೃತಾಃ ಪೂರ್ಣಗಳಾದ ಮಾಃ ಪ್ರಮಾಣ ಭೂತವಾದ ಶಾಸ್ತ್ರಗಳು ಯಾವನಲ್ಲಿವೆಯೋ ಅವನು ಭೀಮ.ಪ್ರಮಾಣ ಭೂತವಾದ ಶಾಸ್ತ್ರಗಳು ಮಾತ್ರಗಳು ಎಂದು ಕರೆಯಲ್ಪಡುತ್ತವೆ. ಋಗಾದಿ ನಾಲ್ಕು ವೇದಗಳು, ಇತಿಹಾಸ, ಪುರಾಣ, ಪಂಚರಾತ್ರ ಇವು ಏಳು ಮಂಗಳಕರವಾದ ಮಾತ್ರಗಳು. ಅವುಗಳಲ್ಲಿ ಶಯಃ ಎಂದರೆ ನಿಷ್ಣಾತನಾದವನು. ಅವನು ಭೀಮಸೇನನೆನಿಸುತ್ತಾನೆ. 'ತೃತೀಯಮಸ್ಯ ಋಷಭಸ್ಯ ದೋಹಸೇ' ಇತ್ಯಾದಿ ವಾಕ್ಯವು ಆಚಾರ್ಯರನ್ನು ಪ್ರತಿಪಾದನೆ ಮಾಡುತ್ತದೆ. ಏಕೆಂದರೆ ಮಧ್ವ ಮತ್ತು ಆನಂದತೀರ್ಥಶಬ್ದಗಳಿಗೆ ಸಮಾನಾರ್ಥತ್ವವಿದೆ. ಮಧು ಎಂದರೆ ಆನಂದ. ವ ಎಂದರೆ ಅದನ್ನು ಕೊಡುವ ಶಾಸ್ತ್ರ. ಆದ್ದರಿಂದ ಮಧ್ವ ಎಂದರೆ, ಆನಂದ ಕೊಡುವ ತೀರ್ಥ ಎಂದರೆ ಶಾಸ್ತ್ರವನ್ನು ರಚಿಸಿದವರು ಆನಂದತೀರ್ಥರು ಎಂಬ ವಾಯುದೇವರ ಮೂರನೆಯ ರೂಪ. ಹೀಗೆ ಈ ಸೂಕ್ತದಲ್ಲಿ ಹೇಳಿದ ಮಹಾತ್ಮರಾದ ವಾಯುದೇವರ ಮೂರು ರೂಪಗಳನ್ನು ತಿಳಿದವನು ವೇದಾರ್ಥವನ್ನು ಸರಿಯಾಗಿ ತಿಳಿದವನಾಗಿ ವಾಯುದೇವರ ಅನುಗ್ರಹದಿಂದ ತತ್ತ್ವಜ್ಞಾನಿಯಾಗುತ್ತಾನೆ' ಎಂದೂ ಹೇಳಿದೆ.

**ಭಾಷ್ಯ—ಸಾಧಕೋ ರಾಮಕಾರ್ಯಾಣಾಂ ತತ್ಸಮೀಪಗತಃ ಸದಾ ।**
**ಹನುಮಾನ್ ಪ್ರಥಮೋ ಜ್ಞೇಯೋ ಭೀಮಸ್ತು ಬಹುಭುಕ್**
**ಪಿತೋಃ ।**

**ಪೃತನಾಕ್ಷಯಕಾರೀ ಚ ದ್ವಿತೀಯಸ್ತು ತೃತೀಯಕಃ ।**
**ಪೂರ್ಣಪ್ರಜ್ಞಸ್ತಥಾಽಽನಂದತೀರ್ಥನಾಮಾ ಪ್ರಕೀರ್ತಿತಃ ।**
**ದಶೇತಿ ಸರ್ವಮುದ್ದಿಷ್ಟಂ ಸರ್ವಂ ಪೂರ್ಣಮಿಹೋಚ್ಯತೇ ।**
**ಪ್ರಜ್ಞಾ ಪ್ರಮತಿರುದ್ದಿಷ್ಟಾ ಪೂರ್ಣಪ್ರಜ್ಞಸ್ತತಃ ಸ್ಮೃತಃ ।**

**ಅನುವಾದ**—ಮೊದಲನೆಯ ಅವತಾರವಾದ ಹನುಮಂತನು ಸದಾ ರಾಮನ ಸಮೀಪದಲ್ಲಿದ್ದು ರಾಮನ ಕಾರ್ಯಗಳನ್ನು ಸಾಧಿಸುವವನು. ಎರಡನೆಯ ಅವತಾರವಾದ ಭೀಮನು ಬಹಳ ಅನ್ನವನ್ನು ಊಟ ಮಾಡುವವನು ಮತ್ತು ಶತ್ರುಗಳ ಸೈನ್ಯವನ್ನು ನಾಶಮಾಡುವವನು. ಮೂರನೆಯ ಅವತಾರವು ಪೂರ್ಣಪ್ರಜ್ಞ ಮತ್ತು ಆನಂದತೀರ್ಥ ಎಂಬ ಹೆಸರುಳ್ಳದ್ದು. ದಶ ಎಂದರೆ ಸರ್ವವೆಂದೂ ಸರ್ವವೆಂದರೆ ಪೂರ್ಣವೆಂದೂ ಅರ್ಥ. ಪ್ರಜ್ಞಾ ಎಂದರೆ ಪ್ರಮತಿ ಎಂದು ಅರ್ಥ. ಆದ್ದರಿಂದ ದಶಪ್ರಮತಿ ಶಬ್ದಕ್ಕೆ ಪೂರ್ಣಪ್ರಜ್ಞ ಎಂದು ಅರ್ಥ.

**ಭಾಷ್ಯ—ಆ ಸಮಂತಾತ್ ಪತಿತ್ವೇ ತು ಗೂಢಂ ಕಲಿಯುಗೇ ಹರಿಮ್ ।**
**ಅಸತ್ಯಮಪ್ರತಿಷ್ಠಂ ತಜ್ಜಗದೇತದನೀಶ್ವರಮ್ ।**

ವದದ್ಭಿರ್ಗೂಹಿತಂ ಸಂತಂ ತೃತೀಯೋಽಸುರ್ವರ್ಥಾಯತಿ ।
ಯೇನ ವಿಷ್ಣೋಽಸ್ತು ವರ್ಷಾಖ್ಯಾನ್ ಗುಣಾನಜ್ಞಾಸಿಷುಃ ಪರಾನ್ ।
ಈಶಾನಾಸಃ ಸೂರಯಶ್ಚ ನಿಗೂಢಾನ್ ನಿರ್ಗುಣೋಕ್ತಿಭಿಃ ।
ತ್ರೇತಾಯಾಂ ದ್ವಾಪರೇ ಚೈವ ಕಲೌ ಚೈತೇ ಕ್ರಮಾತ್ ತ್ರಯಃ ।
ಏತೇಷಾಂ ಪರಮೋ ವಿಷ್ಣುರ್ನೇತಾ ಸರ್ವೇಶ್ವರೇಶ್ವರಃ ।
ಸ್ವಯಂಭುಬ್ರಹ್ಮಸಂಜ್ಞೋಽಸೌ ಪರಸ್ಮೈ ಬ್ರಹ್ಮಣೇ ನಮಃ ।
ಇತಿ ಚ ।

ಪೂರ್ಣಾಗಣ್ಯಗುಣೋದಾರಧಾಮ್ನೇ ನಿತ್ಯಾಯ ವೇಧಸೇ ।
ಅಮಂದಾನಂದಸಾಂದ್ರಾಯ ಪ್ರೇಯಸೇ ವಿಷ್ಣವೇ ನಮಃ ।

ಇತಿ ಶ್ರೀಮದಾನಂದತೀರ್ಥಭಗವತ್ಪಾದ ವಿರಚಿತೇ
ಶ್ರೀಮದ್‌ಬೃಹದಾರಣ್ಯಕೋಪನಿಷದ್‌ಭಾಷ್ಯೇ ಷಷ್ಠೋಽಧ್ಯಾಯಃ ।

**ಅನುವಾದ**—'ಜಗತ್ತು ಸತ್ಯವಲ್ಲ. ಜ್ಞಾನದಿಂದ ಬಾಧ್ಯವಾದುದು. ಜಗತ್ತಿಗೆ ನಿಯಾಮಕನಿಲ್ಲ' ಎಂದು ಹೇಳುವ ದುರ್ವಾದಿಗಳ ವಚನಗಳಿಂದ ಕಲಿಯುಗದಲ್ಲಿ ಮರೆಯಾದ ಶ್ರೀಹರಿಯ ಸರ್ವಸ್ವಾಮಿತ್ವವನ್ನು ವಾಯುದೇವರ ಮೂರನೆಯ ಅವತಾರವು ಋಗಾದಿಗಳನ್ನು ಮಥನಮಾಡಿ ನಿರ್ಣಯಿಸುತ್ತದೆ. ರುದ್ರನೇ ಮೊದಲಾದ ಜ್ಞಾನಿಗಳೂ ಸಹ ನಿರ್ಗುಣೋಕ್ತಿಗಳಿಂದ ಮರೆಯಾಗಿದ್ದ ವಿಷ್ಣುವಿನ ಶ್ರೇಷ್ಠವಾದ ಜ್ಞಾನ ಆನಂದಾದಿಗುಣಗಳನ್ನು ಆ ಮೂರನೆಯ ಅವತಾರದ ಉಪದೇಶದಿಂದ ತಿಳಿದರು. ತ್ರೇತಾ ದ್ವಾಪರ ಮತ್ತು ಕಲಿಯುಗಗಳಲ್ಲಿ ಕ್ರಮವಾಗಿ ಹನುಮಾನ್, ಭೀಮ ಮತ್ತು ಮಧ್ವ ಈ ಮೂರು ಅವತಾರಗಳು ಆಗುತ್ತವೆ. ಸರ್ವೋತ್ತಮನೂ ಸರ್ವಪ್ರೇರಕರಿಗೆ ಪ್ರೇರಕನೂ ಆದ ವಿಷ್ಣುವು ಈ ಮೂರು ಅವತಾರಗಳಿಗೂ ಒಡೆಯನು. ಈ ವಿಷ್ಣುವಿಗೇ ಸ್ವಯಂಭು, ಬ್ರಹ್ಮ ಎಂದು ಹೆಸರು. ಅಂತಹ ಪರಬ್ರಹ್ಮನಿಗೆ ನಮಸ್ಕಾರ ಎಂದೂ ಹೇಳಿದೆ.

ಪೂರ್ಣವಾದ, ಎಣಿಸಲು ಅಸಾಧ್ಯವಾದ ಗುಣಗಳಿಗೆ ಉತ್ಕೃಷ್ಟ ಆಶ್ರಯನೂ ನಿತ್ಯನೂ ಜ್ಞಾನರೂಪನೂ ಅಪರಿಮಿತಾನಂದಪೂರ್ಣನೂ ಅತ್ಯಂತ ಪ್ರಿಯನೂ ಆದ ವಿಷ್ಣುವಿಗೆ ನಮಸ್ಕಾರ.

ಇಲ್ಲಿಗೆ ಶ್ರೀಮದಾನಂದತೀರ್ಥ ಭಗವತ್ಪಾದರು ರಚಿಸಿದ
ಶ್ರೀಮದ್ ಬೃಹದಾರಣ್ಯಕೋಪನಿಷದ್ಭಾಷ್ಯದಲ್ಲಿ ಆರನೆಯ ಅಧ್ಯಾಯವು
ಮುಗಿಯಿತು.

॥ ಶ್ರೀಮಧ್ವೇಶಾರ್ಪಣಮಸ್ತು ॥